# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ (ಭಾಗ ೩)

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

೬

## ನಾಗರಖಂಡ

## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ

(ಭಾಗ ೩)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ೧೮
೧೯೫೩

# ಅರಿಕೆ

ಇಪ್ಪತ್ತನಾಲ್ಕನೆಯ ಸಂಪುಟದಿಂದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ಖಂಡವಾದ ನಾಗರಖಂಡವು ಉಪಕ್ರಮವಾಗಿದೆ. ಈ ಖಂಡದಲ್ಲಿ "ಹಾಟಕೇಶ್ವರಕ್ಷೇತ್ರಮಾಹಾತ್ಮ್ಯ" ಎಂಬ ಒಂದೇ ಪ್ರಕರಣವಿರುವುದು. ಇದು ೨೫೦ ಅಧ್ಯಾಯಗಳುಳ್ಳದಾಗಿದೆ. ಈ ಸಂಪುಟದಲ್ಲಿ ನೂರಮೂವತ್ತೊಂಬತ್ತನೆಯ ಅಧ್ಯಾಯದಿಂದ ಇನ್ನೂರಾರನೆಯ ಅಧ್ಯಾಯದವರೆಗಣ ಗ್ರಂಥ ಮುಗಿದಿದೆ. ಉಳಿದ ಭಾಗ ಮುಂದಿನ ಸಂಪುಟದಲ್ಲಿ ಪೂರ್ತಿಯಾಗಿ ಬರುತ್ತದೆ.

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಽಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

॥ ಶ್ರೀಃ ॥

**ಅಥ ಮಂಗಳಾಚರಣಶ್ಲೋಕಃ**

**ಸ ಧೂರ್ಜಟಿಜಟಾಜೂಟೋ ಜಾಯತಾಂ ವಿಜಯಾಯ ವಃ ।**
**ಯತ್ರೈಕಪಲಿತಭ್ರಾಂತಿಂ ಕರೋತ್ಯದ್ಯಾಽಪಿ ಜಾಹ್ನವೀ ॥**

**ತಾತ್ಪರ್ಯ**

ಗಂಗಾದೇವಿ (ನದಿ)ಯು,
ಯಾವ ಜಟಾಜೂಟದಲ್ಲಿ ನೆಲಸಿ ಅದರಲ್ಲಿ ಒಂದೇ ಒಂದು
ನೆರೆಗೂದಲಿರುವುದೆಂಬ ಭ್ರಾಂತಿಯನ್ನು ಇಂದಿಗೂ ಉಂಟುಮಾಡುತ್ತಿರುವಳೋ,
ಆ ಧೂರ್ಜಟಿಯ ಜಟಾಜೂಟವು ಭಕ್ತರಾದ ನಿಮ್ಮ
ವಿಜಯಕ್ಕಾಗಿ ನೆರವಾಗಲಿ

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಷಷ್ಠೇ ನಾಗರಖಂಡೇ
## ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ

ತೃತೀಯೋ ಭಾಗಃ

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ॥

ಶ್ರೀಮತ್ಸುಂದರವಿಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

### ಅಥೈಕೋನಚತ್ವಾರಿಂಶದುತ್ತರಶತತಮೋಽಧ್ಯಾಯಃ

**ಧರ್ಮರಾಜೇಶ್ವರಮಾಹಾತ್ಮ್ಯವರ್ಣನಂ**

**ಸೂತ ಉವಾಚ :—**

**ಧರ್ಮರಾಜೇಶ್ವರೋತ್ಥಂ ಚ ಮಾಹಾತ್ಮ್ಯಂ ದ್ವಿಜಸತ್ತಮಾಃ ।**
**ಯನ್ಮಯಾ ಪ್ರಶ್ರುತಂ ಪುಣ್ಯಂ ಸಕಾಶಾತ್ಸ್ವಪಿತುಃ ಪುರಾ ॥ ೧ ॥**
**ತದಹಂ ಕೀರ್ತಯಿಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ।**
**ತ್ರೈಲೋಕ್ಯೇಽಪಿ ಸುವಿಖ್ಯಾತಂ ಸರ್ವಪಾತಕನಾಶನಂ ॥ ೨ ॥**

---

**ಕನ್ನಡದ ಅನುವಾದ**

**ಧರ್ಮರಾಜೇಶ್ವರಮಾಹಾತ್ಮ್ಯವರ್ಣನ**

೧–೨. ಸೂತನು ಹೇಳುತ್ತಾನೆ :—ಎಲೈ ದ್ವಿಜೋತ್ತಮರೆ! ನಾನು ನಮ್ಮ ತಂದೆಯ ಮುಖದಿಂದ ಕೇಳಿದ ಮೂರು ಲೋಕಗಳಲ್ಲಿ ಪ್ರಸಿದ್ಧವೂ, ಸಕಲ ಪಾಪಗಳನ್ನು ಪರಿಹರಿಸುವುದೂ ಆದ ಧರ್ಮರಾಜೇಶ್ವರನ ಮಾಹಾತ್ಮ್ಯವನ್ನು ಹೇಳುವೆನು ಕೇಳಿರಿ.

ತತ್ರ ಕ್ಷೇತ್ರೇ ಪುರಾ ವಿಪ್ರಃ ಕಶ್ಯಪಾನ್ವಯಸಂಭವಃ ।
ಉಪಾಧ್ಯಾಯ ಇತಿ ಖ್ಯಾತೋ ವೇದವಿದ್ಯಾಪರಾಯಣಃ ॥ ೩ ॥
ಪಶ್ಚಿಮೇ ವಯಸಿ ಪ್ರಾಪ್ತೇ ತಸ್ಯ ಪುತ್ರೋ ಬಭೂವ ಹ ।
ಸ್ವಾಧ್ಯಾಯ ನಿಯಮಸ್ಥಸ್ಯ ಪ್ರಭೂತವಿಭವಸ್ಯ ಚ ॥ ೪ ॥
ಪಂಚವರ್ಷಕಮಾತ್ರಸ್ತು ಯದಾ ಜಜ್ಞೇ ಚ ತತ್ಸುತಃ ।
ತದಾ ಮೃತ್ಯುವಶಂ ಪ್ರಾಪ್ತಃ ಪಿತೃಮಾತೃಸುದುಃಖಕೃತ್ ॥ ೫ ॥
ತತಃ ಸ ಬ್ರಾಹ್ಮಣಃ ಕೋಪಂ ಚಕ್ರೇ ವೈವಸ್ವತೋಪರಿ ।
ಧರ್ಮರಾಜಗೃಹಂ ಪ್ರಾಪ್ತಂ ದೃಷ್ಟ್ವಾ ನಿಜಕುಮಾರಕಂ ॥ ೬ ॥
ಆದಾಯ ಸಲಿಲಂ ಹಸ್ತೇ ಶುಚಿರ್ಭೂತ್ವಾ ಸಮಾಹಿತಃ ।
ಪ್ರದದೌ ದಾರುಣಂ ಶಾಪಂ ಧರ್ಮರಾಜಾಯ ದುಃಖಿತಃ ॥ ೭ ॥
ಅಪುತ್ರೋಽದ್ಯ ಕೃತೋ ಯಸ್ಮಾದಹಂ ತೇನ ದುರಾತ್ಮನಾ ।
ಅತಃ ಸೋಽಪಿ ಚ ದುಷ್ಟಾತ್ಮಾ ಯಮೋಽಪುತ್ರೋ ಭವಿಷ್ಯತಿ ॥ ೮ ॥
ತಥಾಽಸ್ಯ ಭೂತಲೇ ಲೋಕೋ ನೈವ ಪೂಜಾಂ ವಿಧಾಸ್ಯತಿ ।
ಕೀರ್ತಯಿಷ್ಯತಿ ನೋ ನಾಮ ಯಥಾಽನ್ಯೇಷಾಂ ದಿವೌಕಸಾಂ ॥ ೯ ॥
ಯಃ ಕಶ್ಚಿತ್ಪ್ರಾತರುತ್ಥಾಯ ನಾಮ ಚಾಽಸ್ಯ ಗ್ರಹೀಷ್ಯತಿ ।
ಮಂಗಲ್ಯಕರಣೇ ಚಾಽಥ ವಿಘ್ನಂ ತಸ್ಯ ಭವಿಷ್ಯತಿ ॥ ೧೦ ॥

---

೩. ಆ ಕ್ಷೇತ್ರದಲ್ಲಿ ಹಿಂದೆ ಕಶ್ಯಪವಂಶದಲ್ಲಿ ಜನಿಸಿದ ವೇದವಿದ್ಯಾಪಾರಂಗತನಾದ ಉಪಾಧ್ಯಾಯನೆಂಬ ಬ್ರಾಹ್ಮಣನಿದ್ದನು.

೪. ವೇದಾಧ್ಯಯನನಿರತನೂ, ಅಧಿಕೈಶ್ವರ್ಯವುಳ್ಳವನೂ ಆದ ಅವನಿಗೆ ಮುಪ್ಪಿನಲ್ಲಿ ಓರ್ವ ಪುತ್ರನು ಜನಿಸಿದನು.

೫. ಆ ಬಾಲಕನು ಐದು ವರ್ಷ ತುಂಬಲು ಮಡಿದು ತಂದೆತಾಯಿಗಳಿಗೆ ದುಃಖವನ್ನುಂಟುಮಾಡಿದನು.

೬. ತರುವಾಯ ಆ ದ್ವಿಜನು ಯಮಪುರಿಗೆ ನಾಗಿದ ತನ್ನ ಬಾಲಕನನ್ನು ನೋಡಿ ಧರ್ಮರಾಜನ ಮೇಲೆ ಕೋಪಿಸಿಕೊಂಡನು.

೭–೧೦. ಅದರಿಂದವನು ಶುದ್ಧನಾಗಿ ಕೈಯಲ್ಲಿ ನೀರನ್ನು ತೆಗೆದುಕೊಂಡು ದುಃಖದಿಂದ ಧರ್ಮರಾಜನನ್ನು ಉದ್ದೇಶಿಸಿ ದುರಾತ್ಮನಾದ ಅವನು ನನ್ನನ್ನು ಪುತ್ರಹೀನನನ್ನಾಗಿ ಮಾಡಿದ ಕಾರಣ ಮಕ್ಕಳಿಲ್ಲದವನಾಗುವನು. ಮತ್ತು ಭೂಮಿಯಲ್ಲಿ ಜನರು ಅವನನ್ನು ಪೂಜಿಸುವುದಿಲ್ಲ. ಇತರ ದೇವತೆಗಳಂತೆ ಅವನ ಹೆಸರನ್ನು ಹೇಳುವುದಿಲ್ಲ. ಮಂಗಳೋತ್ಸವದಲ್ಲಿ ಬೆಳಗ್ಗೆ ಎದ್ದು ಅವನ ಹೆಸರನ್ನುಚ್ಚರಿಸಿದರೆ ವಿಘ್ನವುಂಟಾಗುವುದು ಎಂದು ಶಪಿಸಿದನು.

ತಂ ಶ್ರುತ್ವಾ ತಸ್ಯ ವಿಪ್ರಸ್ಯ ಯಮಃ ಶಾಪಂ ಸುದಾರುಣಂ ।
ಸ್ವಧರ್ಮೇ ವರ್ತಮಾನಸ್ತು ತತೋ ದುಃಖಾನ್ವಿತೋಽಭವತ್ ॥ ೧೧ ॥
ಏತಸ್ಮಿನ್ನಂತರೇ ಗತ್ವಾ ಬ್ರಹ್ಮಣಃ ಸದನಂ ಪ್ರತಿ ।
ಕೃತಾಂಜಲಿಪುಟೋ ಭೂತ್ವಾ ಯಮಃ ಪ್ರಾಹ ಪಿತಾಮಹಂ ॥ ೧೨ ॥
ಪಶ್ಯ ದೇವೇಶ ಶಪ್ತೋಽಹಂ ನಿರ್ದೋಷೋಽಪಿ ದ್ವಿಜನ್ಮನಾ ।
ಸ್ವಧರ್ಮೇ ವರ್ತಮಾನಸ್ತು ಯಥಾಽನ್ಯಃ ಪ್ರಾಕೃತೋ ಜನಃ ॥ ೧೩ ॥
ತಸ್ಮಾದಹಂ ತ್ಯಜಿಷ್ಯಾಮಿ ನಿಯೋಗಂ ತೇ ಪಿತಾಮಹ ।
ಬ್ರಹ್ಮಶಾಪಭಯಾದ್ಭೀತಃ ಸತ್ಯಮೇತನ್ಮಯೋದಿತಂ ॥ ೧೪ ॥
ಪುರಾ ಮಾಂಡವ್ಯಶಾಪೇನ ಶೂದ್ರಯೋನ್ಯವತಾರಿತಃ ।
ಸಾಂಪ್ರತಂ ಪುತ್ರರಹಿತಃ ಕೃತೋಽಪೂಜ್ಯಶ್ಚ ಸತ್ತಮ ॥ ೧೫ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ದೀನಂ ವೈವಸ್ವತಸ್ಯ ಚ ।
ತತ್ಕಾಲೋಚಿತಮಾಹೇದಂ ಸ್ವಯಮೇವ ಶತಕ್ರತುಃ ॥ ೧೬ ॥
ಯುಕ್ತಮುಕ್ತಮನೇನೈತದ್ಧರ್ಮರಾಜೇನ ಪದ್ಮಜ ।
ನಿಯೋಗೇ ವರ್ತಮಾನೇನ ತಾವಕೀಯೇ ಸುರೇಶ್ವರ ॥ ೧೭ ॥

---

೧೧. ಸ್ವಧರ್ಮನಿರತನಾದ ಯಮನು ಆ ದ್ವಿಜನ ದಾರುಣ ಶಾಪವನ್ನು ಕೇಳಿ ಬಹಳವಾಗಿ ದುಃಖಗೊಂಡನು.

೧೨. ಅವನು ಬ್ರಹ್ಮಸದನಕ್ಕೆ ಹೋಗಿ ಕೈಮುಗಿದುಕೊಂಡು ಆ ಪಿತಾಮಹನನ್ನು ಕುರಿತು ಹೀಗೆಂದನು.

೧೩. "ದೇವೇಶ! ನೋಡು, ಆ ಬ್ರಾಹ್ಮಣನು ನಿರ್ದುಷ್ಟನೂ, ಸ್ವಧರ್ಮನಿರತನೂ ಆದ ನನ್ನನ್ನು ಸಾಮಾನ್ಯ ಜನರಂತೆ ಶಪಿಸಿರುವನು.

೧೪. ಪಿತಾಮಹ! ಆದುದರಿಂದ ನಾನು ಬ್ರಾಹ್ಮಣಶಾಪದ ಭಯದಿಂದ ನಿನ್ನ ಅಪ್ಪಣೆಯನ್ನು ತ್ಯಜಿಸುವೆನು. ನಾನು ಹೇಳಿರುವ ಈ ಮಾತು ನಿಜ.

೧೫. ಹಿಂದೆ ನಾನು ಮಾಂಡವ್ಯಶಾಪದಿಂದ ಶೂದ್ರಜಾತಿಯಲ್ಲಿ ಅವತರಿಸಿದೆನು. ಈಗ ಪುತ್ರರಹಿತನೂ, ಅಪೂಜ್ಯನೂ ಆದೆನು."

೧೬. ಸೂತನು ಹೇಳುತ್ತಾನೆ:—ಇಂದ್ರನು ಯಮನ ಆ ದೀನ ವಚನವನ್ನು ಕೇಳಿ ತಾನೇ ಆ ಕಾಲಕ್ಕೆ ಉಚಿತವಾದ ಈ ಮಾತನ್ನು ಹೇಳಿದನು.

೧೭. ಪಿತಾಮಹ! ನಿನ್ನ ಅಪ್ಪಣೆಯನ್ನು ನಡೆಯಿಸುವ ಈ ಧರ್ಮರಾಜನು ಉಚಿತವಾಗಿಯೇ ಮಾತಾಡಿರುವನು.

ಅವಶ್ಯಮೇವ ಮರ್ತ್ಯೇ ಚ ಮನುಷ್ಯಾಃ ಸಮಯೇ ಸ್ಥಿತಾಃ ।
ಬಾಲ್ಯೇ ವಾ ಯೌವನೇ ವಾಽಥ ವಾರ್ಧಕ್ಯೇ ವಾ ಪಿತಾಮಹ ।
ಸಂಹರ್ತವ್ಯಾ ನ ಸಂದೇಹೋ ನಾಕಾಲೇ ಚ ಕಥಂಚನ ॥ ೧೮ ॥
ಏತದೇವ ಕೃತಂ ನಾಮ ಧರ್ಮರಾಜಾಖ್ಯಮುತ್ತಮಂ ।
ತ್ವಯಾ ಚ ಸಮಮಿತ್ರಸ್ಯ ಸಮಶತ್ರೋರ್ಮಹಾತ್ಮನಃ ॥ ೧೯ ॥
ತಸ್ಮಾದದ್ಯ ಸಮಾಲೋಕ್ಯ ಕಶ್ಚಿದೇವ ವಿಚಿಂತ್ಯತಾಂ ।
ಉಪಾಯೋ ಯೇನ ನಿರ್ದೋಷೋ ನಿಯೋಗಂ ಕುರುತೇ ತವ ॥ ೨೦ ॥

ಬ್ರಹ್ಮೋವಾಚ :—

ಬ್ರಹ್ಮಶಾಪಂ ನ ಶಕ್ತೋಽಹಮನ್ಯಥಾ ಕರ್ತುಮೇವ ಚ ।
ಉಪಾಯಂ ಚ ಕರಿಷ್ಯಾಮಿ ಸಾಂಪ್ರತಂ ತ್ರಿದಶಾಧಿಪ ॥ ೨೧ ॥
ತತೋ ಧ್ಯಾನಂ ಪ್ರಚಕ್ರೇ ಸ ಬ್ರಹ್ಮಾ ಲೋಕಪಿತಾಮಹಃ ।
ತದರ್ಥಂ ಸರ್ವದೇವಾನಾಂ ಪುರತಃ ಸುಸಮಾಹಿತಃ ॥ ೨೨ ॥
ತಸ್ಯೈವಂ ಧ್ಯಾನಸಕ್ತಸ್ಯ ಪ್ರಾದುರ್ಭೂತಾಃ ಸಮಂತತಃ ।
ಮೂರ್ತಾ ರೋಗಾಃ ಸುರೌದ್ರಾಸ್ತೇ ವಾತಗುಲ್ಮಕಫಾತ್ಮಕಾಃ ।
ಅಷ್ಟೋತ್ತರಶತಪ್ರಾಯಾಃ ಪ್ರೋಚುಸ್ತಂ ಚ ಕೃತಾದರಾಃ ॥ ೨೩ ॥

---

೧೮. ಭೂಲೋಕದ ಮನುಷ್ಯರಿಗೆ ಮರಣಕಾಲವೊದಗಿದಾಗ ಬಾಲ್ಯವಾಗಲಿ, ಯೌವನವಾಗಲಿ, ವಾರ್ಧಕ್ಯವಾಗಲಿ ಅದನ್ನೆಣಿಸದೆ ಅವರನ್ನು ಅವಶ್ಯವಾಗಿ ಸಂಹರಿಸಬೇಕು. ಅಕಾಲದಲ್ಲಿ ಯಾರನ್ನೂ ಸಂಹರಿಸಬಾರದು.

೧೯. ಶತ್ರುಮಿತ್ರರಲ್ಲಿ ಸಮವಾಗಿರುವ ಇವನಿಗೆ ನೀನೇ ಧರ್ಮರಾಜನೆಂಬ ಉತ್ತಮವಾದ ಹೆಸರನ್ನಿಟ್ಟಿರುವೆ.

೨೦. ಆದುದರಿಂದ ಈಗ ಈ ಯಮನು ನಿರ್ದುಷ್ಟನಾಗಿ ಅಧಿಕಾರವನ್ನು ನಿರ್ವಹಿಸುವಂತೆ ಒಂದು ಉಪಾಯವನ್ನು ಆಲೋಚಿಸು.

೨೧. ಬ್ರಹ್ಮನು ಹೇಳುತ್ತಾನೆ:—ಅಮರೇಶ್ವರ! ಬ್ರಾಹ್ಮಣ ಶಾಪವನ್ನು ವ್ಯತ್ಯಾಸಗೊಳಿಸಲು ನಾನು ಸಮರ್ಥನಲ್ಲ. ಈಗ ಒಂದು ಉಪಾಯವನ್ನು ಮಾತ್ರ ಆಲೋಚನೆ ಮಾಡುತ್ತೇನೆ.

೨೨. ಹೀಗೆಂದ ತರುವಾಯ ಬ್ರಹ್ಮನು ಯಮನಿಗಾಗಿ ಸಮಸ್ತ ದೇವತೆಗಳ ಮುಂದೆ ಸಾವಧಾನಮನಸ್ಸಿನಿಂದ ಧ್ಯಾನಿಸಿದನು.

೨೩. ಹೀಗೆ ಧ್ಯಾನಿಸುತ್ತಿರುವ ಆ ಬ್ರಹ್ಮನ ಸುತ್ತಲೂ ವಾತ, ಪಿತ್ತ, ಕಫ ರೂಪಗಳಾದ ನೂರೆಂಟು ಭಯಂಕರ ರೋಗಗಳು ಶರೀರಸಹಿತವಾಗಿ ಆವಿರ್ಭವಿಸಿ ಹೀಗೆಂದುವು.

ರೋಗಾ ಊಚುಃ :—

ಕಿಮರ್ಥಂ ದೇವದೇವೇಶ ತ್ವಯಾ ಸೃಷ್ಟಾ ವಯಂ ವಿಭೋ ।
ಆದೇಶೋ ದೀಯತಾಂ ಶೀಘ್ರಂ ಪ್ರಸಾದಃ ಕ್ರಿಯತಾಮಿತಿ ॥ ೨೪ ॥

ಬ್ರಹ್ಮೋವಾಚ :—

ವ್ರಜಧ್ವಂ ಭೂತಲೇ ಶೀಘ್ರಂ ಮಮಾದೇಶಾದಸಂಶಯಂ ।
ಯಮಾದೇಶಾನ್ಮನುಷ್ಯೇಷು ಗಂತವ್ಯಮವಿಕಲ್ಪಿತಂ ॥ ೨೫ ॥
ಏವಮುಕ್ತ್ವಾ ತು ತಾನ್ ರೋಗಾಂಸ್ತತಃ ಪ್ರಾಹ ಪಿತಾಮಹಃ ।
ಧರ್ಮರಾಜಂ ಸಮೀಪಸ್ಥಂ ಭೃಶಂ ದೀನಮಧೋಮುಖಂ ॥ ೨೬ ॥
ಏತೇ ತೇ ವ್ಯಾಧಯಃ ಸರ್ವೇ ಮಯಾ ಯಮ ನಿಯೋಜಿತಾಃ ।
ಸಾಹಾಯ್ಯಂ ಚ ಕರಿಷ್ಯಂತಿ ಸರ್ವಕೃತ್ಯೇಷು ಸರ್ವದಾ ॥ ೨೭ ॥
ಯಃ ಕಶ್ಚಿದಧುನಾ ಮರ್ತ್ಯೋ ಗತಾಯುಃ ಸಂಪ್ರಪದ್ಯತೇ ।
ವಧಾಯ ತಸ್ಯ ಯತ್ನೇನ ತ್ವಯಾ ಪ್ರೇಷ್ಯಾಃ ಸದೈವ ತು ॥ ೨೮ ॥
ಏತೇಷಾಂ ಜಾಯತೇ ತೇನ ಜನನಾಶಸಮುದ್ಭವಃ ।
ಅಪವಾದೋ ಧರಾಪೃಷ್ಠೇ ನ ಚ ಸಂಜಾಯತೇ ತವ ॥ ೨೯ ॥
ತಸ್ಮಾದ್ಗತ್ವಾ ನಿಜಂ ಸ್ಥಾನಂ ಸ್ವಾಧಿಕಾರಪರೋ ಭವ ।
ಮಮಾದೇಶಾದಸಂದಿಗ್ಧಂ ನೈವಂ ದೋಷಮವಾಪ್ಸ್ಯಸಿ ॥ ೩೦ ॥

---

೨೪. ರೋಗಗಳು ಹೇಳುತ್ತವೆ :—ಪಿತಾಮಹ! ನೀನು ನಮ್ಮನ್ನು ಏತಕ್ಕೆ ಸೃಷ್ಟಿಸಿರುವೆ? ನಮಗೆ ಶೀಘ್ರವಾಗಿ ಅಪ್ಪಣೆಯನ್ನಿತ್ತು ಅನುಗ್ರಹಿಸು.

೨೫. ಬ್ರಹ್ಮನು ಹೇಳುತ್ತಾನೆ :—ನೀವು ನನ್ನ ಅಪ್ಪಣೆಯಿಂದ ಭೂಲೋಕಕ್ಕೆ ತೆರಳಿರಿ. ಅಲ್ಲಿ ಈ ಯಮನ ಅಪ್ಪಣೆಯಿಂದ ಮನುಷ್ಯರನ್ನು ಸೇರಿರಿ.

೨೬. ಬ್ರಹ್ಮನು ಆ ರೋಗಗಳನ್ನು ಕುರಿತು ಹೀಗೆ ಹೇಳಿ ಸಮೀಪದಲ್ಲಿ ದೈನ್ಯದಿಂದ ತಲೆಯನ್ನು ತಗ್ಗಿಸಿಕೊಂಡಿರುವ ಧರ್ಮರಾಜನನ್ನು ಕುರಿತು ಇಂತೆಂದನು.

೨೭. ಧರ್ಮರಾಜ! ನಾನು ನೇಮಿಸಿರುವ ಈ ವ್ಯಾಧಿಗಳು ನಿನಗೆ ಸಕಲ ಕಾರ್ಯಗಳಲ್ಲಿ ಯಾವಾಗಲೂ ಸಹಾಯವನ್ನು ಮಾಡುವುವು.

೨೮. ಈಗ ಯಾವ ಮನುಷ್ಯನು ಆಯುಸ್ಸಿಲ್ಲದಿರುವನೋ ಅವನನ್ನು ಕೊಲ್ಲಲು ನೀನು ಈ ರೋಗಗಳನ್ನು ಕಳುಹಿಸು.

೨೯. ಭೂಮಿಯಲ್ಲಿ ಜನನಾಶದಿಂದುಂಟಾದ ಅಪವಾದವು ಈ ರೋಗಗಳಿಗೆ ಬರುವುದು. ನಿನಗೆ ಸಂಭವಿಸುವುದಿಲ್ಲ.

೩೦. ಆದುದರಿಂದ ನನ್ನ ಅಪ್ಪಣೆಯಿಂದ ನೀನು ನಿನ್ನ ಸ್ಥಾನವನ್ನು ಸೇರಿ ಅಧಿಕಾರನಿರತನಾಗು. ನಿಶ್ಚಯವಾಗಿಯೂ ನೀನು ದೋಷವನ್ನು ಹೊಂದುವುದಿಲ್ಲ.

**ತತಸ್ತಾನ್ ಸಕಲಾನ್ ವ್ಯಾಧೀನ್ ಗೃಹೀತ್ವಾ ರವಿನಂದನಃ ।**
**ಯಮಲೋಕಂ ಸಮಾಸಾದ್ಯ ತತಃ ಪ್ರೋವಾಚ ಸಾದರಂ ॥ ೩೧ ॥**
**ಪೃಷ್ಟ್ವಾ ಪೃಷ್ಟ್ವಾ ಚ ಗಂತವ್ಯಂ ಚಿತ್ರಗುಪ್ತಂ ಧರಾತಲೇ ।**
**ಗಂತವ್ಯಂ ಜನನಾಶಾಯ ಸಮಯೇ ಸಮುಪಸ್ಥಿತೇ ॥ ೩೨ ॥**
**ಪರಮಸ್ತಿ ಮಯಾ ತತ್ರ ಸ್ಥಾಪಿತಂ ಲಿಂಗಮುತ್ತಮಂ ।**
**ಹಾಟಕೇಶ್ವರಜೇ ಕ್ಷೇತ್ರೇ ಸರ್ವಪಾತಕನಾಶನಂ ॥ ೩೩ ॥**
**ಯಸ್ತಂ ಪಶ್ಯತಿ ಸದ್ಭಕ್ತ್ಯಾ ಪ್ರಾತರುತ್ಥಾಯ ಮಾನವಃ ।**
**ಸ ಯುಷ್ಮಾಭಿಃ ಸದಾ ತ್ಯಾಜ್ಯೋ ದೂರತೋ ವಚನಾನ್ಮಮ ॥ ೩೪ ॥**
**ಏವಮುಕ್ತ್ವಾ ಸ ತಾನ್ ವ್ಯಾಧೀಂಸ್ತತೋ ವೈವಸ್ವತಃ ಸ್ವಯಂ ।**
**ತಸ್ಯ ವಿಪ್ರಸ್ಯ ತಂ ಪುತ್ರಂ ಗೃಹೀತ್ವಾ ಸತ್ವರಂ ಯಯೌ ।**
**ತಸ್ಯೈವ ಮಂದಿರೇ ರಮ್ಯೇ ಕೃತ್ವಾ ರೂಪಂ ದ್ವಿಜನ್ಮನಃ ॥ ೩೫ ॥**
**ಅಥಾಽಸೌ ಬ್ರಾಹ್ಮಣೋ ದೃಷ್ಟ್ವಾ ಸ್ವಂ ಪುತ್ರಂ ಗೃಹಮಾಗತಂ ।**
**ಸಹಿತಂ ವಿಪ್ರರೂಪೇಣ ಧರ್ಮರಾಜೇನ ಧೀಮತಾ ॥ ೩೬ ॥**
**ತತಃ ಪ್ರಹೃಷ್ಟಚಿತ್ತೇನ ಸತ್ವರಂ ಸಂಮುಖೋ ಯಯೌ ।**
**ಪುತ್ರಪುತ್ರೇತಿ ಜಲ್ಪನ್ ಸ ನಿಜಭಾರ್ಯಾಸಮನ್ವಿತಃ ॥ ೩೭ ॥**
**ಪರಿಷ್ವಜ್ಯ ತತೋ ಭೂಯೋ ಬಾಷ್ಪಪರ್ಯಾಕುಲೇಕ್ಷಣಃ ।**
**ಆಘ್ರಾಯ ಚ ತತೋ ಮೂರ್ಧ್ನಿ ವಾಕ್ಯಮೇತದುವಾಚ ಹ ॥ ೩೮ ॥**

---

೩೧. ತರುವಾಯ ಯಮನು ಆ ಸಮಸ್ತ ರೋಗಗಳನ್ನೂ ಕರೆದುಕೊಂಡು ತನ್ನ ಲೋಕವನ್ನು ಸೇರಿ ಪ್ರೀತಿಯಿಂದ ಇಂತೆಂದನು.

೩೨. ನೀವು ಭೂಲೋಕದಲ್ಲಿ ಜನರ ನಾಶದ ಸಮಯವೊದಗಲು ಚಿತ್ರಗುಪ್ತನನ್ನು ಕೇಳಿ ಕೇಳಿ ಅಲ್ಲಿಗೆ ಹೋಗಿರಿ.

೩೩. ಹಾಟಕೇಶ್ವರಕ್ಷೇತ್ರದಲ್ಲಿ ನಾನು ಪ್ರತಿಷ್ಠೆಮಾಡಿರುವ ಸಕಲ ಪಾಪಗಳನ್ನು ನಾಶಗೊಳಿಸುವ ಮಹೇಶ್ವರಲಿಂಗವಿದೆ.

೩೪. ಯಾವ ಮನುಷ್ಯನು ಬೆಳಗ್ಗೆ ಎದ್ದು ಆ ಲಿಂಗವನ್ನು ದರ್ಶನಮಾಡುವನೋ ಅವನನ್ನು ನೀವು ನನ್ನ ಮಾತಿನಿಂದ ದೂರದಲ್ಲಿಯೇ ತ್ಯಜಿಸಿರಿ.

೩೫. ಧರ್ಮರಾಜನು ವ್ಯಾಧಿಗಳನ್ನು ಕುರಿತು ಹೀಗೆ ಹೇಳಿ ಆ ಬ್ರಾಹ್ಮಣಬಾಲಕನನ್ನು ಕರೆದುಕೊಂಡು ತಾನೂ ಬ್ರಾಹ್ಮಣರೂಪವನ್ನು ತಾಳಿ ಆ ಬ್ರಾಹ್ಮಣನ ಮನೆಗೆ ತೆರಳಿದನು.

೩೬–೩೮. ತರುವಾಯ ಆ ಬ್ರಾಹ್ಮಣನು ದ್ವಿಜರೂಪಿಯಾದ ಯಮನೊಡನೆ ಮನೆಗೆ ಬಂದ ಪುತ್ರನನ್ನು ನೋಡಿ ಸಂತೋಷಗೊಂಡು ಮಗು ! ಮಗು ! ಎಂದು ತನ್ನ ಮಡದಿಯೊಡನೆ ಅವನೆದುರಿಗೆ ಹೋದನು. ತರುವಾಯ ಅವನನ್ನು ಆಲಿಂಗಿಸಿ ಕಣ್ಣೀರನ್ನು ಸುರಿಸುತ್ತ ತಲೆಯನ್ನು ಆಘ್ರಾಣಿಸಿ ಹೀಗೆಂದನು.

ಬ್ರಾಹ್ಮಣ ಉವಾಚ :—

**ಕಥಂ ಪುತ್ರ ಸಮಾಯಾತಸ್ತ್ವಂ ತಸ್ಮಾದ್ಯಮಮಂದಿರಾತ್ ।**
**ನ ಕಶ್ಚಿತ್ಪುನರಾಯಾತಿ ಯತ್ರ ಗತ್ವಾಪಿ ವೀರ್ಯವಾನ್ ॥ ೩೯ ॥**
**ಕಿಂ ವಾ ಚೈತತ್ಸಮುತ್ಪನ್ನಮಿಂದ್ರಜಾಲಂ ಮಮಾಂತಿಕಂ ।**
**ಕಿಂ ವಾ ಸ್ವಪ್ನಮಿದಂ ಕಿಂ ವಾ ಮಮಾಯಂ ದೃಷ್ಟಿವಿಭ್ರಮಃ ॥ ೪೦ ॥**
**ಕಶ್ಚಾಯಂ ಬ್ರಾಹ್ಮಣಃ ಪಾರ್ಶ್ವೇ ತವ ಸಂತಿಷ್ಠತೇ ಸುತ ।**
**ದಿವ್ಯೇನ ತೇಜಸಾ ಯುಕ್ತಸ್ತಂ ನಮಾಮ್ಯಹಮಾತ್ಮಜ ॥ ೪೧ ॥**

ಪುತ್ರ ಉವಾಚ :—

**ಏಷ ಬ್ರಾಹ್ಮಣ ರೂಪೇಣ ಸಮಾಯಾತೋ ಯಮಃ ಸ್ವಯಂ ।**
**ಮಾಮಾದಾಯ ಕೃಪಾವಿಷ್ಟೋ ಜ್ಞಾತ್ವಾ ತ್ವಾಂ ದುಃಖಸಂಯುತಂ ॥ ೪೨ ॥**
**ತಸ್ಮಾತ್ತ್ವಂ ಕುರು ತಾತಾಸ್ಯ ಶಾಪಾನುಗ್ರಹಮದ್ಯ ವೈ ।**
**ಗೃಹಪ್ರಾಪ್ತಸ್ಯ ಸುಸ್ನೇಹಾದ್ಯದಹಂ ತವ ವಲ್ಲಭಃ ॥ ೪೩ ॥**
**ತತಸ್ತಸ್ಯ ಪ್ರಣಾಮಂ ಸ ಕೃತ್ವಾ ಬ್ರಾಹ್ಮಣಸತ್ತಮಃ ।**
**ವ್ರೀಡಯಾಽಧೋಮುಖೋ ಭೂತ್ವಾ ತತಃ ಪ್ರೋವಾಚ ಸಾದರಂ ॥ ೪೪ ॥**

ಬ್ರಾಹ್ಮಣ ಉವಾಚ :—

**ಅದ್ಯ ಮೇ ಸಫಲಂ ಜನ್ಮ ಜೀವಿತಂ ಚ ಸುಜೀವಿತಂ ।**
**ಯತ್ಪುತ್ರಸ್ಯ ಮಮ ಪ್ರಾಪ್ತಿರ್ಗತಸ್ಯ ಯಮಸಾದನಂ ॥ ೪೫ ॥**

---

೩೯—೪೦. ಬ್ರಾಹ್ಮಣನು ಹೇಳುತ್ತಾನೆ :—ಮಗು ! ನೀನು ಆ ಯಮಾಲಯದಿಂದ ಇಲ್ಲಿಗೆ ಹೇಗೆ ಬಂದೆ? ಅಲ್ಲಿಗೆ ಹೋದ ಯಾವ ವೀರನೂ ಸಹ ಹಿಂದಿರುಗುವುದಿಲ್ಲವಲ್ಲ. ಅಥವಾ ಇದು ಇಂದ್ರಜಾಲವೊ? ಸ್ವಪ್ನವೊ? ಅಥವಾ ಭ್ರಾಂತಿಯೊ?

೪೧. ಮಗು ! ನಿನ್ನ ಹತ್ತಿರವಿರುವ ದಿವ್ಯತೇಜಸ್ಸುಳ್ಳ ಈ ಬ್ರಾಹ್ಮಣನಾರು ? ಇವನನ್ನು ನಾನು ವಂದಿಸುವೆನು.

೪೨. ಪುತ್ರನು ಹೇಳುತ್ತಾನೆ :—ಯಮನು ನೀನು ದುಃಖಗೊಂಡಿರುವುದನ್ನು ನೋಡಿ ದಯೆಗೊಂಡು ಬ್ರಾಹ್ಮಣರೂಪವನ್ನು ತಾಳಿ ನನ್ನನ್ನು ಕರೆದುಕೊಂಡು ತಾನೇ ನಿನ್ನ ಬಳಿಗೆ ಬಂದಿರುವನು.

೪೩. ಅಪ್ಪ ! ಆದುದರಿಂದ ನಾನು ನಿನಗೆ ಪ್ರಿಯನಾಗಿದ್ದರೆ ಮನೆಗೆ ಬಂದ ಈ ಯಮನಿಗೆ ಶಾಪಾನುಗ್ರಹವನ್ನು ಮಾಡು.

೪೪. ಅನಂತರ ಆ ಬ್ರಾಹ್ಮಣೋತ್ತಮನು ಯಮನಿಗೆ ಪ್ರಣಾಮಗೈದು ನಾಚಿಕೆಯಿಂದ ತಲೆತಗ್ಗಿಸಿಕೊಂಡು ಪ್ರೀತಿಯಿಂದ ಇಂತೆಂದನು.

೪೫. ಬ್ರಾಹ್ಮಣನು ಹೇಳುತ್ತಾನೆ :—ಯಮನ ಮನೆಗೆ ತೆರಳಿದ ಪುತ್ರನು ಮರಳಿ ಬಂದುದರಿಂದ ಈ ದಿನ ನನ್ನ ಜನ್ಮವು ಸಫಲವಾಯಿತು. ಜೀವನವು ಒಳ್ಳೆಯದಾಯಿತು.

ತ್ವಂ ಚ ಪುತ್ರಕೃತೇ ತಾತ ಸಂತೋಷಂ ಪರಮಂ ಗತಃ ।
ತಸ್ಮಾತ್ಪುತ್ರೇಣ ಸಂಯುಕ್ತೋ ಯಥಾಽಯಂ ಸ್ಯಾತ್ತಥಾ ಕುರು ॥ ೪೬ ॥
ಬ್ರಾಹ್ಮಣ ಉವಾಚ :—
ನ ಮೇ ಸ್ಯಾದನೃತಂ ವಾಕ್ಯಂ ಕದಾಚಿದಪಿ ಪುತ್ರಕ ।
ಅಪಿ ಸ್ವೈರೇಣ ಯತ್ಪ್ರೋಕ್ತಂ ಕಿಂ ಪುನರ್ದುಃಖಿತೇನ ಚ ॥ ೪೭ ॥
ತಸ್ಮಾತ್ತಸ್ಯ ಭವೇತ್ಪುತ್ರೋ ದೈವಯೋನಿಸಮುದ್ಭವಃ ।
ನ ಕಥಂಚಿದಪಿ ಪ್ರಾಜ್ಞ ಮಮ ಶಾಪವಶಾದ್ಧ್ರುವಂ ॥ ೪೮ ॥
ಭವಿಷ್ಯತಿ ಸುತಶ್ಚಾಽನ್ಯೋ ಮಾನುಷೀಯೋನಿಸಂಭವಃ ।
ರಾಜಸೂಯಾಽಶ್ವಮೇಧಾಭ್ಯಾಂ ಯಶ್ಚೈನಂ ತಾರಯಿಷ್ಯತಿ ॥ ೪೯ ॥
ಕೋಽರ್ಥಃ ಪುತ್ರೇಣ ಜಾತೇನ ಯೋ ನ ಸಂತಾರಣಕ್ಷಮಃ ।
ಪಿತೃಪಕ್ಷಂ ಶುಭಂ ಕರ್ಮ ಕೃತ್ವಾ ಸರ್ವೋತ್ತಮಂ ಭುವಿ ॥ ೫೦ ॥
ತಥಾ ಪೂಜಾಕೃತೇ ಯೋಽಸ್ಯ ಶಾಪೋ ದತ್ತಶ್ಚ ವೈ ಪುರಾ ।
ತತ್ರಾಽಪಿ ಶೃಣು ಮೇ ವಾಕ್ಯಂ ತಸ್ಯ ಪುತ್ರಕ ಜಲ್ಪತಃ ॥ ೫೧ ॥
ವೇದೋಕ್ತೈರ್ವಿನಿಧೈರ್ಮಂತ್ರೈರ್ಯಾ ಪೂಜಾ ಚಾಽಸ್ಯ ಸಂಸ್ಥಿತಾ ।
ನ ಭವಿಷ್ಯತಿ ಸಾ ಲೋಕೇ ಕಥಂಚಿದಪಿ ಪುತ್ರಕ ॥ ೫೨ ॥
ಅಸ್ಯ ಮಾನುಷಸಂಭೂತೈರ್ಮಂತ್ರೈಃ ಪೂಜಾ ಭವಿಷ್ಯತಿ ।
ವಿಶಿಷ್ಟಾ ಸರ್ವದೇವೇಭ್ಯಃ ಸತ್ಯಮೇತನ್ಮಯೋದಿತಂ ॥ ೫೩ ॥

---

೪೬. ಅಪ್ಪ! ನೀನು ಪುತ್ರಸಮಾಗಮದಿಂದ ಸಂತೋಷಗೊಂಡ ಕಾರಣ ಈ ಯಮನೂ ಪುತ್ರಸಹಿತನಾಗುವಂತೆ ಮಾಡು.

೪೭–೪೮. ಬ್ರಾಹ್ಮಣನು ಹೇಳುತ್ತಾನೆ:—ಮಗು! ನಾನು ಸ್ವೇಚ್ಛೆಯಾಗಿ ಹೇಳಿದ ಮಾತೂ ಸುಳ್ಳಾಗುವುದಿಲ್ಲ. ದುಃಖದಿಂದಾಡಿದ ಮಾತಿನ್ನೇನು. ಆದುದರಿಂದ ಈ ಯಮನಿಗೆ ನನ್ನ ಶಾಪದಿಂದ ದೇವತೆಗಳಲ್ಲಿ ಪುತ್ರನು ಜನಿಸುವುದಿಲ್ಲ.

೪೯. ರಾಜಸೂಯ, ಅಶ್ವಮೇಧಯಾಗಗಳಿಂದ ಇವನನ್ನು ಉದ್ಧರಿಸುವ ಮನುಷ್ಯಜಾತಿಯ ಪುತ್ರನು ಹುಟ್ಟುವನು.

೫೦. ಸರ್ವೋತ್ತಮವಾದ ಶುಭಕರ್ಮವನ್ನಾಚರಿಸಿ ತಂದೆಯ ಕಡೆಯ ಪಿತೃಗಳನ್ನು ಉದ್ಧರಿಸದ ಮಗನು ಹುಟ್ಟಿ ಏನು ಪ್ರಯೋಜನ?

೫೧. ಮಗು! ಇವನ ಪೂಜೆಯ ವಿಷಯದಲ್ಲಿ ಶಾಪವನ್ನು ಕೊಟ್ಟಿರುವೆನಷ್ಟೆ. ಅದರ ವಿಷಯದಲ್ಲಿಯೂ ನಾನು ಹೇಳುವುದನ್ನು ಕೇಳು.

೫೨. ಇವನಿಗೆ ಲೋಕದಲ್ಲಿ ವೇದೋಕ್ತಮಂತ್ರಗಳಿಂದ ಮಾಡುವ ಪೂಜೆಯು ನಡೆಯುವುದಿಲ್ಲ.

೫೩. ಮನುಷ್ಯಸಂಬಂಧವಾದ ಮಂತ್ರಗಳಿಂದ ಸಮಸ್ತದೇವತೆಗಳಿಗಿಂತಲೂ ವಿಲಕ್ಷಣವಾದ ಪೂಜೆಯು ನಡೆಯುವುದು. ನಾನು ಹೇಳಿದ ಈ ಮಾತು ನಿಜ.

ಪುತ್ರ ಉವಾಚ:—
ಅಹಮೇನಂ ಪ್ರತಿಷ್ಠಾಪ್ಯ ದ್ವಿಜಶ್ರೇಷ್ಠ ಮಹೀತಲೇ ।
ಸಮ್ಯಗಾರಾಧಯಿಷ್ಯಾಮಿ ಕಿಮನ್ಯೈರ್ವಿಬುಧೈರ್ಮಮ ॥ ೫೪ ॥
ತಸ್ಮಾತ್ಸಂಕೀರ್ತಯಿಷ್ಯಾಮಿ ಮಂತ್ರಾನ್ ಮಾನುಷ ಸಂಭವಾನ್ ।
ತಥಾ ಪೂಜಾವಿಧಾನಂ ಚ ತ್ವತ್ಪ್ರಸಾದೇನ ಪೂರ್ವಜ ॥ ೫೫ ॥
ತತಃ ಸುಗಂ ನಃ ಪಂಥೇತಿ ತಸ್ಯ ಮಂತ್ರಂ ವಿಧಾಯ ಸಃ ।
ಸಮಾಚರತ್ಪ್ರಹೃಷ್ಟಾತ್ಮಾ ಧರ್ಮರಾಜಸ್ಯ ಶೃಣ್ವತಃ ॥ ೫೬ ॥
ತಚ್ಛ್ರುತ್ವಾಽಥ ಯಮಃ ಪ್ರೋಚೈಃ ಸುಪ್ರಸನ್ನೇನ ಚೇತಸಾ ।
ತಂ ಬ್ರಾಹ್ಮಣಮುವಾಚೇದಂ ಹರ್ಷಗದ್ಗದಯಾ ಗಿರಾ ॥ ೫೭ ॥
ಯಮ ಉವಾಚ:—
ಕಥಂಚಿದಪಿ ವಿಪ್ರೇಂದ್ರ ನ ಮೇ ಸ್ಯಾದ್ದರ್ಶನಂ ವೃಥಾ ।
ಅನ್ಯೇಷಾಮಪಿ ದೇವಾನಾಂ ತಸ್ಮಾತ್ಪ್ರಾರ್ಥಯ ವಾಂಛಿತಂ ॥ ೫೮ ॥
ಬ್ರಾಹ್ಮಣ ಉವಾಚ:—
ತವಾರ್ಚಾಂ ಮಮ ಪುತ್ರೋಽಯಂ ಸ್ಥಾಪಯಿಷ್ಯತಿ ಯಾಮಿಹ ।
ತಾಮನೇನೈವ ಮಂತ್ರೇಣ ಯಃ ಕಶ್ಚಿತ್ಪೂಜಯೇದ್ದ್ವಿಜಃ ॥ ೫೯ ॥
ಭವೇತ್ಸಂವತ್ಸರಂ ಯಾವತ್ಸಂಪ್ರಾಪ್ತೇ ಪಂಚಮೀ ದಿನೇ ।
ಮಾ ತಸ್ಯ ಪುತ್ರಶೋಕೋ ಹಿ ಇಹಲೋಕೇ ಕಥಂಚನ ॥ ೬೦ ॥

---

೫೪. ಪುತ್ರನು ಹೇಳುತ್ತಾನೆ:—ಅಪ್ಪ! ನಾನು ಭೂಮಿಯಲ್ಲಿ ಇವನನ್ನು ಪ್ರತಿಷ್ಠೆಮಾಡಿ ಚೆನ್ನಾಗಿ ಪೂಜಿಸುವೆನು. ನನಗೆ ಇತರ ದೇವತೆಗಳಿಂದೇನು ಪ್ರಯೋಜನ?

೫೫. ಆದುದರಿಂದ ನಿನ್ನ ಅನುಗ್ರಹದಿಂದ ಮನುಷ್ಯ ಮಂತ್ರಗಳಿಂದ ಮಾಡುವ ಪೂಜಾವಿಧಿಯನ್ನು ಕಲ್ಪಿಸುವೆನು.

೫೬. ಆ ಬಾಲಕನು ಯಮನು ಕೇಳುತ್ತಿರುವಾಗಲೇ "ಸುಗಂ ನಃ ಪಂಥೇ" ಇತ್ಯಾದಿ ಮಂತ್ರವನ್ನು ರಚಿಸಿ ಸಂತೋಷದಿಂದ ಪೂಜಿಸಿದನು.

೫೭. ಯಮನು ಅದನ್ನು ಕೇಳಿ ಪ್ರಸನ್ನವಾದ ಮನಸ್ಸುಳ್ಳವನಾಗಿ ಹರ್ಷದಿಂದ ಗದ್ಗದವಾದ ಮಾತಿನಿಂದ ಇಂತೆಂದನು.

೫೮. ಯಮನು ಹೇಳುತ್ತಾನೆ:—ಬ್ರಾಹ್ಮಣ! ನನ್ನ ಮತ್ತು ಇತರ ದೇವತೆಗಳ ದರ್ಶನವು ವ್ಯರ್ಥವಾಗಲಾರದು. ಆದುದರಿಂದ ನಿನ್ನ ಅಭೀಷ್ಟವನ್ನು ಕೇಳಿಕೊ.

೫೯–೬೦. ಬ್ರಾಹ್ಮಣನು ಹೇಳುತ್ತಾನೆ:—ಧರ್ಮರಾಜ! ನನ್ನೀ ಪುತ್ರನು ಕಲ್ಪಿಸಿದ ಮಂತ್ರದಿಂದ ಒಂದು ವರ್ಷಕಾಲ ಪಂಚಮಿಯ ದಿನ ನಿನ್ನನ್ನು ಪೂಜಿಸಿದ ಬ್ರಾಹ್ಮಣನು ಈ ಲೋಕದಲ್ಲಿ ಪುತ್ರಶೋಕದಿಂದ ಪೀಡಿತನಾಗುವುದಿಲ್ಲ.

ಸೂತ ಉವಾಚ :—

ಸ ತಥೇತಿ ಪ್ರತಿಜ್ಞಾಯ ಸಂಪ್ರಹೃಷ್ಟಮನಾ ಯಮಃ ।
ಯಮಲೋಕಂ ಜಗಾಮಾಽಥ ಸ್ವಾಧಿಕಾರಪರೋಽಭವತ್ ॥ ೬೧ ॥
ಸೋಽಪಿ ಬ್ರಾಹ್ಮಣದಾಯಾದಃ ಕೃತ್ವಾ ಪ್ರಾಸಾದಮುತ್ತಮಂ ।
ಯಮಮಾರಾಧಯಾಮಾಸ ಮಧ್ಯೇ ಸಂಸ್ಥಾಪ್ಯ ಭಕ್ತಿತಃ ।
ಪಿತ್ರಾ ಚೋಕ್ತೇನ ಮಂತ್ರೇಣ ತೇನೈವ ವಿಧಿಪೂರ್ವಕಂ ॥ ೬೨ ॥
ತತಶ್ಚ ಕ್ರಮಶಃ ಪ್ರಾಪ್ಯ ಪುತ್ರಪೌತ್ರಾನನೇಕಶಃ ।
ಕಾಲಧರ್ಮಮನುಪ್ರಾಪ್ತಶ್ಚಿರಂ ಸ್ಥಿತ್ವಾ ಮಹೀತಲೇ ॥ ೬೩ ॥
ಏತದ್ವಃ ಸರ್ವಮಾಖ್ಯಾತಂ ಪುರಾಣೇ ಯತ್ಪುರಾ ಶ್ರುತಂ ।
ಯಶ್ಚೈತತ್ಕೀರ್ತಯೇದ್ಭಕ್ತ್ಯಾ ಸಂಪ್ರಾಪ್ತೇ ಪಂಚಮೀ ದಿನೇ ।
ನಾಽಪಮೃತ್ಯುರ್ಭವೇತ್ತಸ್ಯ ನ ಚ ಶೋಕಃ ಸುತೋದ್ಭವಃ ॥ ೬೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧರ್ಮರಾಜೇಶ್ವರಮಾಹಾತ್ಮ್ಯವರ್ಣನಂ"
ನಾಮ್ನೈಕೋನ ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೬೧. ಸೂತನು ಹೇಳುತ್ತಾನೆ:—ಯಮನು ಸಂತೋಷದಿಂದ ಹಾಗೆಯೇ ಆಗಲೆಂದು ಒಪ್ಪಿ ತನ್ನ ಲೋಕಕ್ಕೆ ಹೋಗಿ ತನ್ನ ಅಧಿಕಾರದಲ್ಲಿ ತೊಡಗಿದನು.

೬೨. ಆ ಬ್ರಾಹ್ಮಣನ ಪುತ್ರನೂ ಉತ್ತಮವಾದ ದೇವಾಲಯವನ್ನು ನಿರ್ಮಿಸಿ ಅದರ ನಡುವೆ ಯಮನನ್ನು ಸ್ಥಾಪಿಸಿ ತಂದೆಯು ಹೇಳಿದ ಮಂತ್ರದಿಂದ ಭಕ್ತಿ ಪೂರ್ವಕವಾಗಿ ವಿಧಿಯಂತೆ ಪೂಜಿಸಿದನು.

೬೩. ಅನಂತರ ಅವನು ಪುತ್ರಪೌತ್ರರನ್ನು ಪಡೆದು ಬಹುಕಾಲ ಭೂಮಿಯಲ್ಲಿದ್ದು ಮೃತನಾದನು.

೬೪. ನಾನು ಪುರಾಣದಲ್ಲಿ ಹಿಂದೆ ಕೇಳಿದ ಈ ಉಪಾಖ್ಯಾನವನ್ನು ನಿಮಗೆ ಸಂಪೂರ್ಣವಾಗಿ ಹೇಳಿರುವೆನು. ಇದನ್ನು ಪಂಚಮಿಯ ದಿನ ಭಕ್ತಿಯಿಂದ ಹೇಳುವವನಿಗೆ ಅಪಮೃತ್ಯು ಭಯವೂ, ಪುತ್ರಶೋಕವೂ ಉಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧರ್ಮರಾಜೇಶ್ವರಮಾಹಾತ್ಮ್ಯವರ್ಣನ"ವೆಂಬ
ನೂರಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತ್ವಾರಿಂಶದುತ್ತರಶತತಮೋಽಧ್ಯಾಯಃ

## ಧರ್ಮರಾಜಪುತ್ರಾಖ್ಯಾನವರ್ಣನಂ

ಋಷಯ ಊಚುಃ :—

ಯದೇತದ್ಭವತಾ ಪ್ರೋಕ್ತಂ ಪುತ್ರೋ ಮಾನುಷವಿಗ್ರಹಃ ।
ಭವಿಷ್ಯತಿ ಯಮಸ್ಯಾತ್ರ ಕಃ ಸಂಭೂತಃ ಸ ಸೂತಜ ॥ ೧ ॥

ಸೂತ ಉವಾಚ :—

ತಸ್ಯ ಪುತ್ರಃ ಸಮುತ್ಪನ್ನಃ ಪಾಂಡೋಃ ಕ್ಷೇತ್ರೇ ಮಹೀತಲೇ ।
ಯುಧಿಷ್ಠಿರ ಇತಿ ಖ್ಯಾತಃ ಸರ್ವಕ್ಷತ್ರಿಯಪುಂಗವಃ ॥ ೨ ॥
ರಾಜಸೂಯೋ ಮಖೋ ಯೇನ ಇಷ್ಟಃ ಸಂಪೂರ್ಣದಕ್ಷಿಣಃ ।
ಸರ್ವಾನ್ ಭೂಮಿಪತೀನ್ ವೀರ್ಯಾತ್ಸಂವಿಧಾಯ ಕರಪ್ರದಾನ್ ॥ ೩ ॥
ಅಶ್ವಮೇಧಾಃ ಕೃತಾಃ ಪಂಚ ತಥಾ ಸಂಪೂರ್ಣದಕ್ಷಿಣಾಃ ।
ಭ್ರಾಮಯಿತ್ವಾ ಹಯಂ ಭೂಮೌ ಪಶ್ಚಾತ್ಪ್ರಾಪ ಸ ಸದ್ಗತಿಂ ॥ ೪ ॥
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ।
ಯಜೇತ ವಾಽಶ್ವಮೇಧೇನ ನೀಲಂ ವಾ ವೃಷಮುತ್ಸೃಜೇತ್ ॥ ೫ ॥

---

## ಕನ್ನಡದ ಅನುವಾದ

### ಧರ್ಮರಾಜಪುತ್ರಾಖ್ಯಾನವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಯಮನಿಗೆ ಮನುಷ್ಯ ಪುತ್ರನು ಜನಿಸುವನೆಂದು, ಹೇಳಿದೆಯಷ್ಟೆ. ಅವನಿಗೆ ಯಾವನು ಮಗನಾದನು?

೨. ಸೂತನು ಹೇಳುತ್ತಾನೆ:—ಅವನಿಗೆ ಭೂಲೋಕದಲ್ಲಿರುವ ಪಾಂಡುರಾಜನ ಮಡದಿಯಾದ ಕುಂತಿಯಲ್ಲಿ ಯುಧಿಷ್ಠಿರನೆಂಬ ಕ್ಷತ್ರಿಯಶ್ರೇಷ್ಠನು ಪುತ್ರನಾದನು.

೩. ಅವನು ತನ್ನ ಸಾಮರ್ಥ್ಯದಿಂದ ಸಮಸ್ತ ದೊರೆಗಳನ್ನೂ ಕಪ್ಪ ಕೊಡುವವರನ್ನಾಗಿ ಮಾಡಿ ಸಂಪೂರ್ಣ ದಕ್ಷಿಣೆಯುಳ್ಳ ರಾಜಸೂಯಯಾಗವನ್ನು ಮಾಡಿದನು.

೪. ಅಂತೆಯೇ ಭೂಮಿಯಲ್ಲಿ ಅಶ್ವವನ್ನು ಸಂಚಾರಮಾಡಿಸಿ ಐದು ಅಶ್ವಮೇಧಯಾಗಗಳನ್ನು ನೆರವೇರಿಸಿ ಸದ್ಗತಿಯನ್ನು ಪಡೆದನು.

೫. ಬಹು ಮಂದಿ ಮಕ್ಕಳನ್ನು ಅಪೇಕ್ಷಿಸಬೇಕು. ಏಕೆಂದರೆ ಅವರಲ್ಲಿ ಒಬ್ಬನಾದರೂ ಕಾಶೀಯಾತ್ರೆ ಮಾಡಿಯಾನು. ಅಥವಾ ಅಶ್ವಮೇಧಯಾಗ ಮಾಡಿಯಾನು, ಅಥವಾ ನೀಲವೃಷೋತ್ಸರ್ಗವಮಾಡಿ ಉತ್ತರ ಕ್ರಿಯೆಯನ್ನು ಮಾಡಿಯಾನು.

ಯದನೇನ ವೃತಂ ಮತ್ತಃ ಪುತ್ರತ್ವಂ ಸುಮಹಾತ್ಮನಾ ।
ಹಯಮೇಧಾನ್ ಮಹಾಯಜ್ಞಾನ್ ಕರ್ತಾ ಸ್ಯಾದಸ್ಯ ವೈ ಸುತಃ ॥ ೬ ॥
ಮನ್ಯೇತ ಕೃತಕೃತ್ಯತ್ವಂ ಯೇನ ಪುತ್ರೇಣ ಧರ್ಮಪಃ ।
ಅನ್ಯೈಃ ಪುತ್ರಶತೈಃ ಕಿಂ ವಾ ವಂಶಾನುದ್ಧಾರಕಾರಕೈಃ ॥ ೭ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಧರ್ಮರಾಜಸುತೋದ್ಭವಂ ।
ಆಖ್ಯಾನಂ ಬ್ರಾಹ್ಮಣಶ್ರೇಷ್ಠಾ ಧರ್ಮವೃದ್ಧಿಕರಂ ಪರಂ ॥ ೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಧರ್ಮರಾಜಪುತ್ರಾಖ್ಯಾನವರ್ಣನಂ" ನಾಮ
ಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೬. ಈ ಧರ್ಮರಾಜನು ಕೇಳಿಕೊಂಡ ಪುತ್ರನಾದ ಯುಧಿಷ್ಠಿರನು ಅಶ್ವಮೇಧ ಮಹಾಯಾಗಗಳನ್ನು ಮಾಡಿದನು.

೭. ಧರ್ಮರಾಜನು ಇವನಿಂದ ತಾನು ಧನ್ಯನಾದೆನೆಂದರಿತನು. ವಂಶವನ್ನುದ್ಧರಿಸದ ನೂರಾರು ಮಂದಿ ಮಕ್ಕಳಿದ್ದರೇನು ಪ್ರಯೋಜನ?

೮. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮರೆ! ಧರ್ಮವನ್ನು ಹೆಚ್ಚಿಸುವ ಈ ಧರ್ಮರಾಜನ ಆಖ್ಯಾನವನ್ನೆಲ್ಲ ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧರ್ಮರಾಜಪುತ್ರಾಖ್ಯಾನವರ್ಣನ" ವೆಂಬ
ನೂರನಲವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಚತ್ವಾರಿಂಶದುತ್ತರಶತತಮೋಽಧ್ಯಾಯಃ

## ಮಿಷ್ಟಾನ್ನದೇಶ್ವರಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ತಥಾಽನ್ಯೋಽಪಿ ಹಿ ತತ್ರಾಽಸ್ತಿ ದೇವೋ ಮಿಷ್ಟಾನ್ನದಾಯಕಃ ।**
**ಯಸ್ಯ ಸಂದರ್ಶನಾದೇವ ಮಿಷ್ಟಾನ್ನಂ ಲಭತೇ ನರಃ ॥ ೧ ॥**
**ಆಸೀತ್ಪೂರ್ವಂ ನೃಪೋ ನಾಮ್ನಾ ವಸುಸೇನ ಇತಿ ಸ್ಮೃತಃ ।**
**ಆನರ್ತಾಧಿಪತಿಃ ಖ್ಯಾತೋ ಬೃಹತ್ಕಲ್ಪೇ ದ್ವಿಜೋತ್ತಮಾಃ ॥ ೨ ॥**
**ಅತ್ಯೈಶ್ವರ್ಯಸಮಾಯುಕ್ತೋ ಗಜವಾಜಿರಥಾನ್ವಿತಃ ।**
**ಜಿತಾಽರಿಪಕ್ಷಸ್ತೇಜಸ್ವೀ ದಾತಾ ಭೋಗೀ ಜಿತೇಂದ್ರಿಯಃ ॥ ೩ ॥**
**ಸ ಸಂಕ್ರಾಂತೌ ವ್ಯತೀಪಾತೇ ಗ್ರಹಣೇ ರವಿಸೋಮಯೋಃ ।**
**ಪರ್ವಕಾಲೇಷು ಚಾಽನ್ಯೇಷು ವಿವಿಧೇಷು ಸುಭಕ್ತಿತಃ ॥ ೪ ॥**
**ಪ್ರಯಚ್ಛತಿ ದ್ವಿಜಾತಿಭ್ಯೋ ರತ್ನಾನಿ ವಿವಿಧಾನಿ ಚ ।**
**ಇಂದ್ರನೀಲ ಮಹಾನೀಲ ವಿದ್ರುಮಸ್ಫಟಿಕಾದಿ ಚ ॥ ೫ ॥**
**ಮಾಣಿಕ್ಯಮೌಕ್ತಿಕಾನ್ಯೇವ ವಿದ್ರುಮಾಣಿ ವಿಶೇಷತಃ ।**
**ಹಸ್ತ್ಯಶ್ವರಥಯಾನಾನಿ ವಸ್ತ್ರಾಣಿ ವಿವಿಧಾನಿ ಚ ॥ ೬ ॥**

---

## ಕನ್ನಡದ ಅನುವಾದ

### ಮಿಷ್ಟಾನ್ನದೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:— ಅಲ್ಲಿ ಮಿಷ್ಟಾನ್ನವನ್ನು ಕೊಡುವ ಮತ್ತೊಬ್ಬ ಮಿಷ್ಟಾನ್ನದೇಶ್ವರನಿರುವನು. ಅವನ ದರ್ಶನದಿಂದಲೇ ನರನು ಮಿಷ್ಟಾನ್ನವನ್ನು ಹೊಂದುವನು.

೨–೩. ದ್ವಿಜೋತ್ತಮರೆ! ಹಿಂದೆ ಬೃಹತ್ಕಲ್ಪದಲ್ಲಿ ಅತ್ಯಂತ ಐಶ್ವರ್ಯವುಳ್ಳವನೂ, ಆನೆ, ಕುದುರೆ, ರಥಗಳಿಂದ ಕೂಡಿರುವವನೂ, ಶತ್ರುಪಕ್ಷವನ್ನು ಜಯಿಸಿದವನೂ, ತೇಜಸ್ವಿಯೂ, ದಾನಶೀಲನೂ, ಭೋಗಿಯೂ, ಜಿತೇಂದ್ರಿಯನೂ, ಆನರ್ತದೇಶದ ದೊರೆಯೂ ಆದ ವಸುಸೇನನೆಂಬುವನಿದ್ದನು.

೪–೬. ಅವನು ಸಂಕ್ರಾಂತಿ, ವ್ಯತೀಪಾತ, ಚಂದ್ರ ಸೂರ್ಯಗ್ರಹಣ, ಇತರ ಪರ್ವಕಾಲ ಇವುಗಳಲ್ಲಿ ಬ್ರಾಹ್ಮಣರಿಗೆ ಇಂದ್ರನೀಲ, ಮಹಾನೀಲ, ಹವಳ, ಸ್ಫಟಿಕ, ಮಾಣಿಕ್ಯ, ಮುತ್ತು ಮೊದಲಾದ ಬಗೆ ಬಗೆಯ ರತ್ನಗಳನ್ನೂ, ಆನೆ, ಕುದುರೆ, ರಥ ಮೊದಲಾದ ವಾಹನಗಳನ್ನೂ, ನಾನಾವಿಧ ವಸ್ತ್ರಗಳನ್ನೂ ದಾನ ಮಾಡುತ್ತಿದ್ದನು.

ನ ಕಸ್ಯಚಿತ್ಪ್ರದದ್ಯಾತ್ಸ ಸಸ್ಯಂ ಬ್ರಾಹ್ಮಣಸತ್ತಮಾಃ ।
ಅತೀವ ಸುಲಭಂ ಮತ್ವಾ ತಥಾ ತೋಯಂ ವಿಶೇಷತಃ ॥ ೭ ॥
ತತೋ ರಾಜ್ಯಂ ಚಿರಂ ಕೃತ್ವಾ ದೃಷ್ಟ್ವಾ ಪುತ್ರೋದ್ಭವಾನ್ ಸುತಾನ್ ।
ಕಾಲಧರ್ಮಮನುಪ್ರಾಪ್ತಃ ಕಸ್ಮಿಂಶ್ಚಿತ್ಕಾಲಪರ್ಯಯೇ ॥ ೮ ॥
ತತಶ್ಚ ಮಂತ್ರಿಭಿಸ್ತಸ್ಯ ಸತ್ಯಸೇನ ಇತಿ ಸ್ಮೃತಃ ।
ಅಭಿಷಿಕ್ತಃ ಸುತೋ ರಾಜ್ಯೇ ವೀರ್ಯೌದಾರ್ಯಸಮನ್ವಿತಃ ॥ ೯ ॥
ವಸುಸೇನೋಽಪಿ ಸಂಪ್ರಾಪ್ಯ ಸ್ವರ್ಗಂ ದಾನಪ್ರಭಾವತಃ ।
ದಿವ್ಯಾಂಬರಧರೋ ಭೂತ್ವಾ ದಿವ್ಯರತ್ನೈರ್ವಿಭೂಷಿತಃ ॥ ೧೦ ॥
ಸೇವ್ಯಮಾನೋಽಪ್ಸರೋಭಿಶ್ಚ ವಿಮಾನವರಮಾಶ್ರಿತಃ ।
ಬಭ್ರಾಮ ಸರ್ವಲೋಕೇಷು ಸ್ವೇಚ್ಛಯಾ ಕ್ಷುತ್ಸಮಾವೃತಃ ॥ ೧೧ ॥
ಪಿಪಾಸಾಕುಲಚಿತ್ತಶ್ಚ ಮುಖೇನ ಪರಿಶುಷ್ಯತಾ ।
ನ ಕಂಚಿದ್ದದೃಶೇ ತತ್ರ ಭುಂಜಾನಮಪರಂ ದಿವಿ ॥ ೧೨ ॥
ನ ಚ ಪಾನಸಮಾಸಕ್ತಂ ನ ಸಸ್ಯಂ ಸಲಿಲಂ ನ ಚ ॥ ೧೩ ॥
ತತೋ ಗತ್ವಾ ಸಹಸ್ರಾಕ್ಷಮುವಾಚ ದ್ವಿಜಸತ್ತಮಾಃ ।
ಕ್ಷುತ್ತೃಷಾವೃತದೇಹಸ್ತು ಲಜ್ಜಯಾಧೋಮುಖಃ ಸ್ಥಿತಃ ॥ ೧೪ ॥

---

೭. ಅವನು ನೀರು ಸಸ್ಯಗಳು ಸುಲಭವಾಗಿ ಸಿಕ್ಕುವುವು ಎಂದರಿತು ಅವುಗಳನ್ನು ಯಾರಿಗೂ ದಾನ ಮಾಡುತ್ತಿರಲಿಲ್ಲ.

೮. ಆ ವಸುಸೇನನು ಬಹುಕಾಲ ರಾಜ್ಯವಾಳಿ ಮೊಮ್ಮಕ್ಕಳು ಹುಟ್ಟಿರುವುದನ್ನು ಕಂಡು ಒಂದಾನೊಂದು ಕಾಲಧರ್ಮಕ್ಕೊಳಗಾಗಿ ಮಡಿದನು.

೯. ತರುವಾಯ ಮಂತ್ರಿಗಳು ವೀರ್ಯೌದಾರ್ಯಗಳಿಂದ ಕೂಡಿದ ಅವನ ಮಗನಾದ ಸತ್ಯಸೇನನೆಂಬುವನನ್ನು ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು.

೧೦–೧೧. ವಸುಸೇನನು ದಾನದ ಪ್ರಭಾವದಿಂದ ಸ್ವರ್ಗವನ್ನು ಸೇರಿ ದಿವ್ಯವಸ್ತ್ರಗಳನ್ನುಟ್ಟು, ದಿವ್ಯರತ್ನಗಳಿಂದ ಅಲಂಕಾರಗೊಂಡು ಅಪ್ಸರಸ್ತ್ರೀಯರಿಂದ ಸೇವಿಸಲ್ಪಡುತ್ತ ವಿಮಾನದಲ್ಲಿ ಕುಳಿತು ಹಸಿವುಗೊಂಡವನಾಗಿ ಸಕಲ ಲೋಕಗಳಲ್ಲಿಯೂ ಇಷ್ಟಬಂದಂತೆ ಸಂಚರಿಸಿದನು.

೧೨–೧೩. ಬಾಯಾರಿಕೆಯಿಂದ ವ್ಯಥೆಗೊಂಡ ಅವನು ಒಣಗುತ್ತಿರುವ ಬಾಯಿಯುಳ್ಳವನಾಗಿ ದೇವಲೋಕದಲ್ಲಿ ಭೋಜನ ಮಾಡುವವರೂ, ನೀರನ್ನು ಕುಡಿಯುವವರೂ, ಸಸ್ಯಗಳನ್ನು ತಿನ್ನುವವರೂ ಆದ ಯಾರೊಬ್ಬರನ್ನೂ ಕಾಣಲಿಲ್ಲ.

೧೪. ದ್ವಿಜವರ್ಯರೆ! ತರುವಾಯ ಅವನು ಹಸಿವು ಬಾಯಾರಿಕೆಗಳಿಗೊಳಗಾಗಿ ಇಂದ್ರನ ಬಳಿಗೆ ಹೋಗಿ ನಾಚಿಕೆಯಿಂದ ತಲೆತಗ್ಗಿಸಿಕೊಂಡು ಹೀಗೆಂದನು.

ನೈವಾಽತ್ರ ದೃಶ್ಯತೇ ಕಶ್ಚಿತ್ಕ್ಷುತ್ತೃಷಾ ಪರಿಪೀಡಿತಃ ।
ಮಾಂ ಮುಕ್ತ್ವಾ ವಿಬುಧಶ್ರೇಷ್ಠ ತತ್ಕಿಮೇತದ್ವದಸ್ವ ಮೇ ॥ ೧೫ ॥
ಏಷ ಮೇ ಸ್ವರ್ಗರೂಪೇಣ ನರಕಃ ಸಮುಪಸ್ಥಿತಃ ।
ಕಿಮೇತೈರ್ಭೂಷಣೈರ್ವಸ್ತ್ರೈರ್ವಿಮಾನಾದಿಭಿರೇವ ಚ ॥ ೧೬ ॥
ಕ್ಷುಧಾ ಸಂಪೀಡ್ಯಮಾನಸ್ಯ ಸ್ವರ್ಗಮೇತಚ್ಛಚೀಪತೇ ।
ಅಗ್ನಿತುಲ್ಯಂ ಸಮುದ್ದಿಷ್ಟಂ ಮಮ ಚಿತ್ತೇಽಪಿ ವರ್ತತೇ ॥ ೧೭ ॥
ತಸ್ಮಾತ್ಕುರು ಪ್ರಸಾದಂ ಮೇ ಯಥಾಕ್ಷುನ್ನ ಪ್ರಬಾಧತೇ ।
ನೋಚೇತ್ಕ್ಷಿಪ ಸುರಶ್ರೇಷ್ಠ ರೌರವೇ ನರಕೇ ದ್ರುತಂ ॥ ೧೮ ॥

ಇಂದ್ರ ಉವಾಚ :—

ಅನರ್ಹೋಽಸಿ ಮಹೀಪಾಲ ನರಕಸ್ಯ ತ್ವಮೇವ ಹಿ ।
ತ್ವಯಾ ದಾನಾನಿ ದತ್ತಾನಿ ಸಂಖ್ಯಾ ಹೀನಾನಿ ಸರ್ವದಾ ॥ ೧೯ ॥
ಪರಂ ಕಿಂ ತು ಕ್ವಚಿನ್ನಾನ್ನಂ ದತ್ತಂ ರಾಜನ್ನ ಚೋದಕಂ ।
ನ ಕಿಂಚಿದಪಿ ಸಂಚಿಂತ್ಯ ಯತಃ ಸುಲಭಮೇವ ಹಿ ॥ ೨೦ ॥
ತೋಯಂ ಸಾನ್ನಂ ಸದಾ ದದ್ಯಾದನ್ನಂ ಚೈವ ಸದಕ್ಷಿಣಂ ।
ಯ ಇಚ್ಛೇಚ್ಛಾಶ್ವತೀಂ ತೃಪ್ತಿಮಿಹ ಲೋಕೇ ಪರತ್ರ ಚ ॥ ೨೧ ॥
ತಸ್ಮಾತ್ತ್ವಂ ಹಿ ಕ್ಷುಧಾವಿಷ್ಟಃ ಸ್ವರ್ಗೇ ಚೈವ ಮಹೀಪತೇ ।
ಭೂಷಿತೋ ಭೂಷಣೈಃ ಶ್ರೇಷ್ಠೈರ್ವಿಮಾನವರಮಾಶ್ರಿತಃ ॥ ೨೨ ॥

---

೧೫. "ದೇವೇಂದ್ರ! ಈ ಸ್ವರ್ಗದಲ್ಲಿ ನನ್ನ ಹೊರತು ಹಸಿವು ಬಾಯಾರಿಕೆಗೊಂಡವನು ಯಾವನೂ ಕಾಣಿಸುವುದಿಲ್ಲ. ಇದೇನು? ನನಗೆ ಹೇಳು.

೧೬–೧೭. ಹಸಿವಿನಿಂದ ಪೀಡಿತನಾದ ನನಗೆ ನರಕವು ಸ್ವರ್ಗರೂಪದಿಂದ ಒದಗಿದೆ. ಈ ಒಡವೆ ವಸ್ತ್ರಗಳಿಂದಲೂ, ವಿಮಾನಾದಿಗಳಿಂದಲೂ ಏನು ಪ್ರಯೋಜನ? ಈ ಸ್ವರ್ಗವು ನನ್ನ ಮನಸ್ಸಿಗೆ ಬೆಂಕಿಯಂತಿದೆ.

೧೮. ಆದುದರಿಂದ ನನ್ನನ್ನು ಹಸಿವು ಪೀಡಿಸದಂತೆ ಅನುಗ್ರಹಿಸು. ಹಾಗಿಲ್ಲದಿದ್ದರೆ ಶೀಘ್ರವಾಗಿ ನರಕಕ್ಕೆ ಎಸೆ."

೧೯–೨೦. ಇಂದ್ರನು ಹೇಳುತ್ತಾನೆ:—ದೊರೆಯೆ! ನೀನು ನರಕಕ್ಕೆ ಅನರ್ಹನಾಗಿರುವೆ. ನೀನು ಲೆಕ್ಕವಿಲ್ಲದಷ್ಟು ದಾನಗಳನ್ನು ಯಾವಾಗಲೂ ಕೊಟ್ಟಿರುವೆ. ಆದರೆ ಸುಲಭವಾಗಿ ಸಿಕ್ಕುವುದೆಂದು ತಿಳಿದು ಅನ್ನೋದಕಗಳನ್ನು ದಾನ ಮಾಡಲಿಲ್ಲ.

೨೧. ಇಹಪರಗಳಲ್ಲಿ ಶಾಶ್ವತ ತೃಪ್ತಿಯನ್ನು ಬಯಸುವ ಮಾನವನು ಜಲ ದಕ್ಷಿಣೆಗಳಿಂದ ಸಹಿತವಾಗಿ ಅನ್ನವನ್ನು ದಾನ ಮಾಡಬೇಕು.

೨೨. ಮಹಾರಾಜ! ಆದುದರಿಂದ ನೀನು ಸ್ವರ್ಗದಲ್ಲಿ ಉತ್ತಮ ಒಡವೆಗಳಿಂದ ಅಲಂಕೃತನಾಗಿ ವಿಮಾನದಲ್ಲಿ ಕುಳಿತಿದ್ದರೂ ಹಸಿವುಗೊಂಡಿರುವೆ.

**ರಾಜೋವಾಚ :—**

ಅಸ್ತಿ ಕಶ್ಚಿದುಪಾಯೋಽತ್ರ ದೈವೋ ವಾ ಮಾನುಷೋಽಪಿ ವಾ ।
ಕ್ಷುತ್ಪಿಪಾಸೇತಿ ತೀವ್ರೋ ಮೇ ವಿನಾಶಂ ಯೇನ ಗಚ್ಛತಃ ॥ ೨೩ ॥

**ಇಂದ್ರ ಉವಾಚ :—**

ಯದಿ ಕಶ್ಚಿತ್ಸುತಸ್ತುಭ್ಯಂ ವಿಪ್ರೇಭ್ಯಃ ಸತತಂ ಜಲಂ ।
ದದಾತಿ ಚ ಸದಾ ಸಸ್ಯಂ ತತ್ತೇ ತೃಪ್ತಿಃ ಪ್ರಜಾಯತೇ ॥ ೨೪ ॥
ನಾಽನ್ಯಥಾ ಪಾರ್ಥಿವಶ್ರೇಷ್ಠ ಏಕಸ್ಮಿನ್ನಪಿ ವಾಸರೇ ।
ಅದತ್ತಸ್ಯ ತವ ಪ್ರಾಪ್ತಿಃ ಸತ್ಯಮೇತನ್ಮಯೋದಿತಂ ॥ ೨೫ ॥
ಸೋಽಪಿ ಭೂಮಿಪತೇಃ ಪುತ್ರಸ್ತವ ಯಚ್ಛತಿ ನೋದಕಂ ।
ನ ಚ ಸಸ್ಯಂ ದ್ವಿಜಾತಿಭ್ಯಸ್ತ್ವನ್ಮಾರ್ಗಮನುಸಂಚರನ್ ॥ ೨೬ ॥
ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ಮುನಿಸತ್ತಮಃ ।
ಬ್ರಹ್ಮಲೋಕಾತ್ಸ್ಥಿತೌ ಯತ್ರ ತೌ ಭೂಮಿಪಸುರೇಶ್ವರೌ ॥ ೨೭ ॥
ತತಃ ಶಕ್ರಃ ಸಮುತ್ಥಾಯ ತಸ್ಮೈ ತುಷ್ಟಿಸಮನ್ವಿತಃ ।
ಅರ್ಘ್ಯಂ ದತ್ವಾ ವಿಧಾನೇನ ಸಾದರಂ ಚೇದಮಬ್ರವೀತ್ ॥ ೨೮ ॥
ಕುತಃ ಪ್ರಾಪ್ತೋಽಸಿ ವಿಪ್ರೇಂದ್ರ ಪ್ರಸ್ಥಿತಃ ಕ್ವಚ ಸಾಂಪ್ರತಂ ।
ಕೇನ ಕಾರ್ಯೇಣ ಚೇದ್ಗುಹ್ಯಂ ನ ತೇಽಸ್ತಿ ವದ ಸಾಂಪ್ರತಂ ॥ ೨೯ ॥

---

೨೩. ರಾಜನು ಹೇಳುತ್ತಾನೆ:—ನನ್ನ ಹಸಿವು ಬಾಯಾರಿಕೆಗಳು ಪರಿಹಾರವಾಗಲು ದೈವ ಅಥವಾ ಮಾನುಷೋಪಾಯಗಳು ಏನಾದರೂ ಇವೆಯೆ?

೨೪. ಇಂದ್ರನು ಹೇಳುತ್ತಾನೆ:—ಯಾವನಾದರೊಬ್ಬ ನಿನ್ನ ಮಗನು ಬ್ರಾಹ್ಮಣರಿಗೆ ಯಾವಾಗಲೂ ಅನ್ನೋದಕಗಳನ್ನಿತ್ತರೆ ನಿನಗೆ ತೃಪ್ತಿಯಾಗುವುದು.

೨೫. ಹಾಗಿಲ್ಲದಿದ್ದರೆ ಒಂದು ದಿನವೂ ಅನ್ನೋದಕಗಳನ್ನು ದಾನಮಾಡದಿದ್ದ ನಿನಗೆ ತೃಪ್ತಿಯಾಗುವುದಿಲ್ಲ. ನಾನು ಹೇಳಿರುವುದು ನಿಜ.

೨೬. ನಿನ್ನ ಪುತ್ರನು ನಿನ್ನ ದಾರಿಯನ್ನನುಸರಿಸುತ್ತ ಬ್ರಾಹ್ಮಣರಿಗೆ ಅನ್ನೋದಕಗಳನ್ನು ದಾನ ಮಾಡುವುದಿಲ್ಲ.

೨೭. ಈ ಸಮಯದಲ್ಲಿ ನಾರದ ಮುನಿವರ್ಯನು ಬ್ರಹ್ಮಲೋಕದಿಂದ ಆ ದೊರೆ ಮತ್ತು ಇಂದ್ರನಿರುವ ಸ್ಥಳಕ್ಕೆ ಬಂದನು.

೨೮. ಆಗ ಇಂದ್ರನು ಮೇಲಕ್ಕೆದ್ದು ಸಂತೋಷದಿಂದ ಅವನಿಗೆ ವಿಧಿಯಂತೆ ಅರ್ಘ್ಯವನ್ನಿತ್ತು (ಪೂಜೆಮಾಡಿ) ಪ್ರೀತಿಯಿಂದ ಇಂತೆಂದನು.

೨೯. "ಮುನಿವರ್ಯನೆ! ನೀನು ಎಲ್ಲಿಂದ ಬಂದೆ? ಈಗ ಎಲ್ಲಿಗೆ ಯಾವ ಕೆಲಸಕ್ಕಾಗಿ ಹೊರಟಿರುವೆ? ರಹಸ್ಯವಲ್ಲದಿದ್ದರೆ ನನಗೆ ಹೇಳು."

**ನಾರದ ಉವಾಚ :—**

**ಬ್ರಹ್ಮಲೋಕಾದಹಂ ಪ್ರಾಪ್ತಃ ಪ್ರಸ್ಥಿತಸ್ತು ಧರಾತಲೇ ।**
**ತೀರ್ಥಯಾತ್ರಾಕೃತೇ ಶಕ್ರ ನಾಽನ್ಯದಸ್ತೀಹ ಕಾರಣಂ ॥ ೩೦ ॥**

**ಸೂತ ಉವಾಚ :—**

**ತಚ್ಛ್ರುತ್ವಾ ಸ ನೃಪೋ ಹೃಷ್ಟಸ್ತಮುವಾಚ ಮುನೀಶ್ವರಂ ।**
**ಪ್ರಸಾದಃ ಕ್ರಿಯತಾಂ ಮಹ್ಯಂ ದೀನಸ್ಯ ಮುನಿಪುಂಗವ ॥ ೩೧ ॥**
**ತ್ವಯಾ ಭೂಮಿತಲೇ ವಾಚ್ಯೋ ಮಮ ಪುತ್ರೋ ಮಹೀಪತಿಃ ।**
**ಆನರ್ತಾಧಿಪತಿಃ ಖ್ಯಾತಃ ಸತ್ಯಸೇನ ಇತಿ ಪ್ರಭೋ ॥ ೩೨ ॥**
**ತವ ತಾತೋ ಮಯಾ ದೃಷ್ಟಃ ಶಕ್ರಸ್ಯ ಸದನಂ ಪ್ರತಿ ।**
**ಕ್ಷುತ್ಪಿಪಾಸಾಪರೀತಾಂಗೋ ದೀನಾತ್ಮಾ ದೇವಮಧ್ಯಗಃ ॥ ೩೩ ॥**
**ತಸ್ಮಾತ್ತ್ವಪುತ್ರೋಽಸಿ ಚೇನ್ಮಹ್ಯಂ ತ್ವಂ ಸತ್ಯಂ ಪರಿರಕ್ಷಸಿ ।**
**ತನ್ನಾಮ್ನಾ ಪ್ರಯಚ್ಛೋಚ್ಚೈಃ ಸಸ್ಯಾನಿ ಸಲಿಲಾನಿ ಚ ॥ ೩೪ ॥**
**ಸ ತಥೇತಿ ಪ್ರತಿಜ್ಞಾಯ ನಾರದೋ ಮುನಿಸತ್ತಮಃ ।**
**ಅನುಜ್ಞಾಪ್ಯ ಸಹಸ್ರಾಕ್ಷಂ ಪ್ರಸ್ಥಿತೋ ಭೂತಲಂ ಪ್ರತಿ ॥ ೩೫ ॥**
**ತತಃ ಕ್ರಮೇಣ ತೀರ್ಥಾನಿ ಭ್ರಮಮಾಣಃ ಸ ಸದ್ದ್ವಿಜಃ ।**
**ಆನರ್ತವಿಷಯಂ ಪ್ರಾಪ್ಯ ಸತ್ಯಸೇನಮುಪಾದ್ರವತ್ ॥ ೩೬ ॥**

---

೩೦. ನಾರದನು ಹೇಳುತ್ತಾನೆ:—ಅಮರರಾಜ! ನಾನು ಬ್ರಹ್ಮಲೋಕದಿಂದ ಬಂದಿರುವೆನು. ಭೂಲೋಕಕ್ಕೆ ತೀರ್ಥಯಾತ್ರೆಗಾಗಿ ಹೊರಟಿದ್ದೇನೆ. ಬೇರೇನೂ ಕಾರಣವಿಲ್ಲ.

೩೧. ಸೂತನು ಹೇಳುತ್ತಾನೆ:—ಅದನ್ನು ಕೇಳಿ ಆ ದೊರೆಯು ಸಂತೋಷಗೊಂಡವನಾಗಿ ಆ ನಾರದ ಮುನಿಯನ್ನು ಕುರಿತು ಇಂತೆಂದನು. "ಮುನಿವರ್ಯನೆ!! ದೀನನಾದ ನನಗೆ ನೀನು ಅನುಗ್ರಹಮಾಡು.

೩೨—೩೪. ನೀನು ಧರಣಿಗೆ ಹೋಗಿ ನನ್ನ ಮಗನೂ, ಆನರ್ತದೇಶದ ದೊರೆಯೂ ಆದ ಸತ್ಯಸೇನನನ್ನು ಕುರಿತು ನಾನು ಇಂದ್ರನ ಮನೆಯಲ್ಲಿ ಹಸಿವು, ಬಾಯಾರಿಕೆಗಳಿಂದ ಪೀಡಿತನೂ, ದೀನನೂ ಆದ ದೇವತೆಗಳ ನಡುವೆ ಇರುವ ನಿನ್ನ ತಂದೆಯನ್ನು ನೋಡಿದೆನು. ನೀನು ಅವನ ಪುತ್ರನಾಗಿ ಸತ್ಯವನ್ನು ಪರಿಪಾಲಿಸುವವನಾದರೆ ಅವನ ಹೆಸರಿನಿಂದ ಅನ್ನೋದಕಗಳನ್ನು ದಾನ ಮಾಡು" ಎಂದು ಹೇಳು.

೩೫. ನಾರದ ಮುನಿಯು ಹಾಗೆಯೇ ಆಗಲೆಂದು ಒಪ್ಪಿ ಇಂದ್ರನ ಅನುಮತಿಯಿಂದ ಭೂಮಿಗೆ ತೆರಳಿದನು.

೩೬. ಆ ಮುನಿವರ್ಯನು ಕ್ರಮವಾಗಿ ತೀರ್ಥಗಳಲ್ಲಿ ಸಂಚರಿಸುತ್ತ ಆನರ್ತದೇಶವನ್ನು ಹೊಂದಿ ಸತ್ಯಸೇನನನ್ನು ಸಮೀಪಿಸಿದನು.

**ಅಥ ಸಂಪೂಜಿತಸ್ತೇನ ಸಮ್ಯಗ್ಭೂಪತಿನಾ ಮುನಿಃ ।**
**ಪಿತುಃ ಸಂದೇಶಮಾಚಖ್ಯೌ ವಿಜನೇ ತಸ್ಯ ಸಾದರಂ ॥ ೩೭ ॥**
**ತಚ್ಛ್ರುತ್ವಾ ಶೋಕಸಂತಪ್ತಃ ಸತ್ಯಸೇನೋ ಮಹೀಪತಿಃ ।**
**ತಂ ವಿಸೃಜ್ಯ ಮುನಿಶ್ರೇಷ್ಠಂ ಪೂಜಯಿತ್ವಾ ವಿಧಾನತಃ ॥ ೩೮ ॥**
**ತತೋ ಜನಕಮುದ್ದಿಶ್ಯ ಮಿಷ್ಟಾನ್ನೇನ ಸುಭಕ್ತಿತಃ ।**
**ಸಹಸ್ರಂ ಬ್ರಾಹ್ಮಣೇಂದ್ರಾಣಾಂ ಭೋಜಯಾಮಾಸ ನಿತ್ಯಶಃ ॥ ೩೯ ॥**
**ಪ್ರಪಾಪಾನಂ ತಥಾ ಚಕ್ರೇ ಗ್ರೀಷ್ಮಕಾಲೇ ವಿಶೇಷತಃ ।**
**ತ್ಯಕ್ತ್ವಾನ್ಯಾಃ ಸಕಲಾ ಯಾಶ್ಚ ಕ್ರಿಯಾ ಧರ್ಮಸಮುದ್ಭವಾಃ ॥ ೪೦ ॥**
**ಏವಂ ತಸ್ಯ ಮಹೀಪಸ್ಯ ವರ್ತಮಾನಸ್ಯ ಚ ದ್ವಿಜಾಃ ।**
**ಅನಾವೃಷ್ಟಿರಭೂದ್ರೌದ್ರಾ ಸರ್ವಸಸ್ಯಕ್ಷಯಾವಹಾ ॥ ೪೧ ॥**
**ಯಾವದ್ದ್ವಾದಶವರ್ಷಾಣಿ ನ ಜಲಂ ತ್ರಿದಶಾಧಿಪಃ ।**
**ಮುಮೋಚ ಧರಣೀಪೃಷ್ಠೇ ಸರ್ವೇ ಲೋಕಾಃ ಕ್ಷುಧಾರ್ದಿತಾಃ ॥ ೪೨ ॥**
**ಅನ್ನಾಭಾವಾತ್ತತೋ ಭೂಯೋ ನ ಸಸ್ಯಂ ಸಂಪ್ರಯಚ್ಛತಿ ।**
**ಬ್ರಾಹ್ಮಣೇಭ್ಯಃ ಸಮುದ್ದಿಶ್ಯ ಪಿತರಂ ಸ್ವಂ ಯಥಾ ಪುರಾ ॥ ೪೩ ॥**
**ತತಃ ಸ ಕ್ಷುತ್ಪರೀತಾಂಗಃ ಪಿತಾ ತಸ್ಯ ಮಹೀಪತೇಃ ।**
**ಸ್ವಪ್ನೇ ಪ್ರೋವಾಚ ತಂ ಪುತ್ರಮತೀವ ಮಲಿನಾಂಬರಃ ॥ ೪೪ ॥**

---

೩೭. ಅವನಿಂದ ಪೂಜೆಗೊಂಡ ನಾರದನು ರಹಸ್ಯದಲ್ಲಿ ಪ್ರೀತಿಯಿಂದ ಅವನ ತಂದೆಯು ಹೇಳಿಕಳುಹಿಸಿದ ಮಾತನ್ನು ಹೇಳಿದನು.

೩೮–೩೯. ಅದನ್ನು ಕೇಳಿ ದುಃಖಗೊಂಡ ಸತ್ಯಸೇನನು ಆ ಮುನಿಯನ್ನು ವಿಧಿಯಂತೆ ಪೂಜಿಸಿ ಕಳುಹಿಸಿ ತಂದೆಯನ್ನು ಉದ್ದೇಶಿಸಿ ಸಾವಿರ ಮಂದಿ ಬ್ರಾಹ್ಮಣರಿಗೆ ಮಿಷ್ಟಾನ್ನಭೋಜನ ಮಾಡಿಸಿದನು.

೪೦. ಧರ್ಮಸಂಬಂಧವಾದ ಇತರ ಕಾರ್ಯಗಳನ್ನು ತ್ಯಜಿಸಿ ಗ್ರೀಷ್ಮಕಾಲದಲ್ಲಿ ವಿಶೇಷವಾಗಿ ಅರವಟ್ಟಿಗೆಯಿಡಿಸಿ ಜಲವನ್ನು ದಾನ ಮಾಡಿದನು.

೪೧. ದ್ವಿಜರೆ! ಆ ರಾಜನು ಹೀಗಿರಲು ದೇಶದಲ್ಲಿ ಸಕಲ ಸಸ್ಯಗಳನ್ನು ನಾಶಗೊಳಿಸುವ ಭಯಂಕರ ಅನಾವೃಷ್ಟಿಯುಂಟಾಯಿತು.

೪೨. ದೇವೇಂದ್ರನು ಹನ್ನೆರಡು ವರ್ಷಕಾಲ ಭೂಮಿಯಲ್ಲಿ ಮಳೆಯನ್ನು ಸುರಿಸದಿರಲು ಎಲ್ಲ ಜನರೂ ಹಸಿವಿನಿಂದ ಪೀಡಿತರಾದರು.

೪೩. ಆ ಸತ್ಯಸೇನನು ಅನ್ನವಿಲ್ಲದಿರುವುದರಿಂದ ಮೊದಲಿನಂತೆ ತನ್ನ ತಂದೆಯನ್ನು ಕುರಿತು ಬ್ರಾಹ್ಮಣರಿಗೆ ಅನ್ನದಾನ ಮಾಡಲಿಲ್ಲ.

೪೪. ಅದರಿಂದ ಹಸಿವುಗೊಂಡ ಅವನ ತಂದೆಯು ಅತಿ ಮಲಿನ ವಸ್ತ್ರಧಾರಿಯಾಗಿ ಸ್ವಪ್ನದಲ್ಲಿ ಮಗನನ್ನು ಕುರಿತು ಹೀಗೆಂದನು.

ತ್ವಯಾ ಪುತ್ರೇಣ ಪುತ್ರಾಽಹಂ ಕ್ಷುತ್ಪಿಪಾಸಾ ಸಮಾಕುಲಃ ।
ಸ್ವರ್ಗಸ್ಥೋಽಪಿ ಹಿ ತಿಷ್ಠಾಮಿ ತಸ್ಮಾದನ್ನಂ ಪ್ರಯಚ್ಛ ವೈ ।
ಮನ್ನಾಮ್ನಾ ತೋಯಸಂಯುಕ್ತಂ ಯದಿ ತ್ವಂ ಮತ್ಸಮುದ್ಭವಃ ॥ ೪೫ ॥
ತತಃ ಶೋಕಸಮಾಯುಕ್ತಃ ಸ ನೃಪಃ ಸ್ವಪ್ನದರ್ಶನಾತ್ ।
ಅನ್ನಾಭಾವಾತ್ಸಮಂ ಮಂತ್ರಂ ಮಂತ್ರಿಭಿಃ ಸ ತದಾಽಕರೋತ್ ॥ ೪೬ ॥
ಅಹಮಾರಾಧಯಿಷ್ಯಾಮಿ ಸಸ್ಯಾರ್ಥೇ ವೃಷಭಧ್ವಜಂ ।
ರಾಜ್ಯೇ ರಕ್ಷಾ ವಿಧಾತವ್ಯಾ ಭವದ್ಭಿಃ ಸಾದರಂ ಸದಾ ॥ ೪೭ ॥
ತತೋಽತ್ರೈವ ಸಮಾಗತ್ಯ ಸ್ಥಾಪಯಿತ್ವಾ ಮಹೇಶ್ವರಂ ।
ಸಮ್ಯಗಾರಾಧಯಾಮಾಸ ವ್ರತೈಶ್ಚ ನಿಯಮೈಸ್ತಥಾ ॥ ೪೮ ॥
ಅಥ ತಸ್ಯ ಗತಸ್ತುಷ್ಟಿಂ ವರ್ಷಾಂತೇ ಭಗವಾಂಛಿವಃ ।
ಅಬ್ರವೀದ್ವರದೋಽಸ್ಮೀತಿ ಪ್ರಾರ್ಥಯಸ್ವ ಯಥೇಪ್ಸಿತಂ ॥ ೪೯ ॥

ರಾಜೋವಾಚ :—

ಅನ್ನಾರ್ಥಂ ದೇವದೇವೇಶ ಮಯಾಽಯಂ ವಿಹಿತೋ ವಿಧಿಃ ।
ತಸ್ಮಾತ್ತ್ವಂ ಯಚ್ಛ ಮೇ ಶೀಘ್ರಮಸಂಖ್ಯಂ ವೃಷವಾಹನ ॥ ೫೦ ॥
ತಥಾ ಸಂಜಾಯತಾಂ ವೃಷ್ಟಿಃ ಸಮಸ್ತೇ ಧರಣೀ ತಲೇ ।
ಯೇನ ಸಸ್ಯಾನಿ ಜಾಯಂತೇ ಸಲಿಲಾನಿ ಚ ಸಾಂಪ್ರತಂ ॥ ೫೧ ॥

---

೪೫. ಮಗು! ಮಗನಾದ ನೀನಿದ್ದರೂ ಸ್ವರ್ಗವಾಸಿಯಾದ ನಾನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದೇನೆ. ಆದುದರಿಂದ ನನ್ನ ಮಗನಾದ ನೀನು ನನ್ನ ಹೆಸರಿನಿಂದ ಜಲಸಹಿತವಾದ ಅನ್ನವನ್ನು ದಾನ ಮಾಡು.

೪೬. ಆ ಸತ್ಯಸೇನನು ಸ್ವಪ್ನದರ್ಶನದಿಂದ ದುಃಖಗೊಂಡವನಾಗಿ ಅನ್ನವಿಲ್ಲದಿರುವಕಾರಣ ಮಂತ್ರಿಗಳೊಡನೆ ಆಲೋಚಿಸಿದನು.

೪೭. "ನಾನು ಸಸ್ಯಗಳಿಗಾಗಿ ಮಹೇಶ್ವರನನ್ನು ಆರಾಧಿಸುವೆನು. ನೀವು ರಾಜ್ಯವನ್ನು ಪ್ರೀತಿಯಿಂದ ರಕ್ಷಿಸಿರಿ."

೪೮. ಅನಂತರ ಅವನು ಅಲ್ಲಿಯೇ ಮಹೇಶ್ವರನನ್ನು ಪ್ರತಿಷ್ಠೆಮಾಡಿ ವ್ರತ ನಿಯಮಗಳಿಂದ ಆತನನ್ನು ಚೆನ್ನಾಗಿ ಪೂಜಿಸಿದನು.

೪೯. ಹೀಗೆ ಒಂದು ವರ್ಷವಾದ ಬಳಿಕ ಪೂಜ್ಯನಾದ ಶಿವನು ತುಷ್ಟನಾಗಿ ವರವನ್ನು ಕೊಡುವೆನು. ಇಷ್ಟವಾದುದನ್ನು ಕೇಳಿಕೊ ಎಂದನು.

೫೦. ರಾಜನು ಹೇಳುತ್ತಾನೆ:—ಮಹೇಶ್ವರ! ನಾನು ಅನ್ನಕ್ಕಾಗಿ ಹೀಗೆ ತಪಸ್ಸನ್ನಾಚರಿಸಿರುವೆನು. ಆದುದರಿಂದ ನೀನು ಶೀಘ್ರವಾಗಿ ನನಗೆ ಅಮಿತವಾಗಿ ಅನ್ನವನ್ನು ನೀಡು.

೫೧. ಹಾಗೆಯೇ ಭೂಮಿಯಲ್ಲಿ ಎಲ್ಲೆಡೆಯಲ್ಲಿಯೂ ಮಳೆಯು ಸುರಿಯಲಿ. ಅದರಿಂದ ಸಸ್ಯಗಳೂ, ನೀರೂ ಉಂಟಾಗುವುವು.

ಜಾಯಂತಾಂ ಮಮ ತಾತಸ್ಯ ಸ್ವರ್ಗಸ್ಥಸ್ಯ ಮಹಾತ್ಮನಃ ।
ಪ್ರಸಾದಾತ್ತವ ಸಂತೃಪ್ತಿರಕ್ಷಯಾ ಸುರಸತ್ತಮ ॥ ೫೨ ॥

ಶ್ರೀ ಭಗವಾನುವಾಚ :—

ಭವಿತಾ ನ ಚಿರಾದ್ವೃಷ್ಟಿಃ ಪ್ರಭೂತಾ ಧರಣೀತಲೇ ।
ಭವಿಷ್ಯಂತಿ ತಥಾಽನ್ನಾನಿ ಯಾನಿ ಕಾನಿ ಮಹೀತಲೇ ॥ ೫೩ ॥
ತಸ್ಮಾತ್ತ್ವಂ ಗಚ್ಛ ರಾಜೇಂದ್ರ ಸ್ವಗೃಹಂ ಪ್ರತಿ ಸಾಂಪ್ರತಂ ।
ಮಮ ವಾಕ್ಯಾದಸಂದಿಗ್ಧಮೇತದೇವ ಭವಿಷ್ಯತಿ ॥ ೫೪ ॥
ತಚ್ಚೈತನ್ನಾಮಕಂ ಲಿಂಗಂ ಯತ್ತ್ವಯಾ ಸ್ಥಾಪಿತಂ ನೃಪ ।
ಪ್ರಾತರುತ್ಥಾಯ ಯಃ ಕಶ್ಚಿತ್ಸಮ್ಯಕ್ತದ್ವೀಕ್ಷಯಿಷ್ಯತಿ ॥ ೫೫ ॥
ಮಿಷ್ಟಾನ್ನಮಮೃತಸ್ವಾದು ಸ ಹಿ ನೂನಮವಾಪ್ಸ್ಯತಿ ।
ಮಮ ವಾಕ್ಯಾನ್ನೃಪಶ್ರೇಷ್ಠ ಸದಾ ಜನ್ಮನಿ ಜನ್ಮನಿ ॥ ೫೬ ॥
ಸ ಏವಂ ಭಗವಾನುಕ್ತ್ವಾ ತತಶ್ಚಾದರ್ಶನಂ ಗತಃ ।
ಸೋಽಪಿ ರಾಜಾ ನಿಜಂ ಸ್ಥಾನಂ ಹರ್ಷೇಣ ಮಹತಾನ್ವಿತಃ ।
ಆಜಗಾಮ ಚಕಾರಾಽಥ ರಾಜ್ಯಂ ನಿಹತಕಂಟಕಂ ॥ ೫೭ ॥

ಸೂತ ಉವಾಚ :—

ಅದ್ಯಾಽಪಿ ಕಲಿಕಾಲೇಽತ್ರ ಸಂಪ್ರಾಪ್ತೇ ದಾರುಣೇ ಯುಗೇ ।
ಯಸ್ತಂ ಮಿಷ್ಟಾನ್ನದಂ ಪಶ್ಯೇತ್ಪ್ರಾತರುತ್ಥಾಯ ಭಕ್ತಿತಃ ॥ ೫೮ ॥

---

೫೨. ಶಂಕರ! ನಿನ್ನ ಅನುಗ್ರಹದಿಂದ ಸ್ವರ್ಗವಾಸಿಯಾದ ನನ್ನ ತಂದೆಗೆ ಶಾಶ್ವತವಾದ ತೃಪ್ತಿಯಾಗಲಿ.

೫೩. ಶ್ರೀ ಭಗವಂತನು ಹೇಳುತ್ತಾನೆ:—ಭೂಮಿಯಲ್ಲಿ ಸ್ವಲ್ಪ ಕಾಲದಲ್ಲಿಯೇ ಅತ್ಯಂತ ವೃಷ್ಟಿಯಾಗಿ ಅನ್ನಗಳುಂಟಾಗುವುವು.

೫೪. ಆದುದರಿಂದ ದೊರೆಯೆ! ಈಗ ನಿನ್ನ ಮನೆಗೆ ಹೋಗು. ನನ್ನ ಮಾತಿನಿಂದ ನಿಶ್ಚಯವಾಗಿಯೂ ಈಗ ಇದು ಆಗುವುದು.

೫೫—೫೬. ನೀನು ಸ್ಥಾಪಿಸಿರುವ ನನ್ನ ಈ ಲಿಂಗವನ್ನು ಬೆಳಗ್ಗೆ ಎದ್ದು ಚೆನ್ನಾಗಿ ದರ್ಶನಮಾಡುವವನು ನಿಶ್ಚಯವಾಗಿಯೂ ಅಮೃತದಂತೆ ರುಚಿಯುಳ್ಳ ಮಿಷ್ಟಾನ್ನವನ್ನು ಪ್ರತಿಜನ್ಮದಲ್ಲಿಯೂ ಯಾವಾಗಲೂ ಪಡೆಯುವನು.

೫೭. ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಆ ರಾಜನೂ ಅತ್ಯಂತ ಸಂತೋಷದಿಂದ ಪಟ್ಟಣಕ್ಕೆ ಬಂದು ರಾಜ್ಯವನ್ನು ಶತ್ರುಗಳಿಲ್ಲದಂತೆ ಆಳಿದನು.

೫೮—೫೯. ಸೂತನು ಹೇಳುತ್ತಾನೆ:—ಈಗಲೂ ಭಯಂಕರ ಕಲಿಯುಗವು ಪ್ರಾಪ್ತವಾಗಲು, ಸಕಾಮನಾದ ಮನುಷ್ಯನು ಬೆಳಗ್ಗೆ ಎದ್ದು ಆ ಮಿಷ್ಟಾನ್ನ

ಸ ಮಿಷ್ಟಾನ್ನಮವಾಪ್ನೋತಿ ಯದಿ ಕಾಮಯತೇ ದ್ವಿಜಾಃ ।
ನಿಷ್ಕಾಮೋ ವಾ ಸಮಭ್ಯೇತಿ ಸ್ಥಾನಂ ದೇವಸ್ಯ ಶೂಲಿನಃ ॥ ೫೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಮಿಷ್ಟಾನ್ನದೇಶ್ವರಮಾಹಾತ್ಮ್ಯವರ್ಣನಂ "
ನಾಮೈಕಚತ್ವಾರಿಂಶದುತ್ತರಶತತಮೋಽಧ್ಯಾಯಃ

---

ದೇಶ್ವರನನ್ನು ದರ್ಶನಗೈದರೆ ಮಿಷ್ಟಾನ್ನವನ್ನು ಪಡೆಯುವನು. ನಿಷ್ಕಾಮನಾದವನು ಮಹೇಶ್ವರನ ಸ್ಥಾನವನ್ನು ಹೊಂದುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಮಿಷ್ಟಾನ್ನದೇಶ್ವರಮಾಹಾತ್ಮ್ಯವರ್ಣನ " ವೆಂಬ
ನೂರನಲವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಚತ್ವಾರಿಂಶದುತ್ತರಶತತಮೋಽಧ್ಯಾಯಃ

### ಗಣಪತಿತ್ರಯಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ತಥಾನ್ಯದಪಿ ತತ್ರಾಸ್ತಿ ಪುಣ್ಯಂ ಗಣಪತಿತ್ರಯಂ ।**
**ಸ್ವರ್ಗದಂ ಮರ್ತ್ಯದಂ ಪುಣ್ಯಂ ತಥಾನ್ಯನ್ನರಕಾಪಹಂ ॥ ೧ ॥**
**ಹಂತ್ಯ ವೈ ಸರ್ವವಿಘ್ನಾನಾಂ ಪೂಜಿತಂ ಸುರದಾನವೈಃ ।**
**ಸರ್ವಕಾಮಪ್ರದಂ ಚೈವ ವಿದ್ಯಾಕೀರ್ತಿವಿವರ್ಧನಂ ॥ ೨ ॥**

**ಋಷಯ ಊಚುಃ :—**

**ತ್ರಿವಿಧಾಃ ಪುರುಷಾಃ ಸೂತ ಜಾಯಂತೇಽತ್ರ ಮಹೀತಲೇ ।**
**ಉತ್ತಮಾ ಮಧ್ಯಮಾಶ್ಚಾಽನ್ಯೇ ತಥಾಚಾನ್ಯೇಧಮಾಃ ಸ್ಥಿತಾಃ ॥ ೩ ॥**
**ಉತ್ತಮಾಃ ಪ್ರಾರ್ಥಯಂತಿಸ್ಮ ಮೋಕ್ಷಮೇವ ಹಿ ಕೇವಲಂ ।**
**ಗತಾ ಯತ್ರ ನಿವರ್ತಂತೇ ನ ಕಥಂಚಿದ್ಧರಾತಲೇ ॥ ೪ ॥**
**ಮಧ್ಯಮಾಃ ಸ್ವರ್ಗಮಾರ್ಗಂ ಚ ದಿವ್ಯಾನ್ ಭೋಗಾನ್ ಮನೋರಮಾನ್**
**ಅಪ್ಸರೋಭಿಃ ಸಮಂ ಕ್ರೀಡಾಂ ಯಜ್ಞಾದ್ಯೈಃ ಕರ್ಮಭಿಃ ಕೃತಾಂ ॥ ೫ ॥**

---

### ಕನ್ನಡದ ಅನುವಾದ

#### ಗಣಪತಿತ್ರಯಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ :—ಹಾಗೆಯೇ ಅಲ್ಲಿ ಸ್ವರ್ಗ ಮರ್ತ್ಯ ಲೋಕಗಳನ್ನು ಕೊಡುವವರೂ, ನರಕವನ್ನು ನಿವಾರಿಸುವವರೂ, ಸಕಲ ವಿಘ್ನಗಳನ್ನು ಪರಿಹರಿಸುವವರೂ, ಸುರಾಸುರರಿಂದ ಪೂಜಿತರೂ, ಸಮಸ್ತೇಷ್ಟಾರ್ಥಗಳನ್ನೀಯುವವರೂ, ವಿದ್ಯಾಕೀರ್ತಿಗಳನ್ನು ಹೆಚ್ಚಿಸುವವರೂ ಆದ ಮೂವರು ಗಣಪತಿಗಳು ನೆಲೆಸಿರುವರು.

೩. ಋಷಿಗಳು ಹೇಳುತ್ತಾರೆ :—ಸೂತ ! ಈ ಪ್ರಪಂಚದಲ್ಲಿ ಉತ್ತಮ, ಮಧ್ಯಮ, ಅಧಮರೆಂದು ಮೂರು ಬಗೆಯ ಜನರು ಜನಿಸುವರು.

೪. ಉತ್ತಮರು ಧರೆಗೆ ಹಿಂದಿರುಗದಂತೆ ಮಾಡುವ ಮೋಕ್ಷವನ್ನು ಮಾತ್ರ ಬೇಡುವರು.

೫. ಮಧ್ಯಮ ಮಾನವರು ಯಜ್ಞಾದಿಕರ್ಮಗಳನ್ನಾಚರಿಸಿ ಸ್ವರ್ಗಮಾರ್ಗವನ್ನೂ, ಮನೋಹರವಾದ ದಿವ್ಯಭೋಗಗಳನ್ನೂ, ಅಪ್ಸರಸ್ತ್ರೀಯರೊಡನೆ ಸಮಾಗಮಸುಖವನ್ನೂ ಪ್ರಾರ್ಥಿಸುವರು.

ಅಧಮಾಃ ಮರ್ತ್ಯಲೋಕೇಽತ್ರ ರಮಂತೇ ವಿಷಯಾತ್ಮಕಾಃ ।
ವಿಷಕೀಟಕವತ್ತತ್ರ ರತಿಂ ಕೃತ್ವಾ ಗರೀಯಸೀಂ ॥ ೬ ॥
ಸ್ವರ್ಗಮೋಕ್ಷೌ ಪರಿತ್ಯಜ್ಯ ತತ್ಕಸ್ಮಾನ್ಮರ್ತ್ಯ ಇಷ್ಯತೇ ।
ಯೇನಾಸೌ ಪ್ರಾರ್ಥ್ಯತೇ ಮರ್ತ್ಯೈರ್ಮರ್ತ್ಯದೋ ಗಣನಾಯಕಃ ॥ ೭ ॥
ಕೇನ ಸಂಸ್ಥಾಪಿತಾಸ್ತೇ ಚ ತಸ್ಮಿನ್ ಕ್ಷೇತ್ರೇ ಗಜಾನನಾಃ ।
ಕಸ್ಮಿನ್ ಕಾಲೇ ಚ ದ್ರಷ್ಟವ್ಯಾಃ ಸರ್ವಂ ವಿಸ್ತರತೋ ವದ ॥ ೮ ॥

ಸೂತ ಉವಾಚ :—

ಪೂರ್ವಂ ತಪ್ತ್ವಾ ತಪಸ್ತೀವ್ರಂ ಮರ್ತ್ಯಲೋಕೇ ದ್ವಿಜೋತ್ತಮಾಃ ।
ತತೋ ಗಚ್ಛಂತಿ ಸಂಹೃಷ್ಟಾಃ ಸ್ವೇಚ್ಛಯಾ ತ್ರಿದಿವಂ ಪ್ರತಿ ।
ಮೋಕ್ಷಮಾರ್ಗಂ ತಥೈವಾನ್ಯೇ ಧ್ಯಾನಾವಿಷ್ಟಮಾನಸಾಃ ॥ ೯ ॥
ತತಃ ಸ್ವರ್ಗೇ ಸಮಾಕೀರ್ಣೇ ಕದಾಚಿನ್ಮನುಜೋತ್ತಮೈಃ ।
ದೇವೇಷು ಕ್ಷಿಪ್ಯಮಾಣೇಷು ಸಮಂತಾತ್ತತ್ಪ್ರಭಾವತಃ ॥ ೧೦ ॥
ಗತ್ವಾ ಸ್ವಯಂ ಸಹಸ್ರಾಕ್ಷಃ ಸರ್ವೈರ್ದೇವಗಣೈಃ ಸಹ ।
ಪ್ರೋವಾಚ ಶಂಕರಂ ಗೌರ್ಯಾ ಸಾರ್ಧಮೇಕಾಸನಸ್ಥಿತಂ ॥ ೧೧ ॥

---

೬. ಅಧಮರು ಈ ಮನುಷ್ಯಲೋಕದಲ್ಲಿ ವಿಷಯಲಂಪಟರಾಗಿ ಆ ವಿಷಯಗಳಲ್ಲಿ ಅತ್ಯಂತ ಪ್ರೀತಿ ಮಾಡುತ್ತ ವಿಷಕೀಟದಂತಿರುವರು.

೭. ಮಾನವರು ಸ್ವರ್ಗಮೋಕ್ಷಗಳನ್ನು ಬಿಟ್ಟು ಮರ್ತ್ಯಲೋಕವನ್ನು ಏಕೆ ಬಯಸುವರು? ಮರ್ತ್ಯಲೋಕವನ್ನು ಕೊಡುವ ಗಣಪತಿಯನ್ನು ಏಕೆ ಪ್ರಾರ್ಥಿಸುವರು.

೮. ಆ ಕ್ಷೇತ್ರದಲ್ಲಿ ಗಜಾನನರನ್ನು ಯಾರು ಸ್ಥಾಪಿಸಿದರು? ಯಾವಾಗ ಅವರನ್ನು ದರ್ಶನಮಾಡಬೇಕು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೯. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಹಿಂದೆ ಕೆಲವು ಮಂದಿ ಮನುಷ್ಯರು ಭೂಲೋಕದಲ್ಲಿ ತೀವ್ರ ತಪವನ್ನಾಚರಿಸಿ ಸಂತೋಷದಿಂದ ಸ್ವೇಚ್ಛೆಯಾಗಿ ಸ್ವರ್ಗಕ್ಕೆ ತೆರಳಿದರು. ಇನ್ನು ಕೆಲವರು ಪರಮಾತ್ಮನ ಧ್ಯಾನದಿಂದ ತೆರೆದ ಮನಸ್ಸುಳ್ಳವರಾಗಿ ಮೋಕ್ಷವನ್ನು ಪಡೆದರು.

೧೦–೧೧. ಅನಂತರ ದೇವಲೋಕವು ಮನುಜೋತ್ತಮರಿಂದ ವ್ಯಾಪ್ತವಾದುದರಿಂದ ಆ ಮನುಷ್ಯರು ತಮ್ಮ ಪ್ರಭಾವದಿಂದ ದೇವತೆಗಳನ್ನು ಸುತ್ತಲೂ ಎಸೆಯುತ್ತಿರಲು ದೇವರಾಜನು ಸಮಸ್ತ ದಿವಿಜರೊಡನೆ ಗೌರಿಯಿಂದ ಕೂಡಿ ಒಂದೇ ಆಸನದಲ್ಲಿ ಕುಳಿತಿರುವ ಶಂಕರನನ್ನು ಕುರಿತು ಇಂತೆಂದನು.

ಇಂದ್ರ ಉವಾಚ:—

ತಪಃ ಪ್ರಭಾವಸಂಸಿದ್ಧೈರ್ಮಾನವೈಃ ಪರಮೇಶ್ವರ ।
ಅಸ್ಮಾಕಂ ವ್ಯಾಪ್ಯತೇ ಸರ್ವಮಹಿಮಾನಂ ಗೃಹಾದಿಕಂ ॥ ೧೩ ॥
ತಸ್ಮಾತ್ಕೃತ್ವಾ ಪ್ರಸಾದಂ ನಃ ಕಂಚಿಚ್ಚಿಂತಯ ಸಾಂಪ್ರತಂ ।
ಉಪಾಯಂ ಯೇನ ತಿಷ್ಠಾಮಃ ಸೌಖ್ಯೇ ನಾಽತ್ರ ಶಿವಾಲಯೇ ॥ ೧೪ ॥
ಅಥ ಶ್ರುತ್ವಾ ವಿರೂಪಾಕ್ಷಸ್ತೇಷಾಂ ತದ್ವಚನಂ ದ್ವಿಜಾಃ ।
ಪಾರ್ವತ್ಯಾಃ ಪಾರ್ಶ್ವಸಂಸ್ಥಾಯಾ ಮುಖಚಂದ್ರಂ ಸಮೈಕ್ಷಯತ್ ॥ ೧೫ ॥
ನಿಜಗಾತ್ರಂ ತತೋ ದೇವೀ ಸುಸಂಮರ್ದ್ಯ ಮುಹುರ್ಮುಹುಃ ।
ಮಲಮಾಹೃತ್ಯ ತಂ ಕೃತ್ಸ್ನಂ ಚಕ್ರೇ ನಾಗಮುಖಂ ತತಃ ॥ ೧೬ ॥
ಚತುರ್ಹಸ್ತಂ ಮಹಾಕಾಯಂ ಲಂಬೋದರಸಮನ್ವಿತಂ ।
ಸುಕೌತುಕಕರಂ ತೇಷಾಂ ಸರ್ವೇಷಾಂ ಚ ದಿವೌಕಸಾಂ ॥ ೧೭ ॥
ತತಃ ಸ ವಿನಯಾದಾಹ ದೇವೀಂ ಶಿಖರವಾಸಿನೀಂ ।
ಯದರ್ಥಮಂಬ ಸೃಷ್ಟೋಽಹಂ ತತ್ಕಾರ್ಯಂ ವದ ಮಾಚಿರಂ ॥ ೧೮ ॥
ತ್ರೈಲೋಕ್ಯೇ ತ್ವತ್ಪ್ರಸಾದೇನ ನಾಸಾಧ್ಯಂ ವಿದ್ಯತೇ ಮಮ ॥ ೧೯ ॥

೧೩. ಇಂದ್ರನು ಹೇಳುತ್ತಾನೆ:—ಪರಮೇಶ್ವರ! ತಪಸ್ಸಿದ್ಧಿಯನ್ನು ಪಡೆದಿರುವ ಮಾನವರು ನಮ್ಮ ಮಾಹಾತ್ಮ್ಯ, ನೆಲೆ ಮೊದಲಾದುವುಗಳನ್ನು ವ್ಯಾಪಿಸಿದ್ದಾರೆ.

೧೪. ಆದುದರಿಂದ ನಮ್ಮಲ್ಲಿ ಅನುಗ್ರಹಿಸಿ ನಾವು ದಿವಾಲಯದಲ್ಲಿ ಸೌಖ್ಯದಿಂದಿರುವಂತೆ ಒಂದು ಉಪಾಯವನ್ನಾಲೋಚಿಸು.

೧೫. ದ್ವಿಜರೆ! ಅನಂತರ ವಿರೂಪಾಕ್ಷನು ಅವರ ಆ ಮಾತನ್ನು ಕೇಳಿ ಪಾರ್ಶ್ವದಲ್ಲಿ ಕುಳಿತಿರುವ ಪಾರ್ವತಿಯ ಮುಖೇಂದುವನ್ನು ನೋಡಿದನು.

೧೬–೧೭. ಆಗ ದೇವಿಯು ತನ್ನ ಶರೀರವನ್ನು ಬಹಳವಾಗಿ ಉಜ್ಜಿ ಸಂಪೂರ್ಣವಾದ ಕೊಳೆಯನ್ನು ತೆಗೆದು ಆನೆಯ ಮುಖವುಳ್ಳವನೂ, ನಾಲ್ಕು ಕೈಯುಳ್ಳವನೂ, ದೊಡ್ಡ ಶರೀರವುಳ್ಳವನೂ, ಜೋಲು ಹೊಟ್ಟೆಯುಳ್ಳವನೂ, ಆ ಸಮಸ್ತ ಸುರರಿಗೆ ಕುತೂಹಲವನ್ನುಂಟುಮಾಡುವವನೂ ಆದ ಗಜಾನನನನ್ನು ನಿರ್ಮಿಸಿದಳು.

೧೮. ಅನಂತರ ಆ ಗಣಪತಿಯು ವಿನಯದಿಂದ ಶೈಲಶಿಖರನಿವಾಸಿನಿಯಾದ ದೇವಿಯನ್ನು ಕುರಿತು, "ಅಮ್ಮ! ನನ್ನನ್ನು ಏತಕ್ಕಾಗಿ ಸೃಷ್ಟಿಸಿರುವೆ? ಆ ಕೆಲಸವನ್ನು ಶೀಘ್ರವಾಗಿ ಹೇಳು.

೧೯. ನಿನ್ನ ಅನುಗ್ರಹದಿಂದ ನನಗೆ ಮೂರು ಲೋಕಗಳಲ್ಲಿ ಅಸಾಧ್ಯವಾದ ಕೆಲಸವಾವುದೂ ಇಲ್ಲ."

ಶ್ರೀ ದೇವ್ಯುವಾಚ :—
ಮರ್ತ್ಯಲೋಕೇ ನರಾ ಯೇ ಚ ಸ್ವರ್ಗಮೋಕ್ಷಪರಾಃ ಸದಾ ।
ತೇಷಾಂ ವಿಘ್ನಂ ತ್ವಯಾ ಕಾರ್ಯಂ ಶುಭಕೃತ್ಯೇಷು ಚೈವ ಹಿ ॥ ೧೯ ॥
ಸರಿತಾಂ ಪತಯಸ್ತ್ರಿಂಶಚ್ಛಂಕವಃ ಸಪ್ತಸಪ್ತತಿಃ ।
ಮಹಾಸರೋಜ ಷಷ್ಟಿಶ್ಚ ನಿಖರ್ವಾಣಾಂ ಚ ವಿಂಶತಿಃ ॥ ೨೦ ॥
ಅರ್ಬುದಾಯುತಸಂಯುಕ್ತಾಃ ಕೋಟ್ಯೋ ನವತಿಪಂಚ ಚ ।
ಲಕ್ಷಾಶ್ಚ ಪಂಚಪಂಚಾಶತ್ಸಹಸ್ರಾಃ ಪಂಚವಿಂಶತಿಃ ।
ಶತಾನಿ ನವಷಷ್ಟಿಶ್ಚ ಗಣಾಶ್ಚಾಽನ್ಯೇಽತ್ರ ಸಂಸ್ಥಿತಾಃ ॥ ೨೧ ॥
ಯೇಷಾಂ ನಂದೀ ಸ್ಮೃತಃ ಪೂರ್ವೋ ಮಹಾಕಾಲಸ್ತಥಾ ಪರಃ ।
ತೇ ಸರ್ವೇ ವಶಗಾಸ್ತುಭ್ಯಂ ಪ್ರಭವಂತು ಗಣೋತ್ತಮಾಃ ॥ ೨೨ ॥
ಆಧಿಪತ್ಯಂ ಮಯಾ ದತ್ತಂ ತವ ವತ್ಸ ಕುರುಷ್ವ ತತ್ ।
ಸರ್ವೇಷಾಂ ಗಣವೃಂದಾನಾಮಾಧಿಪತ್ಯೇ ವ್ಯವಸ್ಥಿತಃ ॥ ೨೩ ॥
ಏವಮುಕ್ತ್ವಾಥ ಸಾ ದೇವೀ ಸಮಾನೀಯೌಷಧೀ ಭೃತಾನ್ ।
ಹೇಮಕುಂಭಾನ್ ಸುತೀರ್ಥಾಂಭಃ ಪರಿಪೂರ್ಣಾನ್ ಮಹೋದಯಾನ್ ॥
ತಸ್ಯಾಽಭಿಷೇಚನಂ ಚಕ್ರೇ ಸ್ವಯಮೇವ ಸುರೇಶ್ವರೀ ।
ಗೀತವಾದ್ಯವಿನೋದೇನ ನೃತ್ಯಮಂಗಲಜೈಃ ಸ್ವನೈಃ ॥ ೨೪ ॥

---

೧೯. ಶ್ರೀ ದೇವಿಯು ಹೇಳುತ್ತಾಳೆ:—ನೀನು ಭೂಲೋಕದಲ್ಲಿರುವ ಸ್ವರ್ಗ ಮೋಕ್ಷನಿರತರಾದ ಮಾನವರ ಶುಭಕಾರ್ಯಗಳಿಗೆ ಯಾವಾಗಲೂ ವಿಘ್ನವನ್ನುಂಟುಮಾಡು.

೨೦—೨೧. ಮೂವತ್ತು ಸಮುದ್ರ, ಎಪ್ಪತ್ತೇಳು ಶಂಕು, ಅರುವತ್ತು ಪದ್ಮ, ಇಪ್ಪತ್ತು ನಿಖರ್ವ, ಅಯುತ ಅರ್ಬುದ, ತೊಂಬತ್ತೈದು ಕೋಟಿ, ಐವತ್ತೈದು ಲಕ್ಷ, ಇಪ್ಪತ್ತೈದು ಸಾವಿರ, ತೊಂಬತ್ತಾರು ನೂರು ಸಂಖ್ಯೆಯ ಇತರ ಗಣಗಳು ಇಲ್ಲಿ ನೆಲೆಸಿವೆ.

೨೨. ಈ ಗಣಗಳಿಗೆ ಮೊದಲನೆಯವನಾದ ನಂದಿಯೂ, ಎರಡನೆಯವನಾದ ಮಹಾಕಾಲನೂ, ಆ ಎಲ್ಲ ಗಣಗಳೂ ನಿನ್ನ ವಶದಲ್ಲಿರುವುವು.

೨೩. ಮಗು! ನಾನು ಕೊಟ್ಟಿರುವ ಸಕಲ ಗಣಗಳ ಆಧಿಪತ್ಯವನ್ನು ನೀನು ನಡೆಯಿಸು.

೨೪—೨೫. ಆ ದೇವಿಯು ಹೀಗೆ ಹೇಳಿ ಔಷಧಿ, ತೀರ್ಥಜಲಗಳಿಂದ ತುಂಬಿರುವ ಕಲಶಗಳನ್ನು ತರಿಸಿ ತಾನೇ ಗೀತವಾದ್ಯ ವಿನೋದದಿಂದಲೂ, ನೃತ್ಯ ಮಂಗಳಗಳಿಂದುಂಟಾದ ಧ್ವನಿಗಳಿಂದಲೂ ಆ ಗಣನಾಥನಿಗೆ ಅಭಿಷೇಕ ಮಾಡಿದಳು.

ತ್ರಯಸ್ತ್ರಿಂಶತ್ಸ್ಮೃತಾಃ ಕೋಟ್ಯೋ ದೇವಾನಾಂ ಯಾಃ ಸ್ಥಿತಾ ದಿವಿ ।
ತಾಃ ಸರ್ವಾಸ್ತತ್ರ ಚಾಽಽಗತ್ಯ ತಸ್ಯ ಚಕ್ರುಶ್ಚ ಮಂಗಲಂ ॥ ೨೬ ॥
ಅಥ ತಸ್ಯ ದದೌ ತುಷ್ಟೋ ಭಗವಾನ್ ವೃಷಭಧ್ವಜಃ ।
ಕುಠಾರಂ ನಿಶಿತಂ ಹಸ್ತೇ ಸದಾ ವೈ ಶ್ರೇಷ್ಠಮಾಯುಧಂ ॥ ೨೭ ॥
ಪಾತ್ರಂ ಮೋದಕಸಂಪೂರ್ಣಮಕ್ಷಯಂ ಚೈವ ಪಾರ್ವತೀ ।
ಭೋಜನಾರ್ಥೇ ಮಹಾಭಾಗಾ ಮಾತೃಸ್ನೇಹಪರಾಯಣಾ ॥ ೨೮ ॥
ಮೂಷಕಂ ಕಾರ್ತಿಕೇಯಸ್ತು ವಾಹನಾರ್ಥಂ ಪ್ರಹರ್ಷಿತಃ ।
ಭ್ರಾತರಂ ಮನ್ಯಮಾನಸ್ತು ಬಂಧುಸ್ನೇಹೇನ ಸಂಯುತಃ ॥ ೨೯ ॥
ಜ್ಞಾನಂ ದಿವ್ಯಂ ದದೌ ಬ್ರಹ್ಮಾ ತಸ್ಮೈ ಹೃಷ್ಟೇನ ಚೇತಸಾ ।
ಅತೀತಾನಾಗತಂ ಚೈವ ವರ್ತಮಾನಂ ಚ ಯದ್ಭವೇತ್ ॥ ೩೦ ॥
ಪ್ರಜ್ಞಾಂ ವಿಷ್ಣುಃ ಸಹಸ್ರಾಕ್ಷಃ ಸೌಭಾಗ್ಯಂ ಚೋತ್ತಮಂ ಮಹತ್ ।
ಸೌಭಾಗ್ಯಂ ಕಾಮದೇವಸ್ತು ಕುಬೇರೋ ವಿಭವಾದಿಕಂ ॥ ೩೧ ॥
ಪ್ರತಾಪಂ ಭಗವಾನ್ ಸೂರ್ಯಃ ಕಾಂತಿಮಗ್ರ್ಯಾಂ ನಿಶಾಕರಃ ॥ ೩೨ ॥
ತಥಾಽನ್ಯೇ ವಿಬುಧಾಃ ಸರ್ವೇ ದದುರಿಷ್ಟಾನಿ ಭೂರಿಶಃ ।
ಆತ್ಮೀಯಾನಿ ಪ್ರತುಷ್ಟ್ಯರ್ಥಂ ದೇವ್ಯಾ ದೇವಸ್ಯ ಚ ಪ್ರಭೋಃ ॥ ೩೩ ॥

---

೨೬. ದೇವಲೋಕದಲ್ಲಿರುವ ಮೂವತ್ತಮೂರು ಕೋಟಿ ದೇವತೆಗಳು ಅಲ್ಲಿಗೆ ಬಂದು ಅವನಿಗೆ ಮಂಗಳವನ್ನು ಹಾರೈಸಿದರು.

೨೭. ತರುವಾಯ ಪೂಜ್ಯನಾದ ಮಹೇಶ್ವರನು ಸಂತುಷ್ಟನಾಗಿ ಅವನಿಗೆ ಹರಿತವಾದ ಕುಠಾರವೆಂಬ ಶ್ರೇಷ್ಠ ಆಯುಧವನ್ನಿತ್ತನು.

೨೮. ಪಾರ್ವತಿಯು ಮೋದಕಗಳಿಂದ ತುಂಬಿರುವ ಅಕ್ಷಯಪಾತ್ರವನ್ನು ಅವನಿಗೆ ಭೋಜನಕ್ಕೋಸ್ಕರ ತಾಯಿಯ ಸ್ನೇಹದಿಂದ ಕೊಟ್ಟಳು.

೨೯. ಕಾರ್ತಿಕೇಯನು ಅವನನ್ನು ಸಹೋದರನೆಂದರಿತು ಬಂಧುಸ್ನೇಹದಿಂದ ವಾಹನಕ್ಕಾಗಿ ಇಲಿಯನ್ನು ಸಂತೋಷದಿಂದ ಕೊಟ್ಟನು.

೩೦. ಬ್ರಹ್ಮನು ಸಂತೋಷಗೊಂಡ ಮನಸ್ಸಿನಿಂದ ಭೂತಭವಿಷ್ಯದ್ವರ್ತಮಾನ ವಿಷಯಕವಾದ ದಿವ್ಯಜ್ಞಾನವನ್ನಿತ್ತನು.

೩೧–೩೨. ವಿಷ್ಣುವು ಪ್ರಜ್ಞೆಯನ್ನೂ, ಇಂದ್ರನು ಮಹಾಸೌಭಾಗ್ಯವನ್ನೂ, ಕಾಮನು ಸೌಭಾಗ್ಯವನ್ನೂ, ಕುಬೇರನು ಐಶ್ವರ್ಯಾದಿಗಳನ್ನೂ, ಸೂರ್ಯನು ಪ್ರತಾಪವನ್ನೂ, ಚಂದ್ರನು ಶ್ರೇಷ್ಠವಾದ ಕಾಂತಿಯನ್ನೂ ಕೊಟ್ಟರು.

೩೩. ಇನ್ನೂ ಇತರ ದೇವತೆಗಳು ಪಾರ್ವತೀ ಪರಮೇಶ್ವರರ ತುಷ್ಟಿಗಾಗಿ ತಮ್ಮ ಇಷ್ಟವಾದ ವಸ್ತುಗಳನ್ನು ಕೊಟ್ಟರು.

ಏವಂ ಲಬ್ಧವರಃ ಸೋಽಥ ಗಣನಾಥೋ ದ್ವಿಜೋತ್ತಮಾಃ ।
ದೇವಕೃತ್ಯಪರೋ ನಿತ್ಯಂ ಚಕ್ರೇ ವಿಘ್ನಾನಿ ಭೂತಲೇ ॥ ೩೪ ॥
ಧರ್ಮಾರ್ಥಂ ಯತಮಾನಾನಾಂ ಮೋಕ್ಷಾಯ ಸುಕೃತಾಯ ಚ ।
ತತೋ ಭೂಮಿತಲೇಽಭ್ಯೇತ್ಯ ಗಣೇಶಸ್ತತ್ರ ಯಃ ಸ್ಮೃತಃ ॥ ೩೫ ॥
ವೈಮಾನಿಕೈಃ ಸಮಭ್ಯೇತ್ಯ ಸ್ಥಾಪಿತಸ್ತತ್ರ ಸ ದ್ವಿಜಾಃ ।
ಯೇನ ಸ್ವರ್ಗಾರ್ಥಿನೋ ಲೋಕಾಃ ಪೂಜಾಂ ತಸ್ಯ ಪ್ರಚಕ್ರಿರೇ ।
ಪ್ರಥಮಂ ಸರ್ವಕೃತ್ಯೇಷು ವಿಘ್ನನಾಶಾಯ ತತ್ಪರಾಃ ॥ ೩೬ ॥
ಏತಸ್ಮಿನ್ನೇವ ಕಾಲೇ ಚ ಚಮತ್ಕಾರಪುರೋದ್ಭವೈಃ ।
ಬ್ರಾಹ್ಮಣೈರ್ಬ್ರಹ್ಮವಿಜ್ಞಾನತತ್ಪರೈರ್ಮೋಕ್ಷಹೇತುಭಿಃ ।
ಈಶಾನಃ ಸ್ಥಾಪಿತಸ್ತತ್ರ ಮೋಕ್ಷದೋ ಯ ಉದಾಹೃತಃ ॥ ೩೭ ॥
ಸ್ವರ್ಗಂ ವಾಂಛದ್ಭಿರೇವಾಽನ್ಯೈಃ ಸ್ವರ್ಗದ್ವಾರಪ್ರದಸ್ತಥಾ ।
ಹೇರಂಬಃ ಸ್ಥಾಪಿತಸ್ತತ್ರ ಸತ್ಯನಾಮಾ ಯಥೋದಿತಃ ॥ ೩೮ ॥
ತಥಾಽನ್ಯೈರ್ಮರ್ತ್ಯದೋ ನಾಮ ಗಣೇಶಸ್ತತ್ರ ಯಃ ಸ್ಥಿತಃ ।
ಯೇನ ಸ್ವರ್ಗಾಚ್ಚ್ಯುತಾ ಯಾಂತಿ ನ ಕದಾ ನರಕಾದಿಕಂ ।
ತಿರ್ಯಕ್ತ್ವಂ ವಾ ಕೃಮಿತ್ವಂ ವಾ ಸ್ಥಾವರತ್ವಮಥಾಽಪಿ ವಾ ॥ ೩೯ ॥
ಏತಸ್ಮಾತ್ಕಾರಣಾತ್ತತ್ರ ಕ್ಷೇತ್ರೇ ಪುಣ್ಯೇ ದ್ವಿಜೋತ್ತಮಾಃ ।
ಹೇರಂಬೋ ಮರ್ತ್ಯದೋ ಜಾತಃ ಸ್ವರ್ಗಿಣಾಂ ಮರ್ತ್ಯದಃ ಸದಾ ॥ ೪೦ ॥

---

೩೪–೩೬. ದ್ವಿಜವರ್ಯರೆ! ಹೀಗೆ ವರವನ್ನು ಪಡೆದ ಗಣನಾಥನು ದೇವ ಕಾರ್ಯದಲ್ಲಿ ತೊಡಗಿ ಯಾವಾಗಲೂ ಭೂಮಿಯಲ್ಲಿ ಧರ್ಮಮೋಕ್ಷಕ್ಕಾಗಿ ಪುಣ್ಯವನ್ನು ಮಾಡುವ ಜನರಿಗೆ ವಿಘ್ನವನ್ನುಂಟುಮಾಡಿದನು. ಅನಂತರ ಅವನು ಭೂಮಿಗೆ ಬರಲು ದೇವತೆಗಳು ಅವನನ್ನು ಅಲ್ಲಿ ಪ್ರತಿಷ್ಠೆ ಮಾಡಿದರು. ಅದರಿಂದ ಸ್ವರ್ಗವನ್ನಪೇಕ್ಷಿಸುವ ಜನರು ಸಮಸ್ತ ಕಾರ್ಯಗಳ ಆರಂಭದಲ್ಲಿ ವಿಘ್ನಪರಿಹಾರಕ್ಕಾಗಿ ಅವನನ್ನು ಪೂಜಿಸುತ್ತಿದ್ದರು.

೩೭. ಈ ಸಮಯದಲ್ಲಿ ಬ್ರಹ್ಮಜ್ಞಾನಿಗಳೂ, ಮೋಕ್ಷವನ್ನಪೇಕ್ಷಿಸುವವರೂ ಆದ ಚಮತ್ಕಾರಪುರದ ಬ್ರಾಹ್ಮಣರು ಅಲ್ಲಿ ಮೋಕ್ಷದೇಶ್ವರನನ್ನು ಸ್ಥಾಪಿಸಿದರು.

೩೮. ಸ್ವರ್ಗವನ್ನಪೇಕ್ಷಿಸುವ ಇತರ ಜನರು ಸ್ವರ್ಗದ್ವಾರವನ್ನೀಯುವ ಸತ್ಯನಾಮಕನಾದ ಗಣಪತಿಯನ್ನು ಅಲ್ಲಿ ಸ್ಥಾಪಿಸಿದರು.

೩೯. ಹಾಗೆ ಇತರರು ಮರ್ತ್ಯದನೆಂಬ ಗಣೇಶನನ್ನು ಸ್ಥಾಪಿಸಿದರು. ಅವನ ದರ್ಶನದಿಂದ ಸ್ವರ್ಗದಿಂದ ತಪ್ಪಿದವರು ನರಕಾದಿಗಳನ್ನಾಗಲಿ, ತಿರ್ಯಕ್ತ್ವವನ್ನಾಗಲಿ, ಕೃಮಿತ್ವವನ್ನಾಗಲಿ, ಸ್ಥಾವರತ್ವವನ್ನಾಗಲಿ ಹೊಂದುವುದಿಲ್ಲ.

೪೦. ದ್ವಿಜವರ್ಯರೆ! ಈ ಕಾರಣದಿಂದ ಆ ಪುಣ್ಯಕ್ಷೇತ್ರದಲ್ಲಿ ಸ್ವರ್ಗವಾಸಿಗಳಿಗೆ ಭೂಲೋಕವನ್ನು ಕೊಡುವ ಗಣೇಶನು ಮರ್ತ್ಯದನಾದನು.

ಏತದ್ವಃ ಸರ್ವಮಾಖ್ಯಾತಂ ಪುಣ್ಯಂ ಹೇರಂಬಸಂಭವಂ ।
ಆಖ್ಯಾನಂ ಸರ್ವವಿಘ್ನಾ ಯನ್ನಿಹಂತಿ ಶ್ರುತಂ ನೃಣಾಂ ॥ ೪೧ ॥
ಏತನ್ಮಾಘಚತುರ್ಥ್ಯಾಂ ಯಃ ಶುಕ್ಲಾಯಾಂ ಪೂಜಯೇನ್ನರಃ ।
ನ ತಸ್ಯ ವತ್ಸರಂ ಯಾವದ್ವಿಘ್ನಂ ಸಂಜಾಯತೇ ಕ್ವಚಿತ್ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ.
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಣಪತಿತ್ರಯಮಾಹಾತ್ಮ್ಯವರ್ಣನಂ" ನಾಮ
ದ್ವಿಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೪೧. ನಿಮಗೆ ಈ ಗಣೇಶನ ಪವಿತ್ರವಾದ ಆಖ್ಯಾನವನ್ನು ಹೇಳಿರುವೆನು. ಇದು ಶ್ರವಣಮಾತ್ರದಿಂದ ಮಾನವರ ಸಕಲ ವಿಘ್ನಗಳನ್ನು ಪರಿಹರಿಸುವುದು.

೪೨. ಈ ಗಣೇಶನನ್ನು ಮಾಘ ಶುದ್ಧ ಚತುರ್ಥಿಯ ದಿನ ಪೂಜಿಸಿದ ಮಾನವನಿಗೆ ಒಂದು ವರ್ಷಕಾಲ ವಿಘ್ನವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಣಪತಿತ್ರಯಮಾಹಾತ್ಮ್ಯವರ್ಣನ" ವೆಂಬ
ನೂರನಲವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

## ಜಾಬಾಲಿಕ್ಷೋಭಣವರ್ಣನಂ

ಸೂತ ಉವಾಚ :—

ತಥಾಽನ್ಯೋಽಪಿ ಚ ತತ್ರಾಸ್ತಿ ದೇವಶ್ಚಿತ್ರೇಶ್ವರೋ ದ್ವಿಜಾಃ ।
ಚಿತ್ರಪೀಠಸ್ಯ ಮಧ್ಯಸ್ಥಶ್ಚಿತ್ರಸೌಖ್ಯಪ್ರದೋ ನೃಣಾಂ ॥ ೧ ॥
ಯಂ ದೃಷ್ಟ್ವಾ ಪೂಜಯಿತ್ವಾ ಚ ಸ್ನಾಪಯಿತ್ವಾಽಥ ವಾ ನರಃ ।
ಮುಚ್ಯತೇ ಪರದಾರೋತ್ಥೈಃ ಪಾತಕೈಶ್ಚೋಪಪಾತಕೈಃ ॥ ೨ ॥
ಧರ್ಷಯಿತ್ವಾ ಗುರೋಃ ಪತ್ನೀಂ ಕನ್ಯಾಂ ವಾ ನಿಜವಂಶಜಾಂ ।
ನೀಚಾಂ ವಾ ವ್ರತಯುಕ್ತಾಂ ವಾ ಕಾಮಾಸಕ್ತೇನ ಚೇತಸಾ ॥ ೩ ॥
ಚೈತ್ರಶುಕ್ಲಚತುರ್ದಶ್ಯಾಂ ಯಸ್ತಂ ಪೂಜಯತೇ ನರಃ ।
ಸ ತತ್ಪಾಪಂ ನಿಹತ್ಯಾಶು ಸ್ವರ್ಗಲೋಕಂ ತತೋ ವ್ರಜೇತ್ ॥ ೪ ॥
ತಥಾ ಚಿತ್ರಾಂಗದಸ್ತತ್ರ ಜಾಬಾಲಿ ಸಹಿತೋ ನೃಪಃ ।
ಕುಮಾರ್ಯಾ ಸಹಿತಃ ಸಾರ್ಧಂ ನಗ್ನಯಾ ತತ್ಸಮುತ್ಥಯಾ ।
ಸಂತಿಷ್ಠತೇ ತದಗ್ರೇ ತು ಶಪ್ತೋ ಜಾಬಾಲಿನಾ ಪುರಾ ॥ ೫ ॥

---

## ಕನ್ನಡದ ಅನುವಾದ

### ಜಾಬಾಲಿಕ್ಷೋಭಣವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜರೆ! ಅಲ್ಲಿ ಚಿತ್ರಪೀಠದ ಮಧ್ಯದಲ್ಲಿ ಮನುಷ್ಯರಿಗೆ ನಾನಾವಿಧ ಸೌಖ್ಯವನ್ನುಂಟುಮಾಡುವ ಚಿತ್ರೇಶ್ವರನಿರುವನು.

೨. ಅವನನ್ನು ನೋಡಿದ, ಪೂಜಿಸಿದ ಅಥವಾ ಅಭಿಷೇಕಮಾಡಿದ ಮನುಷ್ಯನು ಪರಪತ್ನಿಯನ್ನು ಸೇರಿದ ಪಾಪಗಳಿಂದಲೂ, ಉಪಪಾತಕಗಳಿಂದಲೂ ಮುಕ್ತನಾಗುವನು.

೩—೪. ಚೈತ್ರ ಶುಕ್ಲ ಚತುರ್ದಶಿಯ ದಿನ ಅವನನ್ನು ಪೂಜಿಸಿದ ಮನುಷ್ಯನು ಗುರುಪತ್ನೀ, ತನ್ನವಂಶದ ಕನ್ಯೆ, ನೀಚಸ್ತ್ರೀ, ವ್ರತನಿರತಳಾದ ಹೆಂಗಸು ಇವರನ್ನು ಕಾಮಾಸಕ್ತವಾದ ಮನಸ್ಸಿನಿಂದ ಸೇರಿದ ಪಾಪವನ್ನು ಶೀಘ್ರವಾಗಿ ಪರಿಹರಿಸಿಕೊಂಡು ಸ್ವರ್ಗಲೋಕಕ್ಕೆ ತೆರಳುವನು.

೫. ಆ ಚಿತ್ರೇಶ್ವರನ ಮುಂದೆ ಜಾಬಾಲಿಯಿಂದ ಶಪ್ತನಾದ ಚಿತ್ರಾಂಗದನು ಜಾಬಾಲಿ ಮತ್ತು ಬತ್ತಲೆಯಾದ ತನ್ನ ಕುಮಾರಿಯರೊಡನೆ ಇರುವನು.

ತ್ರಯಾಣಾಮಪಿ ಯಸ್ತೇಷಾಂ ತಸ್ಮಿನ್ನಹನಿ ನಿರ್ವಪೇತ್ ।
ಸ ಇಷ್ಟಾಂ ಲಭತೇ ನಾರೀಂ ಸಿದ್ಧಿಂ ಚ ಮನಸಿ ಸ್ಥಿತಾಂ ॥ ೬ ॥

ಋಷಯ ಊಚುಃ :–

ಕಸ್ಮಾಜ್ಜಾಬಾಲಿನಾ ಶಪ್ತಃ ಪೂರ್ವಂ ಚಿತ್ರಾಂಗದೋ ಯುವಾ ।
ಸಾ ಚ ತತ್ತನಯಾ ಕಸ್ಮಾತ್ಕುಮಾರೀ ವಸ್ತ್ರವರ್ಜಿತಾ ॥ ೭ ॥
ಅದ್ಯಾಽಪಿ ತಿಷ್ಠತೇ ತತ್ರ ವಿರುದ್ಧಂ ರೂಪಮಾಶ್ರಿತಾ ।
ಜನಹಾಸ್ಯಕರಂ ನಿತ್ಯಂ ತಸ್ಮಾತ್ಸೂತ ವದಸ್ವ ನಃ ॥ ೮ ॥

ಸೂತ ಉವಾಚ :–

ಆಸೀತ್ಪೂರ್ವಂ ಮುನಿರ್ನಾಮ್ನಾ ಜಾಬಾಲಿರಿತಿ ವಿಶ್ರುತಃ ।
ಕೌಮಾರಬ್ರಹ್ಮಚರ್ಯೇಣ ಯೇನ ಚೀರ್ಣಂ ತಪಃ ಸದಾ ॥ ೯ ॥
ಹಾಟಕೇಶ್ವರಜಂ ಕ್ಷೇತ್ರಂ ಸಮಾಸಾದ್ಯ ಸ ಸದ್ದ್ವಿಜಾಃ ।
ಬಾಲ್ಯೇಽಪಿ ವಯಸಿ ಪ್ರಾಪ್ತೇ ಸಮಾರೇಭೇ ಮಹತ್ತಪಃ ॥ ೧೦ ॥
ಕೃಚ್ಛ್ರಚಾಂದ್ರಾಯಣಾದೀನಿ ಪಾರಾಕಾಣಿ ಶನೈಃ ಶನೈಃ ।
ಕುರ್ವತಾ ತೇನ ತೇ ದೇವಾಃ ಸಂನೀತಾ ಭಯಗೋಚರಂ ॥ ೧೧ ॥
ತತಃ ಶಕ್ರಾದಯೋ ದೇವಾಃ ಸಂತ್ರಸ್ತಾ ಮೇರುಮೂರ್ಧನಿ ।
ಮಿಲಿತ್ವಾ ಚಕ್ರಿರೇ ಮಂತ್ರಂ ತಸ್ಯ ವಿಘ್ನಕೃತೇ ಮಿಥಃ ॥ ೧೨ ॥

---

೬. ಚೈತ್ರ ಶುಕ್ಲ ಚತುರ್ದಶಿಯ ದಿನ ಆ ಮೂವರಿಗೆ ತರ್ಪಣಮಾಡಿದವನು ಇಷ್ಟಳಾದ ನಾರಿಯನ್ನೂ, ತನ್ನ ಮನೋಭೀಷ್ಟಸಿದ್ಧಿಯನ್ನೂ ಹೊಂದುವನು.

೭. ಋಷಿಗಳು ಹೇಳುತ್ತಾರೆ:—ಹಿಂದೆ ಜಾಬಾಲಿಯು ಯುವಕನಾದ ಚಿತ್ರಾಂಗದನಿಗೆ ಶಾಪಕೊಡಲು ಕಾರಣವೇನು? ಅವನ ಮಗಳು ಬತ್ತಲೆಯಾಗಿರಲು ಏನು ಕಾರಣ?

೮. ಸೂತ! ಅವಳು ಈಗಲೂ ಅಲ್ಲಿ ಜನರಿಗೆ ಹಾಸ್ಯವನ್ನುಂಟುಮಾಡುವ ವಿರುದ್ಧರೂಪವನ್ನಾಶ್ರಯಿಸಿ ಇರುವಳೇಕೆ? ಆದುದರಿಂದ ಅದನ್ನು ನಮಗೆ ಹೇಳು.

೯. ಸೂತನು ಹೇಳುತ್ತಾನೆ:—ಹಿಂದೆ ಕೌಮಾರಬ್ರಹ್ಮಚರ್ಯದಿಂದ ಯಾವಾಗಲೂ ತಪಸ್ಸನ್ನು ಮಾಡುತ್ತಿದ್ದ ಜಾಬಾಲಿಯೆಂಬ ಮುನಿವರ್ಯನಿದ್ದನು.

೧೦. ದ್ವಿಜರೆ! ಅವನು ಬಾಲ್ಯವಯಸ್ಸಿನಲ್ಲಿ ಹಾಟಕೇಶ್ವರಕ್ಷೇತ್ರವನ್ನು ಸೇರಿ ಮಹಾತಪಸ್ಸನ್ನು ಆರಂಭಿಸಿದನು.

೧೧. ಮೆಲ್ಲಮೆಲ್ಲನೆ ಕೃಚ್ಛ್ರ, ಚಾಂದ್ರಾಯಣ, ಪರಾಕಾದಿ ಮಹಾವ್ರತಗಳನ್ನಾಚರಿಸುವ ಅವನಿಂದ ದೇವತೆಗಳು ಭಯಗೊಂಡರು.

೧೨. ಅನಂತರ ಆ ಇಂದ್ರಾದಿ ದೇವತೆಗಳು ಮೇರುಪರ್ವತದ ಶಿಖರದಲ್ಲಿ ಒಟ್ಟಿಗೆ ಸೇರಿ ಅವನ ತಪಸ್ಸನ್ನು ವಿಘ್ನಗೊಳಿಸಲು ಹೀಗೆ ಆಲೋಚಿಸಿದರು.

ಯದ್ಯಸ್ಯ ತಪಸೋ ವೃದ್ಧಿರೇವಂ ಯಾಸ್ಯತಿ ನಿತ್ಯಶಃ ।
ಚ್ಯಾವಯಿಷ್ಯತಿ ತನ್ನೂನಂ ಸ್ವರ್ಗರಾಜ್ಯಾಚ್ಛತಕ್ರತುಂ ॥ ೧೩ ॥
ತಸ್ಮಾದ್ಗಚ್ಛತು ರಂಭಾಖ್ಯಾ ತತ್ಪಾರ್ಶ್ವೇಽಪ್ಸರಸಾಂ ವರಾ ।
ಬ್ರಹ್ಮಚರ್ಯವಿಘಾತಾಯ ತಸ್ಯ ಪಾರ್ಶ್ವೇ ಧ್ಯಾನನಿತಾತ್ಮನಃ ॥ ೧೪ ॥
ಬ್ರಹ್ಮಚರ್ಯಂ ತಪೋಮೂಲಂ ಯತಃ ಸಂಕೀರ್ತಿತಂ ದ್ವಿಜೈಃ ।
ತಸ್ಯಾಽಭಾವಾತ್ಪರಿಕ್ಲೇಶಃ ಕೇವಲಂ ನ ಫಲಂ ವ್ರತೇ ॥ ೧೫ ॥
ಏವಂ ತೇ ನಿಶ್ಚಯಂ ಕೃತ್ವಾ ಸಮಾಹೂಯ ತತಃ ಪರಂ ।
ರಂಭಾಮೂಚುರ್ಮಹೇಂದ್ರೇಣ ಸರ್ವೇ ದೇವಾಸ್ತದಾದರಾತ್ ॥ ೧೬ ॥
ಗಚ್ಛ ಶೀಘ್ರಂ ಮಹಾಭಾಗೇ ಜಾಬಾಲಿರ್ಯತ್ರ ತಿಷ್ಠತಿ ।
ಹಾಟಕೇಶ್ವರಜೇ ಕ್ಷೇತ್ರೇ ತಪೋ ವಿಘ್ನಾಯ ತಸ್ಯ ವೈ ॥ ೧೭ ॥
ತೇ ತೇ ಭಾವಾಃ ಪ್ರಯೋಕ್ತವ್ಯಾಃ ಕಥಾಸ್ತಾಸ್ತಾ ಮನೋಹರಾಃ ।
ವರ್ಧಯಂತೀ ತಥಾ ಚಿತ್ತೇ ತಸ್ಯ ಕಾಮಂ ನಿರರ್ಗಲಂ ॥ ೧೮ ॥

ರಂಭೋವಾಚ:—

ಸ ಮುನಿರ್ನ ವಿಜಾನಾತಿ ಕಾಮಧರ್ಮಂ ಸುರೇಶ್ವರ ।
ಅರಸಜ್ಞಂ ಕಥಂ ದೇವ ಕರಿಷ್ಯಾಮಿ ಸ್ಮರಾನ್ವಿತಂ ॥ ೧೯ ॥

---

೧೩. ಇವನ ತಪಸ್ಸು ಹೀಗೆಯೇ ನಿತ್ಯವೂ ವೃದ್ಧಿಗೊಂಡರೆ ಇವನು ನಿಜವಾಗಿಯೂ ಸ್ವರ್ಗರಾಜ್ಯದಿಂದ ಇಂದ್ರನನ್ನು ಉರುಳಿಸುವನು.

೧೪. ಆದುದರಿಂದ ಅಪ್ಸರೆಯರಲ್ಲಿ ಉತ್ತಮಳಾದ ರಂಭೆಯು ಧ್ಯಾನನಿರತನಾದ ಆ ಮುನಿಯ ಬ್ರಹ್ಮಚರ್ಯೆಯನ್ನು ಹಾಳುಮಾಡಲು ಅವನ ಬಳಿಗೆ ಹೋಗಲಿ.

೧೫. ದ್ವಿಜರು ಬ್ರಹ್ಮಚರ್ಯೆಯು ತಪಸ್ಸಿಗೆ ಕಾರಣವೆಂದು ಹೇಳಿರುವರು. ಅದಿಲ್ಲದಿರುವುದರಿಂದಲೇ ದುಃಖವೂ, ವ್ರತದಲ್ಲಿ ಫಲವೂ ಉಂಟಾಗುವುದಿಲ್ಲ.

೧೬. ಹೀಗೆ ಆ ದೇವತೆಗಳು ನಿಶ್ಚಯಿಸಿ ರಂಭೆಯನ್ನು ಕರೆದು ಪ್ರೀತಿಯಿಂದ ಇಂತೆಂದರು.

೧೭. "ಮಹಾತ್ಮಳೆ! ನೀನು ಜಾಬಾಲಿಯ ತಪಸ್ಸನ್ನು ಕೆಡಿಸಲು ಅವನಿರುವ ಹಾಟಕೇಶ್ವರಕ್ಷೇತ್ರಕ್ಕೆ ಶೀಘ್ರವಾಗಿ ತೆರಳು.

೧೮. ನೀನು ಅವನ ಮನಸ್ಸಿನಲ್ಲಿ ಕಾಮವನ್ನು ಅಡ್ಡಿಯಿಲ್ಲದಂತೆ ಉದ್ರೇಕಗೊಳಿಸಿ ಆಯಾ ಭಾವಗಳನ್ನು ಪ್ರಯೋಗಿಸು. ಮನೋಹರ ಕಥೆಗಳನ್ನೂ ಹೇಳು."

೧೯. ರಂಭೆಯು ಹೇಳುತ್ತಾಳೆ:—ಸುರರಾಜ! ಆ ಜಾಬಾಲಿ ಮುನಿಯು ಕಾಮಧರ್ಮವನ್ನರಿತವನಲ್ಲ. ಅಂತಹ ಅರಸಿಕನನ್ನು ನಾನು ಹೇಗೆ ಮನ್ಮಥನಿಗೆ ಅಧೀನನನ್ನಾಗಿ ಮಾಡಲಿ.

ಇಂದ್ರ ಉವಾಚ :—
ಏಷ ಯಾಸ್ಯತಿ ಮದ್ವಾಕ್ಯಾದ್ವಸಂತಸ್ತಸ್ಯ ಸನ್ನಿಧೌ ।
ಅಸ್ಯ ಸಂದರ್ಶನಾದೇವ ಭವಿಷ್ಯತಿ ಸ ಸಸ್ಮರಃ ॥ ೨೦ ॥
ತಸ್ಮಾದ್ಗಚ್ಛ ದ್ರುತಂ ತತ್ರ ಸಹಾಽನೇನ ವರಾನನೇ ।
ಸಂಸಿದ್ಧಿರ್ಜಾಯತೇ ಯೇನ ದೇವಕೃತ್ಯಂ ಭವೇದ್ದ್ರುತಂ ॥ ೨೧ ॥
ಅಥ ಸಾ ತಂ ಪ್ರಣಮ್ಯೋಚ್ಚೈಃ ಪ್ರಸ್ಥಿತಾ ಧರಣೀತಲಂ ।
ವಸಂತೇನ ಸಮಾಯುಕ್ತಾ ಜಾಬಾಲಿರ್ಯತ್ರ ತಿಷ್ಠತಿ ॥ ೨೨ ॥
ಅಥಾಕಸ್ಮಾದಶೋಕಸ್ಯ ಸಂಜಾತಃ ಪುಷ್ಪಸಂಚಯಃ ।
ತಿಲಕಸ್ಯ ಚ ಚೂತಸ್ಯ ಮಂಜರ್ಯಃ ಸಮುಪಸ್ಥಿತಾಃ ॥ ೨೩ ॥
ಶಿಶಿರೇ ಚ ಸರೋಜಾನಿ ವಿಕಾಸಂ ಪ್ರಾಪುರೇವ ಹಿ ।
ವವೌ ಚ ಸುರಭಿರ್ವಾಯುರ್ದಾಕ್ಷಿಣಾತ್ಯಃ ಸುಕಾಮದಃ ॥ ೨೪ ॥
ಏತಸ್ಮಿನ್ನಂತರೇ ಪ್ರಾಪ್ತಾ ರಂಭಾ ತತ್ರ ವರಾಪ್ಸರಾಃ ।
ಸಲಿಲಾಶಯತೀರಸ್ಥೋ ಜಾಬಾಲಿರ್ಯತ್ರ ತಿಷ್ಠತಿ ॥ ೨೫ ॥
ಅಕ್ಷಮಾಲಾಧೃತಕರೋ ಜಪನ್ಮಂತ್ರಮನೇಕಧಾ ।
ಅಭೀಷ್ಟಂ ಶ್ರದ್ಧಯಾ ಯುಕ್ತೋ ವಿಧಾಯ ಪಿತೃತರ್ಪಣಂ ॥ ೨೬ ॥

---

೨೦. ಇಂದ್ರನು ಹೇಳುತ್ತಾನೆ:—ಈ ವಸಂತನು ನನ್ನ ಮಾತಿನಿಂದ ಅವನ ಹತ್ತಿರಕ್ಕೆ ಹೋಗುವನು. ಇವನನ್ನು ನೋಡಿದ ಕೂಡಲೆ ಆ ಜಾಬಾಲಿಯು ಮನ್ಮಥನಿಂದ ಸಹಿತನಾಗುವನು.

೨೧. ಸುಂದರಿ! ಆದುದರಿಂದ ನೀನು ಶೀಘ್ರವಾಗಿ ಆ ಜಾಬಾಲಿಯ ಸಮೀಪಕ್ಕೆ ಹೋಗು. ಅದರಿಂದ ನಿನ್ನ ಪ್ರಯತ್ನವು ಕೈಗೂಡುವುದು. ದೇವತೆಗಳ ಕಾರ್ಯವೂ ಬೇಗನೆ ಆಗುವುದು.

೨೨. ಅನಂತರ ಆ ರಂಭೆಯು ಆ ಇಂದ್ರನನ್ನು ವಂದಿಸಿ ಭೂಮಿಗೆ ಹೊರಟು ಜಾಬಾಲಿಯಿರುವ ಸ್ಥಳದಲ್ಲಿ ವಸಂತನೊಡನೆ ಸೇರಿದಳು.

೨೩. ಆಗ ಅಕಸ್ಮಿಕವಾಗಿ ಅಶೋಕದ ಮರದಲ್ಲಿ ಹೂವುಗಳಾದುವು. ತಿಲಕ ಮತ್ತು ಮಾವಿನ ಮರಗಳಲ್ಲಿ ಹೂವಿನ ಗೊಂಚಲು ಕಾಣಿಸಿಕೊಂಡಿತು.

೨೪. ಶಿಶಿರರ್ತುವಿನಲ್ಲಿಯೂ ತಾವರೆ ಹೂವುಗಳು ಅರಳಿದುವು. ಕಾಮೋದ್ರೇಕಗೊಳಿಸುವ ಸುವಾಸನೆಯಾದ ದಕ್ಷಿಣದಿಕ್ಕಿನ ಗಾಳಿಯು ಬೀಸಿತು.

೨೫—೨೬. ಇಷ್ಟರಲ್ಲಿ ರಂಭೆಯು ಸರೋವರದ ದಡದಲ್ಲಿರುವವನೂ, ಜಪಮಾಲೆಯನ್ನು ಧರಿಸಿದ ಕೈಯುಳ್ಳವನೂ, ಅಭೀಷ್ಟವಾದ ಮಂತ್ರವನ್ನು ಜಪಿಸುವವನೂ, ಶ್ರದ್ಧೆಯಿಂದ ಪಿತೃತರ್ಪಣವನ್ನು ಮಾಡಿರುವವನೂ ಆದ ಜಾಬಾಲಿಯಿರುವ ಸ್ಥಳಕ್ಕೆ ಬಂದಳು.

ಅಥ ಸಂಪಶ್ಯತಸ್ತಸ್ಯ ಮುಕ್ತ್ವಾ ವಸ್ತ್ರಪರಿಗ್ರಹಂ ।
ಸ್ನಾನಾರ್ಥಂ ತಜ್ಜಲಂ ಸಾಽಥ ಪ್ರವಿವೇಶ ವರಾಪ್ಸರಾಃ ॥ ೨೭ ॥
ವಿವಸ್ತ್ರಾಂ ತಾಂ ಸಮಾಲೋಕ್ಯ ಸೋಽಪಿ ಯೌವನಶಾಲಿನೀಂ ।
ಯಾಮ್ಯಾನಿಲೇನ ಚ ಸ್ಪೃಷ್ಟಃ ಕಾಮಸ್ಯ ವಶಗೋಽಭವತ್ ॥ ೨೮ ॥
ತತಸ್ತಸ್ಯಾಽಭವತ್ಕಂಪಸ್ತತ್ಕ್ಷಣಾದೇವ ಸನ್ಮುನೇ ।
ಅಕ್ಷಮಾಲಾ ಕರಾಗ್ರಾಚ್ಚ ಪಪಾತ ಧರಣೀತಲೇ ॥ ೨೯ ॥
ಪುಲಕಃ ಸರ್ವಗಾತ್ರೇಷು ಸಂಜಜ್ಞೇಽತೀವ ದಾರುಣಃ ।
ಅಶ್ರುಪಾತಾಃ ಪತಂತಿಸ್ಮ ಕೋಷ್ಣಾಃ ಪ್ಲಾವಿತಭೂತಲಾಃ ॥ ೩೦ ॥
ಅಥ ತಂ ಕ್ಷುಭಿತಂ ಜ್ಞಾತ್ವಾ ಚಿತ್ತಜ್ಞಾ ಸಾ ವರಾಽಪ್ಸರಾಃ ।
ನಿರ್ಗತ್ಯ ಸಲಿಲಾತ್ತಸ್ಮಾಚ್ಚಕ್ರೇ ವಸ್ತ್ರಪರಿಗ್ರಹಂ ॥ ೩೧ ॥
ತತಸ್ತಸ್ಯಾಂತಿಕೇ ಗತ್ವಾ ಪ್ರಣಿಪತ್ಯ ಕೃತಾದರಾ ।
ಪ್ರೋವಾಚ ಮಧುರಂ ವಾಕ್ಯಂ ವರ್ಧಂತೀ ತಸ್ಯ ತನ್ಮತಂ ॥ ೩೨ ॥
ಆಶ್ರಮೇ ಸಕಲಂ ಬ್ರಹ್ಮನ್ ಕಚ್ಚಿತ್ತೇ ಕುಶಲಂ ಮುನೇ ।
ಸ್ವಾಧ್ಯಾಯೇ ತಪಸಿ ಪ್ರಾಜ್ಞ ಶಿಷ್ಯೇಷು ಮೃಗಪಕ್ಷಿಷು ॥ ೩೩ ॥

---

೨೭. ಅವಳು ಜಾಬಾಲಿಯು ನೋಡುತ್ತಿರುವಾಗಲೆ ಬಟ್ಟೆಯನ್ನು ಬಿಚ್ಚಿ ಸ್ನಾನಕ್ಕಾಗಿ ಆ ಸರೋವರದ ಜಲದಲ್ಲಿ ಪ್ರವೇಶಿಸಿದಳು.

೨೮. ಆಗ ದಕ್ಷಿಣ ಮಾರುತದಿಂದ ಸ್ಪರ್ಶಗೊಂಡ ಜಾಬಾಲಿಯು ಯುವತಿಯಾದ ಬತ್ತಲೆಯಾಗಿರುವ ರಂಭೆಯನ್ನು ಕಂಡು ಮದನಪರವಶನಾದನು.

೨೯. ಅನಂತರ ಅವನಿಗೆ ಕೂಡಲೆ ಕಂಪವುಂಟಾಯಿತು. ಜಪಮಾಲೆಯು ಅವನ ಕೈಯಿಂದ ಜಾರಿ ಭೂಮಿಯಲ್ಲಿ ಬಿದ್ದಿತು.

೩೦. ಅತಿ ಭಯಂಕರವಾದ ರೋಮಾಂಚವು ಶರೀರದಲ್ಲೆಲ್ಲ ಉಂಟಾಯಿತು. ಸ್ವಲ್ಪ ಉಷ್ಣವಾದ ಕಣ್ಣೀರು ಕೆಳಗೆ ಬಿದ್ದು ಭೂಮಿಯನ್ನು ನೆನಸಿತು.

೩೧. ತರುವಾಯ ಪರರ ಚಿತ್ತವನ್ನರಿತ ಆ ರಂಭೆಯು ಜಾಬಾಲಿಯು ಚಂಚಲಚಿತ್ತನಾಗಿರುವುದನ್ನು ತಿಳಿದು ಆ ಸರೋವರದ ನೀರಿನಿಂದ ಮೇಲಕ್ಕೆ ಬಂದು ಬಟ್ಟೆಯನ್ನುಟ್ಟುಕೊಂಡಳು.

೩೨. ಬಳಿಕ ಆ ಮುನಿಯ ಹತ್ತಿರ ಹೋಗಿ ಪ್ರೀತಿಯಿಂದ ನಮಸ್ಕರಿಸಿ ಕಾಮವನ್ನು ಹೆಚ್ಚಿಸುತ್ತ ಇಂಪಾಗಿ ಮಾತಾಡಿದಳು.

೩೩. ಮುನಿಯೆ! ನಿನ್ನ ಆಶ್ರಮದಲ್ಲಿ ವೇದಾಧ್ಯಯನ, ತಪಸ್ಸು, ಶಿಷ್ಯರು, ಮೃಗಪಕ್ಷಿಗಳು ಇವರಲ್ಲೆಲ್ಲ ಕ್ಷೇಮವೊ?

ಮುನಿರುವಾಚ :—

ಕುಶಲಂ ಮೇ ವರಾರೋಹೇ ಸರ್ವತ್ರೈವಾಽಧುನಾ ಸ್ಥಿತಂ ।
ವಿಶೇಷೇಣಾತ್ರ ಸಂಪ್ರಾಪ್ತಾ ಸರ್ವಲಕ್ಷಣಲಕ್ಷಿತಾ ॥ ೩೪ ॥
ಕಾ ತ್ವಂ ವದ ಮಹಾಭಾಗೇ ಮಮ ಮನ್ಮಥವರ್ಧನೀ ।
ಕಿಂ ದೇವೀ ವಾಽಸುರೀ ವಾ ಕಿಂ ಪನ್ನಗೀ ಕಿಂ ತು ಮಾನುಷೀ ॥ ೩೫ ॥
ನಿವೇದಯ ಶರೀರೇ ಮೇ ಕಿಂ ನ ಪಶ್ಯಸಿ ವೇಪಥುಂ ।
ನಿರರ್ಗಲಶ್ಚ ರೋಮಾಂಚೋ ಬಾಷ್ಪಪೂರಶ್ಚ ನೇತ್ರಜಃ ॥ ೩೬ ॥

ರಂಭೋವಾಚ :—

ಕಿಂ ತೇ ಗಾತ್ರಸ್ವಭಾವೋಽಯಂ ಕಿಂ ವಾಽನ್ಯೋ ವ್ಯಾಧಿಸಂಭವಃ ।
ಕಚ್ಚಿದೇವ ನ ತೇ ಸ್ವಾಸ್ಥ್ಯಂ ಪ್ರಪಶ್ಯಾಮಿ ಶರೀರಜಂ ॥ ೩೭ ॥

ಮುನಿರುವಾಚ :—

ನ ಮೇ ಗಾತ್ರಸ್ವಭಾವೋ ನ ವ್ಯಾಧಿಭಿಶ್ಚ ಸುಲೋಚನೇ ।
ಶೃಣುಷ್ವ ಕಾರಣಂ ಕೃತ್ಸ್ನಂ ಯೇನೇದೃಕ್ಸಂಸ್ಥಿತಂ ವಪುಃ ॥ ೩೮ ॥
ಯಾವತೀ ವರ್ತತೇ ವೇಲಾ ತವ ದರ್ಶನಸಂಭವಾ ।
ತಾವತ್ಕಾಲಮಿದಂ ರೂಪಂ ಮಮ ಗಾತ್ರಸಮುದ್ಭವಂ ॥ ೩೯ ॥

---

೩೪. ಮುನಿಯು ಹೇಳುತ್ತಾನೆ:—ಸುಂದರಿ ! ಸರ್ವಲಕ್ಷಣಗಳಿಂದ ಕೂಡಿದ ನೀನು ಇಲ್ಲಿಗೆ ಈಗ ಬಂದಿರುವುದರಿಂದ ನನಗೆ ಎಲ್ಲಾ ವಿಷಯಗಳಲ್ಲಿಯೂ ಕ್ಷೇಮವುಂಟಾಗಿರುವುದು.

೩೫. ಮಹಾತ್ಮಳೆ ! ನನಗೆ ಕಾಮವನ್ನು ಹೆಚ್ಚಿಸುವ ನೀನು ದೇವತಾ ಸ್ತ್ರೀಯೊ ? ಅಸುರಾಂಗನೆಯೊ ? ನಾಗನಾರಿಯೊ ? ಮನುಷ್ಯರಮಣಿಯೊ ? ಯಾರು ? ಹೇಳು.

೩೬. ನನ್ನ ಶರೀರದಲ್ಲಿ ನಡುಗುವಿಕೆ, ಅತಿಶಯ ರೋಮಾಂಚ, ಕಣ್ಣೀರು ಇವುಗಳನ್ನು ನೀನು ನೋಡುತ್ತಿಲ್ಲವೊ ? ಆದುದರಿಂದ ಬೇಗನೆ ತಿಳಿಸು.

೩೭. ರಂಭೆಯು ಹೇಳುತ್ತಾಳೆ :—ಇದು ನಿನ್ನ ಶರೀರದ ಸ್ವಭಾವವೊ ? ಅಥವಾ ಕಾಯಿಲೆಯಿಂದ ಹೀಗಾಗಿದೆಯೊ ? ನಿನ್ನ ಶರೀರವು ಸ್ವಸ್ಥವಾಗಿರುವಂತೆ ಕಾಣುವುದಿಲ್ಲ.

೩೮. ಮುನಿಯು ಹೇಳುತ್ತಾನೆ :—ಸುಂದರಿ ! ಇದು ನನ್ನ ಶರೀರದ ಸ್ವಭಾವವಲ್ಲ. ವ್ಯಾಧಿಯಿಂದಲೂ ಹೀಗಾಗಿಲ್ಲ. ನನ್ನ ದೇಹವು ಹೀಗಾಗಲು ಕಾರಣವನ್ನು ಹೇಳುವೆನು ಕೇಳು.

೩೯. ನಿನ್ನನ್ನು ನೋಡಿದ ಸಮಯದಿಂದ ನನ್ನ ದೇಹವು ಹೀಗಾಗಿರುವುದು.

ತದಹಂ ಮನ್ಮಥಾವಿಷ್ಟೋ ದರ್ಶನಾತ್ತವ ಶೋಭನೇ ।
ಬ್ರಹ್ಮಚರ್ಯಪರೋಪೀತ್ಥಂ ಮಹಾವ್ರತಧರೋಽಪಿ ಚ ॥ ೪೦ ॥

ರಂಭೋವಾಚ :—

ಯದ್ಯೇವಂ ಬ್ರಾಹ್ಮಣಶ್ರೇಷ್ಠ ಮಾಂ ಭಜಸ್ವ ಯಥಾ ಸುಖಂ ।
ನಾಽತ್ರ ಕಶ್ಚಿದ್ಭವೇದ್ದೋಷಃ ಪಣ್ಯನಾರೀ ಯತೋಽಸ್ಮ್ಯಹಂ ॥ ೪೧ ॥
ಸಾಧಾರಣಾ ವಯಂ ವಿಪ್ರ ಯತಃ ಸೃಷ್ಟಾಃ ಸ್ವಯಂಭುವಾ ।
ಸರ್ವೇಷಾಮೇವ ಲೋಕಾನಾಂ ವಿಶೇಷೇಣ ದ್ವಿಜನ್ಮನಾಂ ॥ ೪೨ ॥
ಅಹಂ ಚಾಽಪಿ ಸಮಾಲೋಕ್ಯ ತ್ವಾಂ ಮುನೇ ಮನ್ಮಥೋಪಮಂ ।
ಹತಾ ಕಾಮಶರೈಸ್ತೀಕ್ಷ್ಣೈರ್ನಚ ಗಂತುಂ ಸಮುತ್ಸಹೇ ॥ ೪೩ ॥
ಮಯಾ ದೃಷ್ಟಾಃ ಸುರಾಃ ಪೂರ್ವಂ ಯಕ್ಷಾ ವಿದ್ಯಾಧರಾಸ್ತಥಾ ।
ಸಿದ್ಧಾಶ್ಚ ಕಿನ್ನರಾ ನಾಗಾ ಗುಹ್ಯಕಾಃ ಕಿಮು ಮಾನುಷಾಃ ॥ ೪೪ ॥
ನೇದೃಗ್ರೂಪಂ ವಪುಸ್ತೇಷಾಮೇಕಸ್ಯಾಽಪಿ ವಿಲೋಕಿತಂ ।
ಮಧ್ಯೇ ಬ್ರಾಹ್ಮಣಶಾರ್ದೂಲ ತಸ್ಮಾದ್ಭಕ್ತಾಂ ಭಜಸ್ವ ಮಾಂ ॥ ೪೫ ॥
ಯೋ ನಾರೀಂ ಕಾಮಸಂತಪ್ತಾಂ ಸ್ವಯಂ ಪ್ರಾಪ್ತಾಂ ಪರಿತ್ಯಜೇತ್ ।
ಸ ಮೂರ್ಖಃ ಪಚ್ಯತೇ ಘೋರೇ ನರಕೇ ಶಾಶ್ವತೀಃ ಸಮಾಃ ॥ ೪೬ ॥

---

೪೦. ನಾನು ಬ್ರಹ್ಮಚಾರಿಯೂ, ಮಹಾವ್ರತವನ್ನು ಹಿಡಿದವನೂ ಆದರೂ ನಿನ್ನನ್ನು ನೋಡಿದ ಕೂಡಲೆ ಮನ್ಮಥನಿಗೆ ಅಧೀನನಾಗಿರುವೆನು.

೪೧. ರಂಭೆಯು ಹೇಳುತ್ತಾಳೆ :—ಬ್ರಾಹ್ಮಣೋತ್ತಮ ! ಹೀಗಾದರೆ ನನ್ನನ್ನು ಸುಖವಾಗುವಂತೆ ಭೋಗಿಸು. ನಾನು ವೇಶ್ಯೆಯಾದ್ದರಿಂದ ನಿನಗೆ ಯಾವ ದೋಷವೂ ಉಂಟಾಗುವುದಿಲ್ಲ.

೪೨. ಬ್ರಹ್ಮನು ಸಮಸ್ತ ಜನರಿಗಾಗಿಯೂ, ವಿಶೇಷವಾಗಿ ಬ್ರಾಹ್ಮಣರಿಗಾಗಿಯೂ ನಮ್ಮನ್ನು ಸೃಷ್ಟಿಸಿರುವುದರಿಂದ ನಾವು ಎಲ್ಲರಿಗೂ ಸಮಾನರು.

೪೩. ಮುನಿಯೆ ! ನಾನೂ ಮನ್ಮಥನಂತಿರುವ ನಿನ್ನನ್ನು ಕಂಡು ತೀಕ್ಷ್ಣವಾದ ಮನ್ಮಥಬಾಣಗಳಿಂದ ಹೊಡೆಯಲ್ಪಟ್ಟವಳಾಗಿ ಇಲ್ಲಿಂದ ಹೊರಡಲಪೇಕ್ಷಿಸುವುದಿಲ್ಲ.

೪೪. ನಾನು ಹಿಂದೆ ಸುರರು, ಯಕ್ಷರು, ವಿದ್ಯಾಧರರು, ಸಿದ್ಧರು, ಕಿನ್ನರರು, ನಾಗರು, ಗುಹ್ಯಕರು, ಮನುಷ್ಯರು ಇವರನ್ನು ನೋಡಿದ್ದೇನೆ.

೪೫. ಆದರೆ ಅವರಲ್ಲಿ ಒಬ್ಬನಲ್ಲಿಯೂ ಇಂತಹ ಸೌಂದರ್ಯವನ್ನು ಕಾಣಲಿಲ್ಲ. ಆದುದರಿಂದ ನಿನ್ನ ಭಕ್ತಳಾದ ನನ್ನನ್ನು ಭೋಗಿಸು.

೪೬. ಕಾಮಪೀಡಿತಳಾಗಿ ಹತ್ತಿರ ಬಂದ ನಾರಿಯನ್ನು ಪರಿತ್ಯಜಿಸುವ ಮೂರ್ಖನು ಘೋರ ನರಕದಲ್ಲಿ ಅನೇಕ ವರ್ಷಗಳ ಕಾಲ ವ್ಯಥೆಗೊಳ್ಳುವನು.

ಏವಮುಕ್ತ್ವಾ ತಯಾ ಸೋಽಥ ಪರಿಷ್ವಕ್ತೋ ಮಹಾಮುನಿಃ ।
ಅನಿಚ್ಛನ್ನಪಿ ವಾಕ್ಯೇನ ಹೃದಯೇನ ಚ ಸಸ್ಪೃಹಃ ॥ ೪೭ ॥
ತತೋ ಲತಾನಿಕುಂಜಂ ತಂ ಸಮಾನೀಯ ಮುನೀಶ್ವರಂ ।
ಕಾಮಶಾಸ್ತ್ರೋದಿತೈರ್ಭಾವೈ ರರಾಮ ಕೃತ್ರಿಮೈರ್ಮುನಿಂ ॥ ೪೮ ॥
ಏವಂ ತಯಾ ಸಮಂ ತತ್ರ ಸ್ಥಿತೋ ಯಾವದ್ದಿನಕ್ಷಯಂ ।
ಕಾಮಧರ್ಮಸಮಾಸಕ್ತಃ ಸಂತ್ಯಕ್ತಾಶೇಷಕರ್ಮಕಃ ॥ ೪೯ ॥
ತತೋ ನಿಷ್ಕಾಮತಾಂ ಪ್ರಾಪ್ತೋ ಲಜ್ಜಯಾ ಪರಿವಾರಿತಃ ।
ವಿಸಸರ್ಜ ಚ ತಾಂ ರಂಭಾಂ ಶೌಚಂ ಚಕ್ರೇ ತತಃ ಪರಂ ॥ ೫೦ ॥
ಸಾಽಪಿ ತೇನ ವಿನಿರ್ಮುಕ್ತಾ ಕೃತಕೃತ್ಯಾ ವಿಲಾಸಿನೀ ।
ಪ್ರಹೃಷ್ಟಾ ಪ್ರಯಯೌ ತತ್ರ ಯತ್ರ ದೇವಾಃ ಸವಾಸವಾಃ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಜಾಬಾಲಿಕ್ಷೋಭಣವರ್ಣನಂ" ನಾಮ
ತ್ರಿಚತ್ವಾರಿಂಶದುತ್ತರಶತತಮೋಽಧ್ಯಾಯಃ

---

೪೭. ಅವಳು ಹೀಗೆ ಹೇಳಿ ಮಾತಿನಿಂದ ಅಪೇಕ್ಷಿಸದಿದ್ದರೂ ಮನಸ್ಸಿನಲ್ಲಿ ಆಶೆಯುಳ್ಳ ಆ ಜಾಬಾಲಿ ಮುನಿಯನ್ನು ತಬ್ಬಿಕೊಂಡಳು.

೪೮. ಅನಂತರ ಆ ರಂಭೆಯು ಆ ಮುನಿವರ್ಯನನ್ನು ಲತೆಯ ಪೊದೆಗೆ ಕರೆದುಕೊಂಡು ಹೋಗಿ ಕೃತ್ರಿಮವಾದ ಕಾಮಶಾಸ್ತ್ರೋಕ್ತಭಾವಗಳಿಂದ ವಿನೋದಗೊಳಿಸಿದಳು.

೪೯. ಹೀಗೆ ಆ ಮುನಿಯು ಅವಳೊಡನೆ ಸಾಯಂಕಾಲದವರೆಗೆ ಕಾಮಧರ್ಮಾಸಕ್ತನಾಗಿ ಎಲ್ಲ ಕರ್ಮಗಳನ್ನು ತ್ಯಜಿಸಿ ವಿನೋದಪಟ್ಟನು.

೫೦. ಬಳಿಕ ನಿಷ್ಕಾಮನಾಗಿ ಲಜ್ಜೆಗೊಂಡು ಆ ರಂಭೆಯನ್ನು ತ್ಯಜಿಸಿ ಶೌಚವಿಧಿಯನ್ನು ಮಾಡಿದನು.

೫೧. ಅವನಿಂದ ಬಿಡಲ್ಪಟ್ಟ ಅವಳೂ ಕೃತಕೃತ್ಯಳಾಗಿ ಸಂತೋಷದಿಂದ ಇಂದ್ರಾದಿ ದೇವತೆಗಳೆಡೆಗೆ ಹೋದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಜಾಬಾಲಿಕ್ಷೋಭಣವರ್ಣನ"ವೆಂಬ
ನೂರನಲವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಶ್ಚತ್ವಾರಿಂಶದಧಿಕಶತತಮೋಽಧ್ಯಾಯಃ

## ಚಿತ್ರಾಂಗದೇಶ್ವರ ಫಲವತೀ ಜಾಬಾಲ್ಯಾಖ್ಯಾನವರ್ಣನಂ

**ಸೂತ ಉವಾಚ :—**

**ಸಾ ಗತ್ವಾ ತ್ರಿದಿವಂ ಪಶ್ಚಾತ್ಸಹಸ್ರಾಕ್ಷಂ ಸುರೈರ್ಯುತಂ ।**
**ಪ್ರೋವಾಚ ಭಗವನ್ ದಿಷ್ಟ್ಯಾ ಕ್ಷೋಭಿತೋಽಸೌ ಮಹಾಮುನಿಃ ॥ ೧ ॥**
**ತಪಸ್ತಸ್ಯ ಹತಂ ಕೃತ್ಸ್ನಂ ಯತ್ಕೃಚ್ಛ್ರೇಣ ಸಮಾಚಿತಂ ।**
**ತಥಾ ನಿಸ್ತೇಜಸತ್ವಂ ಚ ನೀತಸ್ತ್ವಂ ಸುಖಭಾಗ್ಭವ ॥ ೨ ॥**
**ಏವಮುಕ್ತ್ವಾಽಥ ಸಾ ರಂಭಾ ಶಂಸಿತಾ ನಿಖಿಲೈಃ ಸುರೈಃ ।**
**ಅಮೋಘರೇತಸಸ್ತಸ್ಯ ದಧ್ರೇ ಗರ್ಭಂ ನಿಜೋದರೇ ॥ ೩ ॥**
**ಜಾಬಾಲಿರಪಿ ಕೃತ್ವಾ ಚ ಪಶ್ಚಾತ್ತಾಪಮನೇಕಧಾ ।**
**ಭೂಯಸ್ತು ತಪಸಿ ಸ್ಥಿತ್ವಾ ಸ್ಥಿತಸ್ತತ್ರೈವ ಚಾಶ್ರಮೇ ॥ ೪ ॥**
**ತತಸ್ತು ದಶಮೇ ಮಾಸಿ ಸಂಪ್ರಾಪ್ತೇ ಸುಷುವೇ ಶುಭಾಂ ।**
**ಕನ್ಯಾಂ ಸರೋಜಪತ್ರಾಕ್ಷೀಂ ದಿವ್ಯಲಕ್ಷಣಲಕ್ಷಿತಾಂ ॥ ೫ ॥**
**ಅಥ ತಾಂ ಮಾನುಷೋದ್ಭೂತಾಂ ಮತ್ವಾ ತಸ್ಯೈವಚಾಶ್ರಮಂ ।**
**ಗತ್ವಾ ಮುನೇಶ್ಚ ಪ್ರತ್ಯಕ್ಷಂ ತಸ್ಯರ್ಷೇಶ್ಚೇದಮಬ್ರವೀತ್ ॥ ೬ ॥**

---

## ಕನ್ನಡದ ಅನುವಾದ

### ಚಿತ್ರಾಂಗದೇಶ್ವರ, ಫಲವತೀ, ಜಾಬಾಲ್ಯಾಖ್ಯಾನವರ್ಣನ

೧. ಸೂತನು ಹೇಳುತ್ತಾನೆ:—ಆ ರಂಭೆಯು ದೇವಲೋಕಕ್ಕೆ ತೆರಳಿ ದೇವತೆಗಳೊಡನೆ ಇರುವ ಇಂದ್ರನನ್ನು ಕುರಿತು ಇಂತೆಂದಳು. ಪೂಜ್ಯನೆ! ಅದೃಷ್ಟವಶದಿಂದ ಜಾಬಾಲಿ ಮುನಿಯನ್ನು ಚಪಲಚಿತ್ತನನ್ನಾಗಿ ಮಾಡಿದೆನು.

೨. ಅವನು ಕಷ್ಟದಿಂದ ಆರ್ಜಿಸಿದ ಸಂಪೂರ್ಣ ತಪಸ್ಸು ಹಾಳಾಯಿತು. ಹಾಗೆಯೇ ತೇಜೋರಹಿತನನ್ನಾಗಿ ಮಾಡಿರುವೆನು. ನೀನು ಸುಖಿಯಾಗಿರು.

೩. ಆ ರಂಭೆಯು ಹೀಗೆ ಹೇಳಲು ಸಮಸ್ತ ದೇವತೆಗಳು ಅವಳನ್ನು ಹೊಗಳಿದರು. ಅವಳು ಸಫಲರೇತಸ್ಸುಳ್ಳ ಆ ಮುನಿಯಿಂದ ಗರ್ಭಿಣಿಯಾದಳು.

೪. ಜಾಬಾಲಿಯೂ ಅನೇಕ ಪ್ರಕಾರ ಪಶ್ಚಾತ್ತಾಪಗೊಂಡು ಆ ಆಶ್ರಮದಲ್ಲಿಯೇ ನೆಲಿಸಿ ತಪವನ್ನಾಚರಿಸಿದನು.

೫. ಅನಂತರ ರಂಭೆಯು ಹತ್ತನೆ ತಿಂಗಳಲ್ಲಿ ಮಂಗಳಕರಳೂ, ತಾವರೆ ಹೂವಿನಂತೆ ಕಣ್ಣುಳ್ಳವಳೂ, ದಿವ್ಯಲಕ್ಷಣವುಳ್ಳವಳೂ ಆದ ಕನ್ಯೆಯನ್ನು ಪ್ರಸವಿಸಿದಳು.

೬. ಅವಳು ಮನುಷ್ಯಸಂಭವಳಾದ ಆ ಕನ್ಯೆಯನ್ನು ಜಾಬಾಲಿಯ ಆಶ್ರಮಕ್ಕೆ ತೆಗೆದುಕೊಂಡುಹೋಗಿ ಆ ಮುನಿಯ ಮುಂದೆ ಇರಿಸಿ ಹೀಗೆಂದಳು.

ತವವೀರ್ಯಸಮುದ್ಭೂತಾಮೇನಾಂ ಮಜ್ಜಠರೋಷಿತಾಂ ।
ಕನ್ಯಕಾಂ ಮುನಿಶಾರ್ದೂಲ ತಸ್ಮಾತ್ಪಾಲಯ ಸಾಂಪ್ರತಂ ॥ ೭ ॥
ನ ಸ್ವರ್ಗೇ ವಿದ್ಯತೇ ವಾಸೋ ಮಾನುಷಾಣಾಂ ಕಥಂಚನ ।
ಏತಸ್ಮಾತ್ಕಾರಣಾತ್ತುಭ್ಯಂ ಮಯಾ ಬ್ರಹ್ಮನ್ ಸಮರ್ಪಿತಾ ॥ ೮ ॥
ಏವಮುಕ್ತ್ವಾ ಯಯೌ ರಂಭಾ ಸತ್ವರಂ ತ್ರಿದಶಾಲಯಂ ।
ಜಾಬಾಲಿರಪಿ ತಾಂ ದೃಷ್ಟ್ವಾ ಕನ್ಯಕಾಂ ಸ್ನೇಹಮಾವಿಶತ್ ॥ ೯ ॥
ತತಸ್ತಾಂ ಕನ್ಯಕಾಂ ಕೃತ್ವಾ ಸುಷ್ಠು ಗುಪ್ತೇ ಲತಾಗೃಹೇ ।
ರಸೈರ್ನಿಷ್ಟಫಲೋದ್ಭೂತೈಃ ಪುಪೋಷ ಚ ದಿವಾನಿಶಂ ॥ ೧೦ ॥
ಸಾಽಪಿ ಕನ್ಯಾ ಪರಾಂ ವೃದ್ಧಿಂ ಶನೈರ್ಯಾತಿ ದಿನೇ ದಿನೇ ।
ಶುಕ್ಲಪಕ್ಷಂ ಸಮಾಸಾದ್ಯ ಯಥಾ ಚಂದ್ರಕಲಾ ದಿವಿ ॥ ೧೧ ॥
ಯಥಾ ಯಥಾಽಥ ಸಾ ಯಾತಿ ವೃದ್ಧಿಂ ಕಮಲಲೋಚನಾ ।
ತಥಾ ತಥಾಽಸ್ಯ ಸುಸ್ನೇಹೋ ಜಾಬಾಲೇರಪ್ಯವರ್ಧತ ॥ ೧೨ ॥
ಸಾ ಶಿಶುತ್ವೇ ಮೃಗೈಃ ಸಾರ್ಧಂ ಪಕ್ಷಿಭಿಶ್ಚ ಸುಶೋಭನಾ ।
ಕ್ರೀಡಾಂ ಚಕ್ರೇ ಸುವಿಶ್ರಬ್ಧೈರ್ವರ್ಧಯಂತೀ ಮುನೇರ್ಮುದಂ ॥ ೧೩ ॥
ತತೋ ಬಾಲ್ಯಂ ಪರಿತ್ಯಕ್ತ್ವಾ ವಲ್ಕಲಾವೃತಗಾತ್ರಿಕಾ ।
ತಸ್ಯರ್ಷೇಃ ಸರ್ವಕೃತ್ಯೇಷು ಸಾಹಾಯ್ಯಂ ಪ್ರಕರೋತಿ ಚ ॥ ೧೪ ॥

---

೭. ಮುನಿವರ್ಯನೆ! ಈ ಕನ್ಯೆಯು ನಿನ್ನ ವೀರ್ಯದಿಂದ ನನ್ನಲ್ಲಿ ಜನಿಸಿರುವುದರಿಂದ ಈಗ ನೀನೇ ಕಾಪಾಡು.

೮. ಮನುಷ್ಯರು ಸ್ವರ್ಗದಲ್ಲಿ ವಾಸಿಸಬಾರದಾದುದರಿಂದ ಈ ಕನ್ಯೆಯನ್ನು ನಾನು ನಿನಗೆ ಒಪ್ಪಿಸಿರುವೆನು.

೯. ರಂಭೆಯು ಹೀಗೆ ಹೇಳಿ ಶೀಘ್ರವಾಗಿ ಅಮರಾಲಯಕ್ಕೆ ತೆರಳಿದಳು. ಜಾಬಾಲಿಯೂ ಆ ಕನ್ಯೆಯನ್ನು ಕಂಡು ಸ್ನೇಹಗೊಂಡನು.

೧೦. ತರುವಾಯ ಆ ಜಾಬಾಲಿಯು ಆ ಕನ್ಯೆಯನ್ನು ಗುಪ್ತವಾದ ಲತಾಭವನದಲ್ಲಿರಿಸಿ ರುಚಿಯಾದ ಹಣ್ಣುಗಳ ರಸದಿಂದ ಹಗಲು ರಾತ್ರಿ ಪೋಷಿಸಿದನು.

೧೧–೧೨. ಆ ಕನ್ಯೆಯು ಆಕಾಶದಲ್ಲಿ ಶುಕ್ಲಪಕ್ಷದ ಚಂದ್ರನ ಕಲೆಯಂತೆ ಪ್ರತಿದಿನವೂ ಬೆಳೆಯುತ್ತ ಬಂದಳು. ಆ ಕಮಲಾಕ್ಷಿಯು ಬೆಳೆದಂತೆಲ್ಲ ಜಾಬಾಲಿಗೆ ಅವಳಲ್ಲಿ ಪ್ರೀತಿಯು ಹೆಚ್ಚಿತು.

೧೩. ಅವಳು ಬಾಲ್ಯದಲ್ಲಿ ವಿಶ್ವಾಸಗೊಂಡು ಮೃಗಪಕ್ಷಿಗಳೊಡನೆ ಜಾಬಾಲಿಗೆ ಸಂತೋಷವನ್ನು ಹೆಚ್ಚಿಸುತ್ತ ಆಡಿದಳು.

೧೪. ಅನಂತರ ಅವಳು ಬಾಲ್ಯವನ್ನು ತ್ಯಜಿಸಿ ನಾರುಡೆಯನ್ನುಟ್ಟು ಆ ಮುನಿಗೆ ಸಕಲ ಕಾರ್ಯಗಳಲ್ಲಿ ಸಹಾಯವನ್ನು ಮಾಡಿದಳು.

ಸಮಿತ್ಕುಶಾದಿ ಯತ್ಕಿಂಚಿತ್ಫಲಪುಷ್ಪಸಮನ್ವಿತಂ ।
ವನಾತ್ತದಾನಯಾಮಾಸ ತಸ್ಯ ಪ್ರೀತಿಮವರ್ಧಯತ್ ॥ ೧೫ ॥
ತತಃ ಕತಿಪಯಾಹಸ್ಯ ಫಲಾರ್ಥಂ ಸಾ ಮೃಗೇಕ್ಷಣಾ ।
ನಿದಾಘಸಮಯೇ ದೂರಂ ಸ್ವಾಶ್ರಮಾತ್ತ್ವಜಗಾಮ ಹ ॥ ೧೬ ॥
ಏತಸ್ಮಿನ್ನಂತರೇ ತತ್ರ ವಿಮಾನವರಮಾಶ್ರಿತಃ ।
ಪ್ರಾಪ್ತಶ್ಚಿತ್ರಾಂಗದೋ ನಾಮ ಗಂಧರ್ವಸ್ತ್ರಿದಿವೌಕಸಾಂ ॥ ೧೭ ॥
ತೇನ ಸಾ ವಿಜನೇ ಬಾಲಾ ಪೂರ್ಣಚಂದ್ರನಿಭಾನನಾ ।
ದೃಷ್ಟ್ವಾ ಚಾಂದ್ರಮಸೀ ಲೇಖಾ ಪತಿತೇವ ಧರಾತಲೇ ॥ ೧೮ ॥
ತತಃ ಕಾಮಪರೀತಾಂಗಃ ಸೋಽವತೀರ್ಯ ಧರಾತಲಂ ।
ವಿಮಾನಾನ್ಮಧುರೈರ್ವಾಕ್ಯೈಸ್ತಾಮುವಾಚ ಕೃತಾಂಜಲಿಃ ॥ ೧೯ ॥
ಕಾ ತ್ವಂ ಕಮಲಗರ್ಭಾಭಾ ನಿರ್ಜನೇಽಥ ಮಹಾವನೇ ।
ಭ್ರಮಸ್ಯೇಕಾಕಿನೀ ಬಾಲೇ ವನಮಧ್ಯೇ ಸುಲೋಚನೇ ॥ ೨೦ ॥

ಕನ್ಯೋವಾಚ :—

ಅಹಂ ಫಲವತೀ ನಾಮ ಜಾಬಾಲೇರ್ದುಹಿತಾ ಮುನೇ ।
ಫಲಪುಷ್ಪಾರ್ಥಮಾಯಾತಾ ತದರ್ಥಮಿಹ ಕಾನನೇ ॥ ೨೧ ॥

---

೧೫. ಕಾಡಿನಿಂದ ಸಮಿತ್ತು, ದರ್ಭೆ, ಹಣ್ಣು, ಹೂವುಗಳನ್ನು ತಂದು ಆ ಮುನಿಗೆ ಪ್ರೀತಿಯನ್ನು ಹೆಚ್ಚಿಸಿದಳು.

೧೬. ಅವಳು ಕೆಲವು ದಿನಗಳ ಮೇಲೆ ಬಿಸಿಲು ಕಾಲದಲ್ಲಿ ಫಲವನ್ನು ತರಲು ತನ್ನ ಆಶ್ರಮದಿಂದ ದೂರ ಹೋದಳು.

೧೭. ಇಷ್ಟರಲ್ಲಿ ಅಲ್ಲಿಗೆ ಚಿತ್ರಾಂಗದನೆಂಬ ಗಂಧರ್ವನು ವಿಮಾನದಲ್ಲಿ ಕುಳಿತು ಬಂದನು.

೧೮. ಅವನು ನಿರ್ಜನಾರಣ್ಯದಲ್ಲಿ ಧರಣಿಯಲ್ಲಿ ಬಿದ್ದ ಚಂದ್ರನ ಕಲೆಯಂತೆ ಇರುವ ಆ ಚಂದ್ರಮುಖಿಯಾದ ಬಾಲೆಯನ್ನು ಕಂಡನು.

೧೯. ಅದರಿಂದ ಕಾಮಪೀಡಿತನಾದ ಆ ಗಂಧರ್ವನು ವಿಮಾನದಿಂದ ಭೂಮಿಗಿಳಿದು ಕೈಜೋಡಿಸಿಕೊಂಡು ಇಂಪಾದ ಮಾತುಗಳಿಂದ ಇಂತೆಂದನು.

೨೦. ಸುಂದರಿ! ನಿರ್ಜನವಾದ ವನಮಧ್ಯದಲ್ಲಿ ಒಬ್ಬಂಟಿಗಳಾಗಿ ಸಂಚರಿಸುತ್ತಿರುವ ತಾವರೆ ಹೂವಿನ ಒಳಭಾಗದಂತೆ ಕಾಂತಿಯುಳ್ಳ ನೀನಾರು?

೨೧. ಕನ್ಯೆಯು ಹೇಳುತ್ತಾಳೆ :—ನಾನು ಜಾಬಾಲಿಯ ತನಯಳಾದ ಫಲವತಿಯೆಂಬುವಳು. ಆ ಮುನಿಗೆ ಹಣ್ಣು, ಹೂವುಗಳನ್ನು ತೆಗೆದುಕೊಂಡು ಹೋಗುವುದಕ್ಕಾಗಿ ಈ ಕಾಡಿಗೆ ಬಂದಿರುವೆನು.

**ಚಿತ್ರಾಂಗದ ಉವಾಚ :—**

**ಕುಮಾರಬ್ರಹ್ಮಚಾರೀ ಸ ಶ್ರೂಯತೇ ಮುನಿಸತ್ತಮಃ ।**
**ತತ್ಕಥಂ ತಸ್ಯ ವಾಮೋರು ತ್ವಂ ಜಾತಾ ಭಾರ್ಯಯಾ ವಿನಾ ॥ ೨೨ ॥**

**ಕನ್ಯೋವಾಚ :—**

**ಸತ್ಯಮೇತನ್ಮಹಾಭಾಗ ನಾಽಸ್ತಿ ದಾರಪರಿಗ್ರಹಃ ।**
**ತಸ್ಯರ್ಷೇಃ ಕಿಂ ತು ಸಂಜಾತಾ ಯಥಾ ತನ್ಮೇಽವಧಾರಯ ॥ ೨೩ ॥**
**ರಂಭಾ ನಾಮಾಽಪ್ಸರಾಸ್ತೇನ ಪುರಾ ದೃಷ್ಟ್ವಾ ಸುರಾಂಗನಾ ।**
**ತತಃ ಕಾಮಪರೀತೇನ ಸೇವಿತಾ ಚ ಯಥಾಸುಖಂ ॥ ೨೪ ॥**
**ತತಸ್ತದುದರಾಜ್ಜಾತಾ ದೇವಲೋಕೇ ಮಹತ್ತರೇ ।**
**ತಯಾಽಪಿ ಚೇಹ ತಸ್ಯರ್ಷೇರ್ಭಾರ್ಯ ಏವ ನಿಯೋಜಿತಾ ॥ ೨೫ ॥**
**ಏವಂ ಸ ಮೇ ಪಿತಾ ಜಾತೋ ಜಾಬಾಲಿರ್ಮುನಿಸತ್ತಮಃ ।**
**ಪೋಷಿತಾಽಹಂ ತತಸ್ತೇನ ನಾನಾಫಲಸಮುದ್ಭವೈಃ ॥ ೨೬ ॥**
**ತತಃ ಫಲವತೀ ನಾಮ ಕೃತಂ ತೇನ ಮಹಾತ್ಮನಾ ।**
**ಮಮಾಽನುರೂಪಮೇತದ್ಧಿ ಯನ್ಮಾಂ ತ್ವಂ ಪರಿಪೃಚ್ಛಸಿ ॥ ೨೭ ॥**

**ಚಿತ್ರಾಂಗದ ಉವಾಚ :—**

**ತವ ರೂಪಂ ಸಮಾಲೋಕ್ಯ ಕಾಮಸ್ಯಾಽಹಂ ವಶಂ ಗತಃ ।**
**ತಸ್ಮಾದ್ಭಜಸ್ವ ಮಾಂ ಭೀರು ನೋಚೇದ್ಯಾಸ್ಯಾಮಿ ಸಂಕ್ಷಯಂ ॥ ೨೮ ॥**

---

೨೨. ಚಿತ್ರಾಂಗದನು ಹೇಳುತ್ತಾನೆ:—ಆ ಮುನಿವರ್ಯನು ಕುಮಾರ ಬ್ರಹ್ಮಚಾರಿಯೆಂದು ಕೇಳಿದ್ದೇನೆ. ಹೆಂಡತಿಯಿಲ್ಲದೆ ಅವನಿಗೆ ನೀನು ಹೇಗೆ ಮಗಳಾದೆ?

೨೩. ಕನ್ಯೆಯು ಹೇಳುತ್ತಾಳೆ:—ಮಹಾತ್ಮನೆ! ಇದು ನಿಜ. ಅವನಿಗೆ ಹೆಂಡತಿಯಿಲ್ಲ. ಆದರೆ ನಾನು ಹೇಗೆ ಹುಟ್ಟಿದೆ ಎಂಬುದನ್ನು ನನ್ನಿಂದ ತಿಳಿ.

೨೪-೨೫. ಆ ಜಾಬಾಲಿಯು ಹಿಂದೆ ರಂಭೆಯೆಂಬ ಸುರನಾರಿಯನ್ನು ನೋಡಿ ಕಾಮೋದ್ರಿಕ್ತನಾಗಿ ಅವಳೊಡನೆ ಸೇರಿ ಸುಖಗೊಂಡನು. ಅನಂತರ ಅವಳು ತನ್ನ ಹೊಟ್ಟೆಯಲ್ಲಿ ಸ್ವರ್ಗದಲ್ಲಿ ಜನಿಸಿದ ನನ್ನನ್ನು ಆ ಮುನಿಗೆ ಒಪ್ಪಿಸಿದಳು.

೨೬. ಆ ಜಾಬಾಲಿ ಮುನಿವರ್ಯನು ಹೀಗೆ ನನಗೆ ತಂದೆಯಾಗಿ ಬಗೆ ಬಗೆಯ ಹಣ್ಣುಗಳ ರಸಗಳಿಂದ ನನ್ನನ್ನು ಪೋಷಿಸಿದನು.

೨೭. ಅನಂತರ ಅವನು ನನಗೆ ಯೋಗ್ಯವಾದ ಫಲವತಿಯೆಂಬ ಹೆಸರನ್ನಿಟ್ಟನು. ನೀನು ಇನ್ನೇನನ್ನು ಕೇಳುವೆ?

೨೮. ಚಿತ್ರಾಂಗದನು ಹೇಳುತ್ತಾನೆ:—ಭಯಶೀಲಳೆ! ನಾನು ನಿನ್ನ ರೂಪವನ್ನು ಕಂಡು ಕಾಮವಶನಾಗಿರುವೆನು. ಆದುದರಿಂದ ನೀನು ನನ್ನನ್ನು ಸೇವಿಸು. ಹಾಗೆ ಮಾಡದಿದ್ದರೆ ನಾನು ಮಡಿಯುವೆನು.

ಅಹಂ ಚಿಂತ್ರಾಂಗದೋ ನಾಮ ಗಂಧರ್ವಸ್ತ್ರಿದಿವೌಕಸಾಂ ।
ತೀರ್ಥಯಾತ್ರಾಕೃತೇ ಪ್ರಾಪ್ತಃ ಕ್ಷೇತ್ರೇಽಸ್ಮಿಂಚ್ಛ್ರದ್ಧಯಾನ್ವಿತಃ ॥ ೨೯ ॥

ಕನ್ಯೋವಾಚ :—

ಕುಮಾರಧರ್ಮಿಣೀ ಚಾಽಹಮದ್ಯಾಽಪಿ ವಶಗಾ ಪಿತುಃ ।
ಕಾಮಧರ್ಮಂ ನ ಜಾನಾಮಿ ಚಿತ್ರಾಂಗದ ಕಥಂಚನ ॥ ೩೦ ॥
ತಸ್ಮಾತ್ತ್ವಾರ್ಥಯ ಮೇ ತಾತಂ ಸ ಮಾಂ ತುಭ್ಯಂ ಪ್ರದಾಸ್ಯತಿ ।
ಅನುರೂಪಾಯ ಯೋಗ್ಯಾಯ ತರುಣಾಯ ಮನಸ್ವಿನೀಂ ॥ ೩೧ ॥
ಮಮಾಽಪಿ ರುಚಿತಂ ಚಿತ್ತೇ ತವ ವಾಕ್ಯಮಿದಂ ಶುಭಂ ।
ಧನ್ಯಾಽಹಂ ಯದಿ ತೇ ಕಂಠಮಾಲಿಂಗಾಮಿ ಯಥೇಚ್ಛಯಾ ॥ ೩೨ ॥

ಚಿತ್ರಾಂಗದ ಉವಾಚ :—

ನ ಶಕ್ನೋಮಿ ಮಹಾಭಾಗೇ ತಾವತ್ಕಾಲಂ ಪ್ರತೀಕ್ಷಿತುಂ ।
ಮಾಂ ದಹತ್ಯೇಷ ಗಾತ್ರೋತ್ಥಃ ಸುಮಹಾನ್ ಕಾಮಪಾವಕಃ ॥ ೩೩ ॥
ತಸ್ಮಾತ್ಕುರು ಪ್ರಸಾದಂ ಮೇ ರತಿದಾನೇನ ಶೋಭನೇ ।
ಕೋ ಜಾನಾತಿ ಹಿ ತಚ್ಚಿತ್ತಂ ಕೀದೃಗ್ರೂಪಂ ಭವಿಷ್ಯತಿ ॥ ೩೪ ॥

ಕನ್ಯೋವಾಚ :—

ಏವಂ ತೇ ವರ್ತಮಾನಸ್ಯ ಮಮ ತಾತಃ ಪ್ರಕೋಪತಃ ।
ದಹಿಷ್ಯತಿ ನ ಸಂದೇಹಃ ಶಾಪಂ ದತ್ವಾ ಸುದಾರುಣಂ ॥ ೩೫ ॥

---

೨೯. ಚಿತ್ರಾಂಗದನೆಂಬ ಗಂಧರ್ವನಾದ ನಾನು ತೀರ್ಥಯಾತ್ರೆಗಾಗಿ ಶ್ರದ್ಧೆಯಿಂದ ಈ ಕ್ಷೇತ್ರಕ್ಕೆ ಬಂದೆನು.

೩೦. ಕನ್ಯೆಯು ಹೇಳುತ್ತಾಳೆ :—ಚಿತ್ರಾಂಗದ! ತಂದೆಯ ವಶದಲ್ಲಿರುವ ಕುಮಾರಧರ್ಮಿಣಿಯಾದ ನಾನು ಕಾಮಧರ್ಮವನ್ನರಿಯೆನು.

೩೧. ಆದುದರಿಂದ ನೀನು ನನ್ನ ತಂದೆಯನ್ನು ಕೇಳು. ಅವನು ಅನುರೂಪನೂ, ಯೋಗ್ಯನೂ, ಯುವಕನೂ ಆದ ನಿನಗೆ ನನ್ನನ್ನು ಕೊಡುವನು.

೩೨. ನಿನ್ನ ಈ ಶುಭನುಡಿಯು ನನ್ನ ಮನಸ್ಸಿಗೆ ಇಷ್ಟವಾಗಿದೆ. ನಾನು ನಿನ್ನ ಕಂಠವನ್ನು ಸ್ವೇಚ್ಛೆಯಾಗಿ ಆಲಿಂಗಿಸುವವಳಾದರೆ ಧನ್ಯಳು.

೩೩. ಚಿತ್ರಾಂಗದನು ಹೇಳುತ್ತಾನೆ:—ಭಾಗ್ಯಶಾಲಿನಿಯೆ! ನಾನು ಅಷ್ಟು ಕಾಲವನ್ನು ನಿರೀಕ್ಷಿಸಲು ಸಮರ್ಥನಲ್ಲ. ನನ್ನನ್ನು ಶರೀರದಲ್ಲಿ ಹುಟ್ಟಿದ ಮನ್ಮಥಾಗ್ನಿಯು ಸುಡುತ್ತಿದೆ.

೩೪. ಮಂಗಳಕರಳೆ! ಆದುದರಿಂದ ನೀನು ನನಗೆ ರತಿಸುಖವನ್ನಿತ್ತು ಅನುಗ್ರಹಿಸು. ಆ ಮುನಿಯ ಮನಸ್ಸು ಹೇಗಿರುವುದೆಂದು ಯಾರು ತಿಳಿದಿದ್ದಾರೆ?

೩೫. ಕನ್ಯೆಯು ಹೇಳುತ್ತಾಳೆ :—ಹೀಗೆ ಅಕಾರ್ಯಪ್ರವೃತ್ತನಾದ ನಿನ್ನನ್ನು ನನ್ನ ತಂದೆಯು ಕೋಪದಿಂದ ಕಠಿನ ಶಾಪವನ್ನಿತ್ತು ದಹಿಸುವನು.

**ಚಿತ್ರಾಂಗದ ಉವಾಚ :—**

**ತವ ತಾತಃ ಸ ಕಾಲೇನ ಮಾಂ ದಹಿಷ್ಯತಿ ಮಾನದೇ ।**
**ಕಾಮಾಽನಲಃ ಪುನಃ ಸದ್ಯ ಏಷ ಭಸ್ಮ ಕರಿಷ್ಯತಿ ॥ ೩೬ ॥**
**ಏವಮುಕ್ತ್ವಾಽಥ ತಾಂ ಬಾಲಾಂ ವೇಪಮಾನಾಂ ತ್ರಪಾವತೀಂ ।**
**ಗೃಹೀತ್ವಾ ದಕ್ಷಿಣೇ ಪಾಣೌ ಪ್ರವಿವೇಶ ಸುರಾಲಯಂ ॥ ೩೭ ॥**
**ತತ್ರ ತಾಂ ರಮಯಾಮಾಸ ತದಾ ಕಾಮಪ್ರಪೀಡಿತಃ ।**
**ತತ್ಕಾಲಜಾತರಾಗಾಂಧಾಂ ನಿರ್ಲಜ್ಜತ್ವಮುಪಾಗತಾಂ ॥ ೩೮ ॥**
**ಏವಂ ತಸ್ಯಾಃ ಸಮಂ ತೇನ ಸ್ಥಿತಾಯಾ ದಿವಸೋ ಗತಃ ।**
**ನಿಮೇಷವನ್ಮುನಿಶ್ರೇಷ್ಠಾಸ್ತತಶ್ಚಾಸ್ತಂ ಗತೋ ರವಿಃ ॥ ೩೯ ॥**
**ಏತಸ್ಮಿನ್ನಂತರೇ ವಿಪ್ರೋ ಜಾಬಾಲಿರ್ದುಃಖಸಂಯುತಃ ।**
**ಅನಾಯಾತಾಂ ಸುತಾಂ ಜ್ಞಾತ್ವಾ ಪರಿಬಭ್ರಾಮ ಸರ್ವತಃ ॥ ೪೦ ॥**
**ಅಹೋ ಸಾ ದುಹಿತಾ ಮಹ್ಯಂ ಕಿಮು ವ್ಯಾಲೈಃ ಪ್ರಭಕ್ಷಿತಾ ।**
**ವೃಕ್ಷಂ ಕಂಚಿತ್ಸಮಾರೂಢಾ ಪತಿತಾ ಧರಣೀತಲೇ ॥ ೪೧ ॥**
**ಕಿಂ ವಾ ಜಲಾಶಯಂ ಕಂಚಿತ್ಪ್ರಾಪ್ಯ ಗಾಧಮಜಾನತೀ ।**
**ನಿಮಗ್ನಾ ತತ್ರ ಸಾ ಬಾಲಾ ಸಂಪ್ರವಿಷ್ಟಾ ಜಲಾರ್ಥಿನೀ ॥ ೪೨ ॥**

---

೩೬. ಚಿತ್ರಾಂಗದನು ಹೇಳುತ್ತಾನೆ:—ಮಾನದಾತೆಯೆ ! ನಿನ್ನ ಆ ತಂದೆಯು ನನ್ನನ್ನು ಕಾಲಾಂತರದಲ್ಲಿ ಸುಡುವನು. ಈ ಕಾಮಾಗ್ನಿಯು ಈಗಲೇ ನನ್ನನ್ನು ಸುಡುತ್ತಿರುವುದು.

೩೭. ಚಿತ್ರಾಂಗದನು ಹೀಗೆ ಹೇಳಿ ನಡುಗುತ್ತಿರುವ ಲಜ್ಜೆಯುಳ್ಳ ಆ ಬಾಲೆಯನ್ನು ಬಲಗೈಯಲ್ಲಿ ಹಿಡಿದುಕೊಂಡು ದೇವಲೋಕವನ್ನು ಸೇರಿದನು.

೩೮. ಕಾಮಪೀಡಿತನಾದ ಆ ಗಂಧರ್ವನು ಅಲ್ಲಿ ಆ ಸಮಯದಲ್ಲಿ ಅನುರಾಗಗೊಂಡು ಲಜ್ಜೆಯನ್ನು ತ್ಯಜಿಸಿದ ಅವಳೊಡನೆ ರತಿಸುಖವನ್ನನುಭವಿಸಿದನು.

೩೯. ಹೀಗೆ ಅವಳು ಅವನೊಡನೆ ಇರಲು ಆ ದಿನ ನಿಮಿಷದಂತೆ ಕಳೆಯಿತು. ಅನಂತರ ರವಿಯು ಅಸ್ತಂಗತನಾದನು.

೪೦. ಈ ಸಮಯದಲ್ಲಿ ಜಾಬಾಲಿ ಮುನಿವರ್ಯನು ಮಗಳು ಬಾರದಿರುವುದನ್ನರಿತು ಸುತ್ತಲೂ ಸಂಚರಿಸಿದನು.

೪೧. ಅಯ್ಯೋ ! ಆ ನನ್ನ ಮಗುವು ನನಗಾಗಿ ಕ್ರೂರಮೃಗಗಳಿಂದ ಭಕ್ಷಿತಳಾದಳೊ ? ಅಥವಾ ಯಾವುದಾದರೂ ಮರವನ್ನೇರಿ ಕೆಳಗೆ ಭೂಮಿಯಲ್ಲಿ ಬಿದ್ದಳೊ ?

೪೨. ಅಥವಾ ನೀರಿಗಾಗಿ ಯಾವುದಾದರೂ ಒಂದು ಆಳವಾದ ಕೆರೆಯನ್ನಿಳಿದು ಅಲ್ಲಿಯೇ ಮುಳುಗಿಹೋದಳೊ ?

ಏವಂ ಸ ಪ್ರಲಪನ್ ವಿಪ್ರೋ ಬಭ್ರಾಮ ಗಹನೇ ವನೇ ।
ಕುಶಕಂಟಕವಿದ್ಧಾಂಗಃ ಕ್ಷುತ್ಪಿಪಾಸಾಸಮಾಕುಲಃ ॥ ೪೩ ॥
ಯಂ ಯಂ ಶೃಣೋತಿ ಶಬ್ದಂ ಸ ಮೃಗಪಕ್ಷಿಸಮುದ್ಭವಮ್ ।
ರಜನ್ಯಾಂ ತತ್ರ ನಿರ್ಯಾತಿ ಮತ್ವಾ ಫಲವತೀಂ ಚ ತಾಮ್ ॥ ೪೪ ॥
ಅಥ ಕ್ರಮಾತ್ಸಮಾಯಾತೋ ಹರಹರ್ಮ್ಯಂ ಸ ಸನ್ಮುನಿಃ ।
ಯತ್ರ ಚಿತ್ರಾಂಗದೋಪೇತಾ ಸಾ ಸಂತಿಷ್ಠತಿ ಕನ್ಯಕಾ ॥ ೪೫ ॥
ನಿಃಶಂಕಾ ಜಲ್ಪಮಾನಾ ಚ ರಾಗವಾಕ್ಯಾನ್ಯನೇಕಶಃ ।
ಅನರ್ಹಾಣಿ ಕುಮಾರೀಣಾಂ ಬ್ರಹ್ಮಜಾನಾಂ ವಿಶೇಷತಃ ॥ ೪೬ ॥
ತತಃ ಸ ಸುಚಿರಂ ಶ್ರುತ್ವಾ ದೂರಸ್ಥೋ ವಿಸ್ಮಯಾನ್ವಿತಃ ।
ಕುಮಾರ್ಯಾಶ್ಚೇಷ್ಟಿತಂ ದೃಷ್ಟ್ವಾ ಕೋಪಸಂರಕ್ತಲೋಚನಃ ॥ ೪೭ ॥
ಅಥ ದುದ್ರಾವ ವೇಗೇನ ಗೃಹ್ಯ ಕಾಷ್ಠಸಮುಚ್ಚಯಮ್ ।
ದ್ವಾಭ್ಯಾಮೇವ ವಿನಾಶಾಯ ಭರ್ತ್ಸಮಾನೋ ಮುಹುರ್ಮುಹುಃ ॥ ೪೮ ॥
ಧಿಗ್ಧಿಕ್ಪಾಪಸಮಾಚಾರೇ ಕೌಮಾರ್ಯಂ ದೂಷಿತಂ ತ್ವಯಾ ।
ಲಾಂಛನಂ ಚ ಸಮಾನೀತಂ ಮಮ ಲೋಕತ್ರಯೇಽಪಿ ಚ ॥ ೪೯ ॥

---

೪೩. ಆ ಬ್ರಾಹ್ಮಣನು ಹೀಗೆ ಗೋಳಾಡುತ್ತ ಆ ಗೊಂಡಾರಣ್ಯದಲ್ಲಿ ದರ್ಭೆ, ಮುಳ್ಳುಗಳಿಂದ ಚುಚ್ಚಲ್ಪಟ್ಟವನೂ, ಹಸಿವು ಬಾಯಾರಿಕೆಗಳಿಂದ ವ್ಯಾಕುಲಗೊಂಡವನೂ ಆಗಿ ಸಂಚರಿಸಿದನು.

೪೪. ಅವನು ರಾತ್ರಿವೇಳೆ ಮೃಗಪಕ್ಷಿಗಳ ಯಾವ ಯಾವ ಶಬ್ದವನ್ನು ಕೇಳುವನೊ, ಅಲ್ಲಿಗೆ ಫಲವತಿಯು ಬಂದಳೆಂದು ಹೋಗುವನು.

೪೫. ತರುವಾಯ ಆ ಜಾಬಾಲಿ ಮುನಿಯು ಕ್ರಮದಿಂದ ಆ ಕನ್ಯೆಯು ಚಿತ್ರಾಂಗದನೊಡನೆ ನೆಲೆಸಿದ್ದ ಹರನ ಪ್ರಾಸಾದಕ್ಕೆ ಬಂದನು.

೪೬. ಅಲ್ಲಿ ಅವಳು ಭಯವಿಲ್ಲದೆ ಬ್ರಾಹ್ಮಣಕುಮಾರಿಯರಿಗೆ ಅನುಚಿತವಾದ ಪ್ರೇಮ ವಾಕ್ಯಗಳನ್ನಾಡುತ್ತಿದ್ದಳು.

೪೭–೪೮. ತರುವಾಯ ಆ ಮುನಿಯು ದೂರದಲ್ಲಿ ನಿಂತು ಬಹಳ ಹೊತ್ತು ಆ ಮಾತುಗಳನ್ನು ಕೇಳಿ, ಕಾರ್ಯವನ್ನು ನೋಡಿ ಆಶ್ಚರ್ಯಗೊಂಡು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಕಟ್ಟಿಗೆಗಳನ್ನು ತೆಗೆದುಕೊಂಡು ಅವರಿಬ್ಬರನ್ನು ಕೊಲ್ಲುವುದಕ್ಕಾಗಿ ಹೀಗೆ ಬೆದರಿಸುತ್ತ ವೇಗದಿಂದ ಓಡಿದನು.

೪೯–೫೦. ಎಲೌ ಪಾಪಾಚಾರಳೆ! ನೀನು ಕುಮಾರೀತನವನ್ನು ಕೆಡಿಸಿಕೊಂಡಿರುವೆ. ನೀಚಳೆ! ನೀನು ಪತಿಯನ್ನು ಹೊಂದಿ ಈ ಅಕಾರ್ಯದಿಂದ

**ನಿತರಾಂ ಪತಿಮಾಸಾದ್ಯ ಕರ್ಮಣಾಽನೇನ ಚಾಽಧಮೇ ।**
**ತಸ್ಮಾದನೇನ ಪಾಪೇನ ಯುಕ್ತಾಂ ತ್ವಾಂ ನಾಶಯಾಮ್ಯಹಂ ॥ ೫೦ ॥**
**ಏವಮುಕ್ತ್ವಾ ಪ್ರಹಾರಂ ಸ ಯಾವತ್ಕ್ಷಿಪತಿ ಸನ್ಮುನಿಃ ।**
**ತಾವಚ್ಚಿತ್ರಾಂಗದೋ ನಷ್ಟೋ ವ್ಯೋಮಮಾರ್ಗೇಣ ಸತ್ವರಂ ॥ ೫೧ ॥**
**ವಿವಸ್ತ್ರಾ ಸಾಽಪಿ ತತ್ರೈವ ಖಿನ್ನಾಂಗೀ ಕಾಮಸೇವಯಾ ।**
**ನ ಶಶಾಕ ಕ್ವಚಿದ್ಗಂತುಂ ಸಮುತ್ಥಾಯ ತತಃ ಕ್ಷಿತೌ ॥ ೫೨ ॥**
**ತತಃ ಕಾಷ್ಠಪ್ರಹಾರೌಘೈರ್ಹತ್ವಾ ತಾಂ ಪತಿತಾಂ ಕ್ಷಿತೌ ।**
**ಮೃತಾಮಿತಿ ಪರಿಜ್ಞಾಯ ಸ ಕ್ರೋಧಪರಿವಾರಿತಃ ॥ ೫೩ ॥**
**ತತಶ್ಚಿತ್ರಾಂಗದಸ್ಯಾಽಪಿ ದದೌ ಶಾಪಂ ಸುದಾರುಣಂ ।**
**ಸ ದೃಷ್ಟ್ವಾಽಽಕಾಶಮಾರ್ಗೇಣ ಗಚ್ಛಮಾನಂ ಭಯಾತುರಂ ॥ ೫೪ ॥**
**ಯ ಏಷ ಕನ್ಯಕಾಂ ಮಹ್ಯಂ ಧರ್ಷಯಿತ್ವಾ ಸಮುತ್ಪತೇತ್ ।**
**ಸ ಪತತ್ವಚಿರಾತ್ಪಾಪಶ್ಛಿನ್ನಪಕ್ಷ ಇವಾಂಡಜಃ ॥ ೫೫ ॥**
**ಕುಷ್ಠವ್ಯಾಧಿಸಮಾಯುಕ್ತಶ್ಚಲಿತುಂ ನೈವ ಚ ಕ್ಷಮಃ ।**
**ಏತಸ್ಮಿನ್ನಂತರೇ ಭೂಮೌ ಸ ಪಪಾತ ನಭಸ್ತಲಾತ್ ॥ ೫೬ ॥**
**ಕುಷ್ಠವ್ಯಾಧಿಸಮಾಯುಕ್ತಃ ಸ ಚ ಚಿತ್ರಾಂಗದೋ ಯುವಾ ।**
**ತತಸ್ತಂ ಸ ಮುನಿಃ ಪ್ರಾಹ ಕಾಷ್ಠೋದ್ಯತಕರಃ ಕ್ರುಧಾ ॥ ೫೭ ॥**

---

ನನಗೆ ಮೂರು ಲೋಕಗಳಲ್ಲಿ ಕಳಂಕವನ್ನುಂಟುಮಾಡಿರುವೆ. ಆದುದರಿಂದ ಪಾಪಿಷ್ಠಳಾದ ನಿನ್ನನ್ನು ನಾನು ಕೊಲ್ಲುವೆನು.

೫೧. ಅವನು ಹೀಗೆ ಹೇಳಿ ಕಟ್ಟಿಗೆಯಿಂದ ಹೊಡೆಯುವಷ್ಟರಲ್ಲಿ ಚಿತ್ರಾಂಗದನು ಶೀಘ್ರವಾಗಿ ಆಕಾಶಮಾರ್ಗದಿಂದ ಓಡಿಹೋಗಿ ಅದೃಶ್ಯನಾದನು.

೫೨. ವಸ್ತ್ರವಿಲ್ಲದವಳೂ, ಕಾಮಸೇವೆಯಿಂದ ಆಯಾಸಗೊಂಡ ಅವಯವವುಳ್ಳವಳೂ ಆದ ಅವಳು ಅಲ್ಲಿಂದ ಎದ್ದು ಎಲ್ಲಿಯೂ ಹೋಗಲು ಸಮರ್ಥಳಾಗಲಿಲ್ಲ.

೫೩–೫೮. ಕ್ರುದ್ಧನಾದ ಜಾಬಾಲಿಯು ಕಟ್ಟಿಗೆಗಳಿಂದ ಅವಳನ್ನು ಹೊಡೆದು ನೆಲದಮೇಲೆ ಬಿದ್ದ ಅವಳನ್ನು ಮೃತಳಾಗಿರುವಳೆಂದರಿತು ಆಕಾಶಮಾರ್ಗದಿಂದ ಭಯದಿಂದ ಓಡಿಹೋಗುತ್ತಿರುವ ಚಿತ್ರಾಂಗದನಿಗೆ "ನನ್ನ ಮಗಳನ್ನು ಕೆಡಿಸಿ ಓಡಿಹೋಗುತ್ತಿರುವ ಇವನು ಸ್ವಲ್ಪಕಾಲದಲ್ಲಿಯೇ ಮುರಿದ ರೆಕ್ಕೆಯುಳ್ಳ ಹಕ್ಕಿಯಂತೆ ಕೆಳಗೆ ಬೀಳಲಿ. ಕುಷ್ಠವ್ಯಾಧಿಯಿಂದ ಪೀಡಿತನಾಗಿ ನಡೆಯಲಸಮರ್ಥನಾಗಲಿ" ಎಂದು ದಾರುಣ ಶಾಪವನ್ನಿತ್ತನು. ಇಷ್ಟರಲ್ಲಿ ಯುವಕನಾದ ಆ ಚಿತ್ರಾಂಗದನು ಕುಷ್ಠರೋಗದಿಂದ ಬಾಧೆಗೊಂಡು ಗಗನತಳದಿಂದ ನೆಲದಮೇಲೆ ಬಿದ್ದನು. ಆಗ ಆ ಮುನಿಯು ಕೋಪದಿಂದ ಕಟ್ಟಿಗೆಯನ್ನು ಮೇಲಕ್ಕೆತ್ತಿ "ನನ್ನ ಮಗಳನ್ನು

ಕಸ್ತ್ವಂ ಪಾಪಸಮಾಚಾರ ಯೇನ ಮೇ ಧರ್ಷಿತಾ ಬಲಾತ್ ।
ಕುಮಾರೀ ತನ್ನಯಾಮ್ಯೇಷ ತ್ವಾಮದ್ಯ ಯಮಶಾಸನಂ ॥ ೫೮ ॥

ಚಿತ್ರಾಂಗದ ಉವಾಚ :—

ಅಹಂ ಚಿತ್ರಾಂಗದೋ ನಾಮ ಗಂಧರ್ವಸ್ತ್ರಿದಿವೌಕಸಾಂ ।
ತೀರ್ಥಯಾತ್ರಾಪ್ರಸಂಗೇನ ಕ್ಷೇತ್ರೇಽಸ್ಮಿನ್ ಸಮುಪಾಗತಃ ॥ ೫೯ ॥
ತತಸ್ತು ಕನ್ಯಕಾಂ ದೃಷ್ಟ್ವಾ ಕಾಮದೇವವಶಂ ಗತಃ ॥ ೬೦ ॥
ತತಃ ಸೇವಿತವಾನತ್ರ ಲತಾಹರ್ಮ್ಯೇ ಜನಚ್ಯುತೇ ।
ತಸ್ಮಾತ್ಕುರು ಕ್ಷಮಾಂ ಮಹ್ಯಂ ದೀನಸ್ಯ ಪ್ರಣತಸ್ಯ ಚ ॥ ೬೧ ॥
ಯಥಾ ವ್ಯಾಧೇರ್ಭವೇನ್ನಾಶೋ ಯಥಾಸ್ಯಾದ್ಗಗನೇ ಗತಿಃ ।
ಭೂಯೋಽಪಿ ತ್ವತ್ಪ್ರಸಾದೇನ ಸ್ವಲ್ಪಃ ಕೋಪೋ ಹಿ ಸಾಧುಷು ॥ ೬೨ ॥

ಜಾಬಾಲಿರುವಾಚ :—

ಈದೃಗ್ರೂಪಧರಸ್ತ್ವಂಹಿ ಮಮ ವಾಕ್ಯಾದ್ಭವಿಷ್ಯಸಿ ।
ಏಷಾಽಪಿ ಮತ್ಸುತಾ ಪಾಪಾ ವಸ್ತ್ರಹೀನಾ ಸದೇದೃಶೀ ॥ ೬೩ ॥
ಭವಿಷ್ಯತಿ ನ ಸಂದೇಹೋ ಜೀವಯಿಷ್ಯತಿ ಚೇತ್ಕ್ವಚಿತ್ ।
ಯದ್ಯೇಷಾ ಧಾಸ್ಯತಿ ಕ್ವಾಽಪಿ ವಸ್ತ್ರಂ ಗಾತ್ರೇ ನಿಜೇ ಕ್ವಚಿತ್ ॥ ೬೪ ॥
ತನ್ಮೂನಂ ಚ ಶಿರೋಽಪ್ಯಸ್ಯಾಃ ಪಲಿಷ್ಯತಿ ನ ಸಂಶಯಃ ।
ಏವಮುಕ್ತ್ವಾ ವಿಕೋಪಶ್ಚ ಸ ಜಗಾಮ ನಿಜಾಶ್ರಮಂ ॥ ೬೫ ॥

---

ಬಲಾತ್ಕಾರದಿಂದ ಕೆಡಿಸಿದ ನೀನಾರು? ನಿನ್ನನ್ನೀಗ ಯಮಪುರಿಗೆ ಕಳುಹಿಸುವೆನು” ಎಂದು ಅವನನ್ನು ಕುರಿತು ಹೇಳಿದನು.

೫೯—೬೦. ಚಿತ್ರಾಂಗದನು ಹೇಳುತ್ತಾನೆ:—ಮುನಿಯೆ! ಚಿತ್ರಾಂಗದನೆಂಬ ಗಂಧರ್ವನಾದ ನಾನು ತೀರ್ಥಯಾತ್ರೆಗಾಗಿ ಈ ಕ್ಷೇತ್ರಕ್ಕೆ ಬಂದು ನಿನ್ನ ಕನ್ಯೆಯನ್ನು ನೋಡಿ ಕಾಮವಶನಾದೆನು.

೬೧—೬೨. ಆದುದರಿಂದ ಜನರಿಲ್ಲದ ಈ ಪೊದೆಯಲ್ಲಿ ಇವಳನ್ನು ಸೇರಿದೆನು. ಆದುದರಿಂದ ದೀನನೂ, ನಮ್ರನೂ ಆದ ನನ್ನನ್ನು ಕ್ಷಮಿಸಿ ಪ್ರಸನ್ನನಾಗಿ ರೋಗವು ಪರಿಹಾರವಾಗುವಂತೆಯೂ, ಮರಳಿ ಆಕಾಶದಲ್ಲಿ ಸಂಚರಿಸುವಂತೆಯೂ ಮಾಡು. ಸಜ್ಜನರ ಕೋಪವು ಅಲ್ಪವಾದುದಷ್ಟೆ.

೬೩—೬೫. ಜಾಬಾಲಿಯು ಹೇಳುತ್ತಾನೆ:—ನೀನು ನನ್ನ ಮಾತಿನಿಂದ ಇಂತಹ ರೂಪವುಳ್ಳವನಾಗುವೆ. ಈ ನನ್ನ ಮಗಳೂ ಯಾವಾಗಲೂ ಬತ್ತಲೆಯಾಗಿ ಬದುಕಿರುವಳು. ಇವಳು ಯಾವಾಗಲಾದರೂ ದೇಹದಲ್ಲಿ ವಸ್ತ್ರವನ್ನು ಧರಿಸಿದರೆ ಆಗ ನಿಶ್ಚಯವಾಗಿಯೂ ಇವಳ ತಲೆಯು ಒಡೆಯುವುದು. ಮುನಿಯು ಹೀಗೆಂದು ಕೋಪವಿಲ್ಲದವನಾಗಿ ತನ್ನ ಆಶ್ರಮಕ್ಕೆ ತೆರಳಿದನು.

**ಚಿತ್ರಾಂಗದೋಽಪಿ ತತ್ರೈವ ತಯಾ ಸಾರ್ಧಂ ತಥಾ ಸ್ಥಿತಃ ।**
**ಕಸ್ಯಚಿತ್ತ್ವಥ ಕಾಲಸ್ಯ ತತ್ರ ಕ್ಷೇತ್ರೇ ಸಮಾಯಯೌ ॥ ೬೬ ॥**
**ಚೈತ್ರಶುಕ್ಲಚತುರ್ದಶ್ಯಾಂ ಭಗವಾಂಛಶಿಶೇಖರಃ ।**
**ಗಂತುಂ ಚಿತ್ರೇಶ್ವರೇ ಪೀಠೇ ಗಣೈ ರೌದ್ರೈಃ ಸಮಾವೃತಃ ।**
**ಯೋಗಿನೀಭಿಃ ಪ್ರಚಂಡಾಭಿಃ ಸಾರ್ಧಂ ಪ್ರಾಪ್ತೇ ನಿಶಾಮುಖೇ ॥ ೬೭ ॥**
**ಅಥ ಪ್ರಾಪ್ತೇ ನಿಶಾರ್ಧೇ ತು ಯೋಗಿನ್ಯಸ್ತಾಃ ಸುದಾರುಣಾಃ ।**
**ಮಹಾಮಾಂಸಂ ಮಹಾಮಾಂಸಮಿತ್ಯೂಚುರ್ಭಕ್ಷಣಾಯ ವೈ ॥ ೬೮ ॥**
**ನೃತ್ಯಮಾನಾಃ ಪುರಸ್ತಸ್ಯ ದೇವದೇವಸ್ಯ ಶೂಲಿನಃ ।**
**ಸಸ್ಪರ್ಧಾ ಗಣಮುಖ್ಯೈಸ್ತೈರ್ನರ್ತಮಾನೈಃ ಸಮಂತತಃ ॥ ೬೯ ॥**
**ಯಸ್ತತ್ರ ಸಮಯೇ ತಾಸಾಂ ಮಹಾಮಾಂಸಂ ಪ್ರಯಚ್ಛತಿ ।**
**ಮಂತ್ರಪೂತಂ ಸ ಸಂಸಿದ್ಧಿಂ ಸಮವಾಪ್ನೋತಿ ವಾಂಛಿತಾಂ ॥ ೭೦ ॥**
**ಮದ್ಯಂ ಮಾಂಸಂ ತಥಾ ಚಾಽನ್ಯನ್ನೈವೇದ್ಯಂ ವಾ ಫಲಾದಿಕಂ ।**
**ತಸ್ಯ ಸಿದ್ಧಿಃ ಸಮಾದಿಷ್ಟಾ ಯಥಾ ಸ್ವಹೃದಯೇ ಸ್ಥಿತಾ ॥ ೭೧ ॥**
**ಏತಸ್ಮಿನ್ನಂತರೇ ಕನ್ಯಾ ಸಾ ಜಾಬಾಲಿಸಮುದ್ಭವಾ ।**
**ಸ ಚ ಚಿತ್ರಾಂಗದಸ್ತತ್ರ ಗತ್ವಾ ಪ್ರೋವಾಚ ಸಾದರಂ ॥ ೭೨ ॥**
**ಅಸ್ಮದೀಯಮಿದಂ ಮಾಂಸಂ ಯೋಗಿನ್ಯೋ ಹರ್ಷಸಂಯುತಾಃ ।**
**ಭಕ್ಷ್ಯಯಂತು ಯಥಾ ಸೌಖ್ಯಂ ಸ್ವಯಮೇವ ಪ್ರಕಲ್ಪಿತಂ ॥ ೭೩ ॥**

---

೬೬. ಚಿತ್ರಾಂಗದನೂ ಆ ಫಲವತಿಯೊಡನೆ ಅಲ್ಲಿಯೇ ಇದ್ದನು.

೬೭. ಒಂದಾನೊಂದು ಚೈತ್ರ ಶುದ್ಧ ಚತುರ್ದಶೀ ದಿನ ಸಂಧ್ಯಾಕಾಲ ಪೂಜ್ಯನಾದ ಶಂಕರನು ಭಯಂಕರ ಗಣಗಳು, ಪ್ರಚಂಡರಾದ ಯೋಗಿನಿಯರು ಇವರೊಡನೆ ಚಿತ್ರೇಶ್ವರಪೀಠಕ್ಕೆ ಹೋಗಲು ಆ ಹಾಟಕಕ್ಷೇತ್ರಕ್ಕೆ ಬಂದನು.

೬೮–೬೯. ಅರ್ಧರಾತ್ರಿಯಾಗಲು ಆ ದಾರುಣರಾದ ಯೋಗಿನಿಯರು ಶಿವನ ಮುಂದೆ ಕುಣಿಯುತ್ತಿರುವ ಗಣಗಳೊಡನೆ ಸ್ಪರ್ಧೆಯಿಂದ ಕುಣಿಯುತ್ತ ನಮಗೆ ತಿನ್ನಲು ಮಾಂಸವು ಬೇಕು ಎಂದರು.

೭೦. ಆ ಸಮಯದಲ್ಲಿ ಆ ಯೋಗಿನಿಯರಿಗೆ ಮಂತ್ರಶುದ್ಧವಾದ ಮಹಾಮಾಂಸವನ್ನು ಕೊಡುವವನು ಇಷ್ಟಾರ್ಥವನ್ನು ಪಡೆಯುವನು.

೭೧. ಮದ್ಯ, ಮಾಂಸ, ಹಣ್ಣು ಮೊದಲಾದುವುಗಳಲ್ಲಿ ಯಾವುದನ್ನು ನೈವೇದ್ಯವಾಗಿ ಕೊಟ್ಟರೂ ಮನಸ್ಸಿನ ಇಷ್ಟಾರ್ಥವು ಕೈಗೂಡುವುದು.

೭೨. ಈ ಸಮಯದಲ್ಲಿ ಆ ಜಾಬಾಲಿಯ ಮಗಳೂ, ಆ ಚಿತ್ರಾಂಗದನೂ ಅಲ್ಲಿಗೆ ಹೋಗಿ ಪ್ರೀತಿಯಿಂದ ಹೀಗೆಂದರು.

೭೩. ಯೋಗಿನಿಯರೆ! ನಾವಾಗಿಯೇ ಸಮರ್ಪಿಸಿದ ಈ ನಮ್ಮ ಮಾಂಸವನ್ನು ಸಂತೋಷದಿಂದ ಸುಖವಾಗಿ ಭಕ್ಷಿಸಿರಿ.

ಅಥ ತಂ ಪುರುಷಂ ದೃಷ್ಟ್ವಾ ಕುಷ್ಠವ್ಯಾಧಿಸಮಾವೃತಂ ।
ವಿವಸ್ತ್ರಾಂ ಕನ್ಯಕಾಂ ತಾಂ ಚ ಸರ್ವಾಸ್ತಾ ವಿಸ್ಮಯಾನ್ವಿತಾಃ ॥ ೭೪ ॥
ತೇ ಚ ಸರ್ವೇ ಗಣಾ ರೌದ್ರಾಃ ಸ ಚ ದೇವಸ್ತ್ರಿಲೋಚನಃ ।
ಪಪ್ರಚ್ಛ ಕೌತುಕಾವಿಷ್ಟಸ್ತತ್ರ ಚಿತ್ರಾಂಗದಂ ಪ್ರಭುಃ ॥ ೭೫ ॥
ಕಸ್ತ್ವಂ ಧೈರ್ಯಸಮಾಯುಕ್ತೋ ಮಹತ್ಸತ್ವೇ ವ್ಯವಸ್ಥಿತಃ ।
ಯಃ ಪ್ರಯಚ್ಛಸಿ ಜೀವಂ ತ್ವಂ ಕೀಟಸ್ಯಾಽಪಿ ಸುವಲ್ಲಭಂ ॥ ೭೬ ॥
ಕೇಯಂ ಚ ವಸನೈರ್ಹೀನಾ ತ್ವಯಾ ಸಾರ್ಧಂ ಗತವ್ಯಥಾ ।
ಪ್ರಯಚ್ಛತಿ ನಿಜಂ ದೇಹಂ ಯದ್ದೇಯಂ ನೈವ ಕಸ್ಯಚಿತ್ ॥ ೭೭ ॥

ಸೂತ ಉವಾಚ :—

ತತಃ ಸ ಕಥಯಾಮಾಸ ಸರ್ವಮಾತ್ಮವಿಚೇಷ್ಟಿತಂ ।
ಯಥಾ ಕನ್ಯಾಸಮಂ ಸಂಗಃ ಕೃತಃ ಶಾಪಶ್ಚ ಸನ್ಮುನೇಃ ॥ ೭೮ ॥
ತತಶ್ಚಿತ್ರಾಂಗದಂ ದೃಷ್ಟ್ವಾ ಸ ಗಂಧರ್ವಂ ದಿವೌಕಸಾಂ ।
ತಥಾರೂಪಂ ಕೃಪಾವಿಷ್ಟಸ್ತತಃ ಪ್ರೋವಾಚ ಶಂಕರಃ ॥ ೭೯ ॥
ಮಮ ಸಂದರ್ಶನಂ ಪ್ರಾಪ್ಯ ನ ಮೃತ್ಯುರ್ಜಾಯತೇ ಕ್ವಚಿತ್ ।
ನ ವೃಥಾ ದರ್ಶನಂ ಚೈತತ್ತಸ್ಮಾತ್ಪ್ರಾರ್ಥಯ ಸಾದರಂ ॥ ೮೦ ॥

---

೭೪. ಆ ಯೋಗಿನಿಯರು ಕುಷ್ಠವ್ಯಾಧಿಗ್ರಸ್ತನಾದ ಆ ಚಿತ್ರಾಂಗದನನ್ನೂ, ಬತ್ತಲೆಯಾಗಿರುವ ಆ ಕನ್ಯೆಯನ್ನೂ ಕಂಡು ಎಲ್ಲರೂ ಆಶ್ಚರ್ಯಗೊಂಡರು.

೭೫. ಆ ಸಕಲ ಭಯಂಕರಗಣಗಳೂ, ಮಹೇಶ್ವರನೂ ಕುತೂಹಲಗೊಂಡು ಚಿತ್ರಾಂಗದನನ್ನು ಕುರಿತು ಹೀಗೆ ಪ್ರಶ್ನಿಸಿದರು.

೭೬. ಕೀಟಕ್ಕೂ ಪ್ರಿಯವಾದ ಜೀವವನ್ನು ಧೈರ್ಯದಿಂದ ಕೊಡುತ್ತಿರುವ ವೀರನಾದ ನೀನಾರು ?

೭೭. ಯಾರಿಗೂ ಕೊಡಲನರ್ಹವಾದ ತನ್ನ ದೇಹವನ್ನು ನಿನ್ನೊಡನೆ ವ್ಯಥೆಯಿಲ್ಲದೆ ನಮಗೆ ಕೊಡುತ್ತಿರುವ ಬತ್ತಲೆಯಾದ ಈ ಕನ್ಯೆ ಯಾರು ?

೭೮. ಸೂತನು ಹೇಳುತ್ತಾನೆ :—ಅನಂತರ ಆ ಚಿತ್ರಾಂಗದನು ತನಗೆ ಆ ಕನ್ಯೆಯೊಡನೆ ಆದ ಸಮಾಗಮವನ್ನೂ, ಮುನಿಯ ಶಾಪವನ್ನೂ, ಹೀಗೆ ತಾನು ಮಾಡಿದ್ದ ಎಲ್ಲ ಕೆಲಸವನ್ನೂ ಹೇಳಿದನು.

೭೯—೮೦. ಅನಂತರ ಮಹೇಶ್ವರನು ಆ ರೀತಿಯಿರುವ ದೇವಗಂಧರ್ವನಾದ ಚಿತ್ರಾಂಗದನನ್ನು ಕಂಡು ದಯೆಗೊಂಡು ಅವನನ್ನು ಕುರಿತು "ನನ್ನನ್ನು ಸಂದರ್ಶನ ಮಾಡಿದವನು ಮರಣವನ್ನು ಹೊಂದುವುದಿಲ್ಲ. ನನ್ನೀ ದರ್ಶನವು ವ್ಯರ್ಥವಾಗುವುದಿಲ್ಲ. ಆದುದರಿಂದ ನಿನ್ನ ಅಭೀಷ್ಟವನ್ನು ಬೇಡಿಕೊ" ಎಂದನು.

**ಚಿತ್ರಾಂಗದ ಉವಾಚ:—**

**ವ್ಯಾಧಿನಾಽಹಂ ಸುನಿರ್ವಿಣ್ಣಸ್ತೇನ ದೇವಾಽತ್ರ ಚಾಽಽಗತಃ ।**
**ಯೇನ ವ್ಯಾಧಿಕ್ಷಯೋ ಭಾವೀ ದೇಹನಾಶೇನ ಶಂಕರ ॥ ೮೧ ॥**
**ತಸ್ಮಾತ್ಕುರು ಕ್ಷಯಂ ವ್ಯಾಧೇರ್ಯದಿ ಯಚ್ಛಸಿ ಮೇ ವರಂ ।**
**ಖೇಚರತ್ವಂ ಪುನರ್ದೇಹಿ ಯೇನ ಸ್ವರ್ಗಂ ವ್ರಜಾಮ್ಯಹಂ ॥ ೮೨ ॥**

**ಶ್ರೀ ಶಂಕರ ಉವಾಚ:—**

**ತ್ವಂ ಸ್ಥಾಪಯಾಽತ್ರ ಮಲ್ಲಿಂಗಂ ಪೀಠೇ ಗಂಧರ್ವಸತ್ತಮ ।**
**ತತಶ್ಚಾರಾಧಯ ಪ್ರೀತ್ಯಾ ಯಾವದ್ವರ್ಷಮುಪಸ್ಥಿತಂ ॥ ೮೩ ॥**
**ಯಥಾ ಯಥಾ ಸುಪೂಜಾಂ ತ್ವಂ ಮಲ್ಲಿಂಗಸ್ಯ ಕರಿಷ್ಯಸಿ ।**
**ದಿನೇ ದಿನೇ ತಥಾ ವ್ಯಾಧೇಸ್ತವನಾಶೋ ಭವಿಷ್ಯತಿ ॥ ೮೪ ॥**
**ತತಸ್ತು ಖೇ ಗತಿಂ ಪ್ರಾಪ್ಯ ಪುನಃ ಸ್ವರ್ಗಂ ಪ್ರಯಾಸ್ಯಸಿ ।**
**ಮತ್ಪ್ರಸಾದಾನ್ನ ಸಂದೇಹಃ ಸತ್ಯಮೇತನ್ಮಯೋದಿತಂ ॥ ೮೫ ॥**
**ಏಷಾಽಪಿ ಕನ್ಯಕಾ ಯಸ್ಮಾತ್ಪ್ರವಿಷ್ಟಾ ಪೀಠಮಧ್ಯತಃ ।**
**ತಸ್ಮಾತ್ಫಲವತೀ ನಾಮ ಯೋಗಿನೀ ಸಂಭವಿಷ್ಯತಿ ॥ ೮೬ ॥**
**ಅನೇನೈವತು ರೂಪೇಣ ನಗ್ನತ್ವೇನ ವ್ಯವಸ್ಥಿತಾ ।**
**ಮುಖ್ಯಾಮವಾಪ್ಸ್ಯತೇ ಪೂಜಾಂ ವಾಂಛಿತಂ ಚ ಪ್ರದಾಸ್ಯತಿ ।**
**ಪೂಜಕಾನಾಂ ಸ್ಥಿತಂ ಚಿತ್ತೇ ಶತಸಂಖ್ಯಗುಣಂ ತದಾ ॥ ೮೭ ॥**

---

೮೧–೮೨. ಚಿತ್ರಾಂಗದನು ಹೇಳುತ್ತಾನೆ:—ಈಶ್ವರ! ನಾನು ವ್ಯಾಧಿಪೀಡಿತನಾಗಿ ಇಲ್ಲಿಗೆ ಬಂದಿದ್ದೇನೆ, ಈ ದೇಹನಾಶದಿಂದ ವ್ಯಾಧಿಯು ಪರಿಹಾರವಾಗುವುದು. ಆದುದರಿಂದ ನೀನು ನನಗೆ ವರವನ್ನು ಕೊಡುವುದಾದರೆ ಈ ವ್ಯಾಧಿಯನ್ನು ನಿವಾರಿಸು. ಆಕಾಶಸಂಚಾರಶಕ್ತಿಯನ್ನು ಕೊಡು. ಅದರಿಂದ ನಾನು ಸ್ವರ್ಗಕ್ಕೆ ಹೋಗುವೆನು.

೮೩. ಶ್ರೀ ಶಂಕರನು ಹೇಳುತ್ತಾನೆ:—ನೀನು ನನ್ನ ಲಿಂಗವನ್ನು ಈ ಪೀಠದಲ್ಲಿ ಸ್ಥಾಪಿಸಿ ಒಂದು ವರ್ಷಕಾಲ ಪ್ರೀತಿಯಿಂದ ಆರಾಧಿಸು.

೮೪–೮೫. ನೀನು ಪ್ರತಿದಿನವೂ ನನ್ನ ಲಿಂಗವನ್ನು ಹೇಗೆ ಹೇಗೆ ಪೂಜಿಸುವೆಯೊ, ಹಾಗೆ ನಿನ್ನ ವ್ಯಾಧಿಯು ನಾಶವಾಗುವುದು. ಅನಂತರ ನನ್ನ ಅನುಗ್ರಹದಿಂದ ಖೇಚರತ್ವವನ್ನು ಹೊಂದಿ ಸ್ವರ್ಗಕ್ಕೆ ತೆರಳುವೆ. ನಾನು ಹೇಳಿರುವುದು ನಿಜ.

೮೬. ಈ ಕನ್ಯೆಯೂ ಪೀಠಮಧ್ಯವನ್ನು ಪ್ರವೇಶಮಾಡಿರುವುದರಿಂದ ಫಲವತಿಯೆಂಬ ಯೋಗಿನಿಯಾಗುವಳು.

೮೭. ಈ ಬತ್ತಲೆಯ ರೂಪದಿಂದ ಇರುವವಳಾಗಿ ಮುಖ್ಯಪೂಜೆಯನ್ನು ಹೊಂದಿ ಪೂಜಿಸುವವರ ಮನಸ್ಸಿನಲ್ಲಿರುವುದಕ್ಕಿಂತ ನೂರುಮಡಿಯಾಗಿ ಇಷ್ಟಾರ್ಥವನ್ನು ನೀಡುವಳು.

ಏತಾಂ ಸಂಪೂಜಯೇನ್ಮರ್ತ್ಯಃ ಪೀಠಮೇತತ್ತತಃ ಪರಂ ।
ಪೂಜಯಿಷ್ಯತಿ ತಸ್ಯೇಷ್ಟಾ ಸಿದ್ಧಿರೇವಂ ಭವಿಷ್ಯತಿ ॥ ೮೮ ॥
ಏವಮುಕ್ತ್ವಾ ತತಃ ಸಾಽಥ ಹರ್ಷೇಣ ಮಹತಾನ್ವಿತಾ ।
ಯೋಗಿನೀವೃಂದಮಧ್ಯಸ್ಥಾ ನೃತ್ಯಂ ಚಕ್ರೇ ತತಃ ಪರಂ ॥ ೮೯ ॥
ಏವಂ ಬಭೂವ ಸಾ ತತ್ರ ಯೋಗಿನೀ ಚ ವರಾಂಗನಾ ।
ತಥಾ ಚಕ್ರೇ ಪರಂ ನೃತ್ಯಂ ಯಥಾ ತುಷ್ಟೋ ಮಹೇಶ್ವರಃ ॥ ೯೦ ॥
ತತಃ ಪ್ರೋವಾಚ ತಾಂ ಹೃಷ್ಟಃ ಸರ್ವಯೋಗಿನಿಸನ್ನಿಧೌ ।
ಅನೇನ ತವ ನೃತ್ಯೇನ ಗೀತೇನ ಚ ವಿಶೇಷತಃ ॥ ೯೧ ॥
ಪರಿತುಷ್ಟೋಽಸ್ಮಿ ತೇ ವತ್ಸೇ ತಸ್ಮಾಚ್ಛೃಣು ವಚೋ ಮಮ ।
ನಿಶೀಥೇಽದ್ಯ ದಿನೇ ಪ್ರಾಪ್ತೇ ಯಸ್ತೇ ಪೂಜಾಂ ಕರಿಷ್ಯತಿ ॥ ೯೨ ॥
ಸುರಾಮಾಂಸಾನ್ನಸತ್ಕಾರೈರ್ಮಂತ್ರೈರಾಗಮ ಸಂಭವೈಃ ।
ಸ ಭವಿಷ್ಯತಿ ತತ್ಕಾಲಂ ಶಾಪಾನುಗ್ರಹಶಕ್ತಿಮಾನ್ ॥ ೯೩ ॥
ಬಂಧನಂ ಮೋಹನಂ ಚಾಽಪಿ ಶತ್ರೋರುಚ್ಚಾಟನಂ ತಥಾ ।
ಕರಿಷ್ಯತಿ ನ ಸಂದೇಹೋ ವಶೀಕರಣಮೇವ ಚ ॥ ೯೪ ॥
ತ್ರಿಕೋಣಂ ಕುಂಡಮಾಸ್ಥಾಯ ದಿಶಾಂ ಪಾಲಾನ್ ಪ್ರಪೂಜಯೇತ್ ।
ಕ್ಷೇತ್ರಪಾಲಂ ಚ ಸರ್ವಾಸ್ತಾ ದೇವತಾ ಗಗನೋದ್ಭವಾಃ ॥ ೯೫ ॥

---

೮೮. ಮಾನವನು ಇವಳನ್ನು ಪೂಜಿಸಿ ಅನಂತರ ಈ ಪೀಠವನ್ನು ಪೂಜಿಸಿದರೆ ಅವನ ಇಷ್ಟವು ಸಿದ್ಧಿಸುವುದು.

೮೯. ಮಹೇಶ್ವರನು ಹೀಗೆ ಹೇಳಲು ಅತ್ಯಂತ ಸಂತೋಷಗೊಂಡ ಆ ಫಲವತಿಯು ಆ ಯೋಗಿನಿಯರ ಸಮೂಹದ ಮಧ್ಯದಲ್ಲಿದ್ದು ನೃತ್ಯಮಾಡಿದಳು.

೯೦. ಹೀಗೆ ಯೋಗಿನಿಯಾದ ಆ ಫಲವತಿಯು ಮಹೇಶ್ವರನು ಸಂತುಷ್ಟನಾಗುವಂತೆ ಕುಣಿದಳು.

೯೧–೯೩. ಅನಂತರ ಮಹೇಶ್ವರನು ಸಂತೋಷಗೊಂಡು ಆ ಫಲವತಿಯನ್ನು ಕುರಿತು ಸಮಸ್ತ ಯೋಗಿಗಳ ಸನ್ನಿಧಿಯಲ್ಲಿ ಹೇಳಿದನು. ಮಗು! ನಾನು ನಿನ್ನ ನೃತ್ಯಗೀತಗಳಿಂದ ಸಂತುಷ್ಟನಾಗಿದ್ದೇನೆ. ಆದುದರಿಂದ ನನ್ನ ಮಾತನ್ನು ಕೇಳು. ಈ ದಿನ ಅರ್ಧರಾತ್ರಿ ಸಮಯದಲ್ಲಿ ಮದ್ಯ, ಮಾಂಸ, ಅನ್ನ ಇವುಗಳಿಂದಲೂ, ಆಗಮ ಮಂತ್ರಗಳಿಂದಲೂ ನಿನ್ನನ್ನು ಪೂಜಿಸುವ ಮನುಷ್ಯನು ಕೂಡಲೆ ಶಾಪಾನುಗ್ರಹಶಕ್ತಿಯುಳ್ಳವನಾಗುವನು.

೯೪. ಮತ್ತು ಶತ್ರುವಿನ ಬಂಧನ, ಮೋಹನ, ಉಚ್ಚಾಟನ, ವಶೀಕರಣ ಶಕ್ತಿಯುಳ್ಳವನಾಗುವನು.

೯೫–೯೭. ತ್ರಿಕೋಣದ ಕುಂಡವನ್ನು ಮಾಡಿ ಅಲ್ಲಿ ದಿಕ್ಪಾಲಕರು, ಕ್ಷೇತ್ರಪಾಲ, ಆಕಾಶದಲ್ಲಿ ಸಂಚರಿಸುವ ಸಮಸ್ತ ದೇವತೆಗಳು ಇವರನ್ನು ಪೂಜಿಸಿ

ತಥಾ ಚತ್ವರಪೂಜಾಂ ಚ ಪ್ರಕೃತ್ವಾ ವಿಧಿಪೂರ್ವಕಂ ।
ಪಶ್ಚಾತ್ತ್ವಾಂ ಪೂಜಯಿತ್ವಾ ಚ ಹೋಮಂ ಯಶ್ಚ ಕರಿಷ್ಯತಿ ॥ ೯೬ ॥
ಶತ್ರ್ವಾಮಪದೋತ್ಥೇನ ಸ್ಪೃಷ್ಟೇನ ರಜಸಾಽಥವಾ ।
ಗುಗ್ಗುಲೇನ ಸಹಸ್ರಾಂತಂ ಸ್ತಂಭನಂ ಚ ಕರಿಷ್ಯತಿ ॥ ೯೭ ॥
ಯಶ್ಚ ಶತ್ರುಂ ಹೃದಿ ಸ್ಥಾಪ್ಯ ಶತ್ರೂದ್ವರ್ತನಸಂಭವಂ ।
ಮಲಂ ಧಾತ್ರೀಫಲೈಃ ಸಾರ್ಧಂ ಮೋಹನಂ ಸ ಕರಿಷ್ಯತಿ ॥ ೯೮ ॥
ಯಃ ಶತ್ರೋಃ ಸ್ನಾನಜಂ ತೋಯಂ ಗೃಹೀತ್ವಾ ಚಾಽಥ ಕರ್ದಮಂ ।
ಶಿವನಿರ್ಮಾಲ್ಯಸಂಯುಕ್ತಂ ಜುಹ್ವಯಿಷ್ಯತಿ ಪಾವಕೇ ॥ ೯೯ ॥
ತವಾಽಗ್ರೇ ಸ ನರೋ ನೂನಂ ಶತ್ರುಮುಚ್ಚಾಟಯಿಷ್ಯತಿ ।
ಏಷೋಽಪಿ ತವ ಸಂಗೇನ ತವ ಚಿತ್ರಾಂಗದಃ ಪ್ರಿಯಃ ।
ಸಂಪ್ರಾಪ್ಸ್ಯತಿ ಚ ಸತ್ಪೂಜಾಮನುಷಂಗಾತ್ತ್ವದುದ್ಭವಾತ್ ॥ ೧೦೦ ॥
ಫಲವತ್ಯುವಾಚ :—
ಯದಿ ದೇವ ಪ್ರಸನ್ನೋ ಮೇ ತಥಾಽನ್ಯಮಪಿ ಸದ್ವರಂ ॥ ೧೦೧ ॥
ಹೃದಿಸ್ಥಂ ದೇಹಿ ಮೇ ಸೌಖ್ಯಂ ಯೇನ ಸಂಜಾಯತೇಽಖಿಲಂ ।
ಪಿತಾ ಮನ್ಯೈಷ ಜಾಬಾಲಿರ್ನಿರ್ಮುಕ್ತೋ ವಸನ್ಯೈಃ ಸದಾ ॥ ೧೦೨ ॥
ಅಹಂ ಯಥಾ ತಥಾಽತ್ರೈವ ಸಂತಿಷ್ಠತು ದಿವಾನಿಶಂ ।
ಯೇನ ಸಂತಾಪಮಾಯಾತಿ ಪಶ್ಯನ್ಮಮ ವಿರೋಧಿನೀಂ ॥ ೧೦೩ ॥

---

ಹಾಗೆಯೇ ವಿಧಿಯಂತೆ ಅವಸರ ಪೂಜೆಯನ್ನು ಮಾಡಿ ಅನಂತರ ನಿನ್ನನ್ನು ಆರಾಧಿಸಿ ಶತ್ರುವಿನ ಎಡಗಾಲಿನ ಧೂಳಿನಿಂದಾಗಲಿ, ಗುಗ್ಗುಳದಿಂದಾಗಲಿ ಸಾವಿರ ಸಾರಿ ಹೋಮವನ್ನಾಚರಿಸುವವನು ಶತ್ರುವನ್ನು ಸ್ತಂಭಿಸುವನು.

೯೮. ಮನಸ್ಸಿನಲ್ಲಿ ಶತ್ರುವನ್ನುದ್ದೇಶಿಸಿ ಅವನ ಶರೀರದ ಮಲವನ್ನು ನೆಲ್ಲಿ ಕಾಯಿಗಳೊಡನೆ ಹೋಮಿಸುವವನು ಅವನನ್ನು ಮೋಹಗೊಳಿಸುವನು.

೯೯–೧೦೦. ಶತ್ರುವಿನ ಸ್ನಾನದ ನೀರನ್ನೂ, ಕೆಸರನ್ನೂ ಶಿವನ ನಿರ್ಮಾಲ್ಯ ದೊಡನೆ ನಿನ್ನ ಮುಂದೆ ಅಗ್ನಿಯಲ್ಲಿ ಹೋಮಿಸುವವನು ನಿಶ್ಚಯವಾಗಿಯೂ ಶತ್ರು ವನ್ನು ಓಡಿಸುವನು. ನೀನು ಮನುಷ್ಯನಿಂದ ಹುಟ್ಟಿರುವುದರಿಂದ ನಿನ್ನ ಸಹವಾಸ ವನ್ನು ಪಡೆದ ಚಿತ್ರಾಂಗದನೂ ಪೂಜೆಯನ್ನು ಮಾಡಿಸಿಕೊಳ್ಳುವನು.

೧೦೧–೧೦೪. ಫಲವತಿಯು ಹೇಳುತ್ತಾಳೆ:—ಶಂಕರ!, ನೀನು ಪ್ರಸನ್ನ ನಾಗಿದ್ದರೆ ನನ್ನ ಮನಸ್ಸಿನಲ್ಲಿರುವ ಮತ್ತೊಂದು ವರವನ್ನು ಕೊಡು. ಅದರಿಂದ ನನಗೆ ಸಮಸ್ತ ಸೌಖ್ಯವುಂಟಾಗುವುದು. ಇಲ್ಲಿ ನನ್ನ ತಂದೆಯಾದ ಜಾಬಾಲಿಯು ಬಟ್ಟೆಯಿಲ್ಲದೆ ಹಗಲು ರಾತ್ರಿ • ನನ್ನಂತೆಯೇ ಇರಲಿ. ಅದರಿಂದ ಬ್ರಾಹ್ಮಣ ಜಾತಿಗೆ ವಿರುದ್ಧವಾದ ನನ್ನ ಮದ್ಯ ಮಾಂಸ ವಿಷಯಕವಾದ ಕ್ರೀಡೆಯನ್ನು

ಕ್ರೀಡಾಂ ಬ್ರಾಹ್ಮಣವಂಶಸ್ಯ ಮದ್ಯಮಾಂಸಸಮುದ್ಭವಾಂ ।
ಮದ್ಯಗಂಧಂ ಸಮಾಘ್ರಾತಿ ಮಾಂಸಂ ಪಶ್ಯತಿ ಸಂಸ್ಕೃತಂ ।
ಮಾಂ ಸ್ವಚ್ಛಂದರತಾಂ ನಿತ್ಯಂ ದುಃಖಂ ಯಾತಿ ದಿನೇ ದಿನೇ ॥ ೧೦೪ ॥

ಶ್ರೀ ಭಗವಾನುವಾಚ :—

ಏವಂ ಭವಿಷ್ಯತಿ ಪ್ರೋಕ್ತಂ ಸಂಜಾತಂ ಚಾಽಧುನಾ ಶುಭೇ ।
ಅಹಂ ಯಾಸ್ಯಾಮಿ ಕೈಲಾಸಂ ತ್ವಂ ತಿಷ್ಠಾಽತ್ರ ಯಥೋದಿತಾ ॥ ೧೦೫ ॥

ಸೂತ ಉವಾಚ :—

ಏವಂ ಸ ಭಗವಾನ್ ಪ್ರೋಕ್ತ್ವಾ ಗತಶ್ಚಾಽದರ್ಶನಂ ಹರಃ ।
ಯೋಗಿನ್ಯಶ್ಚೈವ ತಾಃ ಸರ್ವಾಃ ಸ್ವೇ ಸ್ವೇ ಸ್ಥಾನೇ ವ್ಯವಸ್ಥಿತಾಃ ॥ ೧೦೬ ॥
ಚಿತ್ರಾಂಗದೋಽಪಿ ತತ್ರೈವ ಕೃತ್ವಾ ಪ್ರಾಸಾದಮುತ್ತಮಂ ।
ಲಿಂಗಂ ಸಂಸ್ಥಾಪಯಾಮಾಸ ದೇವದೇವಸ್ಯ ಶೂಲಿನಃ ॥ ೧೦೭ ॥
ತತಶ್ಚಾಽಽರಾಧಯಾಮಾಸ ದಿವಾರಾತ್ರಮತಂದ್ರಿತಃ ॥ ೧೦೮ ॥
ತತಃ ಸಂವತ್ಸರಸ್ಯಾಂತೇ ವ್ಯಾಧಿಮುಕ್ತಃ ಸುರೂಪಧೃಕ್ ।
ವಿಮಾನವರಮಾರೂಢೋ ಜಗಾಮ ತ್ರಿದಶಾಲಯಂ ।
ಸೋಽಪಿ ಜಾಬಾಲಿನಾಮಾಽಥ ವಿವಸ್ತ್ರಃ ಸಮುಪದ್ಯತ ॥ ೧೦೯ ॥

---

ನೋಡುತ್ತ ಸಂತಾಪಗೊಳ್ಳುವನು. ಮತ್ತು ಮದ್ಯದ ವಾಸನೆಯನ್ನು ತೆಗೆದುಕೊಳ್ಳುವನು. ಬೇಯಿಸಿದ ಮಾಂಸವನ್ನು ನೋಡುವನು. ಸ್ವೇಚ್ಛಾಪ್ರವೃತ್ತಳಾದ ನನ್ನನ್ನು ನೋಡಿ ಪ್ರತಿದಿನವೂ ದುಃಖಗೊಳ್ಳುವನು.

೧೦೫. ಶ್ರೀ ಭಗವಂತನು ಹೇಳುತ್ತಾನೆ:—ಮಂಗಳಕರಳೆ! ನೀನು ಹೇಳಿರುವುದು ಆಗುವುದು. ಇಗೋ ಈಗಲೇ ಅದು ಆಯಿತು. ನಾನು ಕೈಲಾಸಕ್ಕೆ ತೆರಳುವೆನು. ನೀನು ನಾನು ಹೇಳಿದಂತೆ ಇಲ್ಲಿರು.

೧೦೬. ಸೂತನು ಹೇಳುತ್ತಾನೆ:—ಪೂಜ್ಯನಾದ ಆ ಮಹೇಶ್ವರನು ಹೀಗೆ ಹೇಳಿ ಅದೃಶ್ಯನಾದನು. ಆ ಯೋಗಿನಿಯರೆಲ್ಲ ತಮ್ಮ ತಮ್ಮ ಸ್ಥಳಗಳಲ್ಲಿ ಇದ್ದರು.

೧೦೭. ಚಿತ್ರಾಂಗದನೂ ಅಲ್ಲಿಯೇ ಉತ್ತಮವಾದ ದೇವಾಲಯವನ್ನು ನಿರ್ಮಿಸಿ ಮಹೇಶ್ವರನ ಲಿಂಗವನ್ನು ಪ್ರತಿಷ್ಠೆಮಾಡಿದನು.

೧೦೮. ಅನಂತರ ಹಗಲು ರಾತ್ರಿ ಆಲಸ್ಯವಿಲ್ಲದೆ ಅವನನ್ನು ಪೂಜಿಸಿದನು.

೧೦೯–೧೧೧. ತರುವಾಯ ಒಂದು ವರ್ಷವಾದ ಮೇಲೆ ವ್ಯಾಧಿಮುಕ್ತನೂ, ಸುರೂಪಿಯೂ ಆಗಿ ವಿಮಾನವನ್ನೇರಿ ದೇವಲೋಕಕ್ಕೆ ತೆರಳಿದನು. ಆ

**ಜನಹಾಸ್ಯಕರೋ ಲೋಕೇ ಸ್ಥಿತಸ್ತತ್ರೈವ ಸರ್ವದಾ ।**
**ಪಶ್ಯಮಾನೋ ವಿಕಾರಾಂಸ್ತಾನ್ದುಃಖಿತಃ ಸ್ವಸುತೋದ್ಭವಾನ್ ॥ ೧೧೦ ॥**
**ತತಶ್ಚ ಗರ್ಹಯಾಮಾಸ ಸ್ತ್ರೀಣಾಂ ಜನ್ಮ ಮಹಾಮುನಿಃ ।**
**ತಸ್ಮಿನ್ ಪೀಠೇ ಸಮಾಸಾದ್ಯ ದುಃಖೇನ ಮಹತಾನ್ವಿತಃ ॥ ೧೧೧ ॥**
**ಅಹೋ ಪಾಪಾತ್ಮನಾಂ ಪುಂಸಾಂ ಸಂಭವಿಷ್ಯಂತಿ ಯೋಷಿತಃ ।**
**ಯಾಸಾಮೀದೃಕ್ಸಮಾಚಾರೋ ದ್ವಿಜವಂಶೋದ್ಭವಾಸ್ವಪಿ ॥ ೧೧೨ ॥**
**ಸಕೃದೇವ ಮಯಾ ಸಂಗಃ ಕೃತೋ ನಾರ್ಯಾ ಸಮನ್ವಿತಃ ।**
**ಆಜನ್ಮಮರಣಂ ಯಾವತ್ಪಾಪಂ ಪ್ರಾಪ್ತಂ ಯಥೇದೃಶಂ ॥ ೧೧೩ ॥**
**ಯೇ ಪುನಸ್ತಾಸು ಸಂಸಕ್ತಾಃ ಸದೈವ ಪುರುಷಾಧಮಾಃ ।**
**ಕಾ ತೇಷಾಂ ಜಾಯತೇ ಲೋಕೇ ಗತಿರ್ವೇದ್ಮಿ ನ ಚಿಂತಯನ್ ॥ ೧೧೪ ॥**
**ಏವಂ ತಸ್ಯ ಬ್ರುವಾಣಸ್ಯ ಯೋಗಿನ್ಯಸ್ತಾಃ ಕ್ರುಧಾನ್ವಿತಾಃ ।**
**ತಮೂಚುರ್ಬ್ರಾಹ್ಮಣಂ ತತ್ರ ಘೃಣಯಾ ಪರಿವಾರಿತಂ ॥ ೧೧೫ ॥**

**ಯೋಗಿನ್ಯ ಊಚುಃ:—**

**ಮಾ ನಿಂದಾಂ ಕುರು ಮೂಢಾತ್ಮಂ ಸ್ತ್ವಂ ಸ್ತ್ರೀಣಾಂ ಯೋಗಮಾಶ್ರಿತಃ ।**
**ಏತಚ್ಚರಾಚರಂ ವಿಶ್ವಂ ಸ್ತ್ರೀಭಿಃ ಸಂಧಾರ್ಯತೇ ಯತಃ ॥ ೧೧೬ ॥**

---

ಜಾಬಾಲಿಯೂ ಬತ್ತಲೆಯೂ, ಜನರ ಹಾಸ್ಯಕ್ಕೆ ವಿಷಯನೂ ಆಗಿ ತನ್ನ ಮಗಳ ವಿಕಾರಗಳನ್ನು ನೋಡುತ್ತ ದುಃಖದಿಂದ ಅಲ್ಲಿಯೇ ಇದ್ದನು. ಅವನು ಅಲ್ಲಿ ಅತ್ಯಂತ ದುಃಖಗೊಂಡು ಸ್ತ್ರೀಯರ ಜನ್ಮವನ್ನು ನಿಂದಿಸಿದನು.

೧೧೨. ಪಾಪಿಷ್ಠರಾದ ಮನುಷ್ಯರಿಗೆ ಹೆಣ್ಣುಮಕ್ಕಳು ಹುಟ್ಟುವರು. ಅವರು ಬ್ರಾಹ್ಮಣವಂಶದಲ್ಲಿ ಜನಿಸಿದರೂ ಇಂತಹ ನಡತೆಯುಳ್ಳವರಾಗುವರು.

೧೧೩. ನಾನು ಒಂದು ಸಾರಿ ಮಾತ್ರ ನಾರಿಯ ಸಂಗವನ್ನು ಮಾಡಿದೆನು. ಅದರಿಂದ ಹುಟ್ಟಿ ಸಾಯುವವರೆಗೂ ಇಂತಹ ಪಾಪವನ್ನು ಹೊಂದಿದೆನು.

೧೧೪. ಲೋಕದಲ್ಲಿ ಯಾವಾಗಲೂ ಆ ಹೆಂಗಸರಲ್ಲಿ ಆಸಕ್ತರಾದ ಮನುಷ್ಯಾಧಮರ ಗತಿಯು ಏನೆಂಬುದನ್ನು ಆಲೋಚಿಸಿದರೂ ತಿಳಿಯುವುದಿಲ್ಲ.

೧೧೫. ಯೋಗಿನಿಯರು ಹೀಗೆ ಹೇಳುವ ಆ ಬ್ರಾಹ್ಮಣನಲ್ಲಿ ಕುಪಿತರಾಗಿ ದಯೆಗೊಂಡಿರುವ ಅವನನ್ನು ಕುರಿತು ಹೀಗೆಂದರು.

೧೧೬. ಯೋಗಿನಿಯರು ಹೇಳುತ್ತಾರೆ:—ಮೂಢ! ಚರಾಚರಾತ್ಮಕವಾದ ಈ ಪ್ರಪಂಚವನ್ನು ಸ್ತ್ರೀಯರೇ ರಕ್ಷಿಸುತ್ತಿರುವುದರಿಂದ ಯೋಗವನ್ನಾಶ್ರಯಿಸಿದ ನೀನು ಹೆಂಗಸರನ್ನು ನಿಂದಿಸಬೇಡ.

ಯಾಭಿಃ ಸಂಜನಿತಃ ಶೇಷಃ ಕೂರ್ಮಶ್ಚ ತದನಂತರಂ ।
ಯಾಭ್ಯಾಂ ಸಂಧಾರ್ಯತೇ ಪೃಥ್ವೀ ಯಸ್ಯಾಂ ವಿಶ್ವಂ ಪ್ರತಿಷ್ಠಿತಂ॥ ೧೧೭ ॥
ಧನ್ಯೇಯಂ ತೇ ಸುತಾ ಮೂಢ ಯಾ ಪ್ರಾಪ್ತಾ ಯೋಗಮುತ್ತಮಂ ।
ಪ್ರಾಪ್ತಾ ಚ ಪರಮಂ ಸ್ಥಾನಂ ಸ್ತೋಕೈರೇವಾತ್ರ ವಾಸರೈಃ ॥ ೧೧೮ ॥
ತ್ವಂ ಪುನರ್ಮೂರ್ಖತಾಂ ಪ್ರಾಪ್ತಃ ಶ್ರೌತಸಂ ಮಾರ್ಗಮಾಸ್ಥಿತಃ ।
ಅವಿದ್ಯಯಾ ಸಮಾಯುಕ್ತಃ ಸಂಸಾರೇಽತ್ರ ಭ್ರಮಿಷ್ಯಸಿ ॥ ೧೧೯ ॥

ಮುನಿರುವಾಚ :—

ಸ್ತ್ರಿಯೋ ನಿಂದ್ಯತಮಾಃ ಸರ್ವಾಃ ಸರ್ವಾಽವಸ್ಥಾಸು ದುಃಖದಾಃ ।
ಇಹಲೋಕೇ ಪರೇ ಚೈವ ತಾಭ್ಯಃ ಸೌಖ್ಯಂ ನ ಲಭ್ಯತೇ ॥ ೧೨೦ ॥
ಯದರ್ಥಂ ನಿಹತಃ ಶುಂಭೋ ನಿಶುಂಭಶ್ಚ ಮಹಾಸುರಃ ।
ರಾವಣೋ ದಂಡಭೂಪಶ್ಚ ತಥಾಽನ್ಯೇಽಪಿ ಸಹಸ್ರಶಃ ॥ ೧೨೧ ॥
ಪ್ರಾಪ್ಯ ತಾದೃಗ್ದ್ವಿಜಂ ಕಾಂತಂ ಗೌತಮಂ ಸ್ತ್ರೀ ಸ್ವಭಾವತಃ ।
ಅಹಲ್ಯಾ ಶಕ್ರಮಾಸಾದ್ಯ ಚಕಮೇ ಶೀಲವರ್ಜಿತಾ ॥ ೧೨೨ ॥

ಕನ್ಯೋವಾಚ :—

ಯಚ್ಚ ನಿಂದಸಿ ಮೂಢಾತ್ಮನ್ ಸಂತಿ ನಿಂದ್ಯಾಶ್ಚ ಯೋಷಿತಃ ।
ತದ್ವದಸ್ವ ಮಯಾ ಸಾರ್ಧಂ ಯೇನ ತ್ವಾಂ ಬೋಧಯಾಮ್ಯಹಂ॥ ೧೨೩ ॥

---

೧೧೭. ಈ ಪ್ರಪಂಚವು ಭೂಮಿಯಲ್ಲಿ ನೆಲೆಸಿರುವುದು. ಭೂಮಿಯನ್ನು ಶೇಷಕೂರ್ಮರು ಹೊತ್ತಿರುವರು. ಆ ಶೇಷಕೂರ್ಮರು ಸ್ತ್ರೀಯರಿಂದ ಜನಿಸಿರುವರು.

೧೧೮. ಮೂಢ! ಉತ್ತಮ ಯೋಗವನ್ನಾಶ್ರಯಿಸಿದ ನಿನ್ನೀ ಮಗಳು ಧನ್ಯಳು. ಇವಳು ಸ್ವಲ್ಪ ದಿವಸಗಳಿಂದಲೇ ಉತ್ತಮ ಸ್ಥಾನವನ್ನು ಪಡೆದಿರುವಳು.

೧೧೯. ನೀನು ವೇದಮಾರ್ಗವನ್ನಾಶ್ರಯಿಸಿ ಮೂರ್ಖನಾದೆ. ಮತ್ತು ಆ ವಿದ್ಯೆಯಿಂದ ಈ ಸಂಸಾರದಲ್ಲಿ ಅಲೆಯುತ್ತಿರುವೆ.

೧೨೦. ಮುನಿಯು ಹೇಳುತ್ತಾನೆ:—ಸಮಸ್ತಾವಸ್ಥೆಗಳಲ್ಲಿಯೂ ದುಃಖವನ್ನೀಯುವ ಸಕಲ ಸ್ತ್ರೀಯರೂ ನಿಂದ್ಯರು. ಅವರಿಂದ ಇಹಪರಗಳಲ್ಲಿ ಸೌಖ್ಯವಿಲ್ಲ.

೧೨೧. ಈ ಹೆಂಗಸರಿಗಾಗಿ ಶುಂಭ, ನಿಶುಂಭ, ರಾವಣ, ದಂಡಭೂಪ ಇವರೂ, ಇನ್ನೂ ಇತರ ಸಾವಿರಾರು ಜನರೂ ಹತರಾದರು.

೧೨೨. ಅಹಲ್ಯೆಯು ಅಂತಹ ಗೌತಮ ಬ್ರಾಹ್ಮಣನನ್ನು ಪತಿಯನ್ನಾಗಿ ವರಿಸಿದ್ದರೂ ಸ್ತ್ರೀಸ್ವಭಾವದಿಂದ ನಡತೆ ತಪ್ಪಿ ಇಂದ್ರನನ್ನು ಕಾಮಿಸಿರುವಳು.

೧೨೩. ಕನ್ಯೆಯು ಹೇಳುತ್ತಾಳೆ:—ಮೂಢ! ನೀನು ನಿಂದಿಸುವಂತೆ ನಿಂದ್ಯರಾದ ಹೆಂಗಸರಿದ್ದಾರೆ. ನೀನು ನನ್ನೊಡನೆ ಮಾತಾಡು, ನಿನಗೆ ತಿಳುವಳಿಕೆ ಹೇಳುವೆನು.

**ನ ತೇಽಸ್ತಿ ಹೃದಯೇ ಬುದ್ಧಿರ್ನಲಜ್ಜಾ ನ ದಯಾ ಮುನೇ ।**
**ಕಿಮಂತ್ಯಜೋಽಪಿ ತತ್ಕರ್ಮ ಕುರುತೇ ಯತ್ತ್ವಯಾ ಕೃತಂ ॥ ೧೨೪ ॥**
**ಅಹಂ ತಾವತ್ಪ್ರಹಾರೇಣ ತ್ವಯಾ ವ್ಯಾಪಾದಿತಾಽಧಮ ।**
**ಸ್ತ್ರೀಹತ್ಯೋದ್ಭವಪಾಪಸ್ಯ ನ ಚಿಂತಾ ವಿಧೃತಾ ಹೃದಿ ॥ ೧೨೫ ॥**
**ವಿಶೇಷೇಣ ಸುತಾಯಾಶ್ಚ ಕೋಪಾವಿಷ್ಟೇನ ಚೇತಸಾ ।**
**ಗಚ್ಛಂತಿ ಪಾತಕಾನ್ಯತ್ರ ಪ್ರಾಯಶ್ಚಿತ್ತೈಃ ಪೃಥಗ್ವಿಧೈಃ ॥ ೧೨೬ ॥**
**ಸ್ತ್ರೀವಧೋತ್ಥಂ ಪುನರ್ಯಾತಿ ಯದಿ ತತ್ತ್ವಂ ಪ್ರಕೀರ್ತಯ ।**
**ಏತನ್ಮೇ ನ ಚ ದುಃಖಂ ಸ್ಯಾದ್ಯದ್ಧತಾಽಸ್ಮಿ ದ್ವಿಜಾಧಮ ॥ ೧೨೭ ॥**
**ಯಚ್ಛಪ್ತಾ ನಗ್ನಸದ್ಭಾವಂ ನೀತಾ ತತ್ಪಾತಕಂ ಚ ತೇ ।**
**ಕಲ್ಪಾಂತೇಽಪಿ ಸುದುರ್ಬುದ್ಧೇ ನ ಸಂಯಾಸ್ಯತಿ ಕುತ್ರಚಿತ್ ॥ ೧೨೮ ॥**
**ತಸ್ಮಾದ್ಭುಂಕ್ಷ್ವ ಸುದುಃಖಾರ್ತಃ ಸ್ಥಿತೋಽತ್ರೈವ ಮಯಾ ಸಹ ।**
**ನ ಭೂಯೋ ನಿಂದಸಿ ಪ್ರಾಯೋ ನ ಚ ವ್ಯಾಪಾದಯಿಷ್ಯಸಿ ॥ ೧೨೯ ॥**
**ಅನಿಂದ್ಯಾ ಯೋಷಿತಃ ಸರ್ವಾ ನೈತಾ ದುಷ್ಯಂತಿ ಕರ್ಹಿಚಿತ್ ।**
**ಮಾಸಿ ಮಾಸಿ ರಜೋಹ್ಯಾಸಾಂ ದುಷ್ಕೃತಾನ್ಯಪಕರ್ಷತಿ ॥ ೧೩೦ ॥**

---

೧೨೪. ಮುನಿಯೆ! ನೀನು ಮಾಡಿದ ಕಾರ್ಯವನ್ನು ಚಂಡಾಲನೂ ಮಾಡಲಾರನು. ನಿನ್ನ ಹೃದಯದಲ್ಲಿ ಬುದ್ಧಿ, ನಾಚಿಕೆ, ದಯೆ ಇವು ಗಳಿಲ್ಲ.

೧೨೫–೧೨೮. ನೀಚ! ನೀನು ಕೋಪಗೊಂಡು ಸ್ತ್ರೀಹತ್ಯೆಯನ್ನೂ, ವಿಶೇಷ ವಾಗಿ ಮಗಳ ನಾಶದಿಂದುಂಟಾದ ದೋಷವನ್ನೂ ಚಿಂತಿಸದೆ ನನ್ನನ್ನು ಹೊಡೆದು ಕೊಂದಿರುವೆಯಲ್ಲ. ಇಲ್ಲಿ ಪಾಪಗಳು ನಾನಾ ವಿಧವಾದ ಪ್ರಾಯಶ್ಚಿತ್ತಗಳಿಂದ ಪರಿಹಾರವಾಗುವುವು. ಆದರೆ ಸ್ತ್ರೀವಧೆಯಿಂದುಂಟಾದ ಪಾಪವು ನೀಗುವುದೊ? ನೀನು ಹೇಳು. ದ್ವಿಜಾಧಮ! ನೀನು ನನ್ನನ್ನು ಹೊಡೆದುದರಿಂದ ನನಗೆ ದುಃಖವಿಲ್ಲ, ಬತ್ತಲೆಯಾಗುವಂತೆ ಶಪಿಸಿದ ಪಾಪವು ಕಲ್ಪಾಂತದಲ್ಲಿಯೂ ಹೋಗುವುದಿಲ್ಲ.

೧೨೯. ಆದುದರಿಂದ ನೀನು ಇಲ್ಲಿಯೇ ನನ್ನೊಡನೆ ಇದ್ದು ದುಃಖದಿಂದ ಆ ಪಾಪದ ಫಲವನ್ನನುಭವಿಸು. ಪ್ರಾಯಶಃ ನೀನು ಮರಳಿ ಹೆಂಗಸರನ್ನು ನಿಂದಿಸಲಾರೆ. ಮತ್ತು ಕೊಲ್ಲಲಾರೆ.

೧೩೦. ಹೆಂಗಸರೆಲ್ಲ ನಿಂದಿಸಲನರ್ಹರು. ಇವರು ಒಂದೆಡೆಯಲ್ಲಿಯೂ ದುಷ್ಟರಾಗುವುದಿಲ್ಲ. ಪ್ರತಿ ತಿಂಗಳು ಇವರು ರಜಸ್ವಲೆಯರಾಗುವುದರಿಂದ ಆ ರಜಸ್ಸು ಇವರ ಪಾಪಗಳನ್ನು ಪರಿಹರಿಸುವುದು.

ಮುನಿರುವಾಚ :—

ಸ್ತ್ರಿಯಃ ಪಾಪಸಮಾಚಾರಾ ನೈತಾಃ ಶುಧ್ಯಂತಿ ಕರ್ಹಿಚಿತ್ ।
ಪರಕಾಂತೇ ರತಿರ್ಯಾಸಾಮಂತ್ಯಜತ್ವಂ ಪ್ರಯಚ್ಛತಿ ॥ ೧೩೧ ॥

ಕನ್ಯೋವಾಚ :—

ಮಾ ಮೈವಂ ವದ ಮೂಢಾತ್ಮನ್ನ ಮೇಧ್ಯಾ ಇತಿ ಯೋಷಿತಃ ।
ಅತ್ರ ಶ್ಲೋಕಃ ಪುರಾ ಗೀತೋ ಮನುನಾ ತಂ ನಿಬೋಧ ಮೇ ॥ ೧೩೨ ॥
ಬ್ರಾಹ್ಮಣಾಃ ಪಾದತೋ ಮೇಧ್ಯಾ ಗಾವೋ ಮೇಧ್ಯಾಸ್ತು ಪೃಷ್ಠತಃ ।
ಅಜಾಶ್ವಾ ಮುಖತೋ ಮೇಧ್ಯಾಃ ಸ್ತ್ರಿಯೋ ಮೇಧ್ಯಾಶ್ಚ ಸರ್ವತಃ ॥

ಮುನಿರುವಾಚ :—

ಬ್ರಾಹ್ಮಣಾಃ ಸರ್ವತೋ ಮೇಧ್ಯಾ ಗಾವೋ ಮೇಧ್ಯಾಶ್ಚ ಸರ್ವತಃ ।
ಅಜಾಶ್ವಾ ಮುಖತೋ ಮೇಧ್ಯಾ ನ ಮೇಧ್ಯಾಶ್ಚ ಸ್ತ್ರಿಯಃ ಕ್ವಚಿತ್ ॥

ಕನ್ಯೋವಾಚ :—

ತಸ್ಯ ಚಿಂತಾಮಣಿರ್ಹಸ್ತೇ ತಸ್ಯ ಕಲ್ಪದ್ರುಮೋ ಗೃಹೇ ।
ಕುಬೇರಃ ಕಿಂಕರಸ್ತಸ್ಯ ಯಸ್ಯ ಸ್ಯಾತ್ಕಾಮಿನೀ ಗೃಹೇ ॥ ೧೩೩ ॥

---

೧೩೧. ಮುನಿಯು ಹೇಳುತ್ತಾನೆ:—ಹೆಂಗಸರು ಪಾಪದ ನಡತೆಯುಳ್ಳವರು. ಇವರು ಎಲ್ಲಿಯೂ ಶುದ್ಧರಾಗುವುದಿಲ್ಲ. ಇವರು ಪರಪತಿಯಲ್ಲಿ ಅನುರಾಗವುಳ್ಳವರಾಗುವುದರಿಂದ ಚಂಡಾಲರಾಗುವರು.

೧೩೨. ಕನ್ಯೆಯು ಹೇಳುತ್ತಾಳೆ:—ಮೂಢ! ಸ್ತ್ರೀಯರು ಅಶುದ್ಧರೆಂದು ಹೇಳಬೇಡ. ಈ ವಿಷಯದಲ್ಲಿ ಮನುವು ಹಿಂದೆ ಹೇಳಿರುವ ಒಂದು ಶ್ಲೋಕವಿದೆ. ಅದನ್ನು ನನ್ನಿಂದ ತಿಳಿದುಕೊ.

೧೩೩. "ಬ್ರಾಹ್ಮಣರು ಪಾದದಲ್ಲಿಯೂ, ಗೋವುಗಳು ಪೃಷ್ಠಭಾಗದಲ್ಲಿಯೂ, ಆಡು, ಕುದುರೆಗಳು ಬಾಯಿಯಲ್ಲಿಯೂ, ಹೆಂಗಸರು ಎಲ್ಲಿಡೆಯಲ್ಲಿಯೂ ಶುದ್ಧರು".

೧೩೪. ಮುನಿಯು ಹೇಳುತ್ತಾನೆ:—ಬ್ರಾಹ್ಮಣರು, ಗೋವುಗಳು ಎಲ್ಲ ಕಡೆಯಲ್ಲಿಯೂ, ಆಡು, ಕುದುರೆಗಳು ಬಾಯಿಯಲ್ಲಿಯೂ ಪವಿತ್ರರು. ಹೆಂಗಸರು ಎಲ್ಲಿಯೂ ಶುದ್ಧರಲ್ಲ.

೧೩೫. ಕನ್ಯೆಯು ಹೇಳುತ್ತಾಳೆ:—ಯಾವನ ಮನೆಯಲ್ಲಿ ಹೆಂಗಸಿರುವಳೊ, ಅವನ ಕೈಯಲ್ಲಿ ಚಿಂತಾಮಣಿಯೂ, ಮನೆಯಲ್ಲಿ ಕಲ್ಪವೃಕ್ಷವೂ ಇರುವುವು. ಕುಬೇರನು ಅವನಿಗೆ ಸೇವಕನಾಗುವನು.

ಮುನಿರುವಾಚ :—

ತಸ್ಯಾಪದೋಽಖಿಲಾ ದುಃಖಂ ದುಃಖಂ ತಸ್ಯಾಽಖಿಲಂ ಗೃಹೇ ।
ನರಕಃ ಸರ್ವತಸ್ತಸ್ಯ ಯಸ್ಯ ಸ್ಯಾತ್ಕಾಮಿನೀ ಗೃಹೇ ॥ ೧೩೬ ॥

ಕನ್ಯೋವಾಚ :—

ಯಾನಿ ಕಾನ್ಯತ್ರ ಸೌಖ್ಯಾನಿ ಭೋಗಸ್ಥಾನಾನಿ ಯಾನಿ ಚ ।
ಧರ್ಮಾರ್ಥಕಾಮಜಾತಾನಿ ತಾನಿ ಸ್ತ್ರೀಭ್ಯೋ ಭವಂತಿ ಹಿ ॥ ೧೩೭ ॥

ಮುನಿರುವಾಚ :—

ಯಾನಿ ಕಾನಿ ಸುದುಃಖಾನಿ ಕ್ಲೇಶಾನಿ ಯಾನಿ ದೇಹಿನಾಂ ।
ಯಾನಿ ಕಷ್ಟಾನ್ಯನಿಷ್ಟಾನಿ ಸ್ತ್ರೀಭ್ಯಸ್ತಾನಿ ಭವಂತಿ ಚ ॥ ೧೩೮ ॥

ಕನ್ಯೋವಾಚ :—

ಧರ್ಮಾಽರ್ಥಕಾಮಮೋಕ್ಷಾನ್ ಸ್ತ್ರೀ ಚತುರೋಽಪಿ ಚತಸೃಭಿಃ ।
ವಹ್ನಿಪ್ರದಕ್ಷಿಣಾಭಿಸ್ತಾನ್ ವಿವಾಹೇಽಪಿ ಪ್ರದರ್ಶಯೇತ್ ॥ ೧೩೯ ॥

ಮುನಿರುವಾಚ :—

ಸಂಸಾರಭ್ರಮಣಂ ನಾರೀ ಪ್ರಥಮೇಽಪಿ ಸಮಾಗಮೇ ।
ವಹ್ನಿಪ್ರದಕ್ಷಿಣಾನ್ಯಾಯವ್ಯಾಜೇನೈವ ಪ್ರದರ್ಶಯೇತ್ ॥ ೧೪೦ ॥

---

೧೩೬. ಮುನಿಯು ಹೇಳುತ್ತಾನೆ:—ಯಾವನ ಮನೆಯಲ್ಲಿ ಹೆಂಗಸಿರುವಳೊ, ಅವನ ಮನೆಯಲ್ಲಿ ಸಮಸ್ತಾಪತ್ತುಗಳೂ, ಸಕಲ ದುಃಖಗಳೂ ಇರುವುವು. ಅವನಿಗೆ ಎಲ್ಲೆಡೆಯಲ್ಲಿಯೂ ನರಕವು.

೧೩೭. ಕನ್ಯೆಯು ಹೇಳುತ್ತಾಳೆ:—ಸ್ತ್ರೀಯರಿಂದಲೇ ಈ ಲೋಕದಲ್ಲಿ ಧರ್ಮಾರ್ಥಕಾಮ ವಿಷಯಕವಾದ ಸಮಸ್ತ ಸೌಖ್ಯಗಳೂ, ಎಲ್ಲ ಭೋಗಸ್ಥಾನಗಳೂ ಉಂಟಾಗುವುವು.

೧೩೮. ಮುನಿಯು ಹೇಳುತ್ತಾನೆ:—ಮನುಷ್ಯರಿಗೆ ಸಕಲ ದುಃಖಕ್ಲೇಶಗಳೂ, ಇಷ್ಟಾನಿಷ್ಟಗಳೂ ಉಂಟಾಗುವುವು.

೧೩೯. ಕನ್ಯೆಯು ಹೇಳುತ್ತಾಳೆ:—ಸ್ತ್ರೀಯು ವಿವಾಹದಲ್ಲಿ ನಾಲ್ಕು ಅಗ್ನಿ ಪ್ರದಕ್ಷಿಣೆಗಳಿಂದ ನಾಲ್ಕು ವಿಧ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ತೋರಿಸುವಳು.

೧೪೦. ಮುನಿಯು ಹೇಳುತ್ತಾನೆ:—ನಾರಿಯು ಮೊದಲಿನ ಸಮಾಗಮದಲ್ಲಿಯೇ ಅಗ್ನಿಪ್ರದಕ್ಷಿಣೆಯ ನೆಪದಿಂದ ಸಂಸಾರದ ಭ್ರಾಂತಿಯನ್ನು ತೋರಿಸುತ್ತಾಳೆ.

ಕನ್ಯೋವಾಚ :—

ಕೇ ನಾಮ ನ ವಿರಜ್ಯಂತಿ ಜ್ಞಾನಾಢ್ಯಾ ಅಪಿ ಮಾನವಾಃ ।
ಕರ್ಣಾಂತಲಗ್ನನೇತ್ರಾಂತಾಂ ದೃಷ್ಟ್ವಾ ಪೀನಪಯೋಧರಾಂ ॥ ೧೪೧ ॥

ಮುನಿರುವಾಚ :—

ಕೇ ನಾಮ ನ ವಿನಶ್ಯಂತಿ ಮೂಢಜ್ಞಾನಾ ನಿತಂಬಿನೀಂ ।
ರಮ್ಯಬುದ್ಧ್ಯೋಪಸರ್ಪಂತಿ ಯೇ ಜ್ವಾಲಾಃ ಶಲಭಾ ಇವ ॥ ೧೪೨ ॥

ಕನ್ಯೋವಾಚ :—

ನಿರ್ಮುಖೌ ಚ ಕಠೋರೌ ಚ ಪ್ರೋದ್ಧತೌ ಚ ಮನೋರಮೌ ।
ಸ್ತ್ರೀಸ್ತನೌ ಸೇವತೇ ಧನ್ಯೋ ಮಧುಮಾಂಸೇ ವಿಶೇಷತಃ ॥ ೧೪೩ ॥

ಮುನಿರುವಾಚ :—

ಆಭೋಗಿನೌ ಮಂಡಲಿನೌ ತತ್ಕ್ಷಣಾನ್ಮುಕ್ತಕಂಚುಕೌ ।
ವರಮಾಶೀವಿಷೌ ಸ್ಪೃಷ್ಟೌ ನ ತು ಪತ್ನ್ಯಾಃ ಪಯೋಧರೌ ॥ ೧೪೪ ॥

ಕನ್ಯೋವಾಚ :—

ನ ಚಾಸಾಂ ರಚನಾಮಾತ್ರಂ ಕೇವಲಂ ರಮ್ಯಮಂಗಿಭಿಃ ।
ಪರಿಷ್ವಂಗೋಽಪಿ ರಾಮಾಣಾಂ ಸೌಖ್ಯಾಯ ಪುಲಕಾಯ ಚ ॥ ೧೪೫ ॥

---

೧೪೧. ಕನ್ಯೆಯು ಹೇಳುತ್ತಾಳೆ:—ಯಾವ ಜ್ಞಾನಿಗಳು ವಿಶಾಲಾಕ್ಷಿಯೂ, ಪುಷ್ಟವಾದ ಕುಚವುಳ್ಳವಳೂ ಆದ ಸುಂದರಿಯನ್ನು ನೋಡಿ ವೈರಾಗ್ಯಗೊಳ್ಳುತ್ತಾರೆ?

೧೪೨. ಮುನಿಯು ಹೇಳುತ್ತಾನೆ:—ಯಾವ ಜ್ಞಾನಮೂಢರು ಮಿಡತೆಗಳು ಅಗ್ನಿಜ್ವಾಲೆಯನ್ನು ಪ್ರವೇಶಿಸುವಂತೆ ಅಂಗನೆಯನ್ನು ಸುಂದರಿಯೆಂದು ಸಮೀಪಿಸಿ ಹಾಳಾಗುವುದಿಲ್ಲ?

೧೪೩. ಕನ್ಯೆಯು ಹೇಳುತ್ತಾಳೆ:—ಪುಣ್ಯವಂತನು ಮುಖವಿಲ್ಲದಿರುವುವೂ, ಗಟ್ಟಿಯೂ, ಮೇಲ್ಮುಖಗಳೂ, ಮನೋಹರಗಳೂ ಆದ ಹೆಂಗಸಿನ ಸ್ತನಗಳನ್ನೂ, ಮದ್ಯ ಮಾಂಸಗಳನ್ನೂ ಸೇವಿಸುತ್ತಾನೆ.

೧೪೪. ಮುನಿಯು ಹೇಳುತ್ತಾನೆ:—ವಿಶಾಲಗಳೂ, ಸುತ್ತಿಕೊಂಡಿರುವುವೂ (ಮಂಡಲಾಕಾರವಾಗಿರುವುವೂ), ಆಗಲೇ ಪೊರೆಯನ್ನು ಬಿಟ್ಟಿರುವುವೂ (ಕುಪ್ಪಸವಿಲ್ಲದಿರುವುವೂ), ಆದ ಹಾವುಗಳನ್ನು ಮುಟ್ಟುವುದು ಒಳ್ಳೆಯದು. ಪತ್ನಿಯ ಕುಚಸ್ಪರ್ಶವು ಉತ್ತಮವಲ್ಲ.

೧೪೫. ಕನ್ಯೆಯು ಹೇಳುತ್ತಾಳೆ:—ಈ ಅಂಗನೆಯ ನಿರ್ಮಾಣ ಮಾತ್ರ ಸುಂದರವಾದುದಲ್ಲ. ಈ ಸುಂದರಿಯರ ಆಲಿಂಗನೆಯು ಸೌಖ್ಯವನ್ನೂ, ರೋಮಾಂಚವನ್ನೂ ಉಂಟುಮಾಡುವುದು.

ಮುನಿರುವಾಚ :—

ನ ಚಾಸಾಂ ರಚನಾಮಾತ್ರಂ ರಮ್ಯಂ ಸ್ಯಾತ್ಪಾಪದಂ ದೃಶಃ ।
ವಪುಃ ಸ್ಪೃಷ್ಟಂ ವಿನಾಶಾಯ ಸ್ತ್ರೀಣಾಂ ಪ್ರೇತ್ಯ ನರಕಾಯ ಚ ॥ ೧೪೬ ॥

ಕನ್ಯೋವಾಚ :—

ಕೋ ನಾಮ ನ ಸುಖೀ ಲೋಕೇ ಕೋ ನಾಮ ಸುಕೃತೀ ನ ಚ ।
ಸ್ಪೃಹಣೀಯತನುಃ ಕೋ ನ ಸ್ತ್ರೀಜನೋ ಯಸ್ಯ ರಜ್ಯತೇ ॥ ೧೪೭ ॥

ಮುನಿರುವಾಚ :—

ಕೋ ನ ಮುಕ್ತಿಂ ವ್ರಜೇತ್ತತ್ರ ಕೋ ನ ಶಸ್ಯತರೋ ಭವೇತ್ ।
ಕೋ ನ ಸ್ಯಾತ್ಕ್ಷೇಮಸಂಯುಕ್ತಃ ಸ್ತ್ರೀಜನೇ ಯೋ ನ ರಜ್ಯತೇ ॥೧೪೮॥

ಕನ್ಯೋವಾಚ :—

ಸಂಸಾರಾಂತಃ ಪ್ರಸುಪ್ತಸ್ಯ ಕೀಟಸ್ಯಾಽಪಿ ಪ್ರರೋಚತೇ ।
ಸ್ತ್ರೀಶರೀರಂ ನರಸ್ಯಾಽತ್ರ ಕಿಂ ಪುನರ್ನ ವಿವೇಕಿನಃ ॥ ೧೪೯ ॥

ಮುನಿರುವಾಚ :—

ಅಮೇಧ್ಯಜಾತಸ್ಯ ಯಥಾ ತಥಾ ತದ್ರೋಚನಂ ಕೃಮೇಃ ।
ತಥಾ ಸಂಸಾರಸೂತಸ್ಯ ಸ್ತ್ರೀಶರೀರೇ ಚ ಕಾಮಿನಃ ॥ ೧೫೦ ॥

---

೧೪೬. ಮುನಿಯು ಹೇಳುತ್ತಾನೆ:—ಈ ಹೆಂಗಸರ ರಚನಾಮಾತ್ರ ರಮ್ಯವಲ್ಲ. ಕಣ್ಣಿಗೆ ಪಾಪವನ್ನೂ ಉಂಟುಮಾಡುವುದು. ಅವರ ದೇಹಸ್ಪರ್ಶವು ನಾಶಕ್ಕೂ, ಮರಣಾನಂತರ ನರಕಕ್ಕೂ ಕಾರಣವು.

೧೪೭. ಕನ್ಯೆಯು ಹೇಳುತ್ತಾಳೆ:—ಸ್ತ್ರೀಯರಲ್ಲಿ ಅನುರಾಗಗೊಂಡ ಯಾವನು ಲೋಕದಲ್ಲಿ ಸುಖಿಯೂ, ಪುಣ್ಯವಂತನೂ, ಸುಂದರನೂ ಅಲ್ಲ ?

೧೪೮. ಮುನಿಯು ಹೇಳುತ್ತಾನೆ:—ಸ್ತ್ರೀಯರನ್ನು ಕಾಮಿಸದ ಯಾವ ಮನುಷ್ಯನು ಮುಕ್ತಿಯನ್ನು ಪಡೆಯುವುದಿಲ್ಲ? ಶ್ರೇಷ್ಠನಾಗುವುದಿಲ್ಲ? ಕ್ಷೇಮವನ್ನು ಹೊಂದುವುದಿಲ್ಲ?

೧೪೯. ಕನ್ಯೆಯು ಹೇಳುತ್ತಾಳೆ:—ಸಂಸಾರದಲ್ಲಿ ಮಗ್ನವಾದ ಹುಳುವಿಗೂ ರಮಣಿಯ ಶರೀರವು ಇಷ್ಟವಾಗುವುದು. ವಿವೇಕಿಯಾದ ಮನುಷ್ಯನಿಗೆ ಇಷ್ಟವಾಗುವುದೆಂದು ಹೇಳಬೇಕಾಗಿರುವುದಿಲ್ಲ.

೧೫೦. ಮುನಿಯು ಹೇಳುತ್ತಾನೆ:—ಕೃಮಿಗೆ ಅಮೇಧ್ಯದಲ್ಲಿ ಪ್ರೀತಿಯುಂಟಾಗುವಂತೆ ಹೆಂಗಸಿನ ಶರೀರದಲ್ಲಿ ಪ್ರೀತಿಯುಂಟಾಗುವುದು. ಹಾಗೆಯೇ ಸಂಸಾರದಲ್ಲಿ ಜನಿಸಿದ ಕಾಮಿಗೆ ಹೆಂಗಸಿನಲ್ಲಿ ಆದರವುಂಟಾಗುವುದು.

ಕನ್ಯೋವಾಚ :—

ಸೌಖ್ಯಸ್ಥಾನಂ ನೃಣಾಂ ಕಿಂಚಿದ್ವೇಧಸಾಽನ್ಯದಪಶ್ಯತಾ ।
ಶಾಶ್ವತಂ ಚಿಂತಯಿತ್ವಾಽಥ ಸ್ತ್ರೀರತ್ನಮಿದಮಾಹೃತಂ ॥ ೧೫೧ ॥

ಮುನಿರುವಾಚ :—

ಬಂಧನಂ ಜಗತಃ ಕಿಂಚಿದ್ವೇಧಸಾಽನ್ಯದಪಶ್ಯತಾ ।
ಸ್ತ್ರೀರೂಪೇಣ ತತಃ ಕೋಽಪಿ ಪಾಶೋಽಯಂ ಸ್ತ್ರೀಮಯಃ ಕೃತಃ ॥೧೫೨॥

ಸೂತ ಉವಾಚ :—

ಏವಂ ಸ ಮುನಿಶಾರ್ದೂಲಸ್ತಯಾಽತೀವ ಸಮಾಗಮೇ ।
ನಿರುತ್ತರೀಕೃತೋ ಯಾವತ್ತತಃ ಪ್ರಾಹ ನಿಜಾಂ ಸುತಾಂ ॥ ೧೫೩ ॥

ಮುನಿರುವಾಚ :—

ತ್ವಯಾ ಸಹ ನ ಸಂವಾದೋ ಮಯಾ ಕಾರ್ಯೋಽಧುನಾ ಕ್ವಚಿತ್ ।
ಯಾ ತ್ವಂ ಬಾಲಾಽಪಿ ಮಾಮೇವಂ ನಿಷೇಧಯಸಿ ಸರ್ವತಃ ॥ ೧೫೪ ॥
ತಸ್ಮಾದ್ಧನ್ಯತರಂ ಮನ್ಯೇ ಅಹಮಾತ್ಮಾನಮದ್ಯ ವೈ ।
ಯಸ್ಯ ಮೇ ತ್ವಂ ಸುತಾ ಈದೃಗೀದೃಕ್ಶಾಸ್ತ್ರವಿಚಕ್ಷಣಾ ॥ ೧೫೫ ॥
ತಸ್ಮಾನ್ನ ಮೇ ಮಹಾಭಾಗೇ ಕೋಪಃ ಸ್ವಲ್ಪೋಽಪಿ ವಿದ್ಯತೇ ।
ತಸ್ಮಾದ್ಯಥೇಚ್ಛಯಾ ಕ್ರೀಡಾಂ ಕುರು ಯೋಗಿನಿ ಮಧ್ಯಗಾ ॥ ೧೫೬ ॥

---

೧೫೧. ಕನ್ಯೆಯು ಹೇಳುತ್ತಾಳೆ:—ಬ್ರಹ್ಮನು ಜಗತ್ತಿನಲ್ಲಿ ಮನುಷ್ಯರಿಗೆ ಶಾಶ್ವತವಾದ ಬೇರೆ ಸೌಖ್ಯಸ್ಥಾನವು ಸಿಕ್ಕದಿರುವುದರಿಂದ ಆಲೋಚಿಸಿ ಈ ಸ್ತ್ರೀ ಎಂಬ ರತ್ನವನ್ನು ನಿರ್ಮಿಸಿದನು.

೧೫೨. ಮುನಿಯು ಹೇಳುತ್ತಾನೆ:—ಜಗತ್ತಿನಲ್ಲಿ ಜನರಿಗೆ ಬೇರೆ ಬಂಧನವನ್ನು ಕಾಣದೆ ಬ್ರಹ್ಮನು ಸ್ತ್ರೀರೂಪವಾದ ಒಂದು ಹಗ್ಗವನ್ನು ಸೃಷ್ಟಿಸಿದನು.

೧೫೩. ಸೂತನು ಹೇಳುತ್ತಾನೆ:—ಹೀಗೆ ಯೋಗಿನಿಯಾದ ಆ ಫಲವತಿಯು ವಾದದಲ್ಲಿ ಮುನಿಯು ಉತ್ತರ ಕೊಡದಂತೆ ಮಾಡಲು ಜಾಬಾಲಿಯು ತನ್ನ ಮಗಳನ್ನು ಕುರಿತು ಇಂತೆಂದನು.

೧೫೪. ಮುನಿಯು ಹೇಳುತ್ತಾನೆ:—ನೀನು ಬಾಲಕಿಯಾದರೂ ನನ್ನನ್ನು ಹೀಗೆ ಎಲ್ಲ ವಿಷಯದಲ್ಲಿಯೂ ನಿಷೇಧಿಸುವುದರಿಂದ ನಾನು ಈಗ ನಿನ್ನೊಡನೆ ಯಾವ ಸಂವಾದವನ್ನೂ ಮಾಡುವುದಿಲ್ಲ.

೧೫೫. ನನ್ನೀ ಮಗಳಾದ ನೀನು ಹೀಗೆ ಶಾಸ್ತ್ರದಲ್ಲಿ ಕುಶಲಳಾದ್ದರಿಂದ ಈಗ ನಾನು ಧನ್ಯನಾದೆನೆಂದು ತಿಳಯುತ್ತೇನೆ.

೧೫೬. ಆದುದರಿಂದ ನನಗೆ ಸ್ವಲ್ಪವೂ ಕೋಪವಿಲ್ಲ. ನೀನು ಯೋಗಿನಿಯರ ನಡುವೆ ಸ್ವೇಚ್ಛೆಯಾಗಿ ಆಟವಾಡು.

ತತಃ ಸಾ ಲಜ್ಜಿತಾ ದೃಷ್ಟ್ವಾ ಪಿತರಂ ಸ್ನೇಹವತ್ಸಲಂ ।
ಪ್ರಣಿಪತ್ಯ ಪುನಃ ಪ್ರಾಹ ಯೋಗಿನೀಮಧ್ಯಸಂಸ್ಥಿತಾ ॥ ೧೫೭ ॥
ಅಜ್ಞಾನಾದ್ಯದಿ ವಾಜ್ಞಾನಾತ್ತ್ವಂ ನಿಷಿದ್ಧೋ ಮಯಾ ಪ್ರಭೋ ।
ಕ್ಷಂತವ್ಯಂ ಸಕಲಂ ಮೇಽದ್ಯ ಬಾಲಿಕಾಯಾ ವಿಶೇಷತಃ ॥ ೧೫೮ ॥
ಅತ್ರ ಪೀಠೇ ಸಮಾಗತ್ಯ ಪ್ರಥಮಂ ತೇ ದ್ವಿಜೋತ್ತಮಾಃ ।
ಪೂಜಾಂ ಸರ್ವೇ ಕರಿಷ್ಯಂತಿ ಮಾನವಾ ಭಕ್ತಿತತ್ಪರಾಃ ।
ಪಶ್ಚಾಚ್ಚ ಸರ್ವಪೀಠಸ್ಯ ಯಾಸ್ಯಂತಿ ಚ ಪರಾಂ ಗತಿಂ ॥ ೧೫೯ ॥
ಏವಂ ಸಾ ತತ್ರ ಸಂಜಾತಾ ಜಾಬಾಲಿಮುನಿಸಂಭವಾ ।
ಜಾಬಾಲಿಶ್ಚ ಮುನಿಶ್ರೇಷ್ಠಸ್ತಥಾ ಚಿತ್ರಾಂಗದೇಶ್ವರಃ ॥ ೧೬೦ ॥
ತ್ರಯಾಣಾಮಪಿ ಯಸ್ತೇಷಾಂ ಪೂಜಾಂ ಮರ್ತ್ಯಃ ಸಮಾಚರೇತ್ ।
ದಿವಸೇ ದಿವಸೇ ತತ್ರ ಸ ಸಿದ್ಧಿಂ ಸಮವಾಪ್ನುಯಾತ್ ॥ ೧೬೧ ॥
ನಾಽಸಾಧ್ಯಂ ವಿದ್ಯತೇ ಕಿಂಚಿತ್ತಾವದತ್ರ ಧರಾತಲೇ ।
ಪೂಜ್ಯತೇ ಭೂಮಿಪಾಲಾದ್ಯೈರ್ಭೋಗಾನ್ದಿವ್ಯಾಂಸ್ತಥಾ ಲಭೇತ್ ॥ ೧೬೨ ॥
ತಸ್ಮಾತ್ಸರ್ವಪ್ರಯತ್ನೇನ ಸ ಮುನಿಃ ಸಾ ಚ ಕನ್ಯಕಾ ।
ಪೂಜನೀಯಾ ವಿಶೇಷೇಣ ಸ ದೇವೋಽಥ ಮಹೇಶ್ವರಃ ॥ ೧೬೩ ॥

---

೧೫೭. ಅನಂತರ ಯೋಗಿನಿಯರ ಮಧ್ಯದಲ್ಲಿರುವ ಅವಳು ಪ್ರೀತಿಗೊಂಡ ತಂದೆಯನ್ನು ಕಂಡು ಲಜ್ಜಿತಳಾಗಿ ನಮಸ್ಕರಿಸಿ ಹೀಗೆಂದಳು.

೧೫೮. ಸ್ವಾಮಿ ! ನಾನು ನಿನ್ನನ್ನು ತಿಳಿದೋ ತಿಳಿಯದೆಯೋ ತಿರಸ್ಕರಿಸಿರುವೆನು. ಬಾಲಿಕೆಯಾದ ನನ್ನ ಆ ಎಲ್ಲ ಅಪರಾಧವನ್ನು ಕ್ಷಮಿಸು.

೧೫೯. ದ್ವಿಜೋತ್ತಮರು ಈ ಪೀಠಕ್ಕೆ ಬಂದು ಮೊದಲು ನಿನ್ನನ್ನು ಭಕ್ತಿಯಿಂದ ಪೂಜಿಸಿ ಅನಂತರ ಎಲ್ಲ ಪೀಠಗಳನ್ನು ಪೂಜಿಸಿದರೆ ಉತ್ತಮಗತಿಯನ್ನು ಹೊಂದುವರು.

೧೬೦–೧೬೧. ಹೀಗೆ ಅಲ್ಲಿ 'ನೆಲೆಸಿರುವ ಆ ಫಲವತೀ, ಜಾಬಾಲಿ, ಚಿತ್ರಾಂಗದೇಶ್ವರ ಈ ಮೂವರನ್ನು ಪ್ರತಿದಿನವೂ ಪೂಜಿಸಿದ ಮನುಷ್ಯನು ಸಿದ್ಧಿಯನ್ನು ಹೊಂದುವನು.

೧೬೨. ಹಾಗೆ ಪೂಜಿಸಿದ ಮಾನವನಿಗೆ ಭೂಮಿಯಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ. ಅವನು ರಾಜರೇ ಮೊದಲಾದವರಿಂದ ಪೂಜಿತನಾಗಿ ದಿವ್ಯ ಭೋಗಗಳನ್ನನುಭವಿಸುವನು.

೧೬೩. ಆದುದರಿಂದ ಆ ಜಾಬಾಲಿಮುನಿ, ಆ ಫಲವತೀ, ಚಿತ್ರಾಂಗದೇಶ್ವರ ಇವರನ್ನು ಪ್ರಯತ್ನದಿಂದ ಪೂಜಿಸಬೇಕು.

**ಏತದ್ವಃ ಸರ್ವಮಾಖ್ಯಾತಮಾಖ್ಯಾನಂ ಸರ್ವಕಾಮದಂ ।**
**ಪಠತಾಂ ಶೃಣ್ವತಾಂ ಚೈವ ಇಹಲೋಕೇ ಪರತ್ರ ಚ ॥ ೧೬೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಚಿತ್ರಾಂಗದೇಶ್ವರ ಫಲವತೀ ಜಾಬಾಲ್ಯಾಖ್ಯಾನವರ್ಣನಂ" ನಾಮ**
**ಚತುಶ್ಚತ್ವಾರಿಂಶದಧಿಕಶತತಮೋऽಧ್ಯಾಯಃ**

---

೧೬೪. ಪಠಿಸುವವರಿಗೂ, ಕೇಳುವವರಿಗೂ ಇಹಪರಗಳಲ್ಲಿ ಸಕಲೇಷ್ಟಾರ್ಥಗಳನ್ನು ನೀಡುವ ಈ ಆಖ್ಯಾನವನ್ನೆಲ್ಲ ನಿಮಗೆ ಹೇಳಿರುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರಾಂಗದೇಶ್ವರ, ಫಲವತೀ, ಜಾಬಾಲ್ಯಾಖ್ಯಾನವರ್ಣನ" ವೆಂಬ
ನೂರನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ

## ಅಮರಕೇಶ್ವರಕ್ಷೇತ್ರಮಾಹಾತ್ಮ್ಯವರ್ಣನಂ

**ಋಷಯ ಊಚುಃ:—**

**ಯತ್ತ್ವಯಾ ಕಥಿತಂ ಸೂತ ನ ಮೃತಾ ಸಾ ಕುಮಾರಿಕಾ ।**
**ಹತಾ ರೌದ್ರಪ್ರಹಾರೈಶ್ಚ ಕೌತುಕಂ ತನ್ಮಹತ್ತರಂ ॥ ೧ ॥**
**ಯತೋ ಭೂಯಃ ಪ್ರಸಂಜಾತಾ ಯೋಗಿನೀ ಹರತುಷ್ಟಿದಾ ।**
**ತತ್ಸಾರ್ಥಂ ಸರ್ವಮಾಚಕ್ಷ್ವ ಕಾರಣಂ ಚ ತದದ್ಭುತಂ ॥ ೨ ॥**

**ಸೂತ ಉವಾಚ:—**

**ಸಾ ಪ್ರವಿಷ್ಟಾ ಸಮಂ ತೇನ ಸುಪುಣ್ಯಮಮರೇಶ್ವರಂ ।**
**ಮಾಘಕೃಷ್ಣಚತುರ್ದಶ್ಯಾಂ ನ ಮೃತ್ಯುರ್ಯತ್ರ ವಿದ್ಯತೇ ॥ ೩ ॥**
**ಅಪಿ ಚೈವಾಽಽಯುಷಃ ಶೇಷೇ ಕಿಮುತಾಕಾಲತೋ ದ್ವಿಜಾಃ ।**
**ತೇನ ನೋ ನಿಧನಂ ಪ್ರಾಪ್ತಾ ಹತಾಽಪಿ ಸುದೃಢಂ ತದಾ ॥ ೪ ॥**

---

## ಕನ್ನಡದ ಅನುವಾದ

### ಅಮರಕೇಶ್ವರಕ್ಷೇತ್ರಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಭಯಂಕರ ಹೊಡೆತಗಳಿಂದಲೂ ಆ ಕುಮಾರಿಯು ಮೃತಳಾಗಲಿಲ್ಲವೆಂದು ಹೇಳಿರುವೆಯಷ್ಟೆ. ಆ ವಿಷಯದಲ್ಲಿ ನಮಗೆ ಬಹಳ ಕುತೂಹಲವುಂಟಾಗಿದೆ.

೨. ಅವಳು ಮಹೇಶ್ವರನಿಗೆ ಸಂತೋಷವನ್ನುಂಟುಮಾಡಿ ಮರಳಿ ಯೋಗಿನಿಯಾಗಲು ಕಾರಣವೇನೆಂಬುದನ್ನು ನಮಗೆ ಹೇಳು.

೩. ಸೂತನು ಹೇಳುತ್ತಾನೆ:—ಆ ಫಲವತಿಯು ಮಾಘ ಕೃಷ್ಣ ಚತುರ್ದಶೀ ದಿನ ಆ ಚಿತ್ರಾಂಗದನೊಡನೆ ಮರಣ ಭಯವಿಲ್ಲದ ಅಮರಕೇಶ್ವರ ಕ್ಷೇತ್ರವನ್ನು ಸೇರಿದಳು.

೪. ಆ ಕ್ಷೇತ್ರದಲ್ಲಿ ಆಯುಸ್ಸಿರುವ ಜನರಿಗೇ ಮರಣವುಂಟಾಗುವುದಿಲ್ಲವೆಂದು ಹೇಳಬೇಕಾಗಿಲ್ಲ. ಇನ್ನು ಅಕಾಲಮರಣವೆಲ್ಲಿ? ಆದುದರಿಂದಲೇ ಆ ಫಲವತಿಯು ಅಧಿಕವಾಗಿ ಹೊಡೆಯಲ್ಪಟ್ಟರೂ ಸಾಯಲಿಲ್ಲ.

ಋಷಯ ಊಚುಃ:—

ಅಮರೇಶ್ವರ ಇತ್ಯುಕ್ತೋ ಯೋ ದೇವೋಽಹ್ಯಮರತ್ವದಃ ।
ಕೇನ ಸಂಸ್ಥಾಪಿತೋ ಹ್ಯತ್ರ ಕಿಂಪ್ರಭಾವಶ್ಚ ಕೀರ್ತಯ ॥ ೫ ॥

ಸೂತ ಉವಾಚ:—

ಅದಿತಿಶ್ಚ ದಿತಿಶ್ಚೈವ ಪ್ರಜಾಪತಿಸುತೇ ಶುಭೇ ।
ಕೃತೇ ಪುರಾಽತಿರೂಪಾಢ್ಯೇ ಕಶ್ಯಪೇನ ಮಹಾತ್ಮನಾ ॥ ೬ ॥
ಅದಿತ್ಯಾಂ ವಿಬುಧಾ ಜಾತಾ ದಿತೇಶ್ಚೈವ ತು ದೈತ್ಯಪಾಃ ।
ತೇಷಾಂ ಸಾಪತ್ನ್ಯಭಾವೇನ ಮಹದ್ವೈರಮುಪಸ್ಥಿತಂ ॥ ೭ ॥
ಅಥ ದೈತ್ಯೈಃ ಸುರಾ ಧ್ವಸ್ತಾಃ ಕೃತಾಶ್ಚಾಽನ್ಯೇ ಪರಾಙ್ಮುಖಾಃ ।
ಅನ್ಯೇ ತು ಭಯಸಂತ್ರಸ್ತಾ ದಿಶೋ ಜಗ್ಮುಃ ಕ್ಷತಾಂಗಕಾಃ ॥ ೮ ॥
ತತೋ ದುಃಖಸಮಾಯುಕ್ತಾ ದೇವಮಾತಾಽತ್ರ ಸಂಸ್ಥಿತಾ ।
ತಪಶ್ಚಕ್ರೇ ದಿವಾನಕ್ತಂ ಶಿವಧ್ಯಾನಪರಾಯಣಾ ॥ ೯ ॥
ಏವಂ ತಸ್ಯಾಸ್ತಪಃಸ್ಥಾಯಾ ಗತೇ ಯುಗಚತುಷ್ಟಯೇ ।
ನಿರ್ಭಿದ್ಯ ಧರಣೀಪೃಷ್ಠಂ ಶಿವಲಿಂಗಂ ಸಮುತ್ಥಿತಂ ॥ ೧೦ ॥

---

೫. ಋಷಿಗಳು ಹೇಳುತ್ತಾರೆ:—ಅಮರತ್ವವನ್ನೀಯುವ ಅಮರೇಶ್ವರ ನೆಂಬುವನಾರು? ಇವನನ್ನು ಯಾರು ಸ್ಥಾಪಿಸಿದರು? ಇವನ ಸಾಮರ್ಥ್ಯ ಎಂಥಾದ್ದು? ಹೇಳು.

೬. ಸೂತನು ಹೇಳುತ್ತಾನೆ:—ಹಿಂದೆ ಕಶ್ಯಪನು ಬ್ರಹ್ಮನ ಮಕ್ಕಳಾದ ಅದಿತಿ, ದಿತಿಯೆಂಬ ಸುಂದರಿಯರಾದ ಕನ್ಯೆಯರನ್ನು ವಿವಾಹ ಮಾಡಿ ಕೊಂಡನು.

೭. ಆ ಪತ್ನಿಯರಲ್ಲಿ ಅದಿತಿಯಲ್ಲಿ ದೇವತೆಗಳೂ, ದಿತಿಯಲ್ಲಿ ದೈತ್ಯರೂ ಜನಿಸಿದರು. ಅವರಿಬ್ಬರೂ ಪರಸ್ಪರ ಶತ್ರುಗಳಾಗಿ ಅತ್ಯಂತ ದ್ವೇಷವನ್ನು ಹೊಂದಿದರು.

೮. ತರುವಾಯ ದೈತ್ಯರು ದೇವತೆಗಳನ್ನು ಕೊಂದರು. ಕೆಲವು ದೇವತೆ ಗಳು ವಿಮುಖರಾದರು. ಇನ್ನು ಕೆಲವರು ಗಾಯಗೊಂಡು ಭಯದಿಂದ ದಿಕ್ಕು ದಿಕ್ಕುಗಳಿಗೆ ಓಡಿದರು.

೯. ಅದರಿಂದ ದುಃಖಗೊಂಡ ದೇವಮಾತೆಯಾದ ಅದಿತಿಯು ಈ ಕ್ಷೇತ್ರ ದಲ್ಲಿ ಹಗಲು ರಾತ್ರಿ ಶಿವನನ್ನು ಧ್ಯಾನಿಸುತ್ತ ತಪವನ್ನಾಚರಿಸಿದಳು.

೧೦. ಹೀಗೆ ಅವಳು ತಪಸ್ಸನ್ನು ಮಾಡುತ್ತಿರಲು ನಾಲ್ಕು ಯುಗಗಳು ಕಳೆದುವು. ಆಗ ಒಂದು ಶಿವಲಿಂಗವು ಭೂಮಿಯನ್ನು ಸೀಳಿ ಮೇಲಕ್ಕೆದ್ದಿತು.

ತತಸ್ತಸ್ಮೈ ಕೃತಾನಂದಾ ಸ್ತುತ್ವಾ ಸ್ತೋತ್ರೈಃ ಪೃಥಗ್ವಿಧೈಃ ।
ಅಷ್ಟಾಂಗಪ್ರಣಿಪಾತೇನ ನಮಶ್ಚಕ್ರೇ ಸಮಾಹಿತಾ ॥ ೧೧ ॥
ಏತಸ್ಮಿನ್ನಂತರೇ ವಾಣೀ ಸಂಜಾತಾ ಗಗನಾಂಗಣೇ ।
ಶರೀರರಹಿತಾ ದಿವ್ಯಾ ಮೇಘಗಂಭೀರನಿಃಸ್ವನಾ ॥ ೧೨ ॥
ವರಂ ಪ್ರಾರ್ಥಯ ಕಲ್ಯಾಣಿ ಯಸ್ತೇ ಹೃದಿ ವ್ಯವಸ್ಥಿತಃ ।
ಪ್ರಸನ್ನೋಽಹಂ ಪ್ರದಾಸ್ಯಾಮಿ ತವಾಽದ್ಯ ಶಶಿಶೇಖರಃ ॥ ೧೩ ॥

ಅದಿತಿರುವಾಚ :—

ಮಮ ಪುತ್ರಾಃ ಸುರಶ್ರೇಷ್ಠ ಹನ್ಯಂತೇ ಯುಧಿ ದಾನವೈಃ ।
ತಾನ್ ಕುರುಷ್ವ ಗತಾಯಾಸಾನವಧ್ಯಾನ್ರಣಮೂರ್ಧನಿ ॥ ೧೪ ॥

ಶ್ರೀ ಭಗವಾನುವಾಚ :—

ಏತಲ್ಲಿಂಗಂ ಮದೀಯಂ ಯೇ ಸ್ಪೃಷ್ಟ್ವಾ ಯಾಸ್ಯಂತಿ ಸಂಯುಗೇ ।
ಅವಧ್ಯಾಸ್ತೇ ಭವಿಷ್ಯಂತಿ ಯಾವತ್ಸಂವತ್ಸರಂ ಶುಭೇ ॥ ೧೫ ॥
ಅನ್ಯೋಽಪಿ ಮಾನವೋ ಯೋಽತ್ರ ಚತುರ್ದಶ್ಯಾಂ ಸಮಾಹಿತಃ ।
ಮಾಘಮಾಸಸ್ಯ ಕೃಷ್ಣಾಯಾಂ ಪ್ರಕರಿಷ್ಯತಿ ಜಾಗರಂ ॥ ೧೬ ॥
ಸೋಽಪಿ ಸಂವತ್ಸರಂ ಯಾವದ್ಭವಿಷ್ಯತಿ ನಿರಾಮಯಃ ।
ಅಪಿ ಮೃತ್ಯುದಿನೇ ಪ್ರಾಪ್ತೇ ಯೋಽಸ್ಮಿನ್ನಾಯತನೇ ಶುಭೇ ॥ ೧೭ ॥

---

೧೧. ಅವಳು ಆನಂದಗೊಂಡು ಆ ಲಿಂಗವನ್ನು ನಾನಾವಿಧ ಸ್ತೋತ್ರಗಳಿಂದ ಸ್ತುತಿಸಿ ಸಾವಧಾನ ಮನಸ್ಸಿನಿಂದ ಸಾಷ್ಟಾಂಗ ನಮಸ್ಕಾರ ಮಾಡಿದಳು.

೧೨. ಈ ಸಮಯದಲ್ಲಿ ಆಕಾಶದಲ್ಲಿ ಮೇಘದಂತೆ ಗಂಭೀರವಾದ ಧ್ವನಿಯುಳ್ಳ ಅಶರೀರವಾಣಿಯುಂಟಾಯಿತು.

೧೩. ಮಂಗಳಕರಳೆ! ಮಹೇಶ್ವರನಾದ ನಾನು ನಿನಗೆ ಪ್ರಸನ್ನನಾಗಿರುವೆನು. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಅದನ್ನು ಕೊಡುವೆನು.

೧೪. ಅದಿತಿಯು ಹೇಳುತ್ತಾಳೆ:—ಶಂಕರ! ದಾನವರು ಯುದ್ಧದಲ್ಲಿ ನನ್ನ ಮಕ್ಕಳನ್ನು ವಧಿಸುತ್ತಾರೆ. ಅವರನ್ನು ಯುದ್ಧದಲ್ಲಿ ಅವಧ್ಯರನ್ನೂ ಆಯಾಸವಿಲ್ಲದವರನ್ನಾಗಿಯೂ ಮಾಡು.

೧೫. ಶ್ರೀ ಭಗವಂತನು ಹೇಳುತ್ತಾನೆ:—ಆ ದೇವತೆಗಳು ಈ ನನ್ನ ಲಿಂಗವನ್ನು ಮುಟ್ಟಿ ಯುದ್ಧಕ್ಕೆ ತೆರಳಿದರೆ ಅವರು ಒಂದು ವರ್ಷಕಾಲ ಅವಧ್ಯರಾಗುವರು.

೧೬–೧೭. ಇತರ ಮನುಷ್ಯನೂ ಮಾಘ ಕೃಷ್ಣ ಚತುರ್ದಶೀ ದಿನ ಇಲ್ಲಿ ಜಾಗರಣೆ ಮಾಡಿದರೆ ಅವನೂ ಒಂದು ವರ್ಷ ರೋಗವಿಲ್ಲದವನಾಗುವನು.

ಆಗಮಿಷ್ಯತಿ ತಂ ಮೃತ್ಯುರ್ದೂರಾತ್ಪರಿಹರಿಷ್ಯತಿ ।
ಏವಮುಕ್ತ್ವಾಥ ಸಾ ವಾಣೀ ವಿರರಾಮ ತತಃ ಪರಂ ॥ ೧೮ ॥
ಅದಿತಿಶ್ಚಾಽಪಿ ಸಂತುಷ್ಟಾ ಹತಶೇಷಾನ್ ಸುತಾಂಸ್ತತಃ ।
ಸಮಾನೀಯಾಽಥ ತಲ್ಲಿಂಗಂ ತೇಷಾಮೇವ ನ್ಯದರ್ಶಯತ್ ।
ಕಥಯಾಮಾಸ ತತ್ಸರ್ವಂ ಮಾಹಾತ್ಮ್ಯಂ ಯದ್ವರೋದಿತಂ ॥ ೧೯ ॥
ತತಸ್ತೇ ವಿಬುಧಾಃ ಸರ್ವೇ ತಲ್ಲಿಂಗಂ ಪ್ರಣಿಪತ್ಯ ಚ ।
ಪ್ರಜಗ್ಮುಸ್ತುಷ್ಟಿಸಂಯುಕ್ತಾಃ ಶಸ್ತ್ರಾಣ್ಯಾದಾಯ ತಾನ್ ಪ್ರತಿ ॥ ೨೦ ॥
ಯತ್ರ ತೇ ದಾನವಾ ಹೃಷ್ಟಾಃ ಸ್ಥಿತಾಃ ಶಕ್ರಪದೇ ಶುಭೇ ।
ಸ್ವರ್ಗಭೋಗಸಮಾಯುಕ್ತಾ ನಂದನಾಂತರ್ವ್ಯವಸ್ಥಿತಾಃ ॥ ೨೧ ॥
ಅಥ ತೇ ದಾನವಾ ದೃಷ್ಟ್ವಾ ಸಂಪ್ರಾಪ್ತಾಂಸ್ತ್ರಿದಿವೌಕಸಃ ।
ಸಹಸಾ ಸಂಗರಾರ್ಥಾಯ ನಾನಾಶಸ್ತ್ರಧರಾನ್ ಬಹೂನ್ ॥ ೨೨ ॥
ರಥವರ್ಯಾನ್ ಸಮಾರುಹ್ಯ ಧೃತಶಸ್ತ್ರಾಽಸ್ತ್ರವರ್ಮಣಃ ।
ಯುದ್ಧಾರ್ಥಂ ಸಂಮುಖಾ ಜಗ್ಮುರ್ಗರ್ಜಮಾನಾ ಘನಾ ಇವ ॥ ೨೩ ॥
ತತಃ ಸಮಭವದ್ಯುದ್ಧಂ ದೇವಾನಾಂ ದಾನವೈಃ ಸಹ ।
ರೋಷಪ್ರೇರಿತಚಿತ್ತಾನಾಂ ಮೃತ್ಯುಂ ಕೃತ್ವಾ ನಿವರ್ತನಂ ॥ ೨೪ ॥
ತತಸ್ತೇ ವಿಬುಧಾಃ ಸರ್ವೇ ಹರಲಬ್ಧವರಾಸ್ತದಾ ।
ಜಘ್ನುರ್ದೈತ್ಯಾನಸಂಖ್ಯಾತಾಂಛಿತೈಃ ಶಸ್ತ್ರೈರನೇಕಧಾ ॥ ೨೫ ॥

---

೧೮. ಮರಣ ದಿನ ಇಲ್ಲಿಗೆ ಬಂದರೆ ಅವನನ್ನು ಮೃತ್ಯುವು ದೂರದಲ್ಲಿಯೇ ತ್ಯಜಿಸುವುದು. ಆ ಆಕಾಶವಾಣಿಯು ಹೀಗೆ ಹೇಳಿ ಸುಮ್ಮನಾಯಿತು.

೧೯. ಆ ದಿತಿಯು ಸಂತೋಷಗೊಂಡು ಉಳಿದುಳಿದ ಮಕ್ಕಳನ್ನು ಕರೆಯಿಸಿ ಆ ಮಾಹೇಶ್ವರ ಲಿಂಗವನ್ನು ತೋರಿಸಿ ಆ ವರದ ಮಾಹಾತ್ಮ್ಯವನ್ನೆಲ್ಲ ಹೇಳಿದಳು.

೨೦–೨೧. ಅನಂತರ ಆ ದೇವತೆಗಳೆಲ್ಲ ಆ ಲಿಂಗಕ್ಕೆ ವಂದಿಸಿ ಆಯುಧಗಳನ್ನು ತೆಗೆದುಕೊಂಡು ಸಂತೋಷದಿಂದ ಸ್ವರ್ಗದಲ್ಲಿರುವ ನಂದನವನದಲ್ಲಿ ವಾಸಿಸುತ್ತ ಸ್ವರ್ಗಭೋಗಗಳನ್ನನುಭವಿಸುತ್ತಿರುವ ದಾನವರೆಡೆಗೆ ಹೋದರು.

೨೨–೨೩. ತರುವಾಯ ಆ ದಾನವರು ಯುದ್ಧಕ್ಕಾಗಿ ಅನೇಕ ಶಸ್ತ್ರಗಳನ್ನು ಧರಿಸಿ ಕೂಡಲೆ ಬಂದಿರುವ ದೇವತೆಗಳನ್ನು ನೋಡಿ ಶಸ್ತ್ರಾಸ್ತ್ರ ಕವಚಗಳನ್ನು ಧರಿಸಿ ರಥವನ್ನೇರಿ ಗರ್ಜಿಸುತ್ತಿರುವ ಮೇಘಗಳಂತೆ ಯುದ್ಧಕ್ಕಾಗಿ ಎದುರು ಬಂದರು.

೨೪. ಅನಂತರ ಮರಣಭಯದಿಂದ ಹಿಂದಿರುಗಿದ ಕುಪಿತರಾದ ದೇವತೆಗಳಿಗೆ ದಾನವರೊಡನೆ ಯುದ್ಧವು ನಡೆಯಿತು.

೨೫. ಆಗ ಶಿವನಿಂದ ವರವನ್ನು ಪಡೆದ ಸಮಸ್ತ ದೇವತೆಗಳೂ ಹರಿತವಾದ ಶಸ್ತ್ರಗಳಿಂದ ಲೆಕ್ಕವಿಲ್ಲದಷ್ಟು ದೈತ್ಯರನ್ನು ಕೊಂದರು.

**ಹತಶೇಷಾಶ್ಚ ಯೇ ತೇಷಾಂ ತೇ ತ್ಯಕ್ತ್ವಾ ತ್ರಿದಶಾಲಯಂ ।**
**ಪಲಾಯನಕೃತೋತ್ಸಾಹಾಃ ಪ್ರವಿಷ್ಟಾ ಮಕರಾಲಯಂ ॥ ೨೬ ।**
**ತತಃ ಶಕ್ರಃ ಸಮಾಪೇದೇ ಸ್ವರಾಜ್ಯಂ ದಾನವೈರ್ಹೃತಂ ।**
**ಯದಾಸೀತ್ಪೂರ್ವಕಾಲೇ ತತ್ಸಮಗ್ರಂ ಹತಕಂಟಕಂ ॥ ೨೭ ।**
**ತತಸ್ತೇ ದಾನವಾಃ ಶೇಷಾ ಜ್ಞಾತ್ವಾ ತಲ್ಲಿಂಗಸಂಭವಂ ।**
**ಮಾಹಾತ್ಮ್ಯಂ ವೃಷನಾಥಸ್ಯ ಕ್ಷೇತ್ರಸ್ಯಾಸ್ಯೋದ್ಭವಸ್ಯ ಚ ॥ ೨೮ ।**
**ಶುಕ್ರೇಣ ಕಥಿತಂ ಸರ್ವಂ ಮಾಘಕೃಷ್ಣೇ ನಿಶಾಗಮೇ ।**
**ಚತುರ್ದಶ್ಯಾಂ ಶುಚಿರ್ಭೂತ್ವಾ ಯಸ್ತಲ್ಲಿಂಗಂ ಪ್ರಪೂಜಯೇತ್ ।**
**ಕಾಲಾಘ್ರಾತೋಽಪಿ ನ ಪ್ರಾಣೈಃ ಸಪುಮಾಂಸ್ತ್ಯಜ್ಯತೇ ಕ್ವಚಿತ್ ॥ ೨೯ ।**
**ತಸ್ಮಾದ್ಯೂಯಂ ಸಮಾಸಾದ್ಯ ತಲ್ಲಿಂಗಂ ತದ್ದಿನೇ ನಿಶಿ ।**
**ಪೂಜಯಧ್ವಂ ಮಹಾಭಾಗಾ ಯೇನ ಸ್ಯುರ್ಮೃತ್ಯುವರ್ಜಿತಾಃ ॥ ೩೦**
**ಯಾವತ್ಸಂವತ್ಸರಸ್ಯಾಂತಂ ಸತ್ಯಮೇತನ್ಮಯೋದಿತಂ**
**ಯಥಾ ತೇ ದೇವಸಂಘಾಶ್ಚ ತತ್ಪ್ರಭಾವಾದಸಂಶಯಂ ॥ ೩೧**
**ಅಥ ತಂ ದಾನವೇಂದ್ರಾಣಾಂ ಮಂತ್ರಂ ಜ್ಞಾತ್ವಾ ಸುರೇಶ್ವರಃ ।**
**ನಾರದಾದ್ಬ್ರಹ್ಮಣಃ ಪುತ್ರಾದ್ಭಯತ್ರಸ್ತಮನಾಸ್ತತಃ ॥ ೩೨**
**ಮಂತ್ರಂ ಚಕ್ರೇ ಸಮಂ ದೇವೈಸ್ತತ್ರ ದೇವಸ್ಯ ರಕ್ಷಣೇ ।**
**ಯಥಾ ಸ್ಯಾದುದ್ಯಮಃ ಸಮ್ಯಕ್ತಸ್ಮಿನ್ನಹನಿ ಸರ್ವದಾ ॥ ೩೩**

---

೨೬. ಆ ದೈತ್ಯರಲ್ಲಿ ಮಡಿದುಳಿದವರು ದೇವಲೋಕವನ್ನು ತ್ಯಜಿಸಿ ಓ ಹೋಗಿ ಸಮುದ್ರವನ್ನು ಪ್ರವೇಶಿಸಿದರು.

೨೭. ಅನಂತರ ಶಕ್ರನು ದಾನವರು ಹಿಂದೆ ಅಪಹರಿಸಿದ ಶತ್ರುಗಳಿಲ್ಲ ಸಂಪೂರ್ಣ ದೇವರಾಜ್ಯವನ್ನು ಹೊಂದಿದನು.

೨೮-೩೧. ಶುಕ್ರಾಚಾರ್ಯನು ಈ ಕ್ಷೇತ್ರದಲ್ಲಿ ಉದ್ಭವಿಸಿದ ಮಾಹೇಶ್ ಲಿಂಗದ ಮಾಹಾತ್ಮ್ಯವನ್ನರಿತು ಉಳಿದ ದಾನವರನ್ನು ಕುರಿತು ಮಾಘ ಕೃ ಚತುರ್ದಶೀ ದಿನ ರಾತ್ರಿ ಶುದ್ಧನಾಗಿ ಆ ಲಿಂಗವನ್ನು ಪೂಜಿಸಿದ ಮನುಷ್ಯ ಮೃತ್ಯುವಶನಾಗಿದ್ದರೂ ಮೃತವಾಗುವುದಿಲ್ಲವಾದುದರಿಂದ ನೀವು ಆ ದಿನ ರಾ ಆ ಲಿಂಗವನ್ನು ಆರಾಧಿಸಿರಿ. ಹೀಗೆ ಒಂದು ವರ್ಷ ಪೂಜಿಸಿದರೆ ದೇವತೆಗಳ ಅದರ ಪ್ರಭಾವದಿಂದ ನಿಶ್ಚಯವಾಗಿಯೂ ಮರಣವಿಲ್ಲದವರಾಗುವಿರಿ, ಎಂ ಹೇಳಿದನು.

೩೨-೩೩. ದಾನವೇಂದ್ರರ ಈ ಮಂತ್ರಾಲೋಚನೆಯನ್ನು ಸುರರಾ ಬ್ರಹ್ಮತನಯನಾದ ನಾರದನಿಂದರಿತು ಹೆದರಿ ದೇವತೆಗಳೊಡನೆ ಆದಿನ ಮಾಹೇ ಲಿಂಗದ ರಕ್ಷಣೆಗೆ ಪ್ರಯತ್ನವನ್ನು ಹೇಗೆ ಮಾಡಬೇಕೆಂಬುದನ್ನು ಆಲೋಚಿಸಿದ

**ಕೋಟಯಸ್ತು ತ್ರಯಸ್ತ್ರಿಂಶದ್ದೇವಾನಾಂ ಸಾಯುಧಾಸ್ತತಃ ।**
**ರಕ್ಷಾರ್ಥಂ ತಸ್ಯ ಲಿಂಗಸ್ಯ ತಸ್ಮಿನ್‌ಕ್ಷೇತ್ರೇ ವ್ಯವಸ್ಥಿತಾಃ ।**
**ಮಾಘ ಕೃಷ್ಣ ಚತುರ್ದಶ್ಯಾಂ ಸುಸನ್ನದ್ಧಾಃ ಪ್ರಹಾರಿಣಃ ॥ ३४ ॥**
**ಅಥ ತೇ ದಾನವಾ ದೃಷ್ಟ್ವಾ ತಾನ್ ದೇವಾಂಸ್ತತ್ರ ಸಂಸ್ಥಿತಾನ್ ।**
**ಭಯಸಂತ್ರಸ್ತ ಮನಸೋ ದುದ್ರುವುಃ ಸರ್ವತೋ ದಿಶಂ ॥ ३५ ॥**
**ಅಥ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।**
**ಭೂಯ ಏವ ಸುರಾಃ ಸರ್ವೇ ಮಂತ್ರಂ ಚಕ್ರುಃ ಪರಸ್ಪರಂ ॥ ३६ ॥**
**ಯದ್ಯೇತತ್ಕ್ಷೇತ್ರಮುತ್ಸೃಜ್ಯ ಗಮಿಷ್ಯಾಮಃ ಸುರಾಲಯಂ ।**
**ಲಿಂಗಮೇತತ್ಸಮಭ್ಯೇತ್ಯ ಪೂಜಯಿಷ್ಯಂತಿ ದಾನವಾಃ ॥ ३७ ॥**
**ತತೋಽವಧ್ಯಾ ಭವಿಷ್ಯಂತಿ ತೇಽಪಿ ಸರ್ವೇ ಯಥಾ ವಯಂ ।**
**ತಸ್ಮಾದತ್ರೈವ ತಿಷ್ಠಾಮಸ್ತ್ರಯಸ್ತ್ರಿಂಶತ್ಸನಾಯಕಾಃ ॥ ३८ ॥**
**ಕೋಟೀನಾಮೇವ ಸರ್ವೇಷಾಂ ಶೇಷಾ ಗಚ್ಛಂತು ತತ್ರ ಚ ।**
**ಸಹಸ್ರಾಕ್ಷೇಣ ಸಂಯುಕ್ತಾಃ ಸ್ವರ್ಗೇ ಸ್ವ ಪರರಕ್ಷಕಾಃ ॥ ३९ ॥**
**ತತೋಽಷ್ಟೌ ವಸವಸ್ತತ್ರ ದ್ವಾದಶಾರ್ಕಾಸ್ತಥೈವ ಚ ।**
**ಏಕಾದಶಾ ಪರೇ ರುದ್ರಾ ನಾಸತ್ಯೌ ದ್ವೌ ಚ ಸುಂದರೌ ॥ ४० ॥**

---

೩೪. ಆದರಂತೆ ಮಾಘ ಕೃಷ್ಣ ಚತುರ್ದಶೀ ದಿನ ಆ ಶಿವಲಿಂಗದ ರಕ್ಷಣೆಗಾಗಿ ಮೂವತ್ತಮೂರು ಕೋಟಿ ದೇವತೆಗಳೂ ಆಯುಧಗಳನ್ನು ಹಿಡಿದು ಸನ್ನದ್ಧರಾಗಿ ನಿಂತರು.

೩೫. ಆಗ ಆ ದಾನವರು ಅಲ್ಲಿ ನಿಂತಿರುವ ದೇವತೆಗಳನ್ನು ಕಂಡು ಭಯಗೊಂಡು ದಿಕ್ಕು ದಿಕ್ಕುಗಳಿಗೆ ಓಡಿಹೋದರು.

೩೬. ತರುವಾಯ ಬೆಳಗಾಗಿ ಸೂರ್ಯನು ಉದಯಿಸಲು ಮರಳಿ ದೇವತೆಗಳೆಲ್ಲ ಪರಸ್ಪರವಾಗಿ ಈ ರೀತಿ ಆಲೋಚಿಸಿದರು.

೩೭. "ನಾವು ಈ ಮಾಹೇಶ್ವರ ಲಿಂಗವನ್ನು ಬಿಟ್ಟು ದೇವಲೋಕಕ್ಕೆ ತೆರಳಿದರೆ ದಾನವರು ಇಲ್ಲಿಗೆ ಬಂದು ಇದನ್ನು ಪೂಜಿಸುವರು.

೩೮. ಅದರಿಂದವರೂ ನಮ್ಮಂತೆಯೇ ಅವಧ್ಯರಾಗುವರು. ಆದುದರಿಂದ ನಮ್ಮಲ್ಲಿ ಮೂವತ್ತಮೂರು ಮಂದಿ ಮುಖ್ಯ ನಾಯಕರು ಇಲ್ಲಿಯೇ ಇರೋಣ.

೩೯. ಉಳಿದ ದೇವತೆಗಳೆಲ್ಲ ಇಂದ್ರನೊಡನೆ ಸ್ವರ್ಗಕ್ಕೆ ಹೋಗಿ ತಮ್ಮನ್ನೂ, ಪರರನ್ನೂ ರಕ್ಷಿಸಲಿ."

೪೦–೪೧. ಅನಂತರ ಎಂಟು ಮಂದಿ ವಸುಗಳೂ, ಹನ್ನೆರಡು ಮಂದಿ ಸೂರ್ಯರೂ, ಹನ್ನೊಂದು ಮಂದಿ ರುದ್ರರೂ, ಸುಂದರರಾದ ಇಬ್ಬರು ಅಶ್ವಿನೀ

ಏತೇ ತಲ್ಲಿಂಗರಕ್ಷಾರ್ಥಂ ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಾಃ ।
ಶೇಷಾಃ ಶಕ್ರಸಮಾಯುಕ್ತಾಃ ಪ್ರಜಗ್ಮುಸ್ತ್ರಿದಶಾಲಯಂ ॥ ೪೧ ॥
ಸೂತ ಉವಾಚ:—
ಏವಂ ಪ್ರಭಾವಂ ಲಿಂಗಂ ತು ದೇವದೇವಸ್ಯ ಶೂಲಿನಃ ।
ಭವದ್ಭಿಃ ಪರಿಪೃಷ್ಟಂ ಯದದಿತ್ಯಾ ಸ್ಥಾಪಿತಂ ಪುರಾ ॥ ೪೨ ॥
ಯಸ್ಮಾನ್ನ ವಿದ್ಯತೇ ಮೃತ್ಯುಸ್ತೇನ ದೃಷ್ಟೇನ ದೇಹಿನಾಂ ।
ಅಮರಾಖ್ಯಂ ತತೋ ಲಿಂಗಂ ವಿಖ್ಯಾತಂ ಭುವನತ್ರಯೇ ॥ ೪೩ ॥
ಯಸ್ಮಿನ್ ದೇಶೇಽಪಿ ಸಾ ಕನ್ಯಾ ಹತಾ ತೇನ ದ್ವಿಜನ್ಮನಾ ।
ಜಾಬಾಲಿನಾ ಸುಕ್ರುದ್ಧೇನ ತಸ್ಯ ದೇವಸ್ಯ ಮಂದಿರೇ ॥ ೪೪ ॥
ಆಸೀತ್ತತ್ರ ದಿನೇ ಕೃಷ್ಣಾ ಮಾಘಮಾಸ ಚತುರ್ದಶೀ ।
ತೇನ ನೋ ನಿಧನಂ ಪ್ರಾಪ್ತಾ ಸುಹತಾಽಪಿ ತಪಸ್ವಿನೀ ॥ ೪೫ ॥
ಏತದ್ವಃ ಸರ್ವಮಾಖ್ಯಾತಂ ತಸ್ಯ ಲಿಂಗಸ್ಯ ಸಂಭವಂ ।
ಮಾಹಾತ್ಮ್ಯಂ ಬ್ರಾಹ್ಮಣಶ್ರೇಷ್ಠಾಃ ಸರ್ವಪಾತಕನಾಶನಂ ॥ ೪೬ ॥
ಯಶ್ಚೈತತ್ಪಠತೇ ಭಕ್ತ್ಯಾ ತಸ್ಯ ಲಿಂಗಸ್ಯ ಸನ್ನಿಧೌ ।
ಅಪಮೃತ್ಯುಭಯಂ ತಸ್ಯ ಕಥಂಚಿನ್ನೈವ ಜಾಯತೇ ॥ ೪೭ ॥
ತಸ್ಯಾಗ್ರೇಽಸ್ತಿ ಶುಭಂ ಕುಂಡಂ ಪೂರಿತಂ ಸ್ವಚ್ಛವಾರಿಣಾ ।
ಅದಿತ್ಯಾ ನಿರ್ಮಿತಂ ದೇವ್ಯಾ ಸ್ನಾನಾರ್ಥಂ ಚಾತ್ಮನಃ ಕೃತೇ ॥ ೪೮ ॥

---

ದೇವತೆಗಳೂ ಅಲ್ಲಿ ಆ ಲಿಂಗವನ್ನು ರಕ್ಷಿಸಲು ನೆಲೆಸಿದರು. ಉಳಿದವರು ಇಂದ್ರನೊಡನೆ ಸ್ವರ್ಗಕ್ಕೆ ತೆರಳಿದರು.

೪೨. ಸೂತನು ಹೇಳುತ್ತಾನೆ:—ನೀವು ಕೇಳಿದ ಹಿಂದೆ ಅದಿತಿಯು ಪ್ರತಿಷ್ಠಾಪಿಸಿದ ಮಾಹೇಶ್ವರ ಲಿಂಗದ ಪ್ರಭಾವವು ಹೀಗಿರುವುದು.

೪೩. ಆ ಲಿಂಗವನ್ನು ನೋಡಿದ ಜನರಿಗೆ ಮರಣಭಯವಿಲ್ಲ. ಅನಂತರ ಆ ಲಿಂಗವು ಮೂರು ಲೋಕಗಳಲ್ಲಿ ಅಮರವೆಂದು ಪ್ರಸಿದ್ಧವಾಯಿತು.

೪೪–೪೫. ಆ ಕ್ಷೇತ್ರದಲ್ಲಿರುವ ಫಲವತಿಯನ್ನು ಕುಪಿತನಾದ ಜಾಬಾಲಿಯು ಮಾಘ ಕೃಷ್ಣ ಚತುರ್ದಶೀ ದಿನ ಚೆನ್ನಾಗಿ ಹೊಡೆದರೂ ಅವಳು ಮೃತಳಾಗಲಿಲ್ಲ.

೪೬. ಬ್ರಾಹ್ಮಣೋತ್ತಮರೆ! ನಾನು ನಿಮಗೆ ಹೀಗೆ ಸಕಲ ಪಾಪಗಳನ್ನೂ ನಿವಾರಿಸುವ ಆ ಶಿವಲಿಂಗದ ಮಾಹಾತ್ಮ್ಯವನ್ನೆಲ್ಲ ಹೇಳಿರುವೆನು.

೪೭. ಆ ಲಿಂಗದ ಸಮೀಪದಲ್ಲಿ ಈ ಉಪಾಖ್ಯಾನವನ್ನು ಭಕ್ತಿಯಿಂದ ಪಠಿಸಿದ ನರನಿಗೆ ಯಾವ ರೀತಿಯಿಂದಲೂ ಅಪಮೃತ್ಯುಭಯವುಂಟಾಗುವುದಿಲ್ಲ.

೪೮. ಆ ಲಿಂಗದ ಮುಂದೆ ಅದಿತಿಯು ತನ್ನ ಸ್ನಾನಕ್ಕಾಗಿ ನಿರ್ಮಿಸಿದ ನಿರ್ಮಲವಾದ ನೀರಿನಿಂದ ತುಂಬಿರುವ ಒಂದು ಶುಭ ಕುಂಡವಿದೆ.

**ಸ್ನಾನಂ ಕೃತ್ವಾ ನರಸ್ತಸ್ಮಿನ್ಯಸ್ತಲ್ಲಿಂಗಂ ಪ್ರಪಶ್ಯತಿ ।**
**ಕರೋತಿ ಜಾಗರಂ ರಾತ್ರೌ ತಸ್ಮಿನ್ನೇವ ದಿನೇ ದಿನೇ ।**
**ಸೋಽಬ್ದ್ಯಾಽಪಿ ವತ್ಸರಂ ಯಾವನ್ನಾಽಪಮೃತ್ಯುಮವಾಪ್ನುಯಾತ್ ॥ ೪೯ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಮರಕೇಶ್ವರಕ್ಷೇತ್ರಮಾಹಾತ್ಮ್ಯವರ್ಣನಂ" ನಾಮ
ಪಂಚಚತ್ವಾರಿಂಶದಧಿಕಶತತಮೋಽಧ್ಯಾಯಃ

---

೪೯. ಈಗಲೂ ಪ್ರತಿದಿನವೂ ಅಲ್ಲಿ ಮಿಂದು ಆ ಲಿಂಗವನ್ನು ದರ್ಶನಮಾಡಿ ರಾತ್ರಿ ಜಾಗರಣೆ ಮಾಡಿದವನು ಒಂದು ವರ್ಷಕಾಲ ಅಪಮೃತ್ಯುವನ್ನು ಹೊಂದು ವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಮರಕೇಶ್ವರಕ್ಷೇತ್ರಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್ಚತ್ವಾರಿಂಶದಧಿಕಶತತಮೋಽಧ್ಯಾಯಃ

## ಅಮರೇಶ್ವರಕುಂಡಮಾಹಾತ್ಮ್ಯವರ್ಣನಂ

**ಋಷಯ ಊಚುಃ:—**

**ಆದಿತ್ಯಾನಾಂ ಚ ಸರ್ವೇಷಾಂ ವಸುರುದ್ರಾದಿಕಾಶ್ವಿನಾಂ ।**
**ಪ್ರತ್ಯೇಕಶಃ ಸಮಾಚಕ್ಷ್ವ ನಾಮಾನಿ ತ್ವಂ ಮಹಾಮತೇ ॥ ೧ ॥**

**ಸೂತ ಉವಾಚ:—**

**ವೃಷಧ್ವಜಶ್ಚ ಶರ್ವಶ್ಚ ಮೃಗವ್ಯಾಧಸ್ತೃತೀಯಕಃ ।**
**ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಷಷ್ಠ ಏವ ಹಿ ॥ ೨ ॥**
**ದಹನಶ್ಚೇಶ್ವರಶ್ಚೈವ ಕಪಾಲೀ ನವಮಸ್ತಥಾ ।**
**ವೃಷಾಕಪಿಸ್ತು ದಶಮೋ ರುದ್ರಸ್ತ್ರ್ಯಂಬಕ ಏವ ಚ ॥ ೩ ॥**
**ಧುರೋ ಧ್ರುವಶ್ಚ ಸೋಮಶ್ಚ ಮಖಶ್ಚೈವಾಽನಿಲೋಽನಲಃ ।**
**ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥ ೪ ॥**
**ವರುಣಶ್ಚ ತಥಾ ಸೂರ್ಯೋ ಭಾನುಃ ಖ್ಯಾತಶ್ಚ ತಾಪನಃ ।**
**ಇಂದ್ರಶ್ಚೈವಾಽರ್ಯಮಾ ಚೈವ ಧಾತಾ ಚೈವ ಭಗಸ್ತಥಾ ॥ ೫ ॥**
**ಗಭಸ್ತಿರ್ಧರ್ಮರಾಜಶ್ಚ ಸ್ವರ್ಣರೇತಾ ದಿವಾಕರಃ ।**
**ಮಿತ್ರಶ್ಚ ವಾಸುದೇವಶ್ಚ ದ್ವಾದಶೈತೇ ಚ ಭಾಸ್ಕರಾಃ ॥ ೬ ॥**
**ನಾಸತ್ಯಶ್ಚೈವ ದಸ್ರಶ್ಚ ಖ್ಯಾತಾವೇತೌ ತಥಾಽಶ್ವಿನೌ ।**
**ದೇವವೈದ್ಯೌ ಮಹಾಭಾಗೌ ತ್ವಾಷ್ಟ್ರೀಗರ್ಭಸಮುದ್ಭವೌ ॥ ೭ ॥**

---

## ಕನ್ನಡದ ಅನುವಾದ

### ಅಮರೇಶ್ವರಕುಂಡಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ನೀನು ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು ಇವರೆಲ್ಲರ ಹೆಸರನ್ನು ಪ್ರತ್ಯೇಕವಾಗಿ ನಮಗೆ ಹೇಳು.

೨–೭. ಸೂತನು ಹೇಳುತ್ತಾನೆ:—ವೃಷಧ್ವಜ, ಶರ್ವ, ಮೃಗವ್ಯಾಧ, ಅಜೈಕಪಾದ, ಅಹಿರ್ಬುಧ್ನ್ಯ, ಪಿನಾಕೀ, ದಹನ, ಈಶ್ವರ, ಕಪಾಲೀ, ವೃಷಾಕಪಿ, ತ್ರ್ಯಂಬಕ ಇವರು ಏಕಾದಶ ರುದ್ರರು. ಧುರ, ಧ್ರುವ, ಸೋಮ, ಮಖ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಇವರು ಅಷ್ಟವಸುಗಳು. ವರುಣ, ಸೂರ್ಯ, ಭಾನು, ಇಂದ್ರ, ಅರ್ಯಮಾ, ಧಾತಾ, ಭಗ, ಗಭಸ್ತಿ, ಧರ್ಮರಾಜ, ಸ್ವರ್ಣರೇತ, ದಿವಾಕರ, ಮಿತ್ರ, ವಾಸುದೇವ ಇವರು ದ್ವಾದಶಾದಿತ್ಯರು. ನಾಸತ್ಯ, ದಸ್ರ ಇವರು ತ್ವಾಷ್ಟ್ರೀಗರ್ಭಸಂಭೂತರೂ, ದೇವವೈದ್ಯರೂ ಆದ ಅಶ್ವಿನೀ ದೇವತೆಗಳು.

ತ್ರಯಸ್ತ್ರಿಂಶತ್ಸಮಾಖ್ಯಾತಾ ಏತೇ ಯೇ ಸುರನಾಯಕಾಃ ।
ಕ್ಷೇತ್ರೇಽತ್ರೈವಾ ಸ್ಥಿತಾ ನಿತ್ಯಂ ದಾನವಾನಾಂ ವಧಾಯ ಚ ॥ ೮ ॥
ಯಸ್ತಾನ್ ಸಂಪೂಜಯೇದ್ಭಕ್ತ್ಯಾ ಪುರುಷಃ ಸಂಯತೇಂದ್ರಿಯಃ ।
ಯಥೋಕ್ತದಿವಸೇ ಪ್ರಾಪ್ತೇ ನಾಽಪಮೃತ್ಯುಃ ಪ್ರಜಾಯತೇ ॥ ೯ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ರುದ್ರಾಃ ಪೂಜ್ಯಾ ವಿಚಕ್ಷಣೈಃ ।
ತಸ್ಮಿನ್ ಕ್ಷೇತ್ರೇ ವಿಶೇಷೇಣ ವಾಂಛದ್ಭಿಃ ಪರಮಂ ಪದಂ ॥ ೧೦ ॥
ದಶಮ್ಯಾಂ ವಸವಃ ಪೂಜ್ಯಾಸ್ತಥಾಽಷ್ಟಮ್ಯಾಂ ವಿಶೇಷತಃ ।
ಸ್ವರ್ಗಂ ಸಮೀಹಮಾನೈಶ್ಚ ವಿಲಾಸೈರ್ವಿವಿಧೈಸ್ತಥಾ ॥ ೧೧ ॥
ಸಪ್ತಮ್ಯಾಮಥ ಷಷ್ಠ್ಯಾಂ ಚ ಪೂಜನೀಯಾ ದಿವಾಕರಾಃ ।
ಯೇ ವಾಂಛಂತಿ ನರಾಃ ಸತ್ವಂ ಪರಿಪಂಥಿವಿವರ್ಜಿತಂ ॥ ೧೨ ॥
ದೇವವೈದ್ಯೌ ತಥಾ ಪೂಜ್ಯಾ ದ್ವಾದಶ್ಯಾಂ ವ್ಯಾಧಿಸಂಕ್ಷಯಂ ।
ಯೇ ವಾಂಛಂತಿ ಸದಾ ಮರ್ತ್ಯಾ ನೀರುಜಾಃ ಸಂಭವಂತಿ ತೇ ॥ ೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಮರೇಶ್ವರಕುಂಡಮಾಹಾತ್ಮ್ಯವರ್ಣನಂ" ನಾಮ
ಷಟ್ಚತ್ವಾರಿಂಶದಧಿಕಶತತಮೋಽಧ್ಯಾಯಃ

---

೮. ಈ ಮೂವತ್ತಮೂರು ಮಂದಿ ದೇವನಾಯಕರು ದಾನವರ ವಧೆಗಾಗಿ ಈ ಕ್ಷೇತ್ರದಲ್ಲಿಯೇ ನಿತ್ಯವೂ ಇರುವರು.

೯. ಆ ದೇವತೆಗಳನ್ನು ಉಕ್ತದಿನದಲ್ಲಿ ಜಿತೇಂದ್ರಿಯನಾಗಿ ಪೂಜಿಸಿದ ಮನುಷ್ಯನು ಅಪಮೃತ್ಯುವನ್ನು ಹೊಂದುವುದಿಲ್ಲ.

೧೦. ಉತ್ತಮಸ್ಥಾನವನ್ನು ಬಯಸುವ ಕುಶಲರಾದ ಜನರು ಆ ಕ್ಷೇತ್ರದಲ್ಲಿರುವ ರುದ್ರರನ್ನು ಅಷ್ಟಮೀ, ಚತುರ್ದಶೀ ದಿನಗಳಲ್ಲಿ ಪೂಜಿಸಬೇಕು.

೧೧. ಸ್ವರ್ಗವನ್ನು ಅಪೇಕ್ಷಿಸುವ ಮನುಷ್ಯರು ಅಷ್ಟಮೀ, ದಶಮೀ ದಿನಗಳಲ್ಲಿ ವಿವಿಧ ವಿಲಾಸಗಳಿಂದ ವಸುಗಳನ್ನು ಪೂಜಿಸಬೇಕು.

೧೨. ಅಪ್ರತಿಹತ ಶಕ್ತಿಯನ್ನಿಚ್ಛಿಸುವ ಮನುಷ್ಯರು ಷಷ್ಠೀ ಅಥವಾ ಸಪ್ತಮೀ ದಿನ ಸೂರ್ಯರನ್ನು ಅರ್ಚಿಸಬೇಕು.

೧೩. ರೋಗಪರಿಹಾರವನ್ನು ಬಯಸುವ ಮಾನವರು ದ್ವಾದಶೀ ದಿನ ಅಶ್ವಿನೀ ದೇವತೆಗಳನ್ನು ಆರಾಧಿಸಬೇಕು. ಅದರಿಂದವರು ರೋಗವಿಲ್ಲದವರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಮರೇಶ್ವರಕುಂಡಮಾಹಾತ್ಮ್ಯವರ್ಣನ" ವೆಂಬ
ನೂರನಲವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ

## ವ್ಯಾಸಶುಕಸಂವಾದವರ್ಣನಂ

ಸೂತ ಉವಾಚ :—

**ತಥಾಽನ್ಯೋಽಪಿ ಚ ತತ್ರಾಸ್ತಿ ದೇವಃ ಪುತ್ರಪ್ರದೋ ನೃಣಾಂ ।**
**ವಟಿಕೇಶ್ವರ ನಾಮಾ ಚ ಸರ್ವಪಾಪಹರೋ ಹರಃ ॥ ೧ ॥**
**ಯಸ್ಮಿನ್ವಟಿಕಯಾ ಪೂರ್ವಂ ತಪಸ್ತಪ್ತಂ ದ್ವಿಜೋತ್ತಮಾಃ ।**
**ಪ್ರಾಪ್ತಾ ಪುತ್ರಂ ಶುಕೇ ಯಾತೇ ವನಂ ವ್ಯಾಸಾತ್ಕಪಿಂಜಲಂ ॥ ೨ ॥**

ಋಷಯ ಊಚುಃ :—

**ಕಸ್ಯಾಽಸೌ ವಟಿಕಾ ತತ್ರ ಕಥಂ ತಪ್ತವತೀ ತಪಃ ।**
**ಕಸ್ಮಾದ್ಗೃಹಂ ಪರಿತ್ಯಕ್ತ್ವಾ ಶುಕೋಽಪಿ ವನಮಾಶ್ರಿತಃ ॥ ೩ ॥**
**ಕಥಂ ಕಪಿಂಜಲಂ ಪುತ್ರಂ ವ್ಯಾಸಾಲ್ಲೇಭೇ ಶುಚಿಸ್ಮಿತಾ ॥ ೪ ॥**

ಸೂತ ಉವಾಚ :—

**ಆಸೀದ್ವ್ಯಾಸಸ್ಯ ವಿಪ್ರೇಂದ್ರಾಃ ಕಲತ್ರಾರ್ಥಂ ಮತಿಃ ಕ್ವಚಿತ್ ।**
**ನಿಷ್ಕಾಮಸ್ಯ ಪ್ರಶಾಂತಸ್ಯ ಸರ್ವಜ್ಞಸ್ಯ ಮಹಾತ್ಮನಃ ॥ ೫ ॥**

---

## ಕನ್ನಡದ ಅನುವಾದ

### ವ್ಯಾಸಶುಕಸಂವಾದವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಆ ಕ್ಷೇತ್ರದಲ್ಲಿ ಮನುಷ್ಯರಿಗೆ ಪುತ್ರರನ್ನು ಕೊಡುವ ಸರ್ವಪಾಪವನ್ನು ನೀಗಿಸುವ ವಟಿಕೇಶ್ವರನಿರುವನು.

೨. ದ್ವಿಜವರ್ಯರೆ! ಹಿಂದೆ ಈ ಕ್ಷೇತ್ರದಲ್ಲಿ ವಟಿಕೆಯೆಂಬುವಳು ತಪಸ್ಸನ್ನು ಮಾಡಿ ಶುಕನು ಕಾಡಿಗೆ ಹೋಗಲು ವ್ಯಾಸನಿಂದ ಕಪಿಂಜಲನೆಂಬ ಪುತ್ರನನ್ನು ಪಡೆದಳು.

೩. ಋಷಿಗಳು ಹೇಳುತ್ತಾರೆ:—ಈ ವಟಿಕೆಯು ಯಾರ ಮಗಳು? ಅಲ್ಲಿ ಹೇಗೆ ತಪಸ್ಸನ್ನಾಚರಿಸಿದಳು? ಶುಕನು ಮನೆಯನ್ನು ತ್ಯಜಿಸಿ ಏಕೆ ಕಾಡನ್ನು ಆಶ್ರಯಿಸಿದನು?

೪. ಆ ವಟಿಕೆಯು ವ್ಯಾಸನಿಂದ ಕಪಿಂಜಲನನ್ನು ಹೇಗೆ ಪಡೆದಳು?

೫. ಸೂತನು ಹೇಳುತ್ತಾನೆ:—ವಿಪ್ರವರ್ಯರೆ! ನಿಷ್ಕಾಮನೂ, ಶಾಂತನೂ, ಸರ್ವಜ್ಞನೂ, ಮಹಾತ್ಮನೂ ಆದ ವ್ಯಾಸನಿಗೆ ಮದುವೆ ಮಾಡಿಕೊಳ್ಳಬೇಕೆಂದು ಆಶೆಯಾಯಿತು.

ತತಃ ಕ್ಷಯಮನುಪ್ರಾಪ್ತೇ ವಂಶೇ ಕುರು ಸಮುದ್ಭವೇ ।
ವಿಚಿತ್ರವೀರ್ಯನಾಮಾಸಾದ್ಯ ಪಾರ್ಥಿವಂ ದ್ವಿಜಸತ್ತಮಾಃ ॥ ೬ ॥
ಸತ್ಯವತ್ಯಾಃ ಸಮಾದೇಶಾತ್ತಸ್ಯ ಕ್ಷೇತ್ರೇ ತತಃ ಪರಂ ।
ಸ ಪುತ್ರಾಂಜನಯಾಮಾಸ ತ್ರೀಂಛೂರಾನ್ ಪಾಂಡುಪೂರ್ವಕಾನ್ ॥ ೭ ॥
ವಾನಪ್ರಸ್ಥವ್ರತೇ ತಿಷ್ಠನ್ ಸಕೃನ್ಮೈಥುನತತ್ಪರಃ ।
ಕ್ಷೇತ್ರಜೈಸ್ತನಯೈರ್ವಂಶೇ ಕುರೋಸ್ತಸ್ಮಾದುಪಸ್ಥಿತೇ ॥ ೮ ॥
ತತಃ ಸ ಚಿಂತಯಾಮಾಸ ಭಾರ್ಯಾಮುದ್ಯ ಕರೋಮ್ಯಹಂ ।
ಗಾರ್ಹಸ್ಥ್ಯೇನಾಽಥ ಧರ್ಮೇಣ ಸಾಧಯಾಮಿ ಶುಭಾಂ ಗತಿಂ ॥ ೯ ॥
ತತಃ ಸ ಪ್ರಾರ್ಥಯಾಮಾಸ ಜಾಬಾಲಿಂ ತು ಸುತಾಂ ಶುಭಾಂ ।
ವಟಿಕಾಖ್ಯಾಂ ಶುಭಾಂ ಕನ್ಯಾಂ ಸ ದದೌ ತಸ್ಯ ಸತ್ವರಂ ॥ ೧೦ ॥
ತತಸ್ತಯಾ ಸಮೇತಃ ಸ ವನವಾಸಂ ಸಮಾಶ್ರಿತಃ ।
ವಾನಪ್ರಸ್ಥಾಶ್ರಮೇ ತಿಷ್ಠನ್ ಕೃತಮೈಥುನತತ್ಪರಃ ॥ ೧೧ ॥
ತತೋ ಗರ್ಭವತೀ ಜಜ್ಞೇ ಪಿಂಜಲಾ ತಸ್ಯ ಪಾರ್ಶ್ವತಃ ।
ಋತೌ ಮೋಹನಮಾಸಾದ್ಯ ವ್ಯಾಸಾತ್ಸತ್ಯವತೀಸುತಾತ್ ॥ ೧೨ ॥
ಅಥ ಯಾತಿ ಪರಾಂ ವೃದ್ಧಿಂ ಸ ಗರ್ಭಸ್ತತ್ರ ಸಂಸ್ಥಿತಃ ।
ಉದರೇ ವ್ಯಾಸಭಾರ್ಯಾಯಾಃ ಶುಕ್ಲಪಕ್ಷೇ ಯಥಾ ಶಶೀ ॥ ೧೩ ॥

---

೬-೯. ಅನಂತರ ಕುರುವಂಶವು ವಿಚಿತ್ರವೀರ್ಯನನ್ನು ಹೊಂದಿ ನಾಶವಾಗಲು ವಾನಪ್ರಸ್ಥಾಶ್ರಮದಲ್ಲಿರುವ ವ್ಯಾಸನು ಸತ್ಯವತಿಯ ಆದೇಶದಿಂದೆ ಆ ವಿಚಿತ್ರವೀರ್ಯನ ಪತ್ನಿಯನ್ನು ಸೇರಿ ಪಾಂಡು ಮೊದಲಾದ ಮೂರು ಮಂದಿ ಶೂರರಾದ ಮಕ್ಕಳನ್ನು ಪಡೆದನು. ಅವನಿಂದ ಜನಿಸಿದ ಪರಪತ್ನಿಯರ ಮಕ್ಕಳಿಂದ ಕುರುವಂಶವು ಅಂಕುರಿಸಲು ವ್ಯಾಸನು ನಾನು ಈಗ ವಿವಾಹ ಮಾಡಿಕೊಂಡು ಗೃಹಸ್ಥಧರ್ಮದಿಂದ ಶುಭಗತಿಯನ್ನು ಸಾಧಿಸುವೆನು, ಎಂದು ಆಲೋಚಿಸಿದನು.

೧೦. ಅದರಂತೆ ಅವನು ಜಾಬಾಲಿಯನ್ನು ವಟಿಕೆಯೆಂಬ ಕನ್ಯೆಯನ್ನು ತನಗೆ ಕೊಡಬೇಕೆಂದು ಪ್ರಾರ್ಥಿಸಲು ಅವನು ಕೂಡಲೆ ಮದುವೆ ಮಾಡಿಕೊಟ್ಟನು.

೧೧. ಅನಂತರ ವಾನಪ್ರಸ್ಥಾಶ್ರಮದಲ್ಲಿರುವ ಆ ವ್ಯಾಸನು ಕಾಡಿನಲ್ಲಿ ಆ ವಟಿಕೆಯೊಡನೆ ವಾಸಿಸುತ್ತ ವಿನೋದಪಡುತ್ತಿದ್ದನು.

೧೨. ಅವಳು ಸತ್ಯವತಿಯ ತನಯನಾದ ಆ ವ್ಯಾಸನೊಡನೆ ಋತುಕಾಲದಲ್ಲಿ ಸೇರಿ ಗರ್ಭಿಣಿಯಾದಳು.

೧೩. ಅವಳ ಗರ್ಭವು ಶುಕ್ಲಪಕ್ಷದ ಇಂದುವಿನಂತೆ ಅತ್ಯಂತ ವೃದ್ಧಿಗೊಂಡಿತು.

**ಏವಂ ಸಂಗಚ್ಛತಸ್ತಸ್ಯ ವೃದ್ಧಿಂ ಗರ್ಭಸ್ಯ ನಿತ್ಯಶಃ ।**
**ದ್ವಾದಶಾಬ್ದಾ ಅತಿಕ್ರಾಂತಾ ನ ಜನ್ಮ ಸಮವಾಪ್ನುಯಾತ್ ॥ ೧೪ ॥**
**ಯತ್ಕಿಂಚಿಚ್ಛೃಣುತೇ ತತ್ರ ಗರ್ಭಸ್ಥೋ ಹಿ ವಚಃ ಕ್ವಚಿತ್ ।**
**ತತ್ಸರ್ವಂ ಹೃದಿ ಸಂಸ್ಥಂ ಚ ಚಕ್ರೇ ಪ್ರಜ್ಞಾ ಸಮನ್ವಿತಃ ॥ ೧೫ ॥**
**ವೇದಾಃ ಸಾಂಗಾಃ ಸಮಾಧೀತಾ ಗರ್ಭವಾಸೇಽಪಿ ತೇನ ಚ ।**
**ಸ್ಮೃತಯಶ್ಚ ಪುರಾಣಾನಿ ಮೋಕ್ಷಶಾಸ್ತ್ರಾಣಿ ಕೃತ್ಸ್ನಶಃ ॥ ೧೬ ॥**
**ತತ್ರಸ್ಥೋಽಪಿ ದಿವಾನಕ್ತಂ ಸ್ವಾಧ್ಯಾಯಂ ಪ್ರಕರೋತಿ ಸಃ ।**
**ನ ಚ ಜನ್ಮೋತ್ಥಜಾಂ ಬುದ್ಧಿಂ ಕಥಂಚಿದಪಿ ಚಿಂತಯೇತ್ ॥ ೧೭ ॥**
**ಸಾಽಪಿ ಮಾತಾ ಪರಾಂ ಪೀಡಾಂ ನಿತ್ಯಂ ಯಾತಿ ತಥಾಽಽಕುಲಾ ।**
**ಯಥಾ ಯಥಾ ಸ ಸಂಯಾತಿ ವೃದ್ಧಿಂ ಜಠರಮಾಶ್ರಿತಃ ॥ ೧೮ ॥**
**ತತಶ್ಚ ವಿಸ್ಮಯಾವಿಷ್ಟೋ ವ್ಯಾಸೋ ವಚನಮಬ್ರವೀತ್ ।**
**ಕಸ್ತ್ವಂ ಮದ್ಗೃಹಿಣೀ ಕುಕ್ಷೌ ಪ್ರವಿಷ್ಟೋ ಗರ್ಭರೂಪಧೃಕ್ ॥ ೧೯ ॥**
**ನ ನಿಷ್ಕ್ರಾಮಸಿ ಕಸ್ಮಾತ್ತ್ವಂ ಕಿಮೇತಾಂ ಸೂದಯಿಷ್ಯಸಿ ।**

**ಗರ್ಭ ಉವಾಚ :—**

**ರಾಕ್ಷಸೋಽಹಂ ಪಿಶಾಚೋಽಹಂ ದೇವೋಽಹಂ ಮಾನುಷಸ್ತಥಾ ॥ ೨೦ ॥**
**ಗಜೋಽಹಂ ತುರಗಶ್ಚಾಽಪಿ ಕುಕ್ಕುಟಶ್ಛಾಗ ಏವ ಚ ।**
**ಯೋನೀನಾಂ ಚತುರಾಶೀತಿ ಸಹಸ್ರಾಣಿ ಚ ಸಂಖ್ಯಯಾ ॥ ೨೧ ॥**

---

೧೪. ಹೀಗೆ ನಿತ್ಯವೂ ಬೆಳೆಯುತ್ತಿರುವ ಆ ಗರ್ಭವು ಹನ್ನೆರಡು ವರ್ಷಗಳು ಕಳೆದರೂ ಜನನವಾಗಲಿಲ್ಲ.

೧೫. ಗರ್ಭದಲ್ಲಿರುವ ಆ ಶಿಶುವು ಕೇಳಿದ್ದನ್ನೆಲ್ಲ ಬುದ್ಧಿಯಿಂದ ಮನನ ಮಾಡಿತು.

೧೬. ಸಾಂಗವೇದಗಳನ್ನೂ, ಸ್ಮೃತಿ ಪುರಾಣ ಮೊದಲಾದ ಮೋಕ್ಷಶಾಸ್ತ್ರಗಳನ್ನೂ ಸಂಪೂರ್ಣವಾಗಿ ಅಧ್ಯಯನ ಮಾಡಿತು.

೧೭. ಅದು ಗರ್ಭದಲ್ಲಿದ್ದರೂ ಹಗಲು ರಾತ್ರಿ ವೇದಾಧ್ಯಯನ ಮಾಡುತ್ತ ಜನನವಾಗಲು ಮನಸ್ಸನ್ನು ಮಾಡಲೇ ಇಲ್ಲ.

೧೮. ಜಠರದಲ್ಲಿರುವ ಆ ಗರ್ಭವು ಬೆಳೆದಹಾಗೆಲ್ಲ ನಿತ್ಯವೂ ತಾಯಿಯು ಅಧಿಕ ಪೀಡೆಗೊಳ್ಳುತ್ತಿದ್ದಳು.

೧೯—೨೨. "ಅನಂತರ ವಿಸ್ಮಿತನಾದ ವ್ಯಾಸನು ನನ್ನ ಮಡದಿಯ ಉದರವನ್ನು ಸೇರಿ ಗರ್ಭರೂಪವನ್ನಾಂತ ನೀನು ಯಾರು ? ಏತಕ್ಕೆ ಹೊರಗೆ ಬರುವುದಿಲ್ಲ ಇವಳನ್ನು ಕೊಲ್ಲುವಿಯೇನು ?" ಎಂದು ಕೇಳಿದನು. ಗರ್ಭವು ಹೇಳುತ್ತದೆ :— ನಾನು ರಾಕ್ಷಸ, ಪಿಶಾಚ, ದೇವತೆ, ಮನುಷ್ಯ, ಆನೆ, ಕುದುರೆ, ಕೋ

ಭ್ರಾಂತೋಽಹಂ ತೇಷು ಸರ್ವೇಷು ತತ್ಕೋಽಹಂ ಪ್ರಬ್ರವೀಮಿ ಕಿಂ ।
ಸಾಂಪ್ರತಂ ಮಾನುಷೋ ಭೂತ್ವಾ ಜಠರಂ ಸಮುಪಾಶ್ರಿತಃ ॥ ೨೨ ॥
ಮಾನುಷಂ ನ ಕರಿಷ್ಯಾಮಿ ನಿಷ್ಕ್ರಾಮಂ ಚ ಕಥಂಚನ ।
ನಿರ್ವಿಷ್ಣೋ ಭ್ರಮಮಾಣೋಽತ್ರ ಸಂಸಾರೇ ದಾರುಣೇ ತತಃ ॥ ೨೩ ॥
ಅತ್ರಸ್ಥೋ ಭವನಿರ್ಮುಕ್ತೋ ಯೋಗಾಭ್ಯಾಸರತಃ ಸದಾ ।
ಮೋಕ್ಷಮಾರ್ಗಂ ಪ್ರಯಾಸ್ಯಾಮಿ ಸ್ಥಾನಾನ್ಮೋಕ್ಷಮಸಂಶಯಂ ॥ ೨೪ ॥
ತಾವಜ್ಜ್ಞಾನಂ ಚ ವೈರಾಗ್ಯಂ ಪೂರ್ವಜಾತಿಸ್ಮೃತಿರ್ಯಥಾ ।
ಯಾವದ್ಗರ್ಭಸ್ಥಿತೋ ಜಂತುಃ ಸರ್ವೋಽಪಿ ದ್ವಿಜಸತ್ತಮ ॥ ೨೫ ॥
ಯದಾ ಗರ್ಭಾದ್ವಿನಿಷ್ಕ್ರಾಂತಃ ಸ್ಪೃಶ್ಯತೇ ವಿಷ್ಣುಮಾಯಯಾ ।
ತದಾ ನಾಶಂ ವ್ರಜತ್ಯಾಶು ಸತ್ಯಮೇತದಸಂಶಯಂ ॥ ೨೬ ॥
ತಸ್ಮಾನ್ನಾಽಹಂ ದ್ವಿಜಶ್ರೇಷ್ಠ ನಿಷ್ಕ್ರಮಿಷ್ಯೇ ಕಥಂಚನ ।
ಗರ್ಭಾದಸ್ಮಾತ್ಪ್ರಯಾಸ್ಯಾಮಿ ಸ್ಥಾನಾನ್ಮೋಕ್ಷಮಸಂಶಯಂ ॥ ೨೭ ॥

ವ್ಯಾಸ ಉವಾಚ:—

ನ ಭವಿಷ್ಯತಿ ತೇ ಮಾಯಾ ವೈಷ್ಣವೀ ಸಾ ಕಥಂಚನ ।
ಸುಘೋರಾನ್ನರಕಾದಸ್ಮಾನ್ನಿಷ್ಕ್ರಮಸ್ವ ವಿಗರ್ಹಿತಾತ್ ॥ ೨೮ ॥

---

ಆಡು ಇವರ ಯೋನಿಗಳಲ್ಲಿ ಜನಿಸಿರುವೆನು. ಎಂಬತ್ತನಾಲ್ಕುಸಾವಿರ ಜೀವಿಗಳ ಯೋನಿಗಳಲ್ಲಿ ಅಲೆದಿರುವೆನು. ಆದುದರಿಂದ ಯಾವನೆಂದು ಹೇಳಲಿ. ಈಗ ಮನುಷ್ಯನಾಗಿ ಇವಳ ಉದರವನ್ನಾಶ್ರಯಿಸಿದ್ದೇನೆ.

೨೩. ದಾರುಣ ಸಂಸಾರದಲ್ಲಿ ಸಂಚರಿಸುತ್ತಿದ್ದ ನಾನು ಮನುಷ್ಯನಾಗಿ ಜನಿಸುವುದಿಲ್ಲ.

೨೪. ಇಲ್ಲಿಯೇ ಇದ್ದು ಯಾವಾಗಲೂ ಯೋಗಾಭ್ಯಾಸನಿರತನಾಗಿ ಸಂಸಾರ ಬಂಧನವನ್ನು ತ್ಯಜಿಸಿ ಮೋಕ್ಷಮಾರ್ಗವನ್ನಾಶ್ರಯಿಸಿ ಮುಕ್ತಿಯನ್ನೈದುವೆನು.

೨೫. ದ್ವಿಜವರ್ಯನೆ! ಸಮಸ್ತ ಜಂತುಗಳೂ ಗರ್ಭದಲ್ಲಿ ವಾಸಮಾಡುತ್ತಿರುವವರೆಗೆ ಜ್ಞಾನ ವೈರಾಗ್ಯಗಳನ್ನೂ, ಪೂರ್ವಜಾತಿ ಸ್ಮರಣೆಯನ್ನೂ ಹೊಂದಿರುವುವು.

೨೬. ಗರ್ಭದಿಂದ ಹೊರಟು ವಿಷ್ಣುಮಾಯೆಯಿಂದ ಮುಚ್ಚಲ್ಪಟ್ಟ ಕೂಡಲೆ ಅವುಗಳೆಲ್ಲ ನಿಶ್ಚಯವಾಗಿಯೂ ನಾಶವಾಗುವುವು.

೨೭. ಆದುದರಿಂದ ನಾನು ಗರ್ಭದಿಂದ ಹೊರಡುವುದಿಲ್ಲ. ಇಲ್ಲಿಂದಲೇ ಮೋಕ್ಷಕ್ಕೆ ತೆರಳುವೆನು.

೨೮. ವ್ಯಾಸನು ಹೇಳುತ್ತಾನೆ:—ನಿನಗೆ ವಿಷ್ಣು ಮಾಯೆಯ ಸಂಬಂಧವಾಗುವುದಿಲ್ಲ. ನಿಂದ್ಯವಾದ ಈ ಘೋರ ನರಕದಿಂದ ಹೊರಗೆ ಹೊರಡು.

ಗರ್ಭವಾಸಾತ್ತತೋ ಯೋಗಂ ಸಮಾಶ್ರಿತ್ಯ ಶಿವಂ ವ್ರಜ ।
ತಸ್ಮಾದ್ದರ್ಶಯ ಮೇ ವಕ್ತ್ರಂ ಸ್ವಕೀಯಂ ಯೇನ ಮೇ ಭವೇತ್ ।
ಆನೃಣ್ಯಂ ಪಿತೃಲೋಕಸ್ಯ ತವ ವಕ್ತ್ರಸ್ಯ ದರ್ಶನಾತ್ ॥ ೨೯ ॥

**ಗರ್ಭ ಉವಾಚ :—**

ವಾಸುದೇವಂ ಪ್ರತಿಭುವಂ ಯದಿ ಮೇ ತ್ವಂ ಪ್ರಯಚ್ಛಸಿ ।
ಇದಾನೀಂ ಯತ್ಸ್ವಯಂ ತನ್ಮೇ ಜನ್ಮಸ್ಯಾನ್ನಾಽನ್ಯಥಾ ದ್ವಿಜ ॥ ೩೦ ॥

**ಸೂತ ಉವಾಚ :—**

ತತೋ ವ್ಯಾಸೋ ದ್ರುತಂ ಗತ್ವಾ ದ್ವಾರಕಾಂ ಪ್ರತಿ ದುಃಖಿತಃ ।
ಕಥಯಾಮಾಸ ವೃತ್ತಾಂತಂ ವಿಸ್ತರಾಚ್ಚಕ್ರಪಾಣಿನೇ ॥ ೩೧ ॥
ತೇನೈವ ಸಹಿತಃ ಪಶ್ಚಾತ್ಸ್ವಗೃಹಂ ಪುನರಾಗತಃ ।
ವ್ಯಾಸಃ ಪ್ರತಿಭುವಂ ತಸ್ಮೈದಾತುಂ ವಿಷ್ಣುಂ ನಿರಂಜನಂ ॥ ೩೨ ॥

**ಶ್ರೀ ಕೃಷ್ಣ ಉವಾಚ :—**

ಪ್ರತಿಭೂರಸ್ಮಿ ನಾಶಾಯ ಮಾಯಾಯಾಸ್ತವ ನಿರ್ಗಮೇ ।
ಮದ್ವಾಕ್ಯಾನ್ನಿಷ್ಕ್ರಮಂ ಕೃತ್ವಾ ಗಚ್ಛ ಮೋಕ್ಷಮನುತ್ತಮಂ ॥ ೩೩ ॥
ತತೋ ದ್ರುತಂ ವಿನಿಷ್ಕ್ರಾಂತೋ ವಿಷ್ಣುವಾಕ್ಯೇನ ಸ ದ್ವಿಜಃ ।
ದ್ವಾದಶಾಬ್ದಪ್ರಮಾಣಸ್ತು ಯೌವನಸ್ಯ ಸಮೀಪಗಃ ॥ ೩೪ ॥

---

೨೯. ಅನಂತರ ಗರ್ಭವಾಸದಿಂದ ಯೋಗವನ್ನಾಶ್ರಯಿಸಿ ಶಿವನನ್ನು ಸೇರು. ನಿನ್ನ ಮುಖದರ್ಶನದಿಂದ ನನ್ನ ಪಿತೃಋಣವು ಪರಿಹಾರವಾಗುವುದರಿಂದ ಆ ನಿನ್ನ ಮುಖವನ್ನು ನನಗೆ ತೋರಿಸು.

೩೦. ಗರ್ಭವು ಹೇಳುತ್ತದೆ:—ನೀನು ನಾರಾಯಣನನ್ನು ನನಗೆ ಪ್ರತಿನಿಧಿಯನ್ನಾಗಿ ಮಾಡಿದರೆ ನಾನು ಜನಿಸುವೆನು. ಇಲ್ಲದಿದ್ದರೆ ಜನಿಸುವುದಿಲ್ಲ.

೩೧. ಸೂತನು ಹೇಳುತ್ತಾನೆ:— ಅನಂತರ ವ್ಯಾಸನು ದುಃಖದಿಂದ ಶೀಘ್ರವಾಗಿ ದ್ವಾರಕೆಗೆ ಹೋಗಿ ಕೃಷ್ಣನಿಗೆ ಈ ವೃತ್ತಾಂತವನ್ನು ವಿಸ್ತಾರವಾಗಿ ಹೇಳಿದನು.

೩೨. ಅನಂತರ ಅವನು ಜಾಮೀನನ್ನು ಕೊಡುವುದಕ್ಕಾಗಿ ಆ ಕೃಷ್ಣನೊಡನೆ ತನ್ನ ಮನೆಗೆ ಬಂದನು.

೩೩. ಶ್ರೀ ಕೃಷ್ಣನು ಹೇಳುತ್ತಾನೆ:—ಗರ್ಭವೇ! ನಿನ್ನ ಮಾಯೆಯ ಪರಿಹಾರಕ್ಕೆ ನಾನು ಪ್ರತಿನಿಧಿಯಾಗಿದ್ದೇನೆ. ನನ್ನ ಮಾತಿನಿಂದ ನೀನು ಹೊರಗೆ ಬಂದು ಉತ್ತಮ ಮೋಕ್ಷಕ್ಕೆ ತೆರಳು.

೩೪–೩೫. ದ್ವಿಜರೆ! ಅನಂತರ ವಿಷ್ಣುವಿನ ಮಾತಿನಿಂದ ಹೊರಗೆ ಹೊರಟ ಆ ಹನ್ನೆರಡು ವರ್ಷದ ಯೌವನವನ್ನು ಹೊಂದಿರುವ

ತತಃ ಪ್ರಣಮ್ಯ ದೈತ್ಯಾರಿಂ ವ್ಯಾಸಂ ಚ ಜನನೀಂ ತಥಾ ।
ಪ್ರಸ್ಥಿತೋ ವನವಾಸಾಯ ತತ್ಕ್ಷಣಾದ್ವ್ಯಾಸನಂದನಃ ॥ ३४ ॥
ಅಥ ತಂ ಸ ಮುನಿಃ ಪ್ರಾಹ ತಿಷ್ಠ ಪುತ್ರಾತ್ಮಮಂದಿರೇ ।
ಸಂಸ್ಕಾರಾಂ ಜಾತಕಾದ್ಯಾಂಶ್ಚ ಯೇನ ತೇ ಪ್ರಕರೋಮ್ಯಹಂ ॥ ೩೬ ॥

ಶಿಶುರುವಾಚ :—

ಸಂಸ್ಕಾರಾಃ ಶತಶೋ ಜಾತಾ ಮಮ ಜನ್ಮನಿ ಜನ್ಮನಿ ।
ಭವಾರ್ಣವೇ ಪರಿಕ್ಷಿಪ್ತೋ ಯೈರಹಂ ಬಂಧನಾತ್ಮಕೈಃ ॥ ೩೭ ॥

ಶ್ರೀ ಭಗವಾನುವಾಚ :—

ಶುಕವಜ್ಜಲ್ಪಸೇ ಯಸ್ಮಾತ್ತ್ವಯಾಽಯಂ ಪುತ್ರಕೋ ಮುನೇ ।
ತಸ್ಮಾಚ್ಛುಕೋಽಯಂ ನಾಮ್ನಾಽಸ್ತು ಯೋಗವಿದ್ಯಾವಿಚಕ್ಷಣಃ ॥ ೩೮ ॥
ನಾಽಯಂ ಸ್ಥಾಸ್ಯತಿ ಹರ್ಮ್ಯೇ ಸ್ವೇ ಮೋಹಮಾಯಾವಿವರ್ಜಿತಃ ।
ತಸ್ಮಾದ್ಗಚ್ಛತು ಮಾ ಸ್ನೇಹಂ ತ್ವಂ ಕುರುಷ್ವಾಽಸ್ಯ ಸಂಭವಂ ॥ ೩೯ ॥
ಅಹಂ ಗೃಹಂ ಪ್ರಯಾಸ್ಯಾಮಿ ತ್ವಂ ಮುಕ್ತಃ ಪೈತೃಕಾದೃಣಾತ್ ।
ದರ್ಶನಾದೇವ ಪುತ್ರಸ್ಯ ಸತ್ಯಮೇತನ್ಮಯೋದಿತಂ ॥ ೪೦ ॥
ಏವಮುಕ್ತ್ವಾ ಹೃಷೀಕೇಶೋ ವ್ಯಾಸಮಾಮಂತ್ರ್ಯ ಸತ್ವರಂ ।
ವಿಹಗಾಧಿಪಮಾರೂಢಃ ಪ್ರಯಯೌ ದ್ವಾರಕಾಂ ಪ್ರತಿ ॥ ೪೧ ॥

---

ಬಾಲಕನು ವಿಷ್ಣುವಿಗೂ, ತಾಯಿ ತಂದೆಗಳಿಗೂ ವಂದಿಸಿ ವನವಾಸಕ್ಕೆ ಹೊರಟನು.

೩೬. ತರುವಾಯ ಆ ವ್ಯಾಸಮುನಿಯು, "ಮಗು! ನನ್ನ ಮನೆಯಲ್ಲಿರು. ನಾನು ನಿನಗೆ ಜಾತಕರ್ಮಾದಿ ಸಂಸ್ಕಾರಗಳನ್ನು ನೆರವೇರಿಸುವೆ"ನೆಂದನು.

೩೭. ಶಿಶುವು ಹೇಳುತ್ತದೆ:—ನನಗೆ ಪ್ರತಿ ಜನ್ಮದಲ್ಲಿಯೂ ನೂರಾರು ಸಾರಿ ಸಂಸ್ಕಾರಗಳು ಆಗಿರುವುವು. ಬಂಧನರೂಪವಾದ ಅವು ನನ್ನನ್ನು ಸಂಸಾರಸಾಗರದಲ್ಲಿ ಎಸೆದಿರುವುವು.

೩೮. ಶ್ರೀ ಭಗವಂತನು ಹೇಳುತ್ತಾನೆ:—ಮುನಿಯೆ! ನಿನ್ನೀ ಮಗನು ಗಿಣಿಯಂತೆ ಮಾತಾಡುತ್ತಿರುವುದರಿಂದ ಯೋಗವಿದ್ಯೆಯಲ್ಲಿ ನಿಪುಣನಾದ ಇವನು ಶುಕನೆಂದು ಹೆಸರನ್ನು ಪಡೆಯಲಿ.

೩೯. ಮೋಹಮಾಯೆಯಿಲ್ಲದಿರುವ ಇವನು ನಿನ್ನ ಮನೆಯಲ್ಲಿರುವುದಿಲ್ಲ. ಆದುದರಿಂದ ಇವನು ಹೋಗಲಿ. ಇವನಲ್ಲಿ ಮಗನೆಂಬ ಪ್ರೀತಿಯನ್ನು ಮಾಡಬೇಡ.

೪೦. ನಾನು ಮನೆಗೆ ತೆರಳುವೆನು. ನೀನು ಪುತ್ರದರ್ಶನದಿಂದಲೇ ಪಿತೃಋಣದಿಂದ ಮುಕ್ತನಾಗಿರುವೆ. ನಾನು ಹೇಳಿರುವ ಇದು ನಿಜ.

೪೧. ಕೃಷ್ಣನು ಹೀಗೆ ಹೇಳಿ ವ್ಯಾಸನನ್ನು ಕೇಳಿಕೊಂಡು ಶೀಘ್ರವಾಗಿ ಗರುಡನನ್ನೇರಿ ದ್ವಾರಕೆಗೆ ಹೊರಟನು.

ತತೋ ಗತೇ ಹೃಷೀಕೇಶೇ ವ್ಯಾಸಃ ಪುತ್ರಮುವಾಚ ಹ ।
ಪ್ರಸ್ಥಿತಂ ವನವಾಸಾಯ ನಿಃಸ್ಪೃಹಂ ಸ್ವಗೃಹಂ ಪ್ರತಿ ॥ ೪೨ ॥

ವ್ಯಾಸ ಉವಾಚ :—

ಗೃಹಸ್ಥಧರ್ಮರಿಕ್ತಾನಾಂ ಪಿತೃವಾಕ್ಯಂ ಪ್ರಣಶ್ಯತಿ ।
ಪಿತೃವಾಕ್ಯಂ ತು ಯೋ ಮೋಹಾನ್ನೈವ ಸಮ್ಯಕ್ಸಮಾಚರೇತ್ ।
ಸ ಯಾತಿ ನರಕಂ ತಸ್ಮಾನ್ಮದ್ವಾಕ್ಯಾತ್ಪುತ್ರ ಮಾ ವ್ರಜ ॥ ೪೩ ॥

ಶುಕ ಉವಾಚ :—

ಯಥಾಽದ್ಯಾಽಹಂ ತ್ವಯಾ ಜಾತೋ ಮಯಾ ತ್ವಂ ಚಾಽನ್ಯ ಜನ್ಮನಿ ।
ಸಂಜಾತೋಽಸಿ ಮುನಿಶ್ರೇಷ್ಠ ತಥಾಽಹಮಪಿ ತೇ ಪಿತಾ ॥ ೪೪ ॥
ತಸ್ಮಾದ್ವಾಕ್ಯಂ ತ್ವಯಾ ಕಾರ್ಯಂ ಯದ್ಯೇಷಾ ಧರ್ಮಸಂಸ್ಥಿತಿಃ ।
ನಾಽಹಂ ನಿಷೇಧನೀಯಸ್ತು ವ್ರಜಮಾನಸ್ತಪೋವನಂ ॥ ೪೫ ॥

ವ್ಯಾಸ ಉವಾಚ :—

ಬ್ರಾಹ್ಮಣಸ್ಯ ಗೃಹೇ ಜನ್ಮ ಪುಣ್ಯೈಃ ಸಂಪ್ರಾಪ್ಯತೇ ನೃಭಿಃ ।
ಸಂಸ್ಕಾರಾನ್ ಯತ್ರ ಸಂಪ್ರಾಪ್ಯ ವೇದೋಕ್ತಾನ್ ಮುನಿರಾಪ್ಯತೇ ॥ ೪೬ ॥

---

೪೨. ಶ್ರೀ ಕೃಷ್ಣನು ಹೊರಟುಹೋಗಲು ವ್ಯಾಸನು ತನ್ನ ಮನೆಯಲ್ಲಿ ನಿಸ್ಪೃಹನಾಗಿ ವನವಾಸಕ್ಕೆ ಹೊರಟ ಮಗನನ್ನು ಕುರಿತು ಇಂತೆಂದನು.

೪೩. ವ್ಯಾಸನು ಹೇಳುತ್ತಾನೆ:—ಗೃಹಸ್ಥಧರ್ಮವನ್ನಾಚರಿಸದಿದ್ದರೆ ಪಿತೃವಾಕ್ಯವನ್ನು ಮೀರಿದಂತಾಗುವುದು. ಹಾಗೆ ಪಿತೃವಾಕ್ಯವನ್ನು ಅಜ್ಞಾನದಿಂದ ನೆರವೇರಿಸದ ಮಾನವನು ನರಕವನ್ನು ಹೊಂದುವನು. ಮಗು! ಆದುದರಿಂದ ನನ್ನ ಮಾತಿನಿಂದ ನೀನು ಹೊರಟುಹೋಗಬೇಡ.

೪೪. ಶುಕನು ಹೇಳುತ್ತಾನೆ:—ಮುನಿವರ್ಯನೆ! ಈಗ ನಾನು ನಿನ್ನಿಂದ ಹೇಗೆ ಹುಟ್ಟಿರುವೆನೊ, ಹಾಗೆಯೇ ನೀನು ಬೇರೆ ಜನ್ಮದಲ್ಲಿ ನನ್ನಿಂದ ಹುಟ್ಟಿರುವೆ. ಆದುದರಿಂದ ನಾನು ನಿನ್ನ ತಂದೆಯಾಗಿರುವೆನು.

೪೫. ಅದರಿಂದ ನೀನು ನನ್ನ ಮಾತನ್ನು ನೆರವೇರಿಸಬೇಕು. ಇದು ಧರ್ಮವಿಧಿಯಾಗಿದ್ದರೆ ತಪೋವನಕ್ಕೆ ಹೋಗುತ್ತಿರುವ ನನ್ನನ್ನು ನಿಷೇಧಿಸಬೇಡ.

೪೬. ವ್ಯಾಸನು ಹೇಳುತ್ತಾನೆ:—ಮನುಷ್ಯರು ಪುಣ್ಯವನ್ನು ಮಾಡಿ ಬ್ರಾಹ್ಮಣರ ಮನೆಯಲ್ಲಿ ಜನಿಸುವರು. ಇಲ್ಲಿ ವೇದೋಕ್ತ ಸಂಸ್ಕಾರಗಳನ್ನು ಹೊಂದಿ ಮುನಿಯಾಗಿ ಮೋಕ್ಷವನ್ನು ಪಡೆಯುವರು.

ಶುಕ ಉವಾಚ :—

ಸಂಸ್ಕಾರೈರಾಪ್ಯತೇ ಮುಕ್ತಿರ್ಯದಿ ಕರ್ಮ ಶುಭಂ ವಿನಾ ।
ಪಾಖಂಡಿನೋಽಪಿ ಯಾಸ್ಯಂತಿ ತನ್ಮುಕ್ತಿಂ ವ್ರತಧಾರಿಣಃ ॥ ೪೭ ॥

ವ್ಯಾಸ ಉವಾಚ :—

ಬ್ರಹ್ಮಚಾರೀ ಭವೇತ್ಪೂರ್ವಂ ಗೃಹಸ್ಥಶ್ಚ ತತಃ ಪರಂ ।
ವಾನಪ್ರಸ್ಥೋ ಯತಿಶ್ಚೈವ ತತೋ ಮೋಕ್ಷಮವಾಪ್ನುಯಾತ್ ॥ ೪೮ ॥

ಶುಕ ಉವಾಚ :—

ಬ್ರಹ್ಮಚರ್ಯೇಣ ಚೇನ್ಮೋಕ್ಷಸ್ತತ್ ಷಂಢಾನಾಂ ಸದಾ ಭವೇತ್ ।
ಗೃಹಸ್ಥಾಶ್ರಮಿಣಾಂ ಚೇತ್ಸ್ಯಾತ್ತತ್ಸರ್ವಂ ಮುಚ್ಯತೇ ಜಗತ್ ॥ ೪೯ ॥
ಅಥವಾ ವನರಕ್ತಾನಾಂ ತನ್ಮೃಗಾಣಾಂ ಪ್ರಜಾಯತೇ ॥ ೫೦ ॥
ಅಥವಾ ಯತಿಧರ್ಮಾಣಾಂ ಯದಿ ಮೋಕ್ಷೋ ಭವೇನ್ನೃಣಾಂ ।
ದರಿದ್ರಾಣಾಂ ಚ ಸರ್ವೇಷಾಂ ತನ್ಮುಕ್ತಿಃ ಪ್ರಥಮಾ ಭವೇತ್ ॥ ೫೧ ॥

ವ್ಯಾಸ ಉವಾಚ :—

ಗೃಹಸ್ಥಧರ್ಮರಕ್ತಾನಾಂ ನೃಣಾಂ ಸನ್ಮಾರ್ಗಗಾಮಿನಾಂ ।
ಇಹಲೋಕಃ ಪರಶ್ಚೈವ ಮನುನಾ ಸಂಪ್ರಕೀರ್ತಿತಃ ॥ ೫೨ ॥

---

೪೭. ಶುಕನು ಹೇಳುತ್ತಾನೆ :—ಮನುಷ್ಯನು ಶುಭಕರ್ಮವನ್ನಾಚರಿಸದೆ ಸಂಸ್ಕಾರಗಳಿಂದಲೇ ಮುಕ್ತಿಯನ್ನು ಪಡೆಯುವುದಾದರೆ ಆ ಮುಕ್ತಿಯನ್ನು ವ್ರತವನ್ನು ಧರಿಸಿದ ಪಾಖಂಡಿಗಳೂ ಹೊಂದುವರು.

೪೮. ವ್ಯಾಸನು ಹೇಳುತ್ತಾನೆ :—ನರನು ಮೊದಲು ಬ್ರಹ್ಮಚಾರಿಯೂ, ಅನಂತರ ಗೃಹಸ್ಥನೂ, ತರುವಾಯ ವಾನಪ್ರಸ್ಥನೂ, ಬಳಿಕ ಯತಿಯೂ ಆಗಿ ಮೋಕ್ಷವನ್ನು ಹೊಂದುವನು.

೪೯–೫೧. ಶುಕನು ಹೇಳುತ್ತಾನೆ :—ಬ್ರಹ್ಮಚರ್ಯದಿಂದ ಮೋಕ್ಷವಾಗುವುದಾದರೆ ನಪುಂಸಕರಿಗೆ ಯಾವಾಗಲೂ ಮೋಕ್ಷವಾದೀತು. ಗೃಹಸ್ಥಾಶ್ರಮಿಗಳಿಗೆ ಮೋಕ್ಷವಾಗುವುದಾದರೆ ಸಮಸ್ತ ಪ್ರಪಂಚವೂ ಮೋಕ್ಷವನ್ನು ಹೊಂದುವುದು. ಅಥವಾ ವಾನಪ್ರಸ್ಥಾಶ್ರಮಿಗಳಿಗೆ ಮೋಕ್ಷವಾಗುವುದಾದರೆ ಅದು ಮೃಗಗಳಿಗೂ ಆದೀತು. ಸನ್ಯಾಸಿಗಳಿಗಾಗುವುದಾದರೆ ಬಡವರಾಗಿರುವ ಸಮಸ್ತ ಜನರಿಗೂ ಆ ಮುಕ್ತಿಯುಂಟಾದೀತು.

೫೨. ವ್ಯಾಸನು ಹೇಳುತ್ತಾನೆ :—ಗೃಹಸ್ಥರಾಗಿ ಸನ್ಮಾರ್ಗದಲ್ಲಿ ನಡೆಯುವ ಮಾನವರಿಗೆ ಇಹಪರಲೋಕಗಳು ಶುಭಮಯವಾಗುವುವೆಂದು ಮನುವು ಹೇಳಿರುತ್ತಾನೆ.

**ಶ್ರೀ ಶುಕ ಉವಾಚ:—**

**ಗೃಹಗುಪ್ತೌ ಸುಗುಪ್ತಾನಾಂ ಬಂಧಾನಾಂ ಬಂಧುಬಂಧನೈಃ ।**
**ಮೋಹರಾಗಸಮಾವೇಶಾತ್ಸನ್ಮಾರ್ಗಗಮನಂ ಕುತಃ ॥ ೫೩ ॥**

**ವ್ಯಾಸ ಉವಾಚ:—**

**ಕಷ್ಟಂ ವನೇ ನಿವಸತೋಽತ್ರ ಸದಾ ನರಸ್ಯ**
**ನೋ ಕೇವಲಂ ನಿಜತನುಪ್ರಭವಂ ಭವೇಚ್ಚ ।**
**ದೈವಂ ಚ ಪಿತ್ರ್ಯಮಖಿಲಂ ನ ವಿಭಾತಿಕೃತ್ಯಂ**
**ತಸ್ಮಾದ್ಗೃಹೇ ನಿವಸತಾತ್ಮಹಿತಂ ಪ್ರಚಿಂತ್ಯಂ ॥ ೫೪ ॥**

**ಶ್ರೀ ಶುಕ ಉವಾಚ:—**

**ಭಾವೇನ ಭಾವಿತಮಹಾತಪಸಾಂ ಮುನೀನಾಂ**
**ತಿಷ್ಠಂತಿ ತಾವದಖಿಲಾನಿ ತಪಃ ಫಲಾನಿ ।**
**ಯತ್ತೇ ನಿಕಾಶಶರಣಾಃ ಪುರುಷಾ ನ ಜಾತು**
**ಪಶ್ಯಂತ್ಯಸಜ್ಜನಮುಖಾನಿ ಸುಖಂ ತದೇವ ॥ ೫೫ ॥**

**ವ್ಯಾಸ ಉವಾಚ:—**

**ಗೃಹೇ ಪರಿಗ್ರಹಃ ಪುಂಸಾಂ ಗೃಹಸ್ಥಾಶ್ರಮಧರ್ಮಿಣಾಂ ।**
**ಇಹಲೋಕೇ ಪರೇಚೈವ ಸುಖಂ ಯಚ್ಛತಿ ಶಾಶ್ವತಂ ॥ ೫೬ ॥**

---

೫೩. ಶ್ರೀ ಶುಕನು ಹೇಳುತ್ತಾನೆ:—ಗೃಹದಿಂದ ಗುಪ್ತರೂ, ಬಂಧುಗಳ ಬಂಧನಗಳಿಂದ ಬದ್ಧರೂ ಆದ ಮಾನವರಿಗೆ ಭ್ರಾಂತಿ, ಆಶೆಗಳುಂಟಾಗುವುದರಿಂದ ಸನ್ಮಾರ್ಗಪ್ರವೃತ್ತಿಯು ಹೇಗುಂಟಾಗುವುದು?

೫೪. ವ್ಯಾಸನು ಹೇಳುತ್ತಾನೆ:—ಯಾವಾಗಲೂ ವನದಲ್ಲಿ ವಾಸಮಾಡುವ ಮನುಷ್ಯನಿಗೆ ತನ್ನ ದೇಹದಿಂದುಂಟಾದ ಕಷ್ಟ ಮಾತ್ರ ಸಂಭವಿಸುವುದಿಲ್ಲ. ಮತ್ತು ದೇವಪಿತೃ ಸಂಬಂಧವಾದ ಸಮಸ್ತ ಕರ್ಮಗಳೂ ಹಾಳಾಗುವುವು. ಆದುದರಿಂದ ನರನು ಮನೆಯಲ್ಲಿ ವಾಸಿಸುತ್ತ ತನ್ನ ಹಿತವನ್ನು ಚಿಂತಿಸಬೇಕು.

೫೫. ಶ್ರೀ ಶುಕನು ಹೇಳುತ್ತಾನೆ:—ಧ್ಯಾನಾಸಕ್ತರಾದ ತಪಸ್ವಿಗಳಿಗೆ ಸಕಲ ತಪಃಫಲವೂ ಲಭಿಸುವುದು. ಪುರುಷರು ದುಷ್ಟರ ಮುಖವನ್ನು ನೋಡದಿರುವುದೇ ಸುಖವು.

೫೬. ವ್ಯಾಸನು ಹೇಳುತ್ತಾನೆ:—ಗೃಹಸ್ಥಾಶ್ರಮಿಗಳಾದ ಮನುಷ್ಯರಿಗೆ ಮನೆಯಲ್ಲಿ ಪತ್ನಿಯಿರುವುದರಿಂದ ಇಹಪರ ಲೋಕಗಳಲ್ಲಿ ಶಾಶ್ವತ ಸುಖ ಉಂಟಾಗುವುದು.

ಶ್ರೀ ಶುಕ ಉವಾಚ :—

ಶೀತಂ ಹುತಾಶಾದಪಿ ದೈವಯೋಗಾ
ತ್ಸಂಜಾಯತೇ ಚಂದ್ರಮಸೋಽಪಿ ತಾಪಃ ।
ಪರಿಗ್ರಹಾತ್ಸೌಖ್ಯಸಮುದ್ಭವೋಽತ್ರ
ಭೂತೋಽಭವದ್ಭಾವಿ ನ ಮರ್ತ್ಯಲೋಕೇ ॥ ೫೭ ॥

ವ್ಯಾಸ ಉವಾಚ :—

ಸುಪುಣ್ಯೈರ್ಲಭ್ಯತೇ ಕೃಚ್ಛ್ರಾನ್ಮಾನುಷ್ಯಂ ಭುವಿ ದುರ್ಲಭಂ ।
ತಸ್ಮಿಂಲ್ಲಬ್ಧೇ ನ ಕಿಂ ಲಬ್ಧಂ ಯದಿ ಸ್ಯಾದ್ಗೃಹಧರ್ಮವಿತ್ ॥ ೫೮ ॥

ಶ್ರೀ ಶುಕ ಉವಾಚ :—

ಯದಿ ಸ್ಯಾಜ್ಞಾನಸಂಯುಕ್ತೋ ಜನ್ಮಕಾಲೇಽತ್ರ ಮಾನವಃ ।
ನಿಜಾಽವಸ್ಥಾಂ ಸಮಾಲೋಕ್ಯ ತಜ್ಞಾನಂ ಹಿ ವಿಲೀಯತೇ ॥ ೫೯ ॥

ವ್ಯಾಸ ಉವಾಚ :—

ಮುದಿತಸ್ಯಾಽಪಿ ಪುತ್ರಸ್ಯ ಗರ್ದಭಸ್ಯಾರ್ಭಕಸ್ಯ ಚ ।
ಭಸ್ಮಲೋಲಸ್ಯ ಲೋಕಸ್ಯ ಶಬ್ದೋಽಪಿ ರಟತೋ ಮುದೇ ॥ ೬೦ ॥

ಶ್ರೀ ಶುಕ ಉವಾಚ :—

ರಸತಾ ಸರ್ಪತಾ ಧೂಲಿಂ ಲೋಕೇ ತ್ವಶುಚಿನಾ ಚಿರಂ ।
ಮುನೇಽತ್ರ ಶಿಶುನಾ ಲೋಕಸ್ತುಷ್ಟಿಂ ಯಾತಿ ಸ ಬಾಲಿಶಃ ॥ ೬೧ ॥

---

೫೭. ಶ್ರೀ ಶುಕನು ಹೇಳುತ್ತಾನೆ :—ಬೆಂಕಿಯಿಂದ ಶೀತವೂ, ಚಂದ್ರನಿಂದ ತಾಪವೂ ದೈವಯೋಗದಿಂದ ಉಂಟಾಗುವುದು. ಭೂಲೋಕದಲ್ಲಿ ಪತ್ನಿಯಿಂದ ಸೌಖ್ಯವು ಉಂಟಾಗಿಲ್ಲ, ಉಂಟಾಗುತ್ತಿಲ್ಲ, ಉಂಟಾಗುವುದೂ ಇಲ್ಲ.

೫೮. ವ್ಯಾಸನು ಹೇಳುತ್ತಾನೆ :—ಭೂಮಿಯಲ್ಲಿ ಪುಣ್ಯಗಳಿಂದ ಮನುಷ್ಯ ಜನ್ಮವು ಅತಿ ಕಷ್ಟದಿಂದ ದೊರೆಯುವುದು. ಆ ಮನುಷ್ಯ ಜನ್ಮವನ್ನು ಹೊಂದಿ ಗೃಹಸ್ಥಾಶ್ರಮಧರ್ಮವನ್ನರಿತರೆ ಯಾವುದು ತಾನೆ ಲಭಿಸುವುದಿಲ್ಲ.

೫೯. ಶ್ರೀ ಶುಕನು ಹೇಳುತ್ತಾನೆ :—ಈ ಲೋಕದಲ್ಲಿ ಮನುಷ್ಯನು ಹುಟ್ಟುವ ಸಮಯದಲ್ಲಿ ಜ್ಞಾನಿಯಾಗಿದ್ದರೆ ಅವನ ನಿಜಾವಸ್ಥೆಯನ್ನು ನೋಡಿದ ಕೂಡಲೆ ಆ ಜ್ಞಾನವು ನಷ್ಟವಾಗುವುದು.

೬೦. ವ್ಯಾಸನು ಹೇಳುತ್ತಾನೆ :—ಸಂತೋಷಗೊಂಡು ಕೂಗುತ್ತಿರುವ ಪುತ್ರ, ಕತ್ತೆ, ಶಿಶು, ಭಸ್ಮ ಲೋಲರಾದ ಜನರು ಇವರ ಶಬ್ದವೂ ಸಂತೋಷವನ್ನುಂಟು ಮಾಡುವುದು.

೬೧. ಶ್ರೀ ಶುಕನು ಹೇಳುತ್ತಾನೆ :—ಮುನಿಯೆ ! ಈ ಲೋಕದಲ್ಲಿ ಧೂಳನ್ನು ಮುಕ್ಕುತ್ತಿರುವವನೂ, ಆ ಧೂಳಿನಲ್ಲಿ ತೆವಳುತ್ತಿರುವವನೂ ಆದ ಅಶುಚಿಯಾದ ಬಾಲಕನನ್ನು ನೋಡಿ ಮೂಢನು ಸಂತೋಷಗೊಳ್ಳುವನು.

ವ್ಯಾಸ ಉವಾಚ :—

ಪುಂ ನಾಮಾಽಸ್ತಿ ಮಹಾರೌದ್ರೋ ನರಕೋ ಯಮಮಂದಿರೇ ।
ಪುತ್ರಹೀನೋ ವ್ರಜೇತ್ತತ್ರ ತೇನ ಪುತ್ರಃ ಪ್ರಶಸ್ಯತೇ ॥ ೬೨ ॥

ಶ್ರೀ ಶುಕ ಉವಾಚ :—

ಯದಿ ಸ್ಯಾತ್ಪುತ್ರತಃ ಸ್ವರ್ಗಃ ಸರ್ವೇಷಾಂ ಸ್ಯಾನ್ಮಹಾಮುನೇ ।
ಶೂಕರಾಣಾಂ ಶುನಾಂ ಚೈವ ಶಲಭಾನಾಂ ವಿಶೇಷತಃ ॥ ೬೩ ॥

ವ್ಯಾಸ ಉವಾಚ :—

ಪಿತೄಣಾಮನೃಣೋ ಮರ್ತ್ಯೋ ಜಾಯತೇ ಪುತ್ರದರ್ಶನಾತ್ ।
ಪೌತ್ರಸ್ಯಾಽಪಿ ಚ ದೇವಾನಾಂ ಪ್ರಪೌತ್ರಸ್ಯ ದಿವಾಶ್ರಯಃ ॥ ೬೪ ॥

ಶುಕ ಉವಾಚ :—

ಚಿರಾಯುರ್ಜಾಯತೇ ಗೃಧ್ರಃ ಸಂತತಿಂ ಪಶ್ಯತೇ ನಿಜಾಂ ।
ಕ್ರಮೇಣ ಸಂತತಂ ಕಿಂ ನ ಸ ಮೋಕ್ಷಂ ಪ್ರತಿಪದ್ಯತೇ ॥ ೬೫ ॥

ಸೂತ ಉವಾಚ :—

ಏವಮುಕ್ತ್ವಾ ಪರಿತ್ಯಜ್ಯ ಪಿತರಂ ಸ ವನಂ ಗತಃ ।
ಮಾತರಂ ಚ ಸುದುಃಖಾರ್ತಾಂ ಪ್ರಲಪನ್ತೀಮನೇಕಧಾ ॥ ೬೬ ॥

---

೬೨. ವ್ಯಾಸನು ಹೇಳುತ್ತಾನೆ:—ಯಮಪುರಿಯಲ್ಲಿ ಪುನ್ನಾಮಕವಾದ ಭಯಂಕರ ನರಕವಿರುವುದು. ಪುತ್ರಹೀನನು ಆ ನರಕಕ್ಕೆ ತೆರಳುವನು. ಆದುದರಿಂದ ಪುತ್ರನು ಶ್ರೇಷ್ಠನೆನ್ನಿಸಿಕೊಳ್ಳುವನು.

೬೩. ಶ್ರೀ ಶುಕನು ಹೇಳುತ್ತಾನೆ:—ಮಹಾಮುನಿಯೆ! ಮಗನಿಂದ ಎಲ್ಲರಿಗೂ ಸ್ವರ್ಗವುಂಟಾಗುವುದಾದರೆ ಹಂದಿ, ನಾಯಿ, ಮಿಡತೆಗಳಿಗೆ ಅತಿಶಯವಾಗಿ ಸ್ವರ್ಗವೇ ಲಭಿಸೀತು.

೬೪. ವ್ಯಾಸನು ಹೇಳುತ್ತಾನೆ:—ಮಾನವನು ಪುತ್ರನ ದರ್ಶನದಿಂದ ಪಿತೃಋಣದಿಂದಲೂ, ಮೊಮ್ಮಗನ ದರ್ಶನದಿಂದ ದೇವಋಣದಿಂದಲೂ ಮುಕ್ತನಾಗುವನು. ಮರಿಮಗನ ದರ್ಶನದಿಂದ ಸ್ವರ್ಗವನ್ನು ಪಡೆಯುವನು.

೬೫. ಶುಕನು ಹೇಳುತ್ತಾನೆ:—ಹದ್ದು ಚಿರಂಜೀವಿಯಾಗುವುದು. ತನ್ನ ಸಂತತಿಯನ್ನು ಯಾವಾಗಲೂ ಕಾಣುವುದು. ಅದೂ ಕ್ರಮವಾಗಿ ಮೋಕ್ಷವನ್ನು ಪಡೆಯುವುದಿಲ್ಲವೇ ?

೬೬. ಸೂತನು ಹೇಳುತ್ತಾನೆ:—ಶುಕನು ಹೀಗೆ ಹೇಳಿ ತಂದೆಯನ್ನೂ, ದುಃಖಗೊಂಡು ಅನೇಕ ವಿಧವಾಗಿ ಗೋಳಾಡುತ್ತಿರುವ ತಾಯಿಯನ್ನೂ ತ್ಯಜಿಸಿ ಕಾಡಿಗೆ ಹೊರಟುಹೋದನು.

**ತಂ ದೃಷ್ಟ್ವಾ ದುಃಖಿತೋ ವ್ಯಾಸೋ ನಿರಾಶಃ ಪುತ್ರದರ್ಶನೇ ।**
**ಪುತ್ರಶೋಕಾಭಿಸಂತಪ್ತೋ ಭಾರ್ಯಯಾ ಸಹಿತೋಽಭವತ್ ॥ ೬೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ವ್ಯಾಸಶುಕಸಂವಾದವರ್ಣನಂ" ನಾಮ**
**ಸಪ್ತಚತ್ವಾರಿಂಶದುತ್ತರಶತತಮೋಽಧ್ಯಾಯಃ**

---

೬೭. ವ್ಯಾಸನು ಅವನನ್ನು ನೋಡಿ ದುಃಖಗೊಂಡು ಪುತ್ರದರ್ಶನದಲ್ಲಿ ನಿರಾಶನಾಗಿ ಪುತ್ರಶೋಕದಿಂದ ಪರಿತಪಿಸುತ್ತ ಪತ್ನಿಯೊಡನೆ ವಾಸಮಾಡು ತ್ತಿದ್ದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವ್ಯಾಸಶುಕಸಂವಾದವರ್ಣನ" ವೆಂಬ
ನೂರನಲವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ

## ವಟಿಕೇಶ್ವರಮಾಹಾತ್ಮ್ಯವರ್ಣನಂ

**ಸೂತ ಉವಾಚ:—**

**ಏವಂ ತಂ ನಿಃಸ್ಪೃಹಂ ಜ್ಞಾತ್ವಾ ಗೃಹಂ ಪ್ರತಿ ನಿಜಾತ್ಮಜಂ ।**
**ಪಿಂಗಲಾ ದುಃಖಸಂಯುಕ್ತಾ ವ್ಯಾಸಮೇತದುವಾಚ ಹ ॥ ೧ ॥**
**ಅಹಂ ತಪಶ್ಚರಿಷ್ಯಾಮಿ ಪುತ್ರಾರ್ಥಂ ದ್ವಿಜಸತ್ತಮ ।**
**ಅನುಜ್ಞಾಂ ದೇಹಿ ಮೇ ಯೇನ ತೋಷಯಾಮಿ ಮಹೇಶ್ವರಂ ।**
**ಪುತ್ರೋ ಯೇನ ಭವೇನ್ಮಹ್ಯಂ ವಂಶವೃದ್ಧಿಕರಃ ಪರಃ ॥ ೨ ॥**
**ಏವಂ ಸಾ ನಿಶ್ಚಯಂ ಕೃತ್ವಾ ಲಬ್ಧ್ವಾಽನುಜ್ಞಾಂ ಮುನೇಸ್ತತಃ ।**
**ಕ್ಷೇತ್ರಮೇತತ್ಸಮಾಸಾದ್ಯ ತಪಸ್ತೇಪೇ ಪತಿವ್ರತಾ ॥ ೩ ॥**
**ಸಂಸ್ಥಾಪ್ಯ ಶಂಕರಂ ದೇವಂ ತದಗ್ರೇ ನಿರ್ಮಲೋದಕಾಂ ।**
**ಕೃತ್ವಾ ವಾಪೀಂ ಸುವಿಸ್ತೀರ್ಣಾಂ ಸ್ನಾನಾತ್ಪಾತಕನಾಶಿನೀಂ ॥ ೪ ॥**
**ತತಸ್ತಸ್ಯಾ ಗತಸ್ತುಷ್ಟಿಂ ಭಗವಾಂಸ್ತ್ರಿಪುರಾಂತಕಃ ।**
**ವರದೋಽಸ್ಮೀತಿ ತಾಂ ಪ್ರಾಹ ಪ್ರಹೃಷ್ಟೇನಾಂತರಾತ್ಮನಾ ॥ ೫ ॥**

---

## ಕನ್ನಡದ ಅನುವಾದ

### ವಟಿಕೇಶ್ವರಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ವಟಿಕೆಯು ತನ್ನ ಮಗನು ಹೀಗೆ ಗೃಹಸ್ಥಾಶ್ರಮದಲ್ಲಿ ಆಶೆಯಿಲ್ಲದವನಾಗಿರುವುದನ್ನರಿತು ದುಃಖದಿಂದ ವ್ಯಾಸನನ್ನು ಕುರಿತು ಇಂತೆಂದಳು.

೨. ದ್ವಿಜವರ್ಯನೆ! ನಾನು ಪುತ್ರನಿಗಾಗಿ ತಪವನ್ನಾಚರಿಸುವೆನು. ನನಗೆ ಅಪ್ಪಣೆ ಕೊಡು. ಅದರಿಂದ ನಾನು ಶಿವನನ್ನು ಆನಂದಗೊಳಿಸುವೆನು. ಅದರಿಂದ ನನಗೆ ವಂಶವನ್ನು ವೃದ್ಧಿಗೊಳಿಸುವ ಉತ್ತಮನಾದ ಪುತ್ರನು ಜನಿಸುವನು.

೩–೪. ಅವಳು ಹೀಗೆ ನಿಶ್ಚಯಿಸಿ ಮುನಿಯ ಆಜ್ಞೆಯನ್ನು ಪಡೆದು ಈ ಕ್ಷೇತ್ರಕ್ಕೆ ಬಂದು ಶಂಕರನನ್ನು ಪ್ರತಿಷ್ಠೆಮಾಡಿ ಅವನ ಮುಂದೆ ಪಾಪವನ್ನು ನಿವಾರಿಸುವ ವಿಸ್ತೀರ್ಣವಾದ ವಾಪಿಯನ್ನು ನಿರ್ಮಿಸಿ ತಪಸ್ಸನ್ನು ಮಾಡಿದಳು.

೫. ಅನಂತರ ಪೂಜ್ಯನಾದ ಮಹೇಶ್ವರನು ಅವಳಲ್ಲಿ ಸಂತುಷ್ಟನಾಗಿ ಹರ್ಷಗೊಂಡ ಮನಸ್ಸಿನಿಂದ ಅವಳನ್ನು ಕುರಿತು ವರವನ್ನು ಕೊಡುವೆನು ಎಂದನು.

ಶ್ರೀ ಮಹಾದೇವ ಉವಾಚ:—

ಪರಿತುಷ್ಟೋಽಸ್ಮಿ ತೇ ಭದ್ರೇ ವರಂ ವರಯ ಸುವ್ರತೇ ।
ಯಃ ಸ್ಥಿತೋ ಹೃದಯೇ ನಿತ್ಯಂ ನಾಽದೇಯಂ ವಿದ್ಯತೇ ಮಮ ॥ ೬ ॥

ವಟಿಕೋವಾಚ:—

ಸುತಂ ದೇಹಿ ಸುರಶ್ರೇಷ್ಠ ಮಮ ವಂಶವಿವರ್ಧನಂ ।
ಚಿತ್ತಾಹ್ಲಾದಕರಂ ನಿತ್ಯಂ ಸುಶೀಲಂ ವಿನಯಾನ್ವಿತಂ ॥ ೭ ॥

ಶ್ರೀ ಮಹಾದೇವ ಉವಾಚ:—

ಭವಿಷ್ಯತಿ ನ ಸಂದೇಹಸ್ತವ ಪುತ್ರಃ ಸುಶೋಭನೇ ।
ಯಾದೃಕ್ತ್ವಯಾ ಮಹಾಭಾಗೇ ಪ್ರಾರ್ಥಿತಸ್ತದ್ವಿಶೇಷತಃ ॥ ೮ ॥
ಅನ್ಯಾಽಪಿ ಮಾನುಷೀ ಯಾಽತ್ರ ವಾಪ್ಯಾಂ ಸ್ನಾತ್ವಾ ಸಮಾಹಿತಾ ।
ಪಂಚಮ್ಯಾಂ ವತ್ಸರಂ ಯಾವಚ್ಛುಕ್ಲಪಕ್ಷೇ ಹ್ಯುಪಸ್ಥಿತೇ ।
ಪೂಜಯಿಷ್ಯತಿ ಮಲ್ಲಿಂಗಂ ಯಚ್ಚಾಽದ್ಯ ಸ್ಥಾಪಿತಂ ತ್ವಯಾ ॥ ೯ ॥
ಸಾಽಥ ಲಪ್ಸ್ಯತಿ ಸತ್ಪುತ್ರಂ ದತ್ವಾ ಫಲಮನುತ್ತಮಂ ।
ಯಾ ಚ ದೌರ್ಭಾಗ್ಯಸಂಯುಕ್ತಾ ತೃತೀಯಾ ದಿವಸೇಽತ್ರ ಸ್ತ್ರೀ ॥ ೧೦ ॥
ಸ್ನಾತ್ವಾಽತ್ರ ಸಲಿಲೇ ಪಶ್ಚಾನ್ಮಲ್ಲಿಂಗಂ ಪೂಜಯಿಷ್ಯತಿ
ಸಾ ಸೌಭಾಗ್ಯಸಮೋಪೇತಾ ವರ್ಷಾಂತೇ ಚ ಭವಿಷ್ಯತಿ ॥ ೧೧ ॥

---

೬. ಶ್ರೀ ಮಹಾದೇವನು ಹೇಳುತ್ತಾನೆ:—ನಿಯಮಪರಾಯಣಳಾದ ಸಾಧ್ವಿಯೆ! ನಿನ್ನ ಮನಸ್ಸಿನಲ್ಲಿರುವುದನ್ನು ಕೇಳಿಕೊ. ನಿನಗೆ ಕೊಡದಿರುವುದು ಏನೂ ಇಲ್ಲ.

೭. ವಟಿಕೆಯು ಹೇಳುತ್ತಾಳೆ:— ಸುರವರ್ಯನೆ! ವಂಶವನ್ನು ವೃದ್ಧಿಗೊಳಿಸುವವನೂ, ಮನಸ್ಸಿಗೆ ಆನಂದವನ್ನುಂಟುಮಾಡುವವನೂ, ಸುಗುಣಿಯೂ, ವಿನೀತನೂ ಆದ ಪುತ್ರನನ್ನು ನನಗೆ ಅನುಗ್ರಹಿಸು.

೮. ಶ್ರೀ ಮಹಾದೇವನು ಹೇಳುತ್ತಾನೆ:–ಮಂಗಳಕರಳೆ! ನೀನು ಪ್ರಾರ್ಥಿಸಿದಂತಹ ಪುತ್ರನು ನಿಶ್ಚಯವಾಗಿಯೂ ನಿನಗೆ ಜನಿಸುವನು.

೯–೧೧. ಇತರ ನಾರಿಯೂ ಒಂದು ವರ್ಷಕಾಲ ಶುಕ್ಲಪಕ್ಷದ ಪಂಚಮಿ ದಿನ ಈ ವಾಪಿಯಲ್ಲಿ ಮಿಂದು ನೀನೀಗ ಪ್ರತಿಷ್ಠೆಮಾಡಿರುವ ಲಿಂಗವನ್ನು ಪೂಜಿಸಿ ಉತ್ತಮವಾದ ಫಲವನ್ನು ದಾನಮಾಡಿದರೆ ಅವಳೂ ಸತ್ಪುತ್ರನನ್ನು ಪಡೆಯುವಳು. ಕುರೂಪಿಯಾದ ಹೆಂಗಸು ಸಹ ತದಿಗೆಯ ದಿನ ಈ ಬಾವಿಯ ನೀರಿನಲ್ಲಿ ಮಿಂದು ನನ್ನ ಲಿಂಗವನ್ನು ಪೂಜಿಸಿದರೆ ಅವಳು ವರ್ಷದ ಕೊನೆಯಲ್ಲಿ ಸುಂದರಿಯಾಗುವಳು.

ಯಃ ಪುನಃ ಪುರುಷಶ್ಚಾತ್ರ ಸ್ನಾತ್ವಾ ಮಾಂ ಪೂಜಯಿಷ್ಯತಿ ।
ಸಕಾಮೋ ಲಪ್ಸ್ಯತೇ ಕಾಮಾನ್ ವಿಕಾಮೋ ಮೋಕ್ಷಮೇವ ಚ ॥ ೧೨ ॥
ಏವಮುಕ್ತ್ವಾ ಮಹಾದೇವಸ್ತತಶ್ಚಾಽದರ್ಶನಂ ಗತಃ ।
ಸಾಽಪಿ ಲೇಭೇ ಸುತಂ ವ್ಯಾಸಾತ್ಕಪಿಂಜಲಮಿತಿ ಶ್ರುತಂ ॥ ೧೩ ॥
ಯಾದೃಕ್ತೇನ ಪುರಾ ಪ್ರೋಕ್ತೋ ದೇವದೇವೇನ ಶೂಲಿನಾ ।
ಯೇನೈವ ಸ್ಥಾಪಿತಾಚಾಽತ್ರ ದೇವೀ ಕೇಲೀಶ್ವರೀ ಪುರಾ ।
ಸರ್ವಸಿದ್ಧಿಪ್ರದಾ ಲೋಕೇ ತತ್ರ ಯಾಽಽರಾಧಿತಾ ಪುರಾ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ವಟಕೇಶ್ವರಮಾಹಾತ್ಮ್ಯವರ್ಣನಂ"
ನಾಮಾಷ್ಟಚತ್ವಾರಿಂಶದಧಿಕಶತತಮೋಽಧ್ಯಾಯಃ

---

೧೨. ಕಾಮ್ಯಫಲವನ್ನು ಬಯಸುವ ಪುರುಷನು ಇಲ್ಲಿ ಮಿಂದು ನನ್ನನ್ನು ಆರಾಧಿಸಿದರೆ ಇಷ್ಟಾರ್ಥವನ್ನು ಹೊಂದುವನು. ನಿಷ್ಕಾಮಿಯು ಮೋಕ್ಷವನ್ನು ಪಡೆಯುವನು.

೧೩–೧೪. ಆ ಮಹಾದೇವನು ಹೀಗೆ ನುಡಿದು ಅದೃಶ್ಯನಾದನು. ಆ ವಟಿಕೆಯೂ ಹಿಂದೆ ಶಿವನು ಹೇಳಿದಂತಹ ಕಪಿಂಜಲನೆಂಬ ಪುತ್ರನನ್ನು ವ್ಯಾಸನಿಂದ ಪಡೆದಳು. ಅವನು ಇಲ್ಲಿ ಸರ್ವಸಿದ್ಧಿಯನ್ನೂ ದೊರಕಿಸುವ ಕೇಲೀಶ್ವರೀ ದೇವಿಯನ್ನು ಸ್ಥಾಪಿಸಿ ಆರಾಧಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ವಟಕೇಶ್ವರಮಾಹಾತ್ಮ್ಯವರ್ಣನ"ವೆಂಬ
ನೂರನಲವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಪಂಚಾಶದುತ್ತರಶತತಮೋಽಧ್ಯಾಯಃ

### ಅಂಧಕಾಸುರವಧವೃತ್ತಾಂತೇ ಶಂಕರಕೃತಕೇಲೀಶ್ವರೀಪ್ರಾದುರ್ಭಾವವರ್ಣನಂ

ಋಷಯ ಊಚುಃ :—

ಕೇಲೀಶ್ವರೀ ಚ ಯಾ ದೇವೀ ಶ್ರೂಯತೇ ಸೂತನಂದನ ।
ಮಹಾತ್ಮ್ಯಂ ವದ ನಸ್ತಸ್ಯಾ ಉತ್ಪತ್ತಿಂ ಚ ಸುವಿಸ್ತರಾತ್ ॥ ೧ ॥
ಕಸ್ಮಿನ್‌ಕಾಲೇ ಸಮುತ್ಪನ್ನಾ ಕಿಮರ್ಥಂ ಚ ಸುರೇಶ್ವರೀ ।
ಕಿಂ ತಸ್ಯಾ ಜಾಯತೇ ಶ್ರೇಯಃ ಪೂಜಯಾ ನಮನೇನ ಚ ॥ ೨ ॥
ತ್ವಯಾ ಕಾತ್ಯಾಯನೀ ಪ್ರೋಕ್ತಾ ಚಾಮುಂಡಾ ಚ ಸುರೇಶ್ವರೀ ।
ಶ್ರೀಮಾತಾ ಚ ಸಮುತ್ಪನ್ನಾ ಕಿಮರ್ಥಂ ಚ ಸುರೇಶ್ವರೀ ॥ ೩ ॥
ಶ್ರೀಮಾತಾ ಚ ತಥಾ ತಾರಾ ದೇವೀ ಶತ್ರು ವಿನಾಶಿನೀ ।
ಕೇಲೀಶ್ವರೀ ನ ಸಂಪ್ರೋಕ್ತಾ ತಸ್ಮಾತ್ತಾಂ ವದ ಸಾಂಪ್ರತಂ ॥ ೪ ॥
ಕೌತುಕಂ ನಃ ಸಮುತ್ಪನ್ನಮತ್ರಾರ್ಥೇ ಸೂತನಂದನ ॥ ೫ ॥

ಸೂತ ಉವಾಚ :—

ಆದ್ಯೈಕಾ ದೇವತಾ ಲೋಕೇ ಬಹುರೂಪಾ ವ್ಯವಸ್ಥಿತಾ ।
ದೇವತಾನಾಂ ಹಿತಾರ್ಥಾಯ ದೈತ್ಯಪಕ್ಷಕ್ಷಯಾಯ ಚ ॥ ೬ ॥

---

## ಕನ್ನಡದ ಅನುವಾದ

### ಅಂಧಕಾಸುರವಧವೃತ್ತಾಂತೇ ಶಂಕರಕೃತಕೇಲೀಶ್ವರೀಪ್ರಾದುರ್ಭಾವವರ್ಣನ

೧. ಋಷಿಗಳು ಹೇಳುತ್ತಾರೆ :— ಎಲೈ ಸೂತತನಯನೇ ! ಈ ಕೇಲೀಶ್ವರಿಯ ಮಹಾತ್ಮ್ಯವನ್ನೂ, ಉತ್ಪತ್ತಿಯನ್ನೂ ವಿಸ್ತಾರವಾಗಿ ನಮಗೆ ಹೇಳು.

೨. ಆ ಸುರೇಶ್ವರಿಯು ಯಾವಾಗ ಏತಕ್ಕೆ ಉದಿಸಿದಳು. ಅವಳನ್ನು ಪೂಜಿಸುವುದರಿಂದಲೂ, ನಮಿಸುವುದರಿಂದಲೂ ಯಾವ ಶ್ರೇಯಸ್ಸುಂಟಾಗುವುದು ?

೩–೪. ನೀನು ಕಾತ್ಯಾಯನೀ, ಚಾಮುಂಡಾ, ಶ್ರೀಮಾತಾ, ಶತ್ರುನಾಶಕಳಾದ ತಾರಾದೇವಿ ಇವರ ವಿಷಯವನ್ನು ಹೇಳಿರುವೆ. ಈ ಕೇಲೀಶ್ವರಿಯ ವಿಚಾರವನ್ನು ಹೇಳಲಿಲ್ಲ. ಇವಳು ಏಕೆ ಹುಟ್ಟಿದಳು ? ಇವಳ ವೃತ್ತಾಂತವನ್ನು ಈಗ ಹೇಳು.

೫. ಸೂತ ! ನಮಗೆ ಈ ವಿಷಯವನ್ನು ಕೇಳಲು ಬಹಳ ಕುತೂಹಲ ಉಂಟಾಗಿದೆ.

೬. ಸೂತನು ಹೇಳುತ್ತಾನೆ :—ಆದ್ಯದೇವತೆಯಾದ ಇವಳು ದೇವತೆಗಳ ಹಿತಕ್ಕಾಗಿಯೂ, ದೈತ್ಯಪಕ್ಷದ ನಾಶಕ್ಕಾಗಿಯೂ ಲೋಕದಲ್ಲಿ ಬಹುರೂಪಳಾದಳು.

ಯದಾ ಯದಾಽತ್ರ ದೇವಾನಾಂ ವ್ಯಸನಂ ಜಾಯತೇ ಕ್ವಚಿತ್ ।
ತದಾ ತದಾ ಪರಾ ಶಕ್ತಿರ್ಯಾಸಾ ವ್ಯಾಪ್ಯ ವ್ಯವಸ್ಥಿತಾ ॥ ೭ ॥
ಸರ್ವಮೇತಜ್ಜಗದ್ಧಾತ್ರೀ ಜನ್ಮ ಚಕ್ರೇ ಧರಾತಲೇ ।
ಮಹಿಷಾಸುರ ನಾಶಾಯ ಸಾ ಚ ಕಾತ್ಯಾಯನೀ ಭುವಿ ॥ ೮ ॥
ಅವತೀರ್ಣಾ ಪರಾ ಮೂರ್ತಿರ್ಗತಾಽಸ್ಮಿನ್ ಭುವನತ್ರಯೇ ।
ಯದಾ ಶುಂಭನಿಶುಂಭೌ ಚ ದಾನವೌ ಬಲದರ್ಪಿತೌ ॥ ೯ ॥
ಅವತೀರ್ಣಾ ತದಾ ಸೈವ ಚಾಮುಂಡಾ ರೂಪಮಾಶ್ರಿತಾ ।
ಪ್ರೋದ್ಗತೇ ಕಾಲಯವನೇ ಸರ್ವದೇವ ಭಯಾವಹೇ ॥ ೧೦ ॥
ಶ್ರೀಮಾತಾ ರೂಪಿಣೀ ದೇವೀ ಸೈವ ಜಾತಾ ಮಹೀತಲೇ ।
ಅಂಧಾಸುರ ವಧಾರ್ಥಾಯ ಶಂಭುನಾ ಕ್ರಾಂತಚೇತಸಾ ।
ಸೃಷ್ಟ್ವಾ ಕೇಲೀಶ್ವರೀ ದೇವೀ ಯಯಾ ವ್ಯಾಪ್ತಮಿದಂ ಜಗತ್ ॥ ೧೧ ॥
ತತಸ್ತಸ್ಯಾಃ ಪ್ರಭಾವೇನ ಹತ್ವಾ ದೈತ್ಯಾನಶೇಷತಃ ।
ಅಂಧಕೋ ನಿಹತಃ ಪಶ್ಚಾತ್ತ್ರೈಲೋಕ್ಯವ್ಯಸನಪ್ರದಃ ॥ ೧೨ ॥

ಋಷಯ ಊಚುಃ:—

ಅಂಧಕಃ ಕಸ್ಯ ಪುತ್ರೋಽಯಂ ಕಿಂ ಪ್ರಭಾವಃ ಕಥಂ ಹತಃ ।
ಕಸ್ಮಾದ್ಧತಸ್ತು ಸಂಗ್ರಾಮೇ ಸರ್ವಂ ವಿಸ್ತರತೋ ವದ ॥ ೧೩ ॥

---

೭–೧೧. ದೇವತೆಗಳಿಗೆ ವ್ಯಸನವುಂಟಾದಾಗ ಪರಾಶಕ್ತಿಯೆಂದ ಆ ದೇವಿಯು ಭೂಮಿಯಲ್ಲಿ ಅವತರಿಸಿ ಈ ಜಗತ್ತನ್ನು ವ್ಯಾಪಿಸಿದಳು. ಆ ದೇವಿಯು ಮಹಿಷಾಸುರ ನಾಶಕ್ಕಾಗಿ ಕಾತ್ಯಾಯನೀರೂಪದಿಂದ ಭುವನದಲ್ಲಿ ಅವತರಿಸಿದಳು. ಶುಂಭನಿಶುಂಭರು ಬಲದಿಂದ ಅಹಂಕಾರಗೊಂಡಾಗ ಚಾಮುಂಡಾ ರೂಪದಿಂದ ಅವತರಿಸಿದಳು. ಸಕಲ ದೇವತೆಗಳಿಗೆ ಭಯವನ್ನುಂಟುಮಾಡುವ ಕಾಲಯವನನು ಹುಟ್ಟಲು ಶ್ರೀಮಾತಾ ರೂಪದಿಂದ ಭೂಮಿಯಲ್ಲಿ ಅವತರಿಸಿದಳು. ಮಹೇಶ್ವರನು ಅಂಧಾಸುರನ ವಧೆಗಾಗಿ ಈ ಕೇಲೀಶ್ವರಿಯನ್ನು ಸೃಷ್ಟಿಸಿದನು. ಇವಳಿಂದ ಈ ಪ್ರಪಂಚವು ವ್ಯಾಪ್ತವಾಗಿರುವುದು.

೧೨. ಅನಂತರ ಅವಳು ತನ್ನ ಪ್ರಭಾವದಿಂದ ಸಕಲ ದೈತ್ಯರನ್ನೂ ಕೊಂದು ತ್ರೈಲೋಕ್ಯಕ್ಕೆ ವ್ಯಸನವನ್ನುಂಟುಮಾಡುವ ಅಂಧಕನನ್ನು ಕೊಂದಳು.

೧೩. ಋಷಿಗಳು ಹೇಳುತ್ತಾರೆ:—ಈ ಅಂಧಕನು ಯಾರ ಮಗನು? ಎಂತಹ ಪ್ರಭಾವವುಳ್ಳವನು? ಹೇಗೆ ಏತಕ್ಕೆ ಹತನಾದನು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

ಸೂತ ಉವಾಚ :—

ದಕ್ಷಸ್ಯ ದುಹಿತಾ ನಾಮ್ನಾ ದಿತಿಃ ಸರ್ವ ಗುಣಾಲಯಾ ।
ಹಿರಣ್ಯಕಶಿಪುರ್ನಾಮ ತಸ್ಯಾಃ ಪುತ್ರೋ ಬಭೂವ ಹ ॥ ೧೪ ॥
ಯೇನ ಶಕ್ರಾದಯೋ ದೇವಾ ಜಿತಾಃ ಸರ್ವೇ ರಣಾಜಿರೇ ।
ಸ್ವರ್ಗೇ ರಾಜ್ಯಂ ಕೃತಂ ಭೂರಿ ಸ್ವಯಮೇವ ಮಹಾತ್ಮನಾ ॥ ೧೫ ॥
ಯದ್ಭಯಾತ್ಸಕಲೈರ್ದೇವೈರ್ನಾನಾಶಸ್ತ್ರಾಣ್ಯನೇಕಶಃ ।
ನಿರ್ಮಿತಾನ್ಯತಿಮುಖ್ಯಾನಿ ವರ್ಮಚರ್ಮಯುತಾನಿ ಚ ॥ ೧೬ ॥
ಸ್ವಯಂ ವಿದಾರಿತೋ ಯಶ್ಚ ವಿಷ್ಣುನಾ ಪ್ರಭವಿಷ್ಣುನಾ ।
ಕರಜೈರ್ಜಾನುನಿ ಪೃಷ್ಠೇ ವಿನಿಧಾಯ ಪ್ರಕೋಪತಃ ॥ ೧೭ ॥
ತಸ್ಯ ಪುತ್ರದ್ವಯಂ ಜಜ್ಞೇ ವೀರ್ಯೌದಾರ್ಯಗುಣಾನ್ವಿತಂ ।
ಜ್ಯೇಷ್ಠಃ ಪ್ರಹ್ಲಾದ ಇತ್ಯುಕ್ತೋ ದ್ವಿತೀಯಶ್ಚಾಂಧಕಸ್ತಥಾ ॥ ೧೮ ॥
ಹಿರಣ್ಯಕಶಿಪೌ ಪ್ರಾಪ್ತೇ ಮೃತ್ಯುಲೋಕಂ ಸುಹೃದ್ಗಣೈಃ ।
ಅಮಾತ್ಯೈಶ್ಚ ತತಃ ಪ್ರೋಕ್ತಃ ಪ್ರಹ್ಲಾದೋ ವಿನಯಾನ್ವಿತೈಃ ॥ ೧೯ ॥
ಪಿತೃಪೈತಾಮಹಂ ರಾಜ್ಯಮೇತದಾಚರ ಸಾಂಪ್ರತಂ ।
ಧುರಂ ವಹಸ್ವ ರಾಜ್ಯೋತ್ಥಾಂ ದೇವಾನ್ ಯುದ್ಧೇ ನಿಪಾತಯ ॥ ೨೦ ॥

ಪ್ರಹ್ಲಾದ ಉವಾಚ :—

ನಾಽಹಂ ರಾಜ್ಯಂ ಕರಿಷ್ಯಾಮಿ ಕಥಂಚಿದಪಿ ಭೂತಲೇ ।
ಯತಸ್ತತೋ ನಿಬೋಧಧ್ವಂ ವಚನಂ ಮಮ ಸಾಂಪ್ರತಂ ॥ ೨೧ ॥

---

೧೪. ಸೂತನು ಹೇಳುತ್ತಾನೆ:—ದಕ್ಷನ ಮಗಳೂ, ಸಮಸ್ತ ಗುಣಗಳಿಗೆ ಆಶ್ರಯಳೂ ಆದ ದಿತಿ ದೇವಿಗೆ ಹಿರಣ್ಯಕಶಿಪುವೆಂಬ ಪುತ್ರನು ಜನಿಸಿದನು.

೧೫. ಮಹಾತ್ಮನಾದ ಅವನು ಯುದ್ಧದಲ್ಲಿ ಇಂದ್ರಾದಿ ದಿವಿಜರನ್ನು ಸೋಲಿಸಿ ಸ್ವರ್ಗರಾಜ್ಯವನ್ನಾಳಿದನು.

೧೬. ಇವನ ಭಯದಿಂದ ಸಮಸ್ತ ದೇವತೆಗಳು ಅಂಗಿ, ಗುರಾಣಿಗಳಿಂದ ಸಹಿತವಾಗಿ ಅತಿ ಮುಖ್ಯವಾದ ಬಗೆ ಬಗೆಯ ಆಯುಧಗಳನ್ನು ನಿರ್ಮಿಸಿದರು.

೧೭. ಈ ಹಿರಣ್ಯಕಶಿಪುವನ್ನು ಸಮರ್ಥನಾದ ವಿಷ್ಣುವು ಕೋಪದಿಂದ ಮೊಣಕಾಲಿನ ಮೇಲೆ ಇಟ್ಟುಕೊಂಡು ಬೆನ್ನಿನಲ್ಲಿ ಉಗುರುಗಳಿಂದ ಸೀಳಿದನು.

೧೮–೨೦. ಆ ಹಿರಣ್ಯಕಶಿಪುವಿಗೆ ಪ್ರಹ್ಲಾದ, ಅಂಧಕ ಎಂಬ ಇಬ್ಬರು ಮಕ್ಕಳಾದರು. ಹಿರಣ್ಯಕಶಿಪುವು ಯಮಪುರಿಗೆ ತೆರಳಲು ಮಿತ್ರರೂ, ವಿಧೇಯರಾದ ಮಂತ್ರಿಗಳೂ ಪ್ರಹ್ಲಾದನನ್ನು ಕುರಿತು, "ನೀನು ಈಗ ತಂದೆ ಮತ್ತು ಅಜ್ಜನ ಈ ರಾಜ್ಯವನ್ನು ಪಡೆದು ಆಳು. ದೇವತೆಗಳನ್ನು ಯುದ್ಧದಲ್ಲಿ ಕೊಲ್ಲು" ಎಂದರು.

೨೧. ಪ್ರಹ್ಲಾದನು ಹೇಳುತ್ತಾನೆ:—ನಾನು ಯಾವ ವಿಧದಿಂದಲೂ ಈ ಭೂಲೋಕದಲ್ಲಿ ರಾಜ್ಯವನ್ನಾಳುವುದಿಲ್ಲ. ಆದುದರಿಂದ ಈಗ ನನ್ನ ಮಾತನ್ನು ಕೇಳಿರಿ.

ದೈತ್ಯರಾಜ್ಯಂ ನ ವಾಂಛಂತಿ ದೇವಾಃ ಶಕ್ರ ಪುರೋಗಮಾಃ ।
ತೇಷಾಂ ರಕ್ಷಾಕರೋ ನಿತ್ಯಂ ವಿಷ್ಣುಃ ಸ ಭಗವಾನ್ ಸ್ವಯಂ ॥ ೨೨ ॥
ಅಪ್ಯಹಂ ಸಂತ್ಯಜೇ ಪ್ರಾಣಾನ್ ಸರ್ವಸ್ವಂ ವಾ ನ ಸಂಶಯಃ ।
ಹರಿಣಾ ಸಹ ಸಂಗ್ರಾಮಂ ನಾಽಹಂ ಕರ್ತುಮಹೋ ಕ್ಷಮಃ ॥ ೨೩ ॥
ಯೋ ಮಯಾಽಭ್ಯರ್ಚಿತೋ ನಿತ್ಯಂ ಪ್ರಣತಶ್ಚ ಸುರೇಶ್ವರಃ ।
ನ ತೇನ ಸಹಿತೋ ಯುದ್ಧಂ ಕರಿಷ್ಯಾಮಿ ಕಥಂಚನ ॥ ೨೪ ॥

ಸೂತ ಉವಾಚ:—

ಪ್ರಹ್ಲಾದೇನ ಚ ಸಂತ್ಯಕ್ತೇ ರಾಜ್ಯೇ ಪಿತೃಸಮುದ್ಭವೇ ।
ಅಂಧಕಃ ಸ್ಥಾಪಿತಸ್ತತ್ರ ಸಂಮಂತ್ರ್ಯ ಸಚಿವೈರ್ಮಿಥಃ ॥ ೨೫ ॥
ಹಿರಣ್ಯಕಶಿಪೋಃ ಪುತ್ರೋ ದೇವದಾನವದರ್ಪಹಾ ।
ಸೋಽಪಿ ರಾಜ್ಯಮಮಾತ್ಯೇಭ್ಯೋ ನಿಧಾಯ ತದನಂತರಂ ॥ ೨೬ ॥
ತಪಶ್ಚಕ್ರೇ ಚಿರಂ ಕಾಲಂ ಧ್ಯಾಯಮಾನಃ ಪಿತಾಮಹಂ ।
ತ್ಯಕ್ತ್ವಾ ಕಾಮಂ ತಥಾ ಕ್ರೋಧಂ ದಂಭಂ ಮತ್ಸರಮೇವ ಚ ॥ ೨೭ ॥
ಜಿತೇಂದ್ರಿಯಃ ಸುಶಾಂತಾತ್ಮಾ ಸಮಃ ಸರ್ವೇಷು ಜಂತುಷು ।
ವೃಕ್ಷಮೂಲಾಶ್ರಯಃ ಶಾಂತಃ ಸಂತುಷ್ಟೇನಾಂತರಾತ್ಮನಾ ॥ ೨೮ ॥

---

೨೨. ಇಂದ್ರಾದಿ ದೇವತೆಗಳು ದೈತ್ಯರಾಜ್ಯವನ್ನು ಅಪೇಕ್ಷಿಸುವುದಿಲ್ಲ. ಪೂಜ್ಯನಾದ ಮಹಾವಿಷ್ಣುವು ನಿತ್ಯವೂ ಆ ದೇವತೆಗಳನ್ನು ಕಾಪಾಡುವನು.

೨೩. ನಾನು ಪ್ರಾಣವನ್ನಾಗಲಿ, ಸಮಸ್ತ ವಸ್ತುಗಳನ್ನಾಗಲಿ ತ್ಯಜಿಸುವೆನು. ವಿಷ್ಣುವಿನೊಡನೆ ಯುದ್ಧಮಾಡಲು ನಾನು ಶಕ್ತನಲ್ಲ.

೨೪. ಯಾವನನ್ನು ನಾನು ನಿತ್ಯವೂ ಪೂಜಿಸಿ ನಮಸ್ಕರಿಸುವೆನೋ ಅವನೊಡನೆ ನಾನು ಯುದ್ಧವನ್ನು ಮಾಡುವುದಿಲ್ಲ.

೨೫. ಸೂತನು ಹೇಳುತ್ತಾನೆ:—ಪ್ರಹ್ಲಾದನು ತಂದೆಯ ರಾಜ್ಯವನ್ನು ತ್ಯಜಿಸಲು ಮಂತ್ರಿಗಳು ಪರಸ್ಪರವಾಗಿ ಆಲೋಚಿಸಿ ಆ ರಾಜ್ಯದಲ್ಲಿ ಅಂಧಕನನ್ನು ಸ್ಥಾಪಿಸಿದರು.

೨೬–೨೮. ದೇವದಾನವರ ಅಹಂಕಾರವನ್ನು ನೀಗಿಸುವ ಹಿರಣ್ಯಕಶಿಪುವಿನ ಮಗನಾದ ಆ ಅಂಧಕನೂ ರಾಜ್ಯವನ್ನು ಮಂತ್ರಿಗಳಿಗೊಪ್ಪಿಸಿ ಕಾಮ, ಕ್ರೋಧ, ದಂಭ, ಮತ್ಸರಗಳನ್ನು ತ್ಯಜಿಸಿ ಜಿತೇಂದ್ರಿಯನೂ, ಶಾಂತಮನಸ್ಕನೂ, ಸಕಲ ಪ್ರಾಣಿಗಳಲ್ಲಿ ಸಮನೂ, ಮರದ ಬುಡವನ್ನು ಆಶ್ರಯಿಸಿದವನೂ, ಸಂತೋಷಗೊಂಡ ಮನಸ್ಸುಳ್ಳವನೂ ಆಗಿ ಬ್ರಹ್ಮನನ್ನು ಧ್ಯಾನಿಸುತ್ತ ಬಹುಕಾಲ ತಪಸ್ಸನ್ನು ಮಾಡಿದನು.

ಯಾವದ್ವರ್ಷ ಸಹಸ್ರಾಂತಂ ಫಲಾಹಾರೋ ಬಭೂವ ಹ ।
ಶೀರ್ಣಪರ್ಣಾಽಶನಾಹಾರೋ ಯಾವದ್ವರ್ಷಸಹಸ್ರಕಂ ॥ ೨೯ ॥
ಧ್ಯಾಯಮಾನೋ ದಿವಾನಕ್ತಂ ದೇವದೇವಂ ಪಿತಾಮಹಂ ।
ವಾಯುಭಕ್ಷಸ್ತತೋ ಜಜ್ಞೇ ತಾವತ್ಕಾಲಂ ದ್ವಿಜೋತ್ತಮಾಃ ॥ ೩೦ ॥
ತತೋ ವರ್ಷಸಹಸ್ರಾಂತೇ ಚತುರ್ಥೇ ಸಮುಪಸ್ಥಿತೇ ।
ತಮುವಾಚ ಸ್ವಯಂ ಬ್ರಹ್ಮಾ ಸ್ವಯಮಭ್ಯೇತ್ಯ ಹರ್ಷಿತಃ ॥ ೩೧ ॥

ಬ್ರಹ್ಮೋವಾಚ:—

ಪರಿತುಷ್ಟೋಽಸ್ಮಿ ತೇ ವತ್ಸ ವರಂ ವರಯ ಸುವ್ರತ ।
ತುಷ್ಟೋಽಹಂ ತೇ ಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩೨ ॥

ಅಂಧಕ ಉವಾಚ:—

ಯದಿ ಯಚ್ಛಸಿ ಮೇ ಬ್ರಹ್ಮನ್ ವರಂ ಮನಸಿ ವಾಂಛಿತಂ ।
ಜರಾಮರಣನಾಶಾಯ ದೀಯತಾಂ ಸುರಸತ್ತಮ ॥ ೩೩ ॥

ಶ್ರೀ ಬ್ರಹ್ಮೋವಾಚ:—

ನ ಕಶ್ಚಿಚ್ಚ ಜರಾಹೀನೋ ವಿದ್ಯತೇಽತ್ರ ಧರಾತಲೇ ।
ಮರಣೇನ ವಿನಾ ನೈವ ಯಸ್ಯ ಜನ್ಮ ಭವೇತ್ಕ್ಷಿತೌ ॥ ೩೪ ॥
ತಥಾಽಪಿ ತವ ದಾಸ್ಯಾಮಿ ಬಹುಧರ್ಮರತಸ್ಯ ಚ ।
ತಸ್ಮಾತ್ಕುರು ಮಹಾಭಾಗ ರಾಜ್ಯಂ ಗತ್ವಾ ನಿಜಂ ಗೃಹಂ ॥ ೩೫ ॥

---

೨೯–೩೦. ಒಂದು ಸಾವಿರ ವರ್ಷಕಾಲ ಫಲವನ್ನು ಭಕ್ಷಿಸುವವನೂ, ಇನ್ನೊಂದು ಸಾವಿರ ವರ್ಷಕಾಲ ಒಣಗಿದ ಎಲೆಗಳ ಆಹಾರವುಳ್ಳವನೂ, ಮತ್ತೊಂದು ಸಾವಿರ ವರ್ಷಕಾಲ ವಾಯುಭಕ್ಷಕನೂ ಆಗಿ ಪಿತಾಮಹನನ್ನು ಹಗಲು ರಾತ್ರಿ ಧ್ಯಾನಮಾಡಿದನು.

೩೧. ಅನಂತರ ನಾಲ್ಕನೆಯ ಸಾವಿರ ವರ್ಷವು ಸಮಾಪಿಸಲು ಬ್ರಹ್ಮನು ತಾನೇ ಅವನ ಬಳಿಗೈದಿ ಸಂತೋಷದಿಂದ ಹೀಗೆಂದನು.

೩೨. ಬ್ರಹ್ಮನು ಹೇಳುತ್ತಾನೆ:—ಮಗು! ನಾನು ನಿನ್ನಲ್ಲಿ ಸಂತುಷ್ಟನಾಗಿದ್ದೇನೆ. ನಾನು ನಿನಗೆ ದುರ್ಲಭವಾದುದನ್ನೂ ಕೊಡುವೆನು.

೩೩. ಅಂಧಕನು ಹೇಳುತ್ತಾನೆ:—ಎಲೈ ಬ್ರಹ್ಮನೆ! ನನಗೆ ಇಷ್ಟವಾದ ವರವನ್ನು ಕೊಡುವುದಾದರೆ ನಾನು ಮುಪ್ಪನ್ನೂ, ಮರಣವನ್ನೂ ಹೊಂದದಂತೆ ವರವನ್ನು ನೀಡು.

೩೪–೩೫. ಶ್ರೀ ಬ್ರಹ್ಮನು ಹೇಳುತ್ತಾನೆ:—ಈ ಭೂಮಿಯಲ್ಲಿ ಜನಿಸಿದವರಲ್ಲಿ ಯಾರೂ ಜರಾಮರಣಗಳಿಲ್ಲದವರಿಲ್ಲ. ಆದರೂ ಬಹು ಧಾರ್ಮಿಕನಾದ ನಿನಗೆ ಅದನ್ನು ಕೊಡುವೆನು. ಆದರಿಂದ ನೀನು ನಿನ್ನ ಮನೆಗೆ ಹೋಗಿ ರಾಜ್ಯವನ್ನಾಳು.

ಭವೇದ್ಬಹುಫಲಂ ರಾಜ್ಯಂ ಸ್ಮಶಾನಂ ಭವನಂ ಯಥಾ ।
ಬಹುಕಂಟಕಸಂಕೀರ್ಣಂ ಕ್ರೂರಕರ್ಮಭಿರಾವೃತಂ ॥ ೩೬ ॥

ಸೂತ ಉವಾಚ:—

ಏವಮುಕ್ತ್ವಾ ಚತುರ್ವಕ್ತ್ರಸ್ತತಶ್ಚಾದರ್ಶನಂ ಗತಃ ।
ಕಸ್ಯಚಿತ್ತ್ವಥ ಕಾಲಸ್ಯ ಪ್ರೇರಿತಃ ಕಾಲಧರ್ಮಣಾ ।
ಪ್ರೋವಾಚ ಸಚಿವಾನ್ ಸೋಽಥ ಪಿತುರ್ವೈರಮನುಸ್ಮರನ್ ॥ ೩೭ ॥

ಅಂಧಕ ಉವಾಚ:—

ಪಿತಾಽಸ್ಮಾಕಂ ಹತೋ ದೇವೈಃ ಪಿತೃವ್ಯಶ್ಚ ಮಹಾಬಲಃ ।
ಕಪಟೇನ ನ ಶೌರ್ಯೇಣ ತಸ್ಮಾತ್ತಾನ್ ಸೂದಯಾಮ್ಯಹಂ ॥ ೩೮ ॥
ಕೋಽರ್ಥಃ ಪುತ್ರೇಣ ಜಾತೇನ ಯೋ ನ ಕೃತ್ಯೈಃ ಸುಶಂಸಿತೈಃ ।
ಪ್ರಾಕಟ್ಯಂ ಯಾತಿ ಸರ್ವತ್ರ ವಂಶಸ್ಯಾಗ್ರೇ ಧ್ವಜೋ ಯಥಾ ॥ ೩೯ ॥

ಮಂತ್ರಿಣ ಊಚುಃ:—

ಯುಕ್ತಮೇತನ್ಮಹಾಭಾಗ ಯತ್ತ್ವಯಾ ವ್ಯಾಹೃತಂ ವಚಃ ।
ವಧ್ಯಾಃ ಸ್ಯುರ್ವಿಬುಧಾಃ ಸರ್ವೇ ಯೇಽಸ್ಮಾಕಂ ಪರಿಪಂಥಿನಃ ॥ ೪೦ ॥
ಅಸ್ಮಾಕಂ ಖಲ್ವಿಮೇ ಲೋಕಾಃ ಕೇ ದೇವಾಃ ಕೇ ದ್ವಿಜಾತಯಃ ।
ಯಜ್ಞಭಾಗಾನ್ ಹರಿಷ್ಯಾಮೋ ಹತ್ವಾ ಶಕ್ರಮುಖಾನ್ ಸುರಾನ್ ॥ ೪೧ ॥

---

೩೬. ಅನೇಕ ಫಲವುಳ್ಳ ರಾಜ್ಯವೂ, ಮನೆಯೂ ಸ್ಮಶಾನದಂತೆ ಅನೇಕ ಮುಳ್ಳುಗಳಿಂದಲೂ (ತೊಂದರೆಗಳಿಂದಲೂ) ಕ್ರೂರಕರ್ಮಿಗಳಿಂದಲೂ ವ್ಯಾಪ್ತವಾಗುವುದು.

೩೭. ಸೂತನು ಹೇಳುತ್ತಾನೆ:—ಬ್ರಹ್ಮನು ಹೀಗೆ ಹೇಳಿ ಅದೃಶ್ಯನಾದನು. ಅನಂತರ ಆ ಅಂಧಕನು ಒಂದಾನೊಂದು ಕಾಲದಲ್ಲಿ ಮೃತ್ಯುಪ್ರೇರಣೆಯಿಂದ ತಂದೆಯ ದ್ವೇಷವನ್ನು ಸ್ಮರಿಸುತ್ತ ಮಂತ್ರಿಗಳನ್ನು ಕುರಿತು ಹೀಗೆಂದನು.

೩೮. ಅಂಧಕನು ಹೇಳುತ್ತಾನೆ:—ದೇವತೆಗಳು ನನ್ನ ತಂದೆಯನ್ನೂ, ದೊಡ್ಡ ತಂದೆಯನ್ನೂ ಕಪಟದಿಂದ ಕೊಂದಿರುವರು, ಶೌರ್ಯದಿಂದಲ್ಲ. ಆದುದರಿಂದ ನಾನು ಅವರನ್ನು ಕೊಲ್ಲುವೆನು.

೩೯. ಶ್ಲಾಘ್ಯವಾದ ತನ್ನ ಕಾರ್ಯಗಳಿಂದ ಎಲ್ಲೆಡೆಯಲ್ಲಿಯೂ ಕುಲದ ಮುಂದೆ ಧ್ವಜದಂತೆ ಪ್ರಸಿದ್ಧನಾಗದ ಮಗನು ಹುಟ್ಟಿದುದರಿಂದೇನು ಪ್ರಯೋಜನ?

೪೦—೪೧. ಮಂತ್ರಿಗಳು ಹೇಳುತ್ತಾರೆ:—ಮಹಾತ್ಮನೆ! ನೀನು ಹೇಳಿರುವ ಮಾತು ಉಚಿತವಾದುದು. ನಮಗೆ ಶತ್ರುಗಳಾದ ದೇವತೆಗಳನ್ನು ಕೊಲ್ಲಬೇಕು. ಈ ಲೋಕಗಳೆಲ್ಲ ನಮ್ಮವು. ದೇವತೆಗಳಾರು? ಬ್ರಾಹ್ಮಣರಾರು? ನಾವು ಇಂದ್ರನೇ ಮೊದಲಾದ ದೇವತೆಗಳನ್ನು ಕೊಂದು ಯಜ್ಞಭಾಗಗಳನ್ನು ಅಪಹರಿಸೋಣ.

ಏವಂ ತೇ ಸಮಯಂ ಕೃತ್ವಾ ಸೈನ್ಯೇನ ಮಹತಾನ್ವಿತಾಃ ।
ಪ್ರಜಗ್ಮುಸ್ತ್ವರಿತಾಸ್ತತ್ರ ಯತ್ರ ಶಕ್ರೋ ವ್ಯವಸ್ಥಿತಃ ॥ ೪೨ ॥
ಶಕ್ರೋಽಪಿ ದಾನವಾನೀಕಂ ದೃಷ್ಟ್ವಾ ತಾನ್ ಸಹಸಾ ಗತಾನ್ ।
ಆರುಹ್ಯೈರಾವಣಂ ನಾಗಂ ಯುದ್ಧಾರ್ಥಂ ನಿರ್ಯಯೌ ತದಾ ॥ ೪೩ ॥
ಸಹ ದೇವಗಣೈಃ ಸರ್ವೈರ್ವಸುರುದ್ರಾರ್ಕಪೂರ್ವಕೈಃ ।
ಏತಸ್ಮಿನ್ನಂತರೇ ಶಕ್ರೋ ವಜ್ರಂ ರೌದ್ರತಮಂ ಚ ಯತ್ ॥ ೪೪ ॥
ಸಮುದ್ದಿಶ್ಯಾಂಧಕಂ ತಸ್ಮೈ ಮುಮೋಚ ಪರವೀರಹಾ ।
ಸ ಹತಸ್ತೇನ ವಜ್ರೇಣ ವಿಹಸ್ಯ ದನುಜೋತ್ತಮಃ ॥ ೪೫ ॥
ಶಕ್ರಂ ಪ್ರೋವಾಚ ಸಂಹೃಷ್ಟಸ್ತಾರನಾದೇನ ಸಂಯುಗೇ ।
ದೃಷ್ಟಂ ಬಾಹುಬಲಂ ಶಕ್ರ ತವಾಽದ್ಯ ಸುಚಿರಾನ್ಮಯಾ ॥ ೪೬ ॥
ಅಧುನಾ ಪಶ್ಯ ಚಾಽಸ್ಮಾಕಂ ತ್ವಮೇವ ಬಲಸೂದನ ॥ ೪೭ ॥

ಸೂತ ಉವಾಚ :—

ಏವಮುಕ್ತ್ವಾಽಥ ಚಾವಿಧ್ಯ ಗದಾಂ ಗುರ್ವೀಂ ಮುಮೋಚ ಹ ।
ಶತಘಂಟಾಮಹಾರಾವಾಂ ನಿರ್ಮಿತಾಂ ವಿಶ್ವಕರ್ಮಣಾ ॥ ೪೮ ॥
ಸರ್ವಾಯಸಮಯೀಂ ಗುರ್ವೀಂ ಯಮಜಿಹ್ವಾಮಿವಾಽಪರಾಂ ।
ಶತಹಸ್ತಾಂ ಪ್ರಮಾಣೇನ ಪ್ರಾಣಿನಾಂ ಭಯವರ್ಧಿನೀಂ ॥ ೪೯ ॥

---

೪೨. ಹೀಗೆ ಅವರು ಸಿದ್ಧಾಂತ ಮಾಡಿ ದೊಡ್ಡ ಸೈನ್ಯನೊಡನೆ ಇಂದ್ರನಿರುವ ಅಮರಾವತಿಗೆ ಹೋದರು.

೪೩–೪೭. ಆಗ ಇಂದ್ರನು ಆಕಸ್ಮಿಕವಾಗಿ ಬಂದ ದಾನವ ಸೈನ್ಯವನ್ನು ಈಕ್ಷಿಸಿ ಐರಾವತವನ್ನೇರಿ ವಸು, ರುದ್ರ, ಆದಿತ್ಯರೇ ಮೊದಲಾದ ದೇವತೆಗಳೊಡನೆ ಯುದ್ಧಕ್ಕಾಗಿ ಹೊರಟನು. ಈ ಸಮಯದಲ್ಲಿ ಆ ಇಂದ್ರನು ಅಂಧಕನನ್ನುದ್ದೇಶಿಸಿ ಭಯಂಕರವಾದ ವಜ್ರಾಯುಧವನ್ನು ಪ್ರಯೋಗಿಸಿದನು. ಅದರಿಂದ ತಾಡಿತನಾದ ಅಂಧಕನು ನಕ್ಕು ಇಂದ್ರನನ್ನು ಕುರಿತು ಗಟ್ಟಿಯಾಗಿ ಇಂದ್ರ!, ಯುದ್ಧದಲ್ಲಿ ನಿನ್ನ ಭುಜಬಲವನ್ನು ಬಹುಕಾಲದ ತರುವಾಯ ನೋಡಿದೆನು. ಈಗ ನಮ್ಮ ಶಕ್ತಿಯನ್ನು ನೀನು ನೋಡು.

೪೮–೪೯. ಸೂತನು ಹೇಳುತ್ತಾನೆ:—ಅಂಧಕನು ಹೀಗೆ ಹೇಳಿ ನೂರು ಘಂಟೆಗಳನ್ನು ಕಟ್ಟಿರುವುದೂ, ಅದರಿಂದ ಅತಿಶಯವಾದ ಧ್ವನಿಯುಳ್ಳುದೂ, ವಿಶ್ವಕರ್ಮನು ನಿರ್ಮಿಸಿರುವುದೂ, ಕಬ್ಬಿಣದಿಂದ ಮಾಡಿರುವುದೂ, ಮತ್ತೊಂದು ಯಮನ ನಾಲಿಗೆಯೋ ಎಂಬಂತಿರುವುದೂ, ನೂರು ಗೇಣು ಉದ್ದವಾಗಿರುವುದೂ, ಪ್ರಾಣಿಗಳಿಗೆ ಭಯವನ್ನುಂಟುಮಾಡುವುದೂ ಆದ ಗದೆಯನ್ನು ತಿರುಗಿಸಿ ಪ್ರಯೋಗಿಸಿದನು.

ತಯಾ ವಿನಿಹತಃ ಶಕ್ರೋ ಮೂರ್ಛಾ ವ್ಯಾಕುಲಿತೇಂದ್ರಿಯಃ ।
ಧ್ವಜಯಷ್ಟಿಂ ಸಮಾಶ್ರಿತ್ಯ ನಿವಿಷ್ಟೋ ಗಜಮೂರ್ಧನಿ ॥ ೫೦ ॥
ಅಥ ಸಂಮೂರ್ಛಿತಂ ದೃಷ್ಟ್ವಾ ಶಕ್ರಂ ಸ್ಕಂದಃ ಪ್ರಕೋಪಿತಃ ।
ಮುಮೋಚಾಥ ನಿಜಾಂ ಶಕ್ತಿಮಮೋಘಾಂ ವಜ್ರಸನ್ನಿಭಾಂ ॥ ೫೧ ॥
ತಾಮಾಯಾಂತೀಂ ಸಮಾಲೋಕ್ಯ ದಾನವೋ ನಿಶಿತೈಃ ಶರೈಃ ।
ಪ್ರತಿಲೋಮಾಂ ತತಶ್ಚಕ್ರೇ ಲೀಲಯೈವ ಮಹಾಬಲಃ ॥ ೫೨ ॥
ತತಃ ಸ್ಕಂದೋಽಪಿ ಸಂಗೃಹ್ಯ ಚಾಪಂ ತಂ ಪ್ರತಿ ಸಾಯಕಾನ್ ।
ಮುಮೋಚಾಶೀವಿಷಾಕಾರಾಲ್ಲಘ್ವಸ್ತ್ರಂ ತಸ್ಯ ದರ್ಶಯನ್ ॥ ೫೩ ॥
ಏತಸ್ಮಿನ್ನಂತರೇ ದೇವಾಃ ಸರ್ವೇ ಶಸ್ತ್ರಪ್ರವೃಷ್ಟಿಭಿಃ ।
ಸಮಂತಾಚ್ಛಾದಯಾಮಾಸುರ್ದಾನವಾನಾಮನೀಕಿನೀಂ ॥ ೫೪ ॥
ತತಸ್ತು ದಾನವಾಃ ಸರ್ವೇ ದೇವತಾನಾಮನೀಕಿನೀಂ ।
ಪ್ರಹಾರೈಃ ಪೀಡಯಾಮಾಸುರ್ದುದ್ರುವುಸ್ತೇ ದಿವೌಕಸಃ ॥ ೫೫ ॥
ತತೋ ಭಗ್ನಾನ್ ಸುರಾನ್ ದೃಷ್ಟ್ವಾ ಸಗಣೋ ವೃಷವಾಹನಃ ।
ದರ್ಶಯಾಮಾಸ ಚಾತ್ಮಾನಂ ದೇವಾನಾಶ್ವಾಸಯನ್ನಿವ ॥ ೫೬ ॥

---

೫೦. ಇಂದ್ರನು ಆ ಗದೆಯ ಏಟಿನಿಂದ ಮೂರ್ಛೆಗೊಂಡು ಧ್ವಜಸ್ತಂಭವನ್ನು ಹಿಡಿದು ಆನೆಯ ತಲೆಯಮೇಲೆ ನಿಂತನು.

೫೧. ತರುವಾಯ ಮೂರ್ಛೆಗೊಂಡ ಇಂದ್ರನನ್ನು ಕಂಡು ಸ್ಕಂದನು ಕುಪಿತನಾಗಿ ವಜ್ರದಂತಿರುವ ಅಮೋಘವಾದ ತನ್ನ ಶಕ್ತ್ಯಾಯುಧವನ್ನು ಪ್ರಯೋಗಿಸಿದನು.

೫೨. ಮಹಾ ಬಲಶಾಲಿಯಾದ ಅಂಧಕನು ಬರುತ್ತಿರುವ ಆ ಶಕ್ತಿಯನ್ನು ನೋಡಿ ಹರಿತವಾದ ಶಸ್ತ್ರಗಳಿಂದ ಅದನ್ನು ಹಿಂದಿರುಗಿಸಿದನು.

೫೩. ಅನಂತರ ಸ್ಕಂದನೂ ಶೀಘ್ರವಾಗಿ ಬಿಲ್ಲನ್ನು ಹಿಡಿದು ಅಸ್ತ್ರಗಳನ್ನು ತೋರಿಸುತ್ತ ಹಾವಿನಂತಿರುವ ಬಾಣಗಳನ್ನು ಅವನಿಗೆ ಪ್ರಯೋಗಿಸಿದನು.

೫೪. ಈ ಸಮಯದಲ್ಲಿ ಸಮಸ್ತ ದೇವತೆಗಳೂ ದಾನವರ ಸೈನ್ಯವನ್ನು ಆಯುಧಗಳ ಮಳೆಯಿಂದ ಸುತ್ತಮುತ್ತಲೂ ಮುಚ್ಚಿದರು.

೫೫. ತರುವಾಯ ಎಲ್ಲ ದಾನವರೂ ದೇವತೆಗಳ ಸೈನ್ಯವನ್ನು ಪ್ರಹಾರಗಳಿಂದ ಪೀಡಿಸಿದರು. ಆ ದೇವತೆಗಳು ಓಡಿಹೋದರು.

೫೬. ಆಗ ಗಣಗಳಿಂದ ಸಹಿತನಾದ ಮಹೇಶ್ವರನು ಪರಾಭವದಿಂದ ಓಡಿದ ದಿವಿಜರನ್ನು ಕಂಡು ದೇವತೆಗಳನ್ನು ಸಮಾಧಾನಗೊಳಿಸುವವನಂತೆ ಪ್ರತ್ಯಕ್ಷನಾದನು.

ಮಾ ಭೈಷ್ಟ ದೇವತಾಃ ಸರ್ವಾಃ ಪಶ್ಯಧ್ವಂ ಮದ್ವಿಚೇಷ್ಟಿತಂ ।
ಇತ್ಯುಕ್ತ್ವಾ ಭಗವಾಂಛಂಭುರ್ಮಂತ್ರೈರಾಥರ್ವಣೈಸ್ತದಾ ॥ ೫೭ ॥
ಆಹ್ವಯಾಮಾಸ ವಿಶ್ವೇಶಾಂ ಪರಾಂ ಶಕ್ತಿಮನುತ್ತಮಾಂ ।
ಆಹೂತಾ ಪರಮಾ ಶಕ್ತಿರ್ಜಗಾಮ ಹರ ಸನ್ನಿಧಿಂ ॥ ೫೮ ॥
ದೃಷ್ಟ್ವಾ ತಾಮಗ್ರತಃ ಪ್ರಾಪ್ತಾಂ ಸರ್ವೈರ್ದೇವೈಃ ಸಮನ್ವಿತಃ ।
ಅಸ್ತಾವೀತ್ಪ್ರಣತೋ ಭೂತ್ವಾ ಸ್ತೋತ್ರೇಣಾನೇನ ಭಕ್ತಿತಃ ॥ ೫೯ ॥

ಶ್ರೀಭಗವಾನುವಾಚ :—

ನಮಸ್ತೇ ದೇವದೇವೇಶಿ ನಮಸ್ತೇ ಭಕ್ತವಲ್ಲಭೇ ।
ಸರ್ವಗೇ ಸರ್ವದೇ ದೇವಿ ನಮಸ್ತೇ ವಿಶ್ವಧಾರಿಣಿ ॥ ೬೦ ॥
ನಮಸ್ತೇ ಶಕ್ತಿರೂಪೇಣ ಸೃಷ್ಟಿಪ್ರಲಯಕಾರಿಣಿ ।
ನಮಸ್ತೇ ಪ್ರಭಯಾ ಯುಕ್ತೇ ವಿದ್ಯುಜ್ಜ್ವಲಿತಕುಂಡಲೇ ॥ ೬೧ ॥
ತ್ವಂ ಸ್ವಾಹಾ ತ್ವಂ ಸ್ವಧಾ ದೇವಿ ತ್ವಂ ಸೃಷ್ಟಿಸ್ತ್ವಂ ಶುಚಿರ್ಧೃತಿಃ ।
ಅರುಂಧತೀ ತಥೇಂದ್ರಾಣೀ ತ್ವಂ ಲಕ್ಷ್ಮೀ ಸ್ತ್ವಂ ಚ ಪಾರ್ವತೀ ॥ ೬೨ ॥
ಯತ್ಕಿಂಚಿತ್ ಸ್ತ್ರೀ ಸ್ವರೂಪಂ ಚ ಸಮಸ್ತಂ ಭುವನತ್ರಯೇ ।
ತತ್ಸರ್ವಂ ತ್ವತ್ಸ್ವರೂಪಂ ಸ್ಯಾದಿತಿ ಶಾಸ್ತ್ರೇಷು ನಿಶ್ಚಯಃ ॥ ೬೩ ॥

---

೫೭–೫೮. ತರುವಾಯ ಅವನು, "ಎಲೈ ದೇವತೆಗಳೆ! ಹೆದರಬೇಡಿರಿ. ನನ್ನ ಕಾರ್ಯವನ್ನು ನೋಡಿರಿ" ಎಂದು ಆಥರ್ವಣ ಮಂತ್ರಗಳಿಂದ ಉತ್ತಮಳಾದ ಪರಾಶಕ್ತಿಯನ್ನು ಕರೆದನು. ಮಹೇಶ್ವರನು ಕರೆಯಲು ಆ ಶಕ್ತಿಯು ಅವನ ಬಳಿಗೆ ಬಂದಳು.

೫೯. ಶಂಕರನು ಮುಂದೆ ಬಂದು ನಿಂತಿರುವ ಅವಳನ್ನು ನೋಡಿ ಸಕಲ ದೇವತೆಗಳೊಡನೆ ನಮಸ್ಕರಿಸಿ ಭಕ್ತಿಯಿಂದ ಈ ಸ್ತೋತ್ರದಿಂದ ಸ್ತುತಿಸಿದನು.

೬೦. ಶ್ರೀ ಭಗವಂತನು ಹೇಳುತ್ತಾನೆ:—ದೇವದೇವೇಶ್ವರಿಯೂ, ಭಕ್ತಪ್ರಿಯಳೂ, ಸರ್ವಾಂತರ್ಯಾಮಿಯೂ, ಸರ್ವದಾತ್ರಿಯೂ, ವಿಶ್ವಧಾರಕಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೬೧. ಶಕ್ತಿ ರೂಪದಿಂದ ಸೃಷ್ಟಿ ನಾಶಗಳನ್ನು ಮಾಡುವವಳೂ, ಪ್ರಭೆಯಿಂದ ಸಹಿತಳೂ, ಮಿಂಚಿನಂತೆ ಪ್ರಕಾಶಮಾನವಾದ ಕುಂಡಲವುಳ್ಳವಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೬೨. ದೇವಿಯೆ! ಸ್ವಾಹೆಯೂ, ಸ್ವಧೆಯೂ, ಸೃಷ್ಟಿಯೂ, ಶುಚಿಯೂ, ಧೃತಿಯೂ, ಅರುಂಧತಿಯೂ, ಶಚಿಯೂ, ಲಕ್ಷ್ಮಿಯೂ, ಪಾರ್ವತಿಯೂ ನೀನೇ ಆಗಿರುವೆ.

೬೩. ಈ ಮೂರು ಲೋಕಗಳಲ್ಲಿರುವ ಸಮಸ್ತ ಸ್ತ್ರೀಸ್ವರೂಪವೂ ನಿನ್ನ ರೂಪವಾಗಿರುವುದೆಂದು ಶಾಸ್ತ್ರಗಳಲ್ಲಿ ನಿಶ್ಚಿತವಾಗಿರುವುದು.

ಶ್ರೀ ದೇವ್ಯುವಾಚ :—
ಕಿಮರ್ಥಂ ಚ ಸಮಾಹೂತಾ ತ್ವಯಾಽಹಂ ವೃಷವಾಹನ ।
ಮಂತ್ರೈರಾಥರ್ವಣೈ ರೌದ್ರೈಸ್ತತ್ಸರ್ವಂ ಮೇ ಪ್ರಕೀರ್ತಯ ॥ ೬೪ ॥
ಯೇನ ತೇ ಕೃತ್ಸ್ನಶಃ ಕೃತ್ಯಂ ಪ್ರಕರೋಮಿ ಯಥೋದಿತಂ ॥ ೬೫ ॥
ಶ್ರೀ ಭಗವಾನುವಾಚ :—
ಏತೇ ಶಕ್ರಾದಯೋ ದೇವಾಃ ಸರ್ವೇ ಸ್ವರ್ಗಾದ್ವಿವಾಸಿತಾಃ ।
ಅಂಧಕೇನ ಮಹಾಭಾಗೇ ದೈತ್ಯಾನಾಮಧಿಪೇನ ಚ ॥ ೬೬ ॥
ತಸ್ಮಾತ್ತಸ್ಯ ವಧಾರ್ಥಾಯ ಗಚ್ಛಮಾನಸ್ಯ ಮೇ ಶೃಣು ।
ಸಾಹಾಯ್ಯಂ ಕುರು ಮೇ ಚಾಽಽಶು ಸೂದಯಾಮಿ ರಣಾಜಿರೇ ॥ ೬೭ ॥
ಏತೇ ಮಾತೃಗಣಾಃ ಸರ್ವೇ ಮಯಾ ದತ್ತಾಸ್ತವಾಽಧುನಾ ।
ಕ್ಷುತ್ಕ್ಷಾಮಾಃ ಸೂದಯಿಷ್ಯಂತಿ ದಾನವಾನ್ ಯೇ ಪುರಃ ಸ್ಥಿತಾಃ ॥೬೮॥
ಯಸ್ಮಾತ್ಕೇಲೀಮಯಂ ರೂಪಂ ವಿಧಾಯ ತ್ವಂ ಸಹಸ್ರಧಾ ।
ಅನೇಕೈರ್ವಿಕೃತೈರೂಪೈಃ ಸಮಾಹೂತಾಽಗ್ನಿ ಮಧ್ಯತಃ ॥ ೬೯ ॥
ತಸ್ಮಾತ್ಕೇಲೀಶ್ವರೀ ನಾಮ ತ್ರೈಲೋಕ್ಯೇ ತ್ವಂ ಭವಿಷ್ಯಸಿ ।
ಅನೇನೈವ ತು ರೂಪೇಣ ಯಸ್ತ್ವಾಂ ಭಕ್ತ್ಯಾಽರ್ಚಯಿಷ್ಯತಿ ॥ ೭೦ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ತಸ್ಯಾಽಭೀಷ್ಟಂ ಭವಿಷ್ಯತಿ ।
ಯುದ್ಧಕಾಲೇಽಥ ಸಂಪ್ರಾಪ್ತೇ ಸ್ತೋತ್ರೇಣಾನೇನ ತೇ ಸ್ತುತಿಂ ॥ ೭೧ ॥

---

೬೪. ಶ್ರೀ ದೇವಿಯು ಹೇಳುತ್ತಾಳೆ:—ಶಂಕರ! ನೀನು ಭಯಂಕರವಾದ ಆಥರ್ವಣ ಮಂತ್ರಗಳಿಂದ ನನ್ನನ್ನು ಏತಕ್ಕೆ ಕರೆದಿರುವೆ? ಅದನ್ನೆಲ್ಲ ನನಗೆ ಹೇಳು.

೬೫. ಅದರಿಂದ ನೀನು ಹೇಳಿದಂತೆ ಎಲ್ಲ ಕೆಲಸವನ್ನೂ ಮಾಡುವೆನು.

೬೬. ಶ್ರೀ ಭಗವಂತನು ಹೇಳುತ್ತಾನೆ:—ಮಹಾತ್ಮಳೆ! ದೈತ್ಯರಾಜನಾದ ಅಂಧಕನು ಇಂದ್ರಾದಿ ದೇವತೆಗಳನ್ನು ಸ್ವರ್ಗದಿಂದ ಹೊರಡಿಸಿರುವನು.

೬೭. ಆದುದರಿಂದ ನನ್ನ ಮಾತನ್ನು ಕೇಳು, ಅವನನ್ನು ಕೊಲ್ಲಲು ಹೋಗುತ್ತಿರುವ ನನಗೆ ಸಹಾಯವನ್ನು ಮಾಡು. ಅದರಿಂದ ನಾನು ಯುದ್ಧಾಂಗಣದಲ್ಲಿ ಆ ದೈತ್ಯನನ್ನು ಶೀಘ್ರವಾಗಿ ಕೊಲ್ಲುವೆನು.

೬೮. ನಾನು ನಿನಗೀಗ ಈ ಮಾತೃಗಣಗಳನ್ನು ಕೊಡುವೆನು. ಹಸಿವುಗೊಂಡ ಇವರು ಮುಂದೆ ನಿಂತು ದಾನವರನ್ನು ವಧಿಸುವರು.

೬೯—೭೬. ಅನೇಕ ವಿಕಾರವಾದ ಕೇಲೀ ರೂಪಗಳನ್ನು ಧರಿಸಿದ ನೀನು ಅಗ್ನಿ ಮಧ್ಯದಿಂದ ಕರೆಯಲ್ಪಟ್ಟವಳಾದ ಕಾರಣ ಕೇಲೀಶ್ವರಿಯೆಂದು ಮೂರು ಲೋಕಗಳಲ್ಲಿ ವಿಖ್ಯಾತಳಾಗುವೆ. ಅಷ್ಟಮೀ ಚತುರ್ದಶೀ ದಿನಗಳಲ್ಲಿ

ಯಃ ಕರಿಷ್ಯತಿ ಭೂಪಾಲೋ ಜಯಸ್ತಸ್ಯ ಭವಿಷ್ಯತಿ ।
ಅಪಿ ಸ್ವಲ್ಪಸ್ಯ ಸೈನ್ಯಸ್ಯ ಸ್ವಲ್ಪಾಽಶ್ವಸ್ಯ ಚ ಸಂಗರೇ ॥ ೭೨ ॥
ಭವಿಷ್ಯತಿ ಜಯೋ ನೂನಂ ತ್ವತ್ಪ್ರಸಾದಾದಸಂಶಯಂ ।
ಏವಂ ಸಾ ದೇವದೇವೇನ ಪ್ರೋಕ್ತಾ ಕೇಲೀಶ್ವರೀ ತದಾ ॥ ೭೩ ॥
ಪ್ರಸ್ಥಿತಾ ಪುರತಸ್ತಸ್ಯ ಭವಸೈನ್ಯಸ್ಯ ಹರ್ಷಿತಾ ।
ಸರ್ವೈರ್ಮಾತೃಗಣೈಃ ಸಾರ್ಧಂ ರೌದ್ರಾರಾವೈಃ ಸುಭೀಷಣೈಃ ॥ ೭೪ ॥
ಯುದ್ಧೋತ್ಸಾಹಪರೈ ರೌದ್ರೈರ್ನಾನಾ ಶಸ್ತ್ರಪ್ರಹಾರಿಭಿಃ ।
ಅಥ ತೇ ದಾನವಾ ದೃಷ್ಟ್ವಾ ಸ್ತ್ರೀಸೈನ್ಯಂ ತತ್ಸಮಾಗತಂ ॥ ೭೫ ॥
ವಿಕೃತಂ ವಿಕೃತಾಕಾರಂ ವಿಕೃತಾಕಾರರಾವಣಂ ।
ಶಸ್ತ್ರೋದ್ಯತಕರಂ ಸರ್ವಯುದ್ಧವಾಂಛಾಪರಾಯಣಂ ॥ ೭೬ ॥
ಜಹಸುಃ ಸುಸ್ವರಂ ಕೇಚಿತ್ಕೇಚಿನ್ನಿರ್ಭರ್ತ್ಸಯಂತಿ ಚ ।
ಅನ್ಯೇ ಸ್ತ್ರೀತಿ ಪರಿಜ್ಞಾಯ ಪ್ರಹರಂತಿ ನ ದಾನವಾಃ ॥ ೭೭ ॥
ವಧ್ಯಮಾನಾಽಪಿ ಲಜ್ಜಂತಃ ಪೌರುಷೇ ಸ್ವೇ ವ್ಯವಸ್ಥಿತಾಃ ।
ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ಮುನಿಸತ್ತಮಃ ॥ ೭೮ ॥

---

ಈ ರೂಪವುಳ್ಳ ನಿನ್ನನ್ನು ಭಕ್ತಿಯಿಂದ ಪೂಜಿಸಿದ ಮಾನವನ ಅಭೀಷ್ಟವು ಸಿದ್ಧಿಸುವುದು. ಯುದ್ಧಕಾಲ ಪೊದಗಲು ಈ ಸ್ತೋತ್ರದಿಂದ ನಿನ್ನನ್ನು ಸ್ತುತಿಸುವ ರಾಜನು ಸ್ವಲ್ಪ ಸೈನ್ಯವುಳ್ಳವನೂ, ಸ್ವಲ್ಪ ಕುದುರೆಗಳುಳ್ಳವನೂ ಆಗಿದ್ದರೂ ನಿನ್ನ ಅನುಗ್ರಹದಿಂದ ಅವನಿಗೆ ನಿಶ್ಚಯವಾಗಿಯೂ ಯುದ್ಧದಲ್ಲಿ ಜಯವಾಗುವುದು. ಹೀಗೆ ಮಹೇಶ್ವರನು ಹೇಳಲು, ಆ ಕೇಲೀಶ್ವರಿಯು ಭಯಂಕರ ಧ್ವನಿಯುಳ್ಳವರೂ, ಯುದ್ಧದಲ್ಲಿ ಉತ್ಸಾಹಿಗಳೂ, ಅನೇಕ ವಿಧ ಶಸ್ತ್ರಗಳಿಂದ ಪ್ರಹರಿಸುವವರೂ ಆದ ಸಮಸ್ತ ಮಾತೃಗಣಗಳೊಡನೆ ಸಂತೋಷದಿಂದ ಮಹೇಶ್ವರನ ಸೈನ್ಯದ ಮುಂದೆ ಹೊರಟಳು. ಅನಂತರ ಆ ದಾನವರು ವಿಕಾರಾಕಾರವುಳ್ಳುದೂ, ವಿಕಾರವಾಗಿ ಕೂಗುವುದೂ, ಶಸ್ತ್ರಗಳನ್ನು ಹಿಡಿದಿರುವುದೂ, ಯುದ್ಧಮಾಡಲಿಚ್ಛೆಯುಳ್ಳುದೂ ಆಗಿ ಬಂದಿರುವ ಆ ಸ್ತ್ರೀಸೈನ್ಯವನ್ನು ಕಂಡರು.

೭೭–೭೮. ಅವರಲ್ಲಿ ಕೆಲದಾನವರು ಒಳ್ಳೆಯ ಧ್ವನಿಯಿಂದ ನಕ್ಕರು. ಇನ್ನು ಕೆಲವರು ಗದರಿಸಿದರು. ಮತ್ತೆ ಕೆಲವರು ಪೌರುಷದಿಂದ ಆ ಸ್ತ್ರೀಯರು ಹೊಡೆಯುತ್ತಿದ್ದರೂ ಸ್ತ್ರೀಯರೆಂಬ ನಾಚಿಕೆಯಿಂದ ಅವರಲ್ಲಿ ಆಯುಧವನ್ನು ಪ್ರಯೋಗಿಸಲಿಲ್ಲ. ಇಷ್ಟರಲ್ಲಿ ನಾರದ ಮುನಿವರ್ಯನು ಅಲ್ಲಿಗೆ ಬಂದನು.

ಅಂಧಕಾಯ ಸ ವೃತ್ತಾಂತಂ ಕಥಯಾಮಾಸ ಕೃತ್ಸ್ನಶಃ ।
ನೈತಾಃ ಸ್ತ್ರಿಯೋ ದನುಶ್ರೇಷ್ಠ ಯುದ್ಧಾರ್ಥಂ ಸಮುಪಸ್ಥಿತಾಃ ॥ ೭೯ ॥
ಏಷಾ ಕೃತ್ಯಾ ವಧಾರ್ಥಾಯ ತವ ರುದ್ರೇಣ ನಿರ್ಮಿತಾ ।
ಯೈಷಾ ಸಿಂಹಸಮಾರೂಢಾ ಚಕ್ರಾಂಕಿತಕರಾ ಸ್ಥಿತಾ ॥ ೮೦ ॥
ಏಷಾ ಕೇಲೀಶ್ವರೀ ನಾಮ ವಹ್ನಿಕುಂಡಾದ್ವಿನಿರ್ಗತಾ ।
ಏತಾಭಿಃ ಸಹ ರೌದ್ರಾಭಿಃ ಸ್ತ್ರೀಭಿರ್ಮಂತ್ರ ಬಲಾಶ್ರಯಾತ್ ॥ ೮೧ ॥
ಸ್ವರಕ್ತೇನ ಕೃತೇ ಹೋಮೇ ದೇವದೇವೇನ ಶಂಭುನಾ ।
ಸ ಏಷ ಭಗವಾನ್ ಕ್ರುದ್ಧಃ ಸ್ವಯಮಭ್ಯೇತಿ ತೇಽಂತಿಕಂ ॥ ೮೨ ॥
ಯುದ್ಧಾಯ ನಿಜಹರ್ಮ್ಯೇ ತಾನ್ ಸ್ಥಾಪಯಿತ್ವಾ ಸುರೋತ್ತಮಾನ್ ।
ಪ್ರತಿಜ್ಞಾಯ ವಧಂ ತುಭ್ಯಂ ಪುರತಃ ಪರಮೇಷ್ಠಿನಃ ॥ ೮೩ ॥
ಏತಜ್ಜ್ಞಾತ್ವಾ ಮಹಾಭಾಗ ಯದ್ಯುಕ್ತಂ ತತ್ಸಮಾಚರ ॥ ೮೪ ॥

ಅಂಧಕ ಉವಾಚ :—

ನಾಽಹಂ ಬಿಭೇಮಿ ರುದ್ರಸ್ಯ ತಥಾನ್ಯಸ್ಯಾಪಿ ಕಸ್ಯಚಿತ್ ।
ನ ಸ್ತ್ರೀಣಾಂ ಪ್ರಹರಿಷ್ಯಾಮಿ ಪಾಲಯನ್ ಪುರುಷವ್ರತಂ ॥ ೮೫ ॥

ಸೂತ ಉವಾಚ :—

ಏವಂ ಪ್ರವದತಸ್ತಸ್ಯ ದಾನವಸ್ಯ ಮಹಾತ್ಮನಃ ।
ಆಕ್ರಂದಃ ಸುಮಹಾಂಜಜ್ಞೇ ತಸ್ಮಿನ್ ದೇಶೇ ಸಮಂತತಃ ॥ ೮೬ ॥

---

೭೯. ಅವನು ಹೀಗೆ ಅಂಧಕನಿಗೆ ಎಲ್ಲ ವೃತ್ತಾಂತವನ್ನು ಹೇಳಿದನು. "ಈ ಹೆಂಗಸರು ಯುದ್ಧಕ್ಕಾಗಿ ಬರಲಿಲ್ಲ.

೮೦. ಕೈಯಲ್ಲಿ ಚಕ್ರವನ್ನು ಹಿಡಿದು ಸಿಂಹವನ್ನೇರಿ ಬರುತ್ತಿರುವ ಇವಳನ್ನು ಮಾತ್ರರುದ್ರನು ನಿನ್ನನ್ನು ವಧಿಸುವುದಕ್ಕಾಗಿ ನಿರ್ಮಿಸಿದ್ದಾನೆ.

೮೧–೮೩. ಮಹೇಶ್ವರನು ತನ್ನ ರಕ್ತದಿಂದ ಹೋಮವನ್ನು ಮಾಡಲು ಮಂತ್ರ ಬಲದಿಂದ ಕೇಲೀಶ್ವರೀ ಎಂಬ ಇವಳು ಈ ಭಯಂಕರ ಸ್ತ್ರೀಯರೊಡನೆ ಅಗ್ನಿಕುಂಡದಿಂದ ಮೇಲಕ್ಕೆದ್ದಳು. ಆ ಪೂಜ್ಯನಾದ ಮಹೇಶ್ವರನು ಬ್ರಹ್ಮನ ಮುಂದೆ ನಿನ್ನನ್ನು ವಧಿಸುವುದಾಗಿ ಪ್ರತಿಜ್ಞೆಮಾಡಿ ಆ ಸುರವರ್ಯರನ್ನು ತನ್ನ ಆಲಯದಲ್ಲಿರಿಸಿ ತಾನೇ ನಿನ್ನ ಬಳಿಗೆ ಬರುವನು.

೮೪. ಮಹಾತ್ಮನೆ! ನೀನು ಇದನ್ನರಿತು ಯುಕ್ತವಾದುದನ್ನಾಚರಿಸು."

೮೫. ಅಂಧಕನು ಹೇಳುತ್ತಾನೆ:—ನಾನು ರುದ್ರನಿಗಾಗಲಿ, ಬೇರೆ ಯಾರಿಗಾಗಲಿ ಹೆದರುವುದಿಲ್ಲ. ನಾನು ನನ್ನ ಪೌರುಷವನ್ನು ರಕ್ಷಿಸಲು ಸ್ತ್ರೀಯರನ್ನು ಪ್ರಹರಿಸುವುದಿಲ್ಲ.

೮೬. ಸೂತನು ಹೇಳುತ್ತಾನೆ:—ಮಹಾತ್ಮನಾದ ಆ ದಾನವನು ಹೀಗೆ ಹೇಳುತ್ತಿರಲು ಆ ಸಳದಲ್ಲಿ ಸುತ್ತಲೂ ದೊಡ್ಡ ಹಾಹಾಕಾರವುಂಟಾಯಿತು.

ಭಕ್ಷ್ಯಂತೇ ದಾನವಾಃ ಕೇಚಿದ್ವಧ್ಯಂತೇ ತ್ವಥ ಚಾಽಪರೇ ।
ಅರ್ಧಭಕ್ಷಿತಗಾತ್ರಾಶ್ಚ ಪ್ರಣಶ್ಯಂತಿ ತಥಾಪರೇ ॥ ೮೭ ॥
ಯುಧ್ಯಮಾನಾಸ್ತಥೈವಾಽನ್ಯೇ ಶಕ್ತಿಮಂತೋಽಪಿ ದಾನವಾಃ ।
ಭಕ್ಷ್ಯಂತೇ ಮಾತೃಭಿಸ್ತತ್ರ ಸಾಯುಧಾಶ್ಚ ಸವಾಹನಾಃ ॥ ೮೮ ॥
ತಚ್ಛ್ರುತ್ವಾ ಸ ಮಹಾಕ್ರಂದಮಂಧಕಃ ಕ್ರೋಧಮೂರ್ಛಿತಃ ।
ಆದಾಯ ಖಡ್ಗಮುತ್ತಸ್ಥೌ ಕಿಮಿದಂ ಕಿಮಿದಂ ಬ್ರುವನ್ ॥ ೮೯ ॥
ಅಥ ಪಶ್ಯತಿ ವಿಧ್ವಸ್ತಾನ್ ದಾನವಾನ್ ಬಲದರ್ಪಿತಾನ್ ।
ಭಕ್ಷ್ಯಮಾಣಾಂಸ್ತಥೈವಾಽನ್ಯಾನ್ ಪಲಾಯನಪರಾಯಣಾನ್ ॥ ೯೦ ॥
ಅನ್ಯೇಷಾಂ ನಿಹತಾನಾಂ ಚ ರುದಂತ್ಯೋ ನಿಕಟಸ್ಥಿತಾಃ ।
ಸ ಪಶ್ಯತಿ ಪ್ರಿಯಾ ಭಾರ್ಯಾಃ ಪ್ರಲಪಂತ್ಯೋಽತಿದುಃಖಿತಾಃ ॥ ೯೧ ॥
ಅಥ ತತ್ಕದನಂ ದೃಷ್ಟ್ವಾ ಅಂಧಕಃ ಕ್ರೋಧಮೂರ್ಛಿತಃ ।
ಭರ್ತ್ಸಯಾಮಾಸ ತಾಃ ಸರ್ವಾ ಯೋಗಿನೀಃ ಸಮರೋದ್ಯತಾಃ ॥ ೯೨ ॥
ನ ಚ ತಾಸ್ತಸ್ಯ ದೈತ್ಯಸ್ಯ ಭಯಂ ಚಕ್ರುಃ ಕಥಂಚನ ।
ಕೇವಲಂ ಸೂದಯಂತಿಸ್ಮ ಭಕ್ಷಯಂತಿ ಚ ದಾನವಾನ್ ॥ ೯೩ ॥

---

೮೭. ಕೆಲವು ದಾನವರು ಭಕ್ಷಿಸಲ್ಪಡುತ್ತಿದ್ದರು. ಮತ್ತೆ ಕೆಲವರು ಕೊಲ್ಲಲ್ಪಡುತ್ತಿದ್ದರು. ಇನ್ನು ಕೆಲವರು ಅರ್ಧಭಕ್ಷಿತವಾದ ಶರೀರವುಳ್ಳವರಾಗಿ ಸಾಯುತ್ತಿದ್ದರು.

೮೮. ಶಕ್ತಿವಂತರಾದ ಇತರ ದಾನವರು ಯುದ್ಧಮಾಡುತ್ತಿರುವಾಗಲೇ ಆ ಮಾತೆಯರು ಆಯುಧವಾಹನಗಳಿಂದ ಸಹಿತರಾದ ಅವರನ್ನು ತಿಂದರು.

೮೯. ಅಂಧಕನು ಆ ಮಹಾಧ್ವನಿಯನ್ನು ಕೇಳಿ ಕ್ರೋಧಾಂಧನಾಗಿ ಕತ್ತಿಯನ್ನು ತೆಗೆದುಕೊಂಡು "ಇದೇನು? ಇದೇನು?" ಎಂದು ಕೂಗುತ್ತ ಮೇಲಕ್ಕೆ ಎದ್ದನು.

೯೦. ಆಗ ಅವನು ನಾಶಗೊಂಡ ಬಲಶಾಲಿಯರಾದ ದಾನವರನ್ನೂ, ಭಕ್ಷಿಸಲ್ಪಡುತ್ತಿರುವ ಇತರರನ್ನೂ, ಓಡುತ್ತಿರುವ ಮತ್ತೆ ಕೆಲವು ದಾನವರನ್ನೂ ನೋಡಿದನು.

೯೧. ಅವನು ಸಮರದಲ್ಲಿ ಮಡಿದ ಇತರ ದಾನವರ ಬಳಿಯಲ್ಲಿ ನಿಂತು ದುಃಖದಿಂದ ಗೋಳಾಡುತ್ತಿರುವ ಅವರ ಪ್ರಿಯ ಭಾರ್ಯೆಯರನ್ನು ಕಂಡನು.

೯೨. ಅನಂತರ ಅವನು ಆ ಕಾಳೆಗವನ್ನು ನೋಡಿ ಕ್ರುದ್ಧನಾಗಿ ಯುದ್ಧನಿರತರಾದ ಆ ಯೋಗಿನಿಯರನ್ನೆಲ್ಲ ಗದರಿಸಿದನು.

೯೩. ಆ ಯೋಗಿನಿಯರು ಆ ದೈತ್ಯನಿಗೆ ಹೆದರದೆ ದಾನವರನ್ನು ಕೊಲ್ಲುತ್ತಲೂ, ತಿನ್ನುತ್ತಲೂ ಇದ್ದರು.

ತತಃ ಸ ದಾನವಸ್ತಾಸಾಂ ದೃಷ್ಟ್ವಾ ತಚ್ಚೇಷ್ಟಿತಂ ರುಷಾ ।
ಸ್ವಸ್ಯ ಗಾತ್ರಸ್ಯ ರಕ್ಷಾಂ ಸ ಚಕಾರ ಭಯಸಂಕುಲಃ ॥ ೯೪ ॥
ತಮೋಽಸ್ತ್ರಂ ಮುಮುಚೇ ರೌದ್ರಂ ಕೃತ್ವಾ ರಾವಂ ಸ ತತ್ಕ್ಷಣಾತ್ ।
ಏತಸ್ಮಿನ್ನಂತರೇ ಕೃತ್ಸ್ನಂ ತ್ರೈಲೋಕ್ಯಂ ತಮಸಾ ವೃತಂ ॥ ೯೫ ॥
ನ ಕಿಂಚಿಜ್ಜ್ಞಾಯತೇ ತತ್ರ ಸಮಂ ವಿಷಮಮೇವ ಚ ।
ಕೇವಲಂ ದಾನವೇಂದ್ರಶ್ಚ ಸರ್ವಂ ಪಶ್ಯತಿ ನೇತರಃ ॥ ೯೬ ॥
ತತಃ ಸ ಸೂದಯಾಮಾಸ ಯೋಗಿನೀಸ್ತಾಃ ಶಿತೈಃ ಶರೈಃ ।
ಯಥಾ ಯಥಾ ಪರಾ ನಾರ್ಯಸ್ತಾದೃಗ್ರೂಪಾ ಭವಂತಿ ಚ ॥ ೯೭ ॥
ಅಥ ದೃಷ್ಟ್ವಾ ಪರಾಂ ವೃದ್ಧಿಂ ಯೋಗಿನೀನಾಂ ಸ ದಾನವಃ ।
ಸಂಹಾರಂ ತಸ್ಯ ಚಾಽಸ್ತ್ರಸ್ಯ ಚಕಾರ ಭಯಸಂಕುಲಃ ॥ ೯೮ ॥
ತತಃ ಶುಕ್ರಂ ಸಮಾಸಾದ್ಯ ದೀನಃ ಪ್ರಾಹ ಕೃತಾಂಜಲಿಃ ।
ಪಶ್ಯ ಮೇ ಭಾರ್ಗವಶ್ರೇಷ್ಠ ಸ್ತ್ರೀಭಿರ್ಯತ್ಕದನಂ ಕೃತಂ ॥ ೯೯ ॥
ಅವಧ್ಯಾಭಿರ್ಮಮಾಽಸ್ತ್ರಾಣಾಂ ಮಂತ್ರಶಕ್ತ್ಯಾ ಸುರದ್ವಿಷಃ ।
ಉತ್ಪನ್ನಾಭಿಃ ಪ್ರಭೂತಾಭಿರ್ಹತಂ ಮೇ ಸರ್ವತೋ ಬಲಂ ॥ ೧೦೦ ॥

---

೯೪. ಅನಂತರ ಆ ಅಂಧಕನು ಆ ಯೋಗಿನಿಯರ ಕೆಲಸವನ್ನು ನೋಡಿ ಕೋಪಗೊಂಡು ಭಯದಿಂದ ತನ್ನ ಶರೀರವನ್ನು ರಕ್ಷಿಸಿಕೊಳ್ಳತೊಡಗಿದನು.

೯೫. ಕೂಡಲೆ ಭಯಂಕರವಾಗಿ ಸಿಂಹನಾದಗೈದು ಅಂಧಕಾರಾಸ್ತ್ರವನ್ನು ಪ್ರಯೋಗಿಸಿದನು. ಅದರಿಂದ ಮೂರು ಲೋಕಗಳೂ ಕತ್ತಲೆಯಿಂದ ತುಂಬಿದುವು.

೯೬. ಅಲ್ಲಿ ಸಮ ವಿಷಮ ಪ್ರದೇಶಗಳು ತಿಳಿಯಲಿಲ್ಲ. ಅಂಧಕನು ಮಾತ್ರ ಎಲ್ಲವನ್ನೂ ನೋಡುತ್ತಿದ್ದನು. ಇತರರಾರೂ ನೋಡುತ್ತಿರಲಿಲ್ಲ.

೯೭. ಅವನು ಆ ಯೋಗಿನಿಯರನ್ನು ಹರಿತವಾದ ಅಸ್ತ್ರಗಳಿಂದ ವಧಿಸಿದ ಹಾಗೆಲ್ಲ ಇತರ ಹೆಂಗಸರು ಹಾಗೆಯೇ ಉದಿಸುತ್ತಿದ್ದರು.

೯೮. ತರುವಾಯ ಯೋಗಿನಿಯರು ಹೆಚ್ಚುತ್ತಿರುವುದನ್ನು ನೋಡಿ ಅಂಧಕನು ಭಯಗೊಂಡು ಆ ಅಂಧಕಾರಾಸ್ತ್ರವನ್ನು ಹಿಂತೆಗೆದನು.

೯೯. ಅವನು ಶುಕ್ರಾಚಾರ್ಯರ ಬಳಿಗೆ ಹೋಗಿ ದೈನ್ಯದಿಂದ ಕೈಮುಗಿದು ಕೊಂಡು ಇಂತೆಂದನು. "ಆಚಾರ್ಯರೆ! ಹೆಂಗಸರು ಮಾಡಿದ ಈ ಯುದ್ಧ ವನ್ನು ನೋಡಿರಿ.

೧೦೦. ನನ್ನ ಅಸ್ತ್ರಗಳಿಂದ ಕೊಲ್ಲಲಾಗದವರೂ, ಶಂಕರನ ಮಂತ್ರಶಕ್ತಿ ಯಿಂದ ಹುಟ್ಟಿದವರೂ ಆದ ಈ ಬಹುಮಂದಿ ಯೋಗಿನಿಯರು ನನ್ನ ಸೈನ್ಯವನ್ನೆಲ್ಲ ಕೊಂದಿರುವರು.

**ತಸ್ಮಾತ್ತ್ವಮಪಿ ತಾಂ ವಿದ್ಯಾಂ ಪ್ರಸಾಧಯ ಮಹಾಮತೇ ।**
**ಯದಿ ಮೇ ವಾಂಛಸಿ ಶ್ರೇಯೋ ನಾಽನ್ಯಥಾಸ್ತಿ ಜಯೋ ರಣೇ ॥ ೧೦೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಅಂಧಕಾಽಸುರ ವಧವೃತ್ತಾಂತೇ ಶಂಕರಕೃತಕೇಲೀಶ್ವರೀಪ್ರಾದುರ್ಭಾವವರ್ಣನಂ"**
**ನಾಮ್ನ್ಯೇಕೋನಪಂಚಾಶದುತ್ತರಶತತಮೋಽಧ್ಯಾಯಃ**

---

೧೦೧. ಆದುದರಿಂದ ನೀವು ನನಗೆ ಶ್ರೇಯಸ್ಸನ್ನು ಬಯಸುವುದಾದರೆ ಆ ವಿದ್ಯೆಯನ್ನು ಸಾಧಿಸು. ಬೇರೆ ರೀತಿಯಿಂದ ಯುದ್ಧದಲ್ಲಿ ನಮಗೆ ಜಯವಿಲ್ಲ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಂಧಕಾಸುರವಧವೃತ್ತಾಂತೇ ಶಂಕರಕೃತ
ಕೇಲೀಶ್ವರೀಪ್ರಾದುರ್ಭಾವವರ್ಣನ" ವೆಂಬ
ನೂರನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶದುತ್ತರಶತತಮೋಽಧ್ಯಾಯಃ

## ಕೇಲೀಶ್ವರೀಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಶುಕ್ರಸ್ತಸ್ಯ ವಚಃ ಶ್ರುತ್ವಾ ಚಿತ್ತೇ ಕೃತ್ವಾ ದಯಾಂ ತತಃ ।
ಹಾಟಕೇಶ್ವರಜಂ ಕ್ಷೇತ್ರಂ ಗತ್ವಾ ಸಿದ್ಧಿಪ್ರದಾಯಕಂ ॥ ೧ ॥
ಚಕಾರ ವಿಧಿವದ್ಧೋಮಂ ಸ್ವಮಾಂಸೇನ ಹುತಾಽಶನೇ ।
ಮಂತ್ರೈರಾಥರ್ವಣೈ ರೌದ್ರೈಃ ಕುಂಡಂ ಕೃತ್ವಾ ತ್ರಿಕೋಣಕಂ ॥ ೨ ॥
ಏವಂ ಸಂಜುಹ್ವತಸ್ತಸ್ಯ ತೇನ ವೈ ವಿಧಿನಾ ತದಾ ।
ಯಥಾ ರುದ್ರೇಣ ಸಂತುಷ್ಟಾ ದೇವೀ ಕೇಲೀಶ್ವರೀ ತದಾ ॥ ೩ ॥
ತಂ ಪ್ರೋವಾಚ ಸಮೇತ್ಯಾಽಽಶು ಶುಕ್ರಂ ದೈತ್ಯಪುರೋಹಿತಂ ।
ಮಾ ತ್ವಂ ಭಾರ್ಗವಶಾರ್ದೂಲ ಕುರು ಮಾಂಸಪರಿಕ್ಷಯಂ ॥ ೪ ॥
ಭಾವಿತಾಽಹಂ ತ್ರಿನೇತ್ರೇಣ ತತ್ಕಿಂ ಬ್ರೂಹಿ ಕರೋಮಿ ತೇ ॥ ೫ ॥

ಶುಕ್ರ ಉವಾಚ :—

ಯಥಾ ರುದ್ರಸ್ಯ ಸಾಹಾಯ್ಯಂ ತ್ವಯಾಽತ್ರ ವಿಹಿತಂ ಶುಭೇ ।
ಅಂಧಕಸ್ಯಾಽಪಿ ಕರ್ತವ್ಯಂ ತಥೈವೈಷ ವರೋ ಮಮ ॥ ೬ ॥

---

## ಕನ್ನಡದ ಅನುವಾದ

### ಕೇಲೀಶ್ವರೀಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ :—ಶುಕ್ರಾಚಾರ್ಯನು ಅಂಧಕನ ಮಾತನ್ನು ಕೇಳಿ ದಯೆಗೊಂಡು ಸಿದ್ಧಿಯನ್ನೀಯುವ ಹಾಟಕೇಶ್ವರಜ ಕ್ಷೇತ್ರಕ್ಕೆ ಹೋಗಿ ತ್ರಿಕೋಣಾಕಾರದ ಕುಂಡವನ್ನು ನಿರ್ಮಿಸಿ ಆಥರ್ವಣವಾದ ರೌದ್ರ ಮಂತ್ರಗಳಿಂದ ಅಗ್ನಿಯಲ್ಲಿ ತನ್ನ ಮಾಂಸದಿಂದಲೇ ವಿಧಿಯಂತೆ ಹೋಮವನ್ನು ಮಾಡಿದನು.

೩. ಹೀಗೆ ರುದ್ರನಿಂದ ದೇವಿಯು ಹೇಗೆ ಸಂತೋಷಪಟ್ಟಳೋ ಹಾಗೆಯೇ ಆ ಶುಕ್ರನ ಹೋಮದಿಂದಲೂ ಆಕೆಯು ಸಂತುಷ್ಟಳಾದಳು.

೪–೫. ಆ ದೇವಿಯು ಶೀಘ್ರವಾಗಿ ದೈತ್ಯಪುರೋಹಿತನಾದ ಶುಕ್ರಾಚಾರ್ಯನ ಬಳಿಗೆ ಬಂದು "ಭಾರ್ಗವ! ನೀನು ಮಾಂಸವನ್ನು ಹಾಳುಮಾಡಬೇಡ. ನಾನು ರುದ್ರನು ನಿರ್ಮಿಸಿದ ಕೇಲೀಶ್ವರಿಯು. ನಿನಗೇನು ಮಾಡಲಿ, ಹೇಳು" ಎಂದಳು.

೬. ಶುಕ್ರನು ಹೇಳುತ್ತಾನೆ :—ಮಂಗಳಕರಳೆ! ನೀನು ರುದ್ರನಿಗೆ ಸಹಾಯ ಮಾಡಿದಂತೆ ಅಂಧಕನಿಗೂ ಸಹಾಯ ಮಾಡು. ಇದು ನನಗೆ ಬೇಕಾದ ವರವು.

ಯೇ ಕೇಚಿದ್ದಾನವಾ ಯುದ್ಧೇ ಭಕ್ಷಿತಾಶ್ಚ ವಿನಾಶಿತಾಃ ।
ಅಸ್ಯ ಸೈನ್ಯಸ್ಯ ತೇ ಸರ್ವೇ ಪುನರ್ಜೀವಂತು ಸತ್ವರಂ ॥ ೭ ॥
ದೇವ್ಯುವಾಚ :—
ಜೀವಯಿಷ್ಯಾಮಿ ತಾನ್ ಸರ್ವಾನ್ದಾನವಾನ್ನಿಹತಾನ್ರಣೇ ।
ನವಸಂಭಕ್ಷಿತಾನ್ ವಿಪ್ರ ಪ್ರವಿಷ್ಟಾನ್ ಯೋಗಿನೀಮುಖೇ ॥ ೮ ॥
ಏವಮುಕ್ತ್ವಾ ದದೌ ತಸ್ಮೈ ಸಾ ದೇವೀ ಹರ್ಷಿತಾನನಾ ।
ನಾಮ್ನಾಽಮೃತವತೀಂ ವಿದ್ಯಾಂ ಯಯಾ ಜೀವಂತಿ ತೇ ಮೃತಾಃ ॥ ೯ ॥
ತತಃ ಶುಕ್ರಃ ಪ್ರಹೃಷ್ಟಾತ್ಮಾ ಗತ್ವಾಂಧಕಮುವಾಚ ಹ ।
ಸಿದ್ಧಾ ಕೇಲೀಶ್ವರೀ ದೇವೀ ಯಥಾ ಶಂಭೋಸ್ತಥಾ ಮಮ ॥ ೧೦ ॥
ತಯಾ ದತ್ತಾ ಶುಭಾ ವಿದ್ಯಾ ಮಮ ದೈತ್ಯಾ ಮೃತಾಶ್ಚ ಯೇ ।
ತಾನ್ ಸರ್ವಾಂಸ್ತತ್ಪ್ರಭಾವೇನ ಯೋಜಯಿಷ್ಯಾಮಿ ಜೀವಿತೇ ॥ ೧೧ ॥
ತ್ವಯಾಽಸ್ಯಾಃ ಸತತಂ ಭಕ್ತಿಃ ಕಾರ್ಯಾ ದಾನವಸತ್ತಮ ।
ಅಷ್ಟಮ್ಯಾಂ ಚ ವಿಶೇಷೇಣ ಚತುರ್ದಶ್ಯಾಂ ಚ ಸರ್ವದಾ ॥ ೧೨ ॥
ಏಷಾ ಸಾ ಪರಮಾ ಶಕ್ತಿರ್ಯಯಾ ವ್ಯಾಪ್ತಮಿದಂ ಜಗತ್ ।
ಕೇವಲಂ ಭಕ್ತಿಸಾಧ್ಯಾ ಸಾ ನ ದಂಡೇನ ಕಥಂಚನ ॥ ೧೩ ॥

---

೭. ನೀನು ಯುದ್ಧದಲ್ಲಿ ಭಕ್ಷಿಸಿದ ಮತ್ತು ನಾಶಗೊಳಿಸಿದ ಈ ಸೈನ್ಯದ ದಾನವರು ಶೀಘ್ರವಾಗಿ ಬದುಕಲಿ.

೮. ದೇವಿಯು ಹೇಳುತ್ತಾಳೆ:—ದ್ವಿಜವರ್ಯನೆ! ನಾನು ಯುದ್ಧದಲ್ಲಿ ಮೃತರೂ, ಯೋಗಿನಿಯರ ಬಾಯಿಗಳನ್ನು ಪ್ರವೇಶಿಸಿದವರೂ, ಹೊಸದಾಗಿ ನಾನು ತಿಂದವರೂ ಆದ ರಾಕ್ಷಸರನ್ನು ಬದುಕಿಸುವೆನು.

೯–೧೦. ದೇವಿಯು ಹೀಗೆ ಹೇಳಿ ಮೃತರಾದ ದಾನವರನ್ನು ಬದುಕಿಸುವ ಅಮೃತವತೀ ವಿದ್ಯೆಯನ್ನು ಶುಕ್ರಾಚಾರ್ಯನಿಗೆ ಸಂತೋಷದಿಂದ ಉಪದೇಶ ಮಾಡಿದಳು. ಅನಂತರ ಶುಕ್ರಾಚಾರ್ಯನು ಸಂತೋಷಗೊಂಡು ಅಂಧಕನ ಬಳಿಗೆ ಹೋಗಿ ಇಂತೆಂದನು. "ಅಯ್ಯಾ ಶುಕ್ರನೇ! ಶಿವನಿಗೆ ಸಿದ್ಧಿಸಿದಂತೆ ನನಗೂ ಆ ಕೇಲೀಶ್ವರೀ ದೇವಿಯು ಸಿದ್ಧಿಸಿರುವಳು.

೧೧. ಅವಳು ನನಗೆ ಅಮೃತವಿದ್ಯೆಯನ್ನು ಉಪದೇಶ ಮಾಡಿದ್ದಾಳೆ. ಅದರ ಪ್ರಭಾವದಿಂದ ನಾನು ಈಗ ಮೃತರಾಗಿರುವ ದಾನವರನ್ನು ಬದುಕಿಸುವೆನು.

೧೨. ದಾನವೇಂದ್ರ! ನೀನು ಅಷ್ಟಮೀ, ಚತುರ್ದಶೀ ದಿನಗಳಲ್ಲಿ ಯಾವಾಗಲೂ ಅವಳಲ್ಲಿ ಭಕ್ತಿಯನ್ನು ಮಾಡಬೇಕು.

೧೩. ಉತ್ತಮ ಶಕ್ತಿರೂಪಳಾದ ಅವಳು ಈ ಪ್ರಪಂಚವನ್ನೆಲ್ಲ ವ್ಯಾಪಿಸಿರುವಳು. ಅವಳು ಭಕ್ತಿಯಿಂದ ಮಾತ್ರ ವಶಳಾಗತಕ್ಕವಳೇ ಹೊರತು ಶಿಕ್ಷೆಯಿಂದ ವಶಳಾಗುವುದಿಲ್ಲ."

**ಏವಮುಕ್ತಸ್ತು ಶುಕ್ರೇಣ ಸ ತದಾ ದಾನವಾಧಿಪಃ ।**
**ತಾಂ ದೇವೀಂ ಪೂಜಯಾಮಾಸ ಭಾವಭಕ್ತಿಸಮನ್ವಿತಃ ॥ ೧೪ ॥**
**ಸ್ತುತ್ವಾ ಚ ವಿವಿಧೈಃ ಸ್ತೋತ್ರೈಸ್ತತಃ ಪ್ರೋವಾಚ ಸಾದರಂ ।**
**ತಥಾಽನ್ಯಾ ಮಾತರಃ ಸರ್ವಾ ಯಥಾ ಜ್ಯೇಷ್ಠಂ ಯಥಾಕ್ರಮಂ ॥ ೧೫ ॥**
**ಅಜ್ಞಾನಾದ್ಯನ್ಮಯಾ ದೇವಿ ಕೃತಃ ಕೋಪಸ್ತವೋಪರಿ ।**
**ಮರ್ಷಣೀಯಸ್ತಥಾ ಸೋಽದ್ಯ ದೀನಸ್ಯ ಪ್ರಣತಸ್ಯ ಚ ॥ ೧೬ ॥**

**ಶ್ರೀ ದೇವ್ಯುವಾಚ :—**

**ಪರಿತುಷ್ಟಾಽಸ್ಮಿ ತೇ ವತ್ಸ ಪ್ರಭಾವಾದ್ಭಾರ್ಗವಸ್ಯ ಚ ।**
**ವರಂ ವರಯ ತಸ್ಮಾತ್ತ್ವಂ ನ ವೃಥಾ ದರ್ಶನಂ ಮಮ ॥ ೧೭ ॥**

**ಅಂಧಕ ಉವಾಚ :—**

**ಅನೇನೈವ ತು ರೂಪೇಣ ಯೇ ತ್ವಾಂ ಧ್ಯಾಯಂತಿ ದೇಹಿನಃ ।**
**ಪೂಜಯಂತಿ ಚ ಸದ್ಭಕ್ತ್ಯಾ ಸಂಸ್ಥಾಪ್ಯ ಪ್ರತಿಮಾಂ ತವ ।**
**ತೇಷಾಂ ಸಿದ್ಧಿಃ ಪ್ರದಾತವ್ಯಾ ತ್ವಯಾ ಹೃದಯವಾಂಛಿತಾ ॥ ೧೮ ॥**

**ದೇವ್ಯುವಾಚ :—**

**ಯೋ ಮಾಮನೇನ ರೂಪೇಣ ಸ್ಥಾಪಯಿಷ್ಯತಿ ಮಾನವಃ ।**
**ತಸ್ಯ ಮೋಕ್ಷಂ ಪ್ರದಾಸ್ಯಾಮಿ ಪಾಪಸ್ಯಾಽಪಿ ನ ಸಂಶಯಃ ॥ ೧೯ ॥**

---

೧೪. ಶುಕ್ರಾಚಾರ್ಯನು ಹೀಗೆ ನುಡಿಯಲು ಅಂಧಕನು ಭಕ್ತಿಭಾವದಿಂದ ಅವಳನ್ನು ಅರ್ಚಿಸಿದನು.

೧೫. ಅವನು ಅವಳನ್ನೂ, ಇತರ ಎಲ್ಲ ಮಾತೆಯರನ್ನೂ ಜ್ಯೇಷ್ಠ ಕ್ರಮವನ್ನನುಸರಿಸಿ ಬಗೆಬಗೆಯ ಸ್ತೋತ್ರಗಳಿಂದ ಹೊಗಳಿ ಪ್ರೀತಿಯಿಂದ ಇಂತೆಂದನು.

೧೬. "ದೇವಿ! ದೀನನೂ, ನಮ್ರನೂ ಆದ ನಾನು ಅರಿಯದೆ ನಿನ್ನಲ್ಲಿ ಮಾಡಿದ ಕೋಪವನ್ನು ದಯೆಯಿಂದ ಕ್ಷಮಿಸು."

೧೭. ಶ್ರೀ ದೇವಿಯು ಹೇಳುತ್ತಾಳೆ:—ಮಗು! ನಾನು ಶುಕ್ರನ ಪ್ರಭಾವದಿಂದ ನಿನಗೆ ಒಲಿದಿರುವೆನು. ಆದುದರಿಂದ ನೀನು ವರವನ್ನು ಕೇಳಿಕೊ. ನನ್ನ ದರ್ಶನವು ವ್ಯರ್ಥವಾಗುವುದಿಲ್ಲ.

೧೮. ಅಂಧಕನು ಹೇಳುತ್ತಾನೆ :—ಭಕ್ತಿಯಿಂದ ನಿನ್ನ ಈ ರೂಪದ ಪ್ರತಿಮೆಯನ್ನು ಪ್ರತಿಷ್ಠೆಮಾಡಿ ಪೂಜಿಸಿ ಧ್ಯಾನಮಾಡುವವರಿಗೆ ಅಭೀಷ್ಟಸಿದ್ಧಿಯನ್ನುಂಟು ಮಾಡು.

೧೯. ದೇವಿಯು ಹೇಳುತ್ತಾಳೆ :—ಪಾಪಿಯಾದರೂ ಈ ರೂಪದಿಂದ ನನ್ನನ್ನು ಪ್ರತಿಷ್ಠೆಮಾಡಿದ ನರನಿಗೆ ಮೋಕ್ಷವನ್ನೀಯುವೆನು.

ಯೋಽಷ್ಟಮ್ಯಾಂ ಚ ಚತುರ್ದಶ್ಯಾಂ ಮಮ ಪೂಜಾಂ ಕರಿಷ್ಯತಿ ।
ತಸ್ಮೈ ಸ್ವರ್ಗಂ ಪ್ರದಾಸ್ಯಾಮಿ ಪಾಪಸ್ಯಾಽಪಿ ದನೂತ್ತಮ ॥ ೨೦ ॥
ಕೇವಲಂ ದರ್ಶನಂ ಯಶ್ಚ ಧ್ಯಾನಂ ವಾ ಮೇ ಕರಿಷ್ಯತಿ ।
ತಸ್ಯ ರಾಜ್ಯಂ ಪ್ರದಾಸ್ಯಾಮಿ ಭೋಗಾನ್ ಮಾನುಷಸಂಭವಾನ್ ॥ ೨೧ ॥
ಏವಮುಕ್ತ್ವಾಽಥ ಸಾ ದೇವೀ ತತಶ್ಚಾಽದರ್ಶನಂ ಗತಾ ।
ತೈಶ್ಚ ಮಾತೃಗಣೈಃ ಸಾರ್ಧಂ ಪಶ್ಯತಸ್ತಸ್ಯ ತತ್ಕ್ಷಣಾತ್ ॥ ೨೨ ॥
ಶುಕ್ರೋಽಪಿ ದಾನವಾನ್ ಸರ್ವಾಂಸ್ತಯಾ ಸಂಸಿದ್ಧಯಾ ತತಃ ।
ಮೃತಾನ್ ಸಂಜೀವಯಾಮಾಸ ದೈತೇಯಾನ್ನವ ಭಕ್ಷಿತಾನ್ ॥ ೨೩ ॥
ತೈಃ ಸಮೇತ್ಯ ಸ ದೈತ್ಯೇಂದ್ರಃ ಪ್ರಹೃಷ್ಟೇನಾಂತರಾತ್ಮನಾ ।
ತಾಂ ಪುರೀಂ ಪ್ರಾಪ್ಯ ಶಕ್ರಸ್ಯ ರಾಜ್ಯಂ ಚಕ್ರೇ ದಿವಾನಿಶಂ ॥ ೨೪ ॥
ತಾಂ ದೇವೀಂ ಧ್ಯಾಯಮಾನಸ್ತು ಪೂಜಮಾನೋ ದಿವಾನಿಶಂ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ವಿಶೇಷೇಣ ಮಹಾಬಲಃ ॥ ೨೫ ॥
ಅಥ ತಸ್ಯಾಃ ಪ್ರಭಾವಂ ತಂ ಜ್ಞಾತ್ವಾ ವ್ಯಾಸಸಮುದ್ಭವಃ ।
ಸ್ಥಾನೇಽತ್ರ ಸ್ಥಾಪಯಾಮಾಸ ಸಂಸಿದ್ಧಿಂ ಚ ಪರಾಂ ಗತಃ ॥ ೨೬ ॥

---

೨೦. ಅಷ್ಟಮಿ, ಚತುರ್ದಶೀ ದಿನಗಳಲ್ಲಿ ನನ್ನನ್ನು ಪೂಜಿಸುವವನು ಪಾಪಿಯಾದರೂ ಅವನಿಗೆ ಸ್ವರ್ಗವನ್ನು ಕೊಡುವೆನು.

೨೧. ನನ್ನನ್ನು ಕೇವಲ ಧ್ಯಾನವನ್ನು ಮಾಡಿ ಸಂದರ್ಶಿಸುವವನಿಗೆ ರಾಜ್ಯವನ್ನೂ, ಮನುಷ್ಯಭೋಗಗಳನ್ನೂ ಕೊಡುವೆನು.

೨೨. ಆ ದೇವಿಯು ಹೀಗೆ ಹೇಳಿ ಅವನು ನೋಡುತ್ತಿರುವಾಗಲೇ ಮಾತೃಗಣಗಳೊಡನೆ ಅದೃಶ್ಯಳಾದಳು.

೨೩. ಶುಕ್ರನೂ ಆ ಅಮೃತಸಂಜೀವಿನೀ ವಿದ್ಯೆಯಿಂದ ಆ ಮಾತೆಯರು ಹೊಸದಾಗಿ ಭಕ್ಷಿಸಿದ ದೈತ್ಯರನ್ನು ಬದುಕಿಸಿದನು.

೨೪–೨೫. ತರುವಾಯ ಅಂಧಕಾಸುರನು ಸಂತೋಷಗೊಂಡ ಮನಸ್ಸುಳ್ಳವನಾಗಿ ಆ ದಾನವರೊಡನೆ ದೇವೇಂದ್ರನ ಅಮರಾವತಿಯನ್ನು ಪಡೆದು ಅಷ್ಟಮಿ, ಚತುರ್ದಶೀ ದಿನಗಳಲ್ಲಿ ಆ ದೇವಿಯನ್ನು ಧ್ಯಾನಿಸುತ್ತಲೂ, ಪೂಜಿಸುತ್ತಲೂ ರಾಜ್ಯವನ್ನಾಳಿದನು.

೨೬. ತರುವಾಯ ವ್ಯಾಸಮಹರ್ಷಿಯ ಕುಮಾರನಾದ ಶುಕನು ಆ ದೇವಿಯ ಪ್ರಭಾವವನ್ನರಿತು ಅವಳನ್ನು ಈ ಸ್ಥಳದಲ್ಲಿಯೇ ಪ್ರತಿಷ್ಠೆಮಾಡಿ ಉತ್ತಮಸ್ಥಿತಿಯನ್ನು ಹೊಂದಿದನು.

**ಸೂತ ಉವಾಚ :—**

**ಏವಂ ಕೇಲೀಶ್ವರೀ ದೇವೀ ಸಂಜಾತಾ ಪರಮೇಶ್ವರೀ ।**
**ತಸ್ಮಾತ್ಸಾ ಸ್ಥಾಪ್ಯಾ ಚ ಪೂಜ್ಯಾ ಚ ಧ್ಯೇಯಾ ಚೈವ ವಿಶೇಷತಃ ॥ ೨೭ ॥**
**ಏವಂ ದೇವ್ಯಾ ನರೋ ಯಶ್ಚ ಪಠತೇ ವಾ ಶೃಣೋತಿ ವಾ ।**
**ವಾಚ್ಯಮಾನಂ ಸ ಮುಚ್ಯೇತ ವ್ಯಸನೇ ನ ಗರೀಯಸಾ ॥ ೨೮ ॥**
**ಭ್ರಷ್ಟರಾಜ್ಯೋಽಥ ವಾ ರಾಜಾ ಯಃ ಶೃಣೋತ್ಯಷ್ಟಮೀ ದಿನೇ ।**
**ಸ ರಾಜ್ಯಂ ಲಭತೇ ಭೂಯೋ ನಿಖಿಲಂ ಹತಕಂಟಕಂ ॥ ೨೯ ॥**
**ಯುದ್ಧಕಾಲೇ ಚ ಸಂಪ್ರಾಪ್ತೇ ಯಶ್ಚೈತಚ್ಛೃಣುಯಾನ್ನರಃ ।**
**ಸ ಹತ್ವಾ ಶತ್ರುಸಂಘಾತಂ ವಿಜಯಂ ಚ ಸಮಾಪ್ನುಯಾತ್ ॥ ೩೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಕೇಲೀಶ್ವರೀಮಾಹಾತ್ಮ್ಯವರ್ಣನಂ" ನಾಮ**
**ಪಂಚಾಶದುತ್ತರಶತತಮೋಽಧ್ಯಾಯಃ**

---

೨೭. ಸೂತನು ಹೇಳುತ್ತಾನೆ:—ಹೀಗೆ ಕೇಲೀಶ್ವರಿಯು ಅಲ್ಲಿ ನೆಲೆಸಿದಳು. ಆದುದರಿಂದ ಅವಳನ್ನು ಅಲ್ಲಿ ಸ್ಥಾಪಿಸಿ, ಪೂಜಿಸಿ ವಿಶೇಷವಾಗಿ ಧ್ಯಾನಮಾಡಬೇಕು.

೨೮. ಈ ಪ್ರಕಾರವಾದ ದೇವಿಯ ಚರಿತ್ರೆಯನ್ನು ಪಠಿಸುವವನೂ, ಕೇಳುವವನೂ ಮಹಾವ್ಯಸನದಿಂದ ಮುಕ್ತನಾಗುವನು.

೨೯. ರಾಜ್ಯಭ್ರಷ್ಟನಾದ ರಾಜನೂ ಅಷ್ಟಮೀ ದಿನ ಇದನ್ನು ಕೇಳಿದರೆ ಮರಳಿ ಶತ್ರುಗಳಿಲ್ಲದ ರಾಜ್ಯವನ್ನು ಹೊಂದುವನು.

೩೦. ಯುದ್ಧಕಾಲವೊದಗಲು ಇದನ್ನು ಕೇಳಿದ ಮನುಷ್ಯನು ಶತ್ರುಗಳನ್ನು ಕೊಂದು ಜಯಶೀಲನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕೇಲೀಶ್ವರೀಮಾಹಾತ್ಮ್ಯವರ್ಣನ" ವೆಂಬ
ನೂರೈವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಪಂಚಾಶದುತ್ತರಶತತಮೋಽಧ್ಯಾಯಃ

## ಭೈರವಕ್ಷೇತ್ರಮಾಹಾತ್ಮ್ಯವರ್ಣನಂ

**ಸೂತ ಉವಾಚ:—**

**ಅಂಧಕೋಽಪಿ ಪರಾಂ ವಿದ್ಯಾಂ ಜ್ಞಾತ್ವಾ ಶುಕ್ರಾರ್ಜಿತಾಂ ತದಾ ।**
**ಕೇಲೀಶ್ವರ್ಯಾಃ ಪ್ರಸಾದಂ ಚ ಭಕ್ತಿದಂ ಬಲವೃದ್ಧಿದಂ ॥ ೧ ॥**
**ಅವಧ್ಯತಾಮಾತ್ಮನಶ್ಚ ಪಿತಾಮಹವರೋದ್ಭವಂ ।**
**ಮಹೇಶ್ವರಂ ಸಮುದ್ದಿಶ್ಯ ಕೋಪಂ ಚಕ್ರೇ ತತಃ ಪರಂ ॥ ೨ ॥**
**ದೂತಂ ಚ ಪ್ರೇಷಯಾಮಾಸ ಕೈಲಾಸಂ ಪರ್ವತಂ ಪ್ರತಿ ।**
**ಗಚ್ಛ ದೂತ ಹರಂ ಬ್ರೂಹಿ ಮಮ ವಾಕ್ಯೇನ ಸಾಂಪ್ರತಂ ॥ ೩ ॥**
**ಶಕ್ರಮೇನಂ ಪರಿತ್ಯಜ್ಯ ಸುಖಂ ತಿಷ್ಠಾಽತ್ರ ಪರ್ವತೇ ।**
**ನೋಚೇದ್ದ್ರುತಂ ಸಮಾಗತ್ಯ ಸ ಕೈಲಾಸಂ ಸ ಭಾರ್ಯಕಂ ॥ ೪ ॥**
**ಸ ಗಣಂ ಚ ರಣೇ ಹತ್ವಾ ಸುಖೀ ಸ್ಥಾಸ್ಯಾಮಿ ನಂದನೇ ।**
**ತ್ವಾಮಹಂ ನಾಶಯಿಷ್ಯಾಮಿ ಸತ್ಯೇನಾತ್ಮಾನಮಾಲಭೇ ॥ ೫ ॥**

---

## ಕನ್ನಡದ ಅನುವಾದ

### ಭೈರವಕ್ಷೇತ್ರಮಾಹಾತ್ಮ್ಯವರ್ಣನ

೧—೨. ಸೂತನು ಹೇಳುತ್ತಾನೆ:—ಅಂಧಕನೂ ಶುಕ್ರನು ಸಂಪಾದಿಸಿದ ಅಮೃತಸಂಜೀವಿನೀ ವಿದ್ಯೆಯನ್ನೂ, ಕೇಲೀಶ್ವರಿಯ ಭಕ್ತಿಯಿಂದುಂಟಾದ ಬಲವನ್ನು ಹೆಚ್ಚಿಸುವ ಅನುಗ್ರಹವನ್ನೂ, ತನಗೆ ಬ್ರಹ್ಮನ ವರದಿಂದ ಸಂಭವಿಸಿದ ನಾಶವಿಲ್ಲದಿರುವಿಕೆಯನ್ನೂ ಅರಿತು ಮಹೇಶ್ವರನನ್ನು ಉದ್ದೇಶಿಸಿ ಕುಪಿತನಾದನು.

೩. ಅದರಿಂದವನು ಮಹೇಶ್ವರನನ್ನು ಕುರಿತು ನನ್ನ ಮಾತಿನಿಂದ ಈ ರೀತಿ ಹೇಳೆಂದು ದೂತನಿಗೆ ಹೇಳಿ ಅವನನ್ನು ಕೈಲಾಸ ಪರ್ವತಕ್ಕೆ ಕಳುಹಿಸಿದನು.

೪—೫. "ಮಹೇಶ್ವರ! ನೀನು ಈ ಇಂದ್ರನನ್ನು ತೊರೆದು ಈ ಕೈಲಾಸ ಶೈಲದಲ್ಲಿ ಸುಖದಿಂದಿರು. ಹಾಗೆ ಮಾಡದಿದ್ದರೆ ನಾನು ಶೀಘ್ರವಾಗಿ ಅಲ್ಲಿಗೆ ಬಂದು ಕೈಲಾಸ ಪರ್ವತ, ಪತ್ನಿ, ಗಣಗಳು ಇವರೊಡನೆ ನಿನ್ನನ್ನು ಸಮರದಲ್ಲಿ ವಧಿಸಿ ನಂದನವನದಲ್ಲಿ ಸುಖವಾಗಿರುವೆನು. ನಿನ್ನನ್ನು ನನ್ನ ಆಣೆಯಾಗಿ ಕೊಲ್ಲುವೆನು".

**ಏವಮುಕ್ತಃ ಸ ದೈತ್ಯೇನ ದೂತೋ ಗತ್ವಾ ದ್ರುತಂ ತತಃ ।**
**ಪ್ರೋವಾಚ ಶಂಕರಂ ವಾಕ್ಯೈಃ ಪರುಷೈಃ ಸವಿಶೇಷತಃ ॥ ೬ ॥**
**ತತಃ ಕೋಪಪರೀತಾತ್ಮಾ ಭಗವಾನ್ ವೃಷಭಧ್ವಜಃ ।**
**ಗಣಾನ್ ಸಂಪ್ರೇಷಯಾಮಾಸ ವಧಾರ್ಥಂ ತಸ್ಯ ದುರ್ಮತೇಃ ॥ ೭ ॥**
**ವೀರಭದ್ರಂ ಮಹಾಕಾಲಂ ನಂದಿಂ ಹಸ್ತಿಮುಖಂ ತಥಾ ।**
**ಅಘೋರಂ ಘೋರನಾದಂ ಚ ಘೋರಘಂಟಂ ಮಹಾಬಲಂ ॥ ೮ ॥**
**ಏತೇಷಾಮನುಗಾಶ್ಚಾಽನ್ಯೇ ಕೋಟಿರೇಕಾ ಪೃಥಕ್ ಪೃಥಕ್ ।**
**ಸರ್ವಾನ್ ಸಂಪ್ರೇಷಯಾಮಾಸ ವಧಾರ್ಥಂ ತಸ್ಯ ದುರ್ಮತೇಃ ॥ ೯ ॥**
**ಅಥ ಸಂಪ್ರೇಷಿತಾಸ್ತೇನ ಗಣಾಸ್ತೇ ವಿಕೃತಾನನಾಃ ।**
**ಹರ್ಷೇಣ ಮಹತಾವಿಷ್ಟಾ ಗರ್ಜಮಾನಾ ಯಥಾ ಘನಾಃ ॥ ೧೦ ॥**
**ಧೃತಾಯುಧಾ ಗತಾಃ ಸರ್ವೇ ಯುದ್ಧಾರ್ಥಂ ಯತ್ರ ಸಾ ಪುರೀ ।**
**ಶಕ್ರಸ್ಯಾಸಾದಿತಾ ತೇನ ದಾನವೇನ ಬಲೀಯಸಾ ॥ ೧೧ ॥**
**ಅಥ ಪ್ರಾಪ್ತಾನ್ ಗಣಾನ್ ದೃಷ್ಟ್ವಾ ದಾನವಾಸ್ತೇ ಧೃತಾಯುಧಾಃ ।**
**ನಿಶ್ಚಕ್ರಮುರ್ವೈ ಸಹಸಾ ಯುದ್ಧಾರ್ಥಮತಿಗರ್ವಿತಾಃ ॥ ೧೨ ॥**
**ತತಃ ಸಮಭವದ್ಯುದ್ಧಂ ಗಣಾನಾಂ ದಾನವೈಃ ಸಹ ।**
**ಪರಸ್ಪರಂ ಮಹಾ ರೌದ್ರಂ ಮೃತ್ಯುಂ ಕೃತ್ವಾ ನಿವರ್ತನಂ ॥ ೧೩ ॥**

---

೬. ಅಂಧಕನು ಹೀಗೆ ಹೇಳಲು, ಆ ದೂತನು ತ್ವರೆಯಿಂದ ಕೈಲಾಸಗಿರಿಗೆ ತೆರಳಿ ಶಂಕರನನ್ನು ಕುರಿತು ಆ ಅಂಧಕನ ಅತಿ ಕಠಿನವಾದ ಮಾತುಗಳನ್ನು ತಿಳಿಸಿದನು.

೭–೯. ಅದರಿಂದ ಕ್ರುದ್ಧನಾದ ಶಂಕರನು ಆ ಅಂಧಕನನ್ನು ಕೊಲ್ಲಲೋಸುಗ ವೀರಭದ್ರ, ಮಹಾಕಾಲ, ನಂದಿ, ಹಸ್ತಿಮುಖ, ಅಘೋರ, ಘೋರನಾದ, ಘೋರಘಂಟ ಇವರನ್ನೂ, ಇವರನ್ನು ಪ್ರತ್ಯೇಕವಾಗಿ ಹಿಂಬಾಲಿಸುವ ಒಂದು ಕೋಟಿ ಇತರ ಗಣಗಳನ್ನೂ ಕಳುಹಿಸಿದನು.

೧೦–೧೧. ಅನಂತರ ವಿಕಾರವಾದ ಮುಖಗಳುಳ್ಳ ಆ ಗಣಗಳು ಅತ್ಯಂತ ಸಂತೋಷದಿಂದ ಮೇಘದಂತೆ ಗರ್ಜಿಸುತ್ತ ಆಯುಧಗಳನ್ನು ಹಿಡಿದು ಎಲ್ಲರೂ ಆ ಬಲಿಷ್ಠನಾದ ಅಂಧಕನು ಆಕ್ರಮಿಸಿರುವ ಇಂದ್ರನಗರಿಗೆ ಯುದ್ಧಕ್ಕಾಗಿ ಹೋದರು.

೧೨. ತರುವಾಯ ದಾನವರು ಅಲ್ಲಿಗೆ ಬಂದಿರುವ ಆ ಗಣಗಳನ್ನು ನೋಡಿ ಅತಿ ಗರ್ವದಿಂದ ಆಯುಧಪಾಣಿಗಳಾಗಿ ಯುದ್ಧಮಾಡಲೋಸುಗ ಕೂಡಲೆ ಹೊರಟರು.

೧೩. ಅನಂತರ ಆ ಗಣಗಳಿಗೆ ದಾನವರೊಡನೆ ಪರಸ್ಪರವಾಗಿ ಮರಣವನ್ನುಂಟುಮಾಡುವ ಘೋರ ಯುದ್ಧವು ನಡೆಯಿತು.

ತತೋ ಹರಗಣಾಃ ಸರ್ವೇ ದಾನವೈಸ್ತ್ರೈ ರಣಾಜಿರೇ ।
ಜಿತಾ ಜಗ್ಮುರ್ದಿಶೋ ಭೀತಾ ಹರವೀಕ್ಷಣತತ್ಪರಾಃ ॥ ೧೪ ॥
ಹರೋಽಪಿ ತಾನ್ ಗಣಾನ್ ಭಗ್ನಾನ್ ದೃಷ್ಟ್ವಾ ಕೋಪಾದ್ವಿನಿರ್ಯಯೌ ।
ಹರಂ ದೃಷ್ಟ್ವಾ ತತೋ ದೈತ್ಯಾ ದುದ್ರುವುಸ್ತೇ ದಿಶೋ ದಶ ॥ ೧೫ ॥
ಅಂಧಕೋಽಪಿ ಹರಂ ದೃಷ್ಟ್ವಾ ಯುದ್ಧಾರ್ಥಂ ಸಮ್ಮುಖೋ ಯಯೌ ।
ತತೋ ಯುದ್ಧಂ ಸಮಭವದಂಧಕಸ್ಯ ಹರೇಣ ತು ।
ವೃತ್ರವಾಸವಯೋಃ ಪೂರ್ವಂ ಯಥಾ ಯುದ್ಧಮಭೂನ್ಮಹತ್ ॥ ೧೬ ॥
ಚಕ್ರನಾಲೀಕನಾರಾಚೈಸ್ತೋಮರೈಃ ಖಡ್ಗಮುದ್ಗರೈಃ ।
ಏವಂ ನ ಶಕ್ಯತೇ ಹಂತುಂ ದಾನವೋ ವಿವಿಧಾಯುಧೈಃ ॥ ೧೭ ॥
ಅಸ್ತ್ರಯುದ್ಧಂ ಪರಿತ್ಯಜ್ಯ ಬಾಹುಯುದ್ಧಮುಪಾಗತೌ ।
ಕರಂ ಕರೇಣ ಸಂಗೃಹ್ಯ ಮುಷ್ಟಿಪ್ರಹರಣೌ ತದಾ ॥ ೧೮ ॥
ದಾನವೇನಾಽಥ ದೇವೇಶೋ ಬಂಧೇನಾಕ್ರಮ್ಯ ಪೀಡಿತಃ ।
ನಿಷ್ಪಂದಭಾವಮಾಪನ್ನಸ್ತತೋ ಮೂರ್ಛಾಮುಪಾಗತಃ ॥ ೧೯ ॥
ಮೂರ್ಛಾಗತಂ ತು ತಜ್ಜ್ಞಾತ್ವಾ ಹ್ಯಂಧಕೋ ನಿರ್ಯಯೌ ಗೃಹಾತ್ ।
ತಾವತ್ಸ್ಥಾಣುಃ ಕ್ಷಣಾಲ್ಲಬ್ಧ್ವಾ ಚೇತನಾಮಾತ್ತಕಾರ್ಮುಕಃ ॥ ೨೦ ॥

---

೧೪. ಆ ಯುದ್ಧದಲ್ಲಿ ದಾನವರಿಂದ ಪರಾಜಿತರಾದ ರುದ್ರಗಣಗಳು ಭಯದಿಂದ ಶಿವನನ್ನು ನೋಡಲು ದಿಕ್ಕುದಿಕ್ಕಿಗೂ ಓಡಿಹೋದರು.

೧೫. ಶಿವನೂ ಸೋತುಬಂದ ತನ್ನ ಗಣಗಳನ್ನು ಕಂಡು ಕೋಪದಿಂದ ಹೊರಹೊರಟನು. ಅವನನ್ನು ನೋಡಿ ದೈತ್ಯರು ದಶದಿಕ್ಕುಗಳಿಗೆ ಓಡಿದರು.

೧೬. ಅಂಧಕನು ಶಿವನನ್ನು ಈಕ್ಷಿಸಿ ಯುದ್ಧಕ್ಕಾಗಿ ಅಭಿಮುಖನಾಗಲು ಅವರೀರ್ವರಿಗೆ ಹಿಂದೆ ಇಂದ್ರವೃತ್ರಾಸುರರಿಗೆ ನಡೆದಂತೆ ಭಯಂಕರ ಯುದ್ಧವು ನಡೆಯಿತು.

೧೭. ಶಿವನು ಚಕ್ರ, ನಾಳೀಕ, ನಾರಾಚ, ತೋಮರ, ಕತ್ತಿ, ಮುದ್ಗರ ಮೊದಲಾದ ಬಗೆಬಗೆಯ ಆಯುಧಗಳಿಂದ ಆ ಅಂಧಕನನ್ನು ಹೊಡೆದರೂ ಅವನನ್ನು ಕೊಲ್ಲಲು ಸಮರ್ಥನಾಗಲಿಲ್ಲ.

೧೮. ತರುವಾಯ ಅವರಿಬ್ಬರೂ ಅಸ್ತ್ರಯುದ್ಧವನ್ನು ತ್ಯಜಿಸಿ ಕೈ ಕೈ ಹಿಡಿದುಕೊಂಡು ಮುಷ್ಟಿಯಿಂದ ಗುದ್ದುತ್ತ ಬಾಹುಯುದ್ಧ ಮಾಡಿದರು.

೧೯. ಅಂಧಕನು ಶಿವನನ್ನು ಬಂಧದಿಂದ ಆಕ್ರಮಿಸಿ ಪೀಡಿಸಲು ಹರನು ಅಲ್ಲಾಡದೆ ಮೂರ್ಛೆಗೊಂಡನು.

೨೦–೨೧. ಶಿವನು ಮೂರ್ಛೆಗೊಂಡಿರುವುದನ್ನರಿತು ಅಂಧಕನು ಮನೆಗೆ

**ಆಯಸೀಂ ಲಕುಟೀಂ ಗೃಹ್ಯ ಪ್ರಭುರ್ಭಾರಸಹಸ್ರಿಕಾಂ ।**
**ದಾನವೇಂದ್ರಂ ತತಃ ಪ್ರಾಪ್ಯ ತಾಡಯಾಮಾಸ ಮೂರ್ಧನಿ ॥ ೨೧ ॥**
**ಸೋಽಪಿ ಖಡ್ಗೇನ ದೇವೇಶಂ ತಾಡಯಾಮಾಸ ವೇಗತಃ ।**
**ಅಥ ದೇವೋಽಪಿ ಸಸ್ಮಾರ ಕೌಬೇರಾಸ್ತ್ರಂ ಮಹಾಹವೇ ॥ ೨೨ ॥**
**ಅಸ್ತ್ರೇಣ ತೇನ ಹೃದಯೇ ತಾಡಯಾಮಾಸ ದಾನವಂ ।**
**ತತಸ್ಸ ತಾಡಿತಸ್ತೇನ ರುಧಿರೋದ್ಗಾರಮುದ್ವಮನ್ ॥ ೨೩ ॥**
**ಪತಿತೋಽಧೋಮುಖೋ ಭೂತ್ವಾ ತತಃ ಶೂಲೇನ ಭೇದಿತಃ ।**
**ಶೂಲಾಗ್ರ ಸಂಸ್ಥಿತಃ ಪಾಪಶ್ಚಕ್ರವದ್ಭ್ರಮತೇ ತತಃ ॥ ೨೪ ॥**
**ಅಂಧಕೋಽಪಿ ತದಾತ್ಮಾನಂ ತಥಾಽವಸ್ಥಮವೇಕ್ಷ್ಯ ಚ ।**
**ತತೋ ವಾಗ್ಭಿಃ ಸುಪುಷ್ಟಾಭಿರಸ್ತೌದ್ದೇವಂ ಮಹೇಶ್ವರಂ ॥ ೨೫ ॥**

ಅಂಧಕ ಉವಾಚ:—

**ನಮಸ್ತೇ ಜಗತಾಂ ಧಾತ್ರೇ ಶರ್ವಾಯ ತ್ರಿಗುಣಾತ್ಮನೇ ।**
**ವೃಷಭಾಸನಸಂಸ್ಥಾಯ ಶಶಾಂಕಕೃತಭೂಷಣ ॥ ೨೬ ॥**
**ನಮಃ ಖಟ್ವಾಂಗಹಸ್ತಾಯ ನಮಃ ಶೂಲಧರಾಯ ಚ ।**
**ನಮೋ ಡಮರುಕೋದಂಡಕಪಾಲಾಽನಲಧಾರಿಣೇ ॥ ೨೭ ॥**

---

ಹೊರಡಲು ಮಹೇಶ್ವರನು ಎಚ್ಚರಗೊಂಡು ಬಿಲ್ಲನ್ನು ಹಿಡಿದುಕೊಂಡು ಭಾರವಾದ ಕಬ್ಬಿಣದ ದೊಣ್ಣೆಯಿಂದ ಅಂಧಕನ ತಲೆಯಮೇಲೆ ಬಡಿದನು.

೨೨–೨೪. ಅಂಧಕನೂ ಕತ್ತಿಯಿಂದ ಶಂಕರನನ್ನು ಹೊಡೆದನು. ಅನಂತರ ಶಿವನು ಕೌಬೇರಾಸ್ತ್ರವನ್ನು ಸ್ಮರಿಸಿ ಅದರಿಂದ ದಾನವನ ಎದೆಗೆ ಹೊಡೆದನು. ಅದರಿಂದ ಅಂಧಕನು ರಕ್ತವನ್ನು ಕಾರುತ್ತ ಕೆಳಮುಖವಾಗಿ ಬೀಳಲು ಶಿವನು ಶೂಲದಿಂದ ಅವನನ್ನು ಭೇದಿಸಿದನು. ಆಗ ಶೂಲದ ಕೊನೆಯಲ್ಲಿ ಅವನು ಚಕ್ರದಂತೆ ತಿರುಗಿದನು.

೨೫. ಆಗ ಅಂಧಕನು ಆ ದುರವಸ್ಥೆಯಲ್ಲಿರುವ ತನ್ನನ್ನು ನೋಡಿ ಅನ್ವರ್ಥವಾದ ಮಾತುಗಳಿಂದ ಮಹೇಶ್ವರನನ್ನು ಹೀಗೆ ಸ್ತುತಿಸಿದನು.

೨೬. ಅಂಧಕನು ಹೇಳುತ್ತಾನೆ:—“ಜಗತ್ತುಗಳನ್ನು ಸೃಷ್ಟಿಸುವವನೂ, ತ್ರಿಗುಣರೂಪನೂ, ವೃಷಭದಮೇಲೆ ಕುಳಿತಿರುವವನೂ, ಚಂದ್ರಶೇಖರನೂ ಆದ ಮಹೇಶ್ವರ! ನಿನಗೆ ನಮಸ್ಕಾರವು.

೨೭. ಖಟ್ವಾಂಗ, ತ್ರಿಶೂಲ, ಡಮರು, ಬಿಲ್ಲು, ಕಪಾಲ, ಅಗ್ನಿಗಳನ್ನು ಧರಿಸಿರುವ ಮಹೇಶ್ವರ! ನಿನಗೆ ನಮಸ್ಕಾರವು.

ಸ್ಮರದೇಹವಿನಾಶಾಯ ಮೂರ್ತ್ಯಷ್ಟಕಮಯಾತ್ಮನೇ ।
ನಮಃ ಸ್ವರೂಪದೇಹಾಯ ಹ್ಯರೂಪ ಬಹುರೂಪಿಣೇ ॥ ೨೮ ॥
ಉತ್ತಮಾಂಗವಿನಾಶಾಯ ವಿರಿಂಚೇಃ ಸೃಷ್ಟಿಕಾರಿಣೇ ।
ಸ್ಮಶಾನವಾಸಿನೇ ನಿತ್ಯಂ ನಮೋ ಭೈರವರೂಪಿಣೇ ॥ ೨೯ ॥
ಸರ್ವಗಃ ಸರ್ವಕರ್ತಾ ಚ ತ್ವಂ ಹರ್ತಾ ನಾಽನ್ಯ ಏವ ಹಿ ।
ತ್ವಂ ಭೂಮಿಸ್ತ್ವಂ ರಜಶ್ಚೈವ ತ್ವಂ ಜ್ಯೋತಿಸ್ತ್ವಂ ತಮಸ್ತಥಾ ॥ ೩೦ ॥
ತ್ವಂ ವಪುಃ ಸರ್ವಭೂತಾನಾಂ ಜೀವಭೂತೋ ಮಹೇಶ್ವರ ।
ಅಸ್ತೌದೇವಂ ದಾನವೇಂದ್ರೋ ದೇವಶೂಲಾಗ್ರ ಸಂಸ್ಥಿತಃ ॥ ೩೧ ॥

ಸೂತ ಉವಾಚ :—

ಏವಂ ತಸ್ಯ ಸ್ತುತಿಂ ಶ್ರುತ್ವಾ ಪರಿತುಷ್ಟೋ ಮಹೇಶ್ವರಃ ।
ತತಃ ಪ್ರೋವಾಚ ತಂ ಹರ್ಷಾಚ್ಛೂಲಾಗ್ರಸ್ಥಂ ದನೂತ್ತಮಂ ॥ ೩೨ ॥

ಶ್ರೀ ಭಗವಾನುವಾಚ :—

ನೇದಂ ವೀರವ್ರತಂ ದೈತ್ಯ ಯಚ್ಛತ್ರುಕರಪೀಡನಾತ್ ।
ಪ್ರೋಚ್ಯಂತೇ ಸಾಮವಾಕ್ಯಾನಿ ವಿಶೇಷಾದ್ದೈತ್ಯಜನ್ಮನಾ ॥ ೩೩ ॥

---

೨೮. ಮನ್ಮಥನನ್ನು ನಾಶಗೊಳಿಸಿದವನೂ, ಅಷ್ಟಮೂರ್ತಿಯೂ, ಸ್ವರೂಪವೇ ದೇಹವಾಗುಳ್ಳವನೂ, ರೂಪವಿಲ್ಲದವನೂ, ಬಹುರೂಪಿಯೂ ಆದ ಶಂಕರ! ನಿನಗೆ ನಮಸ್ಕಾರವು.

೨೯. ಬ್ರಹ್ಮನ ತಲೆಯನ್ನು ಕತ್ತರಿಸಿದವನೂ, ಸೃಷ್ಟಿಕಾರಕನೂ, ಸ್ಮಶಾನ ವಾಸಿಯೂ, ಭಯಂಕರ ರೂಪವುಳ್ಳವನೂ ಆದ ಶಂಕರ! ನಿನಗೆ ನಮಸ್ಕಾರವು.

೩೦. ನೀನು ಸರ್ವಕರ್ತನೂ, ಸಮಸ್ತವನ್ನು ನಾಶಗೊಳಿಸುವವನೂ ಆಗಿರುವೆ. ನಿನ್ನನ್ನುಳಿದು ಬೇರೆ ಯಾರೂ ಅಲ್ಲ. ಭೂಮಿಯೂ, ರಜೋಗುಣವೂ, ಜ್ಯೋತಿಯೂ, ತಮಸ್ಸೂ ನೀನೇ ಆಗಿರುವೆ.

೩೧. ಮಹೇಶ್ವರ! ನೀನು ಸಕಲ ಪ್ರಾಣಿಗಳ ದೇಹರೂಪನೂ, ಜೀವನೂ ಆಗಿರುವೆ." ಅಂಧಕನು ಮಹೇಶ್ವರನ ಶೂಲದ ಕೊನೆಯಲ್ಲಿದ್ದು ಹೀಗೆ ಅವನನ್ನು ಹೊಗಳಿದನು.

೩೨. ಸೂತನು ಹೇಳುತ್ತಾನೆ:—ಹೀಗೆ ಆ ಅಂಧಕನ ಸ್ತೋತ್ರವನ್ನು ಕೇಳಿ ಮೆಚ್ಚಿದ ಮಹೇಶ್ವರನು ಸಂತೋಷದಿಂದ ಶೂಲದ ಕೊನೆಯಲ್ಲಿರುವ ಆ ದಾನವೋತ್ತಮನನ್ನು ಕುರಿತು ಹೀಗೆಂದನು.

೩೩. ಶ್ರೀ ಭಗವಂತನು ಹೇಳುತ್ತಾನೆ:—ಅಂಧಕ! ವೀರ ದಾನವನಾದ ನೀನು ಶತ್ರುಪೀಡಿತನಾಗಿ ಹೀಗೆ ಸಮಾಧಾನದ ಮಾತುಗಳನ್ನಾಡುವುದು ವೀರ ವ್ರತವಲ್ಲ.

ಅಂಧಕ ಉವಾಚ :—

ನಿರ್ವಿಣ್ಣೋಽಸ್ಮಿ ಸುರಶ್ರೇಷ್ಠ ತ್ರಿಶೂಲಾಗ್ರಂ ಸಮಾಶ್ರಿತಃ ।
ತಸ್ಮಾತ್ತ್ವದಯ ಮಾಂ ಯೇನ ದ್ರುತಂ ಸ್ಯಾನ್ಮೇ ವ್ಯಥಾಕ್ಷಯಃ ॥ ೩೪ ॥

ಶ್ರೀ ಭಗವಾನುವಾಚ :—

ನ ತೇಽಸ್ತಿ ಮರಣಂ ದೈತ್ಯ ಕಥಂಚಿಚ್ಚಿಂತಿತಂ ಮಯಾ ।
ತೇನೇತ್ಥಂ ವಿಧೃತಂ ವ್ಯೋಮ್ನಿ ಭಿತ್ವಾ ಶೂಲೇನ ವಕ್ಷಸಿ ॥ ೩೫ ॥
ತಸ್ಮಾತ್ತ್ವಂ ಗಣತಾಂ ಗಚ್ಛ ಸಾಂಪ್ರತಂ ಪಾಪವರ್ಜಿತಃ ।
ತ್ಯಕ್ತ್ವಾ ದಾನವಜಂ ಭಾವಂ ಶ್ರದ್ಧಯಾ ಪರಯಾ ಯುತಃ ॥ ೩೬ ॥

ಅಂಧಕ ಉವಾಚ :—

ಗತೋ ಮೇ ದಾನವೋ ಭಾವಃ ಸಾಂಪ್ರತಂ ತವ ಕಿಂಕರಃ ।
ಭವಿಷ್ಯಾಮಿ ನ ಸಂದೇಹಃ ಸತ್ಯೇನಾತ್ಮಾನಮಾಲಭೇ ॥ ೩೭ ॥

ಶಂಕರ ಉವಾಚ :—

ಪರಿತುಷ್ಟೋಽಸ್ಮಿ ತೇ ವತ್ಸ ಬ್ರೂಹಿ ಯತ್ತೇಽಭಿವಾಂಛಿತಂ ।
ಪ್ರಾರ್ಥಯಸ್ವ ಪ್ರಯಚ್ಛಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩೮ ॥

ಅಂಧಕ ಉವಾಚ :—

ಅನೇನೈವ ತು ರೂಪೇಣ ಶೂಲಾಗ್ರಸ್ಥಿತಮುತ್ತಮಂ ।
ಯೋ ಮರ್ತ್ಯೋಽರ್ಚಾಂ ಪ್ರಕೃತ್ವಾ ತೇ ಸ್ಥಾಪಯಿಷ್ಯತಿ ಭೂತಲೇ ॥ ೩೯ ॥

---

೩೪. ಅಂಧಕನು ಹೇಳುತ್ತಾನೆ:—ದೇವೋತ್ತಮ! ನಿನ್ನ ತ್ರಿಶೂಲದ ಮೇಲೆ ಇರುವ ನಾನು ಬಹುವಾಗಿ ವ್ಯಥೆಗೊಂಡಿದ್ದೇನೆ. ಆದುದರಿಂದ ನನ್ನನ್ನು ವಧಿಸು. ಅದರಿಂದ ನನ್ನ ಈ ವ್ಯಥೆಯು ಶೀಘ್ರವಾಗಿ ಪರಿಹಾರವಾಗುವುದು.

೩೫. ಶ್ರೀ ಭಗವಂತನು ಹೇಳುತ್ತಾನೆ:—ದೈತ್ಯೇಂದ್ರ! ನಿನಗೆ ಯಾವ ರೀತಿಯಲ್ಲಿಯೂ ಮರಣವಿಲ್ಲ. ಅದನ್ನು ನಾನು ಆಲೋಚಿಸಿದ್ದೇನೆ. ಆದುದರಿಂದ ನಾನು ನಿನ್ನನ್ನು ತ್ರಿಶೂಲದಿಂದ ಸೀಳಿ ಆಕಾಶದಲ್ಲಿ ಎತ್ತಿ ಹಿಡಿದಿರುವೆನು.

೩೬. ಆದುದರಿಂದ ನೀನು ಈಗ ದಾನವಭಾವವನ್ನು ತೊರೆದು ಅತಿ ಶ್ರದ್ಧೆಯಿಂದ ಪಾಪರಹಿತನಾಗಿ ಗಣತ್ವವನ್ನು ಹೊಂದು.

೩೭. ಅಂಧಕನು ಹೇಳುತ್ತಾನೆ:—ಶಂಕರ! ಈಗ ನನ್ನ ದಾನವತ್ವವು ತೊಲಗಿತು. ನಾನು ನಿನ್ನ ಸೇವಕನಾಗುವೆನು. ನನ್ನ ಆಣೆಯಾಗಿ ಸಂದೇಹವಿಲ್ಲ.

೩೮. ಶಂಕರನು ಹೇಳುತ್ತಾನೆ:—ಮಗು! ನಾನು ನಿನ್ನಲ್ಲಿ ಸಂತುಷ್ಟನಾಗಿರುವೆನು. ನಿನ್ನ ಇಷ್ಟಾರ್ಥವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

೩೯—೪೦. ಅಂಧಕನು ಹೇಳುತ್ತಾನೆ:—"ಭೂತಲದಲ್ಲಿ ಈ ಶೂಲಾಗ್ರದಲ್ಲಿರುವಂತೆ ನನ್ನ ಮೂರ್ತಿಯನ್ನು ಸ್ಥಾಪಿಸಿ ನಿನ್ನನ್ನು ಪೂಜಿಸುವ ಮನುಷ್ಯನಿಗೆ ನೀನು

ತಸ್ಯ ಮೋಕ್ಷಸ್ತ್ವಯಾ ದೇಯೋ ಮದ್ವಾಕ್ಯಾತ್ಸುರಸತ್ತಮ ।
ತಥೇತ್ಯುಕ್ತ್ವಾ ಮಹೇಶಸ್ತಂ ಶೂಲಾಗ್ರಾತ್ಪ್ರಮುಮೋಚ ಹ ।
ಅಸ್ಥಿಶೇಷಂ ಕೃಶಾಂಗಂ ಚ ಚಾಮುಂಡಾಸದೃಶಂ ದ್ವಿಜಾಃ ॥ ೪೦ ॥
ತತಃ ಸ ಗಣತಾಂ ಪ್ರಾಪ್ತೋ ಗೀತಂ ಚಕ್ರೇ ಮನೋಹರಂ ।
ಪುರತೋ ದೇವದೇವಸ್ಯ ಪಾರ್ವತ್ಯಾಶ್ಚ ವಿಶೇಷತಃ ॥ ೪೧ ॥
ಭೃಂಗವದ್ರಟನಂ ಯಸ್ಮಾತ್ತಸ್ಯ ಶ್ರೋತ್ರಸುಖಾವಹಂ ।
ಭೃಂಗೀರಿಟ ಇತಿ ಪ್ರೋಕ್ತಸ್ತತಃ ಸ ತ್ರಿಪುರಾಽರಿಣಾ ॥ ೪೨ ॥
ಏವಂ ಸ ಗಣತಾಂ ಪ್ರಾಪ್ತೋ ದೇವದೇವಸ್ಯಶೂಲಿನಃ ।
ವಿಶ್ವಾಸ್ಯಃ ಸರ್ವಕೃತ್ಯೇಷು ತತ್ಪರಂ ಸಮುಪದ್ಯತ ॥ ೪೩ ॥
ತತಃ ಪ್ರಭೃತಿ ಲೋಕೇಽತ್ರ ದೇವದೇವೋ ಮಹೇಶ್ವರಃ ।
ತಾದೃಶೇನೈವ ರೂಪೇಣ ಸ್ಥಾಪ್ಯತೇ ಭೂತಲೇ ಜನೈಃ ॥ ೪೪ ॥
ಪ್ರಾಪ್ಯತೇಽತ್ರ ಪರಾ ಸಿದ್ಧಿಸ್ತತ್ಪ್ರಸಾದಾದಲೌಕಿಕೀ ।
ಕಸ್ಯಚಿತ್ತ್ವಥ ಕಾಲಸ್ಯ ರಾಜ್ಯಾದ್ಭ್ರಷ್ಟೋ ಮಹೀಪತಿಃ ॥ ೪೫ ॥
ಸುರಥಾಖ್ಯಃ ಪ್ರಸಿದ್ಧೋಽತ್ರ ಸೂರ್ಯವಂಶಸಮುದ್ಭವಃ ।
ತತೋ ವಸಿಷ್ಠಮಾಸಾದ್ಯ ಸ ಚಾತ್ಮೀಯಂ ಪುರೋಹಿತಂ ।
ಪ್ರೋವಾಚ ಪ್ರಣತೋ ಭೂತ್ವಾ ಬಾಷ್ಪವ್ಯಾಕುಲಲೋಚನಃ ॥ ೪೬ ॥

---

ನನ್ನ ಮಾತಿನಂತೆ ಮೋಕ್ಷವನ್ನು ಕೊಡಬೇಕು " ಎಂದನು. ಶಂಕರನು ಆದಡಂತೆ ಒಪ್ಪಿ ಅಸ್ಥಿಮಾತ್ರದಿಂದ ಉಳಿದವನೂ, ಕೃಶವಾದ ಅವಯವವುಳ್ಳವನೂ, ಚಾಮುಂಡಿಯಂತಿರುವವನೂ ಆದ ಆ ಅಂಧಕನನ್ನು ಶೂಲದ ಮೇಲಿನಿಂದ ಇಳಿಸಿದನು.

೪೧. ಅನಂತರ ಅವನು ಗಣನಾಗಿ ಪಾರ್ವತೀ ಪರಮೇಶ್ವರರ ಮುಂದೆ ಇಂಪಾಗಿ ಹಾಡಿದನು.

೪೨. ಅವನ ಧ್ವನಿಯು ದುಂಬಿಯ ಧ್ವನಿಯಂತೆ ಕಿವಿಗೆ ಇಂಪಾಗಿದ್ದುದರಿಂದ ಶಂಕರನು ಅವನನ್ನು ಭೃಂಗೀರಿಟ ಎಂದು ಕರೆದನು.

೪೩. ಹೀಗೆ ಗಣತ್ವವನ್ನು ಪಡೆದ ಆ ಅಂಧಕನು ತರುವಾಯ ಮಹೇಶ್ವರನಿಗೆ ಸಮಸ್ತ ಕಾರ್ಯಗಳಲ್ಲಿಯೂ ವಿಶ್ವಾಸಪಾತ್ರನಾದನು.

೪೪. ಅದು ಮೊದಲ್ಗೊಂಡು ಸಕಲ ಜನರೂ ಭೂಮಿಯಲ್ಲಿ ಮಹೇಶ್ವರನನ್ನು ಆ ರೂಪದಿಂದಲೇ ಪ್ರತಿಷ್ಠೆ ಮಾಡುವರು.

೪೫–೪೬. ಹಾಗೆಯೇ ಅವನ ಅನುಗ್ರಹದಿಂದ ಅಲೌಕಿಕ ಸಿದ್ಧಿಯನ್ನು ಪಡೆಯುವರು. ಅನಂತರ ಒಂದಾನೊಂದು ಕಾಲದಲ್ಲಿ ರಾಜ್ಯಭ್ರಷ್ಟನಾದ ಸೂರ್ಯವಂಶದ ಸುರಥನೆಂಬ ಪ್ರಸಿದ್ಧ ರಾಜನು ತನ್ನ ಪುರೋಹಿತನಾದ ವಸಿಷ್ಠ ಮುನಿಯೆಡೆಗೆ ಹೋಗಿ ನಮಸ್ಕರಿಸಿ ಕಣ್ಣೀರನ್ನು ಸುರಿಸುತ್ತ ಇಂತೆಂದನು.

ತ್ವಯಾ ನಾಥೇನ ಮೇ ಬ್ರಹ್ಮನ್ ಸಂಸ್ಥಿತೇನಾಽಪಿ ಶತ್ರುಭಿಃ ।
ಬಲಾಚ್ಚ ಯದ್ಧೃತಂ ರಾಜ್ಯಂ ಮ್ಮಂದಭಾಗ್ಯಸ್ಯ ಸಾಂಪ್ರತಂ ॥ ೪೭ ॥
ತಸ್ಮಾತ್ಕುರು ಪ್ರಸಾದಂ ಮೇ ಯೇನ ಮೇ ರಾಜ್ಯಸಂಸ್ಥಿತಿಃ ।
ಭೂಯೋಽಪಿ ತ್ವತ್ಪ್ರಸಾದೇನ ನಾಽನ್ಯಾ ಮೇ ವಿದ್ಯತೇ ಗತಿಃ ॥ ೪೮ ॥

ವಸಿಷ್ಠ ಉವಾಚ:—

ಯದ್ಯೇವಂ ತೇ ಮಹಾರಾಜ ಮದ್ವಾಕ್ಯಾತ್ಸಾಂಪ್ರತಂ ವ್ರಜ ।
ಹಾಟಕೇಶ್ವರಜಂ ಕ್ಷೇತ್ರಂ ಸರ್ವಸಿದ್ಧಿಪ್ರದಾಯಕಂ ॥ ೪೯ ॥
ತತ್ರ ಭೈರವರೂಪೇಣ ಸ್ಥಾಪಯಿತ್ವಾ ಮಹೇಶ್ವರಂ ।
ಭುಜೋದ್ಯತೋಗ್ರಶೂಲಾಗ್ರವಿದ್ಧಾಂಧಕಕಲೇವರಂ ॥ ೫೦ ॥
ನಾರಸಿಂಹೇನ ಮಂತ್ರೇಣ ತತಃ ಪೂಜಯ ತಂ ನೃಪ ।
ರಕ್ತಪುಷ್ಪೈಸ್ತಥಾ ಧೂಪೈ ರಕ್ತೈಶ್ಚೈವಾನುಲೇಪನೈಃ ॥ ೫೧ ॥
ತತಃ ಸದ್ವೀರ್ಯಮಾಸಾದ್ಯ ತೇಜೋವೀರ್ಯಸಮನ್ವಿತಃ ।
ಹನಿಷ್ಯಸ್ಯಖಿಲಾಂಛತ್ರೂಂಸ್ತತ್ಪ್ರಸಾದಾದಸಂಶಯಂ ॥ ೫೨ ॥
ಪರಂ ಶೌಚಸಮೇತೇನ ಸಂಪೂಜ್ಯೋ ಭಗವಾಂಸ್ತ್ವಯಾ ।
ಅನ್ಯಥಾ ಪ್ರಾಪ್ಸ್ಯಸೇ ವಿಘ್ನಾನ್ ಸತ್ಯಮೇತನ್ಮಯೋದಿತಂ ॥ ೫೩ ॥

---

೪೭. ಮುನಿವರ್ಯರೆ! ನನಗೆ ನಾಥರಾದ ನೀವಿರುವಾಗ ಶತ್ರುಗಳು ಬಲಾತ್ಕಾರದಿಂದ ನನ್ನ ರಾಜ್ಯವನ್ನು ಈಗ ಅಪಹರಿಸಿದ್ದಾರೆ.

೪೮. ಆದುದರಿಂದ ನೀವು ನನಗೆ ಅನುಗ್ರಹಮಾಡಿರಿ. ನಿಮ್ಮ ಪ್ರಸಾದದಿಂದಲೇ ನನಗೆ ಮರಳಿ ರಾಜ್ಯವು ಲಭಿಸಲಿ. ಬೇರೆ ನನಗೆ ಗತಿಯಿಲ್ಲ.

೪೯. ವಸಿಷ್ಠನು ಹೇಳುತ್ತಾನೆ:—ಮಹಾರಾಜ! ಹೀಗಾದರೆ ನನ್ನ ಮಾತಿನಂತೆ ನೀನು ಶೀಘ್ರವಾಗಿ ಸಕಲ ಸಿದ್ಧಿಯನ್ನೀಯುವ ಹಾಟಕೇಶ್ವರಕ್ಷೇತ್ರಕ್ಕೆ ತೆರಳು.

೫೦–೫೧. ಅಲ್ಲಿ ಭುಜದಿಂದ ಎತ್ತಿ ಹಿಡಿದಿರುವ ಶೂಲದ ಕೊನೆಯಲ್ಲಿ ಸಿಕ್ಕಿಕೊಂಡಿರುವ ಅಂಧಕಾಸುರನ ಶರೀರವುಳ್ಳ ಭೈರವರೂಪಿಯಾದ ಮಹೇಶ್ವರನನ್ನು ಸ್ಥಾಪಿಸಿ ಅವನನ್ನು ನಾರಸಿಂಹ ಮಂತ್ರದಿಂದುಚ್ಚರಿಸಿ ಕೆಂಪು ಪುಷ್ಪ, ಗಂಧ ಮತ್ತು ಧೂಪಗಳಿಂದ ಪೂಜಿಸು.

೫೨. ಅನಂತರ ಅವನ ಅನುಗ್ರಹದಿಂದ ಶೌರ್ಯತೇಜಸ್ಸುಗಳನ್ನು ಹೊಂದಿ ಸಮಸ್ತ ಶತ್ರುಗಳನ್ನೂ ನಿಶ್ಚಯವಾಗಿ ಕೊಲ್ಲುವೆ.

೫೩. ನೀನು ಅತ್ಯಂತ ಶುದ್ಧನಾಗಿ ಮಹೇಶ್ವರನನ್ನು ಪೂಜಿಸಬೇಕು. ಹಾಗೆ ಮಾಡದಿದ್ದರೆ ವಿಘ್ನಗಳನ್ನು ಹೊಂದುವೆ. ನಾನು ಹೇಳಿರುವುದು ನಿಜ.

ಅಥ ತಸ್ಯ ವಚಃ ಶ್ರುತ್ವಾ ಸ ರಾಜಾ ಸತ್ವರಂ ಯಯೌ ।
ತತ್ರ ಕ್ಷೇತ್ರೇ ತತೋ ದೇವಂ ಸ್ಥಾಪಯಾಮಾಸ ಭೈರವಂ ॥ ೫೪ ॥
ತತಃ ಸಂಪೂಜಯಾಮಾಸ ನಾರಸಿಂಹೇನ ಭಕ್ತಿತಃ ।
ಮಂತ್ರೇಣ ಪ್ರಯತೋ ಭೂತ್ವಾ ಬ್ರಹ್ಮಚರ್ಯಪರಾಯಣಃ ॥ ೫೫ ॥
ತತೋ ದಶಸಹಸ್ರಾಂತೇ ತಸ್ಯ ಮಂತ್ರಸ್ಯ ಸಂಖ್ಯಯಾ ।
ಭೈರವಸ್ತುಷ್ಟಿಮಾಪನ್ನಃ ಪ್ರೋವಾಚ ತದನಂತರಂ ॥ ೫೬ ॥

ಶ್ರೀ ಭೈರವ ಉವಾಚ :—

ಪರಿತುಷ್ಟೋಽಸ್ಮಿ ತೇ ರಾಜನ್ ಮಂತ್ರೇಣಾಽನೇನ ಪೂಜಿತಃ ।
ತಸ್ಮಾತ್ಪ್ರಾರ್ಥಯ ಯಚ್ಚೇಷ್ಟಂ ಯೇನ ಸರ್ವಂ ದದಾಮ್ಯಹಂ ॥ ೫೭ ॥

ಸುರಥ ಉವಾಚ :—

ಶತ್ರುಭಿರ್ಮೇ ಹೃತಂ ರಾಜ್ಯಂ ತ್ವತ್ಪ್ರಸಾದಾತ್ಸುರೇಶ್ವರ ।
ತನ್ಮೇ ಭವತು ಭೂಯೋಽಪಿ ಶತ್ರುಭಿಃ ಪರಿವರ್ಜಿತಂ ॥ ೫೮ ॥
ಅನ್ಯೋಽಪಿ ಯಃ ಪುಮಾನಿತ್ಥಂ ತ್ವಾಮಿಹಾಽಽಗತ್ಯ ಪೂಜಯೇತ್ ।
ಅನೇನೈವ ತು ಮಂತ್ರೇಣ ತಸ್ಯ ಸಿದ್ಧಿಸ್ತ್ವಯಾ ವಿಭೋ ॥ ೫೯ ॥

---

೫೪. ತರುವಾಯ ಆ ದೊರೆಯು ಆ ವಸಿಷ್ಠನ ನುಡಿಯನ್ನು ಕೇಳಿ ತ್ವರೆಯಾಗಿ ಹಾಟಕೇಶ್ವರಕ್ಷೇತ್ರವನ್ನು ಸೇರಿ ಅಲ್ಲಿ ಭೈರವನನ್ನು ಪ್ರತಿಷ್ಠೆ ಮಾಡಿದನು.

೫೫. ಬ್ರಹ್ಮಚರ್ಯನಿರತನೂ, ಶುದ್ಧನೂ ಆಗಿ ನಾರಸಿಂಹ ಮಂತ್ರದಿಂದ ಅವನನ್ನು ಪೂಜಿಸಿದನು.

೫೬. ತರುವಾಯ ಹತ್ತುಸಾವಿರ ನಾರಸಿಂಹ ಮಂತ್ರದ ಜಪವಾಗಲು ಭೈರವನು ಸಂತುಷ್ಟನಾಗಿ ಹೀಗೆಂದನು.

೫೭. ಶ್ರೀ ಭೈರವನು ಹೇಳುತ್ತಾನೆ:—ದೊರೆಯೆ! ಈ ಮಂತ್ರದಿಂದ ಪೂಜಿಸಿದ ನಿನಗೆ ನಾನು ಸಂತುಷ್ಟನಾಗಿದ್ದೇನೆ. ಆದುದರಿಂದ ನಿನ್ನ ಇಷ್ಟಾರ್ಥವನ್ನು ಕೇಳಿಕೊ. ಅದನ್ನು ನಾನು ಕೊಡುವೆನು.

೫೮. ಸುರಥನು ಹೇಳುತ್ತಾನೆ:—ಸುರೇಶ್ವರ! ನನ್ನ ರಾಜ್ಯವನ್ನು ಶತ್ರುಗಳು ಅಪಹರಿಸಿದ್ದಾರೆ. ನಿನ್ನ ಅನುಗ್ರಹದಿಂದ ಶತ್ರುಗಳು ತ್ಯಜಿಸಿದ ಆ ರಾಜ್ಯವು ನನಗೆ ಮರಳಿ ದೊರೆಯಲಿ.

೫೯–೬೦. ಬೇರೆ ಯಾವನಾದರೂ ಮನುಷ್ಯನು ಇಲ್ಲಿಗೆ ಬಂದು ಈ ನಾರಸಿಂಹ ಮಂತ್ರದಿಂದ ನಿನ್ನನ್ನು ಪೂಜಿಸಿದರೆ ಹತ್ತುಸಾವಿರ ಜಪಗಳು ಆದಮೇಲೆ

**ದೇಯಾ ದೇವ ಸಹಸ್ರಾಂತೇ ಯಥಾ ಮಮ ಸುರೇಶ್ವರ ।**
**ತಥೇತಿ ತಂ ಪ್ರತಿಜ್ಞಾಯ ಗತಶ್ಚಾಽದರ್ಶನಂ ಹರಃ ॥ ೬೦ ॥**
**ಸುರಥೋಽಪಿ ನಿಜಂ ರಾಜ್ಯಂ ಪ್ರಾಪ ಹತ್ವಾ ರಣೇ ರಿಪೂನ್ ॥ ೬೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಭೈರವಕ್ಷೇತ್ರಮಾಹಾತ್ಮ್ಯವರ್ಣನಂ"**
**ನಾಮೈಕಪಂಚಾಶದುತ್ತರಶತತಮೋಽಧ್ಯಾಯಃ**

---

ವನಗಿತ್ತಂತೆ ಅವನಿಗೂ ಇಷ್ಟಾರ್ಥವನ್ನು ನೀಡು ಎಂದನು. ಹರನು ಹಾಗೆಯೇ ಆಗಲೆಂದು ಒಪ್ಪಿ ಕಣ್ಮರೆಯಾದನು.

೬೧. ಸುರಥನೂ ಸಮರದಲ್ಲಿ ಶತ್ರುಗಳನ್ನು ಸದೆಬಡಿದು ತನ್ನ ರಾಜ್ಯವನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭೈರವಕ್ಷೇತ್ರಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಪಂಚಾಶದುತ್ತರಶತತಮೋಽಧ್ಯಾಯಃ

## ಚಕ್ರಪಾಣಿಮಾಹಾತ್ಮ್ಯವರ್ಣನಂ

**ಋಷಯ ಊಚುಃ :—**

**ಅಸಂಖ್ಯಾತಾನಿ ತೀರ್ಥಾನಿ ತ್ವಯೋಕ್ತಾಽನ್ಯತ್ರ ಸೂತಜ ।**
**ದೇವ ಮಾನುಷ ಜಾತಾನಿ ದೇವತಾಯತನಾನಿ ಚ ।**
**ತಥಾ ವಾನರಜಾತಾನಿ ರಾಕ್ಷಸಸ್ಥಾಪಿತಾನಿ ಚ ॥ ೧ ॥**
**ಸೂತಪುತ್ರ ವದಾಽಸ್ಮಾಕಂ ಯೈರ್ದೃಷ್ಟೈಃ ಸ್ಪರ್ಶಿತೈರಪಿ ।**
**ಸರ್ವೇಷಾಂ ಲಭ್ಯತೇ ಪೂರ್ಣಂ ಫಲಂ ಚೇಪ್ಸಿತಮತ್ರ ಚ ॥ ೨ ॥**

**ಸೂತ ಉವಾಚ :—**

**ಸತ್ಯಮೇತನ್ಮಹಾಭಾಗಾಸ್ತತ್ರ ಸಂಖ್ಯಾ ನ ವಿದ್ಯತೇ ।**
**ತೀರ್ಥಾನಾಂ ಚೈವ ಲಿಂಗಾನಾಮಾಶ್ರಮಾಣಾಂ ತಥೈವ ಚ ॥ ೩ ॥**
**ತತ್ರ ಯಃ ಕುರುತೇ ಸ್ನಾನಂ ಶಂಖತೀರ್ಥೇ ಸಮಾಹಿತಃ ।**
**ಏಕಾದಶ್ಯಾಂ ವಿಶೇಷೇಣ ಸರ್ವೇಷಾಂ ಲಭತೇ ಫಲಂ ॥ ೪ ॥**
**ಯಃ ಪಶ್ಯತಿ ನರೋ ಭಕ್ತ್ಯಾ ತತ್ರೈಕಾದಶರುದ್ರಕಂ ।**
**ಸಿದ್ಧೇಶ್ವರಸಮಂ ತೇನ ದೃಷ್ಟಾಃ ಸರ್ವೇ ಮಹೇಶ್ವರಾಃ ॥ ೫ ॥**

---

### ಕನ್ನಡದ ಅನುವಾದ

#### ಚಕ್ರಪಾಣಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಲೆಕ್ಕವಿಲ್ಲದಷ್ಟು ತೀರ್ಥಗಳನ್ನೂ, ದೇವತೆಗಳು, ಮನುಷ್ಯರು, ಕಪಿಗಳು, ರಾಕ್ಷಸರು ಇವರು ನಿರ್ಮಿಸಿರುವ ದೇವಾಲಯಗಳನ್ನೂ ಹೇಳಿರುವೆ.

೨. ಇವುಗಳಲ್ಲಿ ಯಾವ ತೀರ್ಥಗಳ ದರ್ಶನ ಸ್ಪರ್ಶಗಳಿಂದ ಸಮಸ್ತ ತೀರ್ಥಗಳ ಇಷ್ಟಫಲವು ಸಂಪೂರ್ಣವಾಗಿ ಲಭಿಸುವುದು? ಅವುಗಳನ್ನು ನಮಗೆ ಹೇಳು.

೩. ಸೂತನು ಹೇಳುತ್ತಾನೆ:—ಮಹಾತ್ಮರೆ! ಇದು ನಿಜ. ತೀರ್ಥ, ಲಿಂಗ, ಆಶ್ರಮಗಳು ಎಷ್ಟಿವೆ ಎಂಬ ಸಂಖ್ಯೆಯೇ ಗೊತ್ತಿಲ್ಲ.

೪. ಆ ಕ್ಷೇತ್ರದಲ್ಲಿರುವ ಶಂಖತೀರ್ಥದಲ್ಲಿ ಏಕಾದಶೀ ದಿನ ಮಿಂದವನು ಸಕಲ ತೀರ್ಥಗಳ ಫಲವನ್ನು ಪಡೆಯುವನು.

೫. ಅಲ್ಲಿ ಸಿದ್ಧೇಶ್ವರನಂತಿರುವ ಏಕಾದಶರುದ್ರರನ್ನು ಭಕ್ತಿಯಿಂದ ದರ್ಶನ ಮಾಡಿದವನು ಸಕಲ ಮಹೇಶ್ವರರನ್ನು ನೋಡಿದವನಂತಾಗುವನು.

ಯಃ ಪಶ್ಯತಿ ವಟಾದಿತ್ಯಂ ಷಷ್ಠ್ಯಾಂ ಚೈತ್ರೇ ವಿಶೇಷತಃ ।
ಭಾಸ್ಕರಾಃ ಕೃತ್ಸ್ನಶೋ ದೃಷ್ಟಾಸ್ತೇನ ತತ್ರ ಹಿ ಸಂಸ್ಥಿತಾಃ ॥ ೬ ॥
ಮಾಹಿತ್ಥಾಂ ಪಶ್ಯತಿ ತಥಾ ಯೋ ದೇವೀಂ ಶ್ರದ್ಧಯಾನ್ವಿತಾಃ ।
ತೇನ ದುರ್ಗಾಃ ಸಮಸ್ತಾಸ್ತಾ ವೀಕ್ಷಿತಾ ನಾಽತ್ರಸಂಶಯಃ ॥ ೭ ॥
ಯಃ ಪಶ್ಯತಿ ಗಣೇಶಂ ಚ ಸ್ವರ್ಗದ್ವಾರಪ್ರದಂ ನೃಣಾಂ ।
ಸರ್ವೇ ವಿನಾಯಕಾಸ್ತೇನ ದೃಷ್ಟಾಃ ಸ್ಯುರ್ನಾಽತ್ರ ಸಂಶಯಃ ॥ ೮ ॥
ಶರ್ಮಿಷ್ಠಾಸ್ಥಾಪಿತಾಂ ಗೌರೀಂ ಯೋ ಜ್ಯೇಷ್ಠಾಂ ತತ್ರ ಪಶ್ಯತಿ ।
ತೇನ ಗೌರ್ಯಃ ಸಮಸ್ತಾಸ್ತಾ ವೀಕ್ಷಿತಾ ದ್ವಿಜಸತ್ತಮಾಃ ॥ ೯ ॥
ಚಕ್ರಪಾಣಿಂ ಚ ಯಃ ಪಶ್ಯೇತ್ಪ್ರಾತರುತ್ಥಾಯ ಮಾನವಃ ।
ವಾಸುದೇವಾಃ ಸಮಸ್ತಾಶ್ಚ ತೇನ ತತ್ರ ನಿರೀಕ್ಷಿತಾಃ ॥ ೧೦ ॥

ಋಷಯ ಊಚುಃ:—

ತ್ವಯಾ ಸೂತ ತಥಾಽಸ್ಮಾಕಂ ಚಕ್ರಪಾಣಿಶ್ಚ ಯಃ ಸ್ಥಿತಃ ।
ನಾಖ್ಯಾತಃ ಸ ಕಥಂ ತತ್ರ ವಿಸ್ಮೃತಃ ಕಿಂ ವದಸ್ವ ನಃ ।
ಕಸ್ಮಿನ್ಕಾಲೇ ವಿಶೇಷೇಣ ಸ ದ್ರಷ್ಟವ್ಯೋ ಮುನೀಷಿಭಿಃ ॥ ೧೧ ॥

ಸೂತ ಉವಾಚ:—

ಅರ್ಜುನೇನೈಷ ವಿಪ್ರೇಂದ್ರಾಃ ಕ್ಷೇತ್ರೇಽತ್ರೈವ ಪ್ರತಿಷ್ಠಿತಃ ।
ಶಯನೇ ಬೋಧನೇ ಚೈವ ಪ್ರಾತರುತ್ಥಾಯ ಮಾನವಃ ॥ ೧೨ ॥

---

೬. ಚೈತ್ರಮಾಸದ ಷಷ್ಠೀ ದಿನ ವಟಾದಿತ್ಯನನ್ನು ನೋಡಿದವನು ಅಲ್ಲಿರುವ ದ್ವಾದಶಾದಿತ್ಯರನ್ನು ನೋಡಿದವನಂತೆ ಆಗುವನು.

೭. ಅಲ್ಲಿ ಮಾಹಿತ್ಥಾದೇವಿಯನ್ನು ಶ್ರದ್ಧೆಯಿಂದ ನೋಡಿದವರು ಸಕಲ ದೇವಿಯರನ್ನು ದರ್ಶನಮಾಡಿದವರಂತಾಗುವರು.

೮. ಮನುಜರಿಗೆ ಸ್ವರ್ಗದ್ವಾರವನ್ನೀಯುವ ಗಣೇಶನನ್ನು ನೋಡಿದವನು ನಿಶ್ಚಯವಾಗಿಯೂ ಸಮಸ್ತ ವಿನಾಯಕರನ್ನು ನೋಡಿದವನಂತಾಗುವನು.

೯. ಶರ್ಮಿಷ್ಠೆಯು ಪ್ರತಿಷ್ಠೆಮಾಡಿರುವ ಜ್ಯೇಷ್ಠಗೌರಿಯನ್ನು ದರ್ಶನಗೈದವನು ಸಮಸ್ತಗೌರಿಯರನ್ನು ನೋಡಿದವನಂತಾಗುವನು.

೧೦. ಬೆಳಗ್ಗೆ ಎದ್ದು ಚಕ್ರಪಾಣಿಯನ್ನು ಕಂಡ ಮನುಷ್ಯನು ಸಮಸ್ತ ವಾಸುದೇವರನ್ನು ದರ್ಶನಮಾಡಿದವನಂತಾಗುವನು.

೧೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಾಗೆ ಅಲ್ಲಿ ನೆಲೆಸಿರುವ ಚಕ್ರಪಾಣಿಯನ್ನು ಏಕೆ ನಮಗೆ ಹೇಳಲಿಲ್ಲ. ಮರೆತೆಯೋ ಏನೋ? ಜ್ಞಾನಿಗಳು ಅವನನ್ನು ಯಾವಾಗ ನೋಡಬೇಕು? ನಮಗೆ ಹೇಳು.

೧೨–೧೩. ಸೂತನು ಹೇಳುತ್ತಾನೆ:—ವಿಪ್ರವರ್ಯರೆ! ಅರ್ಜುನನು ಆ ಚಕ್ರಪಾಣಿಯನ್ನು ಇಲ್ಲಿ ಪ್ರತಿಷ್ಠೆಮಾಡಿದ್ದಾನೆ. ಶಯನ ಮತ್ತು ಉತ್ಥಾನ

ಸ್ನಾನಂ ಕೃತ್ವಾ ಸುಭಕ್ತ್ಯಾ ಚ ಯಃ ಪಶ್ಯೇಚ್ಚಕ್ರಪಾಣಿನಂ ।
ಬ್ರಹ್ಮಹತ್ಯಾದಿ ಪಾಪಾನಿ ತಸ್ಯ ನಶ್ಯಂತಿ ತತ್ಕ್ಷಣಾತ್ ॥ ೧೩ ॥
ಭೂಭಾರೋತ್ತಾರಣಾರ್ಥಾಯ ಧರ್ಮಸಂಸ್ಥಾಪನಾಯ ಚ ।
ಬ್ರಹ್ಮಣಾಽವತಾರಿತೌ ವಿಪ್ರಾ ನರನಾರಾಯಣಾವುಭೌ ॥ ೧೪ ॥
ಕೃಷ್ಣಾರ್ಜುನೌ ತದಾ ಮರ್ತ್ಯೇ ದ್ವಾಪರಾಂತೇ ದ್ವಿಜೋತ್ತಮಾಃ ।
ಅವತೀರ್ಣೌ ಧರಾಪೃಷ್ಠೇ ಮಿಥಃಸ್ನೇಹಾನುಗೌ ತದಾ ।
ನರನಾರಾಯಣಾವೇತೌ ಸ್ವಯಮೇವ ವ್ಯವಸ್ಥಿತೌ ॥ ೧೫ ॥
ಯಥಾ ರಕ್ಷೋವಿನಾಶಾಯ ರಾಮೋ ದಶರಥಾತ್ಮಜಃ ।
ಅವತೀರ್ಣೋ ಧರಾಪೃಷ್ಠೇ ತದ್ವತ್ಕೃಷ್ಣೋಽಪಿ ಚಾಪರಃ ॥ ೧೬ ॥
ಯದಾ ಪಾರ್ಥಃ ಸಮಾಯಾತಸ್ತೀರ್ಥಯಾತ್ರಾಂ ಪ್ರತಿ ದ್ವಿಜಾಃ ।
ಯುಧಿಷ್ಠಿರಸಮಾದೇಶಾಚ್ಚಕ್ರಪ್ರಸ್ಥಾತ್ಪುರೋತ್ತಮಾತ್ ॥ ೧೭ ॥
ದ್ರೌಪದ್ಯಾ ಸಹಿತಂ ದೃಷ್ಟ್ವಾ ರಹಸಿ ಭ್ರಾತರಂ ದ್ವಿಜಂ ।
ಪ್ರೋವಾಚ ಪ್ರಣತೋ ಭೂತ್ವಾ ವಿನಯಾವನತೋಽರ್ಜುನಃ ॥ ೧೮ ॥

ಅರ್ಜುನ ಉವಾಚ :—

ಆಯುಧಾರ್ಥಮಹಂ ಪ್ರಾಪ್ತಃ ಸಾಂಪ್ರತಂ ಪಾರ್ಥಿವೋತ್ತಮ ।
ದ್ವಿಜಧೇನುವಿಮೋಕ್ಷಾಯ ಮಮಾಜ್ಞಾಂ ದೇಹಿ ಪಾರ್ಥಿವ ॥ ೧೯ ॥

---

ದ್ವಾದಶೀ ದಿನ ಬೆಳಗ್ಗೆ ಎದ್ದು ಮಿಂದು ಭಕ್ತಿಯಿಂದ ಚಕ್ರಪಾಣಿಯನ್ನು ದರ್ಶನ ಗೈದವನ ಬ್ರಹ್ಮಹತ್ಯಾದಿ ಪಾಪಗಳು ಕೂಡಲೆ ನಾಶವಾಗುವುವು.

೧೪–೧೫. ಬ್ರಹ್ಮನು ಭೂಭಾರದ ಪರಿಹಾರಕ್ಕಾಗಿಯೂ, ಧರ್ಮದ ಸ್ಥಾಪನೆಗಾಗಿಯೂ ಭೂಲೋಕದಲ್ಲಿ ಅವತಾರ ಮಾಡಿದ ಕೃಷ್ಣಾರ್ಜುನರು ದ್ವಾಪರಾಂತ್ಯದಲ್ಲಿ ಪರಸ್ಪರ ಸ್ನೇಹದಿಂದ ಇಲ್ಲಿ ನರನಾರಾಯಣರೂಪದಿಂದ ತಾವೇ ನೆಲೆಸಿದರು.

೧೬. ರಾಕ್ಷಸರ ನಾಶಕ್ಕಾಗಿ ದಶರಥನ ಮಗನಾದ ರಾಮನು ಅವತರಿಸಿದಂತೆ ಕೃಷ್ಣನೂ ಅವತರಿಸಿದ್ದಾನೆ.

೧೭. ದ್ವಿಜರೆ! ಅರ್ಜುನನು ಯುಧಿಷ್ಠಿರನ ಆಜ್ಞೆಯಂತೆ ಇಂದ್ರಪ್ರಸ್ಥ ಪುರದಿಂದ ತೀರ್ಥಯಾತ್ರೆಗಾಗಿ ಹೊರಟನು.

೧೮. ಆ ಅರ್ಜುನನು ದ್ರೌಪದಿಯೊಡನೆ ಏಕಾಂತದಲ್ಲಿರುವ ಸಹೋದರನಾದ ಧರ್ಮರಾಜನನ್ನು ಕಂಡು ವಿನಯದಿಂದ ಅವನನ್ನು ವಂದಿಸಿ ಇಂತೆಂದನು.

೧೯. ಅರ್ಜುನನು ಹೇಳುತ್ತಾನೆ:—ಮಹಾರಾಜ! ನಾನು ಬ್ರಾಹ್ಮಣನ ಗೋವುಗಳನ್ನು ಬಿಡಿಸುವುದಕ್ಕಾಗಿ ಈಗ ಆಯುಧಗಳನ್ನು ತೆಗೆದುಕೊಳ್ಳಲು ಇಲ್ಲಿಗೆ ಬಂದಿರುವೆನು. ನನಗೆ ಅಪ್ಪಣೆಯನ್ನು ಕೊಡು.

ಯುಧಿಷ್ಠಿರ ಉವಾಚ:—

ಗಚ್ಛಾರ್ಜುನ ದ್ರುತಂ ತತ್ರ ನೀಯಂತೇ ಯತ್ರ ತಸ್ಕರೈಃ ।
ಧೇನವೋ ದ್ವಿಜವರ್ಯಸ್ಯ ತಾ ಮೋಕ್ಷಾಯ ಧನಂಜಯ ॥ ೨೦ ॥
ತೀರ್ಥಯಾತ್ರಾಂ ತತೋ ಗಚ್ಛ ಯಾವದ್ದ್ವಾದಶವತ್ಸರಾನ್ ।
ತತಃ ಪಾಪವಿನಿರ್ಮುಕ್ತಃ ಸಮೇಷ್ಯಸಿ ಮಮಾಂತಿಕಂ ॥ ೨೧ ॥
ಯಃ ಸದಾರಂ ನರಂ ಪಶ್ಯೇದೇಕಾಂತಸ್ಥಂ ತು ಬುದ್ಧಿಮಾನ್ ।
ಅಪಿ ಚಾಽತ್ಯಂತಪಾಪಃಸ್ಯಾತ್ಕಿಂ ಪುನರ್ನಿಜಬಾಂಧವಂ ॥ ೨೨ ॥
ತಸ್ಮಾನ್ನ ವೀಕ್ಷಯೇತ್ಕಂಚಿದೇಕಾಂತಸ್ಥಂ ಸಭಾರ್ಯಕಂ ।
ಬಾಂಧವಂ ಚ ವಿಶೇಷೇಣ ಯ ಇಚ್ಛೇಚ್ಛುಭಮಾತ್ಮನಃ ॥ ೨೩ ॥
ಸ ತಥೇತಿ ಪ್ರತಿಜ್ಞಾಯ ರಥಮಾರುಹ್ಯ ಸತ್ವರಂ ।
ಧನುರಾದಾಯ ಬಾಣಾಂಶ್ಚ ಜಗಾಮ ತದನಂತರಂ ॥ ೨೪ ॥
ಯೇನ ಮಾರ್ಗೇಣ ತಾ ಗಾವೋ ನೀಯಂತೇ ತಸ್ಕರೈರ್ಬಲಾತ್ ।
ತಿರಸ್ಕೃತ್ಯ ದ್ವಿಜಾನ್ ಸರ್ವಾಂಛಿತಶಸ್ತ್ರಧರೈರ್ದ್ವಿಜಾಃ ॥ ೨೫ ॥
ಅಥ ಹತ್ವಾ ಕ್ಷಣಾಚ್ಚೌರಾನ್ಗಾಃ ಸರ್ವಾಃ ಸ್ವಯಮಾಹೃತಾಃ ।
ಸ್ವಾಃ ಸ್ವಾ ನಿವೇದಯಾಮಾಸ ಬ್ರಾಹ್ಮಣಾನಾಂ ಮಹಾತ್ಮನಾಂ ॥ ೨೬ ॥

---

೨೦. ಯುಧಿಷ್ಠಿರನು ಹೇಳುತ್ತಾನೆ:—ಅರ್ಜುನ! ಕಳ್ಳರು ಬ್ರಾಹ್ಮಣನ ಗೋವುಗಳನ್ನು ತೆಗೆದುಕೊಂಡು ಹೋಗುತ್ತಿರುವ ಸ್ಥಳಕ್ಕೆ ಶೀಘ್ರವಾಗಿ ಹೋಗಿ ಆ ಗೋವುಗಳನ್ನು ಬಿಡಿಸು.

೨೧. ಅನಂತರ ಹನ್ನೆರಡು ವರ್ಷಕಾಲ ತೀರ್ಥಯಾತ್ರೆಯನ್ನು ಮಾಡಿ ಪಾಪರಹಿತನಾಗಿ ನನ್ನ ಹತ್ತಿರಕ್ಕೆ ಬರುವೆ.

೨೨. ಏಕಾಂತದಲ್ಲಿ ಪತ್ನಿಯೊಡನೆ ಸೇರಿರುವ ಮನುಷ್ಯನನ್ನು ನೋಡಿದವನು ಅತ್ಯಂತ ಪಾಪಿಯಾಗುವನು. ತನ್ನ ಸ್ವಂತ ಬಾಂಧವನ ವಿಷಯವನ್ನು ಏನನ್ನು ಹೇಳಲಿ.

೨೩. ಆದುದರಿಂದ ತನಗೆ ಶುಭವನ್ನು ಬಯಸುವ ಮನುಷ್ಯನು ರಹಸ್ಯದಲ್ಲಿ ಪತ್ನಿಯೊಡನೆ ಇರುವ ಪುರುಷನನ್ನು ನೋಡಕೂಡದು. ವಿಶೇಷವಾಗಿ ಬಂಧುವನ್ನು ನೋಡಲೇಬಾರದು.

೨೪–೨೫. ಅರ್ಜುನನು ಹಾಗೆಯೇ ಆಗಲೆಂದು ಒಪ್ಪಿ ಶೀಘ್ರವಾಗಿ ಬಿಲ್ಲು ಬಾಣಗಳನ್ನು ತೆಗೆದುಕೊಂಡು ರಥವನ್ನೇರಿ ಶಸ್ತ್ರವನ್ನು ಧರಿಸಿದ ಕಳ್ಳರು ಬಲಾತ್ಕಾರವಾಗಿ ಬ್ರಾಹ್ಮಣರನ್ನು ತಿರಸ್ಕರಿಸಿ ಗೋವುಗಳನ್ನು ತೆಗೆದುಕೊಂಡು ಹೋಗುತ್ತಿರುವ ದಾರಿಯನ್ನು ಸೇರಿದನು.

೨೬. ಬಳಿಕ ಒಂದು ಕ್ಷಣದಲ್ಲಿ ಆ ಕಳ್ಳರನ್ನು ಕೊಂದು ಸಮಸ್ತ ಗೋವುಗಳನ್ನೂ ತಂದು ಮಹಾತ್ಮರಾದ ಬ್ರಾಹ್ಮಣರಿಗೆ ಅವರವರ ಗೋವುಗಳನ್ನಿತ್ತನು.

ತತಸ್ತೀರ್ಥಾನ್ಯನೇಕಾನಿ ಸ ದೃಷ್ಟ್ವಾ ಯತನಾನಿ ಚ ।
ಕ್ಷೇತ್ರೇಽತ್ರೈವ ಸಮಾಯಾತಃ ಸ್ನಾನಾರ್ಥಂ ಪಾಂಡುನಂದನಃ ॥ ೨೭ ॥
ತೇನ ಪೂರ್ವಮಪಿ ಪ್ರಾಯಸ್ತತ್ಕ್ಷೇತ್ರಮವಲೋಕಿತಂ ।
ದುರ್ಯೋಧನಸಮಾಯುಕ್ತೋ ಯದಾ ತತ್ರ ಸಮಾಗತಃ ॥ ೨೮ ॥
ಅಥ ಸಂಪೂಜಯಾಮಾಸ ಯಲ್ಲಿಂಗಂ ಸ್ಥಾಪಿತಂ ಪುರಾ ।
ಅರ್ಜುನೇಶ್ವರಸಂಜ್ಞಂ ತು ಪುಷ್ಪಧೂಪಾನುಲೇಪನೈಃ ॥ ೨೯ ॥
ಅನ್ಯೇಷಾಂ ಕೌರವೇಂದ್ರಾಣಾಂ ಪಾಂಡವಾನಾಂ ವಿಶೇಷತಃ ॥ ೩೦ ॥
ಅಥ ಸ ಚಿಂತಯಾಮಾಸ ಮನಸಾ ಪಾಂಡುನಂದನಃ ।
ಅಹಂ ನರಃ ಸ್ವಯಂ ಸಾಕ್ಷಾತ್ಕೃಷ್ಣೋ ನಾರಾಯಣಃ ಸ್ವಯಂ ॥ ೩೧ ॥
ತಸ್ಮಾದತ್ರ ಕರಿಷ್ಯಾಮಿ ಚಕ್ರಪಾಣಿಂ ಸುರೇಶ್ವರಂ ।
ಪ್ರಾಸಾದೋ ಮಾನವಶ್ಚೈವ ಯಾದೃಙ್ನಾಸ್ತಿ ಧರಾತಲೇ ॥ ೩೨ ॥
ಕಲ್ಪಾಂತೇಽಪಿ ನ ನಾಶಃ ಸ್ಯಾದಸ್ಯಕ್ಷೇತ್ರಸ್ಯ ಕರ್ಹಿಚಿತ್ ।
ಪ್ರಾಸಾದೋಽಪಿ ತಥಾಽಪ್ಯೇವಮತ್ರ ಕ್ಷೇತ್ರೇ ಭವಿಷ್ಯತಿ ॥ ೩೩ ॥
ಏವಂ ಸ ನಿಶ್ಚಯಂ ಕೃತ್ವಾ ಸ್ವ ಚಿತ್ತೇ ಪಾಂಡವಾಽನುಜಃ ।
ಪ್ರಾಸಾದಂ ನಿರ್ಮಮೇ ಪಶ್ಚಾದ್ವೈಷ್ಣವಂ ದ್ವಿಜಸತ್ತಮಾಃ ॥ ೩೪ ॥
ತತೋ ವಿಪ್ರಾನ್ ಸಮಾಹೂಯ ಚಮತ್ಕಾರಪುರೋದ್ಭವಾನ್ ।
ಪ್ರತಿಷ್ಠಾಂ ಕಾರಯಾಮಾಸ ಮತಂ ತೇಷಾಂ ಸಮಾಶ್ರಿತಃ ॥ ೩೫ ॥

---

೨೭–೨೮. ಅರ್ಜುನನು ತರುವಾಯ ಅನೇಕ ತೀರ್ಥಗಳನ್ನೂ, ದೇವಾಲಯಗಳನ್ನೂ ಸಂದರ್ಶಿಸಿ ಆ ಕ್ಷೇತ್ರಕ್ಕೆ ಸ್ನಾನಕ್ಕಾಗಿ ಬಂದನು. ಅವನು ಹಿಂದೆ ದುರ್ಯೋಧನನೊಡನೆ ಅಲ್ಲಿಗೆ ಬಂದಾಗ ಆ ಕ್ಷೇತ್ರವನ್ನು ನೋಡಿದ್ದನು.

೨೯–೩೦. ಅರ್ಜನನು ತಾನು ಹಿಂದೆ ಸ್ಥಾಪಿಸಿದ ಅರ್ಜುನೇಶ್ವರಲಿಂಗವನ್ನೂ, ಇತರ ಕೌರವರೂ, ಪಾಂಡವರೂ ಪ್ರತಿಷ್ಠೆಮಾಡಿದ ಲಿಂಗಗಳನ್ನೂ ಆರಾಧಿಸಿದನು.

೩೧–೩೨. ತರುವಾಯ ಅವನು ನಾನು ನರನು. ಕೃಷ್ಣನು ನಾರಾಯಣನು. ಆದುದರಿಂದ ಇಲ್ಲಿ ನಾರಾಯಣನನ್ನೂ, ಭೂಮಿಯಲ್ಲಿ ಎಲ್ಲೂ ಇಲ್ಲದ ಆಲಯವನ್ನೂ ಸ್ಥಾಪಿಸುವೆನು ಎಂದಾಲೋಚಿಸಿದನು.

೩೩. ಪ್ರಳಯಕಾಲದವರೆಗೂ ಈ ಕ್ಷೇತ್ರವು ನಾಶವಾಗಲಾರದು. ಇಲ್ಲಿ ದೇವಾಲಯವೂ ಪ್ರಳಯಕಾಲದವರೆಗೆ ಇರುವುದು.

೩೪. ದ್ವಿಜವರ್ಯರೆ! ಅರ್ಜುನನು ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿ ವಿಷ್ಣು ದೇವಾಲಯವನ್ನು ನಿರ್ಮಿಸಿದನು.

೩೫. ಅನಂತರ ಅವನು ಚಮತ್ಕಾರಪುರದ ಬ್ರಾಹ್ಮಣರನ್ನು ಕರೆಯಿಸಿ ಅವರ ಅಭಿಪ್ರಾಯದಂತೆ ಪ್ರತಿಷ್ಠೆಯನ್ನು ಮಾಡಿಸಿದನು.

**ದತ್ವಾ ದಾನಾನ್ಯನೇಕಾನಿ ಶಾಸನಾನಿ ಬಹೂನಿ ಚ ।**
**ಅನ್ಯಚ್ಚ ಪ್ರದದೌ ಪಶ್ಚಾತ್ತೇಷಾಂ ತುಷ್ಟಿದಾಯಕಂ ॥ ೩೬ ॥**
**ತತಃ ಪ್ರೋವಾಚ ತಾನ್ ಸರ್ವಾನ್ ಕೃತಾಂಜಲಿಪುಟಃ ಸ್ಥಿತಃ ।**
**ನರೋಽಹಂ ಬ್ರಾಹ್ಮಣಾಜ್ಜಾತಃ ಪಾಂಡೋರ್ಭಾರ್ಯಾಮಿಮಂ ಪ್ರಪೇದಿವಾನ್ ॥**
**ಮಾನುಷೇಣೈವ ರೂಪೇಣ ತ್ಯಕ್ತ್ವಾ ತಾಂ ಬದರೀಂ ಶುಭಾಂ ।**
**ಪ್ರಸಿದ್ಧ್ಯರ್ಥಂ ಮಯಾ ಚಾಽತ್ರ ಪ್ರಾಸಾದೋಽಯಂ ವಿನಿರ್ಮಿತಃ ।**
**ಮನ್ನಾಮ್ನಾ ನರಸಂಜ್ಞಶ್ಚ ಶ್ರದ್ಧಾಪೂತೇನ ಚೇತಸಾ ॥ ೩೮ ॥**
**ತಸ್ಮಾದೇಷ ಭವದ್ಭಿಶ್ಚ ಚಕ್ರಪಾಣಿರಿತಿ ದ್ವಿಜಾಃ ।**
**ಕೀರ್ತನೀಯಃ ಸದಾ ಯೇನ ಮಮ ನಾಮ ಪ್ರಕಾಶ್ಯತಾಂ ॥ ೩೯ ॥**
**ವಿಷ್ಣುಲೋಕೇ ಧ್ವನಿರ್ಯಾತಿ ಯಾವಚ್ಚಂದ್ರದಿವಾಕರೌ ॥ ೪೦ ॥**
**ತಥಾ ಮಹೋತ್ಸವಃ ಕಾರ್ಯಃ ಶಯನೇ ಬೋಧನೇ ಹರೇಃ ।**
**ಚೈತ್ರಮಾಸೇ ವಿಶೇಷೇಣ ಸಂಪ್ರಾಪ್ತೇ ವಿಷ್ಣುವಾಸರೇ ॥ ೪೧ ॥**
**ಏತೇಷು ತ್ರಿಷು ಲೋಕೇಷು ತ್ಯಕ್ತ್ವೇಮಾಂ ಬದರೀಮಹಂ ।**
**ಪೂಜಾಮಸ್ಯ ಕರಿಷ್ಯಾಮಿ ಸ್ವಯಂ ವಿಷ್ಣೋರ್ದ್ವಿಜೋತ್ತಮಾಃ ॥ ೪೨ ॥**
**ಯಸ್ತತ್ರ ದಿವಸೇ ಮರ್ತ್ಯಃ ಪೂಜಾಮಸ್ಯ ವಿಧಾಸ್ಯತಿ ।**
**ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಂ ಸ ಯಾಸ್ಯತಿ ॥ ೪೩ ॥**

---

೩೬. ಆ ಬ್ರಾಹ್ಮಣರಿಗೆ ಅನೇಕ ದಾನಗಳನ್ನೂ, ಶಾಸನಗಳನ್ನೂ ಕೊಟ್ಟುದು ದಲ್ಲದೆ ಅವರಿಗೆ ಸಂತೋಷವನ್ನುಂಟುಮಾಡುವ ಇತರ ವಸ್ತುಗಳನ್ನೂ ದಾನ ಮಾಡಿದನು.

೩೭–೪೦. ಅನಂತರ ಆ ಅರ್ಜುನನು ಕೈಜೋಡಿಸಿಕೊಂಡು ಆ ಬ್ರಾಹ್ಮಣ ರನ್ನು ಕುರಿತು ಇಂತೆಂದನು. "ಬ್ರಹ್ಮನಿಂದ ಜನಿಸಿದ ನರನಾದ ನಾನು ಬದರಿಕಾಶ್ರಮವನ್ನು ತ್ಯಜಿಸಿ ಪಾಂಡುರಾಜನ ಪತ್ನಿಯಲ್ಲಿ ಮನುಷ್ಯ ರೂಪದಿಂದ ಹುಟ್ಟಿದ್ದೇನೆ. ನಾನು ಇಲ್ಲಿ ಪ್ರಸಿದ್ಧಿಗಾಗಿ ಈ ದೇವಾಲಯವನ್ನು ನಿರ್ಮಿಸಿ ದ್ದೇನೆ. ನೀವು ನರನೆಂಬ ನನ್ನ ಹೆಸರಿನಿಂದ ಈ ವಿಷ್ಣುವನ್ನು ಶ್ರದ್ಧೆಯಿಂದ ಕರೆಯಬೇಕು. ಅದರಿಂದ ನನ್ನ ಹೆಸರು ಯಾವಾಗಲೂ ಪ್ರಕಾಶಗೊಳ್ಳಲಿ. ಚಂದ್ರಸೂರ್ಯರಿರುವವರೆಗೆ ವೈಕುಂಠಲೋಕಕ್ಕೆ ಈ ಧ್ವನಿಯು ಕೇಳಲಿ.

೪೧. ಹಾಗೆಯೇ ನೀವು ಶಯನೋತ್ಥಾನದ್ವಾದಶಿಗಳಲ್ಲಿಯೂ, ಚೈತ್ರ ಮಾಸದ ಹರಿದಿನದಲ್ಲಿಯೂ ಮಹೋತ್ಸವವನ್ನು ಮಾಡಬೇಕು.

೪೨. ನಾನು ಈ ಮೂರು ಲೋಕಗಳಲ್ಲಿ ವಿಖ್ಯಾತವಾದ ಬದರಿಕಾಶ್ರಮವನ್ನು ತ್ಯಜಿಸಿ ಈ ವಿಷ್ಣುವಿಗೆ ಪೂಜೆಯನ್ನು ಮಾಡುತ್ತೇನೆ.

೪೩. ಹಿಂದೆ ಹೇಳಿದ ದಿನಗಳಲ್ಲಿ ಇವನನ್ನು ಪೂಜಿಸಿದ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕಕ್ಕೆ ತೆರಳುವನು.

ತಥಾ ಯೇ ವಾಸುದೇವಸ್ಯ ಕ್ಷೇತ್ರೇ ಕೇಚಿದ್ವ್ಯವಸ್ಥಿತಾಃ ।
ತೇಷಾಂ ಪ್ರದರ್ಶನಂ ಶ್ರೇಯೋ ನಿತ್ಯಂ ದೃಷ್ಟ್ವಾ ಚ ಲಪ್ಸ್ಯತೇ ॥ ೪೪ ॥

ಸೂತ ಉವಾಚ :—

ಬಾಢಮಿತ್ಯೇವ ತೈರುಕ್ತೋ ದಾಶಾರ್ಹಃ ಪಾಂಡುನಂದನಃ ।
ತೇಷಾಂ ತದ್ಭಾರಮಾವೇಶ್ಯ ಪ್ರಶಾಂತೇನಾಂತರಾತ್ಮನಾ ।
ಯಯೌ ತೀರ್ಥಾನಿ ಚಾನ್ಯಾನಿ ಕೃತಕೃತ್ಯಸ್ತತಃ ಪರಂ ॥ ೪೫ ॥
ಏವಂ ತತ್ರ ಸ್ಥಿತೋ ದೇವಶ್ಚಕ್ರಪಾಣಿವಪುರ್ಧರಃ ।
ಸ್ವಯಮೇವ ಹೃಷೀಕೇಶೋ ಜಂತೂನಾಂ ಪಾಪನಾಶನಃ ॥ ೪೬ ॥
ಅದ್ಯಾಽಪಿ ಚ ಕಲಾ ವಿಷ್ಣೋಃ ಪ್ರಾಪ್ತೇ ಚೈಕಾದಶೀ ತ್ರಯೇ ।
ಪೂರ್ವೋಕ್ತೇನ ವಿಧಾನೇನ ತಸ್ಮಾಚ್ಛ್ರದ್ಧಾ ಸಮನ್ವಿತೈಃ ।
ಸದೈವ ಪೂಜನೀಯಶ್ಚ ವಂದನೀಯೋ ವಿಶೇಷತಃ ॥ ೪೭ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಕ್ರಪಾಣಿಮಾಹಾತ್ಮ್ಯವರ್ಣನಂ" ನಾಮ
ದ್ವಿಪಂಚಾಶದುತ್ತರಶತತಮೋಽಧ್ಯಾಯಃ**

---

೪೪. ಹಾಗೆಯೇ ಈ ವಿಷ್ಣುಕ್ಷೇತ್ರದಲ್ಲಿ ವಾಸಿಸುವವರನ್ನು ನಿತ್ಯವೂ ನೋಡುವವನು ಶ್ರೇಯಸ್ಸನ್ನು ಪಡೆಯುವನು."

೪೫. ಸೂತನು ಹೇಳುತ್ತಾನೆ:—ಆ ಬ್ರಾಹ್ಮಣರು ಆ ಅರ್ಜುನನ ಮಾತನ್ನು ಒಪ್ಪಲು ಅವನು ಆ ಕ್ಷೇತ್ರದ ಭಾರವನ್ನು ಆ ಬ್ರಾಹ್ಮಣರಿಗೆ ವಹಿಸಿ ಧನ್ಯನಾಗಿ ಶಾಂತಮನಸ್ಸಿನಿಂದ ಇತರ ತೀರ್ಥಗಳಿಗೆ ತೆರಳಿದನು."

೪೬. ಹೀಗೆ ವಿಷ್ಣುವು ಅಲ್ಲಿ ಸಕಲಜಂತುಗಳ ಪಾಪಗಳನ್ನು ನೀಗಿಸುವ ಚಕ್ರಪಾಣಿ ರೂಪವನ್ನು ತಾಳಿ ನೆಲೆಸಿದನು.

೪೭. ಈಗಲೂ ಹಿಂದೆ ಹೇಳಿದ ಆ ಮೂರು ಏಕಾದಶೀ ದಿನಗಳಲ್ಲಿ ವಿಷ್ಣುವಿನ ಕಲೆಯು ಅಲ್ಲಿರುವುದು. ಆದುದರಿಂದ ಜನರು ಹಿಂದೆ ಹೇಳಿದ ವಿಧಿಯಿಂದ ಶ್ರದ್ಧೆಯಿಂದ ಯಾವಾಗಲೂ ಆ ಚಕ್ರಪಾಣಿಯನ್ನು ಪೂಜಿಸಿ ನಮಸ್ಕರಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಕ್ರಪಾಣಿಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಪಂಚಾಶದುತ್ತರಶತತಮೋಽಧ್ಯಾಯಃ

## ಅಪ್ಸರಃಕುಂಡೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ತಥಾಽನ್ಯದಪಿ ತತ್ರಾಽಸ್ತಿ ರೂಪತೀರ್ಥಮನುತ್ತಮಂ ।**
**ಯತ್ರ ಸ್ನಾತೋ ನರಃ ಸಮ್ಯಗ್ವಿರೂಪೋ ರೂಪವಾನ್ ಭವೇತ್ ॥ ೧ ॥**
**ಪೂರ್ವಂ ಭಗವತಾ ತೇನ ಬ್ರಹ್ಮಣಾ ಲೋಕಕರ್ತೃಣಾ ।**
**ಸೃಷ್ಟಿಂ ಕೃತ್ವಾ ಚ ವಿಸ್ತೀರ್ಣಾಂ ಯಥೋಕ್ತಾಂ ಚ ಚತುರ್ವಿಧಾಂ ॥ ೨ ॥**
**ತತಃ ಸ ಚಿಂತಯಾಮಾಸ ರೂಪಸಂಚಯಸಂಯುತಾಂ ।**
**ಏಕಾಮಪ್ಸರಸಂ ದಿವ್ಯಾಂ ದೇವಮಾಯಾಂ ಸೃಜಾಮ್ಯಹಂ ॥ ೩ ॥**
**ತತಶ್ಚ ಸರ್ವದೇವಾನಾಂ ಸಮಾದಾಯ ತಿಲಂ ತಿಲಂ ।**
**ರೂಪಂ ಚ ನಿರ್ಮಮೇ ಪಶ್ಚಾದತ್ಯಾಶ್ಚರ್ಯಮಯೀಂ ಚ ತಾಂ ॥ ೪ ॥**
**ಯಾಂ ದೃಷ್ಟ್ವಾ ಕ್ಷೋಭಮಾಪನ್ನಃ ಸ್ವಯಮೇವ ಪಿತಾಮಹಃ ॥ ೫ ॥**

---

### ಕನ್ನಡದ ಅನುವಾದ

#### ಅಪ್ಸರಃಕುಂಡೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ಆ ಕ್ಷೇತ್ರದಲ್ಲಿ ರೂಪತೀರ್ಥವೆಂಬ ಇನ್ನೊಂದು ಉತ್ತಮ ತೀರ್ಥವಿರುವುದು. ಅಲ್ಲಿ ಮಿಂದ ಕುರೂಪಿಯೂ ಸುಂದರನಾಗುವನು.

೨–೩. ಹಿಂದೆ ಲೋಕವನ್ನು ಸೃಷ್ಟಿಸುವ ಬ್ರಹ್ಮನು ನಾಲ್ಕು ವಿಧವಾದ ಸೃಷ್ಟಿಯನ್ನುಮಾಡಿ ದೇವತೆಗಳಿಗೂ ಮೋಹವನ್ನುಂಟುಮಾಡುವ ಸುಂದರಿಯಾದ ಓರ್ವ ದಿವ್ಯ ಅಪ್ಸರೆಯನ್ನು ಸೃಷ್ಟಿಸುವೆನೆಂದು ಆಲೋಚಿಸಿದನು.

೪. ತರುವಾಯ ಪಿತಾಮಹನು ಸಮಸ್ತ ದೇವತೆಗಳ ರೂಪದ ಸ್ವಲ್ಪ ಸ್ವಲ್ಪ ಭಾಗವನ್ನು ತೆಗೆದುಕೊಂಡು ಅತ್ಯಾಶ್ಚರ್ಯವನ್ನುಂಟುಮಾಡುವ ಆ ಅಪ್ಸರೆಯನ್ನು ಸೃಷ್ಟಿಸಿದನು.

೫. ಬಳಿಕ ಅವಳನ್ನು ನೋಡಿ ಬ್ರಹ್ಮನು ತಾನೇ ಚಪಲಚಿತ್ತನಾದನು.

ತತಸ್ತಾಂ ಪ್ರೇಷಯಾಮಾಸ ಕೈಲಾಸಂ ಪ್ರತಿ ಪದ್ಮಜಃ ।
ಗಚ್ಛ ದೇವಿ ಮಹಾದೇವಂ ಪ್ರಣಮಸ್ವ ಶುಚಿ ಸ್ಮಿತೇ ॥ ೬ ॥
ತತಃ ಸಾ ಸತ್ವರಂ ಗತ್ವಾ ಕೈಲಾಸಂ ಪರ್ವತೋತ್ತಮಂ ।
ಅಪಶ್ಯಚ್ಛಂಕರಂ ತತ್ರ ನಿರ್ವಿಷ್ಟಂ ಪಾರ್ವತೀಸಮಂ ॥ ೭ ॥
ಶಂಕರೋಽಪಿ ಚ ತಾಂ ದೃಷ್ಟ್ವಾ ವಿಸ್ಮಯಂ ಪರಮಂ ಗತಃ ।
ಸುದೃಷ್ಟಾಂ ನಾಽಕರೋದ್ಭೀತ್ಯಾ ಪಾರ್ಶ್ವಸ್ಥಾಂ ವೀಕ್ಷ್ಯ ಪಾರ್ವತೀಂ ॥ ೮ ॥
ತತಃ ಪ್ರದಕ್ಷಿಣಾಂ ಚಕ್ರೇ ಸಾ ಪ್ರಣಮ್ಯ ಮಹೇಶ್ವರಂ ।
ಶ್ರದ್ಧಯಾ ಪರಯಾಯುಕ್ತಾ ಕೃತಾಂಜಲಿಪುಟಾ ಸ್ಥಿತಾ ॥ ೯ ॥
ಯಾವದ್ದಕ್ಷಿಣಪಾರ್ಶ್ವಸ್ಥಾ ತಾವದ್ವಕ್ತ್ರಂ ಸ ದಕ್ಷಿಣಂ ।
ಪ್ರಚಕಾರ ಮಹಾದೇವಸ್ತದುಪಾಕೃಷ್ಟಲೋಚನಃ ॥ ೧೦ ॥
ಪಶ್ಚಿಮಾಯಾಂ ಯದಾ ಸಾಽಭೂತ್ಪ್ರದಕ್ಷಿಣವಶಾಚ್ಛುಭಾ ।
ಪಶ್ಚಿಮಂ ವದನಂ ತೇನ ತದರ್ಥಂ ಚ ಕೃತಂ ತತಃ ॥ ೧೧ ॥
ಏವಮುತ್ತರ ಸಂಸ್ಥಾಯಾಂ ತಸ್ಯಾಂ ದೇವೇನ ಶಂಭುನಾ ।
ಉತ್ತರಂ ವದನಂ ಕ್ಲೃಪ್ತಂ ಗೌರೀಭೀತೇನ ಚೇತಸಾ ।
ನ ಗ್ರೀವಾಂ ಚಾಲಯಾಮಾಸ ಕಥಂಚಿದಪಿ ಸ ದ್ವಿಜಾಃ ॥ ೧೨ ॥

---

೬. ಅವನು, "ದೇವಿ! ನೀನು ಮಹಾದೇವನೆಡೆಗೆ ಹೋಗಿ ಅವನನ್ನು ವಂದಿಸು" ಎಂದು ಹೇಳಿ ಅವಳನ್ನು ಕೈಲಾಸ ಪರ್ವತಕ್ಕೆ ಕಳುಹಿಸಿದನು.

೭. ತರುವಾಯ ಅವಳು ಶೀಘ್ರವಾಗಿ ಕೈಲಾಸ ಪರ್ವತವನ್ನು ಸೇರಿ ಅಲ್ಲಿ ಪಾರ್ವತಿಯೊಡನೆ ಕುಳಿತಿರುವ ಶಂಕರನನ್ನು ಕಂಡಳು.

೮. ಶಂಕರನೂ ಅವಳನ್ನು ಕಂಡು ಅತ್ಯಾಶ್ಚರ್ಯಗೊಂಡನು. ಆದರೆ ಪಕ್ಕದಲ್ಲಿರುವ ಪಾರ್ವತಿಯನ್ನು ನೋಡಿ ಹೆದರಿಕೆಯಿಂದ ಅವಳನ್ನು ಚೆನ್ನಾಗಿ ನೋಡಲಿಲ್ಲ.

೯. ಬಳಿಕ ಆ ಅಪ್ಸರೆಯು ಮಹೇಶ್ವರನನ್ನು ಅತಿ ಶ್ರದ್ಧೆಯಿಂದ ಪ್ರದಕ್ಷಿಣೆ ಮಾಡಿ ಕೈಮುಗಿದುಕೊಂಡು ನಿಂತಳು.

೧೦. ಮಹಾದೇವನು ಆ ಅಪ್ಸರೆಯು ಬಲಭಾಗದಲ್ಲಿರುವಾಗ ಅವಳನ್ನು ನೋಡಲು ಬಲಗಡೆ ಒಂದು ಮುಖವನ್ನು ಸೃಷ್ಟಿಸಿಕೊಂಡನು.

೧೧. ಅವಳು ಪ್ರದಕ್ಷಿಣೆ ಮಾಡುವಾಗ ಪಶ್ಚಿಮದಲ್ಲಿರಲು ಅವಳನ್ನು ನೋಡುವುದಕ್ಕಾಗಿ ಮತ್ತೊಂದು ಮುಖವನ್ನು ನಿರ್ಮಿಸಿದನು.

೧೨. ಅವಳು ಉತ್ತರದಿಕ್ಕಿನಲ್ಲಿರಲು ಉತ್ತರಾಭಿಮುಖವಾಗಿ ಒಂದು ಮುಖವನ್ನು ಸೃಷ್ಟಿಸಿದನು. ಆದರೆ ಅವನು ಗೌರಿಯ ಭಯದಿಂದ ಕುತ್ತಿಗೆಯನ್ನು ಸ್ವಲ್ಪವೂ ಅಲ್ಲಾಡಿಸಲಿಲ್ಲ.

**ಏತಸ್ಮಿನ್ನಂತರೇ ತತ್ರ ನಾರದೋ ಮುನಿಪುಂಗವಃ ।**
**ಅಬ್ರವೀತ್ಪಾರ್ವತೀಂ ಪಶ್ಚಾತ್ಪ್ರಣಿಪತ್ಯ ಮಹೇಶ್ವರಂ ॥ ೧೩ ॥**

**ನಾರದ ಉವಾಚ :—**

**ಪಶ್ಯ ಪಾರ್ವತಿ ತೇ ಪತ್ಯುಶ್ಚೇಷ್ಟಿತಂ ಗರ್ಹಿತಂ ಯಥಾ ।**
**ದೃಷ್ಟ್ವಾ ರೂಪವತೀಂ ನಾರೀಂ ಕೃತಂ ಮುಖಚತುಷ್ಟಯಂ ॥ ೧೪ ॥**
**ಅಹಮೇತದ್ವಿಜಾನಾಮಿ ಸ ತ್ವಯಾ ಸದೃಶೀ ಕ್ವಚಿತ್ ।**
**ಅಸ್ತಿ ನಾರೀ ತಥಾಽನ್ಯೋಽಪಿ ವಿಜಾನಾತಿ ಸುರೇಶ್ವರಿ ॥ ೧೫ ॥**
**ಹಾಸ್ಯಸ್ಯ ಪದವೀಮದ್ಯ ತ್ವಂ ಗಮಿಷ್ಯಸಿ ಪಾರ್ವತಿ ।**
**ಸರ್ವಾಸಾಂ ದೇವಪತ್ನೀನಾಂ ಜ್ಞಾತ್ವಾಽನ್ಯಾಸಕ್ತಮೀಶ್ವರಂ ॥ ೧೬ ॥**
**ಏತದ್ದೇವಿ ವಿಜಾನಾಸಿ ಯಾದೃಕ್ಚಿತ್ತಂ ಶಿವೋದ್ಭವಂ ।**
**ಅಸ್ಯಾ ಉಪರಿ ವೇಶ್ಯಾಯಾ ನಿಂದಿತಾಯಾ ವಿಚಕ್ಷಣೈಃ ॥ ೧೭ ॥**
**ಸಮಾದಾಯ ನಿಜೇ ಹರ್ಮ್ಯೇ ಏತಾಂ ಸಂಸ್ಥಾಪಯಿಷ್ಯತಿ ।**
**ಪರಂ ಲಜ್ಜಾಸಮೋಪೇತೋ ನಾ ಬ್ರವೀಚ್ಚ ವಚಃ ಶುಭೇ ॥ ೧೮ ॥**

**ಸೂತ ಉವಾಚ :—**

**ನಾರದಸ್ಯ ವಚಃ ಶ್ರುತ್ವಾ ದೃಷ್ಟ್ವಾ ಕಾಂತಂ ಚತುರ್ಮುಖಂ ।**
**ಕ್ರೋಧೇನ ಮಹತಾ ವಿಷ್ಟಾ ವಿಕೃತಂ ವೀಕ್ಷ್ಯ ತಂ ಹರಂ ॥ ೧೯ ॥**

---

೧೩. ಈ ಸಮಯದಲ್ಲಿ ನಾರದ ಮುನಿವರ್ಯನು ಮಹೇಶ್ವರನನ್ನು ವಂದಿಸಿ ಗೌರಿಯನ್ನು ಕುರಿತು ಇಂತೆಂದನು.

೧೪. ನಾರದನು ಹೇಳುತ್ತಾನೆ:—ಪಾರ್ವತಿ! ನಿನ್ನ ಪತಿಯ ನಿಂದ್ಯವಾದ ಕೆಲಸವನ್ನು ನೋಡು. ಸುಂದರಿಯಾದ ಓರ್ವ ಹೆಂಗಸನ್ನು ನೋಡಿ ನಾಲ್ಕು ಮುಖಗಳನ್ನು ಸೃಷ್ಟಿಸಿಕೊಂಡಿದ್ದಾನೆ.

೧೫. ನಾನು ಈ ಹೆಂಗಸು ನಿನಗೆ ಒಂದು ವಿಷಯದಲ್ಲಿಯೂ ಸಮಾನಳಲ್ಲ ವೆಂಬುದನ್ನು ಅರಿತಿರುವೆನು. ಸುರೇಶ್ವರಿ! ಇತರರೂ ಹಾಗೆಯೇ ತಿಳಿದಿದ್ದಾರೆ.

೧೬. ಪಾರ್ವತಿ! ಈಗ ನೀನು ನಿನ್ನ ಪತಿಯು ಅನ್ಯಸ್ತ್ರೀಯಲ್ಲಿ ಪ್ರೀತಿ ಯುಳ್ಳವನಾಗಿರುವುದನ್ನರಿತ ಎಲ್ಲಾ ದೇವಾಂಗನೆಯರ ಹಾಸ್ಯಕ್ಕೆ ಪಾತ್ರಳಾಗಿರುವೆ.

೧೭. ವಿದ್ವಾಂಸರು ನಿಂದಿಸುವ ವೇಶ್ಯೆಯಾದ ಇವಳಲ್ಲಿ ನಿನ್ನ ಪತಿಯ ಮನಸ್ಸು ಹೇಗೆ ಅನುರಾಗಗೊಂಡಿದೆ ಎಂಬುದನ್ನು ನೀನು ತಿಳಿಯುತ್ತೀಯೆ.

೧೮. ಶಂಕರನು ಇವಳನ್ನು ಕರೆದುಕೊಂಡು ಬಂದು ತನ್ನ ಪ್ರಾಸಾದದಲ್ಲಿ ಇರಿಸುವನು. ಅತಿ ಲಜ್ಜಿತನಾದ ಈ ಶಂಕರನು ಮಾತನ್ನಾಡುತ್ತಿಲ್ಲ.

೧೯—೨೦. ಸೂತನು ಹೇಳುತ್ತಾನೆ:—ಅನಂತರ ನಾರದನ ಮಾತನ್ನು ಕೇಳಿ ನಾಲ್ಕು ಮುಖಗಳಿಂದ ವಿಕಾರಗೊಂಡ ತನ್ನ ಪ್ರಿಯನನ್ನು ನೋಡಿ ಅತ್ಯಂತ

ತತೋ ನಿರೋಧಯಾಮಾಸ ದ್ರುತಂ ಸಾ ಪರ್ವತಾತ್ಮಜಾ ।
ಸರ್ವನೇತ್ರಾಣಿ ದೇವಸ್ಯ ಮಹಿಷೀ ಧರ್ಮಮಾಶ್ರಿತಾ ॥ ೨೦ ॥
ಏತಸ್ಮಿನ್ನಂತರೇ ಶೈಲಾ ವಿಶೀರ್ಯಂತಿ ಸಮಂತತಃ ।
ಮರ್ಯಾದಾಂ ಸಂತ್ಯಜಂತಿಸ್ಮ ಸರ್ವೇ ಚ ಮಕರಾಲಯಾಃ ॥ ೨೧ ॥
ಪ್ರಲಯಸ್ಯ ಸಮುತ್ಥಾನಂ ಸಂಜಾತಂ ದ್ವಿಜಸತ್ತಮಾಃ ।
ತಾವದ್ಬ್ರಹ್ಮದಿನಂ ಪ್ರಾಪ್ತಂ ಪರಮಂ ಸೃಷ್ಟಿಲಕ್ಷಣಂ ॥ ೨೨ ॥
ನಿಮೇಷೇಣ ಪುನಸ್ತಸ್ಯ ಪ್ರಲಯಸ್ಯ ಪ್ರಜಾಪತೇಃ ।
ಬ್ರಹ್ಮಣಃ ಸಾ ನಿಶಾ ಪ್ರೋಕ್ತಾ ಸರ್ವಂ ತೋಯಮಯಂ ಭವೇತ್ ॥ ೨೩ ॥
ಅಥ ತತ್ರ ಗಣಾಃ ಸರ್ವೇ ಭೃಂಗಿನಂದಿಪುರಸ್ಸರಾಃ ।
ಸೋಽಪಿ ದೇವಮುನಿರ್ಭೀತಸ್ತಾಮುವಾಚ ಸುರೇಶ್ವರೀಂ ॥ ೨೪ ॥
ಮುಂಚ ಮುಂಚ ಸುರಜ್ಯೇಷ್ಠೇ ದೇವನೇತ್ರಾಣಿ ಸಂಪ್ರತಿ ।
ನೋ ಚೇನ್ನಾಶಃ ಸಮಸ್ತಸ್ಯ ಲೋಕಸ್ಯಾಸ್ಯ ಭವಿಷ್ಯತಿ ॥ ೨೫ ॥
ಏವಂ ಪ್ರೋಕ್ತಾಽಪಿ ಸಾ ದೇವೀ ಯಾವಚ್ಚ ನ ಮುಮೋಚ ತಂ ।
ತಾವದ್ದೇವೇನ ಲಾಲಾಟಂ ವಿಸೃಷ್ಟಂ ಲೋಚನಂ ಪರಂ ॥ ೨೬ ॥
ಕೃಪಾವಿಷ್ಟೇನ ಲೋಕಾನಾಂ ಯೇನ ರಕ್ಷಾ ಪ್ರಜಾಯತೇ ।
ನ ಶಕ್ತೋ ವಾರಿತುಂ ದೇವೀಂ ಪ್ರಾಣೇಭ್ಯೋಽಪಿ ಗರೀಯಸೀಂ ॥ ೨೭ ॥

---

ಕುಪಿತಳಾದ ಪರ್ವತತನಯೆಯು ರಾಣಿಯು ಧರ್ಮವನ್ನಾಶ್ರಯಿಸಿ ಶಂಕರನ ಎಲ್ಲ ಕಣ್ಣುಗಳನ್ನು ತಡೆದಳು.

೨೧. ಈ ಸಮಯದಲ್ಲಿ ಬೆಟ್ಟಗಳು ಸುತ್ತಲೂ ಒಡೆದುವು. ಎಲ್ಲ ಸಾಗರಗಳೂ ಮೇರೆಯನ್ನು ಮೀರಿದುವು.

೨೨. ದ್ವಿಜವರ್ಯರೆ! ಇಷ್ಟರಲ್ಲಿ ಪ್ರಳಯವಾಗಿ ಸೃಷ್ಟಿರೂಪವಾದ ಬ್ರಹ್ಮನ ದಿನವು ಪ್ರಾಪ್ತವಾಯಿತು.

೨೩. ಮರುನಿಮಿಷದಲ್ಲಿ ಎಲ್ಲವೂ ಜಲಮಯವಾಗಿ ಬ್ರಹ್ಮನ ರಾತ್ರಿಯೆಂಬ ಪ್ರಳಯವಾಯಿತು.

೨೪. ಬಳಿಕ ಭೃಂಗಿ, ನಂದಿ ಮುಂತಾದ ಸಮಸ್ತ ಗಣಗಳೂ, ಆ ನಾರದ ಮುನಿಯೂ ಭಯಗೊಂಡು ಪಾರ್ವತಿಯನ್ನು ಕುರಿತು ಇಂತೆಂದರು.

೨೫. "ಸುರೇಶ್ವರಿ! ಶಂಕರನ ಕಣ್ಣುಗಳನ್ನು ಬಿಡು. ಹಾಗೆ ಬಿಡದಿದ್ದರೆ ಈ ಸಮಸ್ತ ಲೋಕವೂ ನಾಶವಾಗುವುದು."

೨೬–೨೭. ಹೀಗೆ ಹೇಳಿದರೂ ದೇವಿಯು ಮಹೇಶ್ವರನ ಕಣ್ಣುಗಳನ್ನು ಬಿಡದಿರಲು ದಯಾಳುವಾದ ಶಂಕರನು ಪ್ರಾಣಕ್ಕಿಂತಲೂ ಉತ್ತಮಳಾದ ದೇವಿಯನ್ನು ತಡೆಯಲು ಅಶಕ್ತನಾಗಿ ಲೋಕಗಳನ್ನು ರಕ್ಷಿಸಲು ಹಣೆಗಣ್ಣನ್ನು ತೆರೆದನು.

ಅಂಬಿಕಾಂ ವಿಬುಧಾಃ ಪ್ರಾಹುಸ್ತ್ರ್ಯಂಬಕಾಣಿ ಯತೋ ದ್ವಿಜಾಃ ।
ತಸ್ಮಾತ್ಸಂಕೀರ್ತ್ಯತೇ ಲೋಕೇ ತ್ರ್ಯಂಬಕಶ್ಚ ಸುರೇಶ್ವರಃ ॥ ೨೮ ॥
ತತಃ ಸಂತ್ಯಜ್ಯ ತಂ ದೇವಂ ದೇವೀ ಪರ್ವತಪುತ್ರಿಕಾ ।
ಪ್ರೋವಾಚ ಕೋಪರಕ್ತಾಕ್ಷೀ ಪುರಃಸ್ಥಾಂ ತಾಂ ತಿಲೋತ್ತಮಾಂ ॥ ೨೯ ॥
ಯಸ್ಮಾನ್ಮೇ ದಯಿತಃ ಪಾಪೇ ತ್ವಯಾ ರೂಪಾದ್ವಿಡಂಬಿತಃ ।
ಚತುರ್ವಕ್ತ್ರಃ ಕೃತಸ್ತಸ್ಮಾತ್ತ್ವಂ ವಿರೂಪಾ ಭವ ದ್ರುತಂ ॥ ೩೦ ॥
ತತಃ ಸಾ ಸಹಸಾ ಭೂತ್ವಾ ತತ್ಕ್ಷಣಾದ್ಭಗ್ನನಾಸಿಕಾ ।
ಶೀರ್ಣಕೇಶಾ ಬೃಹದ್ದಂತಾ ಚಿಪಿಟಾಕ್ಷೀ ಮಹೋದರಾ ॥ ೩೧ ॥
ಅಥ ವೀಕ್ಷ್ಯ ನಿಜಂ ದೇಹಂ ತಥಾಭೂತಂ ವರಾಽಪ್ಸರಾಃ ।
ಪ್ರೋವಾಚ ವೇಪಮಾನಾ ಸಾ ಕೃತಾಂಜಲಿಪುಟಾ ಸ್ಥಿತಾ ॥ ೩೨ ॥
ಅಹಂ ಸಂಪ್ರೇಷಿತಾ ದೇವಿ ಪ್ರಣಾಮಾರ್ಥಂ ತ್ರಿಶೂಲಿನಃ ।
ಬ್ರಹ್ಮಣಾ ತೇನ ಚಾಽಽಯಾತಾ ಯುಷ್ಮಾಕಂ ಚ ವಿಶೇಷತಃ ॥ ೩೩ ॥
ನಿರ್ದೋಷಾ ಯಾ ವಿರಾಗಾ ಯಾಸ್ತಸ್ಮಾದ್ಯುಕ್ತಂ ನ ತೇ ಭವೇತ್ ।
ಶಾಪಂ ದಾತುಂ ಪ್ರಸಾದಂ ಮೇ ತಸ್ಮಾತ್ತ್ವಂ ಕರ್ತುಮರ್ಹಸಿ ॥ ೩೪ ॥

---

೨೮. ಆಗ ದೇವತೆಗಳು ಪಾರ್ವತಿಯನ್ನು ಕುರಿತು ಶಂಕರನು ಮೂರು ಕಣ್ಣು ಗಳುಳ್ಳವನಾದ್ದರಿಂದ ತ್ರ್ಯಂಬಕನೆಂದು ಲೋಕದಲ್ಲಿ ಹೇಳಿಸಿಕೊಳ್ಳುವನೆಂದರು.

೨೯. ಅನಂತರ ಪಾರ್ವತಿಯು ಆ ಮಹೇಶ್ವರನನ್ನು ತ್ಯಜಿಸಿ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವಳಾಗಿ ಮುಂದಿರುವ ತಿಲೋತ್ತಮೆಯನ್ನು ಕುರಿತು ಇಂತೆಂದಳು.

೩೦. "ಪಾಪಿಷ್ಠಳೆ! ನನ್ನ ಪತಿಯನ್ನು ನೀನು ರೂಪದಿಂದ ಮೋಹಗೊಳಿಸಿ ನಾಲ್ಕು ಮುಖಗಳುಳ್ಳವನನ್ನಾಗಿ ಮಾಡಿದ್ದರಿಂದ ಶೀಘ್ರವಾಗಿ ಕುರೂಪಿ ಯಾಗು."

೩೧. ತರುವಾಯ ಉತ್ತಮಳಾದ ಆ ಅಪ್ಸರೆಯು ಕೂಡಲೆ ಮುರಿದ ಮೂಗುಳ್ಳವಳೂ, ಉದುರಿದ ಕೂದಲುಳ್ಳವಳೂ, ಉದ್ದವಾದ ಹಲ್ಲುಗಳುಳ್ಳವಳೂ, ಚಪ್ಪಟೆಯ ಕಣ್ಣುಗಳುಳ್ಳವಳೂ, ದೊಡ್ಡ ಹೊಟ್ಟೆಯುವಳೂ ಆದಳು.

೩೨. ಅವಳು ವಿಕಾರವಾದ ತನ್ನ ಶರೀರವನ್ನೀಕ್ಷಿಸಿ ನಡುಗುತ್ತ ಕೈಮುಗಿದು ಕೊಂಡು ಹೀಗೆಂದಳು.

೩೩. "ದೇವಿ! ಶಂಕರನನ್ನು ವಂದಿಸಲು ಬ್ರಹ್ಮನು ನನ್ನನ್ನು ಕಳುಹಿಸಿ ದನು. ಆದರಿಂದ ನಾನು ನಿಮ್ಮೆಡೆಗೆ ಬಂದೆನು.

೩೪. ಆದುದರಿಂದ ನಿರ್ದುಷ್ಟಳೂ, ವಿರಕ್ತಳೂ ಆದ ನನಗೆ ನೀನು ಶಾಪ ವನ್ನೀಯುವುದು ಉಚಿತವಲ್ಲ. ಅನುಗ್ರಹಿಸಲರ್ಹಳಾಗಿರುವೆ."

ತಸ್ಯಾಸ್ತದ್ವಚನಂ ಶ್ರುತ್ವಾ ದೀನಂ ಸತ್ಯಂ ಚ ಪಾರ್ವತೀ ।
ಪಶ್ಚಾತ್ತಾಪಸಮೋಪೇತಾ ತತಃ ಪ್ರೋವಾಚ ಸುಪ್ರಿಯಂ ॥ ೩೫ ॥
ಸ್ತ್ರೀ ಸ್ವಭಾವಾತ್ಸಮಾಯಾತಃ ಕೋಪೋಽಯಂ ತ್ವಾಂ ಪ್ರತಿ ದ್ರುತಂ ।
ತಸ್ಮಾದಾಗಚ್ಛ ಗಚ್ಛಾವೋ ಮಯಾ ಸಾರ್ಧಂ ಧರಾತಲೇ ॥ ೩೬ ॥
ತತ್ರಾಽಸ್ತಿ ರೂಪದಂ ತೀರ್ಥಂ ಮಯಾ ಚೋತ್ಪಾದಿತಂ ಸ್ವಯಂ ।
ಮಾಘಶುಕ್ಲತೃತೀಯಾಯಾಂ ಸ್ನಾನಾರ್ಥಂ ವಿಮಲೋದಕಂ ॥ ೩೭ ॥
ಯಾ ನಾರೀ ಪ್ರಾತರುತ್ಥಾಯ ತತ್ರ ಸ್ನಾನಂ ಸಮಾಚರೇತ್ ।
ಸಾ ಸ್ಯಾದ್ರೂಪವತೀ ನೂನಮದೃಷ್ಟೇ ರವಿಮಂಡಲೇ ॥ ೩೮ ॥
ಸದಾ ಮಾಘೇ ತೃತೀಯಾಯಾಂ ತತ್ರ ಸ್ನಾನಂ ಕರೋಮ್ಯಹಂ ।
ಅದ್ಯ ಸಾ ತತ್ರ ಯಾಸ್ಯಾಮಿ ಸ್ನಾನಾಯ ಕೃತನಿಶ್ಚಯಾ ॥ ೩೯ ॥

ಸೂತ ಉವಾಚ :—

ಏವಮುಕ್ತ್ವಾ ಸಮಾದಾಯ ಸಾ ದೇವೀ ತಾಂ ತಿಲೋತ್ತಮಾಂ ।
ಹಾಟಕೇಶ್ವರಜೇ ಕ್ಷೇತ್ರೇ ರೂಪತೀರ್ಥಂ ಜಗಾಮ ಚ ॥ ೪೦ ॥
ತತ್ರ ಸ್ನಾನಂ ಸ್ವಯಂ ಚಕ್ರೇ ವಿಧಿಪೂರ್ವಂ ಸುರೇಶ್ವರೀ ।
ತಸ್ಯಾಹ್ಯನಂತರಂ ಸಾಽಪಿ ಭಕ್ತಿಯುಕ್ತಾ ತಿಲೋತ್ತಮಾ ॥ ೪೧ ॥

---

೩೫. ಪಾರ್ವತಿಯು ಆ ತಿಲೋತ್ತಮೆಯ ದೈನ್ಯದಿಂದ ಕೂಡಿರುವುದೂ, ಸತ್ಯವೂ ಆದ ಮಾತನ್ನು ಕೇಳಿ ಪಶ್ಚಾತ್ತಾಪಗೊಂಡು ಹೀಗೆ ಹಿತವಾಗಿ ನುಡಿದಳು.

೩೬. "ಹೆಂಗಸಿನ ಸ್ವಭಾವದಿಂದ ಶೀಘ್ರವಾಗಿ ನನಗೆ ನಿನ್ನ ಮೇಲೆ ಕೋಪವುಂಟಾಯಿತು. ಚಿಂತೆ ಬೇಡ. ನನ್ನೊಡನೆ ಬಾ. ಭೂಲೋಕಕ್ಕೆ ಹೋಗೋಣ.

೩೭. ಅಲ್ಲಿ ನಾನು ಮಾಘಶುಕ್ಲ ತದಿಗೆಯ ದಿನ ಸ್ನಾನಮಾಡಲು ನಿರ್ಮಿಸಿರುವ ಶುದ್ಧ ಜಲವುಳ್ಳ ರೂಪದವೆಂಬ ತೀರ್ಥವಿದೆ.

೩೮. ಅಲ್ಲಿ ಬೆಳಗ್ಗೆ ಸೂರ್ಯೋದಯಕ್ಕಿಂತ ಮುಂಚೆ ಮಿಂದ ಹೆಂಗಸು ನಿಶ್ಚಯವಾಗಿಯೂ ಸುಂದರಿಯಾಗುವಳು.

೩೯. ನಾನು ಯಾವಾಗಲೂ ಮಾಘಶುಕ್ಲ ತದಿಗೆಯ ದಿನ ಅಲ್ಲಿ ಸ್ನಾನ ಮಾಡುವೆನು. ಈಗ ಸ್ನಾನಕ್ಕಾಗಿಯೇ ಅಲ್ಲಿಗೆ ತೆರಳುವೆನು."

೪೦. ಸೂತನು ಹೇಳುತ್ತಾನೆ:—ಪಾರ್ವತಿಯು ಹೀಗೆಂದು ಆ ತಿಲೋತ್ತಮೆಯನ್ನು ಕರೆದುಕೊಂಡು ಹಾಟಕೇಶ್ವರಕ್ಷೇತ್ರದಲ್ಲಿರುವ ರೂಪತೀರ್ಥಕ್ಕೆ ಹೋದಳು

೪೧. ಅಲ್ಲಿ ಪಾರ್ವತಿಯು ಮೊದಲು ವಿಧಿಯಂತೆ ಮಿಂದಳು. ಅನಂತರ ಆ ತಿಲೋತ್ತಮೆಯು ಭಕ್ತಿಯಿಂದ ಸ್ನಾನಮಾಡಿದಳು.

**ತತಃ ಕಾಂತಿಮತೀ ಜಾತಾ ತತ್ಕ್ಷಣಾದೇವ ಭಾಮಿನೀ ।**
**ಪೂರ್ವಮಾಸೀದ್ಯಥಾ ರೂಪಾ ತಥಾ ಸಾಽಭೂದ್ವಿಶೇಷತಃ ॥ ೪೨ ॥**
**ಅಥ ತುಷ್ಟಿಸಮಾಯುಕ್ತಾ ತಾಂ ಪ್ರಣಮ್ಯ ಸುರೇಶ್ವರೀಂ ।**
**ಪ್ರೋವಾಚ ವಿಸ್ಮಯಾವಿಷ್ಟಾ ಹರ್ಷಗದ್ಗದಯಾ ಗಿರಾ ॥ ೪೩ ॥**
**ಪ್ರಾಪ್ತಂ ರೂಪಂ ಮಹಾದೇವಿ ತ್ವತ್ಪ್ರಸಾದಾಚ್ಚಿರಂತನಂ ।**
**ಬ್ರಹ್ಮಲೋಕಂ ಗಮಿಷ್ಯಾಮಿ ಮಾಮನುಜ್ಞಾತುಮರ್ಹಸಿ ॥ ೪೪ ॥**

**ಗೌರ್ಯುವಾಚ :—**

**ವರಂ ಯಚ್ಛಾಮಿ ತೇ ಪುತ್ರಿ ಯತ್ಕಿಂಚಿದ್ಧೃದಿ ಸಂಸ್ಥಿತಂ ।**
**ತಸ್ಮಾತ್ಪ್ರಾರ್ಥಯ ವಿಸ್ರಬ್ಧಾ ನ ವೃಥಾ ಮಮ ದರ್ಶನಂ ॥ ೪೫ ॥**

**ತಿಲೋತ್ತಮೋವಾಚ :—**

**ಅಹಮತ್ರ ಕರಿಷ್ಯಾಮಿ ಕ್ಷೇತ್ರೇ ತೀರ್ಥಂ ನಿಜಂ ಶುಭೇ ।**
**ತ್ವತ್ಪ್ರಸಾದೇನ ತದ್ದೇವಿ ಯಾತು ಖ್ಯಾತಿಂ ಧರಾತಲೇ ॥ ೪೬ ॥**
**ತ್ವಯಾ ತತ್ರಾಽಪಿ ಕರ್ತವ್ಯಂ ವರ್ಷಾಂತೇ ಸ್ನಾನಮೇವ ಹಿ ।**
**ಹಿತಾರ್ಥಂ ಸರ್ವನಾರೀಣಾಂ ರೂಪಸೌಭಾಗ್ಯದಾಯಕಂ ॥ ೪೭ ॥**

---

೪೨. ತರುವಾಯ ಅವಳು ಕೂಡಲೆ ಮೊದಲು ಹೇಗಿದ್ದಳೋ ಹಾಗೆಯೇ ಕಾಂತಿಯುಕ್ತಳಾದಳು.

೪೩. ಅದರಿಂದವಳು ಸಂತೋಷಗೊಂಡು ಪಾರ್ವತಿಯನ್ನು ವಂದಿಸಿ ವಿಸ್ಮಿತಳಾಗಿ ಹರ್ಷದಿಂದ ಗದ್ಗದವಾದ ಮಾತಿನಿಂದ ಇಂತೆಂದಳು.

೪೪. "ಮಹಾದೇವಿ! ನಾನು ನಿನ್ನ ಅನುಗ್ರಹದಿಂದ ಹಿಂದಿನ ಸೌಂದರ್ಯವನ್ನು ಮರಳಿ ಪಡೆದೆನು. ಈಗ ಬ್ರಹ್ಮಲೋಕಕ್ಕೆ ಹೋಗುವೆನು. ನನಗೆ ಅಪ್ಪಣೆಯನ್ನು ಕೊಡು."

೪೫. ಗೌರಿಯು ಹೇಳುತ್ತಾಳೆ :—ಮಗು! ನಾನು ನಿನಗೆ ವರವನ್ನು ಕೊಡುವೆನು. ನಿನ್ನ ಮನಸ್ಸಿನಲ್ಲಿರುವುದನ್ನು ನಂಬಿಕೆಯಿಂದ ಕೇಳಿಕೊ. ನನ್ನ ದರ್ಶನವು ವ್ಯರ್ಥವಾಗುವುದಿಲ್ಲ.

೪೬. ತಿಲೋತ್ತಮೆಯು ಹೇಳುತ್ತಾಳೆ:—ಮಂಗಳಕರಳೆ! ನಾನು ಈ ಕ್ಷೇತ್ರದಲ್ಲಿ ನನ್ನದೊಂದು ತೀರ್ಥವನ್ನು ನಿರ್ಮಿಸುವೆನು. ಅದು ನಿನ್ನ ಅನುಗ್ರಹದಿಂದ ಭೂಲೋಕದಲ್ಲಿ ವಿಖ್ಯಾತವಾಗಲಿ.

೪೭. ನೀನು ಅಲ್ಲಿಯೂ ವರ್ಷದ ಕೊನೆಯಲ್ಲಿ ಸಮಸ್ತ ನಾರಿಯರಿಗೆ ಹಿತವನ್ನುಂಟುಮಾಡಲೋಸುಗ ರೂಪಸೌಭಾಗ್ಯವನ್ನು ಕೊಡುವ ಸ್ನಾನವನ್ನು ಮಾಡಬೇಕು.

ಗೌರ್ಯುವಾಚ :—

ಚೈತ್ರಶುಕ್ಲತೃತೀಯಾಯಾಂ ಸದಾಽಹಂ ತ್ವತ್ಕೃತೇ ಶುಭೇ ।
ಸ್ನಾನಂ ತತ್ರ ಕರಿಷ್ಯಾಮಿ ಮಧ್ಯಾಹ್ನೇ ಸಮುಪಸ್ಥಿತೇ ॥ ೪೮ ॥
ಹಿತಾರ್ಥಂ ಸರ್ವನಾರೀಣಾಂ ತವ ವಾಕ್ಯಾದಸಂಶಯಂ ।
ಯಾ ತತ್ರ ದಿವಸೇ ನಾರೀ ತಸ್ಮಿಂಸ್ತೀರ್ಥೇ ಕರಿಷ್ಯತಿ ॥ ೪೯ ॥
ಸ್ನಾನಂ ಸಾ ಸೌಖ್ಯಸಂಯುಕ್ತಾ ಭವಿಷ್ಯತಿ ಸುಖಾನ್ವಿತಾ ।
ಸ್ಪೃಹಣೀಯಾ ಚ ನಾರೀಣಾಂ ಸರ್ವಾಸಾಂ ಧರಣೀತಲೇ ॥ ೫೦ ॥
ಪುರುಷೋಽಪಿ ಸುಭಕ್ತ್ಯಾ ಯಸ್ತತ್ರ ಸ್ನಾನಂ ಕರಿಷ್ಯತಿ ।
ಸಪ್ತಜನ್ಮಾನಿ ರೂಪಾಢ್ಯಃ ಸ ಸೌಭಾಗ್ಯೋ ಭವಿಷ್ಯತಿ ॥ ೫೧ ॥

ಸೂತ ಉವಾಚ :—

ಏವಮುಕ್ತಾ ತದಾ ದೇವ್ಯಾ ಸಾಽಪ್ಸರಾ ದ್ವಿಜಸತ್ತಮಾಃ ।
ಚಕ್ರೇ ಕುಂಡಂ ಸುವಿಸ್ತೀರ್ಣಂ ವಿಮಲೋದಪ್ರಪೂರಿತಂ ॥ ೫೨ ॥
ಉಪಕಂಠೇ ತತಸ್ತಸ್ಯ ಸ್ಥಾಪಯಾಮಾಸ ಪಾರ್ವತೀಂ ।
ತತೋ ಜಗಾಮ ಸಂಹೃಷ್ಟಾ ಬ್ರಹ್ಮಲೋಕಂ ತಿಲೋತ್ತಮಾ ॥ ೫೩ ॥
ತತಃ ಪ್ರಭೃತಿ ಸಂಜಾತಂ ಕುಂಡಮಪ್ಸರಸಾ ಕೃತಂ ।
ಸ್ನಾನಮಾತ್ರೈರ್ನರೈರ್ಯತ್ರ ಸೌಭಾಗ್ಯಂ ಲಭ್ಯತೇ ದ್ವಿಜಾಃ ॥ ೫೪ ॥

---

೪೮–೫೦. ಗೌರಿಯು ಹೇಳುತ್ತಾಳೆ :—ಮಂಗಳಕರಳೆ! ನಾನು ನಿನ್ನ ಮಾತಿನಂತೆ ಯಾವಾಗಲೂ ನಿನಗಾಗಿಯೂ, ಸಕಲ ಸ್ತ್ರೀಯರ ಹಿತಕ್ಕಾಗಿಯೂ ಚೈತ್ರಶುಕ್ಲ ತದಿಗೆಯ ದಿನ ಮಧ್ಯಾಹ್ನದ ಸಮಯದಲ್ಲಿ ಅಲ್ಲಿ ಸ್ನಾನಮಾಡುವೆನು. ಆ ದಿನ ಆ ತೀರ್ಥದಲ್ಲಿ ಮಿಂದವಳು ಸೌಖ್ಯವುಳ್ಳವಳೂ, ಜಗತ್ತಿನಲ್ಲಿ ಸಮಸ್ತ ಸ್ತ್ರೀಯರಿಗೆ ಸ್ಪೃಹಣೀಯಳೂ ಆಗುವಳು.

೫೧. ಪುರುಷನೂ ಅಲ್ಲಿ ಭಕ್ತಿಯಿಂದ ಮಿಂದರೆ ಅವನು ಮುಂದಿನ ಏಳು ಜನ್ಮಗಳಲ್ಲಿ ರೂಪಸೌಭಾಗ್ಯಗಳುಳ್ಳವನಾಗುವನು.

೫೨. ಸೂತನು ಹೇಳುತ್ತಾನೆ :—ದ್ವಿಜೋತ್ತಮರೆ! ದೇವಿಯು ಹೀಗೆನ್ನಲು ಆ ತಿಲೋತ್ತಮೆಯು ಅತ್ಯಂತ ವಿಸ್ತೀರ್ಣವೂ, ಶುದ್ಧ ಜಲದಿಂದ ತುಂಬಿರುವುದೂ ಆದ ಕುಂಡವನ್ನು ನಿರ್ಮಿಸಿದಳು.

೫೩. ಆಕೆಯು ಆ ತೀರ್ಥದ ಹತ್ತಿರ ಪಾರ್ವತಿಯನ್ನು ಪ್ರತಿಷ್ಠೆಮಾಡಿ ಆನಂದದಿಂದ ಬ್ರಹ್ಮಲೋಕಕ್ಕೆ ತೆರಳಿದಳು.

೫೪. ಅದು ಮೊದಲ್ಗೊಂಡು ಅಪ್ಸರಕುಂಡವು ವಿಖ್ಯಾತವಾಯಿತು. ಅಲ್ಲಿ ಮನುಷ್ಯರು ಸ್ನಾನಮಾಡುವುದರಿಂದಲೇ ಸೌಭಾಗ್ಯವನ್ನು ಹೊಂದುವರು.

ನಾರೀಭಿಶ್ಚ ವಿಶೇಷೇಣ ಪುತ್ರಪ್ರಾಪ್ತಿರನುತ್ತಮಾ ।
ತಥಾಽನ್ಯದಪಿ ಯತ್ಕಿಂಚಿದ್ವಾಂಛಿತಂ ಹೃದಯೇ ಸ್ಥಿತಂ ॥ ೫೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಪ್ಸರಃಕುಂಡೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ತ್ರಿಪಂಚಾಶದುತ್ತರಶತತಮೋಽಧ್ಯಾಯಃ

---

೫೫. ನಾರಿಯರು ಉತ್ತಮನಾದ ಪುತ್ರನನ್ನೂ, ಮನಸ್ಸಿನಲ್ಲಿರುವ ಇತರ ಇಷ್ಟಾರ್ಥಗಳನ್ನೂ ಪಡೆಯುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಪ್ಸರಃಕುಂಡೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರೈವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುಃಪಂಚಾಶದುತ್ತರಶತತಮೋಽಧ್ಯಾಯಃ

### ಚಿತ್ರೇಶ್ವರೀಪೀಠಕ್ಷೇತ್ರಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಯಾ ನಾರೀ ತತ್ರ ಸತ್ಕುಂಡೇ ಸ್ನಾತ್ವಾ ತಾಂ ಪಾರ್ವತೀಂ ಪುನಃ ।**
**ದೃಷ್ಟ್ವಾ ಸ್ನಾತಿ ತತಸ್ತೀರ್ಥೇ ತಸ್ಮಿನ್ ರೂಪಮಯೇ ಶುಭೇ ॥ ೧ ॥**
**ಪುನಶ್ಚ ಪಾರ್ವತೀಂ ಪಶ್ಯೇಚ್ಛ್ರದ್ಧಯಾ ಪರಯಾ ಯುತಾ ।**
**ಸದ್ಯಃ ಸಾ ಮುಚ್ಯತೇ ಕೃತ್ಸ್ನೈರಾಜನ್ಮಮರಣಾಂತಿಕೈಃ ॥ ೨ ॥**
**ತತ್ರೈವಾಽಸ್ತಿ ಜಯಾ ನಾಮ ಪಾರ್ವತ್ಯಾಃ ಕಿಂಕರೀ ದ್ವಿಜಾಃ ।**
**ತಯಾ ತತ್ರ ಕೃತಂ ಕುಂಡಂ ಗೌರೀಕುಂಡಸಮೀಪತಃ ॥ ೩ ॥**
**ಯಾ ತತ್ರ ಕುರುತೇ ಸ್ನಾನಂ ತೃತೀಯಾ ದಿವಸೇಽಬಲಾ ।**
**ಸುತಸೌಭಾಗ್ಯಸಂಪನ್ನಾ ಸಾ ಭವೇತ್ಪತಿವಲ್ಲಭಾ ॥ ೪ ॥**
**ತಥಾಽನ್ಯದಪಿ ತತ್ರಾಽಸ್ತಿ ವಿಜಯಾಕುಂಡಮುತ್ತಮಂ ।**
**ತತ್ರ ಸ್ನಾತಾಽಪಿ ವಂಧ್ಯಾ ಸ್ತ್ರೀ ಜಾಯತೇ ಪುತ್ರಸಂಯುತಾ ॥ ೫ ॥**

---

### ಕನ್ನಡದ ಅನುವಾದ

### ಚಿತ್ರೇಶ್ವರೀಪೀಠಕ್ಷೇತ್ರಮಾಹಾತ್ಮ್ಯವರ್ಣನ

೧–೨. ಸೂತನು ಹೇಳುತ್ತಾನೆ:—ಆ ಅಪ್ಸರಕುಂಡದಲ್ಲಿ ಮಿಂದು ಪಾರ್ವತಿಯನ್ನು ದರ್ಶನಮಾಡಿ ಮರಳಿ ಆ ರೂಪಮಯತೀರ್ಥದಲ್ಲಿ ಮಿಂದು ಪುನಃ ಅತ್ಯಂತ ಶ್ರದ್ಧೆಯಿಂದ ಪಾರ್ವತಿಯನ್ನು ದರ್ಶನಮಾಡಿದ ನಾರಿಯು ಹುಟ್ಟಿದ ಮೊದಲ್ಗೊಂಡು ಸಾಯುವವರೆಗೆ ಮಾಡಿದ ಎಲ್ಲಾ ಪಾಪಗಳಿಂದಲೂ ಮುಕ್ತಳಾಗುವಳು.

೩. ದ್ವಿಜರೆ! ಅಲ್ಲಿಯೇ ಗೌರೀಕುಂಡದ ಬಳಿ ಪಾರ್ವತಿಯ ಸಖಿಯಾದ ಜಯೆಯೆಂಬುವಳು ರಚಿಸಿದ ಕುಂಡವಿದೆ.

೪. ಅಲ್ಲಿ ತದಿಗೆಯ ದಿನ ಮಿಂದ ಹೆಂಗಸು ಸುತರಿಂದಲೂ, ಸೌಭಾಗ್ಯದಿಂದಲೂ ಕೂಡಿ ಪತಿಗೆ ಪ್ರಿಯಳಾಗುವಳು.

೫. ಹಾಗೆಯೇ ಅಲ್ಲಿ ಮತ್ತೊಂದು ಉತ್ತಮವಾದ ವಿಜಯಕುಂಡವಿದೆ. ಅಲ್ಲಿ ಮಿಂದ ಬಂಜೆಯೂ ಪುತ್ರರನ್ನು ಪಡೆಯುವಳು.

ನ ಚ ಪಶ್ಯತಿ ಪುತ್ರಾಣಾಂ ಕದಾಚಿದ್ವ್ಯಸನಂ ದ್ವಿಜಾಃ ।
ನ ವಿಯೋಗಂ ನ ದುಃಖಂ ಚ ಸ್ವಪ್ನಾಂತೇ ಚ ಕದಾಚನ ॥ ೬ ॥
ಕಾಕವಂಧ್ಯಾಽಪಿ ಯಾ ನಾರೀ ತತ್ರ ಸ್ನಾನಂ ಸಮಾಚರೇತ್ ।
ಸಾ ಪುತ್ರಾನ್ವಿವಿಧಾಂಲ್ಲಬ್ಧ್ವಾ ಸ್ವರ್ಗಲೋಕೇ ಮಹೀಯತೇ ॥ ೭ ॥

ಋಷಯ ಊಚುಃ:—

ಏತೇಷಾಂ ಸೂತ ತೀರ್ಥಾನಾಂ ತೀರ್ಥಮಸ್ತಿ ಸುಸಿದ್ಧಿದಂ ।
ಕ್ವಚಿತ್ಕಿಂಚಿದ್ಭವೇತ್ಸಿದ್ಧಿರ್ಯತ್ರ ಸ್ನಾನಾಚ್ಛರೀರಜಾ ॥ ೮ ॥

ಸೂತ ಉವಾಚ:—

ಸಪ್ತವಿಂಶತಿಲಿಂಗಾನಿ ಯಾನಿ ಸಂತಿ ದ್ವಿಜೋತ್ತಮಾಃ ।
ತೇಷಾಂ ಮಧ್ಯೇಽಭವತ್ಸಿದ್ಧಿರೇಕಸ್ಮಿನ್ನಖಿಲಾ ದ್ವಿಜಾಃ ॥ ೯ ॥
ಏಕಸ್ಯ ಸತ್ವಯುಕ್ತಸ್ಯ ವೀರವ್ರತಯುತಸ್ಯ ಚ ।
ಆಶ್ವಿನಸ್ಯ ಚತುರ್ದಶ್ಯಾಂ ಕೃಷ್ಣಾಯಾಂ ದ್ವಿಜಸತ್ತಮಾಃ ॥ ೧೦ ॥
ಅರ್ಧರಾತ್ರೇ ವಿಧಾನೇನ ತೇಷಾಂ ಪೂಜಾಂ ಕರೋತಿ ಯಃ ।
ಪ್ರಾಗುಕ್ತಂ ಜಪನಂ ಭಕ್ತ್ಯಾ ಸ ಕ್ರಮಾತ್ಸಾಧಕೋತ್ತಮಃ ॥ ೧೧ ॥
ಅಂಗನ್ಯಾಸಂ ವಿಧಾಯೋಚ್ಚೈಃ ಕ್ಷುರಿಕಾಸೂಕ್ತಮುಚ್ಚರೇತ್ ।
ತೇಷಾಮಗ್ರೇ ಪುನಃ ಸಮ್ಯಕ್ಪೂಜಯಿತ್ವಾ ಚ ಶಂಕರಂ ॥ ೧೨ ॥
ಪೃಥಗೇಕೈಕಶೋ ಭಕ್ತ್ಯಾ ಪೂಜಯೇದ್ದಿಕ್ಪತೀಂಶ್ಚ ವೈ ॥ ೧೩ ॥

---

೬. ಅವಳು ಸ್ವಪ್ನದಲ್ಲಿಯೂ ಪುತ್ರ ವ್ಯಸನವನ್ನೂ, ವಿಯೋಗವನ್ನೂ, ದುಃಖವನ್ನೂ ಒಂದು ಸಲವೂ ಕಾಣುವುದಿಲ್ಲ.

೭. ಹುಟ್ಟುಬಂಜೆಯೂ ಅಲ್ಲಿ ಮಿಂದರೆ ನಾನಾ ಪ್ರಕಾರರಾದ ಪುತ್ರರನ್ನು ಪಡೆದು ಸ್ವರ್ಗಲೋಕದಲ್ಲಿ ಪೂಜ್ಯಳಾಗುತ್ತಾಳೆ.

೮. ಋಷಿಗಳು ಹೇಳುತ್ತಾರೆ:—ಸೂತ! ಈ ಸಕಲ ತೀರ್ಥಗಳಲ್ಲಿ ಲಭಿಸುವ ಶರೀರಸಂಬಂಧವಾದ ಸಿದ್ಧಿಯನ್ನು ಕೊಡುವ ಯಾವುದಾದರೊಂದು ತೀರ್ಥ ವಿರುವುದೇ?

೯–೧೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆಶ್ವಿನ ಕೃಷ್ಣ ಚತುರ್ದಶಿಯ ದಿನ ಅರ್ಧರಾತ್ರಿ ವೇಳೆಯಲ್ಲಿ ವಿಧಿಯಂತೆ ಪೂಜಿಸಿ ಹಿಂದೆ ಹೇಳಿ ದಂತೆ ಭಕ್ತಿಯಿಂದ ಜಪಿಸುವ ಸಾತ್ವಿಕನೂ, ವೀರನೂ ಆದ ಸಾಧಕೋತ್ತಮನಿಗೆ ಇಪ್ಪತ್ತೇಳು ಶಿವಲಿಂಗಗಳ ಮಧ್ಯದಲ್ಲಿ ಒಂದು ಶಿವಲಿಂಗದಲ್ಲಿಯೇ ಸಕಲ ಸಿದ್ಧಿಯೂ ಆಗುವುದು.

೧೨–೧೩. ಆ ಸಾಧಕನು ಅಂಗನ್ಯಾಸ ಮಾಡಿ ಕ್ಷುರಿಕಾಸೂಕ್ತವನ್ನುಚ್ಚರಿಸಿ ಆ ಲಿಂಗಗಳ ಮುಂದೆ ಶಂಕರನನ್ನು ಚೆನ್ನಾಗಿ ಆರಾಧಿಸಿ ದಿಕ್ಪಾಲಕರನ್ನು ಪ್ರತ್ಯೇಕ ವಾಗಿ ಭಕ್ತಿಯಿಂದ ಪೂಜಿಸಬೇಕು.

ಅಥಾಽಽಗತ್ಯ ಗಣೇಶೋ ವೈ ವಿಕರಾಲೋ ಭಯಾನಕಃ ।
ಲಂಬೋದರೋ ವೈ ನಗ್ನಶ್ಚ ಕೃಷ್ಣದಂತಸಮುದ್ಭವಃ ॥ ೧೪ ॥
ಖಡ್ಗಹಸ್ತೋಽಬ್ರವೀದ್ಯುದ್ಧಂ ಪ್ರಕುರುಷ್ವ ಮಯಾ ಸಮಂ ।
ಮುಕ್ತ್ವಾತತ್ಕಪಟಂ ಭೂಮೌ ಯದಿ ವೀರೋಽಸಿ ಸಾತ್ವಿಕಃ ॥ ೧೫ ॥
ತತಸ್ತತ್ಕರ್ಷಣಾಚ್ಚಾಽಪಿ ಯಸ್ತೇನಾಽಽಶು ಪ್ರತಾಡ್ಯತೇ ।
ಸ ತೇನೈವ ಶರೀರೇಣ ನೀಯತೇ ಕೇನ ತತ್ಪದಂ ॥ ೧೬ ॥
ಯತ್ರ ಸ್ಥಾನೇ ಜರಾ ಮೃತ್ಯುರ್ನಶೋಕಶ್ಚ ಕದಾಚನ ।
ತಥಾ ಚಿತ್ರೇಶ್ವರೀ ಪೀಠೇ ಸಿದ್ಧಿರೇಕಸ್ಯ ಕೀರ್ತಿತಾ ॥ ೧೭ ॥
ಮಾಘಕೃಷ್ಣಚತುರ್ದಶ್ಯಾಂ ಯಃ ಪೀಠಂ ತತ್ರ ಪೂಜಯೇತ್ ।
ಆಗಮೋಕ್ತವಿಧಾನೇನ ಸಮ್ಯಕ್ಛ್ರದ್ಧಾಸಮನ್ವಿತಃ ॥ ೧೮ ॥
ಪಶ್ಚಾತ್ಕಪಾಲಮಾದಾಯ ಮಹಾಮಾಂಸಪ್ರಪೂರಿತಮ್ ।
ಅಹಮಸ್ಯ ಕರೋಮ್ಯದ್ಯ ಮಹಾಮಾಂಸಸ್ಯ ವಿಕ್ರಯಂ ॥ ೧೯ ॥
ಸಿದ್ಧಿಮೂಲ್ಯೇ ನ ಗೃಹ್ಣಾತು ಕಶ್ಚಿಚ್ಚೇದಸ್ತಿ ಸಾತ್ವಿಕಃ ।
ತತಶ್ಚ ಯಾಚತೇ ಯಶ್ಚ ಪ್ರಗೃಹ್ಣಾತಿ ಚ ಸದ್ದ್ವಿಜಾಃ ॥ ೨೦ ॥
ಸ ತಮಾದಾಯ ನಿರ್ಯಾತಿ ಯತ್ರ ದೇವೋ ಮಹೇಶ್ವರಃ ।
ಹಾಟಕೇಶ್ವರಜಂ ಲಿಂಗಂ ಚಿತ್ರಶರ್ಮಪ್ರತಿಷ್ಠಿತಂ ॥ ೨೧ ॥

---

೧೪–೧೫. ತರುವಾಯ ವಿಕಾರವೇಷನೂ, ಭಯಂಕರನೂ, ಲಂಬೋದರನೂ, ಬತ್ತಲೆಯೂ, ಕರಿಯ ಹಲ್ಲುಗಳುಳ್ಳವನೂ ಆದ ಗಣೇಶನು ಒಂದು ಕತ್ತಿಯನ್ನು ಎತ್ತಿ "ಭೂಲೋಕದಲ್ಲಿ ನೀನು ಸಾತ್ವಿಕವೀರನಾಗಿದ್ದರೆ ಈ ಕಪಟವನ್ನು ತ್ಯಜಿಸಿ ನನ್ನೊಡನೆ ಯುದ್ಧಮಾಡು" ಎಂದು ಹೇಳುತ್ತಾನೆ.

೧೬–೧೭. ಅನಂತರ ಆ ಗಣೇಶನನ್ನು ಸಾಧಕನು ಎಳೆಯಲು ಗಣೇಶನು ಕೂಡಲೆ ಅವನನ್ನು ಹೊಡೆದು ಅವನನ್ನು ಅದೇ ಶರೀರದಿಂದ ಮುಪ್ಪು, ಮರಣ, ಶೋಕಗಳಿಲ್ಲದ ಸ್ಥಾನವನ್ನು ಹೊಂದಿಸುವನು. ಹಾಗೆಯೇ ಚಿತ್ರೇಶ್ವರಪೀಠದಲ್ಲಿಯೂ ಒಬ್ಬನಿಗೆ ಸಿದ್ಧಿಯಾಗುವುದು.

೧೮–೨೧. ಅಲ್ಲಿ ಮಾಘಕೃಷ್ಣ ಚತುರ್ದಶಿಯ ದಿನ ಆ ಪೀಠವನ್ನು ಆಗಮೋಕ್ತ ಕ್ರಮದಿಂದ ಶ್ರದ್ಧೆಯಿಂದ ಪೂಜಿಸಿ ಮಹಾಮಾಂಸದಿಂದ ತುಂಬಿದ ಕಪಾಲವನ್ನು ತೆಗೆದುಕೊಂಡು ನಾನು ಈ ಮಹಾಮಾಂಸವನ್ನು ವಿಕ್ರಯಿಸುತ್ತೇನೆ. ಯಾವನಾದರೂ ಒಬ್ಬ ಸಾತ್ವಿಕನಿದ್ದರೆ ಇದನ್ನು ಸಿದ್ಧಿಯೆಂಬ ಬೆಲೆಯಿಂದ ಕೊಂಡುಕೊಳ್ಳಲಿ ಎನ್ನಬೇಕು. ಅನಂತರ ಒಬ್ಬನು ಬಂದು ಅದನ್ನು ಬೇಡಿ ತೆಗೆದುಕೊಂಡು ಆ ಸಾಧಕನನ್ನು ಹಾಟಕೇಶ್ವರಕ್ಷೇತ್ರದಲ್ಲಿ ಚಿತ್ರಶರ್ಮನು ಪ್ರತಿಷ್ಠೆ ಮಾಡಿದ ಮಹೇಶ್ವರ ಲಿಂಗದೆಡೆಗೆ ಕರೆದುಕೊಂಡು ಹೋಗುವನು.

ತಸ್ಯ ಸ್ಥಾನಸ್ಯ ಮಧ್ಯಸ್ಥೋ ಯಸ್ತಂ ಪೂಜಯತೇ ನರಃ ।
ಶಿವರಾತ್ರೌ ನಿಶೀಥೇ ಚ ಪುಷ್ಪಲಕ್ಷಣ ಭಕ್ತಿತಃ ।
ಸುಸಿದ್ಧಿಮಾಪ್ನುಯಾತ್ತೂರ್ಣಂ ಸಶರೀರೇಣ ತತ್ಕ್ಷಣಾತ್ ॥ ೨೨ ॥
ಸಿದ್ಧಿಸ್ಥಾನಾನಿ ಸರ್ವಾಣಿ ತಸ್ಮಿನ್ ಕ್ಷೇತ್ರೇ ಸ್ಥಿತಾನಿ ವೈ ।
ವೀರವ್ರತಪ್ರಯುಕ್ತಾನಾಂ ಮಾನವಾನಾಂ ದ್ವಿಜೋತ್ತಮಾಃ ॥ ೨೩ ॥

ಋಷಯ ಊಚುಃ:—

ತಾಮಸೋ ಯಸ್ತ್ವಯಾ ಪ್ರೋಕ್ತಃ ಸಿದ್ಧಿಮಾರ್ಗೋ ಮಹಾಮತೇ ।
ಅನರ್ಹೋ ಬ್ರಾಹ್ಮಣೇಂದ್ರಾಣಾಂ ಶ್ರೋತ್ರಿಯಾಣಾಂ ವಿಶೇಷತಃ ॥ ೨೪ ॥
ಶುದ್ಧಾಂತಃಕರಣೈಃ ಸೂತ ಭೂತಹಿಂಸಾವಿವರ್ಜಿತೈಃ ।
ಯಥಾ ಸಂಪ್ರಾಪ್ಯತೇ ಮೋಕ್ಷೋ ಬ್ರಾಹ್ಮಣೈಃ ಸುಚಿರಾದಪಿ ॥ ೨೫ ॥
ತತ್ವಂ ಬ್ರೂಹಿ ಮಹಾಭಾಗ ಮೋಕ್ಷೋಪಾಯಂ ದ್ವಿಜನ್ಮನಾಂ ॥ ೨೬ ॥

ಸೂತ ಉವಾಚ:—

ರುದ್ರೈರ್ದಶಭಿಃ ಸಂಯುಕ್ತಮಾನಂದೇಶ್ವರಕಂ ತಥಾ ।
ಸ್ನಾತ್ವಾ ತದಗ್ರತಃ ಕುಂಡೇ ಶಾಸ್ತ್ರದೃಷ್ಟೇನ ಕರ್ಮಣಾ ॥ ೨೭ ॥
ಸಂಸಿದ್ಧಿಮಾಪ್ನುಯಾನ್ಮರ್ತ್ಯೋ ದುರ್ಲಭಾಂ ತ್ರಿದಶೈರಪಿ ।
ಮಾಘಮಾಸೇ ನರಃ ಸ್ನಾತ್ವಾ ವಿಶ್ವಾಮಿತ್ರಹ್ರದೇ ನರಃ ॥ ೨೮ ॥
ಪ್ರತ್ಯೂಷೇ ತಿಲಪಾತ್ರಂ ಚ ಬ್ರಾಹ್ಮಣಾಯ ನಿವೇದಯೇತ್ ।
ಸರ್ವಪಾಪವಿನಿರ್ಮುಕ್ತೋ ಬ್ರಹ್ಮಲೋಕೇ ಮಹೀಯತೇ ॥ ೨೯ ॥

---

೨೨–೨೩. ಅಲ್ಲಿ ಮಧ್ಯದಲ್ಲಿರುವ ಮಹೇಶ್ವರ ಲಿಂಗವನ್ನು ಶಿವರಾತ್ರಿ ದಿನ ಅರ್ಧರಾತ್ರಿ ವೇಳೆಯಲ್ಲಿ ಪುಷ್ಪವೆಂಬ ಭಕ್ತಿಯಿಂದ ಪೂಜಿಸಿದ ನರನು ಕೂಡಲೆ ಶರೀರಸಹಿತನಾಗಿ ಸಿದ್ಧಿಯನ್ನು ಪಡೆಯುವನು. ದ್ವಿಜವರ್ಯರೆ! ಹೀಗೆ ಅಲ್ಲಿ ವೀರವ್ರತವುಳ್ಳ ಮಾನವರಿಗೆ ಸಿದ್ಧಿಯನ್ನೀಯುವ ಸಕಲ ಕ್ಷೇತ್ರಗಳಿರುವುವು.

೨೪. ಋಷಿಗಳು ಹೇಳುತ್ತಾರೆ:—ಪ್ರಾಜ್ಞನೆ! ನೀನು ಹೇಳಿರುವ ತಾಮಸ ಸಿದ್ಧಿಮಾರ್ಗವು ಶ್ರೋತ್ರಿಯ ಬ್ರಾಹ್ಮಣರಿಗೆ ಅತ್ಯಂತ ಅನುಚಿತವಾದುದು.

೨೫–೨೬. ಶುದ್ಧವಾದ ಮನಸ್ಸುಳ್ಳವರೂ, ಪ್ರಾಣಿಹಿಂಸೆ ಮಾಡದವರೂ ಆದ ಬ್ರಾಹ್ಮಣರು ಮೋಕ್ಷವನ್ನು ಪಡೆಯುವ ಉಪಾಯವನ್ನು ನೀನು ನಮಗೆ ಹೇಳು.

೨೭–೨೯. ಸೂತನು ಹೇಳುತ್ತಾನೆ:—ದಶರುದ್ರರಿಂದ ಕೂಡಿರುವ ಆನಂದೇಶ್ವರನ ಮುಂದೆ ಇರುವ ಕುಂಡದಲ್ಲಿ ಮಿಂದು ಶಾಸ್ತ್ರವಿಹಿತಕರ್ಮವನ್ನಾಚರಿಸುವ ನರನು ದೇವತೆಗಳಿಗೆ ಹೊಂದಲಸಾಧ್ಯವಾದ ಸಿದ್ಧಿಯನ್ನು ಪಡೆಯುವನು. ವಿಶ್ವಾಮಿತ್ರ ಮಡುವಿನಲ್ಲಿ ಮಾಘಮಾಸದ ಪ್ರಾತಃಕಾಲ ಮಿಂದು ಬ್ರಾಹ್ಮಣನಿಗೆ ಎಳ್ಳಿನ ಪಾತ್ರೆಯನ್ನು ದಾನ ಮಾಡುವವನು ಸಮಸ್ತ ಪಾಪಮುಕ್ತನಾಗಿ ಬ್ರಹ್ಮಲೋಕದಲ್ಲಿ ಪೂಜ್ಯನಾಗುವನು.

ಯದ್ಯಪಿ ಸ್ಯಾದ್ದುರಾಚಾರಃ ಸರ್ವಾಶೀ ಸರ್ವವಿಕ್ರಯೀ ।
ಸುಪರ್ಣಾಖ್ಯಸ್ಯ ದೇವಸ್ಯ ಪುರತಃ ಶ್ರದ್ಧಯಾನ್ವಿತಃ ॥ ೩೦ ॥
ಪ್ರಾಯೋಪವೇಶನಂ ಕೃತ್ವಾ ಹ್ಯುಪವಾಸಪರೋ ನರಃ ।
ಯಸ್ತ್ಯಜೇನ್ಮಾನವಃ ಪ್ರಾಣಾನ್ನ ಸ ಭೂಯೋಽಭಿಜಾಯತೇ ॥ ೩೧ ॥
ಏವಂ ಸಿದ್ಧಿತ್ರಯಂ ಪ್ರೋಕ್ತಂ ಬ್ರಾಹ್ಮಣಾನಾಂ ಹಿತಾವಹಂ ।
ಸಾತ್ವಿಕಂ ಬ್ರಾಹ್ಮಣಶ್ರೇಷ್ಠಾಃ ಶಂಸಿತಂ ತ್ರಿದಶೈರಪಿ ॥ ೩೨ ॥
ಅನ್ಯಾನಿ ತತ್ರ ತೀರ್ಥಾನಿ ದೇವತಾಯತನಾನಿ ಚ ।
ತಾನಿ ಸ್ವರ್ಗಪ್ರದಾನ್ಯಾಹುರ್ಮುನಯಃ ಶಂಸಿತವ್ರತಾಃ ॥ ೩೩ ॥
ಏತದ್ವಃ ಸರ್ವಮಾಖ್ಯಾತಂ ಕ್ಷೇತ್ರಮಾಹಾತ್ಮ್ಯ ಮುತ್ತಮಂ ।
ಹಾಟಕೇಶ್ವರದೇವಸ್ಯ ಸರ್ವಪಾತಕನಾಶನಂ ॥ ೩೪ ॥
ಯೋಽತ್ರ ಸರ್ವೇಷು ತೀರ್ಥೇಷು ಸ್ನಾತ್ವಾ ಪಶ್ಯತಿ ಭಕ್ತಿತಃ ।
ಸರ್ವಾಣ್ಯಾಯತನಾನ್ಯೇವ ಸ ಪಾಪೋಽಪಿ ವಿಮುಚ್ಯತೇ ॥ ೩೫ ॥
ಏತತ್ಖಂಡಂ ಪುರಾಣಸ್ಯ ಪ್ರಥಮಂ ಪರಿಕೀರ್ತಿತಂ ।
ಕಾರ್ತಿಕೇಯಪ್ರಣೀತಸ್ಯ ಸರ್ವಪಾಪಹರಂ ಶುಭಂ ॥ ೩೬ ॥
ಯಶ್ಚೈತತ್ಕೀರ್ತಯೇದ್ಭಕ್ತ್ಯಾ ಶೃಣುಯಾದ್ವಾ ಸಮಾಹಿತಃ ।
ಇಹ ಭುಕ್ತ್ವಾ ಸುವಿಪುಲಾನ್ಭೋಗಾನ್ಯಾತಿ ತ್ರಿವಿಷ್ಟಪಂ ॥ ೩೭ ॥

---

೩೦–೩೧. ಸಮಸ್ತವನ್ನೂ ಭಕ್ಷಿಸುವವನೂ, ಸರ್ವವನ್ನೂ ವಿಕ್ರಯಿಸುವವನೂ ಆದ ದುರಾಚಾರಿಯೂ ಸುಪರ್ಣದೇವನ ಮುಂದೆ ಶ್ರದ್ಧೆಯಿಂದ ಪ್ರಾಯೋಪವೇಶ ಮಾಡಿ ಉಪವಾಸದಿಂದ ಪ್ರಾಣವನ್ನು ತ್ಯಜಿಸಿದರೆ ಮರಳಿ ಜನಿಸದೆ ಮುಕ್ತನಾಗುವನು.

೩೨. ಬ್ರಾಹ್ಮಣವರ್ಯರೆ! ಹೀಗೆ ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವ ದೇವಸ್ತುತ್ಯವಾದ ಮೂರು ಸಿದ್ಧಿಸ್ಥಾನಗಳನ್ನು ಹೇಳಿರುವೆನು.

೩೩. ಸ್ತುತ್ಯವಾದ ನಿಯಮವುಳ್ಳ ಮುನಿಗಳು ಅಲ್ಲಿರುವ ಇತರ ತೀರ್ಥಗಳನ್ನೂ, ದೇವಾಲಯಗಳನ್ನೂ ಸ್ವರ್ಗಪ್ರದಗಳೆನ್ನುವರು.

೩೪. ಈ ಹಾಟಕೇಶ್ವರನ ಸಮಸ್ತ ಪಾಪಗಳನ್ನು ನೀಗುವ ಉತ್ತಮ ಕ್ಷೇತ್ರ ಮಾಹಾತ್ಮ್ಯವನ್ನು ಸಂಪೂರ್ಣವಾಗಿ ನಿಮಗೆ ಹೇಳಿರುವೆನು.

೩೫. ಇಲ್ಲಿರುವ ಸಮಸ್ತ ತೀರ್ಥಗಳಲ್ಲಿ ಮಿಂದು ಭಕ್ತಿಯಿಂದ ಎಲ್ಲ ದೇವಾಲಯಗಳನ್ನೂ ನೋಡುವವನು ಪಾಪಿಯಾಗಿದ್ದರೂ ಮುಕ್ತನಾಗುವನು.

೩೬. ಇದು ಕಾರ್ತಿಕೇಯನು ಹೇಳಿದ ಸ್ಕಾಂದಪುರಾಣದ ಮೊದಲನೆಯ ಖಂಡವೆನ್ನಿಸಿಕೊಳ್ಳುವುದು.

೩೭. ಇದನ್ನು ಭಕ್ತಿಯಿಂದ ಹೇಳುವವನಾಗಲಿ, ಕೇಳುವವನಾಗಲಿ ಈ ಲೋಕದಲ್ಲಿ ಅತಿಶಯ ಭೋಗಗಳನ್ನನುಭವಿಸಿ ಸ್ವರ್ಗವನ್ನು ಸೇರುವನು.

ಸರ್ವತೀರ್ಥೇಷು ಯತ್ಪುಣ್ಯಂ ಸರ್ವದಾನೈಶ್ಚ ಯತ್ಫಲಂ ।
ತತ್ಫಲಂ ಸಮವಾಪ್ನೋತಿ ಶೃಣ್ವಂಛ್ರದ್ಧಾ ಸಮನ್ವಿತಃ ॥ ೩೮ ॥
ಶ್ರುತ್ವಾ ಪುರಾಣಮೇತದ್ಧಿ ಜನ್ಮಕೋಟಿ ಸಮುದ್ಭವಾತ್ ।
ಪಾತಕಾದ್ವಿಪ್ರಮುಚ್ಯೇತ ಕುಲಾನಾಮುದ್ಧರೇಚ್ಛತಂ ॥ ೩೯ ॥
ತತೋ ವ್ಯಾಸಃ ಪೂಜನೀಯೋ ವಸ್ತ್ರದಾನಾದಿ ಭೂಷಣೈಃ ।
ಗೋ ಭೂ ಹಿರಣ್ಯನಿರ್ವಾಪೈರ್ದಾನೈಶ್ಚ ವಿವಿಧೈರಪಿ ॥ ೪೦ ॥
ತೇನ ಸಂಪೂಜಿತೋ ವ್ಯಾಸಃ ಕೃಷ್ಣದ್ವೈಪಾಯನಃ ಪ್ರಭುಃ ।
ಸಾಕ್ಷಾತ್ಸತ್ಯವತೀ ಪುತ್ರೋ ಯೇನ ವ್ಯಾಸಃ ಸುಪೂಜಿತಃ ॥ ೪೧ ॥
ಏಕಮಪ್ಯಕ್ಷರಂ ಯಸ್ತು ಗುರುಃ ಶಿಷ್ಯೇ ನಿವೇದಯೇತ್ ।
ಪೃಥಿವ್ಯಾಂ ನಾಽಸ್ತಿ ತದ್ದ್ರವ್ಯಂ ಯದ್ದತ್ವಾ ಹ್ಯನೃಣೀ ಭವೇತ್ ॥ ೪೨ ॥
ಏತತ್ಪವಿತ್ರಮಾಯುಷ್ಯಂ ಧನ್ಯಂ ಸ್ವಸ್ತ್ಯಯನಂ ಮಹತ್ ।
ಯಚ್ಛ್ರುತ್ವಾ ಸರ್ವದುಃಖೇಭ್ಯೋ ಮುಚ್ಯತೇ ನಾಽತ್ರ ಸಂಶಯಃ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಚಿತ್ರೇಶ್ವರೀಪೀಠಕ್ಷೇತ್ರಮಾಹಾತ್ಮ್ಯವರ್ಣನಂ" ನಾಮ
ಚತುಃಪಂಚಾಶದುತ್ತರಶತತಮೋಽಧ್ಯಾಯಃ

---

೩೮. ಇದನ್ನು ಶ್ರದ್ಧೆಯಿಂದ ಕೇಳುವವನು ಸಕಲ ತೀರ್ಥಗಳ ಮತ್ತು ದಾನಗಳ ಫಲವನ್ನು ಪಡೆಯುವನು.

೩೯. ಈ ಪುರಾಣವನ್ನು ಕೇಳಿದವನು ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗಿ ಶತಕುಲಗಳನ್ನು ಉದ್ಧರಿಸುವನು.

೪೦–೪೧. ಅನಂತರ ಪೌರಾಣಿಕನನ್ನು ವಸ್ತ್ರ, ಒಡವೆ, ಗೋವು, ಭೂಮಿ, ಹಿರಣ್ಯಗಳಿಂದಲೂ, ನಾನಾ ಬಗೆಯ ದಾನಗಳಿಂದಲೂ ಪೂಜಿಸಬೇಕು. ಅದರಿಂದ ಸಾಕ್ಷಾತ್ ಸತ್ಯವತೀತನಯನಾದ ವ್ಯಾಸಮುನಿಯನ್ನು ಪೂಜಿಸಿದಂತಾಗುವುದು.

೪೨. ಗುರುವು ಶಿಷ್ಯನಿಗೆ ಉಪದೇಶಿಸಿದ ಒಂದಕ್ಷರಕ್ಕೂ ಸಮಾನವಾದ ದಾನದಿಂದ ಋಣವನ್ನು ಪರಿಹರಿಸುವ ದ್ರವ್ಯವು ಭೂಮಿಯಲ್ಲಿಲ್ಲ.

೪೩. ಇದು ಪವಿತ್ರವೂ, ಆಯುಷ್ಯವನ್ನು ಕೊಡುವುದೂ, ಪುಣ್ಯಕರವೂ, ಮಂಗಳಾಶ್ರಯವೂ ಆಗಿರುವುದು. ಇದನ್ನು ಕೇಳಿದ ಮನುಷ್ಯನು ಸಮಸ್ತ ದುಃಖಗಳಿಂದ ನಿಶ್ಚಯವಾಗಿಯೂ ಮುಕ್ತನಾಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಚಿತ್ರೇಶ್ವರೀಪೀಠಕ್ಷೇತ್ರಮಾಹಾತ್ಮ್ಯವರ್ಣನ" ವೆಂಬ
ನೂರೈವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಪಂಚಾಶದುತ್ತರಶತತಮೋಽಧ್ಯಾಯಃ

### ಕ್ಷತ್ರಿಯಕೃತ ನಿಜಭಾರ್ಯಾಸಂಬೋಧನವರ್ಣನಂ

**ಸೂತ ಉವಾಚ:—**

**ತಥಾಽನ್ಯೇ ತತ್ರ ತಿಷ್ಠಂತಿ ವಸವೋಽಷ್ಟೌ ದ್ವಿಜೋತ್ತಮಾಃ ।**
**ಸ್ಥಾನಮೇಕಂ ಸಮಾಶ್ರಿತ್ಯ ಸರ್ವದೈವ ಪ್ರಪೂಜಿತಾಃ ॥ ೧ ॥**
**ಏಕಾದಶ ತಥಾ ರುದ್ರಾ ಆದಿತ್ಯಾ ದ್ವಾದಶೈವ ತು ।**
**ದೇವವೈದ್ಯೌ ತಥಾ ಚಾಽನ್ಯಾವಶ್ವಿನೌ ತತ್ರ ಸಂಸ್ಥಿತೌ ॥ ೨ ॥**
**ದೇವತಾಸ್ತತ್ರ ತಿಷ್ಠಂತಿ ಕೋಟಿ ಕೋಟಿ ಪ್ರನಾಯಕಾಃ ।**
**ಏಕೈಕಾ ಬ್ರಾಹ್ಮಣಶ್ರೇಷ್ಠಾಃ ಕಲಿಕಾಲಭಯಾಕುಲಾಃ ॥ ೩ ॥**
**ಹಾಟಕೇಶ್ವರಜೇ ಕ್ಷೇತ್ರೇ ಯಜ್ಞಭಾಗಾಪ್ತಯೇ ಸದಾ ।**
**ಅಷ್ಟಮ್ಯಾಂ ಶುಕ್ಲಪಕ್ಷೇತು ಮಧುಮಾಸೇ ವ್ಯವಸ್ಥಿತೇ ॥ ೪ ॥**
**ಯಸ್ತಾನ್ವಸೂಂಛುಚಿರ್ಭೂತ್ವಾ ಸ್ನಾತ್ವಾ ಧೌತಾಂಬರೋ ನರಃ ।**
**ತರ್ಪಯಿತ್ವಾ ದ್ವಿಜಶ್ರೇಷ್ಠಾನ್ ಪಶ್ಚಾತ್ಸಂಪೂಜಯೇನ್ನರಃ ॥ ೫ ॥**
**ವಸವಸ್ತ್ವಾಕೃಣ್ವನ್ನಿತಿ ಮಂತ್ರೇಣಾನೇನ ಭಕ್ತಿತಃ ।**
**ನೈವೇದ್ಯಂ ಚ ತತೋ ದದ್ಯಾದ್ವಸವಶ್ಛಂದಸಾವಿತಿ ॥ ೬ ॥**

---

### ಕನ್ನಡದ ಅನುವಾದ

#### ಕ್ಷತ್ರಿಯಕೃತ ನಿಜಭಾರ್ಯಾಸಂಬೋಧನವರ್ಣನ

೧–೬. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಆ ಹಾಟಕೇಶ್ವರ ಕ್ಷೇತ್ರದಲ್ಲಿ ಕಲಿಕಾಲದಿಂದ ಭೀತರಾದ ಅಷ್ಟವಸುಗಳೂ, ಏಕಾದಶರುದ್ರರೂ, ದ್ವಾದಶಾದಿತ್ಯರೂ, ಅಶ್ವಿನೀ ದೇವತೆಗಳೂ, ಕೋಟ್ಯಂತರ ಇತರ ದೇವತೆಗಳೂ ಯಾವಾಗಲೂ ಭಕ್ತರಿಂದ ಪೂಜಿಸಿಕೊಳ್ಳುತ್ತ ಯಜ್ಞಭಾಗವನ್ನು ಪಡೆಯಲು ಒಂದೆಡೆಯಲ್ಲಿ ನೆಲೆಸಿರುವರು. ವಸಂತಋತುವಿನ ಶುಕ್ಲಪಕ್ಷದ ಅಷ್ಟಮಿ ದಿನ ಮನುಷ್ಯನು ಮಿಂದು ಶುದ್ಧನಾಗಿ ಮಡಿಬಟ್ಟೆಯನ್ನುಟ್ಟು ಮೊದಲು ಬ್ರಾಹ್ಮಣರನ್ನು ತೃಪ್ತಿಗೊಳಿಸಿ ಅನಂತರ ವಸುಗಳನ್ನು "ವಸವಸ್ತ್ವಾಕೃಣ್ವನ್" ಎಂಬ ಮಂತ್ರದಿಂದ ಭಕ್ತಿಪೂರ್ವಕವಾಗಿ ಆರಾಧಿಸಿ "ವಸವಶ್ಛಂದಸೌ" ಎಂಬ ಮಂತ್ರದಿಂದ ನೈವೇದ್ಯವನ್ನು ಸಮರ್ಪಿಸಬೇಕು.

ತತೋ ಧೂಪಂ ಸುಗಂಧಂ ಚ ಯೋ ಯಚ್ಛತಿ ಸಮಾಹಿತಃ ।
ವಸವಸ್ತ್ವಾಂಜೇತು ತಥಾ ಮಂತ್ರಮೇತಮುದೀರಯೇತ್ ॥ ೭ ॥
ಆರಾರ್ತಿಕಂ ತತೋ ಭೂಯೋ ಯಃ ಕರೋತಿ ದ್ವಿಜೋತ್ತಮಾಃ ।
ವಸವಸ್ತ್ವಾಂಜೇತು ತಥಾ ಶ್ರೂಯತಾಂ ಯತ್ಫಲಂ ಹಿ ತತ್ ॥ ೮ ॥
ಕನ್ಯಾಭಿಃ ಕೋಟಿಭಿರ್ಯಚ್ಚ ಪೂಜಿತಾಭಿರ್ಭವೇತ್ಫಲಂ
ವಸೂನಾಂ ಚೈವ ತತ್ಸರ್ವಮಷ್ಟಭಿಸ್ತೈಃ ಪ್ರಪೂಜಿತೈಃ ॥ ೯ ॥
ತಥಾ ಯೇ ದ್ವಾದಶಾದಿತ್ಯಾಸ್ತಸ್ಮಿನ್ ಕ್ಷೇತ್ರೇ ವ್ಯವಸ್ಥಿತಾಃ ।
ತಾನ್ ಸ್ಥಾಪ್ಯ ಪೂಜಯಿತ್ವಾ ಚ ಸಪ್ತಮ್ಯಾಮರ್ಕವಾಸರೇ ।
ಸಮ್ಯಕ್ಶ್ರದ್ಧಾಸಮೋಪೇತಃ ಪುಷ್ಪಗಂಧಾನುಲೇಪನೈಃ ॥ ೧೦ ॥
ಪಶ್ಚಾತ್ತತ್ಪುರತಸ್ತೇಷಾಂ ಸಮಸ್ತಾನ್ಯೇಕವಿಂಶತಿಃ ।
ಆದಿತ್ಯವ್ರತಸಂಜ್ಞಾನಿ ತಸ್ಯ ಪುಣ್ಯಫಲಂ ಶೃಣು ॥ ೧೧ ॥
ಕೋಟಿದ್ವಾದಶಕಂ ಯಸ್ತು ಸೂರ್ಯಾಣಾಂ ಪೂಜಯೇನ್ನರಃ ।
ತತ್ಫಲಂ ಪ್ರಾಪ್ನುಯಾತ್ಕೃತ್ಸ್ನಂ ಪೂಜಯನ್ನಾತ್ರ ಸಂಶಯಃ ॥ ೧೨ ॥
ತಥೈಕಾದಶ ರುದ್ರಾ ಯೇ ತತ್ರ ಕ್ಷೇತ್ರೇ ದ್ವಿಜೋತ್ತಮಾಃ ।
ಏಕಸ್ಥಾನೇ ಸ್ಥಿತಾಸ್ತೇಷಾಂ ಪೂಜಯಾ ಶ್ರೂಯತಾಂ ಫಲಂ ॥ ೧೩ ॥
ಯಸ್ತಾನ್ ಪೂಜಯತೇ ಭಕ್ತ್ಯಾ ಸ್ಥಾಪಯಿತ್ವಾ ಸುರೇಶ್ವರಾನ್ ।
ಚೈತ್ರಶುಕ್ಲ ಚತುರ್ದಶ್ಯಾಂ ಜಪೇಚ್ಚ ಶತರುದ್ರಿಯಂ ॥ ೧೪ ॥

---

೭. ತರುವಾಯ "ವಸವಸ್ತ್ವಾಂಜೇತು" ಎಂಬ ಮಂತ್ರವನ್ನುಚ್ಚರಿಸಿ ಸಾವಧಾನ ಮನಸ್ಸಿನಿಂದ ಧೂಪಗಂಧಗಳನ್ನರ್ಪಿಸಬೇಕು.

೮. ಬಳಿಕ "ವಸವಸ್ತ್ವಾಂಜೇತು" ಎಂಬ ಮಂತ್ರದಿಂದ ಆರತಿಯನ್ನು ಮಾಡಬೇಕು. ಇದರ ಫಲವನ್ನು ಹೇಳುವೆನು ಕೇಳಿರಿ.

೯. ಈ ಅಷ್ಟವಸುಗಳನ್ನು ಪೂಜಿಸುವುದರಿಂದ ಕೋಟಿ ಕನ್ಯೆಯರನ್ನು ಆರಾಧಿಸಿದ ಫಲವು ದೊರೆಯುವುದು.

೧೦–೧೧. ಸಪ್ತಮಿಯಾ ಭಾನುವಾರದ ದಿನ ಆ ಕ್ಷೇತ್ರದಲ್ಲಿ ದ್ವಾದಶಾದಿತ್ಯರನ್ನು ಪುಷ್ಪ ಗಂಧ ಮೊದಲಾದುವುಗಳಿಂದ ಶ್ರದ್ಧೆಯಿಂದ ಪೂಜಿಸಿ ಅವರ ಮುಂದೆ ಇಪ್ಪತ್ತೊಂದು ಆದಿತ್ಯ ವ್ರತಗಳನ್ನು ಮಾಡುವುದರಿಂದಾಗುವ ಫಲವನ್ನು ಕೇಳಿರಿ.

೧೨. ಈ ದ್ವಾದಶಾದಿತ್ಯರನ್ನು ಪೂಜಿಸುವುದರಿಂದ ಹನ್ನೆರಡುಕೋಟಿ ಆದಿತ್ಯರನ್ನು ಪೂಜಿಸಿದ ಸಂಪೂರ್ಣ ಫಲವು ಲಭಿಸುವುದು.

೧೩. ಹಾಗೆಯೇ ಆ ಕ್ಷೇತ್ರದಲ್ಲಿ ಒಂದೆಡೆಯಲ್ಲಿರುವ ಏಕಾದಶ ರುದ್ರರನ್ನು ಪೂಜಿಸುವುದರಿಂದಾಗುವ ಫಲವನ್ನು ಕೇಳಿರಿ.

೧೪–೧೫. ಚೈತ್ರ ಶುಕ್ಲ ಚತುರ್ದಶಿಯ ದಿನ ಆ ಏಕಾದಶರುದ್ರರನ್ನು ಸ್ಥಾಪಿಸಿ ಭಕ್ತಿಯಿಂದ ಪೂಜಿಸಿ ಶತರುದ್ರಿಯವನ್ನು ಜಪಿಸುವವನು ಹನ್ನೊಂದು

ಏಕಾದಶಪ್ರಮಾಣೇನ ಕೋಟಿಯುಸ್ತೇನ ಪೂಜಿತಾಃ ।
ಭವಂತಿ ನಾಽತ್ರ ಸಂದೇಹಃ ಸತ್ಯಮೇತನ್ಮಯೋದಿತಂ ॥ ೧೫ ॥
ಯಥಾ ತಾವಶ್ವಿನೌ ತತ್ರ ದೇವವೈದ್ಯೌ ವ್ಯವಸ್ಥಿತೌ ।
ಆಶ್ವಿನೇ ಮಾಸಿ ಚಾಶ್ವಿನ್ಯಾಂ ಪೂರ್ಣಿಮಾಯಾಂ ತಥಾ ತಿಥೌ ॥ ೧೬ ॥
ಯಸ್ತೌ ಸಂಪೂಜಯಿತ್ವಾ ತು ಹ್ಯಶ್ವಿನೀಸೂಕ್ತಮುಚ್ಚರೇತ್ ।
ದ್ವಿಕೋಟಿ ಗುಣಿತಂ ಪುಣ್ಯಂ ಸಮುಕ್ತೇನ ಸಮಾಪ್ಯತೇ ॥ ೧೭ ॥
ಏತದ್ವಃ ಸರ್ವಮಾಖ್ಯಾತಂ ಮಾಹಾತ್ಮ್ಯಂ ವಸುಸಂಭವಂ ।
ಆದಿತ್ಯಾನಾಂ ಚ ರುದ್ರಾಣಾಮಶ್ವಿನೋರ್ದ್ವಿಜಸತ್ತಮಾಃ ॥ ೧೮ ॥

ಸೂತ ಉವಾಚ :—

ತಥಾಽನ್ಯೋಽಪಿ ಚ ತತ್ರಾಽಸ್ತಿ ಯಾಜ್ಞವಲ್ಕ್ಯಪ್ರತಿಷ್ಠಿತಃ ।
ಪುಷ್ಪಾದಿತ್ಯ ಇತಿ ಖ್ಯಾತಃ ಸರ್ವಕಾಮಪ್ರದೋ ನೃಣಾಂ ॥ ೧೯ ॥
ಯೋ ಯಂ ಕಾಮಮಭಿಧ್ಯಾಯ ತಂ ಪೂಜಯತಿ ಮಾನವಃ ।
ಸ ತಂ ಕೃತ್ಸ್ನಮವಾಪ್ನೋತಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೨೦ ॥
ಅಪುತ್ರೋ ಲಭತೇ ಪುತ್ರಾನ್ ಧನಾರ್ಥೀ ಧನಮಾಪ್ನುಯಾತ್ ।
ಬಹುವೈರೋಽರಿನಾಶಂ ಚ ವಿದ್ಯಾರ್ಥೀ ಶಾಸ್ತ್ರವಿದ್ಭವೇತ್ ॥ ೨೧ ॥

---

ಕೋಟಿ ರುದ್ರರನ್ನು ಪೂಜಿಸಿದವನಾಗುವನು. ನಾನು ಹೇಳಿರುವುದು ನಿಜ.

೧೬–೧೭. ಹಾಗೆಯೇ ಆಶ್ವಿನ ಮಾಸದ ಹುಣ್ಣಿಮೆಯ ದಿನ ದೇವವೈದ್ಯರಾದ ಅಶ್ವಿನೀ ದೇವತೆಗಳನ್ನು ಆರಾಧಿಸಿ ಅಶ್ವಿನೀ ಸೂಕ್ತವನ್ನು ಉಚ್ಚರಿಸಿದವನಿಗೆ ಎರಡುಕೋಟಿ ಅಶ್ವಿನೀ ದೇವತೆಗಳನ್ನು ಪೂಜಿಸಿದಷ್ಟು ಪುಣ್ಯವು ದೊರೆಯುವುದು.

೧೮. ದ್ವಿಜವರ್ಯರೆ! ನಿಮಗೆ ವಸುಗಳು, ಆದಿತ್ಯರು, ರುದ್ರರು, ಅಶ್ವಿನೀ ದೇವತೆಗಳು ಇವರ ಮಾಹಾತ್ಮ್ಯವನ್ನೆಲ್ಲ ಹೇಳಿದ್ದೇನೆ.

೧೯–೨೦. ಸೂತನು ಹೇಳುತ್ತಾನೆ:—ಅಲ್ಲಿ ಯಾಜ್ಞವಲ್ಕ್ಯನು ಪ್ರತಿಷ್ಠೆ ಮಾಡಿದುದೂ, ಮಾನವರಿಗೆ ಎಲ್ಲ ಇಷ್ಟಾರ್ಥಗಳನ್ನು ನೀಡುವುದೂ ಮತ್ತೊಬ್ಬ ಪುಷ್ಪಾದಿತ್ಯ ದೇವತೆಯಿರುವುದು. ಮನುಷ್ಯನು ಯಾವ ಯಾವ ಇಷ್ಟಾರ್ಥವನ್ನು ಆಲೋಚಿಸಿ ಅವನನ್ನು ಪೂಜಿಸುವನೊ, ದುರ್ಲಭವಾಗಿದ್ದರೂ ಆ ಇಷ್ಟಾರ್ಥವನ್ನು ಸಂಪೂರ್ಣವಾಗಿ ಪಡೆಯುವನು.

೨೧. ಮಕ್ಕಳಿಲ್ಲದವನು ಮಕ್ಕಳನ್ನೂ, ಧನವನ್ನಿಚ್ಛಿಸುವವನು ಧನವನ್ನೂ ಹೊಂದುವನು. ಶತ್ರುಪೀಡಿತನಾಗಿರುವವನ ಶತ್ರುಗಳು ನಾಶವಾಗುವರು. ವಿದ್ಯಾರ್ಥಿಯು ಶಾಸ್ತ್ರಜ್ಞನಾಗುವನು.

ಸಪ್ತಮ್ಯಾಮರ್ಕವಾರೇಣ ಯಸ್ತಂ ಪಶ್ಯತಿ ಮಾನವಃ ।
ಮುಚ್ಯೇದ್ದಿನೋದ್ಭವಾತ್ಪಾಪಾನ್ಮಹತೋಽಪಿ ದ್ವಿಜೋತ್ತಮಾಃ ॥ ೨೨ ॥
ಪೂಜಯಾ ಹಿ ಪ್ರಣಶ್ಯೇತ ಪಾಪಂ ವರ್ಷಸಮುದ್ಭವಂ ।
ನಾಶಂ ಯಾತಿ ನ ಸಂದೇಹಸ್ತಮಃ ಸೂರ್ಯೋದಯೇ ಯಥಾ ॥ ೨೩ ॥
ಅಷ್ಟೋತ್ತರಶತಂ ಚೈವ ಯಃ ಕರೋತಿ ಪ್ರದಕ್ಷಿಣಾಂ ।
ಫಲಹಸ್ತಃ ಸ ಮುಚ್ಯೇತಿ ಹ್ಯಾಜನ್ಮಮರಣಾದಘಾತ್ ॥ ೨೪ ॥
ಪ್ರದಕ್ಷಿಣಾಂ ಪ್ರಕುರ್ವಾಣೋ ಯೋ ಯಂ ಕಾಮಮಭೀಪ್ಸತಿ ।
ಸ ತಮಾಪ್ನೋತ್ಯಸಂದಿಗ್ಧಂ ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥ ೨೫ ॥
ಸಂಕ್ರಾಂತೌ ಸೂರ್ಯವಾರೇಣ ಯಃ ಕುರ್ಯಾತ್ಸ್ನಾಪನಕ್ರಿಯಾಂ ।
ಅಭೀಷ್ಟಂ ಸಿದ್ಧ್ಯತೇ ತಸ್ಯ ಮೇಷೇ ವಾ ಯದಿ ವಾ ತುಲೇ ॥ ೨೬ ॥
ತಸ್ಮಿನ್ ಸರ್ವಪ್ರಯತ್ನೇನ ವಾಂಛದ್ಭಿರೀಪ್ಸಿತಂ ಫಲಂ ।
ಸ ದೇವೋ ವೀಕ್ಷಣೀಯಶ್ಚ ಪೂಜನೀಯೋ ವಿಶೇಷತಃ ॥ ೨೭ ॥
ಯದ್ದೇವೈಃ ಸಕಲೈರ್ದೃಷ್ಟೈಶ್ಚಮತ್ಕಾರಪುರೋದ್ಭವೈಃ ।
ಫಲಮಾಪ್ನೋತಿ ತದ್ದೃಷ್ಟ್ವಾ ತೇನ ತತ್ಫಲಮಾಪ್ನುಯಾತ್ ॥ ೨೮ ॥

---

೨೨. ಸಪ್ತಮೀ ಭಾನುವಾರದ ದಿನ ಅವನನ್ನು ದರ್ಶನ ಮಾಡಿದವನ ಒಂದು ದಿನದ ಮಹಾ ಪಾಪವೂ ಪರಿಹಾರವಾಗುವುದು.

೨೩. ಅವನನ್ನು ಪೂಜೆ ಮಾಡುವುದರಿಂದ ಒಂದು ವರ್ಷ ಮಾಡಿದ ಪಾಪವು ಸೂರ್ಯನು ಉದಯಿಸಿದಾಗ ಕತ್ತಲೆಯು ನಾಶವಾಗುವಂತೆ ನಶಿಸುವುದು.

೨೪. ಕೈಯಲ್ಲಿ ಫಲವನ್ನು ಹಿಡಿದುಕೊಂಡು ನೂರೆಂಟುಸಾರಿ ಪ್ರದಕ್ಷಿಣೆಗಳನ್ನು ಮಾಡುವವನು ಹುಟ್ಟಿದ ಮೊದಲ್ಗೊಂಡು ಮರಣಕಾಲದವರೆಗೆ ಮಾಡಿದ ಪಾಪದಿಂದ ಮುಕ್ತನಾಗುವನು.

೨೫. ಪ್ರದಕ್ಷಿಣೆ ಮಾಡುವಾಗ ಯಾವ ಯಾವ ಇಷ್ಟಾರ್ಥವನ್ನು ಅಪೇಕ್ಷಿಸುವನೋ ಅವುಗಳನ್ನೆಲ್ಲ ನಿಶ್ಚಯವಾಗಿಯೂ ಹೊಂದುವನು. ನಿಷ್ಕಾಮನಾದರೆ ಮೋಕ್ಷವನ್ನು ಪಡೆಯುವನು.

೨೬. ಮೇಷ ಅಥವಾ ತುಲಾ ಮಾಸದ ಸಂಕ್ರಾಂತಿ ಭಾನುವಾರದ ದಿನ ಆ ಪುಷ್ಪಾದಿತ್ಯನಿಗೆ ಅಭಿಷೇಕ ಮಾಡಿದರೆ ಇಷ್ಟಾರ್ಥವು ಕೈಗೂಡುವುದು.

೨೭. ಆ ದಿನ ಇಷ್ಟಾರ್ಥವನ್ನು ಅಪೇಕ್ಷಿಸುವವರು ಪ್ರಯತ್ನದಿಂದ ಅವನನ್ನು ದರ್ಶನ ಮಾಡಿ ಪೂಜಿಸಬೇಕು.

೨೮. ಅವನನ್ನು ದರ್ಶನಮಾಡುವ ಮನುಷ್ಯನು ಚಮತ್ಕಾರಪುರದ ಸಕಲ ದೇವತೆಗಳನ್ನು ದರ್ಶನ ಮಾಡಿದುದರಿಂದಾಗುವ ಫಲವನ್ನು ಪಡೆಯುವನು.

ಋಷಯ ಊಚುಃ:—
ಯಾಜ್ಞವಲ್ಕ್ಯೇನ ದೇವೋಽಸೌ ಯದಿ ತಾವತ್ಪ್ರತಿಷ್ಠಿತಃ ।
ಪುಷ್ಪಾದಿತ್ಯಃ ಕಥಂ ಪ್ರೋಕ್ತ ಏತನ್ನೋ ವಕ್ತುಮರ್ಹಸಿ ॥ ೨೯ ॥
ಸೂತ ಉವಾಚ:—
ಅತ್ರ ವಃ ಕೀರ್ತಯಿಷ್ಯಾಮಿ ಚೇತಿಹಾಸಂ ಪುರಾತನಂ ।
ಪುಷ್ಪಾದಿತ್ಯೋ ಯಥಾ ಜಾತೋ ಯಾಜ್ಞವಲ್ಕ್ಯಪ್ರತಿಷ್ಠಿತಃ ॥ ೩೦ ॥
ಅಸ್ತ್ಯತ್ರ ಮೇದಿನೀ ಪೃಷ್ಠೇ ಸುಪುರಂ ವೈ ದಿಶಂ ಮಹತ್ ।
ನಾನಾಸೌಧಸಮಾಕೀರ್ಣಂ ವರಪ್ರಾಕಾರಶೋಭಿತಂ ॥ ೩೧ ॥
ಉದ್ಯಾನಶತಸಂಕೀರ್ಣಂ ತಡಾಗೈರುಪಶೋಭಿತಂ ।
ತತ್ರಾಸೀತ್ಪಾರ್ಥಿವಶ್ರೇಷ್ಠಶ್ಚಿತ್ರವರ್ಮೇತಿ ವಿಶ್ರುತಃ ॥ ೩೨ ॥
ನ ದುರ್ಭಿಕ್ಷಂ ನ ಚ ವ್ಯಾಧಿರ್ನಚ ಚೌರಕೃತಂ ಭಯಂ ।
ತಸ್ಮಿಂಛಾಸತಿ ಧರ್ಮಜ್ಞೇ ಸತತಂ ಧರ್ಮವತ್ಸಲೇ ॥ ೩೩ ॥
ತತ್ಪುರೇ ಕ್ಷತ್ರಿಯೋ ಜಾತ್ಯಾ ಮಣಿಭದ್ರ ಇತಿ ಸ್ಮೃತಃ ।
ಸ ವೈ ಧನೇನ ಸಂಯುಕ್ತಃ ಪಿತೃಪೈತಾಮಹೇನ ಚ ॥ ೩೪ ॥
ತತ್ಪುರಂ ಸಕಲಂ ಚೈವ ಸ ರಾಜಾ ಮಂತ್ರಿಭಿಃ ಸಹ ।
ಕುಸೀದಾಹೃತವಿತ್ತೇನ ವರ್ತತೇ ಕಾರ್ಯ ಉತ್ಥಿತೇ ॥ ೩೫ ॥

---

೨೯. ಋಷಿಗಳು ಹೇಳುತ್ತಾರೆ:—ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಇವನು ಪುಷ್ಪಾದಿತ್ಯನೆಂದು ಹೇಗೆ ಪ್ರಸಿದ್ಧನಾದನು? ಇದನ್ನು ನಮಗೆ ಹೇಳು.

೩೦. ಸೂತನು ಹೇಳುತ್ತಾನೆ:—ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಈ ಪುಷ್ಪಾದಿತ್ಯನು ಹೇಗಾದನೆಂಬ ವಿಷಯದಲ್ಲಿ ಒಂದು ಪುರಾತನವಾದ ಕಥೆಯನ್ನು ಹೇಳುವೆನು.

೩೧–೩೨. ಈ ಭೂಲೋಕದಲ್ಲಿ ಅನೇಕ ಪ್ರಾಸಾದಗಳಿಂದ ತುಂಬಿರುವುದೂ, ಉತ್ತಮ ಪ್ರಾಕಾರಗಳಿಂದ ಅಲಂಕಾರಗೊಂಡುದೂ, ಅನೇಕ ಉದ್ಯಾನಗಳಿರುವುದೂ, ಕೆರೆಗಳಿಂದ ಅಲಂಕೃತವಾಗಿರುವುದೂ ಆದ ವೈದಿಶವೆಂಬ ಒಂದು ಮಹಾನಗರವಿದ್ದಿತು. ಅಲ್ಲಿ ಚಿತ್ರವರ್ಮನೆಂಬ ದೊರೆಯಿದ್ದನು.

೩೩. ಧರ್ಮವನ್ನರಿತವನೂ, ಧರ್ಮಪ್ರಿಯನೂ ಆದ ಆ ಚಿತ್ರವರ್ಮನು ರಾಜ್ಯವನ್ನಾಳುತ್ತಿರಲು ಧುರ್ಭಿಕ್ಷ, ರೋಗ, ಕಳ್ಳರ ಭಯ ಇವುಗಳಿರಲಿಲ್ಲ.

೩೪. ಆ ಪಟ್ಟಣದಲ್ಲಿ ಮಣಿಭದ್ರನೆಂಬೋರ್ವ ಕ್ಷತ್ರಿಯನಿದ್ದನು. ಅವನು ತಂದೆ ಅಜ್ಜಂದಿರಿಂದ ಬಂದ ಹಣದಿಂದ ಧನಿಕನಾಗಿದ್ದನು.

೩೫. ಆ ಚಿತ್ರವರ್ಮ ರಾಜನು ಮಂತ್ರಿಗಳೊಡನೆ ಸಕಲ ಕಾರ್ಯಗಳಲ್ಲಿ ಬಡ್ಡಿಯಿಂದ ಹಣವನ್ನು ಗಳಿಸಿರುವ ಮಣಿಭದ್ರನ ಜತೆಯಲ್ಲಿ ಪಟ್ಟಣದಲ್ಲೆಲ್ಲ ಇರುತ್ತಿದ್ದನು.

ಸ ಚ ಕಾಯೇನ ಕುಬ್ಜಃ ಸ್ಯಾಜ್ಜರಾವ್ಯಾಪ್ತಸ್ತಥೈವ ಚ ।
ವಲೀಪಲಿತಗಾತ್ರಶ್ಚ ಹ್ಯತ್ಯಂತಂ ಚ ವಿರೂಪಧೃಕ್ ॥ ೩೬ ॥
ತಥಾಚೈವ ಕುಕೀನಾಶಃ ಪ್ರಭೂತೇಽಪಿ ಧನೇ ಸತಿ ।
ನ ದದಾತಿ ಸ ಪಾಪಾತ್ಮಾ ಕಸ್ಯಚಿತ್ಕಿಂಚಿದೇವ ಹಿ ।
ನ ಭಕ್ಷಯತಿ ತೃಷ್ಣಾರ್ತಃ ಸ್ವಯಮೇವ ಕಥಂಚನ ॥ ೩೭ ॥
ಏವಂ ವಿಧೋಽಪಿ ಸೋಽತೀವ ವಿರೂಪೋಽಪಿ ಸುದುರ್ಮತಿಃ ।
ಪ್ರಾರ್ಥಯಾಮಾಸ ವೈ ಕನ್ಯಾಂ ಸ್ವಜಾತ್ಯಾಂ ವೀಕ್ಷ್ಯ ಸುಂದರೀಂ ॥ ೩೮ ॥
ಬಿಂಬೋಷ್ಠೀಂ ಚಾರುದೇಹಾಂ ಚ ಮುಷ್ಟಿಗ್ರಾಹ್ಯ ಕೃಶೋದರೀಂ ।
ಪದ್ಮಪತ್ರವಿಶಾಲಾಕ್ಷೀಂ ಗೂಢಗುಲ್ಫಾಂ ಸುಕೇಶಿಕಾಂ ॥ ೩೯ ॥
ರಕ್ತಾಂ ಸಪ್ತಸು ಗಾತ್ರೇಷು ತ್ರಿಗಂಭೀರಾಂ ತಥಾ ಪುನಃ ।
ಸರ್ವಲಕ್ಷಣ ಸಂಪೂರ್ಣಾಂ ಜಾತೀಯಾಂ ಸುಮನೋರಮಾಂ ॥ ೪೦ ॥
ಕ್ಷತ್ರಿಯಾದ್ದ್ವಿಜಶಾರ್ದೂಲಾ ದರಿದ್ರೇಣ ಚ ಪೀಡಿತಾ ।
ತೇನ ತತ್ಸಕಲಂ ವೃತ್ತಂ ಭಾರ್ಯಾಯೈ ಸನ್ನಿವೇದಿತಂ ॥ ೪೧ ॥

---

೩೬. ಆ ಮಣಿಭದ್ರನು ಗೂನು ಬೆನ್ನಿನವನೂ, ಮುದುಕನೂ, ಸುಕ್ಕುಗಳಿಂದ ತುಂಬಿದ ಶರೀರವುಳ್ಳವನೂ ಆಗಿ ಅತ್ಯಂತ ಕುರೂಪಿಯಾಗಿದ್ದನು.

೩೭. ಅತಿ ನೀಚನಾದ ಅವನು ಬಹಳ ಐಶ್ವರ್ಯವಂತನಾಗಿದ್ದರೂ ಯಾರಿಗೂ ಏನನ್ನೂ ಕೊಡುತ್ತಿರಲಿಲ್ಲ. ತಾನು ಹಸಿವುಗೊಂಡಿದ್ದರೂ ಏನನ್ನೂ ತಿನ್ನುತ್ತಿರಲಿಲ್ಲ.

೩೮–೪೦. ಹೀಗೆ ಆ ದುಷ್ಟನು ಅತ್ಯಂತ ಕುರೂಪಿಯಾಗಿದ್ದರೂ ತನ್ನ ಜಾತಿಯವಳೂ, ಸುಂದರಿಯೂ, ತೊಂಡೆಹಣ್ಣಿನಂತಹ ತುಟಿಯಿಂದೊಪ್ಪುವವಳೂ, ಸುಂದರ ಶರೀರವುಳ್ಳವಳೂ, ಹಿಡಿಯಿಂದ ಹಿಡಿಯಲರ್ಹವಾದ ಸೊಂಟವುಳ್ಳವಳೂ, ತಾವರೆ ದಳದಂತೆ ವಿಶಾಲವಾದ ನಯನಗಳುಳ್ಳವಳೂ, ಪುಷ್ಟವಾದ ಹಿಮ್ಮಡಿಯುಳ್ಳವಳೂ, ಮನೋಹರವಾದ ಕೂದಲುಳ್ಳವಳೂ, ಶರೀರದ ಏಳು ಭಾಗಗಳಲ್ಲಿ ರಕ್ತವರ್ಣಳೂ, ಮೂರು ಸ್ಥಳದಲ್ಲಿ ಗಂಭೀರಳೂ, ಸಮಸ್ತ ಲಕ್ಷಣಗಳಿಂದ ಸಹಿತಳೂ ಆದ ಓರ್ವ ಕನ್ಯೆಯನ್ನು ವಿವಾಹ ಮಾಡಿಕೊಳ್ಳಲು ಪ್ರಾರ್ಥಿಸಿದನು.

೪೧. ದ್ವಿಜವರ್ಯರೆ! ದಾರಿದ್ರ್ಯಪೀಡಿತನಾದ ಆ ಕನ್ಯೆಯ ತಂದೆಯು ಮಣಿಭದ್ರನು ಹೇಳಿದ ಸಕಲ ವೃತ್ತಾಂತಗಳನ್ನೂ ತನ್ನ ಮಡದಿಗೆ ತಿಳಿಸಿದನು.

ತಚ್ಛ್ರುತ್ವಾ ಸಾ ಚ ದುಃಖೇನ ಮೂರ್ಛಿತಾ ಸಂಬಭೂವ ಹ ।
ಸಂಬೋಧಿತಾ ತತಸ್ತೇನ ವಾಕ್ಯೈರ್ದೃಷ್ಟಾಂತಸಂಭವೈಃ ॥ ೪೨ ॥
ಕ್ಷತ್ರಿಯ ಉವಾಚ:—
ನ ಸಾ ವಿದ್ಯಾ ನ ತಚ್ಛಿಲ್ಪಂ ನ ತತ್ಕಾರ್ಯಂ ನ ಸಾ ಕಲಾ ।
ಅರ್ಥಾರ್ಥಿಭಿರ್ನ ತಜ್ಜ್ಞಾನಂ ಧನಿನಾಂ ಯನ್ನ ದೀಯತೇ ॥ ೪೩ ॥
ಇಹಲೋಕೇ ಚ ಧನಿನಾಂ ಪರೋಽಪಿ ಸ್ವಜನಾಯತೇ ।
ಸ್ವಜನೋಽಪಿ ದರಿದ್ರಾಣಾಂ ಕಾರ್ಯಾರ್ಥೇ ದುರ್ಜನಾಯತೇ ॥ ೪೪ ॥
ಅರ್ಥೇಭ್ಯೋಹಿ ವಿವೃದ್ಧೇಭ್ಯಃ ಸಂಭೃತೇಭ್ಯಸ್ತತಸ್ತತಃ ।
ಪ್ರವರ್ತಂತೇ ಕ್ರಿಯಾಃ ಸರ್ವಾಃ ಪರ್ವತೇಭ್ಯೋ ಯಥಾಪಗಾಃ ॥ ೪೫ ॥
ಪೂಜ್ಯತೇ ಯದಪೂಜ್ಯೋಽಪಿ ಯದಗಮ್ಯೋಽಪಿ ಗಮ್ಯತೇ ।
ವಂದ್ಯತೇ ಯದವಂದ್ಯೋಽಪಿ ಹ್ಯನುಬಂಧೋ ಧನಸ್ಯ ಸಃ ॥ ೪೬ ॥
ಅಶನಾದಿಂದ್ರಿಯಾಣೀವ ಸ್ಯುಃ ಕಾರ್ಯಾಣ್ಯಖಿಲಾನಿ ಹ ।
ಸರ್ವಸ್ಮಾತ್ಕಾರಣಾದ್ವಿತ್ತಂ ಸರ್ವಸಾಧನಮುಚ್ಯತೇ ॥ ೪೭ ॥

---

೪೨. ಅವಳು ಅದನ್ನು ಕೇಳಿ ದುಃಖದಿಂದ ಮೂರ್ಛೆಗೊಂಡಳು. ಅನಂತರ ಪತಿಯು ಅವಳನ್ನು ದೃಷ್ಟಾಂತಗಳಿಂದ ಕೂಡಿದ ಮಾತುಗಳಿಂದ ಎಚ್ಚರಗೊಳಿಸಿದನು.

೪೩. ಕ್ಷತ್ರಿಯನು ಹೇಳುತ್ತಾನೆ:—ದ್ರವ್ಯವನ್ನು ಅಪೇಕ್ಷಿಸುವವರು ಹಣಗಾರರಿಗೆ ಕೊಡದಿರುವ ವಿದ್ಯೆ, ಶಿಲ್ಪ, ಕಾರ್ಯ, ಕಲೆ, ಜ್ಞಾನ ಇವುಗಳಲ್ಲಿ ಯಾವುವೂ ಇಲ್ಲ. ಹಣದ ಆಶೆಯಿಂದ ಎಲ್ಲವನ್ನೂ ಕೊಡುವರು.

೪೪. ಈ ಲೋಕದಲ್ಲಿ ಧನಿಕರಿಗೆ ಶತ್ರುವೂ ಬಂಧುವಾಗುವನು. ಬಡವರಿಗೆ ಕಾರ್ಯನಿರ್ವಾಹ ವೇಳೆಯಲ್ಲಿ ಬಂಧುವೂ ದುಷ್ಟನಾಗುವನು.

೪೫. ಶೇಖರಿಸಿಟ್ಟ ದ್ರವ್ಯಗಳಿಂದ ಪರ್ವತಗಳಿಂದ ನದಿಗಳು ಹುಟ್ಟುವಂತೆ ಸಮಸ್ತ ಕಾರ್ಯಗಳೂ ನೆರವೇರುವುವು.

೪೬. ಧನಿಕನು ಅಪೂಜ್ಯನಾಗಿದ್ದರೂ ಪೂಜ್ಯನಾಗುವನು. ಸಮೀಪಕ್ಕೆ ಹೋಗಲನರ್ಹನಾದರೂ ಅರ್ಹನಾಗುವನು. ಅವಂದ್ಯನಾದರೂ ವಂದ್ಯನಾಗುವನು. ಇದು ಹಣದ ಪ್ರಭಾವವು.

೪೭. ಭೋಜನದಿಂದ ಇಂದ್ರಿಯಗಳು ವೃದ್ಧಿಯಾಗುವಂತೆ ಧನದಿಂದ ಸಮಸ್ತ ಕಾರ್ಯಗಳೂ ಆಗುವುವು. ಆದುದರಿಂದ ಸಕಲ ಕಾರಣಗಳಿಂದ ದ್ರವ್ಯವು ಎಲ್ಲಕ್ಕೂ ಸಾಧನವೆನ್ನಿಸಿಕೊಳ್ಳುವುದು.

ಅರ್ಥಾರ್ಥೀ ಜೀವಲೋಕೋಽಯಂ ಸ್ಮಶಾನಮಪಿ ಸೇವತೇ ।
ಜನಿತಾರಮಪಿ ತ್ಯಕ್ತ್ವಾ ನಿಃಸ್ವಃ ಸಂಯಾತಿ ದೂರತಃ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕ್ಷತ್ರಿಯಕೃತ ನಿಜಭಾರ್ಯಾಸಂಬೋಧನವರ್ಣನಂ"
ನಾಮ ಪಂಚಪಂಚಾಶದುತ್ತರಶತತಮೋಽಧ್ಯಾಯಃ

---

೪೮. ಹಣವನ್ನು ಬಯಸುವ ಮನುಷ್ಯನು ಸ್ಮಶಾನವನ್ನಾದರೂ ಸೇವಿಸುತ್ತಾನೆ. ಬಡವನಾದ ತಂದೆಯನ್ನಾದರೂ ತ್ಯಜಿಸಿ ದೂರ ಹೋಗುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕ್ಷತ್ರಿಯಕೃತ ನಿಜಭಾರ್ಯಾಸಂಬೋಧನವರ್ಣನ" ವೆಂಬ
ನೂರೈವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಟ್‌ಪಂಚಾಶದುತ್ತರಶತತಮೋಽಧ್ಯಾಯಃ

## ಮಣಿಭದ್ರಕೃತ ಪುಷ್ಪಬ್ರಾಹ್ಮಣವಿಡಂಬನವರ್ಣನಂ

**ಸೂತ ಉವಾಚ :—**

**ಏವಂ ಸಂಬೋಧಿತಾ ತೇನ ಸಾ ಭಾರ್ಯಾ ವಿಜನೇ ಗತಾ ।**
**ಕನ್ಯಾಪ್ರದಾನಸ್ಯ ರುಚಿಃ ಸಂಜಾತಾ ತದನಂತರಂ ॥ ೧ ॥**
**ತತಃ ಸ ಪಾದೌ ಪ್ರಕ್ಷಾಲ್ಯ ಮಣಿಭದ್ರಸ್ಯ ಸತ್ವರಂ ।**
**ಉದಕಂ ಸಾಕ್ಷತಂ ಹಸ್ತೇ ಕನ್ಯಾದಾನಕೃತೇ ದದೌ ॥ ೨ ॥**
**ಸೋಽಪಿ ಹಸ್ತಕೃತೇ ತೋಯೇ ತಂ ಕ್ಷತ್ರಿಯಮುವಾಚ ಹ ।**
**ಅದ್ಯೈವ ಕುರು ಮೇ ಶೀಘ್ರಂ ವಿವಾಹಂ ಕನ್ಯಯಾ ಸಹ ।**
**ಯಸ್ಮಾದಿಚ್ಛಾಮಿ ಸಂಸ್ಥಾತುಂ ತೇನ ತೇ ಗೃಹಮಾಗತಃ ॥ ೩ ॥**

**ಕ್ಷತ್ರಿಯ ಉವಾಚ :—**

**ನಾಽತ್ರ ನಕ್ಷತ್ರಮುಹೂರ್ತಂತು ನ ಕಿಂಚಿದ್ಭಗದೈವತಂ ॥ ೪ ॥**
**ವಿವಾಹಸ್ಯ ನ ವಾರಸ್ತು ಪ್ರಸುಪ್ತೇ ಮಧುಸೂದನೇ ।**
**ಅಸ್ಮಿನ್ ಕಾಲೇ ತು ಸಂಪ್ರಾಪ್ತೇ ಯಾ ಕನ್ಯಾ ಪರಿಣೀಯತೇ ॥ ೫ ॥**

---

### ಕನ್ನಡದ ಅನುವಾದ

#### ಮಣಿಭದ್ರಕೃತ ಪುಷ್ಪಬ್ರಾಹ್ಮಣವಿಡಂಬನವರ್ಣನ

೧. ಸೂತನು ಹೇಳುತ್ತಾನೆ:—ಹೀಗೆ ಆ ಕ್ಷತ್ರಿಯನು ರಹಸ್ಯದಲ್ಲಿ ತನ್ನ ಪತ್ನಿಗೆ ಬೋಧನೆ ಮಾಡಲು ಅವಳು ಮಗಳನ್ನು ಆ ಮುಪ್ಪಿನ ಮಣಿಭದ್ರನಿಗೆ ಕೊಡಲೊಪ್ಪಿದಳು.

೨. ಅನಂತರ ಆ ಕ್ಷತ್ರಿಯನು ಶೀಘ್ರವಾಗಿ ಮಣಿಭದ್ರನ ಪಾದಗಳನ್ನು ತೊಳೆದು ಕನ್ಯಾದಾನಕ್ಕಾಗಿ ಅಕ್ಷತೋದಕವನ್ನು ಅವನ ಕೈಯಲ್ಲೆರೆದನು.

೩. ಆ ಮಣಿಭದ್ರನು ಹಸ್ತದಲ್ಲಿ ಅಕ್ಷತೋದಕವು ಬಿದ್ದಕೂಡಲೆ ಆ ಕ್ಷತ್ರಿಯನನ್ನು ಕುರಿತು ಈ ದಿನವೆ ನನಗೇ ನಿನ್ನ ಕನ್ಯೆಯನ್ನು ವಿವಾಹ ಮಾಡಿ ಕೊಡು. ನಾನು ನಿನ್ನ ಮನೆಗೆ ಬಂದು ವಾಸಿಸಲು ಇಚ್ಛಿಸುವೆನು. ಎಂದನು.

೪. ಕ್ಷತ್ರಿಯನು ಹೇಳುತ್ತಾನೆ:—ಈ ದಿನ ಸೂರ್ಯ ದೇವತಾಕವಾದ ವಿವಾಹೋಚಿತವಾದ ಯಾವ ನಕ್ಷತ್ರವೂ ಇಲ್ಲ.

೫–೬. ಇದು ವಿವಾಹಕ್ಕೆ ಅರ್ಹವಾದ ದಿನವೂ ಅಲ್ಲ. ವಿಷ್ಣುವು ಮಲಗಿರುವ ಈ ಚಾತುರ್ಮಾಸ್ಯದಲ್ಲಿ ವಿವಾಹವಾದ ಕನ್ಯೆಯು ಒಂದು ವರ್ಷದೊಳಗೆ

ಸಾ ಚ ಸಂವತ್ಸರಾನ್ಮಧ್ಯೇ ಧ್ರುವಂ ವೈಧವ್ಯಮಾಪ್ನುಯಾತ್ ।
ಏವಂ ದೈವಜ್ಞಮುಖ್ಯಾನಾಂ ಶ್ರುತಂ ಪ್ರವದತಾಂ ಮಯಾ ॥ ೬ ॥
ತಸ್ಮಾಚ್ಛುಭೇ ತು ಸಂಪ್ರಾಪ್ತೇ ನಕ್ಷತ್ರೇ ಭಗದೈವತೇ ।
ತ್ವಂ ವಿವಾಹಯ ಮೇ ಕನ್ಯಾಂ ಪ್ರೋತ್ಥಿತೇ ಮಧುಸೂದನೇ ।
ಯೇನ ಕ್ಷೇಮಂಕರೀ ತೇ ಸ್ಯಾತ್ತಥಾ ಪುತ್ರಪ್ರಪೌತ್ರಿಣೀ ॥ ೭ ॥

ಮಣಿಭದ್ರ ಉವಾಚ:—

ನಕ್ಷತ್ರಂ ವಹ್ನಿದೈವತ್ಯಂ ಪ್ರಸುಪ್ತೋ ಮಧುಸೂದನಃ ॥ ೮ ॥
ಸಾಂಪ್ರತಂ ವತ್ಸರಾಂತೋಽಯಂ ವಿವಾಹೇ ವಿಹಿತೇ ಸತಿ ।
ಕಾಮಾಗ್ನಿರುತ್ಥಿತಃ ಕಾಯೇ ಸಾಂಪ್ರತಂ ಮಾಂ ಪ್ರಬಾಧತೇ ॥ ೯ ॥
ತಸ್ಮಾತ್ಕುರು ಪ್ರಸಾದಂ ಮೇ ಕನ್ಯಾವಿವಹಿತೇನ ತು ।
ತವ ವಿತ್ತಂ ಪ್ರದಾಸ್ಯಾಮಿ ಸುಖೀ ಯೇನ ಭವಿಷ್ಯಸಿ ॥ ೧೦ ॥

ಸೂತ ಉವಾಚ:—

ತಸ್ಮಾಚ್ಚ ವಿತ್ತಲೋಭೇನ ಕ್ಷತ್ರಿಯೋ ದ್ವಿಜಸತ್ತಮಾಃ ।
ವಿವಾಹಂ ಕಾರಯಾಮಾಸ ತತ್ಕ್ಷಣಾದೇವ ಸ ದ್ವಿಜಾಃ ॥ ೧೧ ॥

---

ವಿಧವೆಯಾಗುವಳು ಎಂದು ನಾನು ಶ್ರೇಷ್ಠರಾದ ಜೋಯಿಸರು ಹೇಳುವುದನ್ನು ಕೇಳಿದ್ದೇನೆ.

೭. ಆದುದರಿಂದ ಸೂರ್ಯದೇವತಾಕವಾದ ನಕ್ಷತ್ರವು ಬರಲಿ. ವಿಷ್ಣುವು ಏಳಲಿ. ಆಗ ನೀನು ನನ್ನ ಕನ್ಯೆಯನ್ನು ಮದುವೆ ಮಾಡಿಕೊ. ಅದರಿಂದ ಇವಳು ನಿನಗೆ ಕ್ಷೇಮವನ್ನುಂಟುಮಾಡುವವಳೂ, ಮಕ್ಕಳು ಮೊಮ್ಮಕ್ಕಳನ್ನು ಪಡೆಯುವವಳೂ ಆಗುವಳು.

೮–೯. ಮಣಿಭದ್ರನು ಹೇಳುತ್ತಾನೆ:—ಈಗ ನಕ್ಷತ್ರವು ಅಗ್ನಿದೇವತಾಕವಾಗಿದೆ. ವಿಷ್ಣುವು ಮಲಗಿದ್ದಾನೆ. ಆದುದರಿಂದ ನನಗೆ ನೀನು ಈ ವರ್ಷದ ಕೊನೆಯಲ್ಲಿ ವಿವಾಹ ಮಾಡಿಕೊಡಬಹುದು. ಆದರೆ ಈಗ ನನ್ನ ಶರೀರದಲ್ಲಿ ಕಾಮಾಗ್ನಿಯು ಹುಟ್ಟಿ ನನ್ನನ್ನು ಪೀಡಿಸುತ್ತಿದೆ.

೧೦. ಆದುದರಿಂದ ನೀನು ಕನ್ಯೆಯನ್ನು ನನಗೆ ಈಗಲೇ ವಿವಾಹ ಮಾಡಿಕೊಟ್ಟು ಅನುಗ್ರಹಿಸು. ನಿನಗೆ ದ್ರವ್ಯವನ್ನೀಯುವೆನು. ಅದರಿಂದ ನೀನು ಸುಖದಿಂದಿರುವೆ.

೧೧. ಸೂತನು ಹೇಳುತ್ತಾನೆ:—ದ್ವಿಜವರೇಣ್ಯರೆ! ಆ ಕ್ಷತ್ರಿಯನು ದ್ರವ್ಯದಾಶೆಯಿಂದ ಕೂಡಲೆ ಅವನಿಗೆ ವಿವಾಹ ಮಾಡಿಕೊಟ್ಟನು.

ದದೌ ಕನ್ಯಾಂ ಸುದುಃಖಾರ್ತಾಮಶ್ರುಪೂರ್ಣೇಕ್ಷಣಾಂ ಸ್ಥಿತಾಂ ।
ಸನ್ನಿಧೌ ವಹ್ನಿ ವಿಪ್ರಾಣಾಂ ತದಾ ತೇನ ವಿವಾಹಿತಾ ॥ ೧೨ ॥
ನೀತ್ವಾ ನಿಜಗೃಹಂ ಪಶ್ಚಾತ್ಕಾಮಧರ್ಮೇ ನಿಯೋಜಿತಾ ।
ಅನಿಚ್ಛಂತೀಮಪಿ ಸತೀಂ ತಾಮತೀವ ನಿರರ್ಗಲಃ ॥ ೧೩ ॥
ಸೋಽಪಿ ನಿಷ್ಕಾಮತಾಂ ಪ್ರಾಪ್ಯ ನಿರ್ಭರ್ತ್ಸ್ಯ ಚ ಮುಹುರ್ಮುಹುಃ ।
ಭಾಷಿಕಾಭಿರನೇಕಾಭಿಸ್ತಾಪಯಿತ್ವಾ ಚ ಭಾಮಿನೀಂ ॥ ೧೪ ॥
ಶಾಂತಿಂ ನೀತಾ ತತಸ್ತೇನ ಪ್ರತ್ಯೂಷೇ ಸಮುಪಸ್ಥಿತೇ ।
ಭೃತ್ಯವರ್ಗಃ ಸಮಸ್ತೋಽಪಿ ತತೋ ನಿಃಸಾರಿತೋ ಗೃಹಾತ್ ॥ ೧೫ ॥
ಈರ್ಷ್ಯಾಧರ್ಮಂ ಸಮಾಸ್ಥಾಯ ಪರಮಂ ದ್ವಿಜಸತ್ತಮಾಃ ।
ಏಕ ಏವ ಕೃತಸ್ತೇನ ದ್ವಾರಪಾಲೋ ನಪುಂಸಕಃ ॥ ೧೬ ॥
ಪ್ರೋಕ್ತಂ ನ ಚ ತ್ವಯಾ ದೇಯಃ ಪ್ರವೇಶೋಽತ್ರ ಗೃಹೇ ಮಮ ।
ಭೃತ್ಯಸ್ಯ ಭಿಕ್ಷುಕಸ್ಯೈವ ವೃದ್ಧಸ್ಯ ವ್ರತಿನಸ್ತಥಾ ॥ ೧೭ ॥
ಏವಂ ಕೃತ್ವಾ ವಿಧಾನಂ ತು ತತಶ್ಚಕ್ರೇ ಜನೈಃ ಸಮಂ ।
ವ್ಯವಹಾರಕ್ರಿಯಾಃ ಸರ್ವಾ ದ್ರವ್ಯಲಕ್ಷೈಃ ಸಹಸ್ರಶಃ ॥ ೧೮ ॥
ಶ್ವಶುರಸ್ಯಾಪಿ ನೋ ದತ್ತಂ ಕಿಂಚಿತ್ತೇನ ದುರಾತ್ಮನಾ ।
ಭಾರ್ಯಾಯಾಃ ಶ್ವೇತವಸ್ತ್ರಾಣಿ ಭುಕ್ತ್ವಾನ್ಯನ್ನೈವ ಕಿಂಚನ ॥ ೧೯ ॥

---

೧೨-೧೭. ಆ ಕ್ಷತ್ರಿಯನು ದುಃಖಗೊಂಡವಳೂ, ಬಾಷ್ಪಪೂರಿತನಯನಳೂ, ಅಗ್ನಿ ಮತ್ತು ಬ್ರಾಹ್ಮಣರ ಹತ್ತಿರ ನಿಂತಿರುವವಳೂ ಆದ ತನ್ನ ಕನ್ಯೆಯನ್ನು ದಾನ ಮಾಡಲು ಆ ಮಣಿಭದ್ರನು ವಿವಾಹಿತ ಕನ್ಯೆಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅಪೇಕ್ಷೆಯಿಲ್ಲದವಳಾದರೂ ಅವಳನ್ನು ಅತ್ಯಂತವಾಗಿ ನಿರ್ಬಂಧಿಸಿ ಕಾಮ ಧರ್ಮದಲ್ಲಿ ನಿಯೋಗಿಸಿ ಬಹುವಾಗಿ ಹೆದರಿಸಿ ಬಗೆ ಬಗೆಯ ಮಾತುಗಳಿಂದ ವ್ಯಥೆಗೊಳಿಸಿ ನಿಷ್ಕಾಮಳನ್ನಾಗಿಸಿ ಬೆಳಗಾಗಲು ಶಾಂತಳನ್ನಾಗಿ ಮಾಡಿದನು. ಸಕಲ ಸೇವಕರನ್ನೂ ಅತ್ಯಂತ ಅಸೂಯೆಯಿಂದ ಮನೆಯಿಂದ ಹೊರಡಿಸಿದನು. ಒಬ್ಬ ನಪುಂಸಕನನ್ನು ಮಾತ್ರ ದ್ವಾರಪಾಲಕನನ್ನಾಗಿ ನೇಮಿಸಿ ಅವನನ್ನು ಕುರಿತು "ನೀನು ನನ್ನ ಮನೆಯೊಳಗೆ ಸೇವಕರನ್ನೂ, ಭಿಕ್ಷುಕರನ್ನೂ, ವೃದ್ಧರನ್ನೂ, ಸನ್ಯಾಸಿಗಳನ್ನೂ ಬಿಡಬೇಡ" ಎಂದನು.

೧೮. ಅವನು ಹೀಗೆ ನೇಮಕಮಾಡಿ ಜನರೊಡನೆ ಸಾವಿರಾರು ಲಕ್ಷ ದ್ರವ್ಯಗಳಿಂದ ವ್ಯವಹಾರ ನಡೆಯಿಸಿದನು.

೧೯. ದುರಾತ್ಮನಾದ ಅವನು ಮಾವನಿಗೂ ಏನನ್ನೂ ಕೊಡಲಿಲ್ಲ. ಹೆಂಡತಿಗೆ ಬಿಳಿಯಬಟ್ಟೆಗಳನ್ನು ಬಿಟ್ಟು ಬೇರೆ ಏನನ್ನೂ ಕೊಡಲಿಲ್ಲ.

ಯಾಮದ್ವಯೇಽಪಿ ಸಂಪ್ರಾಪ್ತೇ ದಿನಸ್ಯ ಗೃಹಮಾಗತಃ ।
ಮಿತಮನ್ನಂ ತತಸ್ತಸ್ಯಾ ಭೋಜನಾರ್ಥಂ ಪ್ರಯಚ್ಛತಿ ॥ ೨೦ ॥
ಯಾವನ್ಮಾತ್ರಂ ಚ ಸಾ ಭುಂಕ್ತೆ ಏಕವಿಪ್ರಾನ್ವಿತಃ ಸ್ವಯಂ ।
ಭುಕ್ತ್ವಾಚೈವ ತತೋ ಯಾತಿ ವ್ಯವಹಾರ ಕೃತೇ ಬಹಿಃ ॥ ೨೧ ॥
ಆಗಚ್ಛತಿ ಪುನರ್ಹರ್ಮ್ಯಂ ಸಂಧ್ಯಾಕಾಲ ಉಪಸ್ಥಿತೇ ।
ಸಾಽಪಿ ತಿಷ್ಠತಿ ಹರ್ಮ್ಯಸ್ಥಾ ಪತ್ನೀ ತಸ್ಯ ದುರಾತ್ಮನಃ ॥ ೨೨ ॥
ವೈರಾಗ್ಯಂ ಪರಮಂ ಪ್ರಾಪ್ತಾ ದುಃಖಶೋಕಸಮನ್ವಿತಾ ।
ಮತ್ಸೀವ ಪತಿತಾ ತೋಯಾದನ್ಯಸ್ಮಿಂಸ್ತು ಸ್ಥಲಾಂತಿಕೇ ॥ ೨೩ ॥
ಚಕ್ರವಾಕೀ ವಿಮುಕ್ತೇವ ಸಂಪ್ರಾಪ್ತೇ ದಿವಸಕ್ಷಯೇ ।
ಹಂಸೀ ಹಂಸವಿಯುಕ್ತೇನ ಮೃಗೀವ ಮೃಗವರ್ಜಿತಾ ॥ ೨೪ ॥
ಸೋಽಪಿ ನಿತ್ಯಂ ದದೌ ಭೋಜ್ಯಂ ವಿಪ್ರಸ್ಯೈಕಸ್ಯ ಚ ದ್ವಿಜಾಃ ।
ಪ್ರೋಚ್ಯ ತಂ ಬ್ರಾಹ್ಮಣಂ ಪೂರ್ವಂ ಸಾನುಪೂರ್ವಮಿದಂ ವಚಃ ॥ ೨೫ ॥
ಅಧೋವಕ್ತ್ರೇಣ ಭೋಕ್ತವ್ಯಂ ಸದಾ ವಿಪ್ರಗೃಹೇ ಮಮ ।
ಯದಿ ಪಶ್ಯಸಿ ಮೇ ಭಾರ್ಯಾಂ ಸಂಪ್ರಾಪ್ಸ್ಯಸಿ ವಿಡಂಬನಾಂ ॥ ೨೬ ॥
ಏವಂ ವಿಡಂಬಿತಾಸ್ತೇನ ಹ್ಯೂರ್ಧ್ವ ವಕ್ತ್ರಾಽವಲೋಕಿನಃ ।
ಯೇ ಚಾನ್ಯೇ ಭಯಸಂತ್ರಸ್ತಾ ನ ಯಾಂತಿ ಚ ತದಾಲಯಂ ॥ ೨೭ ॥

---

೨೦. ಹಗಲು ಹನ್ನೆರಡು ಗಂಟೆ ವೇಳೆಗೆ ಮನೆಗೆ ಬಂದು ಆ ಪತ್ನಿಗೆ ಊಟಕ್ಕಾಗಿ ಮಿತವಾಗಿ ಅನ್ನವನ್ನು ನೀಡುತ್ತಿದ್ದನು.

೨೧. ಅವಳು ಊಟಮಾಡುವಷ್ಟರಲ್ಲಿ ತಾನು ಒಬ್ಬ ಬ್ರಾಹ್ಮಣನೊಡನೆ ಭುಂಜಿಸಿ ವ್ಯವಹಾರಕ್ಕಾಗಿ ಹೊರಗೆ ಹೋಗುತ್ತಿದ್ದನು.

೨೨-೨೪. ಮರಳಿ ಅವನು ಸಾಯಂಕಾಲ ಮನೆಗೆ ಬರುತ್ತಿದ್ದನು. ಮನೆಯಲ್ಲಿದ್ದ ಆ ನೀಚನ ಪತ್ನಿಯು ನೀರಿನಿಂದ ಎತ್ತಿ ನೆಲದಲ್ಲಿ ಹಾಕಿದ ಹೆಣ್ಣು ಮಿಾನಿನಂತೆಯೂ, ಸಾಯಂಕಾಲ ವಿಯೋಗಗೊಂಡ ಚಕ್ರವಾಕ ಪಕ್ಷಿಯಂತೆಯೂ, ಪತಿಯನ್ನಗಲಿದ ಹೆಣ್ಣು ಹಂಸದಂತೆಯೂ, ಪತಿಯಿಂದ ತ್ಯಕ್ತವಾದ ಹೆಣ್ಣು ಜಿಂಕೆಯಂತೆಯೂ ಅತ್ಯಂತ ದುಃಖದಿಂದ ವೈರಾಗ್ಯಗೊಂಡಳು.

೨೫-೨೬. ಅವನು ನಿತ್ಯವೂ ಒಬ್ಬ ಬ್ರಾಹ್ಮಣನನ್ನು ಕುರಿತು ಸಮಾಧಾನದಿಂದ, "ಬ್ರಾಹ್ಮಣ! ನೀನು ನನ್ನ ಮನೆಯಲ್ಲಿ ಯಾವಾಗಲೂ ಮುಖವನ್ನು ತಗ್ಗಿಸಿಕೊಂಡು ಊಟಮಾಡಬೇಕು. ನನ್ನ ಹೆಂಡತಿಯನ್ನು ನೋಡಿದರೆ ಶಿಕ್ಷೆಗೀಡಾಗುವೆ" ಎಂದು ಹೇಳಿ ಅನ್ನವನ್ನು ನೀಡುತ್ತಿದ್ದನು.

೨೭. ಹೀಗೆ ಮುಖವನ್ನು ಮೇಲಕ್ಕೆತ್ತಿ ನೋಡಿದವರನ್ನು ಅವನು ಶಿಕ್ಷಿಸಿದ ಕಾರಣ ಇತರ ಬ್ರಾಹ್ಮಣರು ಭಯದಿಂದ ಅವನ ಮನೆಗೆ ಹೋಗುತ್ತಿರಲಿಲ್ಲ.

ಕಸ್ಯಚಿತ್ತ್ವಥ ಕಾಲಸ್ಯ ಪುಷ್ಪೋ ನಾಮ ದ್ವಿಜೋತ್ತಮಃ ।
ತೀರ್ಥಯಾತ್ರಾಪ್ರಸಂಗೇನ ಸಂಪ್ರಾಪ್ತಸ್ತತ್ಪುರಂ ಪ್ರತಿ ॥ ೨೮ ॥
ಪೂರ್ವೇ ವಯಸಿ ಸಂಸ್ಥಶ್ಚ ದರ್ಶನೀಯತಮಾಕೃತಿಃ ।
ಕ್ಷುತ್ಕ್ಷಾಮಃ ಸುಪರಿಶ್ರಾಂತೋ ಮಧ್ಯಾಹ್ನೇ ಸಮುಪಸ್ಥಿತೇ ॥ ೨೯ ॥
ಪರಿಭ್ರಮತಿ ವೈ ನೃಣಾಂ ಸ ಗೃಹಾಣಿ ಸಮಂತತಃ ।
ಮಣಿಭದ್ರಃ ಸಮಾದಿಷ್ಟಸ್ತಸ್ಯ ಕೇನಾಽಪಿ ಭೋಜ್ಯದಃ ॥ ೩೦ ॥
ತತಸ್ತಂ ಪ್ರಾರ್ಥಯಾಮಾಸ ಗತ್ವಾ ಭೋಜ್ಯಂ ಚ ನ ದ್ವಿಜಾಃ ।
ತೇನಾಪಿ ಸ ದ್ವಿಜಃ ಪ್ರೋಕ್ತಸ್ತದಾಸೌ ದ್ವಿಜಸತ್ತಮಾಃ ॥ ೩೧ ॥
ಅಧೋ ವಕ್ತ್ರೇಣ ಭೋಕ್ತವ್ಯಂ ತ್ವಯಾ ವೀಕ್ಷ್ಯಾ ನ ಮೇ ಪ್ರಿಯಾ ।
ನೋಚೇದ್ವಿಡಂಬನಾಂ ವಿಪ್ರ ಸಂಪ್ರಾಪ್ಸ್ಯಸಿ ನ ಸಂಶಯಃ ॥ ೩೨ ॥
ಏವಂ ಜ್ಞಾತ್ವಾ ಮಹಾಭಾಗ ಯತ್ಕ್ಷೇಮಂ ತತ್ಸಮಾಚರ ॥ ೩೩ ॥

ಪುಷ್ಪ ಉವಾಚ :—

ಕ್ಷುತ್ಕ್ಷಾಮಸ್ಯ ನ ಮೇ ಕಾರ್ಯಂ ಪರದಾರವಿಲೋಕನೈಃ ।
ವೇದಾಧ್ಯಯನಯುಕ್ತಸ್ಯ ತೀರ್ಥಯಾತ್ರಾರತಸ್ಯ ಚ ॥ ೩೪ ॥

---

೨೮. ಕೆಲವು ಕಾಲದ ಮೇಲೆ ಪುಷ್ಪನೆಂಬೋರ್ವ ದ್ವಿಜನು ತೀರ್ಥಯಾತ್ರಾ ನಿಮಿತ್ತದಿಂದ ಆ ಪಟ್ಟಣಕ್ಕೆ ಬಂದನು.

೨೯–೩೦. ಯುವಕನೂ, ಸುಂದರನೂ, ಹಸಿವಿನಿಂದ ಕೃಶನೂ, ಬಳಲಿದವನೂ ಆದ ಅವನು ಮಧ್ಯಾಹ್ನದವೇಳೆ ಅಲ್ಲಿರುವ ಜನರ ಮನೆಯಿಂದ ಮನೆಗೆ ಭೋಜನಾರ್ಥಿಯಾಗಿ ಅಲೆಯುತ್ತಿರಲು ಯಾವನೋ ಒಬ್ಬನು ಮಣಿಭದ್ರನು ಭೋಜನವನ್ನೀಯುವನೆಂದು ಸೂಚಿಸಿದನು.

೩೧–೩೩. ಬ್ರಾಹ್ಮಣರೆ! ತರುವಾಯ ಆ ಪುಷ್ಪನು ಮಣಿಭದ್ರನೆಡೆಗೆ ಹೋಗಿ ಭೋಜನಮಾಡಿಸಬೇಕೆಂದು ಬೇಡಿಕೊಂಡನು. ಆಗ ಅವನು ಆ ಬ್ರಾಹ್ಮಣ, ನನ್ನು ಕುರಿತು ನೀನು ಮುಖವನ್ನು ತಗ್ಗಿಸಿಕೊಂಡು ಊಟಮಾಡಬೇಕು. ನನ್ನ ಪತ್ನಿಯನ್ನು ನೋಡಬಾರದು. ಹಾಗೆ ಮಾಡದಿದ್ದರೆ ನಿನಗೆ ನಿಜವಾಗಿಯೂ ಶಿಕ್ಷೆಯಾಗುವುದು. ಇದನ್ನರಿತು ನೀನು ನಿನಗೆ ಹಿತವಾದುದು ಯಾವುದೆಂದು ಆಲೋಚಿಸಿ ಅದನ್ನು ಮಾಡು ಎಂದನು.

೩೪. ಪುಷ್ಪನು ಹೇಳುತ್ತಾನೆ:—ವೇದಾಧ್ಯಯನವನ್ನು ಮಾಡಿದವನೂ, ತೀರ್ಥಯಾತ್ರಾಸಕ್ತನೂ, ಹಸಿವಿನಿಂದ ಕೃಶನೂ ಆದ ನನಗೆ ಪರರ ಪತ್ನಿಯರ ದರ್ಶನದಿಂದೇನಾಗಬೇಕು?

ಮಣಿಭದ್ರ ಉವಾಚ :—

ತದಾಗಚ್ಛ ಮಯಾಸಾರ್ಧಂ ಸಾಂಪ್ರತಂ ಮಮ ಮಂದಿರಂ ।
ವಿಶೇಷಾತ್ತವ ದಾಸ್ಯಾಮಿ ಭೋಜನಂ ದಕ್ಷಿಣಾನ್ವಿತಂ ॥ ೩೫ ॥
ಏವಂ ತೌ ಸಂವಿದಂ ಕೃತ್ವಾ ಯಯತುರ್ಬ್ರಾಹ್ಮಣೋತ್ತಮಾಃ ।
ಹಟ್ಟಮಾರ್ಗೇ ಗತೌ ತತ್ರ ಯತ್ರ ಷಂಢೋ ವ್ಯವಸ್ಥಿತಃ ॥ ೩೬ ॥
ತತ್ಪಾರ್ಶ್ವೇ ಬ್ರಾಹ್ಮಣಂ ಧೃತ್ವಾ ಪ್ರವಿಷ್ಟೋ ಗೃಹಮಧ್ಯತಃ ।
ಭಾರ್ಯಯಾ ಶ್ರಪಯಾಮಾಸ ಧಾನ್ಯಂ ಮಾನಮಿತಂ ತದಾ ॥ ೩೭ ॥
ತತೋ ದೇವಾರ್ಚನಂ ಕೃತ್ವಾ ವೈಶ್ವದೇವಾಂತ ಆಗತಂ ।
ಪುಷ್ಪಮಾಹೂಯ ತತ್ಪಾದೌ ಪ್ರಕ್ಷಾಲ್ಯ ಚ ನಿವೇಶ್ಯ ಚ ॥ ೩೮ ॥
ಕೃತ್ವಾರ್ಚನವಿಧಿಂ ತಸ್ಯ ದತ್ವಾಽನ್ನಂ ಚ ಸುಸಂಸ್ಕೃತಂ ।
ಉಪವಿಶ್ಯ ತತಃ ಪಶ್ಚಾದ್ಭೋಜನಾರ್ಥಂ ತತೋ ದ್ವಿಜಾಃ ।
ಪುಷ್ಪೋಽಪಿ ವೀಕ್ಷತೇ ತಸ್ಯಾಃ ಪಾದೌ ಪಂಕಜ ಸನ್ನಿಭೌ ॥ ೩೯ ॥
ಯಥಾ ಯಥಾ ಸ ಕೌತುಕ್ಯಾದ್ವೀಕ್ಷತೇ ಯೌವನಾಶ್ರಿತಃ ।
ಕೌತುಕ್ಯಾತ್ತೇನ ಚ ತತಸ್ತಸ್ಯಾ ವಕ್ತ್ರಂ ನಿರೀಕ್ಷಿತಂ ॥ ೪೦ ॥
ತತಶ್ಚಾಕಾರಯಾಮಾಸ ಮಣಿಭದ್ರಃ ಪ್ರಕೋಪತಃ ।
ತಂ ಷಂಡಮುಕ್ತವಾಂಜಾರಂ ತ್ವಮೇನಂ ಚ ವಿಡಂಬಯ ॥ ೪೧ ॥

---

೩೫. ಮಣಿಭದ್ರನು ಹೇಳುತ್ತಾನೆ :—ಹಾಗಾದರೆ ನೀನು ಈಗ ನನ್ನೊಡನೆ ಮನೆಗೆ ಬಾ. ನಿನಗೆ ಅತಿಶಯವಾಗಿ ದಕ್ಷಿಣೆಯಿಂದ ಕೂಡಿದ ಭೋಜನವನ್ನು ಕೊಡುವೆನು.

೩೬. ಬ್ರಾಹ್ಮಣವರ್ಯರೆ! ಹೀಗೆ ಅವರೀರ್ವರು ನಿಶ್ಚಯಿಸಿಕೊಂಡು ನಪುಂಸಕನಿರುವ ಸೌಧಮಾರ್ಗದಲ್ಲಿ ಹೊರಟರು.

೩೭. ಮಣಿಭದ್ರನು ಪುಷ್ಪನನ್ನು ನಪುಂಸಕನ ಹತ್ತಿರ ಇರುವಂತೆ ಹೇಳಿ ತಾನು ಮನೆಯೊಳಗೆ ಹೊಕ್ಕು ಹೆಂಡತಿಯಿಂದ ಒಂದು ಸೇರು ಧಾನ್ಯವನ್ನು ಅಡುಗೆ ಮಾಡಿಸಿದನು.

೩೮–೩೯. ತಾನು ದೇವಪೂಜೆಯನ್ನು ಪೂರಯಿಸಿ ವೈಶ್ವದೇವದ ಅವಸಾನ ದಲ್ಲಿ ಬಂದ ಪುಷ್ಪನನ್ನು ಕರೆದು, ಕಾಲುಗಳನ್ನು ತೊಳೆದು ಕುಳ್ಳಿರಿಸಿ ವಿಧಿಯಂತೆ ಅರ್ಚಿಸಿ ಅವನಿಗೆ ಒಳ್ಳೆಯ ಭೋಜನವನ್ನಿತ್ತು ತಾನೂ ಊಟಕ್ಕೆ ಕುಳಿತನು. ಆಗ ಪುಷ್ಪನು ಆ ಮಣಿಭದ್ರನ ಪತ್ನಿಯ ಕಮಲದಂತಿರುವ ಕಾಲುಗಳನ್ನು ನೋಡಿದನು.

೪೦. ಯುವಕನಾದ ಅವನು ಕುತೂಹಲದಿಂದ ಅವಳನ್ನು ನೋಡುತ್ತ ಮುಖವನ್ನೂ ಕಂಡನು.

೪೧. ಆಗ ಮಣಿಭದ್ರನು ಕೃದ್ಧನಾಗಿ ಆ ನಪುಂಸಕನನ್ನು ಕರೆದು ಈ ಜಾರ ನನ್ನು ಶಿಕ್ಷಿಸು ಎಂದನು.

**ತತಸ್ತೇನ ದ್ವಿಜಶ್ರೇಷ್ಠಾಃ ಸ ಪುಷ್ಪೋ ಮೂರ್ಧ್ನಿ ತಾಡಿತಃ । ॥ ೪೨ ॥**
**ಅಧೋ ನಿಪತಿತಂ ಭೂಮೌ ರುಧಿರೇಣ ಪರಿಪ್ಲುತಂ ।**
**ಚರಣಾಭ್ಯಾಂ ಸಮಾಕೃಷ್ಯ ದೂತೋ ಮಾರ್ಗಂ ಸಮಾಶ್ರಿತಃ ॥ ೪೩ ॥**
**ಯಾವಚ್ಚತುಷ್ಪಥಂ ನೀತೋ ಯತ್ರ ಸಂಚರತೇ ಜನಃ ।**
**ಹಾಹಾಕಾರೋ ಮಹಾನಾಸೀತ್ತಸ್ಮಿನ್ ಪುರವರೇ ತದಾ ॥ ೪೪ ॥**
**ಸರ್ವೇಷಾಮೇವ ಪೌರಾಣಾಂ ತದವಸ್ಥಂ ವಿಲೋಕ್ಯ ತಂ ।**
**ತತೋಽನ್ಯೈಃ ಶೀತತೋಯೇನ ಸೋಽಭಿಷಿಕ್ತೋ ದಯಾನ್ವಿತೈಃ ॥ ೪೫ ॥**
**ಕೃತ್ವಾ ವಾಯುಪ್ರದಾನಂ ಚ ಗಮಿತಶ್ಚೇತನಾಂ ಪ್ರತಿ ।**
**ಸ ಪ್ರಾಪ್ಯ ಚೇತನಾಂ ಕೃಚ್ಛ್ರಾತ್ತತ್ತೋಯಾತ್ತಾನಥಾಽಬ್ರವೀತ್ ॥ ೪೬ ॥**
**ನ ಮಯಾ ವಿಹಿತಂ ಚೌರ್ಯಂ ಪರದಾರಾ ನ ಸೇವಿತಾಃ ।**
**ಪಶ್ಯಧ್ವಂ ಮಣಿಭದ್ರೇಣ ಯಥಾಽಹಂ ಕ್ಲೇಶಿತೋ ಜನಾಃ ॥ ೪೭ ॥**
**ತೀರ್ಥಯಾತ್ರಾಪರೋ ವಿಪ್ರೋ ಬ್ರಹ್ಮಚರ್ಯಪರಾಯಣಃ ।**
**ಭೋಜನಾರ್ಥಂ ಸಮಾಮಂತ್ರ್ಯ ನೀತೋಽವಸ್ಥಾಮಿಮಾಂ ತತಃ ॥ ೪೮ ॥**
**ಕಿಂ ನಾಸ್ತಿವಾತ್ರ ಭೂಪಾಲೋ ಯೇನೈತದಸಮಂಜಸಂ ।**
**ಬ್ರಾಹ್ಮಣಸ್ಯ ವಿಶೇಷೇಣ ನಿರ್ದೋಷಸ್ಯ ಮಹಾಜನಾಃ ॥ ೪೯ ॥**

---

೪೨–೪೩. ತರುವಾಯ ದೂತನು ಪುಷ್ಪನ ತಲೆಗೆ ಹೊಡೆದನು. ಕೂಡಲೆ ಕೆಳಗೆ ಬಿದ್ದು ರಕ್ತದಿಂದ ನೆನೆದ ಆ ಪುಷ್ಪನನ್ನು ಕಾಲುಗಳನ್ನು ಹಿಡಿದು ರಸ್ತೆಗೆ ಎಳೆದುಕೊಂಡು ಹೋದನು.

೪೪. ದೂತನು ಅವನನ್ನು ಜನರು ಸಂಚರಿಸುವ ಚೌಕಕ್ಕೆ ಒಯ್ಯಲು ಆ ಪಟ್ಟಣದಲ್ಲಿ ದೊಡ್ಡ ಹಾಹಾಕಾರವುಂಟಾಯಿತು.

೪೫. ಸಮಸ್ತ ಪಟ್ಟಣಿಗರ ನಡುವೆ ಕೆಲವರು ಹಾಗೆ ಬಿದ್ದಿರುವ ಪುಷ್ಪನನ್ನು ಕಂಡು ದಯೆಯಿಂದ ತಣ್ಣೀರಿನಿಂದ ಅವನಿಗೆ ಶೈತ್ಯೋಪಚಾರ ಮಾಡಿದರು.

೪೬. ಗಾಳಿಯನ್ನು ಬೀಸಿ ಎಚ್ಚರಗೊಳಿಸಿದರು. ಪುಷ್ಪನು ಆ ನೀರಿನಿಂದ ಅತಿ ಕಷ್ಟದಿಂದ ಎಚ್ಚರಗೊಂಡು ಅವರನ್ನು ಕುರಿತು ಇಂತೆಂದನು.

೪೭. "ನಾನು ಕಳ್ಳತನವನ್ನು ಮಾಡಲಿಲ್ಲ. ಪರಸ್ತ್ರೀಗಮನವನ್ನು ಮಾಡಲಿಲ್ಲ. ಜನರೆ! ನೋಡಿರಿ. ಮಣಿಭದ್ರನು ನನ್ನನ್ನು ಹೇಗೆ ದುಃಖಗೊಳಿಸಿದ್ದಾನೆ.

೪೮. ತೀರ್ಥಯಾತ್ರಾನಿರತನೂ, ಬ್ರಹ್ಮಚರ್ಯನಿಷ್ಠನೂ ಆದ ಬ್ರಾಹ್ಮಣನನ್ನು ಊಟಕ್ಕೆ ಮನೆಗೆ ಕರೆದು ಹೀಗೆ ಮಾಡಿದ್ದಾನೆ.

೪೯. ಮಹನೀಯರೆ! ಇಲ್ಲಿ ದೊರೆಯಿಲ್ಲವೇ? ಅದರಿಂದಲೇ ನಿರ್ದೋಷಿಯಾದ ಬ್ರಾಹ್ಮಣನಿಗೆ ಇಂತಹ ಅನುಚಿತವಾದ ಶಿಕ್ಷೆಯಾಗಿರುವುದು."

ಜನಾ ಊಚುಃ:—

ಬಹವಸ್ತೇನ ಪಾಪೇನ ವಿಪ್ರಾಃ ಪೂರ್ವಂ ವಿಡಂಬಿತಾಃ ।
ರಾಜಪ್ರಸಾದಯುಕ್ತೇನ ಚೇಷ್ಯಾರ್ಂ ಪ್ರಾಪ್ಯ ಶರೀರಿಣಾ ॥ ೫೦ ॥
ಕೋಽಪಿ ರಾಜಪ್ರಸಾದಾನ್ನ ಕಿಂಚಿದ್ಬ್ರೂತೇಽಸ್ಯ ಸಂಮುಖಂ ।
ತಸ್ಮಾದುತ್ತಿಷ್ಠ ಗಚ್ಛಾಮೋ ದಾಸ್ಯಾಮಸ್ತ್ವಶನಂ ವಯಂ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಣಿಭದ್ರಕೃತ ಪುಷ್ಪಬ್ರಾಹ್ಮಣವಿಡಂಬನವರ್ಣನಂ"
ನಾಮ ಷಟ್‌ಪಂಚಾಶದುತ್ತರಶತತಮೋಽಧ್ಯಾಯಃ

---

೫೦. ಜನರು ಹೇಳುತ್ತಾರೆ:—ರಾಜನ ಅನುಗ್ರಹವನ್ನು ಪಡೆದು ಅಸೂಯೆಗೊಂಡಿರುವ ಪಾಪಿಯಾದ ಇವನು ಹಿಂದೆ ಬಹುಮಂದಿ ಬ್ರಾಹ್ಮಣರನ್ನು ಶಿಕ್ಷಿಸಿರುವನು.

೫೧. ಯಾವನೂ ರಾಜನ ಅನುಗ್ರಹವಿರುವ ಇವನಿಗೆ ಸಮ್ಮುಖವಾಗಿ ಏನನ್ನೂ ಹೇಳುವುದಿಲ್ಲ. ಆದುದರಿಂದ ಏಳು ಹೋಗೋಣ. ನಿನಗೆ ನಾವು ಅನ್ನವನ್ನು ನೀಡುವೆವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮಣಿಭದ್ರಕೃತ ಪುಷ್ಪಬ್ರಾಹ್ಮಣವಿಡಂಬನವರ್ಣನ" ವೆಂಬ
ನೂರೈವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

## ಸೂರ್ಯಸಕಾಶಾತ್ಪುಷ್ಪಬ್ರಾಹ್ಮಣಸ್ಯ ವರಲಬ್ಧಿ ವರ್ಣನಂ

ಸೂತ ಉವಾಚ :—

ಏವಂ ಸಂಬೋಧಿತಸ್ತೈಸ್ತು ಲೋಕೈಃ ಪುಷ್ಪಸ್ತದಾ ದ್ವಿಜಾಃ ।
ತಾನಬ್ರವೀತ್ತತಃ ಕ್ರುದ್ಧೋ ನ ಕರಿಷ್ಯಾಮಿ ಭೋಜನಂ ॥ ೧ ॥
ಯಾವನ್ನ ಚಾಽಸ್ಯ ಪಾಪಸ್ಯ ಕರಿಷ್ಯಾಮಿ ಪ್ರತಿಕ್ರಿಯಾಂ ।
ತದ್ವದಧ್ವಂ ಮಹಾಭಾಗಾ ದೇವೋ ವಾ ದೇವತಾಽಥವಾ ॥ ೨ ॥
ತಥಾಽನ್ಯೇ ಸಿದ್ಧಮಂತ್ರಾ ವಾ ಸದ್ಯಃ ಪ್ರತ್ಯಯಕಾರಕಾಃ ।
ಆರಾಧಿತಾ ಯಥಾ ಸದ್ಯೋ ಮಾನುಷಾಣಾಂ ವರಪ್ರದಾಃ ॥ ೩ ॥

ಜನಾ ಊಚುಃ :—

ಏಕೋ ದೇವಃ ಸ್ಥಿತಶ್ಚಾಽತ್ರ ಸದ್ಯಃ ಪ್ರತ್ಯಯಕಾರಕಃ ।
ತಥೈಕಾ ದೇವತಾ ಚಾಽತ್ರ ಶ್ರೂಯತೇ ಜಗತೀತಲೇ ॥ ೪ ॥

ಪುಷ್ಪ ಉವಾಚ :—

ಕೋಽಸೌ ದೇವಃ ಕಿಯದ್ದೂರೇ ಕಸ್ಮಿನ್ ಸ್ಥಾನೇ ವ್ಯವಸ್ಥಿತಃ ।
ತಥಾ ಚ ದೇವತಾ ಬ್ರೂತ ದಯಾಂ ಕೃತ್ವಾ ಮಮೋಪರಿ ॥ ೫ ॥

---

## ಕನ್ನಡದ ಅನುವಾದ

### ಸೂರ್ಯಸಕಾಶಾತ್ಪುಷ್ಪಬ್ರಾಹ್ಮಣಸ್ಯವರ ಲಬ್ಧಿ ವರ್ಣನ

೧—೩. ಸೂತನು ಹೇಳುತ್ತಾನೆ:—ದ್ವಿಜರೆ! ಆ ಜನರು ಹೀಗೆ ಹೇಳಲು ಪುಷ್ಪನು ಕುಪಿತನಾಗಿ ಅವರನ್ನು ಕುರಿತು ಈ ಪಾಪಿಗೆ ನಾನು ಪ್ರತಿಕ್ರಿಯೆಯನ್ನು ಮಾಡುವವರೆಗೆ ಭೋಜನಮಾಡುವುದಿಲ್ಲ. ಆದುದರಿಂದ ಮಹಾತ್ಮರೆ! ಆರಾಧಿಸಿದ ಕೂಡಲೆ ವರವನ್ನು ಕೊಡುವ ದೇವರನ್ನಾಗಲಿ, ದೇವತೆಯನ್ನಾಗಲಿ, ನಂಬಿಕೆಯನ್ನುಂಟುಮಾಡುವ ಸಿದ್ಧಮಂತ್ರವನ್ನಾಗಲಿ ನನಗೆ ತಿಳಿಸಿರಿ.

೪. ಜನರು ಹೇಳುತ್ತಾರೆ:—ಇಲ್ಲಿ ಕೂಡಲೆ ಇಷ್ಟಾರ್ಥವನ್ನು ನೀಡುವ ಒಬ್ಬ ದೇವನೂ, ಒಬ್ಬ ದೇವತೆಯೂ ಇದ್ದಾರೆ.

೫. ಪುಷ್ಪನು ಹೇಳುತ್ತಾನೆ:—ಜನರೆ! ಆ ದೇವನೂ, ದೇವತೆಯೂ ಯಾರು? ಎಲ್ಲಿದ್ದಾರೆ? ನನ್ನಲ್ಲಿ ದಯೆಯಿಟ್ಟು ಹೇಳಿರಿ.

ಜನಾ ಊಚುಃ:—

ಚಮತ್ಕಾರಪುರೇ ಸೂರ್ಯೋ ಯಾಜ್ಞವಲ್ಕ್ಯಪ್ರತಿಷ್ಠಿತಃ ।
ಅಸ್ತಿ ವಿಪ್ರ ಶ್ರುತೋಽಸ್ಮಾಭಿಃ ಸದ್ಯಃ ಪ್ರತ್ಯಯಕಾರಕಃ ॥ ೬ ॥
ಸೂರ್ಯವಾರೇಣ ಸಪ್ತಮ್ಯಾಂ ಫಲಹಸ್ತಃ ಪ್ರದಕ್ಷಿಣಾಂ ।
ಯಃ ಕರೋತಿ ನರಸ್ತಸ್ಯ ಹ್ಯಷ್ಟೋತ್ತರಶತಂ ದ್ವಿಜ ॥ ೭ ॥
ತಸ್ಯ ಸಿದ್ಧಿಪ್ರದಃ ಸಮ್ಯಙ್ಮನಸಾ ವಾಂಛಿತಂ ದದೇತ್ ।
ತಥಾಽನ್ಯಾ ಶಾರದಾ ನಾಮ ದೇವೀ ಕಾಶ್ಮೀರಸಂಸ್ಥಿತಾ ॥ ೮ ॥
ಉಪವಾಸಕೃತೇರೇವ ಸಾಽಪಿ ಸಿದ್ಧಿಪ್ರದಾಯಿನೀ ।
ತಚ್ಛ್ರುತ್ವಾ ವಚನಂ ತೇಷಾಂ ಜನಾನಾಂ ಸ ದ್ವಿಜೋತ್ತಮಃ ॥ ೯ ॥
ಸಮುದ್ದಿಶ್ಯ ಚಮತ್ಕಾರಂ ತಸ್ಮಾತ್ ಸ್ಥಾನಾತ್ತತಃ ಪರಂ ।
ಚಮತ್ಕಾರಪುರಂ ಪ್ರಾಪ್ಯ ಸಪ್ತಮ್ಯಾಂ ಸೂರ್ಯವಾಸರೇ ॥ ೧೦ ॥
ತತ್ರಾಗತ್ಯ ತತಃ ಸ್ನಾತ್ವಾ ಶುಚಿರ್ಭೂತ್ವಾ ಸಮಾಹಿತಃ ।
ಗತಃ ಸಂತಿಷ್ಠತೇ ಯತ್ರ ಯಾಜ್ಞವಲ್ಕ್ಯಕೃತೋ ರವಿಃ ॥ ೧೧ ॥
ತತಃ ಪ್ರದಕ್ಷಿಣಾಃ ಕೃತ್ವಾ ಅಷ್ಟೋತ್ತರಶತಂ ಮಿತಾಃ ।
ನಾಲಿಕೇರಾಣಿ ಚಾದಾಯ ಶ್ರದ್ಧಯಾ ಪರಯಾ ಯುತಃ ॥ ೧೨ ॥
ತತಃ ಕ್ಷುತ್ಕ್ಷಾಮಕಂಠಃ ಸ ಪರಿಶ್ರಾಂತಸ್ತದಗ್ರತಃ ।
ಉಪವಿಷ್ಟೋ ಜಪಂ ಕುರ್ವನ್ ಸೂರ್ಯೇಷ್ಟೈಃ ಸ್ತವನೈಸ್ತದಾ ॥ ೧೩ ॥

---

೬. ಜನರು ಹೇಳುತ್ತಾರೆ:—ಬ್ರಾಹ್ಮಣನೆ! ಚಮತ್ಕಾರಪುರದಲ್ಲಿ ಕೂಡಲೆ ಇಷ್ಟಾರ್ಥವನ್ನು ಕೊಡುವ ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿರುವ ಸೂರ್ಯನು ಇದ್ದಾನೆ ಎಂದು ನಾವು ಕೇಳಿದ್ದೇವೆ.

೭–೧೧. ಸಪ್ತಮೀ ಭಾನುವಾರದ ದಿನ ಕೈಯಲ್ಲಿ ಫಲವನ್ನು ಹಿಡಿದುಕೊಂಡು ಅವನಿಗೆ ನೂರೆಂಟು ಸಾರಿ ಪ್ರದಕ್ಷಿಣೆ ಮಾಡಿದ ಮನುಷ್ಯನಿಗೆ ಆ ಸೂರ್ಯನು ಇಷ್ಟಾರ್ಥಸಿದ್ಧಿಯನ್ನುಂಟುಮಾಡುವನು. ಇನ್ನೊಬ್ಬ ಶಾರದೆಯೆಂಬ ದೇವತೆಯು ಕಾಶ್ಮೀರದಲ್ಲಿ ನೆಲೆಸಿರುವಳು. ಅವಳು ಉಪವಾಸದಿಂದ ಉಪಾಸನೆ ಮಾಡಿದವರಿಗೆ ಸಿದ್ಧಿಯನ್ನು ಕೊಡುವಳು. ದ್ವಿಜವರ್ಯರೆ! ಆ ಪುಷ್ಪನು ಆ ಜನರ ಮಾತನ್ನು ಕೇಳಿ ಅಲ್ಲಿಂದ ಚಮತ್ಕಾರಪುರಕ್ಕೆ ತೆರಳಿ ಅಲ್ಲಿ ಸಪ್ತಮೀ ಭಾನುವಾರದ ದಿನ ಮಿಂದು ಶುದ್ಧನಾಗಿ ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಭಾಸ್ಕರನ ಸನ್ನಿಧಿಗೆ ಹೋಗಿ ನಿಂತನು.

೧೨. ಅವನು ಕೈಯಲ್ಲಿ ತೆಂಗಿನಕಾಯಿಗಳನ್ನು ತೆಗೆದುಕೊಂಡು ಅತಿ ಶ್ರದ್ಧೆಯಿಂದ ನೂರೆಂಟು ಸಾರಿ ಪ್ರದಕ್ಷಿಣೆ ಮಾಡಿದನು.

೧೩–೧೫. ತರುವಾಯ ಹಸಿವಿನಿಂದ ಕುಗ್ಗಿದ ಧ್ವನಿಯುಳ್ಳವನೂ, ಆಯಾಸಗೊಂಡವನೂ ಆಗಿ ಅವನ ಮುಂದೆ ಕುಳಿತು ಆ ಸೂರ್ಯನಿಗೆ ಇಷ್ಟವಾದ

ಮಂಡಲಬ್ರಾಹ್ಮಣಾದ್ಯೈಶ್ಚ ತಾರಂಸ್ವರಮುಪಾಶ್ರಿತಃ ।
ಸಪ್ತಯುಂಜರವಾದ್ಯೈಶ್ಚ ಅಗ್ನಿರೇವೇತಿ ಭಕ್ತಿತಃ ॥ ೧೪ ॥
ಆದಿತ್ಯವ್ರತಸಂಜ್ಞಾದ್ಯೈಃ ಸಾಮಭಿರ್ದೃಢಭಕ್ತಿಭಾಕ್ ।
ಕ್ಷುರಿಕಾಮಂತ್ರಪೂರ್ವೈಶ್ಚ ತಥೈವಾಥರ್ವಣೋದ್ಭವೈಃ ॥ ೧೫ ॥
ಯಾವದನ್ಯೋಽರ್ಕವಾರಸ್ತು ನೈವ ತುಷ್ಟೋ ದಿವಾಕರಃ ।
ಪೌರ್ಣಮಾಸೀ ದಿನೇ ಪ್ರಾಪ್ತೇ ವೈರಾಗ್ಯಂ ಪರಮಂ ಗತಃ ॥ ೧೬ ॥
ತತಃ ಪುಷ್ಪೋ ವಿಧಾಯಾಽಥ ಸ್ನಾನಂ ಧೌತಾಂಬರಃ ಶುಚಿಃ ।
ಭೂನಾಮ್ನಾಸಾಧ್ಯ ಭೂಮಿಂ ಚ ಸ್ಥಂಡಿಲಾರ್ಥಂ ದ್ವಿಜೋತ್ತಮಾಃ ॥೧೭॥
ಸ್ಥಂಡಿಲಂ ಹಸ್ತಮಾತ್ರಂ ಚ ಸ್ಥಂಡಿಲೇ ಪ್ರತ್ಯಕಲ್ಪಯತ್ ।
ಅಗ್ನಿಮೀಳೇತಿ ಮಂತ್ರೇಣ ತತೋಽಗ್ನಿಂ ಸ ನಿಧಾಯ ಚ ॥ ೧೮ ॥
ತೃಣೈಃ ಪರಿಸ್ತೃಣಾಮೀತಿ ಕೃತ್ವೋಪಸ್ತರಣಂ ತತಃ ।
ಆಬ್ರಹ್ಮನ್ನಿತಿ ಮಂತ್ರೇಣ ದತ್ವಾ ಬ್ರಹ್ಮಾಸನಂ ತತಃ ॥ ೧೯ ॥
ಸುತ್ರಾಮಾಣಮಿತಿ ಪ್ರೋಚ್ಯ ಸಮಿಧಃ ಸ್ಥಾಪನಂ ಚ ಯತ್ ।
ಪ್ರೋಕ್ಷಣೀಪಾತ್ರಮಾಸಾದ್ಯ ಪ್ರೋಕ್ಷಣಂ ಕೃತವಾಂಸ್ತತಃ ॥ ೨೦ ॥
ಪಾತ್ರಾಣಾಮಥ ಸರ್ವೇಷಾಂ ಸ್ರುವಾದೀನಾಂ ಯಥಾ ಕ್ರಮಂ ।
ತತಃ ಪ್ರಕಲ್ಪಯಾಮಾಸ ಹವಿಃಸ್ಥಾನೇ ನಿಜಾಂ ತನುಂ ॥ ೨೧ ॥

---

ಸ್ತೋತ್ರಗಳಿಂದಲೂ, ಮಂಡಲ ಬ್ರಾಹ್ಮಣಗಳಿಂದಲೂ, ಸಪ್ತಯುಂಜಂತೀತ್ಯಾದಿ ಮಂತ್ರಗಳಿಂದಲೂ, ಅಗ್ನಿರೇವೇತ್ಯಾದಿ ಮಂತ್ರಗಳಿಂದಲೂ, ಆದಿತ್ಯವ್ರತವನ್ನು ಸೂಚಿಸುವ ಸಾಮಗಳಿಂದಲೂ, ಅಥರ್ವಣವೇದದ ಕ್ಷುರಿಕಾ ಮಂತ್ರಗಳಿಂದಲೂ ದೃಢಭಕ್ತಿಯಿಂದ ಗಟ್ಟಿಯಾಗಿ ಸ್ತುತಿಗೈದನು.

೧೬. ಸೂರ್ಯನು ಮತ್ತೊಂದು ಭಾನುವಾರದವರೆಗೂ ಸಂತುಷ್ಟನಾಗದಿರಲು ಪುಷ್ಪನು ಹುಣ್ಣಿಮೆಯ ದಿನ ಅತ್ಯಂತ ವೈರಾಗ್ಯವನ್ನು ತಾಳಿದನು.

೧೭–೨೦. ಅನಂತರ ಅವನು ಮಿಂದು ಮಡಿ ಬಟ್ಟೆಯನ್ನುಟ್ಟು ಶುದ್ಧನಾಗಿ ಸ್ಥಂಡಿಲಕ್ಕಾಗಿ ಭೂನಾಮಕ ಮಂತ್ರದಿಂದ ಭೂಮಿಯನ್ನು ಸರಿಮಾಡಿ ಹಸ್ತ ಪರಿಮಾಣದ ಸ್ಥಂಡಿಲವನ್ನು ಕಲ್ಪಿಸಿ ಅಗ್ನಿಮೀಳೇತ್ಯಾದಿ ಮಂತ್ರದಿಂದ ಅಗ್ನಿಯನ್ನು ಪ್ರತಿಷ್ಠೆಮಾಡಿ ಪರಿಸ್ತೃಣಾಮೀತ್ಯಾದಿ ಮಂತ್ರದಿಂದ ದರ್ಭೆಗಳಿಂದ ಉಪಸ್ತರಣವನ್ನು ರಚಿಸಿ ಆಬ್ರಹ್ಮನ್ನಿತ್ಯಾದಿ ಮಂತ್ರದಿಂದ ಬ್ರಹ್ಮಾಸನವನ್ನು ಕೊಟ್ಟು ಸುತ್ರಾಮಾಣಮಿತ್ಯಾದಿ ಮಂತ್ರದಿಂದ ಸಮಿತ್ತನ್ನು ಸ್ಥಾಪಿಸಿ, ಪ್ರೋಕ್ಷಣೀ ಪಾತ್ರೆಯನ್ನಿಟ್ಟು ಪ್ರೋಕ್ಷಣೆ ಮಾಡಿದನು.

೨೧. ತರುವಾಯ ಸ್ರುವಾದಿ ಸಮಸ್ತ ಪಾತ್ರೆಗಳನ್ನು ಸಿದ್ಧಗೊಳಿಸಿ ಹವಿಸ್ಸಿನ ಸ್ಥಾನದಲ್ಲಿ ತನ್ನ ಶರೀರವನ್ನು ಕಲ್ಪಿಸಿದನು.

ನ್ಯಾಯಂ ತು ದೇವತಾಸ್ಥಾನೇ ಸ ಆಚಾರ್ಯವಿಧಾನತಃ ।
ಗ್ರಹಣಂ ಪ್ರೋಕ್ಷಣಂ ಚೈವ ಸೂರ್ಯಾಯತ್ವೇತಿ ಚೋತ್ತರಂ ॥ ೨೨ ॥
ಅಯಂ ತ ಇಧ್ಮ ಆತ್ಮೇತಿ ಜಪ್ತ್ವಾಽಥ ಸಮಿಧಂ ತತಃ ।
ಅಗ್ನಿಸೋಮೇತಿ ಮಂತ್ರಾಭ್ಯಾಂ ಹುತ್ವಾಚಾಜ್ಯಾಹುತೀ ತತಃ ॥ ೨೩ ॥
ಕೃತ್ವಾ ವ್ಯಾಹೃತಿ ಹೋಮಂ ತು ಭೂರ್ಭುವಃ ಸ್ವೇತಿ ಭೋ ದ್ವಿಜಾಃ ।
ಯೇ ತೇ ಶತೇತಿಮಂತ್ರಾದ್ಯೈರ್ಹುತ್ವಾಽತ್ರೈವ ಚ ದಾರುಣಂ ॥ ೨೪ ॥
ಆಹ್ವಯಾಮಾಸ ವಹ್ನಿಂ ಚ ಪ್ರತ್ಯಕ್ಷೋ ಭವ ದೇವ ಮೇ ।
ಏವಂ ಮಂತ್ರೇಣ ಕೃತ್ವಾ ತಂ ಸಂಮುಖಂ ಜ್ವಲನಂ ತತಃ ॥ ೨೫ ॥
ಕಾಲೀಕರಾಲಿಕಾದ್ಯಾಶ್ಚ ಸಪ್ತಜಿಹ್ವಾಶ್ಚ ಯಾಃ ಸ್ಮೃತಾಃ ।
ತಾಸಾಮಾಹ್ವಾನಕಂ ಕೃತ್ವಾ ತತೋ ದೀಪ್ತೇ ಹವಿರ್ಭುಜಿ ॥ ೨೬ ॥
ಜುಹಾವ ಚ ಸ ಮಾಂಸಾನಿ ಸ್ವಾನಿ ಚೋತ್ಕೃತ್ಯ ಶಸ್ತ್ರತಃ ।
ಲೋಮಭ್ಯಃ ಸ್ವಾಹೇತಿ ವಿದಿಶೋ ದಿಗ್ಭ್ಯೋ ದತ್ವಾ ತತಃ ಪರಂ ॥ ೨೭ ॥
ಅಗ್ನಯೇ ಸ್ವಿಷ್ಟಕೃತ ಇತಿ ಯಾವದಾತ್ಮಾನಮಾಕ್ಷಿಪೇತ್ ।
ತಾವದ್ಧೃತಃ ಸ ಸೂರ್ಯೇಣ ಸ್ವಹಸ್ತೇನ ಸಮಂತತಃ ॥ ೨೮ ॥
ಧೃತಶ್ಚ ಸಾದರಂ ತೇನ ಮಾ ವಿಪ್ರ ಕುರು ಸಾಹಸಂ ।
ನೇದೃಗ್ಘೋಮಃ ಕೃತಃ ಕ್ವಾಽಪಿ ಕದಾಚಿತ್ಕೇನಚಿದ್ದ್ವಿಜ ॥ ೨೯ ॥

---

೨೨–೨೫. ದೇವತಾಸ್ಥಾನದಲ್ಲಿ ನ್ಯಾಯವನ್ನು ಕಲ್ಪಿಸಿ ಆಚಾರ್ಯವಿಧಿಯಿಂದ ಸೂರ್ಯಾಯತ್ವೇತ್ಯಾದಿ ಮಂತ್ರದಿಂದ ಗ್ರಹಣ ಪ್ರೋಕ್ಷಣಗಳನ್ನು ಮಾಡಿ ಸಮಿತ್ತನ್ನು ಹಿಡಿದುಕೊಂಡು ಅಯಂತ ಇಧ್ಮಾ ಇತ್ಯಾದಿ ಮಂತ್ರವನ್ನು ಜಪಿಸಿ ಅಗ್ನಿಸೋಮೇತ್ಯಾದಿ ಮಂತ್ರಗಳಿಂದ ಆಜ್ಯಾಹುತಿಯನ್ನಿತ್ತು ಭೂರ್ಭುವಸ್ವಃ ಎಂಬುದರಿಂದ ವ್ಯಾಹೃತಿ ಹೋಮವನ್ನು ಮಾಡಿ ಯೇ ತೇ ಶತೇತ್ಯಾದಿ ಮಂತ್ರಗಳಿಂದಲೂ ಹೋಮಿಸಿ ದಾರುಣವಾದ ಅಗ್ನಿಯನ್ನು ಆಹ್ವಾನಮಾಡಿ ಸ್ವಾಮಿ! ನನಗೆ ಪ್ರತ್ಯಕ್ಷನಾಗೆಂದು ಪ್ರಾರ್ಥಿಸಿ ಅಗ್ನಿಯನ್ನು ಅಭಿಮುಖಗೊಳಿಸಿದನು.

೨೬–೨೭. ಅನಂತರ ಅವನು ಅಗ್ನಿಯ ಕಾಳೀ ಕರಾಳೀ ಮೊದಲಾದ ಏಳು ನಾಲಿಗೆಗಳನ್ನು ಆವಾಹನೆಮಾಡಿ ಜ್ವಲಿಸುತ್ತಿರುವ ಅಗ್ನಿಯಲ್ಲಿ ಆಯುಧದಿಂದ ತನ್ನ ಶರೀರದ ಮಾಂಸಗಳನ್ನು ಕತ್ತರಿಸಿ ಅದರಿಂದ ಲೋಮಭ್ಯಃಸ್ವಾಹಾ ಎಂದು ದಿಕ್ಕುವಿದಿಕ್ಕುಗಳಲ್ಲಿ ಹೋಮಿಸಿದನು.

೨೮–೨೯. ಅನಂತರ ಆ ಪುಷ್ಪನು ಅಗ್ನಯೇ ಸ್ವಿಷ್ಟಕೃತ ಇತ್ಯಾದಿ ಮಂತ್ರದಿಂದ ತನ್ನ ಶರೀರವನ್ನು ಹೋಮಮಾಡಲುದ್ಯುಕ್ತನಾಗಲು ಸೂರ್ಯನು ಅವನನ್ನು ತನ್ನ ಕೈಗಳಿಂದ ಹಿಡಿದುಕೊಂಡು, "ಬ್ರಾಹ್ಮಣ! ನೀನು ಸಾಹಸಕಾರ್ಯ ಮಾಡಬೇಡ. ಇಂತಹ ಹೋಮವನ್ನು ಯಾವನೂ ಎಲ್ಲಿಯೂ ಮಾಡಲಿಲ್ಲ.

**ತುಷ್ಟೋಽಹಂ ಚ ಮಹಾಭಾಗ ಬ್ರೂಹಿ ಕಿಂ ಕರವಾಣಿ ತೇ ।**
**ಅದೇಯಮಪಿ ದಾಸ್ಯಾಮಿ ಯತ್ತೇ ಮನಸಿ ವರ್ತತೇ ॥ ೩೦ ॥**
**ಪುಷ್ಪ ಉವಾಚ:—**
**ಯದಿ ತುಷ್ಟೋಽಸಿ ದೇವೇಶ ಯದಿ ದೇಯೋ ವರೋ ಮಮ ।**
**ತದ್ದೇಯಂ ಗುಟಿಕಾಯುಗ್ಮಂ ಯದರ್ಥಂ ಪ್ರಾರ್ಥಯಾಮ್ಯಹಂ ॥ ೩೧ ॥**
**ವೈದಿಶೇ ನಗರೇ ಚಾಽಸ್ತಿ ಮಣಿಭದ್ರೋ ಮಹಾಧನೀ ।**
**ಕುಬ್ಜಾಂಗಃ ಕ್ಷತ್ರಿಯೋ ದೇವ ಜರಾವಲಿಸಮನ್ವಿತಃ ॥ ೩೨ ॥**
**ಅಬ್ರಹ್ಮಣ್ಯೋ ಮಹಾನೀಚಃ ಕೀನಾಶೋ ಜನದೂಷಿತಃ ।**
**ದ್ವಯೋರೇಕಾಂ ಯದಾ ವಕ್ತ್ರೇ ಸದಾಚೈವ ಕರೋಮ್ಯಹಂ ॥ ೩೩ ॥**
**ತದಾ ಮೇ ತಾದೃಶಂ ರೂಪಮವಿಕಲ್ಪಂ ಭವತ್ವಿತಿ ।**
**ಯದಾ ಪುನರ್ಗೃಹೀತ್ವಾ ತಾಂ ದ್ವಿತೀಯಾಂ ಪ್ರಕ್ಷಿಪಾಮ್ಯಹಂ ॥ ೩೪ ॥**
**ತತಶ್ಚ ಸಹಜಂ ರೂಪಂ ಮಮ ಭೂಯಾತ್ಸುರೇಶ್ವರ ।**
**ವೈದಿಶೇ ನಗರೇ ಚಾಽಸ್ತಿ ಮಣಿಭದ್ರಃ ಸುರೇಶ್ವರ ॥ ೩೫ ॥**
**ಅಪರಂ ತಸ್ಯ ಯತ್ಕಿಂಚಿದ್ಧನ ಧಾನ್ಯಾದಿಕಂ ಗೃಹೇ ।**
**ತತ್ಸರ್ವಂ ವಿದಿತಂ ಮೇಽಸ್ತ್ಯಾತ್ತಥಾ ದೇವ ಪ್ರಜಾಯತಾಂ ॥ ೩೬ ॥**

---

೩೦. ನಾನು ನಿನಗೆ ಒಲಿದಿರುವೆನು. ನಿನಗೆ ಈಗ ಏನನ್ನು ಮಾಡಲಿ. ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು. ಅದು ಕೊಡಲನರ್ಹವಾಗಿದ್ದರೂ ಕೊಡುತ್ತೇನೆ'' ಎಂದು ಪ್ರೀತಿಯಿಂದ ನುಡಿದನು.

೩೧. ಪುಷ್ಪನು ಹೇಳುತ್ತಾನೆ:—ಭಾಸ್ಕರ! ನೀನು ತುಷ್ಟನಾಗಿ ನನಗೆ ವರವನ್ನು ನೀಡುವುದಾದರೆ ನಾನು ಪ್ರಾರ್ಥಿಸುವ ಎರಡು ಗುಳಿಗೆಗಳನ್ನು ಕೊಡು.

೩೨–೩೫. ಸ್ವಾಮಿ! ವೈದಿಶ ನಗರದಲ್ಲಿ ಅತ್ಯಂತ ಧನಿಕನೂ, ಕುಬ್ಜನೂ, ಮುಪ್ಪಿನಿಂದ ಸುಕ್ಕುಳ್ಳವನೂ, ಅತಿ ನೀಚನೂ, ಕುರೂಪಿಯೂ ಆದ ಮಣಿಭದ್ರನೆಂಬ ಒಬ್ಬ ಕ್ಷತ್ರಿಯನಿರುವನು. ನಾನು ಈ ಎರಡು ಗುಳಿಗೆಗಳಲ್ಲಿ ಒಂದನ್ನು ಬಾಯಿಯಲ್ಲಿಟ್ಟುಕೊಂಡರೆ ನನ್ನ ರೂಪವು ಸ್ವಲ್ಪವೂ ವ್ಯತ್ಯಾಸವಾಗದಂತೆ ಅವನಂತೆಯೇ ಆಗಲಿ. ಎರಡನೆಯ ಗುಳಿಗೆಯನ್ನು ಬಾಯಿಯಲ್ಲಿಟ್ಟು ಮೊದಲನೆಯದನ್ನು ಬಿಸಾಡಿದರೆ ನನ್ನ ಮೊದಲಿನ ರೂಪವು ಬರಲಿ.

೩೬. ಆ ಮಣಿಭದ್ರನ ಮನೆಯಲ್ಲಿರುವ ಧನ ಧಾನ್ಯಾದಿಗಳೆಲ್ಲ ನನಗೆ ತಿಳಿಯುವಂತಾಗಲಿ.

ಕಿಂ ವಾಽನೇನ ಬಹೂಕ್ತೇನ ತಸ್ಯ ಮಿತ್ರಾಣಿ ಬಾಂಧವಾಃ ।
ವ್ಯವಹಾರಾಸ್ತಥಾ ಸರ್ವೇ ಪ್ರಕಟಾಃ ಸ್ಯುಃ ಸದೈವ ಹಿ ॥ ೩೭ ॥
ನ ಕಶ್ಚಿಜ್ಜ್ಞಾಯತೇ ತತ್ರ ವಿಕಲ್ಪಃ ಕಸ್ಯಚಿತ್ಕ್ವಚಿತ್ ।
ಮಮ ತಸ್ಯಾಽಧಮಸ್ಯಾಽಪಿ ಸರ್ವಕೃತ್ಯೇಷು ಸರ್ವದಾ ॥ ೩೮ ॥

ಭಾಸ್ಕರ ಉವಾಚ:—

ಗೃಹಾಣ ತ್ವಂ ಮಹಾಭಾಗ ಗುಟಿಕಾದ್ವಿತಯಂ ಶುಭಂ ।
ಶುಕ್ಲಂ ಕೃಷ್ಣಂ ಚ ವಕ್ತ್ರಸ್ಥಂ ವಿಭೇದಜನನಂ ಮಹತ್ ॥ ೩೯ ॥
ಶುಕ್ಲಯಾ ತಸ್ಯ ರೂಪಂ ಚ ತವನೂನಂ ಭವಿಷ್ಯತಿ ।
ಕೃಷ್ಣಯಾಽಪಿ ಪುನಃ ಸ್ವಂ ಚ ಸಂಪ್ರಾಪ್ಸ್ಯಸಿ ಮಹಾದ್ವಿಜ ॥ ೪೦ ॥

ಪುಷ್ಪ ಉವಾಚ:—

ಅಪರಂ ವದ ಮೇ ದೇವ ಸಂದೇಹಂ ಹೃದಯೇ ಸ್ಥಿತಂ ।
ಯತ್ತ್ವಾಂ ಪೃಚ್ಛಾಮಿ ದೇವೇಶ ತವ ಕೀರ್ತಿವಿವರ್ಧನಂ ॥ ೪೧ ॥
ಮಯಾ ಶ್ರುತಂ ಸುರಶ್ರೇಷ್ಠ ಸಪ್ತಮ್ಯಾಂ ಸೂರ್ಯವಾಸರೇ ।
ಯಸ್ತೇ ಪ್ರದಕ್ಷಿಣಾನಾಂ ಚ ಕುರ್ಯಾದಷ್ಟೋತ್ತರಂ ಶತಂ ।
ತಸ್ಯ ತ್ವಂ ತತ್ಕ್ಷಣಾದೇವ ಫಲಹಸ್ತಸ್ಯ ಸಿದ್ಧಿದಃ ॥ ೪೨ ॥

---

೩೭. ಬಹುಮಾತಿನಿಂದೇನು? ಅವನ ಮಿತ್ರರೂ, ಬಂಧುಗಳೂ, ವ್ಯವಹಾರಗಳೂ ಎಲ್ಲವೂ ಪ್ರಕಟವಾಗಲಿ.

೩೮. ಅಲ್ಲಿ ನನ್ನ ಮತ್ತು ಆ ಅಧಮನ ಎಲ್ಲ ಕೆಲಸಗಳಲ್ಲಿಯೂ ಯಾವಾಗಲೂ ಯಾರಿಗೂ ವ್ಯತ್ಯಾಸವು ತಿಳಿಯದಿರಲಿ.

೩೯. ಸೂರ್ಯನು ಹೇಳುತ್ತಾನೆ:—ಮಹಾತ್ಮನೆ! ಬಾಯಿಯಲ್ಲಿದ್ದು ಭೇದವನ್ನು ತಿಳಿಸುವ ಈ ಬಿಳಿಯ ಮತ್ತು ಕರಿಯ ಗುಳಿಗೆಗಳನ್ನು ತೆಗೆದುಕೊ.

೪೦. ಈ ಬಿಳಿಯ ಗುಳಿಗೆಯಿಂದ ನಿನಗೆ ಆ ಮಣಿಭದ್ರನ ರೂಪವು ಬರುವುದು. ಕರಿಯ ಗುಳಿಗೆಯಿಂದ ಮರಳಿ ನಿನ್ನ ರೂಪವನ್ನು ಪಡೆಯುವೆ.

೪೧. ಪುಷ್ಪನು ಹೇಳುತ್ತಾನೆ:—ಸ್ವಾಮಿ! ನನ್ನ ಮನಸ್ಸಿನಲ್ಲಿ ಇನ್ನೊಂದು ಸಂದೇಹವಿದೆ. ಅದನ್ನು ಕೇಳುತ್ತೇನೆ. ಅದು ನಿನಗೆ ಕೀರ್ತಿಯನ್ನು ಹೆಚ್ಚಿಸುವುದು.

೪೨—೪೪. ಭಾಸ್ಕರ! ಮೂರ್ಖನೂ, ಪಾಪಿಯೂ, ಸಕಲ ದೋಷಗಳಿಂದ ಕೂಡಿದವನೂ ಆದ ಮನುಷ್ಯನೂ ಸಪ್ತಮೀ ಭಾನುವಾರದ ದಿನ ಕೈಯಲ್ಲಿ ಫಲವನ್ನು ಹಿಡಿದುಕೊಂಡು ನಿನಗೆ ನೂರೆಂಟು ಪ್ರದಕ್ಷಿಣೆಗಳನ್ನು ಮಾಡಿದರೆ ನೀನು ಅವನಿಗೆ ಕೂಡಲೆ ಇಷ್ಟಾರ್ಥಸಿದ್ಧಿಯನ್ನುಂಟುಮಾಡುವೆ ಎಂದು ನಾನು

ಮೂರ್ಖಸ್ಯಾಽಪಿ ಚ ಪಾಪಸ್ಯ ಸರ್ವದೋಷಾನ್ವಿತಸ್ಯ ಚ ।
ಚತುರ್ವೇದಸ್ಯ ಮೇ ಕಸ್ಮಾತ್ತೀರ್ಥಯಾತ್ರಾಪರಸ್ಯ ಚ ॥ ೪೩ ॥
ಸಪ್ತರಾತ್ರೇ ಗತೇ ತುಷ್ಟೋ ಹೋಮ ಏವಂ ವಿಧೇ ಕೃತೇ ॥ ೪೪ ॥
ಶ್ರೀ ಸೂರ್ಯ ಉವಾಚ :—
ತಾಮಸೇನ ತು ಭಾವೇನ ತ್ವಯಾ ಸರ್ವಮಿದಂ ಕೃತಂ ।
ತೇನ ಸರ್ವಂ ವೃಥಾ ಜಾತಂ ತ್ವಯಾ ಸರ್ವಂ ಚ ಯತ್ಕೃತಂ ॥ ೪೫ ॥
ಯತ್ಕಿಂಚಿತ್ಕ್ರಿಯತೇ ವಿಪ್ರ ತಾಮಸಂ ಭಾವಮಾಶ್ರಿತೈಃ ।
ತತ್ಸರ್ವಂ ಜಾಯತೇ ವ್ಯರ್ಥಂ ಕಿಂ ನ ವೇತ್ತಿ ಭವಾನಿದಂ ॥ ೪೬ ॥
ಏವಮುಕ್ತ್ವಾ ತತಃ ಸೂರ್ಯಸ್ತಸ್ಯ ಗಾತ್ರಾಣ್ಯುಪಾಸ್ಪೃಶತ್ ।
ಖಂಡಿತಾನಿ ಸ್ವಹಸ್ತೇನ ನಿರ್ವ್ರಣಾನಿ ಕೃತಾನಿ ಚ ॥ ೪೭ ॥
ಅಬ್ರವೀಚ್ಚ ಪುನಃ ಪುಷ್ಪಂ ಪ್ರಸನ್ನವದನಃ ಸ್ಥಿತಃ ।
ಅನೇನೈವ ವಿಧಾನೇನ ಯಃ ಕರೋತಿ ಕುಶಂಡಿಕಾಂ ॥ ೪೮ ॥
ಸೌಮ್ಯಭಾವಂ ಸಮಾಶ್ರಿತ್ಯ ಸಮಿದ್ಭಿಶ್ಚಾರ್ಕಸಂಭವೈಃ ।
ತಿಲಾಕ್ಷತೈರ್ವಿಶೇಷೇಣ ಹೋಮಂ ಯಸ್ತು ಸಮಾಚರೇತ್ ॥ ೪೯ ॥
ಛಂದಋಷಿ ಸಮೋಪೇತಮೇಕಂ ಯಾವತ್ಸಹಸ್ರಕಂ ।
ತಸ್ಯ ದಾಸ್ಯಾಮ್ಯಹಂ ಹೃತ್ಸ್ಥಮಧಿಕೇಭ್ಯೋಽಧಿಕಂ ಫಲಂ ॥ ೫೦ ॥

---

ಕೇಳಿದ್ದೇನೆ. ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನೂ, ತೀರ್ಥಯಾತ್ರಾ ನಿರತನೂ ಆದ ನನಗೆ ಏಳು ದಿನಗಳ ತರುವಾಯ ಇಂತಹ ಹೋಮವನ್ನು ಮಾಡಿದಮೇಲೆ ಸಂತುಷ್ಟನಾಗಲು ಕಾರಣವೇನು?

೪೫. ಶ್ರೀ ಸೂರ್ಯನು ಹೇಳುತ್ತಾನೆ:—ನೀನು ತಾಮಸಭಾವದಿಂದ ಇದನ್ನೆಲ್ಲ ಮಾಡಿರುವೆ. ಆದುದರಿಂದ ನೀನು ಮಾಡಿರುವುದೆಲ್ಲ ನಿಷ್ಫಲವಾಯಿತು.

೪೬. ಅಯ್ಯಾ ದ್ವಿಜನೆ! ತಾಮಸಭಾವದಿಂದ ಮಾಡಿದುದೆಲ್ಲವೂ ವ್ಯರ್ಥವಾಗುವುವು ಎಂಬುದನ್ನು ನೀನು ತಿಳಿದಿಲ್ಲವೆ?

೪೭. ಸೂರ್ಯನು ಹೀಗೆ ಹೇಳಿ ಆ ಪುಷ್ಪನು ಕತ್ತರಿಸಿದ ಅವಯವಗಳನ್ನೆಲ್ಲ ತನ್ನ ಹಸ್ತದಿಂದ ಮುಟ್ಟಿ ಗಾಯವಿಲ್ಲದಂತೆ ಮಾಡಿದನು.

೪೮–೫೦. ಮರಳಿ ಪ್ರಸನ್ನಮುಖನಾಗಿ ಸೌಮ್ಯಭಾವವನ್ನು ಆಶ್ರಯಿಸಿ ಅರ್ಕದ ಸಮಿತ್ತುಗಳಿಂದಲೂ, ಎಳ್ಳು ಅಕ್ಷತೆಗಳಿಂದಲೂ ಈ ವಿಧಿಯಂತೆ ಛಂದಸ್ಸು ಋಷಿನಾಮಗಳಿಂದ ಸಹಿತವಾಗಿ ಸಾವಿರ ಆಹುತಿಗಳಿಂದ ಹೋಮ ಮಾಡಿದವನಿಗೆ ಮನಸ್ಸಿನಲ್ಲಿರುವ ಫಲಕ್ಕಿಂತಲೂ ಅಧಿಕ ಫಲವನ್ನು ಕೊಡುವೆನು ಎಂದನು.

ಏವಮುಕ್ತ್ವಾ ಸಹಸ್ರಾಂಶುಸ್ತತ್ರೈವಾಂತರಧೀಯತ ।
ದೀಪವಲ್ಲಕ್ಷಿತೋ ನೈವ ಕೇನ ಮಾರ್ಗೇಣ ನಿರ್ಗತಃ ॥ ೫೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸೂರ್ಯಸಕಾಶಾತ್ಪುಷ್ಪಬ್ರಾಹ್ಮಣಸ್ಯವರಲಬ್ಧಿ ವರ್ಣನಂ" ನಾಮ
ಸಪ್ತಪಂಚಾಶದುತ್ತರಶತತಮೋಽಧ್ಯಾಯಃ

---

೫೧. ಭಾಸ್ಕರನು ಹೀಗೆ ಹೇಳಿ ಅಲ್ಲಿಯೇ ದೀಪದಂತೆ ಅದೃಶ್ಯನಾದನು. ಯಾವ ದಾರಿಯಿಂದ ಹೊರಟುಹೋದನೆಂಬುದು ತಿಳಿಯಲಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸೂರ್ಯಸಕಾಶಾತ್ಪುಷ್ಪಬ್ರಾಹ್ಮಣಸ್ಯವರಲಬ್ಧಿವರ್ಣನ" ವೆಂಬ
ನೂರೈವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಪಂಚಾಶದುತ್ತರಶತತಮೋಽಧ್ಯಾಯಃ

## ಮಣಿಭದ್ರನಿಧನವರ್ಣನಂ

ಸೂತ ಉವಾಚ:—

ಪುಷ್ಪೋಽಪಿ ಗುಟಿಕೇ ಲಬ್ಧ್ವಾ ಭಾಸ್ಕರಾದ್ವಾರಿತಸ್ಕರಾತ್ ।
ಚಿರಾದ್ಭೋಜನಮಾಸಾದ್ಯ ಪ್ರಸ್ಥಿತೋ ವೈದಿಶಂ ಪ್ರತಿ ॥ ೧ ॥
ತತೋ ವೈದಿಶಮಾಸಾದ್ಯ ಸ ಪುಷ್ಪೋ ಹೃಷ್ಟಮಾನಸಃ ।
ಶುಕ್ಲಾಂ ತಾಂ ಗುಟಿಕಾಂ ವಕ್ತ್ರೇ ಚಕಾರ ದ್ವಿಜಸತ್ತಮಾಃ ॥ ೨ ॥
ಮಣಿಭದ್ರಸಮೋ ಜಾತಸ್ತತ್ಕ್ಷಣಾದೇವ ಸದ್ವಿಜಃ ।
ಹಟ್ಟಮಾರ್ಗಂ ಗತೇ ಸೋಽಥ ತಸ್ಮಿನ್ ಗತ್ವಾಽಥ ಮಂದಿರೇ ।
ಪ್ರವಿಷ್ಟಃ ಸಹಸಾ ಮಧ್ಯೇ ಪ್ರಹೃಷ್ಟೇನಾಂತರಾತ್ಮನಾ ॥ ೩ ॥
ತತಶ್ಚಾಕಾರಯಾಮಾಸ ತಂ ಷಂಢಂ ದ್ವಾರಮಾಶ್ರಿತಂ ।
ತಸ್ಮೈ ದತ್ವಾಽಥ ವಸ್ತ್ರಾಣಿ ಪಶ್ಚಾತ್ ಷಂಢಮುವಾಚ ಸಃ ॥ ೪ ॥
ಷಂಢ ಕಶ್ಚಿತ್ಪುಮಾನತ್ರ ಸಮ್ಯಗ್ವೇಷಕರೋ ಹಿ ಸಃ ।
ಮಮ ವೇಷಂ ಸಮಾಧಾಯ ಭ್ರಮತೇ ಸಕಲೇ ಪುರೇ ॥ ೫ ॥

---

## ಕನ್ನಡದ ಅನುವಾದ

### ಮಣಿಭದ್ರನಿಧನವರ್ಣನ

೧. ಸೂತನು ಹೇಳುತ್ತಾನೆ:—ಪುಷ್ಪನು ಸೂರ್ಯನಿಂದ ಗುಳಿಗೆಯನ್ನು ಪಡೆದು ಬಹು ಹೊತ್ತಿನ ತರುವಾಯ ಭೋಜನ ಮಾಡಿ ವೈದಿಶನಗರಿಗೆ ಹೊರಟನು.

೨. ದ್ವಿಜವರ್ಯರೆ! ಅವನು ವೈದಿಶನಗರವನ್ನು ಹೊಂದಿ ಸಂತೋಷದಿಂದ ಆ ಬಿಳಿಯ ಗುಳಿಗೆಯನ್ನು ಬಾಯಿಯಲ್ಲಿಟ್ಟುಕೊಂಡನು.

೩. ಕೂಡಲೆ ಮಣಿಭದ್ರನಂತಾದ ಅವನು ರಾಜಮಾರ್ಗದಲ್ಲಿರುವ ಆ ಮಣಿಭದ್ರನ ಮನೆಗೆ ಹೋಗಿ ಸಂತೋಷದಿಂದ ಒಳಹೊಕ್ಕನು.

೪. ಬಳಿಕ ದ್ವಾರದಲ್ಲಿರುವ ನಪುಂಸಕನನ್ನು ಕರೆಯಿಸಿ ಅವನಿಗೆ ವಸ್ತ್ರಗಳನ್ನಿತ್ತು ಇಂತೆಂದನು.

೫. ಈ ಪಟ್ಟಣದಲ್ಲೊಬ್ಬ ಮನುಷ್ಯನು ನನ್ನಂತೆಯೇ ವೇಷವನ್ನು ಧರಿಸಿ ಸಂಚರಿಸುತ್ತಿದ್ದಾನೆ.

**ಸಾಂಪ್ರತಂ ಮದ್ಗೃಹೇ ಸೋಽಥ ಲೋಭನಾಯಾ ಗಮಿಷ್ಯತಿ ।**
**ಸ ಚ ಕೃತ್ರಿಮವೇಷೇಣ ನಿಷೇದ್ಧವ್ಯಸ್ತ್ವಯಾ ಹಿ ಸಃ ।**
**ಸ ತಥೇತಿ ಪ್ರತಿಜ್ಞಾಯ ದ್ವಾರದೇಶಂ ಸಮಾಶ್ರಿತಃ ॥ ೬ ॥**
**ಪುಷ್ಪೋಽಪಿ ಚಾಽಬ್ರವೀದ್ಭಾರ್ಯಾಂ ಮಾಹಿಕಾಖ್ಯಾಂ ತತಃ ಪರಂ ।**
**ಮಾಹಿಕೇಽದ್ಯ ಮಯಾ ದೃಷ್ಟಃ ಸ್ವತಾತಃ ಸ್ವಪುರಃ ಸ್ಥಿತಃ ॥ ೭ ॥**
**ವೀರಭದ್ರಃ ಸುದುಃಖಾರ್ತೋ ಮಲಿನಾಂಬರಸಂವೃತಃ ।**
**ಅಬ್ರವೀಚ್ಚ ತತಃ ಕೋಪಾನ್ಮಾಮೇವಂ ಪರುಷಾಕ್ಷರಂ ॥ ೮ ॥**
**ಧಿಗ್ಧಿಗ್ಪಾಪ ತ್ವಯಾ ಕನ್ಯಾತೀವ ರೂಪವತೀ ಸದಾ ।**
**ವಂಚಯಿತ್ವಾ ಜನೇತಾರಮುದೂಢಾ ಸಾ ಸುಮಧ್ಯಮಾ ॥ ೯ ॥**
**ನ ದತ್ತಂ ತತ್ಪಿತುಃ ಕಿಂಚಿನ್ನ ತಸ್ಯಾ ಅಥ ಪುತ್ರಕ ।**
**ವಿಧವಾಂ ಯಾದೃಶೀಂ ತಾಂ ಚ ಶ್ವೇತಾಂಬರಧರಾಂ ಸದಾ ॥ ೧೦ ॥**
**ಸಂಧಾರಯಸಿ ಪಾಪಾತ್ಮನ್ ನೇಷ್ಟಂ ಭೋಜ್ಯಂ ಪ್ರಯಚ್ಛಸಿ ।**
**ತಸ್ಮಾತ್ತಸ್ಯಾಃ ಪಿತುರ್ದೇಹಿ ತ್ವಂ ಸುವರ್ಣಾಯುತಂ ಧ್ರುವಂ ॥ ೧೧ ॥**
**ಭೂಷಣಂ ವಾಂಛಿತಂ ತಸ್ಯಾ ಯತ್ತದ್ದೇಹಿ ರುಚಿಪೂರ್ವಕಂ ।**
**ಯೇನ ಸಂಧಾರಯೇದ್ಭಾರ್ಯಾ ಸಾನಂದಂ ಪರಮಂ ಗತಾ ॥ ೧೨ ॥**

---

೬. ಕಪಟವೇಷಧಾರಿಯಾದ ಅವನು ಈಗ ಆಶೆಯಿಂದ ನನ್ನ ಮನೆಗೆ ಬರುವನು. ನೀನು ಅವನನ್ನು ತಡೆಯಬೇಕು ಎಂದನು. ಆ ಷಂಢನು ಹಾಗೆಯೇ ಆಗಲೆಂದು ಒಪ್ಪಿ ಬಾಗಿಲಿನ ಬಳಿಗೆ ಹೋದನು.

೭–೮. ಪುಷ್ಪನೂ ಮಾಹಿಕೆಯೆಂಬ ಮಣಿಭದ್ರನ ಭಾರ್ಯೆಯನ್ನು ಕುರಿತು ಹೀಗೆಂದನು. "ಮಾಹಿಕೆಯೆ! ಈ ದಿನ ನಾನು ದುಃಖಗೊಂಡವನೂ, ಕೊಳೆ ಬಟ್ಟೆಯನ್ನುಟ್ಟವನೂ ಆದ ವೀರಭದ್ರನೆಂಬ ನಿನ್ನ ತಂದೆಯನ್ನು ಕಂಡೆನು. ಅವನು ಕೋಪದಿಂದ ನನ್ನನ್ನು ಕುರಿತು ಕಠಿನವಾಗಿ ಇಂತೆಂದನು.

೯. ಪಾಪಿಯೆ! ನಿನಗೆ ಧಿಕ್ಕಾರವಿರಲಿ. ನೀನು ತಂದೆಯನ್ನು ವಂಚಿಸಿ ಸುಂದರಿಯಾದ ಕನ್ಯೆಯನ್ನು ಮದುವೆ ಮಾಡಿಕೊಂಡಿರುವೆ.

೧೦–೧೧. ನೀನು ಅವಳ ತಂದೆಗೂ, ಅವಳಿಗೂ ಏನನ್ನೂ ಕೊಡಲಿಲ್ಲ. ವಿಧವೆಯಂತೆ ಅವಳಿಗೆ ಬಿಳಿಯ ಬಟ್ಟೆಯನ್ನುಡಿಸಿರುವೆ. ಇಷ್ಟವಾದ ಆಹಾರವನ್ನು ಕೊಡಲಿಲ್ಲ. ಆದುದರಿಂದ ಅವಳ ತಂದೆಗೆ ಹತ್ತುಸಾವಿರ ನಾಣ್ಯಗಳನ್ನು ಕೊಡು.

೧೨. ಆ ನಿನ್ನ ಪತ್ನಿಗೆ ಇಷ್ಟವಾದ ಒಡವೆಯನ್ನು ಪ್ರೀತಿಯಿಂದ ಕೊಡು. ಅವಳು ಆನಂದದಿಂದ ಅದನ್ನು ತೊಡಲಿ.

ನಿರಾನಂದಾ ಯತೋ ನಾರೀ ನ ಗರ್ಭಂ ಧಾರಯೇತ್ಸ್ಫುಟಂ ।
ನಿಃಸಂತಾನೋ ಯತೋ ವಂಶಃ ಸ್ವರ್ಗಾದಪಿ ಕ್ಷಿತಿಂ ವ್ರಜೇತ್ ॥ ೧೩ ॥
ಸ ಪತಿಷ್ಯತ್ಯಸಂದಿಗ್ಧಂ ಕುಲಾಂಗಾರೇಣ ಚ ತ್ವಯಾ ।
ಸಾ ತ್ವಮಾನಯ ವಸ್ತ್ರಾಣಿ ಗೃಹಮಧ್ಯಾಚ್ಛುಭಾನಿ ಚ ॥ ೧೪ ॥
ಯಾನಿ ದತ್ತಾನಿ ಭೂಪೇನ ವ್ಯವಹಾರೈಸ್ತದಾ ಮಮ ।
ಪಂಚಾಂಗಶ್ಚ ಪ್ರಸಾದೋ ಯೋ ಮಯಾ ಪ್ರಾಪ್ತಶ್ಚ ತೈಃ ಸಹ ॥ ೧೫ ॥
ತ್ವಂ ಸಂಧಾರಯ ಗಾತ್ರೈಃ ಸ್ವೈಃ ಶೀಘ್ರಂ ರಸವತೀಂ ಕುರು ।
ಭೋಜನಾಯೈವ ಶೀಘ್ರಂತು ತ್ವಯಾ ಸಾರ್ಧಂ ಕರೋಮ್ಯಹಂ ॥ ೧೬ ॥
ಏಕಸ್ಮಿನ್ನಪಿ ಪಾತ್ರೇ ಚ ತದಾದೇಶಾದಸಂಶಯಂ ।
ಸಾಽಪಿ ಸರ್ವಂ ತಥಾ ಚಕ್ರೇ ಯದುಕ್ತಂ ತೇನ ಹರ್ಷಿತಾ ॥ ೧೭ ॥
ಭೋಜನಾಚ್ಛಾದನಂ ಚೈವ ನಿರ್ವಿಕಲ್ಪೇನ ಚೇತಸಾ ।
ತತಃ ಕಾಮಾತುರಃ ಪುಷ್ಪೋ ಮೈಥುನಾಯೋಪಚಕ್ರಮೇ ॥ ೧೮ ॥
ಏತಸ್ಮಿನ್ನಂತರೇ ಪ್ರಾಪ್ತೋ ಮಣಿಭದ್ರಃ ಸಮುತ್ಸುಕಃ ।
ಕ್ಷುತ್ಕ್ಷಾಮಃ ಸ ಪಿಪಾಸಾರ್ತೋ ವ್ಯವಹಾರೋತ್ಥ ಲಿಪ್ಸಯಾ ॥ ೧೯ ॥

---

೧೩. ನಾರಿಯು ಸಂತೋಷವಿಲ್ಲದವಳಾಗಿದ್ದರೆ ಗರ್ಭವನ್ನು ಧರಿಸುವುದಿಲ್ಲ. ಸಂತತಿಯಿಲ್ಲದ ವಂಶವು ಸ್ವರ್ಗದಿಂದ ಭೂಮಿಯನ್ನೈದುವುವು.

೧೪–೧೫. ನಿಶ್ಚಯವಾಗಿಯೂ ವಂಶಕ್ಕೆ ಕೆಂಡದಂತಿರುವ ನಿನ್ನಿಂದ ನಿನ್ನ ವಂಶವು ಪತಿತವಾಗುವುದು" ಎಂದನು. ಆದುದರಿಂದ ನೀನು ದೊರೆಯು ವ್ಯವಹಾರಗಳಿಂದ ನನಗೆ ಕೊಟ್ಟಿರುವ ಮನೆಯೊಳಗಿರುವ ವಸ್ತ್ರಗಳನ್ನು ತೆಗೆದುಕೊಂಡು ಬಾ. ನಾನು ಅವುಗಳೊಡನೆ ರಾಜನಿಂದ ಪಂಚಾಂಗವನ್ನೂ ಅನುಗ್ರಹರೂಪವಾಗಿ ಪಡೆದಿರುವೆನು.

೧೬. ನೀನು ಶೀಘ್ರವಾಗಿ ಅವುಗಳನ್ನು ತೊಟ್ಟು ಊಟಕ್ಕೆ ಅಡುಗೆಯನ್ನು ಮಾಡು. ನಿನ್ನೊಡನೆ ನಾನೂ ಭೋಜನ ಮಾಡುವೆನು.

೧೭–೧೮. ಅವಳು ಹರ್ಷದಿಂದ ಪುಷ್ಪನು ಹೇಳಿದಂತೆ ಎಲ್ಲವನ್ನೂ ಪಾತ್ರೆಯಲ್ಲಿ ಸಿದ್ಧಗೊಳಿಸಿ ಸಂದೇಹಗೊಳ್ಳದೆ ಅವನೊಡನೆ ಊಟಮಾಡಿ ಉಡಿಗೆಯನ್ನುಟ್ಟಳು. ಅನಂತರ ಪುಷ್ಪನು ಕಾಮಾತುರನಾಗಿ ಅವಳೊಡನೆ ಮೈಥುನವನ್ನಾರಂಭಿಸಿದನು.

೧೯. ಇಷ್ಟರಲ್ಲಿ ವ್ಯವಹಾರದ ಲಾಭೇಚ್ಛೆಯಿಂದ ಹಸಿವಿನಿಂದ ಆಯಾಸಗೊಂಡವನೂ, ಬಾಯಾರಿಕೆಯಿಂದ ಪೀಡಿತನೂ ಆದ ಮಣಿಭದ್ರನು ಅಲ್ಲಿಗೆ ಬಂದನು.

**ಪ್ರವೇಶಂ ಕುರುತೇ ಯಾವದ್ಗೃಹಮಧ್ಯೇ ಸಮುತ್ಸುಕಃ ।**
**ನಿಷಿದ್ಧಸ್ತೇನ ಷಂಢೇನ ಭರ್ತ್ಸಯಿತ್ವಾ ಮುಹುರ್ಮುಹುಃ ॥ ೨೦ ॥**
**ಹಠಾದ್ಯಾವತ್ಪ್ರವೇಶಂ ಸ ಚಕಾರ ನಿಜಮಂದಿರೇ ।**
**ತಾವಚ್ಚ ದಂಡಕಾಷ್ಠೇನ ಮಸ್ತಕೇ ತೇನ ತಾಡಿತಃ ॥ ೨೧ ॥**
**ಅಥ ಸಂಪತಿತೋ ಭೂಮೌ ಮೂರ್ಛಯಾ ಸಂಪರಿಪ್ಲುತಃ ।**
**ಕರ್ತವ್ಯಂ ನೈವ ಜಾನಾತಿ ತತ್ಪ್ರಹಾರಪ್ರಪೀಡಿತಃ ॥ ೨೨ ॥**
**ತತಃ ಕೋಲಾಹಲೋ ಜಾತಸ್ತಸ್ಯ ದ್ವಾರೇ ಗೃಹಸ್ಯ ಚ ।**
**ಜನಸ್ಯ ಸಂಪ್ರಯಾತಸ್ಯ ಹಾಹಾಕಾರಪರಸ್ಯ ಚ ॥ ೨೩ ॥**
**ಪಪ್ರಚ್ಛುಸ್ತಂ ಜನಾಃ ಕೇಚಿದ್ಧಿಕ್ಪಾಪ ಕಿಮಿದಂ ಕೃತಂ ।**
**ವೃತ್ತಿಭಂಗಃ ಕೃತೋಽನೇನ ಅಥ ತ್ವಂ ವ್ಯಂತರಾರ್ದಿತಃ ॥ ೨೪ ॥**
**ಇಮಾಮವಸ್ಥಾಂ ಯನ್ನೀತಃ ಸಂಪ್ರಾಪ್ತೋಽಸಿ ನೃಪಾದ್ವಧಂ ॥ ೨೫ ॥**

**ಷಂಢ ಉವಾಚ :—**

**ನ ವೃತ್ತಿರ್ಗರ್ಹಿತಾ ತೇನ ನಾಽಹಂ ವ್ಯಂತರಪೀಡಿತಃ ।**
**ಮಣಿಭದ್ರೋ ನ ಚೈಷ ಸ್ಯಾದೇಷ ವೇಷಕರಃ ಪುಮಾನ್ ॥ ೨೬ ॥**

---

೨೦ ಅವನು ಉತ್ಸುಕತೆಯಿಂದ ಮನೆಯೊಳಗೆ ಪ್ರವೇಶಿಸುವಷ್ಟರಲ್ಲಿ ಬಾಗಿಲಿನಲ್ಲಿರುವ ನಪುಂಸಕನು ಅವನನ್ನು ಬಹುವಾಗಿ ಗದರಿಸಿ ತಡೆದನು.

೨೧. ಅವನು ಬಲಾತ್ಕಾರದಿಂದ ತನ್ನ ಮನೆಯನ್ನು ಪ್ರವೇಶಮಾಡುವಷ್ಟರಲ್ಲಿ ನಪುಂಸಕನು ದೊಣ್ಣೆಯಿಂದ ತಲೆಯಮೇಲೆ ಬಡಿದನು.

೨೨. ಅನಂತರ ನೆಲದಮೇಲೆ ಮೂರ್ಛೆಯಿಂದ ಬಿದ್ದಿರುವ ಮಣಿಭದ್ರನು ಆ ಏಟಿನ ಬಾಧೆಯಿಂದ ಏನನ್ನು ಮಾಡಬೇಕೆಂಬುದನ್ನರಿಯಲಿಲ್ಲ.

೨೩. ತರುವಾಯ ಜನರು ಆ ಮನೆಯ ಬಾಗಿಲಿನಲ್ಲಿ ನೆರೆದು ಹಾಹಾಕಾರದಿಂದ ಗದ್ದಲವನ್ನುಂಟುಮಾಡಿದರು.

೨೪. ಆ ಜನರು ಆ ನಪುಂಸಕನನ್ನು ಕುರಿತು, "ನೀನು ಏಕೆ ಹೀಗೆ ಮಾಡಿದೆ? ಈ ಮಣಿಭದ್ರನು ನಿನ್ನ ಜೀವನವನ್ನು ಹಾಳುಮಾಡಿದನೆ? ಅಥವಾ ನೀನು ಪಿಶಾಚದಿಂದ ಪೀಡಿತನಾಗಿರುವೆಯಾ?

೨೫. ಇವನನ್ನು ಹೀಗೆ ಹೊಡೆದ ನಿನ್ನನ್ನು ರಾಜನು ವಧಿಸುವನು" ಎಂದರು.

೨೬. ನಪುಂಸಕನು ಹೇಳುತ್ತಾನೆ:—"ಮಣಿಭದ್ರನು ನನ್ನ ಜೀವನವನ್ನು ಕೆಡಿಸಲಿಲ್ಲ. ನಾನು ಪಿಶಾಚ ಪೀಡಿತನೂ ಆಗಲಿಲ್ಲ. ಇವನು ಮಣಿಭದ್ರನ ವೇಷವನ್ನು ಧರಿಸಿದ ಮತ್ತೊಬ್ಬ ಪುರುಷನು. ಮಣಿಭದ್ರನಲ್ಲ.

ಮಾಣಿಭದ್ರಂ ವಪುಃ ಕೃತ್ವಾ ಸಂಪ್ರಾಪ್ತೋ ಯಾಚಿತುಂ ಧನಂ ।
ಹಠಾತ್ಪ್ರವಿಶ್ಯಮಾನಸ್ತು ಸ ಮಯಾ ಮೂರ್ಧ್ನಿ ತಾಡಿತಃ ॥ ೨೭ ॥
ಮಣಿಭದ್ರೋ ಗೃಹಸ್ಯಾಂತರ್ಭುಕ್ತ್ವಾ ಶಯನಮಾಶ್ರಿತಃ ।
ಸಂತಿಷ್ಠತೇ ನ ಜಾನಾತಿ ವೃತ್ತಾಂತಮಿದಮಾಸ್ಥಿತಂ ॥ ೨೮ ॥
ತತಃ ಪುಷ್ಪೋಽಪಿ ತಚ್ಛ್ರುತ್ವಾ ತಂ ಚ ಕೋಲಾಹಲಂ ಬಹಿಃ ।
ಮಣಿಭದ್ರಸ್ಯ ರೂಪೇಣ ದ್ವಾರದೇಶಂ ಸಮಾಗತಃ ॥ ೨೯ ॥
ಅಬ್ರವೀನ್ನಿತ್ಯಮಭ್ಯೇತಿ ಮಮ ರೂಪೇಣ ಚಾಽಧಮಃ ।
ಏಷ ವೇಷಧರಃ ಕಶ್ಚಿದ್ಯಾಚಿತುಂ ಧನಮೇವ ಹಿ ॥ ೩೦ ॥
ಏತೇನಾಽಪಿ ಚ ಷಂಢೇನ ನ ಚ ಭದ್ರಮನುಷ್ಠಿತಂ ।
ಯತ್ಕುಬ್ಜೋಽಯಂ ಹತೋ ಮೂರ್ಧ್ನಿ ಯಾಚಿತುಂ ಸಮುಪಸ್ಥಿತಃ॥ ೩೧॥
ಏತಸ್ಮಿನ್ನಂತರೇ ಸೋಽಪಿ ಚೇತನಾಂ ಪ್ರಾಪ್ಯ ಕೃತ್ಸ್ನಶಃ ।
ವೀಕ್ಷತೇ ಪುರತೋ ಯಾವತ್ತಾವದಾತ್ಮಸಮಃ ಪುಮಾನ್ ॥ ೩೨ ॥
ಸರ್ವತಃ ಸ ತಮಾಲೋಕ್ಯ ತತೋ ವಚನಮಬ್ರವೀತ್ ॥ ೩೩ ॥
ಕ್ವ ಚೋರಃ ಸಂಪ್ರವಿಷ್ಟೋ ಮೇ ಮಮ ರೂಪೇಣ ಮಂದಿರೇ ।
ಭೇದಯಿತ್ವಾ ತು ಷಂಢಾಖ್ಯಮೇವಂ ದತ್ವಾ ಚ ವಾಸಸೀ ॥ ೩೪ ॥

---

೨೭. ಮಣಿಭದ್ರನಂತೆ ಶರೀರವನ್ನು ಮಾಡಿಕೊಂಡು ಹಣವನ್ನು ಯಾಚಿಸಲು ಬಂದಿರುವನು. ಬಲಾತ್ಕಾರದಿಂದ ಒಳಗೆ ನುಗ್ಗುತ್ತಿರುವ ಇವನ ತಲೆಯ ಮೇಲೆ ನಾನು ಹೊಡೆದಿರುವೆನು.

೨೮. ಮಣಿಭದ್ರನು ಭೋಜನ ಮಾಡಿ ಮನೆಯೊಳಗೆ ಮಲಗಿರುವನು. ಅವನು ಈ ಸಮಾಚಾರವನ್ನು ಅರಿಯಲಿಲ್ಲ.''

೨೯. ಅನಂತರ ಪುಷ್ಪನು ಆ ಗದ್ದಲವನ್ನು ಕೇಳಿ ಮಣಿಭದ್ರನ ರೂಪದಿಂದ ಬಾಗಿಲಿನ ಬಳಿಗೆ ಬಂದನು.

೩೦. ಅವನು ಹೀಗೆಂದನು. ನಿತ್ಯವೂ ಈ ನೀಚನೊಬ್ಬನು ನನ್ನ ವೇಷವನ್ನು ತಾಳಿ ಹಣವನ್ನು ಬೇಡಲು ಬರುತ್ತಾನೆ.

೩೧. ಈ ನಪುಂಸಕನೂ ಬೇಡಲು ಬಂದ ಈ ಕುಬ್ಜನ ತಲೆಯ ಮೇಲೆ ಹೊಡೆದು ದುಷ್ಕಾರ್ಯವನ್ನೆಸಗಿರುವನು.

೩೨. ಇಷ್ಟರಲ್ಲಿ ಮಣಿಭದ್ರನು ಸಂಪೂರ್ಣವಾಗಿ ಪ್ರಜ್ಞೆಯನ್ನು ಹೊಂದಿ ಮುಂದೆ ತನ್ನಂತಿರುವ ಪುರುಷನನ್ನು ಕಂಡನು.

೩೩–೩೪. ಅನಂತರ ಆ ಮಣಿಭದ್ರನು ಪುಷ್ಪನ ಶರೀರವನ್ನೆಲ್ಲ ನೋಡಿ ಈ ಷಂಢನಿಗೆ ವಸ್ತ್ರಗಳನ್ನು ಕೊಟ್ಟು ಭೇದೋಪಾಯದಿಂದ, " ಕಳ್ಳನಾದ ನೀನು ನನ್ನ ರೂಪದಿಂದ ಮನೆಯನ್ನು ಹೊಕ್ಕಿರುವೆ.

ಯಾವದ್ಭೂಪಗೃಹಂ ಗತ್ವಾ ತ್ವಾಂ ಷಂಢೇನ ಸಮನ್ವಿತಂ ।
ವಧಾಯ ಯೋಜಯಾಮ್ಯೇವ ತಾವದ್ದೂರತರಂ ವ್ರಜ ॥ ೩೫ ॥

ಪುಷ್ಪ ಉವಾಚ :—

ಮಮ ರೂಪಂ ಸಮಾಧಾಯ ತ್ವಮಾಯಾತೋ ಗೃಹೇ ಮಮ ।
ಶೂನ್ಯಂ ಮತ್ವಾ ತತೋ ಜ್ಞಾತಸ್ತ್ವಯಾಽಹಂ ಗೃಹಸಂಸ್ಥಿತಃ ॥ ೩೬ ॥
ತತೋ ನೃಪಾಯ ದಾಸ್ಯಾಮಿ ವಧಾರ್ಥಂ ಚ ನ ಸಂಶಯಃ ।
ನೋಚೇದ್ಗಚ್ಛ ದ್ರುತಂ ಪಾಪ ಯದಿ ಜೀವಿತುಮಿಚ್ಛಸಿ ॥ ೩೭ ॥

ಸೂತ ಉವಾಚ :—

ಏವಮುಕ್ತ್ವಾ ತತಸ್ತೌ ಚ ಬಾಹುಯುದ್ಧೇನ ವೈ ಮಿಥಃ ।
ಯುಧ್ಯಮಾನೌ ನರೈರನ್ಯೈಃ ಕೃಚ್ಛ್ರೇಣ ತು ನಿವಾರಿತೌ ॥ ೩೮ ॥
ತತಸ್ತೇ ಸ್ವಜನಾ ಯೇ ತು ಮಣಿಭದ್ರಸ್ಯ ಚಾಗತಾಃ ।
ಪರಿಜಾನಂತಿ ನೋ ದ್ವಾಭ್ಯಾಂ ವಿಶೇಷಂ ಮಾಣಿಭದ್ರಕಂ ॥ ೩೯ ॥
ವಾಲಿಸುಗ್ರೀವಯೋರ್ಯುದ್ಧಂ ತಾರಾರ್ಥೇ ಯುಧ್ಯಮಾನಯೋಃ ।
ಏವಂ ವಿವದಮಾನೌ ತು ಕ್ರೋಧತಾಮ್ರಾಯತೇಕ್ಷಣೌ ॥ ೪೦ ॥
ರಾಜದ್ವಾರಂ ಸಮಾಸಾದ್ಯ ಸ್ಥಿತೌ ಸ್ವಜನ ಸಂವೃತೌ ।
ದ್ವಾಃಸ್ಥೇನ ಸೂಚಿತೌ ರಾಜ್ಞೇ ಸಭಾತಲಮುಪಸ್ಥಿತೌ ॥ ೪೧ ॥

---

೩೫. ನಾನು ರಾಜನ ಮನೆಗೆ ಹೋಗಿ ಈ ನಪುಂಸಕನೊಡನೆ ನಿನಗೆ ವಧೆಯನ್ನು ವಿಧಿಸುವುದರೊಳಗೆ ನೀನು ಇಲ್ಲಿಂದ ಹೊರಡು" ಎಂದನು.

೩೬. ಪುಷ್ಪನು ಹೇಳುತ್ತಾನೆ:—ನಾನು ಮನೆಯಲ್ಲಿಲ್ಲವೆಂದರಿತು ನೀನು ನನ್ನ ರೂಪವನ್ನು ಧರಿಸಿ ಇಲ್ಲಿಗೆ ಬಂದೆ. ಅನಂತರ ನಾನು ಮನೆಯಲ್ಲಿರುವೆನೆಂದು ತಿಳಿದೆ.

೩೭. ಆದುದರಿಂದ ನಿನ್ನನ್ನು ಕೊಲ್ಲುವುದಕ್ಕಾಗಿ ನಿಶ್ಚಯವಾಗಿಯೂ ದೊರೆಗೆ ಒಪ್ಪಿಸುವೆನು. ಬದುಕಬೇಕೆಂದು ಬಯಸುವುದಾದರೆ ಇಲ್ಲಿಂದ ಶೀಘ್ರವಾಗಿ ಹೊರಡು.

೩೮. ಸೂತನು ಹೇಳುತ್ತಾನೆ:—ಹೀಗೆ ಮಾತಾಡುತ್ತ ಅವರೀರ್ವರು ಮಲ್ಲಯುದ್ಧವನ್ನಾರಂಭಿಸಲು ಅಲ್ಲಿ ನೆರೆದ ಜನರು ಕಷ್ಟದಿಂದ ಅವರನ್ನು ತಡೆದರು.

೩೯—೪೨. ಅನಂತರ ಅಲ್ಲಿಗೆ ಬಂದ ಮಣಿಭದ್ರನ ಬಂಧುಗಳೂ ತಾರೆಗಾಗಿ ಯುದ್ಧಮಾಡುತ್ತಿದ್ದ ವಾಲಿಸುಗ್ರೀವರಂತೆ ಅವರಿಬ್ಬರಲ್ಲಿ ಯಾರು ಮಣಿಭದ್ರನೆಂಬುದನ್ನು ಗುರುತಿಸಲಿಲ್ಲ. ಹೀಗೆ ಜಗಳವಾಡುತ್ತ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡಿರುವವರೂ, ರಾಜದ್ವಾರದಲ್ಲಿ ಬಂಧುಗಳೊಡನೆ ನಿಂತಿರು

**ಚೌರಚೌರೇತಿ ಜಲ್ಪಂತೌ ಪರಸ್ಪರವಧೈಷಿಣೌ ।**
**ಭೂಭುಜಾ ವಿಕ್ಷಿತೌ ತೌ ಚ ದ್ವಿಜೌ ತು ದ್ವಿಜಸತ್ತಮಾಃ ॥ ೪೨ ॥**
**ನ ವಿಶೇಷೋಽಸ್ತಿ ವಿಶ್ಲೇಷಸ್ತಯೋರೇಕೋಽಪಿ ಕಾಯತಃ ।**
**ತತಶ್ಚ ವ್ಯವಹಾರೇಷು ಸಮತೀತೇಷು ವೈ ತದಾ ॥ ೪೩ ॥**
**ಪೃಷ್ಟೌ ಗುಹ್ಯೇಷು ಸರ್ವೇಷು ಪ್ರತ್ಯಕ್ಷೇಷು ವಿಶೇಷತಃ ।**
**ವದತಸ್ತೌ ಯಥಾವೃತ್ತಂ ಪೃಥಕ್ಪೃಥಗ್ವ್ಯವಸ್ಥಿತಂ ॥ ೪೪ ॥**
**ತತಸ್ತು ಸ್ವಜನೈಃ ಸರ್ವೈರೇಕೋ ನೀತ್ವಾಽಥ ಚಾಽನ್ಯತಃ ।**
**ಪೃಷ್ಟೋ ಗೋತ್ರಾನ್ವಯಂ ಸರ್ವಂ ದ್ವಿತೀಯಸ್ತು ತತಃ ಪರಂ ॥ ೪೫ ॥**
**ತೇಷಾಮಪಿ ತಥಾ ಸರ್ವಂ ಯಥಾ ಸಮ್ಯಙ್ನಿವೇದಿತಂ ।**
**ಅಥ ರಾಜಾ ಬೃಹತ್ಸೇನಃ ಸರ್ವಾಂಸ್ತಾನಿದಮಬ್ರವೀತ್ ॥ ೪೬ ॥**
**ಪತ್ನೀ ಚಾಽಽನೀಯತಾಂ ತಸ್ಯ ಮಣಿಭದ್ರಸ್ಯ ವೈ ಗೃಹಾತ್ ।**
**ನಿಜಕಾಂತಸ್ಯ ವಿಜ್ಞಾನೇ ಸಾ ಪ್ರಮಾಣಂ ಭವಿಷ್ಯತಿ ॥ ೪೭ ॥**
**ತತೋ ಗತ್ವಾ ಚ ಸಾ ಪ್ರೋಕ್ತಾ ಪುರುಷೈರ್ನೃಪಸಂಭವೈಃ ।**
**ಆಗಚ್ಛ ಕಾಂತಂ ಜಾನೀಹಿ ತ್ವಂ ಪ್ರಮಾಣಂ ಭವಿಷ್ಯಸಿ ॥ ೪೮ ॥**

---

ಪವರೂ, ಅನಂತರ ದ್ವಾರಪಾಲಕನ ಸೂಚನೆಯಂತೆ ಸಭಾಂಗಣವನ್ನು ಪ್ರವೇಶ ಮಾಡಿದವರೂ, ಕಳ್ಳ ಕಳ್ಳ ಎಂದು ಕೂಗುತ್ತ ಪರಸ್ಪರ ಕೊಲ್ಲಲಿಚ್ಛಿಸುವವರೂ ಆದ ಆ ಇಬ್ಬರನ್ನು ರಾಜನು ಕಂಡನು.

೪೩–೪೪. ಆದರೆ ಅವರಿಬ್ಬರ ಶರೀರದಲ್ಲಿ ಸ್ವಲ್ಪ ಭೇದವೂ ಇರಲಿಲ್ಲ. ವ್ಯವಹಾರವು ಮುಗಿದಕೂಡಲೆ ದೊರೆಯು ಗುಟ್ಟಾಗಿಯೂ, ಪ್ರತ್ಯಕ್ಷವಾಗಿಯೂ ಅವರಿಬ್ಬರನ್ನು ವಿಚಾರಿಸಿದನು. ಇಬ್ಬರೂ ಒಂದೇ ರೀತಿಯಲ್ಲಿ ಪ್ರತ್ಯೇಕವಾಗಿ ಹೇಳಿದರು.

೪೫. ಅನಂತರ ಸಕಲ ಬಾಂಧವರು ಅವರಲ್ಲಿ ಒಬ್ಬನನ್ನು ಇನ್ನೊಂದೆಡೆಗೆ ಕರೆದುಕೊಂಡು ಹೋಗಿ ಗೋತ್ರ ವಂಶಗಳನ್ನು ಕೇಳಿದರು. ಎರಡನೆಯವನನ್ನು ಅನಂತರ ಕೇಳಿದರು.

೪೬. ಅವರಿಬ್ಬರೂ ಆ ಬಂಧುಗಳಿಗೆ ಸರಿಯಾಗಿಯೇ ಹೇಳಿದರು. ತರುವಾಯ ಬೃಹತ್ಸೇನ ರಾಜನು ಅವರೆಲ್ಲರನ್ನು ಕುರಿತು ಇಂತೆಂದನು.

೪೭. "ಮಣಿಭದ್ರನ ಪತ್ನಿಯನ್ನು ಕರೆಯಿಸಿರಿ. ತನ್ನ ಪ್ರಿಯನನ್ನು ಗುರುತಿಸುವುದರಲ್ಲಿ ಅವಳೇ ಸರಿಯಾದವಳು."

೪೮. ಅನಂತರ ರಾಜಭೃತ್ಯರು ಅವಳೆಡೆಗೆ ಹೋಗಿ ನೀನು ಬಾ. "ನಿನ್ನ ಪತಿಯನ್ನು ಗುರುತಿಸು. ನೀನೇ ಈ ವಿಷಯದಲ್ಲಿ ನಿರ್ಣಾಯಕಳು" ಎಂದರು.

ತತಃ ಸಾ ವ್ರೀಡಯಾ ಯುಕ್ತಾ ಪ್ರಚ್ಛಾದಿತ ಶಿರಾಸ್ತತಃ ।
ನೃಪಾಗ್ರೇ ಸಂಸ್ಥಿತಾ ಪ್ರೋಚೇ ವಿದ್ಧಿ ಸಮ್ಯಙ್ನಿಜಂ ಪ್ರಿಯಂ ॥ ೪೯ ॥
ನ ವಯಂ ನಿಶ್ಚಯಂ ವಿದ್ಮೋ ನ ಚೈತೇ ಸ್ವಜನಾಸ್ತವ ॥ ೫೦ ॥
ತತಃ ಸಾ ಚಿಂತಯಾಮಾಸ ನಿಜಚಿತ್ತೇ ವರಾಂಗನಾ ।
ಮಣಿಭದ್ರೇಣ ದಗ್ಧಾಽಹಮಿರ್ಷ್ಯಾರ್ವಹ್ನಿ ಗತಾಽನಿಶಂ ॥ ೫೧ ॥
ವಂಚಯಿತ್ವಾ ತು ಪಿತರಂ ಗೃಹೀತಾಽಸ್ಮಿ ತತಃ ಪರಂ ।
ನ ಕಿಂಚಿತ್ಪಾಪ್ಮನಾ ದತ್ತಂ ಜಲ್ಪಯಿತ್ವಾ ಧನಂ ಬಹು ॥ ೫೨ ॥
ದ್ವಿತೀಯೇನ ತು ಮೇ ಪುಂಸಾ ಮರ್ತ್ಯಲೋಕೇ ಸುಖಂ ಕೃತಂ ।
ದತ್ವಾ ವಸ್ತ್ರಾಣಿ ಚಿತ್ರಾಣಿ ತಥೈವಾಽಽಭರಣಾನಿ ಚ ॥ ೫೩ ॥
ಪ್ರದಾಸ್ಯತಿ ಚ ತಾತಸ್ಯ ಸುವರ್ಣಂ ಕಥಿತಂ ಚ ಯತ್ ।
ಯದ್ಗೃಹ್ಣಾಮಿ ಸ್ವಹಸ್ತೇನ ಮಣಿಭದ್ರಂ ದ್ವಿತೀಯಕಂ ॥ ೫೪ ॥
ಏವಂ ನಿಶ್ಚಿತ್ಯ ಮನಸಾ ದೃಷ್ಟ್ವಾ ರಕ್ತಪರಿಪ್ಲುತಂ ।
ಪ್ರಥಮಂ ಮಣಿಭದ್ರಂ ಸಾ ಜಗೃಹೇಽಥ ದ್ವಿತೀಯಕಂ ॥ ೫೫ ॥
ಅಬ್ರವೀಚ್ಚ ತತೋ ವಾಕ್ಯಂ ಸರ್ವಲೋಕಸ್ಯ ಶೃಣ್ವತಃ ।
ಅಹಂ ತಾತೇನ ದತ್ತಾಽಸ್ಯ ವಿವಾಹೇ ಅಗ್ನಿಸನ್ನಿಧೌ ॥ ೫೬ ॥

---

೪೯–೫೦. ಅವಳು ನಾಚಿಕೆಯಿಂದ ತಲೆಯನ್ನು ಸೆರಗಿನಿಂದ ಮುಚ್ಚಿಕೊಂಡು ರಾಜನ ಮುಂದೆ ಬಂದು ನಿಲ್ಲಲು ಅರಸನು, "ನಿನ್ನ ಪತಿಯನ್ನು ಸರಿಯಾಗಿ ಗುರುತಿಸು. ನಮಗೂ ಈ ನಿನ್ನ ಬಂಧುಗಳಿಗೂ ಈ ವಿಷಯದಲ್ಲಿ ನಿರ್ಣಯವಾಗಲಿಲ್ಲ" ಎಂದನು.

೫೧. ಅನಂತರ ಆ ಸ್ತ್ರೀಯು ತನ್ನ ಮನಸ್ಸಿನಲ್ಲಿಯೇ ಹೀಗೆ ಚಿಂತಿಸಿದಳು. "ಮಣಿಭದ್ರನು ಅಸೂಯೆಯೆಂಬ ಅಗ್ನಿಯಲ್ಲಿ ನನ್ನನ್ನು ಸುಟ್ಟಿರುವನು.

೫೨. ನನ್ನ ತಂದೆಯನ್ನು ಹಣದಿಂದ ಮೋಸಗೊಳಿಸಿ ನನ್ನನ್ನು ವಿವಾಹ ಮಾಡಿಕೊಂಡನು. ಹೇಳಿದಂತೆ ಸ್ವಲ್ಪವೂ ಹಣವನ್ನು ಕೊಡಲಿಲ್ಲ.

೫೩. ಎರಡನೆಯ ಈ ಮಣಿಭದ್ರನು ವಸ್ತ್ರಗಳನ್ನೂ, ಬಗೆ ಬಗೆಯ ಒಡವೆಗಳನ್ನೂ ಕೊಟ್ಟು ನನಗೆ ಮನುಷ್ಯಲೋಕದಲ್ಲಿ ಸುಖವನ್ನುಂಟುಮಾಡಿರುವನು.

೫೪. ನನ್ನ ತಂದೆಗೆ ಹೇಳಿದಂತೆ ಸುವರ್ಣವನ್ನು ಕೊಡುವನು. ಆದುದರಿಂದ ನಾನು ನನ್ನ ಕೈಯಿಂದ ಈ ಎರಡನೆಯ ಮಣಿಭದ್ರನನ್ನು ಕೈ ಹಿಡಿಯುವೆನು."

೫೫. ಹೀಗೆ ಅವಳು ಮನಸ್ಸಿನಲ್ಲಿ ನಿಶ್ಚಯಿಸಿ ರಕ್ತದಿಂದ ಒದ್ದೆಯಾದ ಮೊದಲನೆಯ ಮಣಿಭದ್ರನನ್ನು ನೋಡಿ ಎರಡನೆಯವನನ್ನು ಕೈ ಹಿಡಿದಳು.

೫೬. ಅನಂತರ ಅವಳು ಸಮಸ್ತ ಜನರು ಕೇಳುತ್ತಿರುವಾಗ ಇಂತೆಂದಳು. "ನನ್ನ ತಂದೆಯು ಇವನಿಗೆ ಅಗ್ನಿಸಾಕ್ಷಿಯಾಗಿ ವಿವಾಹ ಮಾಡಿಕೊಟ್ಟಿರುವನು.

ದ್ವಿತೀಯೋಽಯಂ ದುರಾಚಾರೋ ವೇಷಕರ್ತಾ ಸಮಾಗತಃ ।
ಮಾಂ ಚ ಪ್ರಾರ್ಥಯತೇ ಗುಪ್ತಾಂ ನಾನಾಚಾರೈಃ ಪೃಥಗ್ವಿಧೈಃ ॥ ೫೭ ॥
ತತಸ್ತು ಪಾರ್ಥಿವಃ ಕ್ರುದ್ಧಸ್ತಸ್ಯ ಶಾಖಾವಲಂಬನಂ ।
ಆದಿದೇಶ ದ್ವಿಜಶ್ರೇಷ್ಠೋ ಮಣಿಭದ್ರಸ್ಯ ದುರ್ಮತೇಃ ॥ ೫೮ ॥
ಏತಸ್ಮಿನ್ನಂತರೇ ಸೋಽಥ ವಧಕಾನಾಂ ಸಮರ್ಪಿತಃ ।
ತಂ ವೃಕ್ಷಂ ನೀಯಮಾನಸ್ತು ಶ್ಲೋಕಾನೇತಾಂಸ್ತದಾಽಪಠತ್ ॥ ೫೯ ॥
ನಿರ್ದಯತ್ವಂ ತಥಾ ದ್ರೋಹಂ ಕುಟಿಲತ್ವಂ ವಿಶೇಷತಃ ।
ಅಶೌಚಂ ನಿರ್ಘೃಣತ್ವಂ ಚ ಸ್ತ್ರೀಣಾಂ ದೋಷಾಃ ಸ್ವಭಾವಜಾಃ ॥ ೬೦ ॥
ಅಂತರ್ವಿಷಮಯಾ ಹ್ಯೇತಾ ಬಹಿರ್ಭಾಗೇ ಮನೋರಮಾಃ ।
ಗುಂಜಾಫಲಸಮಾಕಾರಾ ಯೋಷಿತಃ ಸರ್ವದೈವ ಹಿ ॥ ೬೧ ॥
ಉಶನಾ ವೇದ ಯಚ್ಛಾಸ್ತ್ರಂ ಯಚ್ಚ ವೇದ ಬೃಹಸ್ಪತಿಃ ।
ಮನ್ವಾದಯಸ್ತಥಾಽನ್ಯೇಽಪಿ ಸ್ತ್ರೀಬುದ್ಧೇಸ್ತತ್ರ ಕಿಂಚನ ॥ ೬೨ ॥
ಪೀಯೂಷಮಧರೇ ವಾಸಂ ಹೃದಿ ಹಾಲಾಹಲಂ ವಿಷಂ ।
ಆಸ್ವಾದ್ಯತೇಽಧರಸ್ತೇನ ಹೃದಯಂ ಚ ಪ್ರಪೀಡ್ಯತೇ ॥ ೬೩ ॥
ಅಲಕ್ತಕೋ ಯಥಾ ರಕ್ತೋ ನರಃ ಕಾಮೀ ತಥೈವ ಚ ।
ಹೃತಸಾರಸ್ತಥಾ ಸೋಽಪಿ ಪಾದಮೂಲೇ ನಿಪಾತ್ಯತೇ ॥ ೬೪ ॥

---

೫೭. ಎರಡನೆಯ ಈ ದುಷ್ಟನು ವೇಷವನ್ನು ಧರಿಸಿ ಇಲ್ಲಿಗೆ ಬಂದು ಅನೇಕ ಪ್ರಕಾರದಿಂದ ಗುಟ್ಟಾಗಿ ನನ್ನನ್ನು ಪ್ರಾರ್ಥಿಸುತ್ತಾನೆ.''

೫೮–೫೯. ತರುವಾಯ ಕುಪಿತನಾದ ರಾಜನು ಆ ಮಣಿಭದ್ರನನ್ನು ಮರದ ಕೊಂಬೆಗೆ ತೂಗುಹಾಕುವಂತೆ ಆಜ್ಞೆ ಮಾಡಿ ಕಟುಕರಿಗೆ ಒಪ್ಪಿಸಿದನು. ಕಟುಕರು ಮರದೆಡೆಗೆ ತೆಗೆದುಕೊಂಡು ಹೋಗುತ್ತಿರುವಾಗ ಮಣಿಭದ್ರನು ಈ ಶ್ಲೋಕವನ್ನು ಹೇಳಿದನು.

೬೦–೬೧. "ನಿರ್ದಯತೆ, ದ್ರೋಹ, ವಕ್ರಸ್ವಭಾವ, ಅಶುದ್ಧಿ ಇವುಗಳು ಸ್ತ್ರೀಯರ ಸ್ವಭಾವದಿಂದುಂಟಾದ ದೋಷಗಳು. ಈ ಹೆಂಗಸರು ಗುಲಗುಂಜಿಯಂತೆ ಒಳಗೆ ವಿಷಮಯರೂ, ಹೊರಗೆ ಸುಂದರರೂ ಆಗಿರುವರು.

೬೨. ಶುಕ್ರ, ಬೃಹಸ್ಪತಿ, ಮನ್ವಾದಿಗಳೂ, ಇತರರೂ ತಿಳಿದ ಶಾಸ್ತ್ರಗಳಲ್ಲಿ ಸ್ತ್ರೀಯರ ಬುದ್ಧಿಯು ಸ್ವಲ್ಪವೂ ಪ್ರವೇಶಿಸುವುದಿಲ್ಲ.

೬೩. ಅವರ ತುಟಿಯಲ್ಲಿ ಅಮೃತವೂ, ಹೃದಯದಲ್ಲಿ ಕಾಲಕೂಟ ವಿಷವೂ ಇರುವುದು. ಆದುದರಿಂದ ತುಟಿಯನ್ನು ಮುದ್ದಿಡುವರು. ಎದೆಯನ್ನು ಪೀಡಿಸುವರು.

೬೪. ಲಾಕ್ಷಾರಸವು ಕೆಂಪಾಗಿರುವಂತೆಯೇ ಕಾಮುಕನೂ ಅನುರಕ್ತನಾಗಿರುವನು. ಆದುದರಿಂದ ಸ್ತ್ರೀಯರು ಲಾಕ್ಷಾರಸದಂತೆ ಕಾಮುಕನ ಸಾರವನ್ನು ಹೀರಿ ಕಾಲಿನ ಕೆಳಗೆ ಕೆಡವುವರು.

**ಸಂಸಾರವಿಷವೃಕ್ಷಸ್ಯ ಕುಕರ್ಮ ಕುಸುಮಸ್ಯ ಚ ।**
**ನರಕಾರ್ತಿಫಲಸ್ಯೋಕ್ತಾ ಮೂಲಮೇಷಾ ನಿತಂಬಿನೀ ॥ ೬೫ ॥**
**ಕಸ್ಯ ನೋ ಜಾಯತೇ ತ್ರಾಸೋ ದೃಷ್ಟ್ವಾ ದೂರಾದಪಿ ಸ್ತ್ರಿಯಂ ॥ ೬೬ ॥**
**ಸಂಸಾರಭ್ರಮಣಂ ನಾರೀ ಪ್ರಥಮೇಽಪಿ ಸಮಾಗಮೇ ।**
**ವಹ್ನಿಪ್ರದಕ್ಷಿಣನ್ಯಾಯವ್ಯಾಜೇನೈವ ಪ್ರದರ್ಶಯೇತ್ ॥ ೬೭ ॥**
**ಏತಾಸ್ತು ನಿರ್ಘೃಣತ್ವೇನ ನಿರ್ದಯತ್ವೇನ ನಿತ್ಯಶಃ ।**
**ವಿಶೇಷಾಜ್ಜಾಡ್ಯಕೃತ್ಯೇನ ದೂಷಯಂತಿ ಕುಲತ್ರಯಂ ॥ ೬೮ ॥**
**ಕುಲತ್ರಯಗೃಹಂ ಕೀರ್ತ್ಯಾ ನಿಜಯಾ ಧವಲೀಕೃತಂ ।**
**ಕೃಷ್ಣಂ ಕರೋತ್ಯಕೃತ್ಯೇನ ನಾರೀ ದೀಪಶಿಖೇವ ತು ॥ ೬೯ ॥**
**ಧರ್ಮವೃಕ್ಷಸ್ಯ ವಾತಾಲೀ ಚಿತ್ತಪದ್ಮಶಶಿಪ್ರಭಾ ।**
**ಸೃಷ್ಟಾ ಕಾಮಾರ್ಣಗ್ರಾಹೀ ಕೇನ ಮೋಕ್ಷದೃಢಾರ್ಗಲಾ ॥ ೭೦ ॥**
**ಕಾರಾ ಸಂತಾನಕೂಟಸ್ಯ ಸಂಸಾರವನವಾಗುರಾ ।**
**ಸ್ವರ್ಗಮಾರ್ಗಮಹಾಗರ್ತಾ ಪುಂಸಾಂ ಸ್ತ್ರೀವೇಧಸಾ ಕೃತಾ ॥ ೭೧ ॥**

---

೬೫. ದುಷ್ಕರ್ಮವು ಹೂವಾಗುಳ್ಳುದೂ, ನರಕದುಃಖವೇ ಫಲವಾಗುಳ್ಳುದೂ ಆದ ಸಂಸಾರವೆಂಬ ವಿಷದ ವೃಕ್ಷಕ್ಕೆ ಈ ಸ್ತ್ರೀಯು ಬೇರು.

೬೬. ಸ್ತ್ರೀಯನ್ನು ದೂರದಿಂದಲೇ ನೋಡುವ ಯಾವ ನರನಿಗೆ ತಾನೆ ಭಯವುಂಟಾಗುವುದಿಲ್ಲ.

೬೭. ನಾರಿಯು ಮೊದಲಿನ ಸೇರುವಿಕೆಯಲ್ಲಿಯೇ ಅಗ್ನಿಪ್ರದಕ್ಷಿಣೆಯ ನೆಪದಿಂದ ಸಂಸಾರಭ್ರಮಣವನ್ನು ತೋರಿಸುವಳು.

೬೮. ಈ ಹೆಂಗಸರು ನಿರ್ಘೃಣತೆ, ನಿರ್ದಯತೆ, ಜಡತೆ ಇವುಗಳಿಂದ ಮೂರು ಕುಲಗಳನ್ನು ದೂಷಿಸುವರು.

೬೯. ಕೀರ್ತಿಯಿಂದ ಬೆಳ್ಳಗಾದ ಮೂರು ಕುಲಗಳೆಂಬ ಮನೆಯನ್ನು ನಾರಿಯು ತನ್ನ ಅಕೃತ್ಯಗಳಿಂದ ದೀಪದ ಜ್ವಾಲೆಯಂತೆ ಕೃಷ್ಣವರ್ಣವಾದುದನ್ನಾಗಿ ಮಾಡುವಳು.

೭೦. ಧರ್ಮವೆಂಬ ವೃಕ್ಷಕ್ಕೆ ಬಿರುಗಾಳಿಯಂತಿರುವವಳೂ, ಮನಸ್ಸೆಂಬ ಕಮಲಕ್ಕೆ ಚಂದ್ರನ ಕಾಂತಿಯಂತಿರುವವಳೂ, ಕಾಮವೆಂಬ ಸಮುದ್ರಕ್ಕೆ ಮೊಸಳೆಯಂತಿರುವವಳೂ, ಮೋಕ್ಷಕ್ಕೆ ದೃಢವಾದ ಅಗಣಿಯೂ ಆದ ಹೆಂಗಸನ್ನು ಬ್ರಹ್ಮನು ಸೃಷ್ಟಿಸಿರುವನು.

೭೧. ಬ್ರಹ್ಮನು ಪುರುಷರ ಸಂತಾನವೆಂಬ ಶಿಖರಕ್ಕೆ ಸೆರೆಮನೆಯೂ, ಸಂಸಾರವೆಂಬ ಕಾಡಿಗೆ ಬಲೆಯೂ, ಸ್ವರ್ಗದ ದಾರಿಗೆ ದೊಡ್ಡ ಕುಣಿಯೂ ಆದ ಹೆಂಗಸನ್ನು ಸೃಷ್ಟಿಸಿದ್ದಾನೆ.

**ವೇಧಸಾ ಬಂಧನಂ ಕಿಂಚಿನ್ನೃಣಾಮುನ್ಯದಪಶ್ಯತಾ ।**
**ಸ್ತ್ರೀರೂಪೇಣ ತತಃ ಕೋಽಪಿ ಪಾಶೋಽಯಂ ಸುದೃಢಃ ಕೃತಃ ॥ ೨೨ ॥**
**ಇತ್ಯೇವಂ ಬಹುಧಾ ಸೋಽಪಿ ವಿಲಲಾಪ ಸುದುಃಖಿತಃ ।**
**ಸ್ತ್ರೀಚಿಂತಾಂ ಬಹುಧಾ ಕೃತ್ವಾ ಆತ್ಮಾನಂ ಚಾಽಪ್ಯಗರ್ಹಯತ್ ॥ ೨೩ ॥**
**ಅಹೋ ಕುಬುದ್ಧಿನಾ ನೈವ ಲಬ್ಧಂ ಸಂಸಾರಜಂ ಫಲಂ ।**
**ನ ಕದಾಚಿನ್ಮಯಾ ದತ್ತಂ ತೃಷ್ಣಾವ್ಯಾಕುಲಚೇತಸಾ ॥ ೨೪ ॥**
**ಐಶ್ವರ್ಯೇಽಪಿ ಸ್ಥಿತೇ ಭೂರಿ ನ ಮಯಾ ಸುಕೃತಂ ಕೃತಂ ।**
**ಕದಾಚಿನ್ನೈವ ಜಪ್ತಂ ಚ ನ ಹುತಂ ಚ ಹುತಾಶನೇ ॥ ೨೫ ॥**
**ಅಥವಾ ಸತ್ಯಮೇವೋಕ್ತಂ ಕೇನಾಽಪಿ ಚ ಮಹಾತ್ಮನಾ ।**
**ಕೃಪಣೇನ ಸಮೋ ದಾತಾ ನ ಭೂತೋ ನ ಭವಿಷ್ಯತಿ ।**
**ಅಸ್ಪೃಷ್ಟ್ವಾಽಪಿ ಚ ವಿತ್ತಂ ಸ್ವಂ ಯಃ ಪರೇಭ್ಯಃ ಪ್ರಯಚ್ಛತಿ ॥ ೨೬ ॥**
**ಶರಣಂ ಕಿಂ ಪ್ರಪನ್ನಾನಾಂ ವಿಷವನ್ಮಾರಯಂತಿ ಕಿಂ ।**
**ನ ದೀಯಂತೇ ನ ಭುಜ್ಯಂತೇ ಕೃಪಣೇನ ಧನಾನಿ ಚ ॥ ೨೭ ॥**
**ದಾನಂ ಭೋಗೋ ನಾಶ**
**ಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ ।**
**ಯೋ ನ ದದಾತಿ ನ ಭುಂಕ್ತೇ**
**ತಸ್ಯ ತೃತೀಯಾ ಗತಿರ್ಭವತಿ ॥ ೨೮ ॥**

---

೨೨. ಬ್ರಹ್ಮನು ಪುರುಷರಿಗೆ ಬೇರೆ ಬಂಧನವನ್ನು ಕಾಣದೆ ಸ್ತ್ರೀಯೆಂಬ ಒಂದು ಗಟ್ಟಿಯಾದ ಹಗ್ಗವನ್ನು ರಚಿಸಿದ್ದಾನೆ.

೨೩. ಅವನು ಹೀಗೆ ಬಹಳವಾಗಿ ಗೋಳಾಡಿ ಬಹು ದುಃಖದಿಂದ ಸ್ತ್ರೀಯನ್ನು ಅತ್ಯಂತವಾಗಿ ಆಲೋಚಿಸಿ ತನ್ನನ್ನು ತಾನೇ ನಿಂದಿಸಿಕೊಂಡನು.

೨೪. ದುರ್ಬುದ್ಧಿಯುಳ್ಳ ನಾನು ಸಂಸಾರದಿಂದುಂಟಾದ ಫಲವನ್ನು ಪಡೆಯಲಿಲ್ಲ. ಲೋಭಿಯಾದ ನಾನು ಒಂದು ಸಲವೂ ದಾನ ಮಾಡಲಿಲ್ಲ.

೨೫. ಬಹಳ ಐಶ್ವರ್ಯವಿದ್ದರೂ ನಾನು ಪುಣ್ಯಕರ್ಮವನ್ನಾಚರಿಸಲಿಲ್ಲ. ಒಂದು ಸಲವೂ ಜಪಿಸಲಿಲ್ಲ. ಅಗ್ನಿಯಲ್ಲಿ ಹೋಮಿಸಲಿಲ್ಲ.

೨೬. ಅಥವಾ ಕೃಪಣನು ದ್ರವ್ಯವನ್ನು ತಾನು ಮುಟ್ಟದೆ ಪರರಿಗೆ ದಾನ ಮಾಡುತ್ತಾನೆ. ಅವನಿಗೆ ಸಮಾನವಾದ ದಾನಿಯು ಹಿಂದೆ ಇಲ್ಲ, ಮುಂದೆ ಹುಟ್ಟುವುದಿಲ್ಲ ಎಂದು ಒಬ್ಬ ಮಹಾತ್ಮನು ಸತ್ಯವಾಗಿ ನುಡಿದಿರುವನು.

೨೭. ಕೃಪಣನು ಈ ದ್ರವ್ಯವು ಶರಣಾಗತರನ್ನು ವಿಷದಂತೆ ಕೊಲ್ಲುವುದೆಂದು ತಿಳಿದು ದಾನವನ್ನೂ, ಅನುಭವವನ್ನೂ ಮಾಡುವುದಿಲ್ಲವಲ್ಲ!

೨೮. ದ್ರವ್ಯಕ್ಕೆ ದಾನ, ಭೋಗ, ನಾಶ ಎಂಬ ಮೂರು ಗತಿಗಳಿರುವುವು. ಯಾವನು ದ್ರವ್ಯವನ್ನು ದಾನ ಮಾಡುವುದಿಲ್ಲವೋ ಮತ್ತು ಭೋಗಿಸುವುದಿಲ್ಲವೋ ಆ ದ್ರವ್ಯಕ್ಕೆ ನಾಶವೆಂಬ ಮೂರನೆ ಗತಿಯಾಗುವುದು.

ಧನಿನೋಽಪ್ಯದಾನವಿಭವಾ
ಗಣ್ಯಂತೇ ಧುರಿ ದರಿದ್ರಾಣಾಂ ।
ನ ಹಿ ಹಂತಿ ಯತ್ಪಿಪಾಸಾ
ಮತಃ ಸಮುದ್ರೋಽಪಿ ಮರುರೇವ ॥ ೭೯ ॥
ಅತ್ಯುಪಯುಕ್ತಾಃ ಸದ್ಭಿ
ರ್ಗತಾಗತೈರಹರಹಃ ಸುನಿರ್ವಿಣ್ಣಾಃ ।
ಕೃಪಣಜನಸನ್ನಿಕಾಶಂ
ಸಂಪ್ರಾಪ್ಯಾರ್ಥಾಃ ಸ್ವಪಂತೀಹ ॥ ೮೦ ॥
ಪ್ರಾಪ್ತಾನ್ನ ಲಭಂತೇ ತೇ
ಭೋಗಾನ್ ಭೋಕ್ತುಂ ಸ್ವಕರ್ಮಣಾ ಕೃಪಣಾಃ ।
ಮುಖಪಾಕಃ ಕಿಲ ಭವತಿ
ದ್ರಾಕ್ಷಾಪಾಕೇ ಬಲಿಭುಜಾನಾಂ ॥ ೮೧ ॥
ದಾತವ್ಯಂ ಭೋಕ್ತವ್ಯಂ
ಸತಿ ವಿಭವೇ ಸಂಚಯೋ ನ ಕರ್ತವ್ಯಃ ।
ಪಶ್ಯೇಹ ಮಧುಕರೀಣಾಂ
ಸಂಚಿತಮರ್ಥಂ ಹರಂತ್ಯನ್ಯೇ ॥ ೮೨ ॥
ಯಾಚಿತಂ ದ್ವಿಜವರೇ ನ ದೀಯತೇ
ಸಂಚಿತಂ ಕ್ರತುವರೇ ನ ಯೋಜ್ಯತೇ ।
ತತ್ಕದರ್ಯಪರಿರಕ್ಷಿತಂ ಧನಂ
ಚೌರಪಾರ್ಥಿವ ಗೃಹೇಷು ಭುಜ್ಯತೇ ॥ ೮೩ ॥

---

೭೯–೮೦. ದಾನ ಮಾಡದೆ ಐಶ್ವರ್ಯವಂತರಾಗಿರುವ ಹಣಗಾರರನ್ನು ದರಿದ್ರರ ಮುಂದಾಳುಗಳೆಂದು ಲೆಕ್ಕಿಸುತ್ತಾರೆ. ಬಾಯಾರಿಕೆಯನ್ನು ಕಳೆಯದ ಸಮುದ್ರವು ಮರುಭೂಮಿಯೇ. ಸಜ್ಜನರು ಪ್ರತಿದಿನವೂ ಬಹುವಾಗಿ ಉಪಯೋಗಿಸುವುದರಿಂದ ಕ್ಲೇಶಗೊಂಡ ದ್ರವ್ಯಗಳು ಜಿಪುಣರನ್ನು ಸೇರಿ ನಿದ್ರಿಸುವುವು.

೮೧. ಜಿಪುಣರು ಲಭಿಸಿದ ಭೋಗಗಳನ್ನು ಅನುಭವಿಸಲು ತಮ್ಮ ಕರ್ಮ ಬಲದಿಂದ ಸಮರ್ಥರಾಗುವುದಿಲ್ಲ. ದ್ರಾಕ್ಷೆಹಣ್ಣು ಮಾಗುವಾಗ ಕಾಗೆಗಳ ಬಾಯಿಯಲ್ಲಿ ಹುಣ್ಣಾಗಿ ಅವು ಅದನ್ನು ತಿನ್ನಲು ಸಮರ್ಥವಾಗುವುದಿಲ್ಲವಷ್ಟೆ.

೮೨–೮೩. ಐಶ್ವರ್ಯವಿದ್ದಾಗ ದಾನ ಭೋಗಗಳನ್ನುಮಾಡಬೇಕು. ಸಂಗ್ರಹಿಸ ಬಾರದು. ಜೇನುನೊಣಗಳು ಕೂಡಿಟ್ಟ ಜೇನನ್ನು ಇತರರು ಅಪಹರಿಸುವರು ನೋಡಿರಿ. ಬೇಡಿದಾಗ ಬ್ರಾಹ್ಮಣನಿಗೆ ದಾನ ಮಾಡದೆ, ಯಜ್ಞಗಳಿಗೆ ಉಪ ಯೋಗಿಸದೆ ಜಿಪುಣನು ಕಾಪಾಡಿಟ್ಟ ಹಣವನ್ನು ಕಳ್ಳರು ಮತ್ತು ರಾಜರ ಮನೆ ಯವರು ಅನುಭವಿಸುವರು.

ತ್ಯಾಗೋ ಗುಣೋ ವಿತ್ತವತಾಂ ವಿತ್ತಂ ತ್ಯಾಗವತಾಂ ಗುಣಃ ।
ಪರಸ್ಪರವಿಯುಕ್ತೌತು ವಿತ್ತತ್ಯಾಗೌ ವಿಡಂಬನಂ ॥ ೮೪ ॥
ಕಿಂ ತಯಾ ಕ್ರಿಯತೇ ಲಕ್ಷ್ಮ್ಯಾ ಯಾ ವಧೂರಿವ ಕೇವಲಾ ।
ಯಾ ನ ವೇಶ್ಯೇವ ಸಾಮಾನ್ಯಾ ಪಥಿಕೈರಪಿ ಭುಜ್ಯತೇ ॥ ೮೫ ॥
ಅಥೋಽಷ್ಮಣಾ ಭವೇತ್ಪ್ರಾಣೋ ಭವೇದ್ಭಕ್ಷ್ಯೈರ್ವಿನಾ ನೃಣಾಂ ।
ಯತಃ ಸಂಧಾರ್ಯತೇ ಭೂಮಿಃ ಕೃಪಣಸ್ಯೋಷ್ಮಣಾ ಹಿ ಸಾ ॥ ೮೬ ॥
ಕೃಪಣಾನಾಂ ಪ್ರಸಾದೇನ ಶೇಷೋ ಧಾರಯತೇ ಮಹೀಂ ।
ಯತಸ್ತೇ ಭೂಗತಂ ವಿತ್ತಂ ಕುರ್ವತೇ ತಸ್ಯ ಚೋಷ್ಮಣಾ ॥ ೮೭ ॥
ಏವಂ ಬಹುವಿಧಾ ವಾಚಃ ಪ್ರಲಪನ್ಮಣಿಭದ್ರಕಃ ।
ನೀತ್ವಾ ತೈಃ ಪಾರ್ಥಿವೋದ್ದಿಷ್ಟೈಃ ಪುರುಷೈಃ ಪರುಷಾಕ್ಷರಂ ।
ಬಹುಧಾ ಪ್ರಲಪಂಶ್ಚೈವ ಕೃತಃ ಶಾಖಾವಲಂಬನಃ ॥ ೮೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಮಣಿಭದ್ರನಿಧನವರ್ಣನಂ"
ನಾಮಾಷ್ಟಪಂಚಾಶದುತ್ತರಶತತಮೋಽಧ್ಯಾಯಃ

---

೮೪. ಹಣಗಾರರಿಗೆ ದಾನವೂ, ದಾನ ಮಾಡುವವರಿಗೆ ಧನವೂ ಗುಣವಾಗಿರುವುದು. ಈ ದ್ರವ್ಯದಾನಗಳು ಪರಸ್ಪರ ಅಗಲಿದರೆ ಹಾಸ್ಯಾಸ್ಪದವಾಗುವುದು.

೮೫. ವೇಶ್ಯೆಯಂತೆ ಸಾಮಾನ್ಯಳಾಗಿ ಮಾರ್ಗಸ್ಥರಿಂದ ಅನುಭವಿಸಲ್ಪಡದೆ ಕೇವಲ ಪತ್ನಿಯಂತಿರುವ ಸಂಪತ್ತಿನಿಂದೇನು ಪ್ರಯೋಜನ?

೮೬. ಜಿಪುಣನ ಉಷ್ಣದಿಂದ ಭೂಮಿಯು ನಿಂತಿರುವುದರಿಂದ ಮನುಷ್ಯರ ಪ್ರಾಣವು ಭಕ್ಷ್ಯವಿಲ್ಲದಿದ್ದರೂ ಕೇವಲ ಹಣದ ಬಿಸಿಯಿಂದ ಇರುವುದು.

೮೭. ಕೃಪಣರು ತಮ್ಮ ದ್ರವ್ಯವನ್ನು ಶೇಷನ ಉಷ್ಣದೊಡನೆ ಭೂಮಿಯಲ್ಲಿ ಹೂತಿಡುವುದರಿಂದ ಆ ಜಿಪುಣರ ಅನುಗ್ರಹದಿಂದಲೇ ಶೇಷನು ಭೂಮಿಯನ್ನು ಹೊರುತ್ತಿದ್ದಾನೆ.

೮೮. ರಾಜಪುರುಷರು ಹೀಗೆ ಅನೇಕ ರೀತಿಯಾಗಿ ಕಠಿನ ಮಾತುಗಳನ್ನಾಡುತ್ತಿರುವ ಮಣಿಭದ್ರನನ್ನು ಕರೆದುಕೊಂಡು ಹೋಗಿ ಮರದ ಕೊಂಬೆಗೆ ನೇತುಹಾಕಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಮಣಿಭದ್ರನಿಧನವರ್ಣನ" ವೆಂಬ
ನೂರೈವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀ ॥

## ಅಥೈಕೋನಸಪ್ತತ್ಯುತ್ತರಶತತಮೋಽಧ್ಯಾಯಃ

### ಪುಷ್ಪಬ್ರಾಹ್ಮಣವಿಭವಪ್ರಾಪ್ತಿವರ್ಣನಮ್

ಸೂತ ಉವಾಚ:—

ಪುಷ್ಪೋಽಪಿ ತಾಂ ಸಮಾದಾಯ ಮಹಿಕಾಖ್ಯಾಂ ವರಾಂಗನಾಮ್ ।
ಸ ತದಾ ಪ್ರಯಯೌ ಹೃಷ್ಟೋ ಮಣಿಭದ್ರಸ್ಯ ಮಂದಿರಮ್ ॥ ೧ ॥
ಶಂಖತೂರ್ಯನಿನಾದೇನ ಸರ್ವೈಸ್ತೈಃ ಸ್ವಜನೈರ್ವೃತಃ ।
ನ ಕಸ್ಯ ತತ್ರ ಸಂಭೂತೋ ವಿಕಲ್ಪಸ್ತತ್ಸಮುದ್ಭವಃ ॥ ೨ ॥
ಭಾಸ್ಕರಸ್ಯ ಪ್ರಸಾದೇನ ತಥೈವಾನ್ಯಸ್ಯ ಕರ್ಹಿಚಿತ್ ।
ಸೋಽಪಿ ಮಂದಿರಮಾಸಾದ್ಯ ಯಥಾತ್ಮಪಿತೃಸಂಭವಮ್ ॥ ೩ ॥
ಉಪವಿಶ್ಯ ತತೋ ಮಧ್ಯೇ ಬಂಧೂನ್ ಸರ್ವಾನ್ ಸಮಾಹ್ವಯತ್ ।
ಅದ್ಯ ತಾವದ್ದಿನೇ ಮಹ್ಯಂ ತುಲಾಗ್ರಂ ಕಮಲಾಶ್ರಿತಾ ॥ ೪ ॥
ಚಲಿತಾಽಪಿ ಪುನಶ್ಚಾಸ್ಯಾಃ ಸುಪತ್ನ್ಯಾ ವಾಕ್ಯತಃ ಸ್ಥಿತಾ ।
ಕಿಯಂತಂ ಚೈವ ಕಾಲಂ ಮೇ ಕಾರ್ಪಣ್ಯಂ ಮಹದಾಸ್ಥಿತಮ್ ॥ ೫ ॥
ಜ್ಞಾತಮದ್ಯ ಚಲಾ ಲಕ್ಷ್ಮೀಸ್ತೇನ ತ್ಯಕ್ತಂ ಸುದೂರತಃ ।
ತಸ್ಮಾದ್ಬಂಧುಜನೈಃ ಸಾರ್ಧಂ ದೇವೈರ್ವಿಪ್ರೈಶ್ಚ ಕೃತ್ಸ್ನಶಃ ।
ಸಂವಿಭಕ್ತಾಂ ಕರಿಷ್ಯಾಮಿ ಸತ್ಯೇನಾತ್ಮಾನಮಾಲಭೇ ॥ ೬ ॥

---

### ಕನ್ನಡದ ಅನುವಾದ

#### ಪುಷ್ಪಬ್ರಾಹ್ಮಣವಿಭವಪ್ರಾಪ್ತಿವರ್ಣನ

೧–೫. ಸೂತನು ಹೇಳುತ್ತಾನೆ:—ಪುಷ್ಪನು ಆ ಮಾಹಿಕೆಯೆಂಬ ಮಣಿಭದ್ರನ ಹೆಂಡತಿಯನ್ನು ಕರೆದುಕೊಂಡು ಎಲ್ಲ ಬಂಧುಗಳೊಡನೆ ಶಂಖ ವಾದ್ಯಗಳ ಧ್ವನಿಯಿಂದ ಆ ಮಣಿಭದ್ರನ ಮನೆಗೆ ಹೋದನು. ಸೂರ್ಯನ ಅನುಗ್ರಹದಿಂದ ಅವನಲ್ಲಿ ಬೇರೆ ಯಾರಿಗೂ ಸಂದೇಹವುಂಟಾಗಲಿಲ್ಲ. ಅವನು ತನ್ನ ತಂದೆಯ ಮನೆಯಂತೆ ಮಣಿಭದ್ರನ ಮನೆಯನ್ನು ಹೊಂದಿ ಮಧ್ಯದಲ್ಲಿ ಕುಳಿತುಕೊಂಡು ಸಕಲ ಬಂಧುಗಳನ್ನು ಕರೆದನು. "ಈ ದಿನ ತಕ್ಕಡಿಯ ಕೊನೆಯಲ್ಲಿದ್ದ ಲಕ್ಷ್ಮಿಯು ಚಲಿಸಿದವಳಾದರೂ ಈ ನನ್ನ ಪತ್ನಿಯ ಮಾತಿನಿಂದ ಹಾಗೆಯೇ ನಿಂತಳು. ನಾನು ಬಹಳಕಾಲದಿಂದ ಬಹು ಕೃಪಣನಾಗಿದ್ದೆನು.

೬. ಈ ದಿನ ನಾನು ಲಕ್ಷ್ಮಿಯು ಚಂಚಲಳೆಂಬುದನ್ನು ಅರಿತೆನು. ಆದುದರಿಂದ ಕಾರ್ಪಣ್ಯವನ್ನು ದೂರದಿಂದಲೇ ತ್ಯಜಿಸಿದ್ದೇನೆ. ಈಗ ಬಂಧುಗಳು, ಬ್ರಾಹ್ಮಣರು, ದೇವತೆಗಳು ಇವರಿಗೆ ಸಂಪತ್ತನ್ನು ವಿಭಾಗಿಸುವೆನು. ನನ್ನಾಣೆಯಾಗಿ ಹಾಗೆ ಮಾಡುವೆನು."

ಏವಮುಕ್ತ್ವಾ ತತಃ ಸರ್ವಾನ್ ಸಮಾಹೂಯ ಪೃಥಕ್ ಪೃಥಕ್ ।
ಸ ನಾಮಭಿರ್ದದೌ ವಸ್ತ್ರಂ ಭೂಷಣಾನಿ ಯಥಾರ್ಹತಃ ॥ ೭ ॥
ತತೋ ವೇದವಿದೋ ವಿಪ್ರಾನ್ ಸಮಾಹೂಯ ಸ ನಾಮಭಿಃ ।
ಏಕೈಕಸ್ಯ ದದೌ ವಿತ್ತಂ ಸವಸ್ತ್ರಂ ಶ್ರದ್ಧಯಾನ್ವಿತಃ ॥ ೮ ॥
ತತಸ್ತು ನರ್ತಕೇಭ್ಯಶ್ಚ ದೀನಾಂಧೇಭ್ಯೋ ವಿಶೇಷತಃ ।
ದದೌ ಭೋಜ್ಯಂ ಸಮಿಷ್ಟಾನ್ನಂ ಸವಸ್ತ್ರಂ ಚ ದ್ವಿಜೋತ್ತಮಾಃ ॥ ೯ ॥
ತತಸ್ತು ಸ್ವಯಮೇವಾನ್ನಂ ಬುಭುಜೇ ಭಾರ್ಯಯಾ ಸಹ ।
ವಿಸೃಜ್ಯ ತಾನ್ ಸಮಾಯಾತಾನ್ ಸ್ವಜನಾನ್ ಬ್ರಾಹ್ಮಣೈಃ ಸಹ ॥ ೧೦ ॥
ಏವಂ ತೇನ ತದಾ ಪ್ರಾಪ್ತಂ ವಿತ್ತಂ ಚ ಪರಸಂಭವಂ ।
ಬುಭುಜೇ ಸ್ವೇಚ್ಛಯಾ ನಿತ್ಯಂ ತದಾ ಭಾರ್ಯಾಸಮನ್ವಿತಃ ॥ ೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪುಷ್ಪಬ್ರಾಹ್ಮಣವಿಭವಪ್ರಾಪ್ತಿವರ್ಣನಂ"
ನಾಮೈಕೋನಸಪ್ತತ್ಯುತ್ತರಶತತಮೋಽಧ್ಯಾಯಃ

---

೭. ಅವನು ಹೀಗೆ ಹೇಳಿ ಎಲ್ಲ ಬಂಧುಗಳನ್ನೂ ಕರೆದು ಪ್ರತ್ಯೇಕವಾಗಿ ಹೆಸರನ್ನು ಹೇಳಿ ಅವರಿಗೆ ಉಡಿಗೆ ತೊಡಿಗೆಗಳನ್ನಿತ್ತನು.

೮. ಅನಂತರ ವೇದಜ್ಞರಾದ ಬ್ರಾಹ್ಮಣರನ್ನು ಕರೆದು ದ್ರವ್ಯಗಳನ್ನೂ, ವಸ್ತ್ರಗಳನ್ನೂ ಶ್ರದ್ಧೆಯಿಂದ ಕೊಟ್ಟನು.

೯. ದ್ವಿಜವರ್ಯರೆ! ಹಾಗೆಯೇ ನರ್ತಕರಿಗೂ, ಬಡವರಿಗೂ, ಕುರುಡರಿಗೂ ಮೃಷ್ಟಾನ್ನ ಭೋಜನವನ್ನಿತ್ತು ವಸ್ತ್ರಗಳನ್ನು ಕೊಟ್ಟನು.

೧೦. ತರುವಾಯ ಬಂದಿರುವ ಆ ಬಂಧುಗಳನ್ನು ಬ್ರಾಹ್ಮಣರೊಡನೆ ಕಳುಹಿಸಿ ತಾನು ಪತ್ನಿಯೊಡನೆ ಭೋಜನ ಮಾಡಿದನು.

೧೧. ಹೀಗೆ ಅವನು ತಾನು ಪಡೆದ ಪರಧನವನ್ನು ನಿತ್ಯವೂ ಪತ್ನಿಯೊಡನೆ ಸ್ವೇಚ್ಛೆಯಾಗಿ ಅನುಭವಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪುಷ್ಪಬ್ರಾಹ್ಮಣವಿಭವಪ್ರಾಪ್ತಿವರ್ಣನ"ವೆಂಬ
ನೂರೈವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಷ್ಟ್ಯಧಿಕಶತತಮೋಽಧ್ಯಾಯಃ

### ಪುರಶ್ಚರಣಾರ್ಥಬ್ರಾಹ್ಮಣಾಮಂತ್ರಣವರ್ಣನಂ

**ಸೂತ ಉವಾಚ :—**

**ಅನ್ಯಸ್ಮಿನ್ನಹನಿ ಪ್ರಾಪ್ತೇ ರಹಸ್ಯುಕ್ತಃ ಸ ಭಾರ್ಯಯಾ ।**
**ರಾತ್ರೌ ಪ್ರಸುಪ್ತಃ ಪಾರ್ಶ್ವೇ ಚ ಪಾದೌ ಸಂಸ್ಪೃಶ್ಯ ತತ್ಕ್ಷಣಾತ್ ॥ ೧ ॥**
**ತ್ವಂ ತಾವನ್ಮಮ ಭರ್ತಾಽಸಿ ಯಾವಜ್ಜೀವಮಸಂಶಯಂ ।**
**ತದ್ವದಸ್ವ ವಿಭೋಽಸ್ಮಾಕಂ ತ್ವದರ್ಥಂ ಸ ಮಯೋಜ್ಝಿತಃ ॥ ೨ ॥**
**ಇಂದ್ರಜಾಲಮಿದಂ ಕಿಂ ತೇ ಕಿಂ ವಾ ಮಂತ್ರಪ್ರಸಾದನಂ ।**
**ದೇವಾನಾಂ ವಾ ಪ್ರಸಾದೋಽಯಂ ಯತ್ತ್ವಂ ಚೈತಾದೃಶಃ ಸ್ಥಿತಃ ॥ ೩ ॥**
**ಮಯಾ ತ್ವಂ ಹಿ ತದಾ ಜ್ಞಾತಃ ಪ್ರಥಮೇಽಪಿ ದಿನೇ ಸ್ಥಿತೇ ।**
**ತದಾ ಸಂಭೂಷಿತಾ ವಸ್ತ್ರೈಸ್ತಥಾ ವಸ್ತುವಿಭೂಷಣೈಃ ॥ ೪**
**ಯದ್ಯಹಂ ತವ ವಾರ್ತಾಂ ಚ ಸರ್ವಾಂ ಕಪಟಸಂಭವಾಂ ।**
**ಕಥಯಾಮಿ ದ್ವಿತೀಯಸ್ಯ ತತ್ತೇ ಪಾದೌ ಸ್ಪೃಶಾಮ್ಯಹಂ ॥ ೫ ॥**

---

### ಕನ್ನಡದ ಅನುವಾದ

#### ಪುರಶ್ಚರಣಾರ್ಥಬ್ರಾಹ್ಮಣಾಮಂತ್ರಣವರ್ಣನ

೧. ಸೂತನು ಹೇಳುತ್ತಾನೆ:—ಇನ್ನೊಂದು ದಿನ ರಾತ್ರಿ ಅವನ ಹೆಂಡತಿಯು ರಹಸ್ಯದಲ್ಲಿ ಪಾರ್ಶ್ವದಲ್ಲಿ ಮಲಗಿದ ಅವನ ಕಾಲುಗಳನ್ನು ಮುಟ್ಟಿ ಇಂತೆಂದಳು.

೨-೩. "ನಾನು ಬದುಕಿರುವವರೆಗೂ ನೀನು ನಿಶ್ಚಯವಾಗಿಯೂ ನನ್ನ ಪತಿಯಾಗಿರುವೆ. ನಾನು ನಿನಗಾಗಿ ಆ ಮಣಿಭದ್ರನನ್ನು ತ್ಯಜಿಸಿದೆನು. ನೀನು ಹೀಗಿರುವೆಯಲ್ಲ. ಇದು ಇಂದ್ರಜಾಲವೊ? ಮಂತ್ರಸಿದ್ಧಿಯೊ? ಅಥವಾ ದೇವತಾ ಪ್ರಸಾದವೊ? ಸ್ವಾಮಿ! ಅದನ್ನು ನನಗೆ ಹೇಳು.

೪. ನೀನು ಮೊದಲನೆಯ ದಿನ ನನ್ನನ್ನು ಒಡವೆ ವಸ್ತುಗಳಿಂದ ಅಲಂಕಾರ ಮಾಡಿದಾಗಲೇ ನಾನು ನೀನು ಬೇರೆಯವನೆಂದರಿತೆನು.

೫. ನಾನು ನಿನ್ನ ಕಪಟವಾರ್ತೆಯನ್ನು ಇತರರಿಗೆ ಹೇಳುವುದಿಲ್ಲವೆಂದು ಚರಣಗಳನ್ನು ಮುಟ್ಟಿ ಹೇಳುತ್ತೇನೆ.

ಸೂತ ಉವಾಚ :—

ಏವಮುಕ್ತೋ ವಿಹಸ್ಯೋಚ್ಚೈಃ ಸ ತದಾ ಬ್ರಾಹ್ಮಣೋತ್ತಮಃ ।
ತಾಮಾಲಿಂಗ್ಯ ತತಃ ಪ್ರಾಹ ವಚನಂ ಮಧುರಾಕ್ಷರಂ ॥ ೬ ॥
ಸಾಧು ಪ್ರಿಯೇ ತ್ವಯಾ ಜ್ಞಾತಂ ಸರ್ವಂ ಮಮ ವಿಚೇಷ್ಟಿತಂ ।
ಅಹಂ ಸ ವಿಪ್ರಃ ಸುಭಗೇ ಮಣಿಭದ್ರೇಣ ಯಃ ಪುರಾ ॥ ೭ ॥
ವಿಡಂಬಿತೋ ಮುಖಂ ಪಶ್ಯಂಸ್ತ್ವದೀಯಂ ಚಂದ್ರಸನ್ನಿಭಂ ।
ಚಮತ್ಕಾರಪುರಂ ಗತ್ವಾ ಮಯಾ ಚಾರಾಧಿತೋ ರವಿಃ ।
ತೇನ ತುಷ್ಟೇನ ಮೇ ದತ್ತಂ ತದ್ರೂಪಂ ಜ್ಞಾನಮೇವ ಚ ॥ ೮ ॥

ಮಾಹಿಕೋವಾಚ :—

ತ್ವದೀಯ ದರ್ಶನೇನಾಽಹಂ ಕಾಮದೇವವಶಂಗತಾ ॥ ೯ ॥
ತಸ್ಮಾದಾರಾಧಯಿಷ್ಯಾಮಿ ತಂ ಗತ್ವಾ ದಿನನಾಯಕಂ ।
ಯೇನ ತೇ ತಾದೃಶಂ ಭೂಯಃ ಪ್ರತುಷ್ಟೋ ವಿದಧಾತಿ ಸಃ ॥ ೧೦ ॥
ಕಿಂ ಮೇ ಚೈತೇನ ರೂಪೇಣ ತಾರುಣ್ಯೇನಾಽಪಿ ಚ ಪ್ರಭೋ ।
ಯತ್ತೇ ತಥಾವಿಧಂ ರೂಪಂ ಸಂಭಜಾಮಿ ದಿವಾನಿಶಂ ॥ ೧೧ ॥

ಸೂತ ಉವಾಚ :—

ತಚ್ಛ್ರುತ್ವಾ ಗುಟಿಕಾಂ ಪುಷ್ಪಃ ಸಮಾದಾಯ ಮುಖಾಂತತಃ ।
ದಧಾರ ತಾದೃಶಂ ರೂಪಂ ಯಾದೃಗ್ದೃಷ್ಟಂ ಪುರಾ ತಯಾ ॥ ೧೨ ॥

---

೬. ಸೂತನು ಹೇಳುತ್ತಾನೆ :—ಅವಳು ಹೀಗೆ ಹೇಳಲು ಪುಷ್ಪನು ನಕ್ಕು ಅವಳನ್ನು ಆಲಿಂಗಿಸಿ ಸವಿನುಡಿಯಿಂದ ಇಂತೆಂದನು.

೭–೮. "ಪ್ರಿಯಳೆ! ನೀನು ನನ್ನ ಕೆಲಸವನ್ನೆಲ್ಲ ಚೆನ್ನಾಗಿ ತಿಳಿದಿರುವೆ. ನಾನು ಹಿಂದೆ ನಿನ್ನ ಚಂದ್ರವದನವನ್ನು ನೋಡಿದಾಗ ಮಣಿಭದ್ರನಿಂದ ಶಿಕ್ಷಿಸಲ್ಪಟ್ಟ ಬ್ರಾಹ್ಮಣನು. ಚಮತ್ಕಾರಪುರಕ್ಕೆ ಹೋಗಿ ಸೂರ್ಯನನ್ನು ಆರಾಧಿಸಿದೆನು. ಅವನು ನನಗೆ ಈ ರೂಪವನ್ನೂ, ಜ್ಞಾನವನ್ನೂ ಕೊಟ್ಟನು."

೯. ಮಾಹಿಕೆಯು ಹೇಳುತ್ತಾಳೆ :—ನಾನು ನಿನ್ನ ದರ್ಶನದಿಂದ ಮನ್ಮಥ ಪರವಶಳಾಗಿರುವೆನು.

೧೦. ಆದುದರಿಂದ ನಾನು ಅಲ್ಲಿಗೆ ಹೋಗಿ ನಿನಗೆ ಸೂರ್ಯನು ತುಷ್ಟನಾಗಿ ಮರಳಿ ನಿನ್ನ ರೂಪವನ್ನು ಕೊಡುವಂತೆ ಅವನನ್ನು ಆರಾಧಿಸುವೆನು.

೧೧. ನಿನ್ನ ಇಂತಹ ರೂಪವನ್ನು ಹಗಲು ರಾತ್ರಿ ಸೇವಿಸುವ ನನಗೆ ಈ ಸೌಂದರ್ಯದಿಂದಲೂ, ಯೌವನದಿಂದಲೂ ಏನು ಪ್ರಯೋಜನ?

೧೨. ಸೂತನು ಹೇಳುತ್ತಾನೆ :—ಪುಷ್ಪನು ಅವಳ ಮಾತನ್ನು ಕೇಳಿ ಬಾಯಿಯೊಳಗಿನಿಂದ ಗುಳಿಗೆಯನ್ನು ತೆಗೆದು ಅವಳು ಹಿಂದೆ ನೋಡಿದ ನಿಜ ರೂಪವನ್ನು ತಾಳಿದನು.

ತತಃ ಸಾ ಹರ್ಷಿತಾ ಮಾಹೀ ಪುಲಕೇನ ಸಮನ್ವಿತಾ ।
ತಮಾಲಿಂಗ್ಯಾಽಭಜದ್ಗಾಢಂ ವಾಕ್ಯಮೇತದುವಾಚ ಹ ॥ ೧೩ ॥
ಅದ್ಯ ಮೇ ಸಫಲಂ ಜನ್ಮ ಯೌವನಂ ರೂಪಮೇವ ಚ ।
ಯತ್ತ್ವಂ ಹೃದ್ವಾಂಛಿತಃ ಕಾಂತಃ ಪ್ರಲಬ್ಧೋ ಮದನೋಪಮಃ ॥ ೧೪ ॥
ಏತಾವಂತಿ ದಿನಾನ್ಯೇವ ನ ಮಯಾ ಕಾಮಜಂ ಸುಖಂ ।
ಅಪಿ ಸ್ವಲ್ಪತರಂ ಲಬ್ಧಂ ಕಥಂಚಿದ್ವೃದ್ಧಸೇವಯಾ ॥ ೧೫ ॥
ಭಜಸ್ವ ಸ್ವೇಚ್ಛಯಾ ವಿಪ್ರ ದಾಸೀ ತೇಽಹಂ ವ್ಯವಸ್ಥಿತಾ ॥ ೧೬ ॥

ಪುಷ್ಪ ಉವಾಚ :—

ಪ್ರವಿಶಾಮಿ ಕಿಮಂಗೇಷು ಭವಂತೀಂ ಕಿಂ ಮಿಲಾಮ್ಯಹಂ ।
ಪ್ರಿಯೇ ಚಿರೇಣ ಲಬ್ಧಾಽಸಿ ನ ಜಾನೇ ಕರವಾಣಿ ಕಿಂ ॥ ೧೭ ॥
ಏವಮುಕ್ತ್ವಾ ತತಸ್ತೌ ಚ ಮೈಥುನಾಯ ಕೃತಕ್ಷಣೌ ।
ಪ್ರವೃತ್ತೌ ಬ್ರಾಹ್ಮಣಶ್ರೇಷ್ಠಾಃ ಕಾಮದೇವವಶಂಗತೌ ॥ ೧೮ ॥
ಅಥ ರಾತ್ರ್ಯಾಂ ವ್ಯತೀತಾಯಾಮುದಿತೇ ಸೂರ್ಯಮಂಡಲೇ ।
ವಕ್ತ್ರೇ ತಾಂ ಗುಟಿಕಾಂ ಕೃತ್ವಾ ಸ ಪುಷ್ಪಸ್ತಾದೃಶೋಽಭವತ್ ॥ ೧೯ ॥

---

೧೩. ಅದರಿಂದ ಹರ್ಷಗೊಂಡ ಮಾಹಿಕೆಯು ರೋಮಾಂಚವನ್ನು ಹೊಂದಿ ಆ ಪುಷ್ಪನನ್ನು ಗಾಢವಾಗಿ ಆಲಿಂಗಿಸಿ ಈ ಮಾತನ್ನಾಡಿದಳು.

೧೪. "ನನ್ನ ಅಪೇಕ್ಷೆಯಂತೆ ಮನ್ಮಥನಂತಿರುವ ಪ್ರಿಯನು ಲಭಿಸಿದ ಕಾರಣ ಈಗ ನನ್ನ ಜನ್ಮವೂ, ಯೌವನವೂ, ಸೌಂದರ್ಯವೂ ಸಫಲವಾದುವು.

೧೫. ನಾನು ಇಷ್ಟು ದಿವಸ ಮುದುಕನ ಸೇವೆಯಿಂದ ಸ್ವಲ್ಪವೂ ಕಾಮಸುಖವನ್ನು ಹೊಂದಲಿಲ್ಲ.

೧೬. ವಿಪ್ರ! ನಾನು ನಿನಗೆ ದಾಸಿಯಾಗಿರುವೆನು. ನನ್ನನ್ನು ಸ್ವೇಚ್ಛೆಯಾಗಿ ಉಪಭೋಗಿಸು."

೧೭. ಪುಷ್ಪನು ಹೇಳುತ್ತಾನೆ:—ಪ್ರಿಯಳೆ! ನಾನು ನಿನ್ನ ಅಂಗಗಳಲ್ಲಿ ಪ್ರವೇಶಿಸಲೆ? ಒಟ್ಟಿಗೆ ಸೇರಿಕೊಳ್ಳಲೆ? ಬಹಳ ಕಾಲದ ತರುವಾಯ ಸಿಕ್ಕಿರುವೆ. ಏನನ್ನು ಮಾಡಲೆಂದು ತಿಳಿಯುವುದಿಲ್ಲ.

೧೮. ಬ್ರಾಹ್ಮಣವರ್ಯರೆ! ಅವರು ಹೀಗೆ ಮಾತಾಡಿಕೊಂಡು ಕಾಮ ಪರವಶರಾಗಿ ಮೈಥುನದಲ್ಲಿ ನಿರತರಾದರು.

೧೯. ರಾತ್ರಿಯು ಕಳೆದು ಬೆಳಗಾಗಿ ಸೂರ್ಯನು ಉದಯಿಸಲು ಪುಷ್ಪನು ಆ ಗುಳಿಗೆಯನ್ನು ಬಾಯಿಯಲ್ಲಿಟ್ಟುಕೊಂಡು ಮಣಿಭದ್ರನಂತೆಯೇ ಆದನು.

ಏವಂ ತಸ್ಯ ಸ್ಥಿತಸ್ಯಾಽತ್ರ ಮಹಾನ್ಕಾಲೋ ವ್ಯಜಾಯತ ।
ಪುತ್ರಾಃ ಪೌತ್ರಾಸ್ತಥಾ ಜಾತಾಃ ಕನ್ಯಕಾಶ್ಚ ತಥೈವ ಚ ॥ ೨೦ ॥
ಸ ವೃದ್ಧತ್ವಂ ಯದಾ ಪ್ರಾಪ್ತಾ ಜರಾ ವಿಪ್ಲವತಾಂ ಗತಃ ।
ತದಾ ಸ ಚಿಂತಯಾಮಾಸ ಮಯಾ ಪಾಪಂ ಮಹತ್ಕೃತಂ ॥ ೨೧ ॥
ಮಣಿಭದ್ರೋ ವರಾಕೋಽಸೌ ಮಿಥ್ಯಾಚಾರೇಣ ಘಾತಿತಃ ।
ತಸ್ಯ ಭಾರ್ಯಾ ಹೃತಾಚೈವ ಪ್ರಸೂತಿಂ ಚ ನಿಯೋಜಿತಾ ॥ ೨೨ ।
ಹಾಟಕೇಶ್ವರಜಂ ಕ್ಷೇತ್ರಂ ತಸ್ಮಾದ್ಗತ್ವಾ ಕರೋಮ್ಯಹಂ ।
ಪುರಶ್ಚರಣಸಂಜ್ಞಂ ಚ ಯೇನ ಶುದ್ಧಿಃ ಪ್ರಜಾಯತೇ ॥ ೨೩ ।
ಏವಂ ಸ ನಿಶ್ಚಯಂ ಕೃತ್ವಾ ಪುಷ್ಪಶ್ಚಿತ್ತೇ ನಿಜೇ ತದಾ ।
ಅಸಂಖ್ಯಂ ವಿತ್ತಮಾದಾಯ ಚಮತ್ಕಾರಪುರಂ ಗತಃ ॥ ೨೪ ।
ಪುತ್ರೇಭ್ಯೋಽಪಿ ಯಥಾ ಸಂಖ್ಯಂ ದತ್ವಾ ಚೈವ ಪೃಥಕ್ಪೃಥಕ್ ।
ಪ್ರಾಸಾದಂ ಕಾರಯಾಮಾಸ ತಸ್ಯ ಸೂರ್ಯಸ್ಯ ಶೋಭನಂ ॥ ೨೫ ।
ಯಸ್ಮಿನ್ ಸಿದ್ಧಿಂ ಗತಃ ಸೋಽತ್ರ ಯಾಜ್ಞವಲ್ಕ್ಯಪ್ರತಿಷ್ಠಿತೇ ।
ತತೋ ಮಧ್ಯಮಮಾಹೂಯ ಪ್ರಣಿಪತ್ಯಾಭಿವಾದ್ಯ ಚ ।
ಸೋಽಬ್ರವೀದ್ಬ್ರಾಹ್ಮಣಾನಾಂ ಮೇ ಚಾತುಶ್ಚರಣಮಾನಯ ॥ ೨೬ ।

---

೨೦. ಅವನು ಹೀಗೆ ಅಲ್ಲಿ ವಾಸಮಾಡುತ್ತಿರಲು ಬಹಳ ಕಾಲ ಕಳೆಯಿತು ಅವನಿಗೆ ಪುತ್ರರು, ಪೌತ್ರರು, ಕನ್ಯೆಯರು ಹುಟ್ಟಿದರು.

೨೧–೨೨. ಅವನು ಮುದುಕನಾಗಿ ಜರೆಯಿಂದ ಪೀಡಿತನಾಗಲು ಹೀಗೆ ಚಿಂತಿಸಿದನು. "ನಾನು ಮಹಾ ಪಾಪವನ್ನು ಮಾಡಿರುವೆನು. ದೀನನಾದ ಮಣಿಭದ್ರನನ್ನು ಸುಳ್ಳನ್ನು ಹೇಳಿ ಕೊಲ್ಲಿಸಿದೆನು. ಅವನ ಪತ್ನಿಯನ್ನು ಅಪಹರಿಸಿ ಸಂತಾನವನ್ನು ಪಡೆದೆನು.

೨೩. ಆದುದರಿಂದ ಹಾಟಕೇಶ್ವರಕ್ಷೇತ್ರಕ್ಕೆ ಹೋಗಿ ಪುರಶ್ಚರಣೆಯನ್ನು ಮಾಡುವೆನು. ಅದರಿಂದಲೇ ನಾನು ಶುದ್ಧನಾಗುವೆನು."

೨೪. ಆ ಪುಷ್ಪನು ಹೀಗೆ ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ ಲೆಕ್ಕವಿಲ್ಲದಷ್ಟು ದ್ರವ್ಯಗಳನ್ನು ತೆಗೆದುಕೊಂಡು ಚಮತ್ಕಾರಪುರಕ್ಕೆ ಹೋದನು.

೨೫–೨೬. ಪುತ್ರರಿಗೂ ಪ್ರತ್ಯೇಕವಾಗಿ ಸಂಖ್ಯಾನುಸಾರ ಹಣವನ್ನಿತ್ತು ತಾನು ಸಿದ್ಧಿಯನ್ನು ಹೊಂದಿದ ಆ ಕ್ಷೇತ್ರದಲ್ಲಿ ಯಾಜ್ಞವಲ್ಕ್ಯನು ಪ್ರತಿಷ್ಠೆ ಮಾಡಿರುವ ಸೂರ್ಯನಿಗೆ ರಮ್ಯವಾದ ಗುಡಿಯನ್ನು ಕಟ್ಟಿಸಿದನು. ಅನಂತರ ಅವನು ಬ್ರಾಹ್ಮಣರಲ್ಲಿ ಮಧ್ಯದವನನ್ನು ಕರೆದು ನಮಸ್ಕರಿಸಿ ಹೀಗೆಂದನು ನೀನು ಚಾತುಶ್ಚರಣ ಬ್ರಾಹ್ಮಣನನ್ನು ಕರೆದುಕೊಂಡು ಬಾ.

**ಯೇನಾಽಹಮಗ್ರತೋ ಭೂತ್ವಾ ಪ್ರಾಯಶ್ಚಿತ್ತಂ ವಿಶುದ್ಧಯೇ ।**
**ಪುರಶ್ಚರಣಸಂಜ್ಞಂ ತು ಪ್ರಾರ್ಥಯಾಮಿ ಯಥಾವಿಧಿ ॥ ೨೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಪುರಶ್ಚರಣಾರ್ಥಬ್ರಾಹ್ಮಣಾಮಂತ್ರಣವರ್ಣನಂ" ನಾಮ**
**ಷಷ್ಟ್ಯಧಿಕಶತತಮೋಽಧ್ಯಾಯಃ**

---

೨೭. ಅವನ ಮುಂದೆ ನಾನು ಶುದ್ಧಿಗಾಗಿ ಪುರಶ್ಚರಣವೆಂಬ ಪ್ರಾಯಶ್ಚಿತ್ತವನ್ನು ವಿಧಿಯಂತೆ ಪ್ರಾರ್ಥಿಸುವೆನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪುರಶ್ಚರಣಾರ್ಥಬ್ರಾಹ್ಮಣಾಮಂತ್ರಣವರ್ಣನ"ವೆಂಬ
ನೂರರುವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಷಷ್ಟ್ಯುತ್ತರಶತತಮೋಽಧ್ಯಾಯಃ

## ಪುಷ್ಪಾದಿತ್ಯಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಅಥ ತೇನ ದ್ವಿಜಾಃ ಸರ್ವೇ ಬ್ರಹ್ಮಸ್ಥಾನೇ ನಿವೇಶಿತಾಃ ।
ಚಾತುಶ್ಚರಣಸಂಜ್ಞಾಶ್ಚ ತತಸ್ತಸ್ಯ ನಿವೇಶಿತಾಃ ॥ ೧ ॥
ಸೋಽಪಿ ಕೇಶಾನ್ ಪರಿತ್ಯಜ್ಯ ಸರ್ವಗಾತ್ರಸಮುದ್ಭವಾನ್ ।
ನಿಜಪತ್ನ್ಯಾ ಸಮೋಪೇತಃ ಪ್ರಣಮ್ಯ ಚದ್ವಿಜೋತ್ತಮಾನ್ ॥ ೨ ॥
ಕೃತಾಂಜಲಿಪುಟೋ ಭೂತ್ವಾ ವಾಕ್ಯಮೇತದುವಾಚ ಹ ।
ಭಾಸ್ಕರಸ್ಯಾಸ್ಯ ವಿಹಿತಃ ಪ್ರಾಸಾದೋಽಯಂ ಮಯಾ ದ್ವಿಜಾಃ ।
ಪುಷ್ಪಾದಿತ್ಯ ಇತಿ ಖ್ಯಾತಿಂ ಪ್ರಯಾತು ಭುವನ ತ್ರಯೇ ॥ ೩ ॥

ಬ್ರಾಹ್ಮಣಾ ಊಚುಃ :—

ನ ವಯಂ ಯಾಜ್ಞವಲ್ಕ್ಯಸ್ಯ ಕೀರ್ತಿಂ ನೇಷ್ಯಾಮಹೇ ಕ್ಷಯಂ ॥ ೪ ॥
ಪ್ರಾಯಶ್ಚಿತ್ತಂ ಪ್ರದಾಸ್ಯಾಮಶ್ಚಿತ್ತಸ್ಯ ಹೃದಯಂಗಮಂ ।
ಅನ್ಯೇಚ ಬ್ರಾಹ್ಮಣಾಃ ಪ್ರೋಚುಃ ಕೇಚಿನ್ಮಧ್ಯಸ್ಥವೃತ್ತಯಃ ॥ ೫ ॥

---

## ಕನ್ನಡದ ಅನುವಾದ

### ಪುಷ್ಪಾದಿತ್ಯಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ತರುವಾಯ ಆ ಪುಷ್ಪನು ಚಾತುಶ್ಚರಣ ರೆಂಬ ಆ ಬ್ರಾಹ್ಮಣರನ್ನು ಬ್ರಹ್ಮಸ್ಥಾನದಲ್ಲಿ ಸೇರಿಸಿದನು.

೨–೩. ತಾನು ಶರೀರದ ಕೂದಲುಗಳನ್ನೆಲ್ಲ ಕತ್ತರಿಸಿಕೊಂಡು ತನ್ನ ಪತ್ನಿ ಯೊಡನೆ ದ್ವಿಜವರ್ಯರನ್ನು ವಂದಿಸಿ ಕೈಮುಗಿದುಕೊಂಡು, "ದ್ವಿಜರೆ! ನಾನು ಸೂರ್ಯನಿಗೆ ನಿರ್ಮಿಸಿದ ಈ ಪ್ರಾಸಾದವು ಪುಷ್ಪಾದಿತ್ಯವೆಂದು ಮೂರು ಲೋಕ ಗಳಲ್ಲಿ ಪ್ರಸಿದ್ಧವಾಗಲಿ" ಎಂದನು.

೪–೫. ಬ್ರಾಹ್ಮಣರು ಹೇಳುತ್ತಾರೆ:—"ನಾವು ಯಾಜ್ಞವಲ್ಕ್ಯನ ಕೀರ್ತಿ ಯನ್ನು ಹಾಳುಮಾಡಲಾರೆವು. ನಿನ್ನ ಮನಸ್ಸಿಗೆ ಒಪ್ಪುವ ಪ್ರಾಯಶ್ಚಿತ್ತವನ್ನು ಮಾಡಿಸುವೆವು." ಮಧ್ಯಸ್ಥರಾದ ಇತರ ಬ್ರಾಹ್ಮಣರು ಹೀಗೆಂದರು.

ವೃತ್ಯರ್ಥಮಸ್ಯ ದೇವಸ್ಯ ಲಕ್ಷಂ ಹೋಮೋಽತ್ರ ಕಲ್ಪ್ಯತಾಂ ।
ಲಕ್ಷಂ ತು ಸರ್ವವಿಪ್ರಾಣಾಂ ಪ್ರಾಯಶ್ಚಿತ್ತವಿಶುದ್ಧಯೇ ॥

ಪುಷ್ಪ ಉವಾಚ :—

ತಸ್ಮಾತ್ಸರ್ವೇ ದ್ವಿಜಶ್ರೇಷ್ಠಾ ಮನ್ನಾಮ್ನಾ ಕೀರ್ತಯಂತ್ವಿಮಂ ।
ಪುಷ್ಪಾದಿತ್ಯಮಿತಿ ಖ್ಯಾತಿಂ ಕೀರ್ತಯಂತು ತಥಾಽನಿಶಂ ॥ ೭ ॥
ಅನಯಾ ಭಾರ್ಯಯಾ ಮಹ್ಯಂ ಮಾನ್ಯಾ ಯಾ ಸ್ಥಾಪಿತಾ ಪುರಾ ।
ದುರ್ಗಾಸ್ಯಾಶ್ಚಾಽತ್ರ ನಾಮ್ನಾ ವೈ ಭೂಯಾತ್ಖ್ಯಾತಾಽತ್ರ ಸತ್ಪುರೇ ॥ ೮ ॥

ಬ್ರಾಹ್ಮಣಾ ಊಚುಃ :—

ದುಃಶೀಲೇನ ಪುರಾಕಾರಿ ಪ್ರಾಸಾದೋ ಹರಸಂಭವಃ ।
ದುರ್ವಾಸಃಸ್ಥಾಪಿತಸ್ಯಾಽಪಿ ಭವದ್ಭಿಸ್ತುಷ್ಟಮಾನಸೈಃ ॥ ೯ ॥
ತಥಾಽಪ್ಯಸ್ಯ ತು ದೀನಸ್ಯ ಪ್ರಾಸಾದಃ ಕ್ರಿಯತಾಂ ದ್ವಿಜಾಃ ॥ ೧೦ ॥
ನಾಮಮಾತ್ರೇಣ ದೇವಸ್ಯ ದುಃಶೀಲೇನ ಯಥಾ ಪುರಾ ।
ಅನೇನಾರಾಧಿತಃ ಪೂರ್ವಂ ಸ್ವಮಾಂಸೈರೇಷ ಭಾಸ್ಕರಃ ॥ ೧೧ ॥
ತಸ್ಮಾನ್ನಕ್ಷತಿರಸ್ಯಾಽಥ ದತ್ತೇ ನಾಮ್ನಿ ಯಥಾ ಪುರಾ ।
ನಾಮ್ನಾ ಮಾಹಿಕಯಾ ನಾಮ ಮಾಹೀತ್ಯೇವ ಚ ಸಾ ಭವೇತ್ ॥ ೧೨ ॥

---

೬. ಈ ಸ್ವಾಮಿಯ ವೃತ್ತಿಗಾಗಿ ಹೋಮದಲ್ಲಿ ಒಂದು ಲಕ್ಷ ಬ್ರಾಹ್ಮಣರನ್ನೂ, ಪ್ರಾಯಶ್ಚಿತ್ತಕ್ಕಾಗಿ ಒಂದು ಲಕ್ಷ ಬ್ರಾಹ್ಮಣರನ್ನೂ ಏರ್ಪಡಿಸು.

೭. ಪುಷ್ಪನು ಹೇಳುತ್ತಾನೆ:—ದ್ವಿಜವರ್ಯರೆ! ಈ ಆದಿತ್ಯನನ್ನು ನನ್ನ ಹೆಸರಿನಿಂದ ಕರೆಯಿರಿ. ಇವನು ಪುಷ್ಪಾದಿತ್ಯನೆಂದು ವಿಖ್ಯಾತನಾಗಲಿ.

೮. ಈ ನನ್ನ ಪತ್ನಿಯು ನನಗಾಗಿ ಪ್ರತಿಷ್ಠೆಮಾಡಿರುವ ಮಾನ್ಯಳಾದ ದುರ್ಗೆಯು ಇವಳ ಹೆಸರಿನಿಂದ ಈ ಪಟ್ಟಣದಲ್ಲಿ ಪ್ರಸಿದ್ಧಳಾಗಲಿ.

೯—೧೧. ಬ್ರಾಹ್ಮಣರು ಹೇಳುತ್ತಾರೆ:—ಬ್ರಾಹ್ಮಣರೆ! ಹಿಂದೆ ದುಶ್ಶೀಲನು ದುರ್ವಾಸನು ಸ್ಥಾಪಿಸಿದ ಮಹೇಶ್ವರನಿಗೆ ಪ್ರಾಸಾದವನ್ನು ರಚಿಸಿರುವನು. ಆದುದರಿಂದ ನೀವು ಸಂತುಷ್ಟರಾಗಿ ದೀನನಾದ ಇವನ ಹೆಸರಿನಿಂದ ಪ್ರಾಸಾದವು ಪ್ರಸಿದ್ಧವಾಗುವಂತೆ ಮಾಡಿರಿ. ದುಶ್ಶೀಲನಂತೆ ಇವನೂ ಹಿಂದೆ ತನ್ನ ಮಾಂಸಗಳಿಂದ ಸೂರ್ಯನನ್ನು ಪೂಜಿಸಿರುವನು.

೧೨. ಆದುದರಿಂದ ಹಿಂದಿನಂತೆ ಇವನ ಹೆಸರನ್ನು ಪ್ರಾಸಾದಕ್ಕಿಟ್ಟರೆ ಯಾವ ಹಾನಿಯೂ ಇಲ್ಲ. ಆ ದುರ್ಗೆಯೂ ಮಾಹಿಕೆಯ ಹೆಸರಿನಿಂದ ಮಾಹೀ ಎಂದು ಪ್ರಸಿದ್ಧಳಾಗಲಿ.

ಸೂತ ಉವಾಚ :—

ಪುಷ್ಪೇಣ ದಾನೇ ದತ್ತೇಽಥ ಸಂಮತೇನಾಗ್ರಜನ್ಮನಾಂ ।
ಮಧ್ಯಗೇನ ಕೃತಂ ನಾಮ ಪುಷ್ಪಾದಿತ್ಯ ಇತಿ ಶ್ರುತಂ ॥ ೧೩ ॥
ತತ್ಪತ್ನ್ಯಾ ಚಾಽಪಿ ಯಾ ತತ್ರ ದುರ್ಗಾದೇವೀ ದ್ವಿಜೋತ್ತಮಾಃ ।
ನಾಮ್ನಾ ಮಾಹಿಕಯಾ ನಾಮ ಮಾಹೀತ್ಯೇವ ಚ ಸಾಽಭವತ್ ॥ ೧೪ ॥

ಸೂತ ಉವಾಚ :—

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಪುಷ್ಪಾದಿತ್ಯೋ ಯಥಾ ಜಾತೋ ಯಾಜ್ಞವಲ್ಕ್ಯ ಪ್ರತಿಷ್ಠಿತಃ ॥ ೧೫ ॥
ಅದ್ಯಾಽಪಿ ಕಲಿಕಾಲೇ ಸ ದೃಷ್ಟೋ ಭಕ್ತ್ಯಾ ಸುರೇಶ್ವರಃ ।
ನಾಶಯೇದ್ದಿನಜಂ ಪಾಪಂ ನರಾಣಾಂ ನಾಽತ್ರ ಸಂಶಯಃ ॥ ೧೬ ॥
ತಥಾ ಚ ಸಪ್ತಮೀ ಯುಕ್ತೇ ರವೇರ್ವಾರೇ ದ್ವಿಜೋತ್ತಮಾಃ ।
ಅಷ್ಟೋತ್ತರಶತಂ ಯಾವತ್ಫಲಹಸ್ತಃ ಕರೋತಿ ಯಃ ।
ಪ್ರದಕ್ಷಿಣಾಂ ಚ ಸದ್ಭಕ್ತ್ಯಾ ಸ ಲಭೇದ್ವಾಂಛಿತಂ ಫಲಂ ॥ ೧೭ ॥
ಮಾಹಿಕಾಮಪಿ ಯೋ ದುರ್ಗಾಂ ನಿತ್ಯಮೇವ ಪ್ರಪಶ್ಯತಿ ।
ನ ಸ ಪಶ್ಯತಿ ಕಷ್ಟಾನಿ ತಸ್ಮಿನ್ನಹನಿ ಕರ್ಹಿಚಿತ್ ॥ ೧೮ ॥

---

೧೩. ಸೂತನು ಹೇಳುತ್ತಾನೆ:—ಬ್ರಾಹ್ಮಣರಿಗೆ ಸಮ್ಮತನಾದ ಪುಷ್ಪನು ದಾನವನ್ನು ಕೊಡಲು ಮಧ್ಯವರ್ತಿ ಬ್ರಾಹ್ಮಣನು ಪುಷ್ಪಾದಿತ್ಯನೆಂಬ ಹೆಸರನ್ನಿಟ್ಟನು.

೧೪. ದ್ವಿಜವರ್ಯರೆ! ಅವನ ಪತ್ನಿಯು ಸ್ಥಾಪಿಸಿದ ದುರ್ಗೆಯು ಮಾಹಿಕೆ ಯೆಂಬ ಹೆಸರಿನಿಂದ ವಿಖ್ಯಾತಳಾದಳು.

೧೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ನೀವು ಕೇಳಿದ ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಆದಿತ್ಯನು ಪುಷ್ಪಾದಿತ್ಯನು ಹೇಗಾದನೆಂಬು ದನ್ನು ಸಂಪೂರ್ಣವಾಗಿ ಹೇಳಿದ್ದೇನೆ.

೧೬. ಈಗಲೂ ಕಲಿಕಾಲದಲ್ಲಿ ಭಕ್ತಿಯಿಂದ ದರ್ಶನಗೈದರೆ ಆ ಆದಿತ್ಯನು ಮನುಷ್ಯರ ಒಂದು ದಿನದ ಪಾಪವನ್ನು ನಿಶ್ಚಯವಾಗಿಯೂ ಪರಿಹರಿಸುವನು.

೧೭. ಹಾಗೆಯೇ ಸಪ್ತಮೀ ಭಾನುವಾರದ ದಿನ ಕೈಯಲ್ಲಿ ಫಲವನ್ನು ಹಿಡಿದುಕೊಂಡು ನೂರೆಂಟು ಸಾರಿ ಆ ಆದಿತ್ಯನಿಗೆ ಪ್ರದಕ್ಷಿಣೆ ಮಾಡಿದವನು ಇಷ್ಟಾರ್ಥವನ್ನು ಪಡೆಯುವನು.

೧೮. ಮಾಹಿಕೆಯೆಂಬ ದುರ್ಗೆಯನ್ನು ನಿತ್ಯವೂ ನೋಡುವವನು ಯಾವ ದಿನವೂ ಕಷ್ಟವನ್ನು ಕಾಣುವುದಿಲ್ಲ.

ಚೈತ್ರಶುಕ್ಲ ಚತುರ್ದಶ್ಯಾಂ ಯಸ್ತಾಂ ಪೂಜಯತೇ ನರಃ ।
ತಸ್ಯ ಸಂವತ್ಸರಂ ಯಾವನ್ನಾಪತ್ಸಂಜಾಯತೇ ಕ್ವಚಿತ್ ॥ ೧೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
“ ಪುಷ್ಪಾದಿತ್ಯಮಾಹಾತ್ಮ್ಯವರ್ಣನಂ ”
ನಾಮೈಕಷಷ್ಟ್ಯುತ್ತರಶತತಮೋಽಧ್ಯಾಯಃ

---

೧೯. ಚೈತ್ರ ಶುಕ್ಲ ಚತುರ್ದಶಿಯ ದಿನ ಆ ದುರ್ಗೆಯನ್ನು ಪೂಜಿಸಿದವನಿಗೆ ಒಂದು ವರ್ಷಕಾಲ ಆಪತ್ತು ಸಂಭವಿಸುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ “ ಪುಷ್ಪಾದಿತ್ಯಮಾಹಾತ್ಮ್ಯವರ್ಣನ ” ವೆಂಬ
ನೂರರುವತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ

## ಪುರಶ್ಚರಣಸಪ್ತಮೀವ್ರತವಿಧಾನವರ್ಣನಂ

ಸೂತ ಉವಾಚ :—

ಏವಂ ನಾಮ್ನಿ ಕೃತೇ ತಸ್ಯ ಭಾಸ್ಕರಸ್ಯಾಂಶುಮಾಲಿನಃ ।
ದ್ವಿಜಾನಾಂ ಪುರತಃ ಪುಷ್ಪಃ ಕಥಯಾಮಾಸ ಚೇಷ್ಟಿತಂ ॥ ೧ ॥
ಆತ್ಮೀಯಂ ಕುತ್ಸಿತಂ ತೇಷಾಂ ಮಣಿಭದ್ರವಧೋ ಯಥಾ ।
ವಿಹಿತೋ ವಿಹಿತಾ ಪತ್ನೀ ತಸ್ಯ ವ್ಯಾಜೇನ ಕೃತ್ಸ್ನಶಃ ॥ ೨ ॥
ತತಸ್ತೇ ಬ್ರಾಹ್ಮಣಾಃ ಪ್ರೋಚುಸ್ತಚ್ಛ್ರುತ್ವಾ ಕೋಪಸಂಯುತಾಃ ।
ಸೀತ್ಕಾರಾನ್ ಪ್ರಚುರಾನ್ ಕೃತ್ವಾ ಧಿಕ್ತ್ವಾಂ ಪಾಪ ಪ್ರಗಮ್ಯತಾಂ ॥ ೩ ॥
ಆತ್ಮೀಯಂ ಹೇಮ ಚಾದಾಯ ನ ತೇ ಶುದ್ಧಿರ್ಭವಿಷ್ಯತಿ ॥ ೪ ॥
ಬ್ರಹ್ಮಘ್ನಸ್ತ್ವಂ ಯತಃ ಪ್ರೋಕ್ತಾಸ್ತ್ರಯೋ ವರ್ಣಾ ದ್ವಿಜೋತ್ತಮಾಃ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಸ್ಮೃತಿಶಾಸ್ತ್ರ ಪ್ರಪಾಠಕೈಃ ॥ ೫ ॥

ಸೂತ ಉವಾಚ :—

ತತಸ್ತು ದುಃಖಿತಃ ಪುಷ್ಪೋ ಬಾಷ್ಪಸಂಪೂರಿತೇಕ್ಷಣಃ ।
ಬ್ರಹ್ಮಸ್ಥಾನಾದ್ವಿನಿರ್ಗತ್ಯ ಪ್ರರುರೋದ ಸುದುಃಖಿತಃ ॥ ೬ ॥

---

## ಕನ್ನಡದ ಅನುವಾದ

### ಪುರಶ್ಚರಣಸಪ್ತಮೀವ್ರತವಿಧಾನವರ್ಣನ

೧–೨. ಸೂತನು ಹೇಳುತ್ತಾನೆ :—ಹೀಗೆ ಬ್ರಾಹ್ಮಣರು ಭಾಸ್ಕರನಿಗೆ ಹೆಸರನ್ನಿಡಲು ಪುಷ್ಪನು ಬ್ರಾಹ್ಮಣರ ಮುಂದೆ ನಿಂತು ತಾನು ಮಾಡಿದ ಮಣಿಭದ್ರನ ಕೊಲೆ, ಕಪಟದಿಂದ ಅವನ ಪತ್ನಿಯನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಂಡಿರುವುದು ಮೊದಲಾದ ನೀಚಕಾರ್ಯಗಳನ್ನು ಹೇಳಿದನು.

೩–೪. ಅನಂತರ ಆ ಬ್ರಾಹ್ಮಣರು ಅವನ ಮಾತನ್ನು ಕೇಳಿ ಕುಪಿತರಾಗಿ ಬಹುವಾಗಿ ಸೀತ್ಕಾರಮಾಡಿ ಇಂತೆಂದರು. "ಛೀ! ಪಾಪಿಯೆ! ನಿನ್ನ ಸುವರ್ಣವನ್ನು ತೆಗೆದುಕೊಂಡು ಹೊರಡು. ನಿನಗೆ ಶುದ್ಧಿಯಾಗುವುದಿಲ್ಲ.

೫. ಸ್ಮೃತಿಶಾಸ್ತ್ರ ವಿಶಾರದರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು ದ್ವಿಜರೆಂದು ಹೇಳಿರುವುದರಿಂದ ನೀನು ಬ್ರಹ್ಮಘ್ನನಾದೆ."

೬. ಸೂತನು ಹೇಳುತ್ತಾನೆ :–ಅನಂತರ ಪುಷ್ಪನು ದುಃಖದಿಂದ ಕಣ್ಣೀರನ್ನು ಸುರಿಸುತ್ತ ಬ್ರಹ್ಮಸ್ಥಾನದಿಂದ ಹೊರಗೆ ಬಂದು ಗೋಳಾಡಿದನು.

ರೋರೂಯಮಾಣಮಾಲೋಕ್ಯ ತತಸ್ತೇ ನಾಗರಾ ದ್ವಿಜಾಃ ।
ದಯಾಂ ಚ ಮಹತೀಂ ಕೃತ್ವಾ ತತಃ ಪ್ರೋಚುಃ ಪರಸ್ಪರಂ ॥ ೭ ॥
ನಾನಾವಿಧಾನಿ ಶಾಸ್ತ್ರಾಣಿ ಸ್ಮೃತಯಶ್ಚ ಪೃಥಗ್ವಿಧಾಃ ।
ಪುರಾಣಾನಿ ಸಮಸ್ತಾನಿ ವೀಕ್ಷಧ್ವಂ ಸುಸಮಾಹಿತಾಃ ॥ ೮ ॥
ಕುತ್ರಚಿತ್ಕ್ವಚಿದೇವಾಽಸ್ಯ ಕಥಂಚಿಚ್ಛುದ್ಧಿರಸ್ತಿ ಚೇತ್ ।
ನ ತಚ್ಚ ವಿದ್ಯತೇ ಶಾಸ್ತ್ರಮಸ್ಮಿನ್‌ಸ್ಥಾನೇನ ಚಾಸ್ತಿ ಯತ್ ॥ ೯ ॥
ನ ಸ್ಮೃತಿರ್ನ ಪುರಾಣಂ ಚ ವೇದಾಂತಂ ವಾ ದ್ವಿಜೋತ್ತಮಾಃ ।
ನ ಚಾಽಸ್ತಿ ಬ್ರಾಹ್ಮಣಃ ಸೋಽತ್ರ ಸರ್ವಜ್ಞಪ್ರತಿಮೋ ನ ಯಃ ॥ ೧೦ ॥
ತಸ್ಮಾಚ್ಚಿಂತಯತ ಕ್ಷಿಪ್ರಮಸ್ಯ ಶುದ್ಧಿಪ್ರದಂ ಹಿ ಯತ್ ।
ತಚ್ಚ ಪ್ರಮಾಣತಾಂ ನೀತ್ವಾ ಶುದ್ಧಿರಸ್ಯ ಪ್ರದೀಯತೇ ॥ ೧೧ ॥
ಅಥೈಕೋ ಬ್ರಾಹ್ಮಣಃ ಪ್ರಾಹ ಚಂಡಶರ್ಮೇತಿ ವಿಶ್ರುತಃ ।
ಮಯಾ ಸ್ಕಾಂದಪುರಾಣೇಽಸ್ಮಿನ್ ಪುರಶ್ಚರಣಸಂಶ್ರಿತಾ ॥ ೧೨ ॥
ಪಠಿತಾ ಸಪ್ತಮೀ ಯಾ ಚ ಪುರಶ್ಚರಣ ಸಂಜ್ಞಿತಾ ।
ಪುರಶ್ಚರಣತಃ ಪಾಪಂ ವಿಹಿತಂ ತು ಯಥಾ ವ್ರಜೇತ್ ॥ ೧೩ ॥
ಸಮ್ಯಕ್ತಥಾಽಪಿ ವಿಪ್ರೇಂದ್ರಾಸ್ತತೋ ಯಾತಿ ನ ಸಂಶಯಃ ।
ತಸ್ಮಾತ್ಕರೋತು ತಾಮೇಷ ಪುರಶ್ಚರಣ ಸಪ್ತಮೀಂ ॥ ೧೪ ॥

---

೭. ಅವನು ಅಳುತ್ತಿರುವುದನ್ನು ಪಟ್ಟಣದ ದ್ವಿಜರು ನೋಡಿ ಅವನಲ್ಲಿ ಬಹುವಾಗಿ ದಯೆತೋರಿ ಪರಸ್ಪರವಾಗಿ ಮಾತಾಡಿಕೊಂಡರು.

೮–೧೦. "ನಾನಾ ಪ್ರಕಾರವಾದ ಶಾಸ್ತ್ರಗಳನ್ನೂ, ಸ್ಮೃತಿಗಳನ್ನೂ, ಸಕಲ ಪುರಾಣಗಳನ್ನೂ ಸಾವಧಾನ ಮನಸ್ಸಿನಿಂದ ಓದಿ ಎಲ್ಲಿಯಾದರೂ ಒಂದೆಡೆಯಲ್ಲಿ ಇವನಿಗೆ ಶುದ್ಧಿಯು ವಿಹಿತವಾಗಿದೆಯೋ ಎಂದು ನೋಡಿರಿ. ಇಲ್ಲಿ ಇಲ್ಲದ ಶಾಸ್ತ್ರ, ಸ್ಮೃತಿ, ಪುರಾಣ, ವೇದಾಂತಗಳಿಲ್ಲ. ಸರ್ವಜ್ಞನಲ್ಲದ ಬ್ರಾಹ್ಮಣನೇ ಇಲ್ಲ.

೧೧. ಆದುದರಿಂದ ಶೀಘ್ರವಾಗಿ ಇವನಿಗೆ ಶುದ್ಧಿಯನ್ನೀಯುವ ವಿಧಿಯನ್ನು ಆಲೋಚಿಸಿರಿ. ಅದನ್ನು ಪ್ರಮಾಣವನ್ನಾಗಿರಿಸಿಕೊಂಡು ಇವನನ್ನು ಶುದ್ಧಿಗೊಳಿಸೋಣ.

೧೨–೧೩. ಅನಂತರ ಚಂಡಶರ್ಮನೆಂಬ ಒಬ್ಬ ಪ್ರಸಿದ್ಧ ಬ್ರಾಹ್ಮಣನು ಹೀಗೆಂದನು. ನಾನು ಸ್ಕಾಂದಪುರಾಣದಲ್ಲಿ ಪುರಶ್ಚರಣಸಪ್ತಮೀ ವಿಧಿಯನ್ನು ಓದಿರುವೆನು. ಇದರಿಂದ ಮಾಡಿದ ಪಾಪವು ಪರಿಹಾರವಾಗುವುದು.

೧೪. ಅದನ್ನು ಅನುಷ್ಠಾನ ಮಾಡುವುದರಿಂದ ನಿಶ್ಚಯವಾಗಿಯೂ ಪಾಪವು ಪರಿಹಾರವಾಗುವುದರಿಂದ ಆ ಪುರಶ್ಚರಣಸಪ್ತಮಿಯನ್ನು ಮಾಡಿರಿ.

ಅಪರಂ ಭೂಭುಜಾದೇಶಾನ್ಮಣಿಭದ್ರೋ ನಿಪಾತಿತಃ ।
ವಧಕೈಸ್ತಸ್ಯ ತತ್ಪಾಪಂ ಯದಿ ಪಾಪಂ ಪ್ರಜಾಯತೇ ॥ ೧೫ ॥
ರಾಜಾ ಭೂತ್ವಾ ನ ಯಃ ಸಮ್ಯಗ್ವಿಚಾರಯತಿ ವಾದಿನಂ ।
ತಸ್ಯ ತತ್ಪಾತಕಂ ಘೋರಂ ರಾಜ್ಞಶ್ಚೈವ ಪ್ರಜಾಯತೇ ॥ ೧೬ ॥
ತಥಾಽಸ್ಯ ಪತ್ನ್ಯಾಸ್ತತ್ಪಾಪಂ ಜಾನಂತ್ಯಾ ಯತ್ತಯೋದಿತಂ ।
ಪಿತ್ರಾ ಬ್ರಾಹ್ಮಣೈರ್ದತ್ತೋಽಯಂ ಪುರಾ ವಹ್ನಿಸನ್ನಿಧೌ ॥ ೧೭ ॥
ವಿಡಂಬಿತೇನ ಚಾಽನೇನ ಕೃತಪ್ರತಿಕೃತಂ ಕೃತಂ ।
ತಸ್ಮಾನ್ನ ಚಾಽಸ್ಯ ದೋಷಃ ಸ್ಯಾದ್ಯತಃ ಪ್ರೋಕ್ತಂ ಮುನೀಶ್ವರೈಃ ॥ ೧೮ ॥
ಕೃತೇ ಪ್ರತಿಕೃತಂ ಕುರ್ಯಾದ್ಧಿಂಸನೇ ಪ್ರತಿಹಿಂಸನಂ ।
ನ ತತ್ರ ಜಾಯತೇ ದೋಷೋ ಯೋ ದುಷ್ಟೇ ದುಷ್ಟಮಾಚರೇತ್ ॥ ೧೯ ॥

ಬ್ರಾಹ್ಮಣಾ ಊಚುಃ:—

ಯದ್ಯೇವಂ ವದ ವಿಪ್ರಾಽಸ್ಯ ಪುರಶ್ಚರಣ ಸಂಜ್ಞಿತಾಂ ।
ಸಪ್ತಮೀಮದ್ಯ ವಿಪ್ರೇಂದ್ರ ನರಾಕಸ್ಯ ವಿಶುದ್ಧಯೇ ॥ ೨೦ ॥

ಸೂತ ಉವಾಚ:—

ಅಥಾಽಸ್ಯ ಕಥಯಾಮಾಸ ಸಪ್ತಮೀಂ ತಾಂ ದ್ವಿಜೋತ್ತಮಾಃ ।
ಚಂಡಶರ್ಮಾಭಿಧಾನಸ್ತು ಕೃತ್ವಾ ತಸ್ಯೋಪರಿ ಕೃಪಾಂ ॥ ೨೧ ॥

---

೧೫–೧೬. ಮತ್ತು ರಾಜನು ಕಟುಕರಿಂದ ಮಣಿಭದ್ರನನ್ನು ಕೊಲ್ಲಿಸಿದನು. ಅದು ನಿಜವಾಗಿಯೂ ಪಾಪವಾದರೆ ದೊರೆಯಾಗಿ ವಾದಿಯನ್ನು ವಿಚಾರಿಸದಿರುವುದರಿಂದ ಅದು ಅವನಿಗೆ ಸಂಭವಿಸುವುದು.

೧೭. ಹಾಗೆಯೇ ಮಣಿಭದ್ರನ ಪತ್ನಿಯು ತಾನು ತಿಳಿದಿದ್ದರೂ ನನ್ನ ತಂದೆಯು ಹಿಂದೆ ಅಗ್ನಿಸಾಕ್ಷಿಯಾಗಿ ತನ್ನನ್ನು ಇವನಿಗೆ ವಿವಾಹ ಮಾಡಿಕೊಟ್ಟಿರುವನೆಂದು ಹೇಳಿರುವುದರಿಂದ ಆ ಪಾಪವು ಅವಳಿಗೂ ಸಲ್ಲುವುದು.

೧೮–೧೯. ಮುನೀಶ್ವರರು ಉಪಕಾರ ಮಾಡಿದವನಿಗೆ ಪ್ರತಿಯಾಗಿ ಉಪಕಾರ ಮಾಡಬೇಕೆಂದೂ, ಹಿಂಸಿಸಿದವನನ್ನು ಹಿಂಸೆಮಾಡಬೇಕೆಂದೂ, ದುಷ್ಟನಲ್ಲಿ ದುಷ್ಟತನ ಮಾಡಬೇಕೆಂದೂ ವಿಧಿಸಿ ಹಾಗೆ ಮಾಡಿದವನಿಗೆ ದೋಷವಿಲ್ಲವೆಂದು ಹೇಳಿರುವುದರಿಂದ ಮಣಿಭದ್ರನಿಂದ ಶಿಕ್ಷಿತನಾದ ಇವನು ಪ್ರತಿಯಾಗಿ ಮಾಡಿರುವ ಕಾರಣ ಇವನಿಗೆ ದೋಷವಿಲ್ಲ.

೨೦. ಬ್ರಾಹ್ಮಣರು ಹೇಳುತ್ತಾರೆ:—ಬ್ರಾಹ್ಮಣೋತ್ತಮನೆ! ಹೀಗಾದರೆ ಇವನ ಶುದ್ಧಿಗಾಗಿ ಪುರಶ್ಚರಣಸಪ್ತಮೀವ್ರತವನ್ನು ಹೇಳು.

೨೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಅನಂತರ ಚಂಡಶರ್ಮನು ಅವನಲ್ಲಿ ದಯೆಮಾಡಿ ಪುರಶ್ಚರಣಸಪ್ತಮೀವ್ರತವನ್ನು ಹೇಳಿದನು.

ತೇನಾಽಪಿ ವಿಹಿತಾ ಸಮ್ಯಗ್ಯಥಾ ತಸ್ಯ ಮುಖಾಚ್ಛ್ರುತಾ ।
ತತಃ ಸಂವತ್ಸರಸ್ಯಾಂತೇ ವಿಪಾಪ್ಮಾ ಸಮಪದ್ಯತ ॥ ೨೨ ॥

ಋಷಯ ಊಚುಃ:—

ಪುರಶ್ಚರಣಸಂಜ್ಞಾಂ ತು ಸಪ್ತಮೀಂ ವದ ಸೂತಜ ।
ವಿಧಿನಾ ಕೇನ ಕರ್ತವ್ಯಾ ಕಸ್ಮಿನ್‍ಕಾಲ ಉಪಸ್ಥಿತೇ ॥ ೨೩ ॥

ಸೂತ ಉವಾಚ:—

ಅಹಂ ವಃ ಕೀರ್ತಯಿಷ್ಯಾಮಿ ರೋಹಿತಾಶ್ವಸ್ಯ ಭೂಪತೇಃ ।
ಮಾರ್ಕಂಡೇನ ಪುರಾ ಪ್ರೋಕ್ತಾ ಪೃಚ್ಛ್ಯಮಾನೇನ ಭಕ್ತಿತಃ ॥ ೨೪ ॥
ಸಪ್ತಕಲ್ಪಸ್ಮರೋ ವಿಪ್ರಾ ಮಾರ್ಕಂಡಾಖ್ಯೋ ಮಹಾಮುನಿಃ ।
ರೋಹಿತಾಶ್ವೇನ ಪೃಷ್ಟಃ ಸ ಹರಿಶ್ಚಂದ್ರಾತ್ಮಜೇನ ಚ ॥ ೨೫ ॥

ರೋಹಿತಾಶ್ವ ಉವಾಚ:—

ಅಜ್ಞಾನಾಜ್ಜ್ಞಾನತೋ ವಾಽಪಿ ಯತ್ಪಾಪಂ ಕುರುತೇ ನರಃ ।
ಉಪಾಯಂ ತಸ್ಯ ನಾಶಾಯ ಕಿಂಚಿನ್ಮೇ ವದ ಸನ್ಮುನೇ ॥ ೨೬ ॥

ಮಾರ್ಕಂಡೇಯ ಉವಾಚ:—

ಮಾನಸಂ ವಾಚಿಕಂ ಚೈವ ಕಾಯಿಕಂ ಚ ತೃತೀಯಕಂ ।
ತ್ರಿವಿಧಂ ಪಾತಕಂ ಲೋಕೇ ನರಾಣಾಮಿಹ ಜಾಯತೇ ॥ ೨೭ ॥

---

೨೨. ಆ ಪುಷ್ಪನೂ ಚಂಡಶರ್ಮನು ಹೇಳಿದಂತೆ ಆ ವ್ರತವನ್ನು ಸರಿಯಾಗಿ ಮಾಡಿದನು. ಅವರಂತೆ ಒಂದು ವರ್ಷದ ಕೊನೆಯಲ್ಲಿ ಪಾಪರಹಿತನಾದನು.

೨೩. ಋಷಿಗಳು ಹೇಳುತ್ತಾರೆ:—ಸೂತ! ಆ ಪುರಶ್ಚರಣಸಪ್ತಮೀವ್ರತವನ್ನು ಯಾವ ಕ್ರಮದಿಂದ ಯಾವಾಗ ಮಾಡಬೇಕು ಹೇಳು.

೨೪. ಸೂತನು ಹೇಳುತ್ತಾನೆ:—ಈ ವ್ರತವನ್ನು ಹಿಂದೆ ಮಾರ್ಕಂಡೇಯನು ಭಕ್ತಿಯಿಂದ ಕೇಳುತ್ತಿರುವ ರೋಹಿತಾಶ್ವನಿಗೆ ಹೇಳಿರುವನು. ಅದನ್ನು ನಿಮಗೆ ಹೇಳುವೆನು.

೨೫. ಸಪ್ತಕಲ್ಪವನ್ನು ಸ್ಮರಿಸಿ ತಿಳಿಯುವ ಮಾರ್ಕಂಡೇಯ ಮಹಾಮುನಿಯನ್ನು ಹರಿಶ್ಚಂದ್ರನ ಮಗನಾದ ರೋಹಿತಾಶ್ವನು ಹೀಗೆ ಪ್ರಶ್ನೆಮಾಡಿದನು.

೨೬. ರೋಹಿತಾಶ್ವನು ಹೇಳುತ್ತಾನೆ:—ಮುನಿಯೆ! ಮನುಷ್ಯನು ಅಜ್ಞಾನದಿಂದಾಗಲಿ, ಜ್ಞಾನದಿಂದಾಗಲಿ ಮಾಡಿದ ಪಾಪದ ಪರಿಹಾರಕ್ಕೆ ಒಂದುಪಾಯವನ್ನು ಹೇಳು.

೨೭. ಮಾರ್ಕಂಡೇಯನು ಹೇಳುತ್ತಾನೆ:—ಈ ಲೋಕದಲ್ಲಿ ಮನುಷ್ಯರಿಗೆ ಮಾನಸ, ವಾಚಿಕ, ಕಾಯಕವೆಂಬ ತ್ರಿವಿಧವಾದ ಪಾಪಗಳು ಸಂಭವಿಸುವುವು.

ತತ್ರೋಪಾಯಾ ನಿಪಾಪಾಯ ತಸ್ಯ ಸಂಪರಿಕೀರ್ತಿತಾಃ ।
ತಾನಹಂ ತೇ ಪ್ರವಕ್ಷ್ಯಾಮಿ ಶೃಣುಷ್ವ ನೃಪಸತ್ತಮ ॥ ೨೮ ॥
ಮಾನಸಂ ಚೈವ ಯತ್ಪಾಪಂ ನರಾಣಾಮಿಹ ಜಾಯತೇ ।
ಪಶ್ಚಾತ್ತಾಪೇ ಕೃತೇ ತಸ್ಯ ತತ್ಕ್ಷಣಾದೇವ ನಶ್ಯತಿ ॥ ೨೯ ॥
ವಾಚಿಕಂ ಚೈವ ಯತ್ಪಾಪಂ ನಾಽಭುಕ್ತ್ವಾ ತತ್ಪ್ರಣಶ್ಯತಿ ।
ಪುರಶ್ಚರಣಬಾಹ್ಯಂ ತು ಸತ್ಯಮೇತನ್ಮಯೋದಿತಂ ॥ ೩೦ ॥
ನಿವೇದ್ಯ ಬ್ರಾಹ್ಮಣೇಂದ್ರಾಣಾಂ ತದುಕ್ತಂ ಚ ಸಮಾಚರೇತ್ ।
ಪ್ರಾಯಶ್ಚಿತ್ತಂ ಯಥೋಕ್ತಂ ತು ತತಃ ಶುದ್ಧಿಮವಾಪ್ನುಯಾತ್ ॥ ೩೧ ॥
ಅಥವಾ ಪಾರ್ಥಿವೋ ಜ್ಞಾತ್ವಾ ಕುರುತೇ ತಸ್ಯ ನಿಗ್ರಹಂ ।
ತೇನ ಶುದ್ಧಿಮವಾಪ್ನೋತಿ ಯದ್ಯಪಿ ಸ್ಯಾತ್ಸ ಕಿಲ್ಬಿಷೀ ॥ ೩೨ ॥
ಲಜ್ಜಯಾ ಬ್ರಾಹ್ಮಣೇಂದ್ರಾಣಾಂ ಯೋ ನ ಬ್ರೂತೇ ಕಥಂಚನ ।
ನ ಚ ರಾಜಾ ವಿಜಾನಾತಿ ಶರೀರಸ್ಥೇನ ಯೋ ಮ್ರಿಯೇತ್ ।
ತಸ್ಯ ನಿಗ್ರಹಕರ್ತಾ ಚ ಸ್ವಯಂ ವೈವಸ್ವತೋ ಯಮಃ ॥ ೩೩ ॥
ತಸ್ಮಾತ್ಸರ್ವಪ್ರಯತ್ನೇನ ಕೃತ್ವಾ ಪಾಪಂ ವಿಜಾನತಾ ।
ಪ್ರಾಯಶ್ಚಿತ್ತಂ ತು ಕರ್ತವ್ಯಂ ಯಥೋಕ್ತಂ ಬ್ರಾಹ್ಮಣೋದಿತಂ ॥ ೩೪ ॥

---

೨೮. ಅರಸ! ಅವರ ಪರಿಹಾರಕ್ಕೆ ಉಪಾಯಗಳನ್ನು ಹೇಳಿರುತ್ತಾರೆ. ಅವುಗಳನ್ನು ನಿನಗೆ ಹೇಳುತ್ತೇನೆ, ಕೇಳು.

೨೯. ಮನುಷ್ಯರಿಗೆ ಸಂಭವಿಸಿದ ಮಾನಸ ಪಾಪವು ಪಶ್ಚಾತ್ತಾಪದಿಂದ ಕೂಡಲೆ ಪರಿಹಾರವಾಗುವುದು.

೩೦. ವಾಚಿಕ ಪಾಪವು ಪುರಶ್ಚರಣದಿಂದಲೂ ಪರಿಹಾರವಾಗುವುದಿಲ್ಲ. ಅದನ್ನು ಅನುಭವಿಸಿಯೇ ನಿವಾರಿಸಿಕೊಳ್ಳಬೇಕು. ನಾನು ಹೇಳಿರುವುದು ನಿಜ.

೩೧. ಆ ಪಾಪವನ್ನು ಬ್ರಾಹ್ಮಣೋತ್ತಮರಿಗೆ ತಿಳಿಸಿ ಅವರು ಹೇಳಿದ ಪ್ರಾಯಶ್ಚಿತ್ತವನ್ನಾಚರಿಸಿದರೆ ಶುದ್ಧನಾಗುವನು.

೩೨. ಅವನು ಪಾಪಿಯಾಗಿದ್ದರೂ ರಾಜನು ಅವನ ಪಾಪವನ್ನರಿತು ಶಿಕ್ಷಿಸಿದರೂ ಶುದ್ಧನಾಗುವನು.

೩೩. ಪಾಪಿಯು ನಾಚಿಕೆಯಿಂದ ಬ್ರಾಹ್ಮಣರಿಗೆ ಹೇಳದೆ, ರಾಜನೂ ಅದನ್ನರಿಯದೆ ಹಾಗೆಯೇ ಮೃತನಾದರೆ ಯಮನು ಅವನನ್ನು ಶಿಕ್ಷಿಸುವನು.

೩೪. ಆದುದರಿಂದ ತಿಳಿವಳಿಕೆಯುಳ್ಳ ಪಾಪಿಯು ಬ್ರಾಹ್ಮಣರು ಹೇಳಿದಂತೆ ಪ್ರಾಯಶ್ಚಿತ್ತವನ್ನಾಚರಿಸಬೇಕು.

ರೋಹಿತಾಶ್ವ ಉವಾಚ :—
ಸರ್ವೇಷಾಮೇವ ಪಾಪಾನಾಂ ವಿಹಿತಾನಾಂ ಮುನೀಶ್ವರ ।
ಕಿಂಚಿದ್ವ್ರತಂ ಸಮಾಚಕ್ಷ್ವ ದಾನಂ ವಾ ಹೋಮಮೇವ ವಾ ।
ವಿಪಾಪ್ಮಾ ಜಾಯತೇ ಯೇನ ಪುರಶ್ಚರಣವರ್ಜಿತಂ ॥ ೩೫ ॥
ನಿತ್ಯಂ ಪಾಪಾನಿ ಕುರುತೇ ನರಃ ಸೂಕ್ಷ್ಮಾಣಿ ಸರ್ವತಃ ।
ಪ್ರಾಯಶ್ಚಿತ್ತಾನಿ ಸರ್ವೇಷಾಂ ಕರ್ತುಂ ಶಕ್ತಿಃ ಕಥಂ ಭವೇತ್ ॥ ೩೬ ॥
ಮಾರ್ಕಂಡೇಯ ಉವಾಚ :—
ಅಸ್ತಿ ರಾಜನ್ ವ್ರತಂ ಪುಣ್ಯಂ ಪುರಶ್ಚರಣಸಂಜ್ಞಿತಂ ।
ಪುರಶ್ಚರಣಸಂಜ್ಞಾ ತು ಸಪ್ತಮೀ ಸೂರ್ಯವಲ್ಲಭಾ ॥ ೩೭ ॥
ಯಯಾ ಸಂಚೀರ್ಣಯಾ ರಾಜನ್ ಕಾಯಸ್ಥೋ ಯಮ ಸಂಭವಃ ।
ವಿಚಿತ್ರೋ ಮಾರ್ಜಯೇತ್ಪಾಪಂ ಕೃತಂ ಜನ್ಮನಿ ಸಂಚಿತಂ ॥ ೩೮ ॥
ತಸ್ಮಾತ್ಕುರು ಮಹಾರಾಜ ತಥಾಽಽಶು ವಚನಂ ಮಮ ।
ಯೇನ ವಾ ಮುಚ್ಯತೇ ಪಾಪಾತ್ಸರ್ವಸ್ಮಾತ್ಕಾಯಸಂಭವಾತ್ ॥ ೩೯ ॥
ರೋಹಿತಾಶ್ವ ಉವಾಚ :—
ಪುರಶ್ಚರಣಸಂಜ್ಞಾ ತು ಸಪ್ತಮೀ ಮುನಿಸತ್ತಮ ।
ವಿಧಿನಾ ಕೇನ ಕರ್ತವ್ಯಾ ಕಸ್ಮಿನ್‌ಕಾಲೇ ವದಸ್ವ ಮೇ ॥ ೪೦ ॥

---

೩೫. ರೋಹಿತಾಶ್ವನು ಹೇಳುತ್ತಾನೆ:—ಮುನಿವರ್ಯನೆ! ಮಾಡಿದ ಸಕಲ ಪಾಪಗಳನ್ನು ನೀಗಿಸುವ ಪುರಶ್ಚರಣಕ್ಕಿಂತ ಬೇರೆಯಾದ ದಾನ ಹೋಮಗಳಲ್ಲಿ ಯಾವುದಾದರೊಂದು ವ್ರತವನ್ನು ಹೇಳು.

೩೬. ಮನುಷ್ಯನು ಪ್ರತಿದಿನವೂ ಸೂಕ್ಷ್ಮವಾದ ಪಾಪಗಳನ್ನು ಮಾಡುವನು. ಅವುಗಳಿಗೆಲ್ಲ ಪ್ರಾಯಶ್ಚಿತ್ತಗಳನ್ನು ಮಾಡಲು ಹೇಗೆ ಸಾಧ್ಯ?

೩೭. ಮಾರ್ಕಂಡೇಯನು ಹೇಳುತ್ತಾನೆ:—ದೊರೆಯೆ! ಸೂರ್ಯನಿಗೆ ಪ್ರಿಯವಾದ ಪುರಶ್ಚರಣಸಪ್ತಮೀ ಎಂಬ ಪವಿತ್ರವಾದ ಒಂದು ವ್ರತವಿರುವುದು.

೩೮. ಇದನ್ನು ಮಾಡುವುದರಿಂದ ಯಮನ ಲೇಖಕನಾದ ವಿಚಿತ್ರನು ಒಂದು ಜನ್ಮದಲ್ಲಿ ಸಗಿದ ಪಾಪವನ್ನು ನೀಗಿಸುವನು.

೩೯. ಮಹಾರಾಜ! ಆದುದರಿಂದ ಶೀಘ್ರವಾಗಿ ನನ್ನ ಮಾತನ್ನು ನಡೆಸು. ಆ ಮೂಲಕವಾಗಿ ದೇಹದಿಂದುಂಟಾದ ಸಕಲ ಪಾಪಗಳಿಂದಲೂ ಮುಕ್ತನಾಗುವೆ.

೪೦. ರೋಹಿತಾಶ್ವನು ಹೇಳುತ್ತಾನೆ:—ಮುನಿವರ್ಯನೆ! ಪುರಶ್ಚರಣ ಸಪ್ತಮೀವ್ರತವನ್ನು ಯಾವಾಗ ಯಾವ ಕ್ರಮದಿಂದ ಆಚರಿಸಬೇಕು. ಅದನ್ನು ನನಗೆ ಹೇಳು.

ಮಾರ್ಕಂಡೇಯ ಉವಾಚ :—

ಮಾಘಮಾಸೇ ಸಿತೇ ಪಕ್ಷೇ ಮಕರಸ್ಥೇ ದಿವಾಕರೇ ।
ಸೂರ್ಯವಾರೇಣ ಸಪ್ತಮ್ಯಾಂ ವ್ರತಮೇತತ್ಸಮಾಚರೇತ್ ॥ ೪೧ ॥
ಪಾಖಂಡೈಃ ಪತಿತೈಃ ಸಾರ್ಧಂ ತಸ್ಮಿನ್ನಹನಿ ನಾಲಪೇತ್ ।
ಭಕ್ಷಯಿತ್ವಾ ನೃಪಶ್ರೇಷ್ಠ ಪ್ರಭಾತೇ ದಂತಧಾವನಂ ।
ಮಂತ್ರೇಣಾನೇನ ಪಶ್ಚಾಚ್ಚ ಕರ್ತವ್ಯೋ ನಿಯಮೋ ನೃಪ ॥ ೪೨ ॥
ಪುರಶ್ಚರಣಕೃತ್ಯಾಯಾಂ ಸಪ್ತಮ್ಯಾಂ ದಿವಸಾಧಿಪ ।
ಉಪವಾಸಂ ಕರಿಷ್ಯಾಮಿ ಅದ್ಯ ತ್ವಂ ಶರಣಂ ಮಮ ॥ ೪೩ ॥
ತತೋಽಪರಾಹ್ನಸಮಯೇ ಸ್ನಾತ್ವಾ ಧೌತಾಂಬರಃ ಶುಚಿಃ ।
ಪ್ರತಿಮಾಂ ಪೂಜಯೇದ್ಭಕ್ತ್ಯಾ ದಿನಾಧಿಪಸಮುದ್ಭವಾಂ ॥ ೪೪ ॥
ರಕ್ತೈಃ ಪುಷ್ಪೈರ್ಮಹಾವೀರ ಪಾದಾದ್ಯಂ ಪೂಜಯೇತ್ತತಃ ।
ಪತಂಗಾಯ ನಮಃ ಪಾದೌ ಮಾರ್ತಂಡಾಯೇತಿ ಜಾನುನೀ ॥ ೪೫ ॥
ಗುಹ್ಯಂ ದಿವಸನಾಥಾಯ ನಾಭಿಂ ದ್ವಾದಶಮೂರ್ತಯೇ ।
ಬಾಹೂ ಚ ಪದ್ಮಹಸ್ತಾಯ ಹೃದಯಂ ತೀಕ್ಷ್ಣದೀಧಿತೇ ॥ ೪೬ ॥

---

೪೧. ಮಾರ್ಕಂಡೇಯನು ಹೇಳುತ್ತಾನೆ :—ಸೂರ್ಯನು ಮಕರರಾಶಿಯಲ್ಲಿರುವಾಗ ಮಾಘ ಶುದ್ಧ ಶುಕ್ಲಪಕ್ಷದ ಸಪ್ತಮೀ ಭಾನುವಾರದ ದಿನ ಈ ವ್ರತವನ್ನಾಚರಿಸಬೇಕು.

೪೨. ಆ ದಿನ ಪಾಷಂಡರೊಡನೆಯೂ ಪತಿತರೊಡನೆಯೂ ಮಾತಾಡಬಾರದು. ಬೆಳಗ್ಗೆ ದಂತಧಾವನ ಮಾಡಿಕೊಂಡು ಅನಂತರ ಈ ಮಂತ್ರದಿಂದ ವ್ರತವನ್ನುಪಕ್ರಮ ಮಾಡಬೇಕು.

೪೩. "ಭಾಸ್ಕರ! ಈ ದಿನ ಪುರಶ್ಚರಣಸಪ್ತಮೀವ್ರತದಲ್ಲಿ ನಾನು ಉಪವಾಸವನ್ನು ಮಾಡುವೆನು. ನೀನೇ ನನಗೆ ರಕ್ಷಕನು.''

೪೪. ಅನಂತರ ಅಪರಾಹ್ಣ ಸಮಯದಲ್ಲಿ ಮಿಂದು ಶುದ್ಧವಸ್ತ್ರವನ್ನುಟ್ಟು ಸೂರ್ಯನ ಪ್ರತಿಮೆಯನ್ನರ್ಚಿಸಬೇಕು.

೪೫–೪೭. ಕೆಂಪು ಹೂವುಗಳಿಂದ ಪಾದಾದಿ ಪೂಜೆಯನ್ನು ಹೀಗೆ ಮಾಡಬೇಕು. ಪತಂಗಾಯ ನಮಃ ಎಂದು ಪಾದಗಳನ್ನೂ, ಮಾರ್ತಂಡಾಯ ನಮಃ ಎಂದು ಮೊಣಕಾಲುಗಳನ್ನೂ, ದಿವಸನಾಥಾಯ ನಮಃ ಎಂದು ಗುಹ್ಯವನ್ನೂ, ದ್ವಾದಶಮೂರ್ತಯೇ ನಮಃ ಎಂದು ನಾಭಿಯನ್ನೂ, ಪದ್ಮಹಸ್ತಾಯ ನಮಃ ಎಂದು ತೋಳುಗಳನ್ನೂ, ತೀಕ್ಷ್ಣದೀಧಿತಯೇ ನಮಃ ಎಂದು ಹೃದಯವನ್ನೂ, ಪದ್ಮದಳಾಭಾಯ ನಮಃ ಎಂದು ಕಂಠವನ್ನೂ, ತೇಜೋಮಯಾಯ

ಕಂಠಂ ಪದ್ಮದಲಾಭಾಯ ಶಿರಸ್ತೇಜೋ ಮಯಾಯ ಚ ।
ಏವಂ ಸಂಪೂಜ್ಯವಿಧಿವದ್ಧೂಪಂ ಕರ್ಪೂರಮಾದದೇತ್ ॥ ೪೭ ॥
ಗುಡೌದನಂ ಚ ನೈವೇದ್ಯಂ ರಕ್ತವಸ್ತ್ರಾಽಭಿವೇಷ್ಟಿತಂ ।
ರಕ್ತಸೂತ್ರೇಣ ದೀಪಂ ಚ ತಥೈವಾರಾರ್ತಿಕಂ ನೃಪ ॥ ೪೮ ॥
ಶಂಖೇ ತೋಯಂ ಸಮಾದಾಯ ರಕ್ತಚಂದನಮಿಶ್ರಿತಂ ।
ಸಫಲಂ ಚ ತತಃ ಕೃತ್ವಾ ಅರ್ಘ್ಯಂ ದದ್ಯಾತ್ತತಃ ಪರಂ ॥ ೪೯ ॥
ಕುಕೃತಂ ಯತ್ಕೃತಂ ಕಿಂಚಿದಜ್ಞಾನಾಜ್ಞಾನತೋಽಪಿ ವಾ ।
ಪ್ರಾಯಶ್ಚಿತ್ತಂ ಕೃತಂ ದೇವ ಮಮಾಽರ್ಘ್ಯಶ್ಚ ಪ್ರಗೃಹ್ಯತಾಂ ॥ ೫೦ ॥
ತತಃ ಸಂಪೂಜಯೇದ್ವಿಪ್ರಂ ಗಂಧಪುಷ್ಪಾನುಲೇಪನೈಃ ।
ದತ್ವಾತು ಭೋಜನಂ ತಸ್ಮೈ ದಕ್ಷಿಣಾಂ ಚ ಸ್ವಶಕ್ತಿತಃ ।
ಪ್ರಾಶನಂ ಕಾಯಶುದ್ಧ್ಯರ್ಥಂ ಪಂಚಗವ್ಯಸ್ಯ ಚಾಚರೇತ್ ॥ ೫೧ ॥
ಕೃತಾಂಜಲಿಪುಟೋ ಭೂತ್ವಾ ಸಮುದ್ವೀಕ್ಷ್ಯ ದಿವಾಕರಂ ।
ದಿವಾಕರಂ ಗತಶ್ಚೈವ ಮಂತ್ರಮೇತಂ ಸಮುಚ್ಚರೇತ್ ॥ ೫೨ ॥
ಇದಂ ವ್ರತಂ ಮಯಾ ದೇವ ಗೃಹೀತಂ ಪುರತಸ್ತವ ।
ಅವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ತವ ಭಾಸ್ಕರ ॥ ೫೩ ॥

---

ನಮಃ ಎಂದು ಶಿರಸ್ಸನ್ನೂ ಪೂಜಿಸಿ ಧೂಪವನ್ನೂ, ಕರ್ಪೂರಾರತಿಯನ್ನೂ ಮಾಡಬೇಕು.

೪೮. ಕೆಂಪು ವಸ್ತ್ರದಲ್ಲಿ ಗುಡಾನ್ನವನ್ನು ಬಡಿಸಿ ನೈವೇದ್ಯವನ್ನೂ, ಕೆಂಪು ನೂಲುಗಳಿಂದ ದೀಪ, ಆರತಿಗಳನ್ನೂ ಅರ್ಪಿಸಬೇಕು.

೪೯. ತರುವಾಯ ಶಂಖದಲ್ಲಿ ಕೆಂಪು ಚಂದನದಿಂದ ಕೂಡಿದ ನೀರನ್ನು ಹಾಕಿಕೊಂಡು ಫಲಸಹಿತವಾಗಿ ಅರ್ಘ್ಯವನ್ನು ಕೊಡಬೇಕು.

೫೦. ಸ್ವಾಮಿ! ನಾನು ಅಜ್ಞಾನದಿಂದಲೋ, ಜ್ಞಾನದಿಂದಲೋ ಮಾಡಿದ ದುಷ್ಕಾರ್ಯಕ್ಕೆ ಪ್ರಾಯಶ್ಚಿತ್ತವನ್ನು ಆಚರಿಸುವೆನು. ನನ್ನ ಅರ್ಘ್ಯವನ್ನು ಸ್ವೀಕರಿಸು.

೫೧. ಬಳಿಕ ಬ್ರಾಹ್ಮಣನನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ ಭೋಜನವನ್ನು ಮಾಡಿಸಿ ಶಕ್ತ್ಯನುಸಾರ ದಕ್ಷಿಣೆಯನ್ನು ಕೊಡಬೇಕು. ಕಾಯಶುದ್ಧಿಗಾಗಿ ಪಂಚಗವ್ಯ ಪ್ರಾಶನ ಮಾಡಬೇಕು.

೫೨. ಕೈಮುಗಿದುಕೊಂಡು ಸೂರ್ಯನನ್ನು ನೋಡಿ ಈ ಮಂತ್ರವನ್ನುಚ್ಚರಿಸಬೇಕು.

೫೩. ಸ್ವಾಮಿ! ನಾನು ನಿನ್ನ ಮುಂದೆ ಈ ವ್ರತವನ್ನು ಹಿಡಿದಿರುವೆನು. ನಿನ್ನ ಅನುಗ್ರಹದಿಂದ ಅಡ್ಡಿಯಿಲ್ಲದೆ ಇದು ಸಿದ್ಧಿಯಾಗಲಿ.

**ತತಶ್ಚ ಫಾಲ್ಗುನೇ ಮಾಸಿ ಸಂಪ್ರಾಪ್ತೇ ಮುನಿಸತ್ತಮ ।**
**ಕುಂದೇನ ಪೂಜಯೇದ್ದೇವಂ ತೇನೈವ ವಿಧಿನಾ ತತಃ ॥ ೫೪ ॥**
**ಧೂಪಂ ಚ ಗುಗ್ಗುಲಂ ದದ್ಯಾನ್ನೈವೇದ್ಯಂ ಭಕ್ತಮೇವ ಚ ।**
**ಪ್ರಾಶನಂ ಗೋಮಯಂ ಪ್ರೋಕ್ತಂ ಸರ್ವಪಾಪವಿಶುದ್ಧಯೇ ॥ ೫೫ ॥**
**ಚೈತ್ರೇ ಮಾಸಿ ತು ಸಂಪ್ರಾಪ್ತೇ ಸುರಭ್ಯಾ ಪೂಜಯೇದ್ಧರಿಂ ।**
**ನೈವೇದ್ಯಂ ಗುಣಿಕಾಃ ಪ್ರೋಕ್ತಾ ಧೂಪಂ ಸರ್ಜರಸೋದ್ಭವಂ ॥ ೫೬ ॥**
**ಕುಶೋದಕಂ ಚ ಸಂಪ್ರಾಶ್ಯ ಕಾಯಶುದ್ಧಿಮವಾಪ್ನುಯಾತ್ ।**
**ವೈಶಾಖೇ ಕಿಂಶುಕೈಃ ಪೂಜಾಂ ಯಥಾವಚ್ಚ ಘೃತಾಽಶನೈಃ ॥ ೫೭ ॥**
**ನೈವೇದ್ಯಂ ಚ ಸುರಾಮಾಂಸಂ ಧೂಪಂ ಚ ವಿನಿವೇದಯೇತ್ ।**
**ದಧಿಪ್ರಾಶನಮೇವಾಽತ್ರ ಕರ್ತವ್ಯಂ ಕಾಯಶುದ್ಧಯೇ ॥ ೫೮ ॥**
**ಪುಷ್ಪಪಾಟಲಯಾ ಪೂಜಾ ವಿಧಾತವ್ಯಾರವೇರ್ನೃಪ ।**
**ನೈವೇದ್ಯೇ ಸಕ್ತವಃ ಪ್ರೋಕ್ತಾಃ ಪ್ರಾಶನಂ ಚ ಘೃತಂ ಸ್ಮೃತಂ ॥ ೫೯ ॥**
**ಕಪಿಲಾಯಾ ಮಹಾವೀರ ಸರ್ವಪಾಪ ವಿಶುದ್ಧಯೇ ।**
**ಆಷಾಢೇ ಮುನಿಪುಷ್ಪೈಶ್ಚ ಪೂಜಯೇದ್ಭಾಸ್ಕರಂ ನೃಪ ॥ ೬೦ ॥**
**ನೈವೇದ್ಯೇ ಘಾರಿಕಾ ಪ್ರೋಕ್ತಾ ಪ್ರಾಶನಂ ಮಧುಸರ್ಪಿಷೋಃ ।**
**ಧೂಪಂ ಚೈವಾಽಗರುಂ ದದ್ಯಾತ್ಪರಯಾ ಶ್ರದ್ಧಯಾ ಯುತಃ ॥ ೬೧ ॥**

---

೫೪. ಅನಂತರ ಫಾಲ್ಗುನ ಮಾಸ ಬರಲು ಕುಂದಪುಷ್ಪದಿಂದ ಹಿಂದೆ ಹೇಳಿದ ಕ್ರಮದಿಂದ ಸೂರ್ಯನನ್ನು ಆರಾಧಿಸಬೇಕು.

೫೫. ಗುಗ್ಗುಲು ಧೂಪವನ್ನೂ, ಅನ್ನ ನೈವೇದ್ಯವನ್ನೂ ಅರ್ಪಿಸಿ ಸಕಲ ಪಾಪಶುದ್ಧಿಗಾಗಿ ಗೋಮಯವನ್ನು ಪ್ರಾಶನ ಮಾಡಬೇಕು.

೫೬. ಚೈತ್ರ ಮಾಸ ಬರಲು ಸೂರ್ಯನನ್ನು ಸುರಭಿಪುಷ್ಪದಿಂದ ಪೂಜಿಸಿ ಗುಣಿಕಾನೈವೇದ್ಯವನ್ನೂ, ಸರ್ಜರಸದ ಧೂಪವನ್ನೂ ಅರ್ಪಿಸಬೇಕು.

೫೭–೫೮. ಕುಶೋದಕವನ್ನು ಪ್ರಾಶನ ಮಾಡಿ ಕಾಯಶುದ್ಧಿಯನ್ನು ಹೊಂದಬೇಕು. ವೈಶಾಖ ಮಾಸದಲ್ಲಿ ಘೃತಪ್ರಾಶನ ಮಾಡುತ್ತ ಕಿಂಶುಕ ಪುಷ್ಪಗಳಿಂದ ಅರ್ಚಿಸಬೇಕು. ಮದ್ಯಮಾಂಸವನ್ನು ನೈವೇದ್ಯಮಾಡಿ ಧೂಪವನ್ನರ್ಪಿಸಬೇಕು. ದೇಹಶುದ್ಧಿಗಾಗಿ ದಧಿಪ್ರಾಶನ ಮಾಡಬೇಕು.

೫೯–೬೦. ಜ್ಯೇಷ್ಠ ಮಾಸದಲ್ಲಿ ಸೂರ್ಯನನ್ನು ಪಾಟಲಪುಷ್ಪದಿಂದರ್ಚಿಸಿ ಹಿಟ್ಟನ್ನು ನೈವೇದ್ಯಮಾಡಿ ಸಕಲ ಪಾಪದ ಶುದ್ಧಿಗಾಗಿ ಕಪಿಲಗೋವಿನ ಘೃತವನ್ನು ಪ್ರಾಶನ ಮಾಡಬೇಕು. ಆಷಾಢ ಮಾಸದಲ್ಲಿ ಸೂರ್ಯನನ್ನು ಅಗಸ್ತ್ಯಪುಷ್ಪದಿಂದ ಆರಾಧಿಸಬೇಕು.

೬೧. ಅತ್ಯಂತ ಶ್ರದ್ಧೆಯಿಂದ ಅಗುರು ಧೂಪವನ್ನರ್ಪಿಸಿ ಗಾರಿಗೆಯನ್ನು ನಿವೇದಿಸಿ ಜೇನು ಮತ್ತು ತುಪ್ಪಗಳನ್ನು ಪ್ರಾಶನ ಮಾಡಬೇಕು.

**ಶ್ರಾವಣೇ ತು ಕದಂಬೇನ ಪೂಜನಂ ತೀಕ್ಷ್ಣದೀಧಿತೇಃ ।**
**ನೈವೇದ್ಯೇ ಮೋದಕಾಶ್ಚೈವ ತಗರಂಧೂಪಮಾದದೇತ್ ॥ ೬೨ ॥**
**ಗೋಶೃಂಗೋದಕಮಾದಾಯ ಸದ್ಯಃ ಪಾಪಾತ್ಪ್ರಮುಚ್ಯತೇ ।**
**ಜಾತ್ಯಾ ಭಾದ್ರಪದೇ ಪೂಜಾ ಕ್ಷೀರಂ ನೈವೇದ್ಯಮಾದದೇತ್ ॥ ೬೩ ॥**
**ಧೂಪಂ ನಖಸಮುದ್ಭೂತಂ ಪ್ರಾಶನಂ ಕ್ಷೀರಮೇವ ಚ ।**
**ಆಶ್ವಿನೇ ಕಮಲೈಃ ಪೂಜಾ ನೈವೇದ್ಯೇ ಘೃತಪೂರಿಕಾ ॥ ೬೪ ॥**
**ಧೂಪಂ ಕುಂಕುಮಜಂ ಪ್ರೋಕ್ತಂ ಕರ್ಪೂರಪ್ರಾಶನಂ ಸ್ಮೃತಂ ॥ ೬೫ ॥**
**ತುಲಸ್ಯಾ ಕಾರ್ತಿಕೇ ಪೂಜಾ ಭಾಸ್ಕರಸ್ಯ ಪ್ರಕೀರ್ತಿತಾ ।**
**ನೈವೇದ್ಯೇಚೈವ ಖಂಡಾಖ್ಯಂ ಧೂಪಂ ಕೌಸುಂಭಿಕಂ ನೃಪ ॥ ೬೬ ॥**
**ಪ್ರಾಶನಂ ಚ ಲವಂಗಾಖ್ಯಂ ಸರ್ವಪಾಪ ವಿಶೋಧನಂ ।**
**ಭೃಂಗರಾಜೇನ ಪೂಜಾ ಚ ಸೌಮ್ಯೇ ಮಾಸಿ ಸಮಾಚರೇತ್ ॥ ೬೭ ॥**
**ನೈವೇದ್ಯೇ ಫೇಣಿಕಾ ದೇಯಾ ಧೂಪಂ ಗುಡಸಮುದ್ಭವಂ ।**
**ಕಂಕೋಲಪ್ರಾಶನಂ ಚೈವ ಭಾಸ್ಕರಸ್ಯ ಪ್ರತುಷ್ಟಯೇ ॥ ೬೮ ॥**
**ಶತಪತ್ರಿಕಯಾ ಪೂಜಾ ಪೌಷೇ ಮಾಸಿ ರವೇಃ ಸ್ಮೃತಾ ।**
**ಸಹಜಂ ಧೂಪಮಾದಿಷ್ಟಂ ನೈವೇದ್ಯೇ ಶಷ್ಕುಲೀ ತಥಾ ॥ ೬೯ ॥**

---

೬೨. ಶ್ರಾವಣ ಮಾಸದಲ್ಲಿ ಸೂರ್ಯನನ್ನು ಕದಂಬ ಕುಸುಮದಿಂದ ಅರ್ಚಿಸಿ ಮೋದಕಗಳನ್ನು ನಿವೇದಿಸಿ ತಗರ ಧೂಪವನ್ನರ್ಪಿಸಬೇಕು.

೬೩. ಅನಂತರ ಗೋಶೃಂಗೋದಕವನ್ನು ಪ್ರಾಶನ ಮಾಡಿದರೆ ಪಾಪಮುಕ್ತನಾಗುವನು. ಭಾದ್ರಪದ ಮಾಸದಲ್ಲಿ ಜಾಜಿ ಹೂವಿನಿಂದ ಪೂಜಿಸಿ ಕ್ಷೀರವನ್ನು ನಿವೇದನ ಮಾಡಬೇಕು.

೬೪. ಉಗುರಿನ ಧೂಪ ಹಾಕಿ ಹಾಲನ್ನು ಕುಡಿಯಬೇಕು. ಆಶ್ವಿನ ಮಾಸದಲ್ಲಿ ತಾವರೆ ಹೂವುಗಳಿಂದ ಪೂಜಿಸಿ ತುಪ್ಪದ ಪೂರಿಗಳನ್ನು ನಿವೇದಿಸಬೇಕು.

೬೫. ಕುಂಕುಮ ಧೂಪವನ್ನರ್ಪಿಸಿ ಕರ್ಪೂರವನ್ನು ಪ್ರಾಶನ ಮಾಡಬೇಕು.

೬೬. ಕಾರ್ತಿಕ ಮಾಸದಲ್ಲಿ ಸೂರ್ಯನನ್ನು ತುಳಸಿಯಿಂದ ಪೂಜಿಸಿ ಖಂಡ ಭಕ್ಷ್ಯವನ್ನು ನೈವೇದ್ಯಮಾಡಿ ಕೌಸುಂಭಿಕ ಧೂಪವನ್ನು ಸಮರ್ಪಿಸಬೇಕು.

೬೭. ಮತ್ತು ಲವಂಗ ಪ್ರಾಶನದಿಂದ ಸಕಲ ಪಾಪಗಳು ಪರಿಹಾರವಾಗುವುವು. ಮಾರ್ಗಶಿರ ಮಾಸದಲ್ಲಿ ಭೃಂಗರಾಜದಿಂದ ಪೂಜಿಸಬೇಕು.

೬೮. ಫೇಣಿಯನ್ನು ನಿವೇದಿಸಿ ಗುಡಧೂಪವನ್ನರ್ಪಿಸಬೇಕು. ಮತ್ತು ಸೂರ್ಯನ ಸಂತೋಷಕ್ಕಾಗಿ ಕಂಕೋಲವನ್ನು ಪ್ರಾಶನ ಮಾಡಬೇಕು.

೬೯. ಪುಷ್ಯ ಮಾಸದಲ್ಲಿ ತಾವರೆ ಹೂವುಗಳಿಂದ ಪೂಜೆಯೂ, ಸಹಜ ಧೂಪವೂ, ಚಕ್ಕುಲಿ ನೈವೇದ್ಯವೂ ವಿಹಿತವಾಗಿರುವುದು.

ಪ್ರಾಶನೇ ಪೂರ್ವಮುಕ್ತಾನಿ ಸರ್ವಾಣ್ಯೇವ ಸಮಾಚರೇತ್ ।
ಸಮಾಪ್ತೌ ಚ ತತೋ ದದ್ಯಾತ್ ಷಡ್ಭಾಗಂ ಗೃಹಸಂಭವಮ್ ॥ ೭೦ ॥
ಬ್ರಾಹ್ಮಣಾಯ ನೃಪಶ್ರೇಷ್ಠ ಸರ್ವಪಾಪ ವಿಶುದ್ಧಯೇ ।
ಇಷ್ಟಭೋಜ್ಯಂ ತತಃ ಕಾರ್ಯಂ ಸ್ವಶಕ್ತ್ಯಾ ಪಾರ್ಥಿವೋತ್ತಮ ॥ ೭೧ ॥
ಏವಂ ತು ಕುರುತೇ ಯೋಽತ್ರ ಸಪ್ತಮೀಂ ಭಾಸ್ಕರೋದ್ಭವಾಂ ।
ಸರ್ವಪಾಪವಿನಿರ್ಮುಕ್ತೋ ನಿರ್ಮಲತ್ವಂ ಸ ಗಚ್ಛತಿ ॥ ೭೨ ॥

ಬ್ರಾಹ್ಮಣಾ ಊಚುಃ :—

ಏವಂ ಪುರಾ ವೈ ಕಥಿತಾ ರೋಹಿತಾಶ್ವಾಯ ಧೀಮತೇ ।
ಮಾರ್ಕಂಡೇನ ಮಹಾಭಾಗ ತಸ್ಮಾತ್ತ್ವಮಪಿ ತಾಂ ಕುರು ॥ ೭೩ ॥
ಯೇನ ಸಂಜಾಯತೇ ಸಮ್ಯಕ್ಪುರಶ್ಚರಣಮೇವ ತೇ ॥ ೭೪ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಪುಷ್ಪೋಽಪಿ ದ್ವಿಜಸತ್ತಮಾಃ ।
ತಾಂ ಚಕ್ರೇ ಸಪ್ತಮೀಂ ಹೃಷ್ಟೋ ಯಥಾ ತೇನ ನಿವೇದಿತಾ ॥ ೭೫ ॥
ಷಡ್ಭಾಗಂ ಪ್ರದದೌ ತಸ್ಮೈ ಬ್ರಾಹ್ಮಣಾಯ ಮಹಾತ್ಮನೇ ।
ಸ್ವವಿತ್ತಸ್ಯ ಗೃಹಸ್ಥಸ್ಯ ಕುಪ್ಯಾಕುಪ್ಯಸ್ಯ ಕೃತ್ಸ್ನಶಃ ॥ ೭೬ ॥

---

೭೦. ಹಿಂದೆ ಹೇಳಿದ ಎಲ್ಲವನ್ನೂ ಪ್ರಾಶನ ಮಾಡಬೇಕು. ಸಮಾಪ್ತಿ ಕಾಲದಲ್ಲಿ ಮನೆಯಲ್ಲಿರುವ ವಸ್ತುಗಳ ಆರನೆ ಒಂದು ಭಾಗವನ್ನು ಸಮರ್ಪಿಸಬೇಕು.

೭೧. ಅರಸ! ಅನಂತರ ಸಕಲ ಪಾಪಗಳ ಶುದ್ಧಿಗಾಗಿ ಬ್ರಾಹ್ಮಣರಿಗೆ ಶಕ್ತ್ಯನುಸಾರ ಇಷ್ಟವಾದ ಭೋಜನ ಮಾಡಿಸಬೇಕು.

೭೨. ಹೀಗೆ ಸೂರ್ಯಸಪ್ತಮೀವ್ರತವನ್ನಾಚರಿಸಿದವನು ಸಕಲ ಪಾಪ ಮುಕ್ತನಾಗಿ ಶುದ್ಧನಾಗುವನು.

೭೩. ಬ್ರಾಹ್ಮಣರು ಹೇಳುತ್ತಾರೆ :—ಮಹಾತ್ಮನೆ! ಹಿಂದೆ ಮಾರ್ಕಂಡೇಯನು ಹೀಗೆ ರೋಹಿತಾಶ್ವನಿಗೆ ಹೇಳಿರುವನು. ಆದುದರಿಂದ ನೀನೂ ಆ ಸಪ್ತಮೀ ವ್ರತವನ್ನಾಚರಿಸು.

೭೪. ಇದರಿಂದ ನಿನಗೆ ಪುರಶ್ಚರಣವ್ರತವಾಗುವುದು.

೭೫. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ಪುಷ್ಪನೂ ಅವನ ಆ ಮಾತನ್ನು ಕೇಳಿ ಅವನು ತಿಳಿಸಿದಂತೆ ಸಂತೋಷದಿಂದ ಸಪ್ತಮೀವ್ರತವನ್ನಾಚರಿಸಿದನು.

೭೬. ಆ ಮಹಾತ್ಮನಾದ ಬ್ರಾಹ್ಮಣನಿಗೆ ತನ್ನ ಮನೆಯಲ್ಲಿರುವ ಚಿನ್ನ, ಬೆಳ್ಳಿ ಮತ್ತು ಇತರ ವಸ್ತುಗಳ ಆರನೆ ಒಂದು ಭಾಗವನ್ನು ಕೊಟ್ಟನು.

**ಸೋಽಪಿ ಜಗ್ರಾಹ ತದ್ವಿತ್ತಂ ಪ್ರಹೇಷ್ಟೇನಾಂತರಾತ್ಮನಾ ।**
**ಸುವರ್ಣಮಪಿ ರತ್ನಾನಿ ಸಂಖ್ಯಯಾ ಪರಿವರ್ಜಿತಂ ॥ ೭೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಪುರಶ್ಚರಣಸಪ್ತಮೀವ್ರತವಿಧಾನವರ್ಣನಂ" ನಾಮ ದ್ವಿಷಷ್ಟ್ಯುತ್ತರಶತತಮೋಽಧ್ಯಾಯಃ**

---

೭೭. ಅವನೂ ಆ ಲೆಕ್ಕವಿಲ್ಲದ ಸುವರ್ಣ, ರತ್ನ ಮೊದಲಾದುವುಗಳನ್ನು ಸಂತೋಷದಿಂದ ಸ್ವೀಕರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಪುರಶ್ಚರಣಸಪ್ತಮೀವ್ರತವಿಧಾನವರ್ಣನ"ವೆಂಬ ನೂರರುವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

## ಬ್ರಾಹ್ಮನಾಗರೋತ್ಪತ್ತಿವೃತ್ತಾಂತವರ್ಣನಂ

**ಸೂತ ಉವಾಚ :—**

**ಅಥ ತೇ ನಾಗರಾಃ ಸರ್ವೇ ದೃಷ್ಟ್ವಾ ತದ್ವಿತ್ತಭಾಜನಂ ।**
**ನ ಕೇನಾಽಪಿ ಗ್ರಹೀತವ್ಯಂ ಸರ್ವಾನ್ಕಾಮಾನ್ನಿರಸ್ಯ ಚ ॥ ೧ ॥**
**ತತಸ್ತೇ ಸಮಯಂ ಕೃತ್ವಾ ಸಮಾನೀಯ ಚ ಮಧ್ಯಗಂ ।**
**ತಸ್ಯಾಸ್ಯೇನ ತತಃ ಪ್ರೋಚುರ್ಬ್ರಹ್ಮಸ್ಥಾನೇ ವ್ಯವಸ್ಥಿತಾಃ ॥ ೨ ॥**
**ಅನೇನ ಲೋಭಯುಕ್ತೇನ ತಿರಸ್ಕೃತ್ಯ ದ್ವಿಜೋತ್ತಮಾನ್ ।**
**ಪುಷ್ಪನಿತ್ತಮುಪಾದಾಯ ಪ್ರಾಯಶ್ಚಿತ್ತಂ ಪ್ರಕೀರ್ತಿತಂ ॥ ೩ ॥**
**ತಥಾ ಚೈವ ತು ಷಡ್ಭಾಗೋ ಗೃಹೀತೋ ವಿಭವಸ್ಯ ಚ ।**
**ತಸ್ಮಾದೇಷ ಸಮಸ್ತಾನಾಂ ಬಾಹ್ಯಭೂತೋ ಭವಿಷ್ಯತಿ ॥ ೪ ॥**
**ನಾಗರಾಣಾಂ ದ್ವಿಜೇಂದ್ರಾಣಾಂ ಯಥಾಽನ್ಯಃ ಪ್ರಾಕೃತಸ್ತಥಾ ॥ ೫ ॥**
**ಅದ್ಯಪ್ರಭೃತಿ ಚಾಽನೇನ ಯಃ ಸಂಬಂಧಂ ಕರಿಷ್ಯತಿ ।**
**ಸೋಽಪಿ ಬಾಹ್ಯಸ್ತು ಸರ್ವೇಷಾಂ ನಾಗರಾಣಾಂ ಭವಿಷ್ಯತಿ ॥ ೬ ॥**

---

### ಕನ್ನಡದ ಅನುವಾದ

#### ಬ್ರಾಹ್ಮನಾಗರೋತ್ಪತ್ತಿವೃತ್ತಾಂತವರ್ಣನ

೧–೨. ಸೂತನು ಹೇಳುತ್ತಾನೆ:—ಬಳಿಕ ಪಟ್ಟಣಿಗರು ಯಾರೂ ಸ್ವೀಕರಿಸಲನರ್ಹವಾದ ಆ ದ್ರವ್ಯವನ್ನು ನೋಡಿ ಆಶೆಯಿಲ್ಲದವರಾಗಿ ಸಂಕೇತವನ್ನು ಮಾಡಿಕೊಂಡು ಮಧ್ಯಗನನ್ನು ಕರೆಯಿಸಿ ಅವನಿಂದ ಹೀಗೆ ಹೇಳಿಸಿದರು.

೩. "ಅತ್ಯಾಶೆಯುಳ್ಳ ಈ ಬ್ರಾಹ್ಮಣನು ಇತರ ಬ್ರಾಹ್ಮಣೋತ್ತಮರನ್ನು ತಿರಸ್ಕರಿಸಿ ಪುಷ್ಪನಿಂದ ದ್ರವ್ಯವನ್ನು ತೆಗೆದುಕೊಂಡು ಪ್ರಾಯಶ್ಚಿತ್ತವನ್ನು ಹೇಳಿರುವನು.

೪. ಅವನ ಐಶ್ವರ್ಯದ ಆರನೆ ಒಂದು ಭಾಗವನ್ನು ತೆಗೆದುಕೊಂಡಿರುವನು. ಆದುದರಿಂದ ಇವನು ಎಲ್ಲರಿಗೂ ಬಹಿಷ್ಕಾರ್ಯನು.

೫–೬. ಇದು ಮೊದಲ್ಗೊಂಡು ಈ ನಗರದ ಬ್ರಾಹ್ಮಣರಲ್ಲಿ ಯಾವನಾದರೊಬ್ಬನು ಅಥವಾ ಇತರ ಯಾವ ಮನುಷ್ಯನ ಸಂಬಂಧವನ್ನು ಬೆಳೆಸುವನೋ ಅವನು ಸಮಸ್ತ ನಾಗರಿಕರಿಗೆ ಬಹಿಷ್ಕಾರ್ಯನು.

**ಭೋಜನಂ ವಾಽಥ ಪಾನೀಯಂ ಯೋಽಸ್ಯ ಸದ್ಮನಿ ಕರ್ಹಿಚಿತ್ ।**
**ಕರಿಷ್ಯತಿ ಸ ಚಾಽಪ್ಯೇವಂ ಪತಿತಃ ಸಂಭವಿಷ್ಯತಿ ॥ ೭ ॥**
**ಏವಮುಕ್ತ್ವಾ ತತಸ್ತೇನ ದತ್ತಂ ತಾಲತ್ರಯಂ ದ್ವಿಜಾಃ ।**
**ಬ್ರಹ್ಮಸ್ಥಾನೇ ದ್ವಿಜಶ್ರೇಷ್ಠಾಃ ಕೃತ್ವಾ ಪುಷ್ಪಸಮಂ ಚ ತಂ ॥ ೮ ॥**
**ಅಥ ತೇ ಬ್ರಾಹ್ಮಣಾಃ ಸರ್ವೇ ಜಗ್ಮುಃ ಸ್ವಂ ಸ್ವಂ ನಿವೇಶನಂ ।**
**ಚಂಡಶರ್ಮಾ ಸ ಚೋದ್ವಿಗ್ನಃ ಪುಷ್ಪಪಾರ್ಶ್ವಂ ತದಾಗತಃ ॥ ೯ ॥**
**ಏತೇಷಾಮೇವ ಸರ್ವೇಷಾಂ ಸಂಮತೇನ ಮಯಾ ತವ ।**
**ಪ್ರಾಯಶ್ಚಿತ್ತಂ ತದಾ ದತ್ತಂ ತಥಾಽಪಿ ಪತಿತಃ ಕೃತಃ ॥ ೧೦ ॥**
**ತಸ್ಮಾದಹಂ ಪತಿಷ್ಯಾಮಿ ಸುಸಮಿದ್ಧೇ ಹುತಾಶನೇ ।**
**ನೈವ ಜೀವಿತುಮಿಚ್ಛಾಮಿ ಸ್ವಜನೈಃ ಪರಿವರ್ಜಿತಃ ॥ ೧೧ ॥**

**ಪುಷ್ಪ ಉವಾಚ :—**

**ನ ವಿಷಾದಸ್ತ್ವಯಾ ಕಾರ್ಯಃ ಕಾರ್ಯೇಽಸ್ಮಿನ್ ದ್ವಿಜಸತ್ತಮ ।**
**ವಿತ್ತಾರ್ಥಂ ದೂಷಿತಸ್ತ್ವಂ ಹಿ ಯತೋ ಬ್ರಾಹ್ಮಣಸತ್ತಮೈಃ ॥ ೧೨ ॥**
**ನಾಗರಾಂಸ್ತೋಷಯಿಷ್ಯಾಮಿ ತಾನಹಂ ವಿವಿಧೈರ್ಧನೈಃ ।**
**ಯಾಚಯಿಷ್ಯಂತಿ ಯನ್ಮಾತ್ರಂ ತವ ಗಾತ್ರವಿಶುದ್ಧಯೇ ॥ ೧೩ ॥**
**ತಾವನ್ಮಾತ್ರಂ ಪ್ರದಾಸ್ಯಾಮಿ ತೇಭ್ಯೋಹಿ ತವ ಕಾರಣಾತ್ ।**
**ಏವಮುಕ್ತ್ವಾ ಸಮಾಗತ್ಯ ಬ್ರಹ್ಮಸ್ಥಾನಂ ತ್ವರಾನ್ವಿತಃ ॥ ೧೪ ॥**

---

೭. ಇವನ ಮನೆಯಲ್ಲಿ ಊಟವನ್ನು ಮಾಡಿದವನೂ ಅಥವಾ ನೀರನ್ನು ಕುಡಿದವನೂ ಪತಿತನಾಗುವನು.''

೮. ಅವನು ಹೀಗೆ ಹೇಳಿ ಆ ಬ್ರಾಹ್ಮಣನನ್ನು ಪುಷ್ಪನಿಗೆ (ನಿರ್ಮಾಲ್ಯಕ್ಕೆ) ಸಮನನ್ನಾಗಿಸಿ ಮೂರು ಸಾರಿ ಚಪ್ಪಾಳೆ ಹೊಡೆದನು.

೯. ಬಳಿಕ ಆ ಬ್ರಾಹ್ಮಣರೆಲ್ಲ ತಮ್ಮ ತಮ್ಮ ಮನೆಗೆ ಹೋದರು. ಚಂಡ ಶರ್ಮನೂ ವ್ಯಥೆಗೊಂಡು ಪುಷ್ಪನ ಹತ್ತಿರಕ್ಕೆ ಹೋದನು.

೧೦. “ನಾನು ಇವರ ಅಭಿಪ್ರಾಯದಂತೆಯೇ ನಿನಗೆ ಪ್ರಾಯಶ್ಚಿತ್ತವನ್ನು ಮಾಡಿರುವೆನು. ಆದರೂ ನನ್ನನ್ನು ಪತಿತನನ್ನಾಗಿ ಮಾಡಿದ್ದಾರೆ.

೧೧. ಆದುದರಿಂದ ನಾನು ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಬೀಳುವೆನು. ಬಂಧುಗಳಿಂದ ಬಹಿಷ್ಕೃತನಾದ ನಾನು ಬದುಕಲು ಬಯಸುವುದಿಲ್ಲ'' ಎಂದನು.

೧೨. ಪುಷ್ಪನು ಹೇಳುತ್ತಾನೆ:—ದ್ವಿಜವರ್ಯನೆ! ನೀನು ಈ ಕಾರ್ಯದಲ್ಲಿ ವಿಷಾದಗೊಳ್ಳಬೇಡ. ಈ ಬ್ರಾಹ್ಮಣರು ನಿನ್ನನ್ನು ದ್ರವ್ಯಕ್ಕಾಗಿ ದೂಷಿಸಿದ್ದಾರೆ.

೧೩–೧೭. ನಗರದ ಬ್ರಾಹ್ಮಣರು ನಿನ್ನ ಶರೀರದ ಶುದ್ಧಿಗಾಗಿ ಬೇಡುವಷ್ಟು ದ್ರವ್ಯಗಳನ್ನಿತ್ತು ಅವರನ್ನು ಸಂತೋಷಗೊಳಿಸುವೆನು. ಪುಷ್ಪನು ಹೀಗೆ ಹೇಳಿ

ಚಾತುಶ್ಚರಣಮಾನೀಯ ಮಧ್ಯಗಾಸ್ಯೇನ ಸೋಽಬ್ರವೀತ್ ।
ಚಂಡಶರ್ಮಾ ದ್ವಿಜೋ ಯಶ್ಚ ಮದರ್ಥೇ ಪತಿತಃ ಕೃತಃ ॥ ೧೫ ॥
ಯುಷ್ಮಾಭಿರ್ವಿತ್ತಲೋಭೇನ ತದ್ವಿತ್ತಂ ವೋ ದದಾಮ್ಯಹಂ ।
ಸಮಸ್ತಂ ಮದ್ಗೃಹೇ ಯಚ್ಚ ಕ್ರಿಯತಾಂ ವಚನಂ ದ್ವಿಜೈಃ ॥ ೧೬ ॥
ಅಥ ತೇ ಕುಪಿತಾಃ ಪ್ರೋಚುಃ ಸರ್ವ ಏವ ದ್ವಿಜೋತ್ತಮಾಃ ।
ಸೀತ್ಕಾರಾನ್ ವಿವಿಧಾನ್ ಕೃತ್ವಾ ಕ್ರೋಧಸಂರಕ್ತಲೋಚನಾಃ ॥ ೧೭ ॥
ಧಿಗ್ಧಿಗ್ಪಾಪ ಸಮಾಚಾರ ಜಿಹ್ವಾ ತೇ ಶತಧಾ ತತಃ ।
ಕಿಂ ನ ಯಾತಿ ಯದೇವಂ ತ್ವಂ ಪ್ರಜಲ್ಪಸಿ ವಿಗರ್ಹಿತಂ ॥ ೧೮ ॥
ಪತಿತೋಽಯಂ ಕೃತೋಽಸ್ಮಾಭಿರ್ನೈವ ವಿತ್ತಸ್ಯ ಕಾರಣಾತ್ ।
ಪ್ರಾಯಶ್ಚಿತ್ತಂ ಯತೋ ದತ್ತಮೇಕೇನಾಽಪಿ ದುರಾತ್ಮನಾ ॥ ೧೯ ॥
ಸ್ಮೃತಯೋ ದೂಷಿತಾಸ್ತೇನ ಪುರಾಣಾನಿ ವಿಶೇಷತಃ ।
ಸ್ಥಾನಂ ಚೈವಾಽಸ್ಮದೀಯಂ ಚ ಕರ್ಮ ಚೈತತ್ಪ್ರಕುರ್ವತಾ ॥ ೨೦ ॥
ಪ್ರಾಯಶ್ಚಿತ್ತಂ ಪ್ರದಾತವ್ಯಂ ಚತುರ್ಭಿರಪರೈಃ ಸಹ ।
ಸಂಮಂತ್ರ್ಯ ಮನುನಾ ಪ್ರೋಕ್ತಮೇತದೇವ ದ್ವಿಜೋತ್ತಮಾಃ ॥ ೨೧ ॥
ತ್ವದೀಯಂ ಪಾತಕಂ ಚಾಽಸ್ಯ ಶರೀರೇಽದ್ಯ ವ್ಯವಸ್ಥಿತಂ ।
ಏಕಾಕಿನಾ ಯತೋ ದತ್ತಂ ತೇನಾಽಯಂ ಪತಿತಃ ಸ್ಥಿತಃ ॥ ೨೨ ॥

---

ವೇಗದಿಂದ ಬ್ರಹ್ಮಸ್ಥಾನಕ್ಕೆ ಬಂದು ಚಾತುಶ್ಚರಣರನ್ನು ಕರೆಯಿಸಿ ಮಧ್ಯಗನ ಮುಖದಿಂದ ಹೀಗೆ ಹೇಳಿಸಿದನು. "ನೀವು ದ್ರವ್ಯದ ಆಶೆಯಿಂದ ಚಂಡಶರ್ಮ ನನ್ನು ನನಗಾಗಿ ಪತಿತನನ್ನಾಗಿಸಿದ್ದೀರಿ. ನನ್ನ ಮನೆಯಲ್ಲಿರುವ ದ್ರವ್ಯಗಳನ್ನೆಲ್ಲ ನಿಮಗೆ ಕೊಡುವೆನು, ಅದನ್ನು ಹೇಳಿರಿ."

೧೭. ಬಳಿಕ ಆ ಬ್ರಾಹ್ಮಣರೆಲ್ಲ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವ ರಾಗಿ ಬಗೆ ಬಗೆಯಾಗಿ ಸೀತ್ಕಾರವನ್ನು ಮಾಡಿ ಇಂತೆಂದರು.

೧೮. "ಛೀ ಪಾಪಿಯೆ ! ಹೀಗೆ ನಿಂದ್ಯವಾಗಿ ನುಡಿಯುವ ನಿನ್ನ ನಾಲಿಗೆಯು ನೂರು ಬಗೆಯಾಗಿ ಏತಕ್ಕೆ ಸೀಳಿ ಹೋಗುವುದಿಲ್ಲ ?

೧೯. ದುರಾತ್ಮನಾದ ಇವನೊಬ್ಬನೆ ನಿನಗೆ ಪ್ರಾಯಶ್ಚಿತ್ತವನ್ನು ಮಾಡಿದ್ದ ರಿಂದ ನಾವು ಇವನನ್ನು ಪತಿತನನ್ನಾಗಿ ಮಾಡಿದ್ದೇವೆ, ಹಣಕ್ಕಾಗಿ ಅಲ್ಲ.

೨೦. ಇಂತಹ ಕೆಲಸವನ್ನು ಮಾಡಿದ ಇವನು ಸ್ಮೃತಿ, ಪುರಾಣ, ನಮ್ಮ ಸ್ಥಾನ ಇವುಗಳನ್ನು ಕೆಡಿಸಿರುವನು.

೨೧. ಇತರ ನಾಲ್ಕು ಮಂದಿಯೊಡನೆ ಆಲೋಚಿಸಿ ಪ್ರಾಯಶ್ಚಿತ್ತವನ್ನು ಮಾಡಬೇಕೆಂದು ಮನುವು ಹೇಳಿರುವನು.

೨೨. ನಿನ್ನ ಪಾಪವು ಈಗ ಇವನ ಶರೀರದಲ್ಲಿದೆ. ಇವನೊಬ್ಬನೆ ಪ್ರಾಯ ಶ್ಚಿತ್ತ ಮಾಡಿದ್ದರಿಂದ ಪತಿತನಾದನು."

**ಸೂತ ಉವಾಚ :—**

ಏವಮುಕ್ತ್ವಾ ದ್ವಿಜಾಃ ಸರ್ವೇ ಜಗ್ಮುಃ ಸ್ವಂ ಸ್ವಂ ನಿಕೇತನಂ ।
ಪುಷ್ಪೋಽಪಿ ಚ ಸಮುದ್ವಿಗ್ನೋ ವೈಲಕ್ಷ್ಯಂ ಪರಮಂ ಗತಃ ॥ ೨೩ ॥
ಜಗಾಮಾಥ ನಿಜಾವಾಸಂ ನಿಃಶ್ವಸನ್ನುರಗೋ ಯಥಾ ॥ ೨೪ ॥
ತತಃ ಸ ಚಿಂತಯಾಮಾಸ ಯಾವನ್ನೋ ಸಾಹಸಂ ಕೃತಂ ।
ತಾವತ್ಸಿದ್ಧಿರ್ಮನುಷ್ಯಾಣಾಂ ನ ಕಥಂಚಿತ್ಪ್ರಜಾಯತೇ ॥ ೨೫ ॥
ತಸ್ಮಾದಹಂ ಕರಿಷ್ಯಾಮಿ ಚಂಡಶರ್ಮಕೃತೇ ಮಹತ್ ।
ಕೃತಘ್ನತಾ ಯಥಾ ನ ಸ್ಯಾತ್ಪ್ರೋಕ್ತಂ ಚೈವ ಯತೋ ಬುಧೈಃ ॥ ೨೬ ॥
ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಭಗ್ನವ್ರತೇ ತಥಾ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಸ್ತಿ ನಿಷ್ಕೃತಿಃ ॥ ೨೭ ॥
ಏವಂ ನಿಶ್ಚಿತ್ಯ ಮನಸಾ ಸೂರ್ಯವಾರೇಣ ಸಪ್ತಮೀ ।
ಆಗತಾಯಾಂ ದ್ವಿಜಶ್ರೇಷ್ಠಾಸ್ತದಾಚಾಷ್ಟೋತ್ತರಂ ಶತಂ ॥ ೨೮ ॥
ಪ್ರದಕ್ಷಿಣಾಃ ಕೃತಾಸ್ತೇನ ಪುಷ್ಪಾದಿತ್ಯಸ್ಯ ಧೀಮತಾ ।
ತೀಕ್ಷ್ಣಂ ಶಸ್ತ್ರಂ ಸಮಾದಾಯ ಪೂರ್ವೋಕ್ತವಿಧಿನಾ ತತಃ ।
ಛಿತ್ವಾ ಛಿತ್ವಾ ನಿಜಾಂಗಾನಿ ಜುಹುಯಾಜ್ಜಾತವೇದಸಿ ॥ ೨೯ ॥
ತತಃ ಪೂರ್ಣಾಹುತಿಂ ಯಾವತ್ಕಾಯಶೇಷೇಣ ಯಚ್ಛತಿ ।
ತಾವತ್ಪ್ರತ್ಯಕ್ಷತಾಂ ಗತ್ವಾ ಸ ಪ್ರೋಕ್ತೋ ಭಾಸ್ವತಾ ಸ್ವಯಂ ॥ ೩೦ ॥

---

೨೩. ಸೂತನು ಹೇಳುತ್ತಾನೆ:—ಬ್ರಾಹ್ಮಣರೆಲ್ಲ ಹೀಗೆ ಹೇಳಿ ತಮ್ಮ ತಮ್ಮ ಮನೆಗೆ ತೆರಳಿದರು. ಪುಷ್ಪನೂ ವ್ಯಥೆಗೊಂಡು ಅತಿ ಲಜ್ಜಿತನಾದನು.

೨೪. ಹಾವಿನಂತೆ ಉಸಿರನ್ನು ಬಿಡುತ್ತ ತನ್ನ ಮನೆಗೆ ಹೋದನು.

೨೫. ಅನಂತರ ಅವನು ಹೀಗೆ ಆಲೋಚಿಸಿದನು. "ಮನುಷ್ಯನು ಸಾಹಸ ಕಾರ್ಯವನ್ನೆಸಗುವವರೆಗೆ ಸಿದ್ಧಿಯಾಗುವುದಿಲ್ಲ.

೨೬–೨೭. ಆದುದರಿಂದ ನಾನು ಚಂಡಶರ್ಮನ ವಿಷಯದಲ್ಲಿ ಕೃತಘ್ನನಾಗದಂತೆ ಕೆಲಸವನ್ನು ಮಾಡುವೆನು. ಜ್ಞಾನಿಗಳು ಬ್ರಹ್ಮಘ್ನ, ಸುರಾಪಾಯಿ, ಕಳ್ಳ, ವ್ರತಭ್ರಷ್ಟ ಇವರಿಗೆ ಪ್ರಾಯಶ್ಚಿತ್ತವನ್ನು ವಿಧಿಸಿರುವರು. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲವೆಂದು ಹೇಳಿರುವರು.

೨೮–೨೯. ಅವನು ಹೀಗೆ ಮನಸ್ಸಿನಲ್ಲಿ ನಿಶ್ಚಯಿಸಿ ಭಾನುವಾರ ಸಪ್ತಮೀ ಬರಲು ಪುಷ್ಪಾದಿತ್ಯನಿಗೆ ನೂರೆಂಟು ಪ್ರದಕ್ಷಿಣೆಗೈದು ಹರಿತವಾದ ಆಯುಧವನ್ನು ತೆಗೆದುಕೊಂಡು ಹಿಂದೆ ಹೇಳಿದ ವಿಧಿಯಿಂದ ತನ್ನ ಅಂಗಗಳನ್ನು ಕತ್ತರಿಸಿ ಅಗ್ನಿಯಲ್ಲಿ ಹೋಮಿಸಿದನು.

೩೦. ತರುವಾಯ ಅವನು ಉಳಿದ ಶರೀರ ಭಾಗದಿಂದ ಪೂರ್ಣಾಹುತಿಯನ್ನು ಕೊಡುವಷ್ಟರಲ್ಲಿ ಸೂರ್ಯನು ಪ್ರತ್ಯಕ್ಷನಾಗಿ ಹೀಗೆಂದನು.

ಪುಷ್ಪ ಮಾ ಸಾಹಸಂ ಕಾರ್ಷೀಃ ಪರಿತುಷ್ಟೋಽಸ್ಮಿ ತೇಽನಘ ।
ಭೂಯ ಏವ ಮಹಾಭಾಗ ಬ್ರೂಹಿ ಕಿಂ ತೇ ದದಾಮ್ಯಹಂ ॥ ೩೧ ॥

ಪುಷ್ಪ ಉವಾಚ :—

ಚಂಡಶರ್ಮಾ ದ್ವಿಜೇಂದ್ರೋಽಯಂ ಮದರ್ಥೇ ಪತಿತಃ ಕೃತಃ ।
ಸಮಸ್ತೈರ್ನಾಗರೈರ್ದೇವ ತಂ ತೈರ್ನಯ ಸಮಾನತಾಂ ॥ ೩೨ ॥
ಶಾಸ್ತ್ರಂ ದೃಷ್ಟ್ವಾ ಪ್ರದತ್ತಂ ಮೇ ಪ್ರಾಯಶ್ಚಿತ್ತಂ ಮಹಾತ್ಮನಾ ।
ತಥಾಽಪಿ ದೂಷಿತಃ ಕ್ಷುದ್ರೈಃ ಸಮಸ್ತೈರಸಹಿಷ್ಣುಭಿಃ ॥ ೩೩ ॥

ಭಗವಾನುವಾಚ :—

ಏಕಸ್ಯಾಽಪಿ ವಚೋ ನೈವ ಶಕ್ಯತೇ ಕರ್ತುಮನ್ಯಥಾ ।
ನಾಗರಸ್ಯ ದ್ವಿಜಶ್ರೇಷ್ಠ ಸಮಸ್ತಾನಾಂ ಚ ಕಿಂ ಪುನಃ ॥ ೩೪ ॥
ಪರಮೇಷ ದ್ವಿಜಃ ಪೂತಶ್ಚಂಡಶರ್ಮಾ ಭವಿಷ್ಯತಿ ।
ಬ್ರಾಹ್ಮೋಽಯಂ ನಾಗರಃ ಖ್ಯಾತಃ ಸಮಸ್ತೇ ಧರಣೀತಲೇ ॥ ೩೫ ॥
ಏತಸ್ಯ ಯೇ ಸುತಾಶ್ಚೈವ ಭವಿಷ್ಯಂತಿ ಧರಾತಲೇ ।
ವಿಖ್ಯಾತಿಂ ತೇಽಪಿ ಯಾಸ್ಯಂತಿ ಮಾನ್ಯಾಃ ಪೂಜ್ಯಾ ಮಹೀಭೃತಾಂ ॥ ೩೬ ॥
ಯೇ ಚಾಽಪಿ ಬಾಂಧವಾಶ್ಚಾಽಸ್ಯ ಸುಹೃದಶ್ಚ ಸಮಾಗಮಂ ।
ಕರಿಷ್ಯಂತಿ ಸಮಂ ತೇಽಪಿ ಭವಿಷ್ಯಂತಿ ಸುಶೋಭನಾಃ ॥ ೩೭ ॥

---

೩೧. "ನಿರ್ದುಷ್ಟನಾದ ಪುಷ್ಪನೇ! ಸಾಹಸ ಮಾಡಬೇಡ. ನಿನ್ನಲ್ಲಿ ನಾನು ಸಂತುಷ್ಟನಾಗಿರುವೆನು. ಮಹಾತ್ಮನೆ! ಮರಳಿ ನಿನಗೆ ಏನನ್ನು ಕೊಡಲಿ ಹೇಳು."

೩೨. ಪುಷ್ಪನು ಹೇಳುತ್ತಾನೆ:—ಜನರು ಈ ಚಂಡಶರ್ಮನನ್ನು ನನಗಾಗಿ ಪತಿತನನ್ನಾಗಿ ಮಾಡಿರುವರು. ಅವನನ್ನು ಅವರಿಗೆ ಸಮಾನನನ್ನಾಗಿಸು.

೩೩. ಈ ಮಹಾತ್ಮನು ಶಾಸ್ತ್ರವನ್ನವಲೋಕಿಸಿ ನನಗೆ ಪ್ರಾಯಶ್ಚಿತ್ತವನ್ನು ಮಾಡಿದ್ದಾನೆ. ಆದರೂ ಅದನ್ನು ಸಹಿಸದ ಆ ಅಲ್ಪರಾದ ನಾಗರಿಕರು ಅವನನ್ನು ಬಹಿಷ್ಕರಿಸಿದ್ದಾರೆ.

೩೪. ಭಗವಂತನು ಹೇಳುತ್ತಾನೆ:—ದ್ವಿಜವರ್ಯನೆ! ಒಬ್ಬ ನಾಗರನ ಮಾತನ್ನೂ ವ್ಯತ್ಯಾಸಗೊಳಿಸಲು ಸಾಧ್ಯವಿಲ್ಲ. ಸಕಲ ನಾಗರ ಬ್ರಾಹ್ಮಣರ ಮಾತನ್ನಿನ್ನೇನು.

೩೫. ಆದರೆ ಈ ಚಂಡಶರ್ಮನು ಪವಿತ್ರನಾಗುವನು. ಈ ಸಮಸ್ತ ಪ್ರಪಂಚದಲ್ಲಿ ಈ ನಾಗರವು ಬ್ರಾಹ್ಮವೆಂದು ವಿಖ್ಯಾತವಾಗುವುದು.

೩೬—೩೭. ಇವನ ಮಕ್ಕಳೂ ಪ್ರಪಂಚದಲ್ಲಿ ವಿಖ್ಯಾತರಾಗಿ ರಾಜರಿಗೆ ಪೂಜ್ಯರಾಗುವರು. ಇವನೊಡನೆ ಸೇರುವ ಮಿತ್ರ ಬಾಂಧವರೂ ಮಂಗಳಕರರಾಗುವರು.

ತ್ವಂ ಚಾಽಪಿ ಮತ್ಪ್ರಸಾದೇನ ಸಂಪೂರ್ಣಾಂಗೋ ಭವಿಷ್ಯಸಿ ॥ ೩೮ ॥
ಏವಮುಕ್ತ್ವಾ ಸಹಸ್ರಾಂಶುಸ್ತತಶ್ಚಾದರ್ಶನಂ ಗತಃ ।
ಪುಷ್ಪೋಽಪಿ ಚಾಕ್ಷತಾಂಗತ್ವಂ ತತ್ಕ್ಷಣಾತ್ಸಮುಪದ್ಯತ ॥ ೩೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬ್ರಾಹ್ಮನಾಗರೋತ್ಪತ್ತಿವೃತ್ತಾಂತವರ್ಣನಂ" ನಾಮ
ತ್ರಿಷಷ್ಟ್ಯುತ್ತರಶತತಮೋಽಧ್ಯಾಯಃ

---

೩೮. ನೀನೂ ನನ್ನ ಅನುಗ್ರಹದಿಂದ ಸಂಪೂರ್ಣವಾದ ಅವಯವವುಳ್ಳವನಾಗುವೆ.

೩೯. ಸೂರ್ಯನು ಹೀಗೆ ನುಡಿದು ಕಣ್ಮರೆಯಾದನು. ಪುಷ್ಪನೂ ಕೂಡಲೆ ಸಂಪೂರ್ಣಾವಯವವುಳ್ಳವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬ್ರಾಹ್ಮನಾಗರೋತ್ಪತ್ತಿವೃತ್ತಾಂತವರ್ಣನ" ವೆಂಬ
ನೂರರುವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ

## ನಾಗರೇಶ್ವರ ನಾಗರಾದಿತ್ಯ ಶಾಕಂಭಯುರ್ತ್ಪತ್ತಿವರ್ಣನಂ

ಸೂತ ಉವಾಚ :—

ಏತಸ್ಮಿನ್ನಂತರೇ ಪುಷ್ಪಃ ಪ್ರಹೃಷ್ಟೇನಾಂತರಾತ್ಮನಾ ।
ಚಂಡಶರ್ಮಗೃಹಂ ಗತ್ವಾ ದಿಷ್ಟ್ಯಾ ದಿಷ್ಟ್ಯೇತಿ ಚಾಽಬ್ರವೀತ್ ॥ ೧ ॥
ವಿವರ್ಣವದನಂ ದೃಷ್ಟ್ವಾ ಬಾಷ್ಪಪೂರ್ಣೇಕ್ಷಣಂ ತದಾ ।
ಬಾಂಧವೈಃ ಸಹಿತಂ ಸರ್ವೈರ್ದಾರೈರ್ಭೃತ್ಯೈಸ್ತಥಾಸುತೈಃ ॥ ೨ ॥

ಪುಷ್ಪ ಉವಾಚ :—

ತವಾರ್ಥೇ ಚ ಮಯಾ ಸೂರ್ಯಃ ಕಾಯತ್ಯಾಗೇನ ತೋಷಿತಃ ।
ಪತಿತತ್ವಂ ನ ತೇ ಕಾಯೇ ತತ್ಪ್ರಸಾದಾದ್ಭವಿಷ್ಯತಿ ॥ ೩ ॥
ತವ ಪುತ್ರಾಶ್ಚ ಪೌತ್ರಾಶ್ಚ ಯೇ ಭವಿಷ್ಯಂತಿ ವಂಶಜಾಃ ।
ನಾಗರಾಣಾಂ ಚ ತೇ ಸರ್ವೇ ಭವಿಷ್ಯಂತಿ ಗುಣಾಧಿಕಾಃ ॥ ೪ ॥
ತಸ್ಮಾದುತ್ತಿಷ್ಠ ಗಚ್ಛಾವೋ ನದೀಂ ಪುಣ್ಯಾಂ ಸರಸ್ವತೀಂ ।
ತಸ್ಯಾಸ್ತಟೇ ನಿವಾಸಾಯ ಕೃತ್ವಾ ಚೈವಾಶ್ರಮಂ ದ್ವಿಜ ॥ ೫ ॥

---

## ಕನ್ನಡದ ಅನುವಾದ

### ನಾಗರೇಶ್ವರ ನಾಗರಾದಿತ್ಯ ಶಾಕಂಭಯುರ್ತ್ಪತ್ತಿವರ್ಣನ

೧–೨. ಸೂತನು ಹೇಳುತ್ತಾನೆ:—ಅನಂತರ ಪುಷ್ಪನು ಹರ್ಷಚಿತ್ತನಾಗಿ ಚಂಡಶರ್ಮನ ಮನೆಗೆ ಹೋಗಿ ಅಲ್ಲಿ ಕಳೆಗುಂದಿದ ಮುಖವುಳ್ಳವನೂ, ಕಣ್ಣೀರಿನಿಂದ ತುಂಬಿದ ಕಣ್ಣುಗಳುಳ್ಳವನೂ, ಸಮಸ್ತ ಬಂಧುಗಳು, ಹೆಂಡತಿ, ಮಕ್ಕಳು, ಸೇವಕರು ಇವರಿಂದ ಸಹಿತನೂ ಆದ ಅವನನ್ನು ಕುರಿತು, 'ಅದೃಷ್ಟ! ಅದೃಷ್ಟ!' ಎಂದನು.

೩. ಪುಷ್ಪನು ಹೇಳುತ್ತಾನೆ:—"ನಾನು ನಿನಗೋಸ್ಕರ ಶರೀರವನ್ನು ತ್ಯಜಿಸಿ ಸೂರ್ಯನನ್ನು ಒಲಿಸಿದೆನು. ಆ ಭಾಸ್ಕರನ ಅನುಗ್ರಹದಿಂದ ನಿನ್ನ ಶರೀರದಲ್ಲಿ ಪಾತಿತ್ಯವಿರುವುದಿಲ್ಲ.

೪. ನಿನ್ನ ಪುತ್ರಪೌತ್ರರೂ, ವಂಶದವರೂ ಎಲ್ಲರೂ ನಾಗರ ಬ್ರಾಹ್ಮಣರಿಗಿಂತ ಅಧಿಕ ಗುಣವುಳ್ಳವರಾಗುವರು.

೫–೮. ಆದುದರಿಂದ ಏಳು. ಸರಸ್ವತೀನದಿಗೆ ಹೋಗೋಣ. ಆ ನದಿಯ ತೀರದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ನಾನು ನಿನ್ನೊಡನೆ ವಾಸಮಾಡುವೆನು.

ತ್ವಯಾ ಸಹ ವಸಿಷ್ಯಾಮಿ ಅಹಮೇವ ನ ಸಂಶಯಃ ।
ಅಸ್ತಿ ಮೇ ವಿಪುಲಂ ವಿತ್ತಂ ಯೇ ಚಾಽನ್ಯೇ ತೇಽನುಯಾಯಿನಃ ॥ ೬ ॥
ತಾನ್ ಸರ್ವಾನ್ ಪೋಷಯಿಷ್ಯಾಮಿ ತ್ಯಜ್ಯತಾಂ ಮಾನಸೋ ಜ್ವರಃ ।
ತಚ್ಛ್ರುತ್ವಾ ಚಂಡಶರ್ಮಾ ತು ಪುತ್ರೈರ್ಬಂಧುಭಿರನ್ವಿತಃ ॥ ೭ ॥
ಸರಸ್ವತೀಂ ಸಮುದ್ದಿಶ್ಯ ನಿಷ್ಕ್ರಾಂತೋ ನಗರಾತ್ತತಃ ।
ಸ್ಥಾನಂ ಪ್ರದಕ್ಷಿಣೀಕೃತ್ಯ ನಮಸ್ಕೃತ್ಯ ಸುದುಃಖಿತಃ ॥ ೮ ॥
ಬಾಷ್ಪಪೂರ್ಣೇಕ್ಷಣೋ ದೀನ ಉತ್ತರಾಭಿಮುಖೋ ಯಯೌ ।
ಪುಷ್ಪೇಣ ಸಹಿತಶ್ಚೈವ ಮುಹುರ್ಮುಹುಃ ಪ್ರಬೋಧಿತಃ ॥ ೯ ॥
ತತಃ ಸರಸ್ವತೀಂ ಪ್ರಾಪ್ಯ ಪುಣ್ಯಾಂ ಶೀತಜಲಾಂ ನದೀಂ ।
ಸೇವಿತಾಂ ಮುನಿಸಂಘೈಸ್ತಾಂ ಲೋಲಕಲ್ಲೋಲಮಾಲಿನೀಂ ॥ ೧೦ ॥
ತಸ್ಯಾ ದಕ್ಷಿಣಕೂಲೇ ಸ ನಿವಾಸಮಕರೋತ್ತದಾ ।
ಪುಷ್ಪಸ್ಯ ಮತಿಮಾಸ್ಥಾಯ ಬಂಧುಭಿಃ ಸಕಲೈರ್ವೃತಃ ॥ ೧೧ ॥
ತಸ್ಯಾಸೀನ್ನಗರಸ್ಥಸ್ಯ ಪ್ರತಿಜ್ಞಾ ಚಂಡಶರ್ಮಣಃ ।
ಸಪ್ತವಿಂಶತಿಭಿರ್ಲಿಂಗೈರ್ದೃಷ್ಟೈರ್ಭೋಕ್ಷ್ಯಾಮ್ಯಹಂ ಸದಾ ॥ ೧೨ ॥
ತಾಂ ಚ ಸಂಸ್ಮರತಸ್ತಸ್ಯ ಪ್ರತಿಜ್ಞಾಂ ಪೂರ್ವಸಂಚಿತಾಂ ।
ಹೃದಯಂ ದಹ್ಯತೇ ತಸ್ಯ ದಿವಾನಕ್ತಂ ದ್ವಿಜೋತ್ತಮಾಃ ॥ ೧೩ ॥

---

ನನ್ನಲ್ಲಿ ಬಹಳ ಹಣವಿದೆ. ನಿಮ್ಮವರನ್ನೆಲ್ಲ ಸಲಹುವೆನು. ಈ ಮಾನಸಿಕ ವ್ಯಥೆಯನ್ನು ತ್ಯಜಿಸು.'' ಅದನ್ನು ಕೇಳಿ ಚಂಡಶರ್ಮನು ಪುತ್ರ, ಬಂಧುಗಳೊಡನೆ ಸರಸ್ವತೀ ನದಿಯನ್ನುದ್ದೇಶಿಸಿ ದುಃಖದಿಂದ ಆ ಪಟ್ಟಣಕ್ಕೆ ಬಲವಂದು ನಮಸ್ಕರಿಸಿ ಹೊರಟನು.

೯. ಅವನು ಪುಷ್ಪನ ಮಾತಿನಂತೆ ದೈನ್ಯದಿಂದ ಅಳುತ್ತ ಉತ್ತರದಿಕ್ಕಿಗೆ ಹೋದನು.

೧೦–೧೧. ಬಳಿಕ ಅವನು ಪುಣ್ಯಕರವೂ, ತಣ್ಣಗಿರುವ ನೀರುಳ್ಳದ್ದೂ, ಮುನಿಗಳಿಂದ ಸೇವಿಸಲ್ಪಟ್ಟುದೂ, ಚಂಚಲವಾದ ಅಲೆಗಳ ಸಮೂಹವುಳ್ಳದೂ ಆದ ಆ ಸರಸ್ವತೀ ನದಿಯನ್ನು ಸೇರಿ ಅದರ ದಕ್ಷಿಣ ದಡದಲ್ಲಿ ಪುಷ್ಪನ ಅಭಿಪ್ರಾಯದಂತೆ ಸಮಗ್ರ ಬಂಧುಗಳೊಡನೆ ವಾಸಿಸಿದನು.

೧೨. ಚಂಡಶರ್ಮನು ನಗರದಲ್ಲಿ ವಾಸಿಸುತ್ತಿರುವಾಗ ತಾನು ನಿತ್ಯವೂ ಇಪ್ಪತ್ತೇಳು ಲಿಂಗಗಳನ್ನು ನೋಡಿ ಭೋಜನಮಾಡುವೆನೆಂದು ಪ್ರತಿಜ್ಞೆ ಮಾಡಿದ್ದನು.

೧೩. ದ್ವಿಜವರ್ಯರೆ! ತಾನು ಹಿಂದೆ ಮಾಡಿದ ಪ್ರತಿಜ್ಞೆಯನ್ನು ಸ್ಮರಿಸಿದ ಕೂಡಲೆ ಹಗಲು ರಾತ್ರಿ ಅವನ ಶರೀರವು ದಹಿಸುವುದು.

ಸ ಚ ಸ್ನಾತ್ವಾ ಸರಸ್ವತ್ಯಾಂ ಶುಚಿರ್ಭೂತ್ವಾ ಸಮಾಹಿತಃ ।
ಷಡಕ್ಷರಸ್ಯ ಮಂತ್ರಸ್ಯ ಜಪಂ ಚಕ್ರೇ ಪೃಥಕ್ ಪೃಥಕ್ ॥ ೧೪ ॥
ನಾಮ ಚೋಚ್ಚಾರ್ಯ ಲಿಂಗಸ್ಯ ನಮಸ್ಕಾರಾಂತಮಾದಧೇ ।
ಕರ್ದಮೇನ ದ್ವಿಜಶ್ರೇಷ್ಠಾಃ ಪಂಚಾಂಗುಲಶತೇನ ಚ ॥ ೧೫ ॥
ಸಂಸ್ಥಾಪ್ಯ ಪೂಜಯೇದ್ಭಕ್ತ್ಯಾ ಪುಷ್ಪಧೂಪಾನುಲೇಪನೈಃ ।
ಪ್ರಾಣರುದ್ರಾಂಜಪನ್ ಪಶ್ಚಾಚ್ಛ್ರದ್ಧಯಾ ಪರಯಾಯುತಃ ॥ ೧೬ ॥
ದುಃಸ್ಥಿತಂ ಸುಸ್ಥಿತಂ ವಾಽಪಿ ಶಿವಲಿಂಗಂ ನ ಚಾಲಯೇತ್ ।
ಇತಿ ಮತ್ವಾ ದ್ವಿಜೇಂದ್ರೋಽಸೌ ನೈವ ತಾನಿ ವಿಸರ್ಜಯೇತ್ ॥ ೧೭ ॥
ಉಪರ್ಯುಪರಿ ತೇಷಾಂ ಚ ಕರ್ದಮೇನ ದ್ವಿಜೋತ್ತಮಾಃ ।
ಚಕ್ರೇ ಲಿಂಗಾನಿ ನಿತ್ಯಂ ಸ ಸಪ್ತವಿಂಶತಿ ಸಂಖ್ಯಯಾ ॥ ೧೮ ॥
ತತಃ ಕಾಲೇನ ಮಹತಾ ಜಾತಃ ಕರ್ದಮ ಪರ್ವತಃ ॥ ೧೯ ॥
ಅಥ ತುಷ್ಟೋ ಮಹಾದೇವಸ್ತಸ್ಯ ಭಕ್ತ್ಯತಿರೇಕತಃ ।
ನಿರ್ಭಿದ್ಯ ಧರಣೀ ಪೃಷ್ಠಂ ತಸ್ಯ ಲಿಂಗಮದರ್ಶಯತ್ ॥ ೨೦ ॥
ಅಬ್ರವೀತ್ಸಾದರಂ ತಂ ಚ ಮೇಘಗಂಭೀರಯಾ ಗಿರಾ ।
ಚಂಡಶರ್ಮನ್ ಪ್ರತುಷ್ಟೋಽಸ್ಮಿ ತವ ಭಕ್ತ್ಯಾಽನಯಾ ದ್ವಿಜ ॥ ೨೧ ॥

---

೧೪. ಅವನು ಸರಸ್ವತೀ ನದಿಯಲ್ಲಿ ಮಿಂದು ಶುದ್ಧನಾಗಿ ಪ್ರತ್ಯೇಕವಾಗಿ ಷಡಕ್ಷರ ಮಂತ್ರವನ್ನು ಜಪಿಸಿದನು.

೧೫–೧೬. ಲಿಂಗದ ನಾಮವನ್ನು ಉಚ್ಚರಿಸಿ ಪಂಚಾಂಗುಲಶತಪರಿಮಾಣದ ಕೆಸರಿನ ಲಿಂಗಗಳನ್ನು ಸ್ಥಾಪಿಸಿ ಪುಷ್ಪ ಧೂಪಾದಿಗಳಿಂದ ಭಕ್ತಿಯಿಂದ ಪೂಜಿಸಿ ಶ್ರದ್ಧೆಯಿಂದ ಪ್ರಾಣರುದ್ರ ಮಂತ್ರಗಳನ್ನು ಜಪಿಸುತ್ತ ನಮಸ್ಕಾರ ಮಾಡಿದನು.

೧೭. ಈ ಚಂಡಶರ್ಮನು ಸರಿಯಾಗಿರಲಿ ಅಥವಾ ಸರಿಯಾಗಿಲ್ಲದಿರಲಿ ಶಿವಲಿಂಗವನ್ನು ಕೀಳಬಾರದೆಂದು ತಿಳಿದು ಅವುಗಳನ್ನು ವಿಸರ್ಜಿಸಲಿಲ್ಲ.

೧೮. ಅವನು ನಿತ್ಯವೂ ಆ ಲಿಂಗಗಳ ಮೇಲೆ ಕೆಸರಿನಿಂದ ಇಪ್ಪತ್ತೇಳು ಲಿಂಗಗಳನ್ನು ರಚಿಸಿದನು.

೧೯. ಅನಂತರ ಬಹುಕಾಲದ ಮೇಲೆ ಅದು ಕೆಸರಿನ ಪರ್ವತವಾಯಿತು.

೨೦. ಅವನ ಭಕ್ತ್ಯತಿಶಯದಿಂದ ಸಂತುಷ್ಟನಾದ ಮಹೇಶ್ವರನು ಭೂಮಿಯನ್ನು ಭೇದಿಸಿಕೊಂಡು ಬಂದು ಅವನಿಗೆ ತನ್ನ ಲಿಂಗಸ್ವರೂಪವನ್ನು ತೋರಿಸಿದನು.

೨೧–೨೨. ಮತ್ತು ಪ್ರೀತಿಯಿಂದ ಮೇಘದಂತೆ ಗಂಭೀರವಾದ ಮಾತಿನಿಂದ ಇಂತೆಂದನು. "ಚಂಡಶರ್ಮ! ನಿನ್ನ ಈ ಭಕ್ತಿಯಿಂದ ಸಂತುಷ್ಟನಾಗಿದ್ದೇನೆ.

ತಸ್ಮಾಲ್ಲಿಂಗಮಿದಂ ನಿತ್ಯಂ ಪೂಜಯಸ್ವ ಪ್ರಭಕ್ತಿತಃ ।
ಸಪ್ತವಿಂಶತಿ ಲಿಂಗಾನಾಂ ಯತಃ ಫಲಮವಾಪ್ಸ್ಯಸಿ ॥ ೨೨ ॥
ಅನ್ಯೋಽಪಿ ಚ ನರೋ ಭಕ್ತ್ಯಾ ಯಶ್ಚೈನಂ ಪೂಜಯಿಷ್ಯತಿ ।
ಸಪ್ತವಿಂಶತಿ ಲಿಂಗಾನಾಂ ಸೋಽಪಿ ಶ್ರೇಯೋಽಭಿಲಪ್ಸ್ಯತಿ ॥ ೨೩ ॥
ಏವಮುಕ್ತ್ವಾ ಸ ಭಗವಾಂಸ್ತತಶ್ಚಾದರ್ಶನಂ ಗತಃ ।
ಚಂಡಶರ್ಮಾಽಪಿ ತಂ ಹೃಷ್ಟಃ ಪೂಜಯಾಮಾಸ ತತ್ವತಃ ॥ ೨೪ ॥
ಪ್ರಾಸಾದಂ ಕಾರಯಾಮಾಸ ತಸ್ಯ ಲಿಂಗಸ್ಯ ಶೋಭನಂ ।
ನಾಮ ಚಕ್ರೇ ತತಸ್ತಸ್ಯ ವಿಚಾರ್ಯ ಚ ಮುಹುರ್ಮುಹುಃ ॥ ೨೫ ॥
ನಗರಸ್ಥಿತ ಲಿಂಗಾನಾಂ ಯಸ್ಮಾತ್ಸಂಸ್ಮರಣಾತ್ಸ್ಥಿತಃ ।
ನಾಗರೇಶ್ವರಸಂಜ್ಞಸ್ತು ತಸ್ಮಾದೇಷ ಭವಿಷ್ಯತಿ ॥ ೨೬ ॥
ಸೂತ ಉವಾಚ:—
ಏವಂ ಸಂಸ್ಥಾಪ್ಯ ತಲ್ಲಿಂಗಂ ಚಂಡಶರ್ಮಾ ದ್ವಿಜೋತ್ತಮಾಃ ।
ಆರಾಧಯಾಮಾಸ ತದಾ ಪುಷ್ಪಧೂಪಾನುಲೇಪನೈಃ ॥ ೨೭ ॥
ಸಪ್ತವಿಂಶತಿ ಲಿಂಗಾನಾಂ ಪ್ರಾಪ್ನೋತಿ ಚ ತಥಾ ಫಲಂ ।
ಪೂಜಿತಾನಾಂ ದ್ವಿಜಶ್ರೇಷ್ಠಾ ನಗರೇ ಯಾನಿ ತಾನಿ ಚ ॥ ೨೮ ॥
ತತಃ ಕಾಲೇನ ಮಹತಾ ನಾಗರೇಶ್ವರತುಷ್ಟಿತಃ ।
ಶಿವಲೋಕಂ ಗತಃ ಸಾಕ್ಷಾದ್ಯಾನಮಧ್ಯೇ ನಿವೇಶಿತಃ ॥ ೨೯ ॥

---

ಆದುದರಿಂದ ನಿತ್ಯವೂ ಈ ಲಿಂಗವನ್ನು ಭಕ್ತಿಯಿಂದ ಆರಾಧಿಸು. ಅದರಿಂದ ಇಪ್ಪತ್ತೇಳು ಲಿಂಗಗಳನ್ನು ಪೂಜಿಸಿದ ಫಲವನ್ನು ಪಡೆಯುವೆ.

೨೩. ಇತರ ಮನುಷ್ಯನೂ ಭಕ್ತಿಯಿಂದ ಇದನ್ನು ಪೂಜಿಸಿದರೆ ಇಪ್ಪತ್ತೇಳು ಲಿಂಗಗಳನ್ನು ಪೂಜಿಸಿದ್ದರಿಂದುಂಟಾಗುವ ಶ್ರೇಯಸ್ಸನ್ನು ಹೊಂದುವನು.''

೨೪. ಶಿವನು ಹೀಗೆ ಹೇಳಿ ಅದೃಶ್ಯನಾದನು. ಚಂಡಶರ್ಮನು ಆ ಲಿಂಗವನ್ನು ಸಂತೋಷದಿಂದ ಆರಾಧಿಸಿದನು.

೨೫—೨೬. ಅದಕ್ಕೆ ರಮ್ಯವಾದ ಗುಡಿಯನ್ನು ಕಟ್ಟಿಸಿದನು. ಬಹಳವಾಗಿ ಆಲೋಚಿಸಿ ನಗರ ಲಿಂಗಗಳ ಸ್ಮರಣೆಯಿಂದ ಇದು ಆದುದರಿಂದ ಇದು ನಾಗರೇಶ್ವರ ಎಂದು ಹೆಸರನ್ನು ಪಡೆಯುವುದೆಂದು ಆ ಹೆಸರನ್ನಿಟ್ಟನು.

೨೭. ಸೂತನು ಹೇಳುತ್ತಾನೆ:—ದ್ವಿಜೋತ್ತಮರೆ! ಚಂಡಶರ್ಮನು ಹೀಗೆ ಆ ಮಹೇಶ್ವರ ಲಿಂಗವನ್ನು ಸ್ಥಾಪಿಸಿ ಪುಷ್ಪ ಧೂಪಾದಿಗಳಿಂದ ಪೂಜಿಸಿದನು.

೨೮. ನಗರದ ಇಪ್ಪತ್ತೇಳು ಲಿಂಗಗಳನ್ನು ಪೂಜಿಸಿದ ಫಲವನ್ನು ಹೊಂದಿದನು.

೨೯. ಅನಂತರ ಬಹುಕಾಲದ ಮೇಲೆ ಸಂತುಷ್ಟನಾದ ನಾಗರೇಶ್ವರನ ಅನುಗ್ರಹದಿಂದ ವಾಹನದಲ್ಲಿ ಕುಳಿತು ಶಿವಲೋಕಕ್ಕೆ ತೆರಳಿದನು.

ಪುಷ್ಪೋಽಪಿ ಸ್ಥಾಪಯಾಮಾಸ ಪುಷ್ಪಾದಿತ್ಯಮಥಾಽಪರಂ ।
ಪುಣ್ಯೇ ಸರಸ್ವತೀ ತೀರೇ ತತಃ ಪೂಜಾಪರೋಽಭವತ್ ॥ ೩೦ ॥
ತಸ್ಯಾಽಪಿ ದರ್ಶನಂ ಗತ್ವಾ ಪ್ರೀತ್ಯಾವಚನಮಬ್ರವೀತ್ ।
ಪುಷ್ಪ ತುಷ್ಟೋಽಸ್ಮಿ ಭದ್ರಂ ತೇ ವರಂ ಪ್ರಾರ್ಥಯ ಸುವ್ರತ ॥ ೩೧ ॥
ಅದೇಯಮಪಿ ದಾಸ್ಯಾಮಿ ತಸ್ಮಾತ್ಪ್ರಾರ್ಥಯ ಮಾ ಚಿರಂ ॥ ೩೨ ॥

ಪುಷ್ಪ ಉವಾಚ:—

ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ತದ್ದೇಹಿ ಯಾಚಮಾನಸ್ಯ ಮಮ ಯದ್ಹೃದಿ ಸಂಸ್ಥಿತಂ ॥ ೩೩ ॥
ಚಮತ್ಕಾರಪುರೇ ದೇವ ತವ ಯಾ ಮೂರ್ತಯಃ ಸ್ಥಿತಾಃ ।
ದ್ವಾದಶೈವ ಪ್ರಮಾಣೇನ ಪೂಜ್ಯಾಃ ಸರ್ವದಿವೌಕಸಾಂ ॥ ೩೪ ॥
ತಾಸಾಂ ಪೂಜಾಫಲಂ ಕೃತ್ಸ್ನಂ ಸಂಪ್ರಾಪ್ನೋತು ನರೋ ಭುವಿ ।
ಯಃ ಪೂಜಯತಿ ಮೂರ್ತಿಂ ತೇ ಯೈಷಾ ಸಂಸ್ಥಾಪಿತಾ ಮಯಾ ॥ ೩೫ ॥
ನಾಗರಾದಿತ್ಯ ಇತ್ಯೇಷಾ ಖ್ಯಾತಾ ಭವತು ಭೂತಲೇ ।
ಯೇಯಂ ಸರಸ್ವತೀ ತೀರೇ ಪ್ರಾಸಾದೇ ಸ್ಥಾಪಿತಾ ಮಯಾ ॥ ೩೬ ॥

ಸೂತ ಉವಾಚ:—

ಸ ತಥೇತಿ ಪ್ರತಿಜ್ಞಾಯ ಗತಶ್ಚಾಽದರ್ಶನಂ ರವಿಃ ।
ದೀಪವದ್ಬ್ರಾಹ್ಮಣಶ್ರೇಷ್ಠಾಸ್ತದದ್ಭುತಮಿವಾಽಭವತ್ ॥ ೩೭ ॥

---

೩೦. ಪುಷ್ಪನೂ ಪವಿತ್ರವಾದ ಸರಸ್ವತೀ ತೀರದಲ್ಲಿ ಪುಷ್ಪಾದಿತ್ಯನನ್ನು ಸ್ಥಾಪಿಸಿ ಪೂಜಾನಿರತನಾದನು.

೩೧–೩೨. ಆ ಆದಿತ್ಯನು ಪ್ರತ್ಯಕ್ಷನಾಗಿ, "ಪುಷ್ಪ! ನಿನ್ನ ವಿಷಯದಲ್ಲಿ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಮಂಗಳವಾಗಲಿ. ವರವನ್ನು ಕೇಳಿಕೊ. ಕೊಡಲ ಸಾಧ್ಯವಾದುದನ್ನೂ ಕೊಡುವೆನು. ಆದುದರಿಂದ ಶೀಘ್ರವಾಗಿ ಕೇಳಿಕೊ" ಎಂದನು.

೩೩–೩೫. ಪುಷ್ಪನು ಹೇಳುತ್ತಾನೆ:—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ ವರವನ್ನು ಕೊಡುವುದಾದರೆ ಬೇಡುತ್ತಿರುವ ನನ್ನ ಮನಸ್ಸಿನಲ್ಲಿರುವ ಇದನ್ನು ಕೊಡು. ನಾನು ಇಲ್ಲಿ ಸ್ಥಾಪಿಸಿರುವ ನಿನ್ನ ಮೂರ್ತಿಯನ್ನು ಪೂಜಿಸಿದ ಮನುಷ್ಯನು ಚಮತ್ಕಾರಪುರದಲ್ಲಿ ನಾನು ಪ್ರತಿಷ್ಠೆಮಾಡಿರುವ ಸಮಸ್ತ ದೇವತೆಗಳಿಗೆ ಪೂಜ್ಯವಾದ ನಿನ್ನ ದ್ವಾದಶಮೂರ್ತಿಗಳನ್ನು ಪೂಜಿಸಿದ ಫಲವನ್ನು ಪಡೆಯಲಿ.

೩೬. ಈ ಸರಸ್ವತೀ ತೀರದಲ್ಲಿ ನಾನು ದೇವಾಲಯದಲ್ಲಿ ಪ್ರತಿಷ್ಠೆಮಾಡಿರುವ ಈ ನಿನ್ನ ಮೂರ್ತಿಯು ನಾಗರಾದಿತ್ಯ ಎಂದು ಪ್ರಪಂಚದಲ್ಲಿ ಪ್ರಸಿದ್ಧವಾಗಲಿ.

೩೭. ಸೂತನು ಹೇಳುತ್ತಾನೆ:—ಬ್ರಾಹ್ಮಣೋತ್ತಮರೆ! ಆ ಸೂರ್ಯನು ಹಾಗೆಯೇ ಆಗಲೆಂದು ಒಪ್ಪಿ ದೀಪದಂತೆ ಅದೃಶ್ಯನಾದನು. ಅದು ಅತ್ಯಂತ ಆಶ್ಚರ್ಯವನ್ನುಂಟುಮಾಡಿತು.

ತತಃ ಕಾಲೇನ ಮಹತಾ ಪುಷ್ಪೋಽಪಿ ದ್ವಿಜಸತ್ತಮಾಃ ।
ಸೂರ್ಯಲೋಕಮನುಪ್ರಾಪ್ತೋ ವಿಮಾನೇನ ಸುವರ್ಚಸಾ ॥ ೩೮ ॥
ಶಾಕಂಭರೀತಿ ವಿಖ್ಯಾತಾ ಭಾರ್ಯಾಸೀಚ್ಚಂಡಶರ್ಮಣಃ ।
ತಯಾ ಸಂಸ್ಥಾಪಿತಾ ದುರ್ಗಾ ಸರಸ್ವತ್ಯಾಃ ಶುಭೇ ತಟೇ ॥ ೩೯ ॥
ಆರಾಧಿತಾಽಥ ಸದ್ಭಕ್ತ್ಯಾ ದಿವಾನಕ್ತಂ ದ್ವಿಜೋತ್ತಮಾಃ ।
ತತಸ್ತುಷ್ಟಾ ವರಂ ತಸ್ಯಾಃ ಸಾ ದದೌ ದ್ವಿಜಸತ್ತಮಾಃ ॥ ೪೦ ॥
ಪುತ್ರಿ ತುಷ್ಟಾಽಸ್ಮಿ ಭದ್ರಂ ತೇ ಶಾಕಂಭರಿ ಪ್ರಗೃಹ್ಯತಾಂ ।
ವರಂ ಯತ್ತೇ ಸದಾಽಭೀಷ್ಟಂ ಮತ್ಪ್ರಸಾದಾದಸಂಶಯಂ ॥ ೪೧ ॥

ಶಾಕಂಭರ್ಯುವಾಚ :—

ಚತುಃಷಷ್ಟಿಗಣಾ ದೇವಿ ಮಾತೄಣಾಂ ಯೇ ವ್ಯವಸ್ಥಿತಾಃ ।
ಚಮತ್ಕಾರಪುರೇ ಖ್ಯಾತಾ ಹಾಸ್ಯಾತ್ತುಷ್ಟಿಂ ವ್ರಜಂತಿ ಯಾಃ ॥ ೪೨ ॥
ಯಾ ರಾತ್ರೌ ಬಲಿದಾನೇನ ಜಾತೇ ವೃದ್ಧೌ ತತಃ ಪರಂ ।
ತತ್ಸರ್ವಂ ಜಾಯತಾಂ ಪುಣ್ಯಂ ಯಸ್ತೇ ಮೂರ್ತಿಂ ಪ್ರಪೂಜಯೇತ್ ॥ ೪೩ ॥
ಅತ್ರಾಗತ್ಯ ನದೀತೀರೇ ಯೈಷಾ ಸಂಸ್ಥಾಪಿತಾ ಮಯಾ ॥ ೪೪ ॥

ಶ್ರೀ ದೇವ್ಯುವಾಚ :—

ಆಶ್ವಿನಸ್ಯ ಸಿತೇ ಪಕ್ಷೇ ಮಹಾನವಮಿಸಂಜ್ಞಿತೇ ।
ಯೋ ಮಮಾಗ್ರೇ ಸಮಾಗತ್ಯ ಪೂಜಯಿಷ್ಯತಿ ಭಕ್ತಿತಃ ॥ ೪೫ ॥

---

೩೮. ಅನಂತರ ಬಹುಕಾಲದ ಮೇಲೆ ಪುಷ್ಪನೂ ಪ್ರಕಾಶಮಾನವಾದ ವಿಮಾನದಿಂದ ಸೂರ್ಯಲೋಕವನ್ನು ಸೇರಿದನು.

೩೯. ಶಾಕಂಭರಿಯೆಂಬ ಚಂಡಶರ್ಮನ ಪತ್ನಿಯು ಆ ಸರಸ್ವತೀ ನದಿಯ ದಡದಲ್ಲಿ ದುರ್ಗೆಯನ್ನು ಪ್ರತಿಷ್ಠೆ ಮಾಡಿದಳು.

೪೦–೪೧. ಅವಳು ಆ ದುರ್ಗಾದೇವಿಯನ್ನು ಹಗಲು ರಾತ್ರಿ ಭಕ್ತಿಯಿಂದ ಆರಾಧಿಸಲು ಆ ದೇವಿಯು ಸಂತುಷ್ಟಳಾಗಿ ವರವನ್ನಿತ್ತಳು. ''ಮಗು! ಶಾಕಂಭರಿ! ನಾನು ನಿನ್ನಲ್ಲಿ ಸಂತುಷ್ಟಳಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿನ್ನ ಅಭೀಷ್ಟವು ನಿಶ್ಚಯವಾಗಿಯೂ ನನ್ನ ಅನುಗ್ರಹದಿಂದ ಸಿದ್ಧಿಸಲಿ.''

೪೨–೪೪. ಶಾಕಂಭರಿಯು ಹೇಳುತ್ತಾಳೆ:—ಈ ನದೀ ತೀರದಲ್ಲಿ ನಾನು ಸ್ಥಾಪಿಸಿದ ನಿನ್ನೀ ಮೂರ್ತಿಯನ್ನು ಪೂಜಿಸಿದವನಿಗೆ ಚಮತ್ಕಾರಪುರದಲ್ಲಿರುವ ಅರುವತ್ತನಾಲ್ಕು ಗಣಗಳು ಮತ್ತು ಮಾತೆಯರ ಮುಂದೆ ರಾತ್ರಿವೇಳೆ ವೃದ್ಧಿ ಮಹೋತ್ಸವದಲ್ಲಿ ಬಲಿಯನ್ನು ಕೊಟ್ಟು ಸಂತೋಷಪಡಿಸಿದ ಪುಣ್ಯವು ದೊರೆಯಲಿ.

೪೫–೪೬. ಶ್ರೀ ದೇವಿಯು ಹೇಳುತ್ತಾಳೆ:—ಆಶ್ವಯುಜ ಮಾಸದ ಶುಕ್ಲ ಪಕ್ಷ ಮಹಾನವಮಿಯ ದಿನ ನನ್ನ ಮುಂದೆ ಬಂದು ಭಕ್ತಿಯಿಂದ ಪೂಜಿಸಿದ

ತಸ್ಯ ಕೃತ್ಸ್ನಂ ಫಲಂ ಸದ್ಯೋ ಭವಿಷ್ಯತಿ ನ ಸಂಶಯಃ ।
ನಾಗರಸ್ಯ ವಿಶೇಷೇಣ ಸತ್ಯಮೇತನ್ಮಯೋದಿತಂ ॥ ೪೬ ॥
ಏವಮುಕ್ತ್ವಾ ತು ಸಾ ದೇವೀ ತತಶ್ಚಾಽದರ್ಶನಂ ಗತಾ ।
ತಸ್ಯಾ ನಾಮ್ನಾ ಚ ಸಾ ದೇವೀ ಪ್ರೋಕ್ತಾ ಶಾಕಂಭರೀ ಭುವಿ ॥ ೪೭ ॥
ವೃದ್ಧೇರನಂತರಂ ತಸ್ಯಾ ಯಃ ಪೂಜಾಂ ಕುರುತೇ ನರಃ ।
ತಸ್ಯ ವೃದ್ಧೇರ್ನ ವಿಘ್ನಃ ಸ್ಯಾತ್ಕದಾಚಿದ್ದ್ವಿಜಸತ್ತಮಾಃ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗರೇಶ್ವರ ನಾಗರಾದಿತ್ಯ ಶಾಕಂಭರ್ಯುತ್ಪತ್ತಿ ವರ್ಣನಂ" ನಾಮ
ಚತುಃಷಷ್ಟ್ಯುತ್ತರಶತತಮೋಽಧ್ಯಾಯಃ

---

ನಾಗರನಿಗೆ ಕೂಡಲೆ ಸಂಪೂರ್ಣ ಫಲವು ದೊರೆಯುವುದು. ನಾನು ಹೇಳಿರುವ ಈ ಮಾತು ನಿಜವಾದುದು.

೪೭. ಆ ದೇವಿಯು ಹೀಗೆ ಹೇಳಿ ಅದೃಶ್ಯಳಾದಳು. ಅವಳು ಚಂಡಶರ್ಮನ ಪತ್ನಿಯ ಹೆಸರಿನಿಂದ ಶಾಕಂಭರೀ ಎಂದು ಭೂಲೋಕದಲ್ಲಿ ಪ್ರಸಿದ್ಧಳಾದಳು.

೪೮. ಸಂಪತ್ತಿನ ಅಭಿವೃದ್ಧಿಯ ಅನಂತರ ಅವಳನ್ನು ಪೂಜಿಸಿದ ಮಾನವನಿಗೆ ಒಂದು ವೇಳೆಯೂ ವೃದ್ಧಿಗೆ ವಿಘ್ನವುಂಟಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗರೇಶ್ವರ ನಾಗರಾದಿತ್ಯ ಶಾಕಂಭರ್ಯುತ್ಪತ್ತಿ ವರ್ಣನ"ವೆಂಬ
ನೂರರುವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

### ಅಶ್ವತೀರ್ಥೋತ್ಪತ್ತಿವರ್ಣನಂ

ಸೂತ ಉವಾಚ :—

ತತಃ ಪ್ರಭೃತಿ ಪುಣ್ಯೇ ಚ ಸರಸ್ವತ್ಯಾಸ್ತಟೇ ಶುಭೇ ।
ಬಾಹ್ಯಾನಾಂ ನಾಗರಾಣಾಂ ಚ ಸ್ಥಾನಂ ಜಾತಂ ಮಹತ್ತರಂ ॥ ೧ ॥
ಪುತ್ರಪೌತ್ರಪ್ರವೃದ್ಧಾನಾಂ ದೌಹಿತ್ರಾಣಾಂ ದ್ವಿಜೋತ್ತಮಾಃ ।
ಚಮತ್ಕಾರಪುರಸ್ಯಾಗ್ರೇ ಯಚ್ಚಾಜ್ಞಾತಂ ವಿದ್ಯಯಾ ಧನೈಃ ॥ ೨ ॥
ಕಸ್ಯಚಿತ್ತ್ವಥ ಕಾಲಸ್ಯ ವಿಶ್ವಾಮಿತ್ರೇಣ ಧೀಮತಾ ।
ಶಪ್ತಾ ಸರಸ್ವತೀ ಕೋಪಾತ್ಕೃತಾ ರುಧಿರವಾಹಿನೀ ॥ ೩ ॥
ತತಃ ಸಂಸೇವ್ಯತೇ ಹೃಷ್ಟೈ ರಾಕ್ಷಸೈಃ ಸಾ ದಿವಾನಿಶಂ ।
ಗೀತನೃತ್ಯಪರೈಶ್ಚಾನ್ಯೈರ್ಭೂತೈಃ ಪ್ರೇತೈಃ ಪಿಶಾಚಕೈಃ ॥ ೪ ॥
ತತಸ್ತೇ ನಾಗರಾಬಾಹ್ಯಾಸ್ತಾಂ ತ್ಯಕ್ತ್ವಾ ದೂರತಃ ಸ್ಥಿತಾಃ ।
ಕಾಂದಿಶೀಕಾಸ್ತತೋ ಯಾತಾ ಭಕ್ಷ್ಯಮಾಣಾಸ್ತು ರಾಕ್ಷಸೈಃ ।
ನರ್ಮದಾಯಾಸ್ತಟೇ ಪುಣ್ಯೇ ಮಾರ್ಕಂಡಾಶ್ರಮಸನ್ನಿಧೌ ॥ ೫ ॥

---

### ಕನ್ನಡದ ಅನುವಾದ

#### ಅಶ್ವತೀರ್ಥೋತ್ಪತ್ತಿವರ್ಣನ

೧–೨. ಸೂತನು ಹೇಳುತ್ತಾನೆ:—ಅದು ಮೊದಲ್ಗೊಂಡು ಆ ಸರಸ್ವತೀ ನದಿಯ ಶುಭಕರವಾದ ತೀರದಲ್ಲಿ ಹಿಂದೆ ಚಮತ್ಕಾರಪುರದಲ್ಲಿ ವಿದ್ಯಾ ಧನಗಳಿಂದ ವೃದ್ಧಿಗೊಂಡಂತೆಯೇ ಪುತ್ರ, ಪೌತ್ರ, ದೌಹಿತ್ರರಿಂದ ಅಭಿವೃದ್ಧಿಗೊಂಡ ಬಾಹ್ಯ ನಾಗರರ ದೊಡ್ಡ ಸ್ಥಾನವು ಏರ್ಪಟ್ಟಿತು.

೩. ಒಂದಾನೊಂದು ಕಾಲದಲ್ಲಿ ವಿಶ್ವಾಮಿತ್ರ ಮುನಿಯು ಕುಪಿತನಾಗಿ ಶಪಿಸಲು ಸರಸ್ವತೀ ನದಿಯು ರಕ್ತಪ್ರವಾಹದಿಂದ ಹರಿಯಿತು.

೪. ಅನಂತರ ಆ ನದಿಯನ್ನು ರಾಕ್ಷಸರೂ, ಗೀತ, ನೃತ್ಯದಲ್ಲಿ ತೊಡಗಿದ ಇತರ ಭೂತ, ಪ್ರೇತ, ಪಿಶಾಚಗಳೂ ಹರ್ಷಗೊಂಡು ಸೇವಿಸಿದರು.

೫. ರಾಕ್ಷಸರ ಭಕ್ಷಣದಿಂದ ಭಯಗೊಂಡ ಬಾಹ್ಯನಾಗರ ಬ್ರಾಹ್ಮಣರು ಆ ನದಿಯನ್ನು ತ್ಯಜಿಸಿ ದೂರದಲ್ಲಿ ನರ್ಮದಾ ನದಿಯ ದಡದಲ್ಲಿ ಪವಿತ್ರವಾದ ಮಾರ್ಕಂಡೇಯ ಮುನಿಯ ಆಶ್ರಮದ ಹತ್ತಿರ ನೆಲೆಸಿದರು.

ಋಷಯ ಊಚುಃ:—

ಕಸ್ಮಾತ್ಸರಸ್ವತೀ ಶಪ್ತಾ ವಿಶ್ವಾಮಿತ್ರೇಣ ಧೀಮತಾ ।
ಮಹಾನದ್ಯಾ ಕೋಽಪರಾಧಸ್ತಯಾ ತಸ್ಯ ವಿನಿರ್ಮಿತಃ ॥ ೬ ॥

ಸೂತ ಉವಾಚ:—

ಆಸೀತ್ಪುರಾ ಮಹದ್ವೈರಂ ವಿಶ್ವಾಮಿತ್ರವಸಿಷ್ಠಯೋಃ ।
ಬ್ರಾಹ್ಮಣಸ್ಯ ಕೃತೇ ವಿಪ್ರಾಃ ಪ್ರಾಣಾಂತಕರಣಂ ಮಹತ್ ।
ಸ ಸರ್ವೈರ್ಬ್ರಾಹ್ಮಣೈಃ ಪ್ರೋಕ್ತೋ ವಿಶ್ವಾಮಿತ್ರೋ ಮಹಾಮುನಿಃ॥ ೭ ॥
ಕ್ಷತ್ರಿಯೋಽಪಿ ಪುರಸ್ಕೃತ್ಯ ದೇವದೇವಂ ಪಿತಾಮಹಂ ।
ನ ಚೈಕೇನ ವಸಿಷ್ಠೇನ ತೇನೈತದ್ವೈರಮಾಹಿತಂ ॥ ೮ ॥

ಋಷಯ ಊಚುಃ:—

ಕ್ಷತ್ರಿಯೋಽಪಿ ಕಥಂ ವಿಪ್ರೋ ವಿಶ್ವಾಮಿತ್ರೋ ಮಹಾಮತೇ ।
ವಸಿಷ್ಠೇನ ಕಥಂ ನೋಕ್ತೋ ಯಃ ಪ್ರೋಕ್ತೋ ಬ್ರಹ್ಮಣಾ ಸ್ವಯಂ॥ ೯ ॥
ಏತನ್ನಃ ಸರ್ವಮಾಚಕ್ಷ್ವ ಪರಂ ಕೌತೂಹಲಂ ಸ್ಥಿತಂ ॥ ೧೦ ॥

ಸೂತ ಉವಾಚ:—

ಆಸೀತ್ಪುರಾ ಋಚೀಕಾಖ್ಯೋ ಭೃಗುಪುತ್ರೋ ಮಹಾಮುನಿಃ ।
ವ್ರತಾಧ್ಯಯನಸಂಪನ್ನಃ ಸುತಪಸ್ವೀ ಮಹಾಯಶಾಃ ॥ ೧೧ ॥

---

೬. ಋಷಿಗಳು ಹೇಳುತ್ತಾರೆ:—ಪ್ರಾಜ್ಞನಾದ ವಿಶ್ವಾಮಿತ್ರನು ಸರಸ್ವತೀ ನದಿಯನ್ನು ಏಕೆ ಶಪಿಸಿದನು? ಆ ಮಹಾ ನದಿಯು ಆ ಮುನಿಗೆ ಏನು ತಪ್ಪು ಮಾಡಿತು?

೭-೮. ಸೂತನು ಹೇಳುತ್ತಾನೆ:-ಹಿಂದೆ ವಿಶ್ವಾಮಿತ್ರ ವಸಿಷ್ಠರಿಗೆ ಬ್ರಾಹ್ಮಣ್ಯಕ್ಕಾಗಿ ಪ್ರಾಣಾಪಾಯಕರವಾದ ಮಹಾ ದ್ವೇಷವುಂಟಾಯಿತು. ಎಲ್ಲ ಬ್ರಾಹ್ಮಣರು ಬ್ರಹ್ಮನನ್ನು ಮುಂದಿರಿಸಿಕೊಂಡು ಕ್ಷತ್ರಿಯನಾದ ಆ ವಿಶ್ವಾಮಿತ್ರನನ್ನು ಮಹಾ ಮುನಿಯೆಂದರು. ಆದರೆ ವಸಿಷ್ಠನು ಮಾತ್ರ ಹಾಗೆ ಹೇಳಲಿಲ್ಲ. ಆದುದರಿಂದ ಅವನಿಗೆ ವಸಿಷ್ಠನೊಡನೆ ದ್ವೇಷವುಂಟಾಯಿತು.

೯. ಋಷಿಗಳು ಹೇಳುತ್ತಾರೆ:— ವಿಶ್ವಾಮಿತ್ರನು ಕ್ಷತ್ರಿಯನಾದರೂ ಬ್ರಾಹ್ಮಣನು ಹೇಗಾದನು? ವಸಿಷ್ಠನು ಏಕೆ ಅವನನ್ನು ಬ್ರಾಹ್ಮಣನೆನ್ನಲಿಲ್ಲ. ಬ್ರಹ್ಮನು ತಾನೇ ಏಕೆ ಹಾಗೆ ಹೇಳಿದನು?

೧೦. ನಮಗೆ ಇದನ್ನೆಲ್ಲ ಹೇಳು. ಅತ್ಯಂತ ಕುತೂಹಲವುಂಟಾಗಿದೆ.

೧೧. ಸೂತನು ಹೇಳುತ್ತಾನೆ:—ಹಿಂದೆ ವ್ರತಾಧ್ಯಯನಸಂಪನ್ನನೂ, ತಪಸ್ವಿಯೂ, ಅತ್ಯಂತ ಯಶಸ್ವಿಯೂ ಆದ ಋಚೀಕನೆಂಬ ಭೃಗು ಸುತನಿದ್ದನು.

ತೀರ್ಥಯಾತ್ರಾ ಪ್ರಸಂಗೇನ ಸ ಕದಾಚಿನ್ಮುನೀಶ್ವರಃ ।
ಸ್ಥಾನಂ ಭೋಜಕಟಂ ನಾಮ ಪ್ರಾಪ್ತೋ ಗಾಧಿ ಮಹೀಪತೇಃ ।
ಯತ್ರ ಸಾ ಕೌಶಿಕೀ ನಾಮ ನದೀ ತ್ರೈಲೋಕ್ಯವಿಶ್ರುತಾ ॥ ೧೨ ॥
ತಸ್ಯಾಂ ಸ್ನಾತ್ವಾ ದ್ವಿಜಶ್ರೇಷ್ಠೋ ಯಾವತ್ತಿಷ್ಠತಿ ತೀರಗಃ ।
ಸಮಾಧಿಸ್ಥೋ ಜಪಂ ಕುರ್ವನ್ ಸಂತರ್ಪ್ಯ ಪಿತೃದೇವತಾಃ ॥ ೧೩ ॥
ತಾವತ್ತತ್ರ ಸಮಾಯಾತಾ ರಾಜಕನ್ಯಾ ಸುಶೋಭನಾ ।
ಸರ್ವಲಕ್ಷಣ ಸಂಪೂರ್ಣಾ ಸರ್ವೈರೇವ ಗುಣೈರ್ಯುತಾ ॥ ೧೪ ॥
ಸ ತಾಂ ಸಂವೀಕ್ಷ್ಯ ತೇ ಯಾವತ್ಸರ್ವಾವಯವ ಶೋಭನಾಂ ।
ತಾವತ್ಕಾಮಶರೈರ್ವ್ಯಾಪ್ತಃ ಕರ್ತವ್ಯಂ ನಾಭ್ಯವಿಂದತ ॥ ೧೫ ॥
ತತಃ ಪಪ್ರಚ್ಛ ಲೋಕಾನ್ ಸ ಲಬ್ಧ್ವಾ ಕೃಚ್ಛ್ರೇಣ ಚೇತನಾಂ ।
ಕಸ್ಯೇಯಂ ಕನ್ಯಕಾ ಸಾಧ್ವೀ ಕಿಮರ್ಥಮಿಹಚಾಽಽಗತಾ ॥ ೧೬ ॥
ಕ್ವ ಯಾಸ್ಯತಿ ವರಾರೋಹಾ ಸರ್ವಂ ಮೇ ಕಥ್ಯತಾಂ ಜನಾಃ ॥ ೧೭ ॥

ಜನಾ ಊಚುಃ:—

ಏಷಾ ಗಾಧಿಸುತಾ ನಾಮ ಖ್ಯಾತಾ ತ್ರೈಲೋಕ್ಯಸುಂದರೀ ।
ಅಂತಃಪುರಾತ್ಸಮಾಯಾತಾ ಗೌರೀಪೂಜನಲಾಲಸಾ ॥ ೧೮ ॥
ವಾಂಛಮಾನಾ ಸುಭರ್ತಾರಂ ಸರ್ವೈಃ ಸಮುದಿತಂ ಗುಣೈಃ ।
ಪ್ರಾಸಾದೋಽಯಂ ಸ್ಥಿತೋ ಯೋಽತ್ರ ನದೀತೀರೇ ಬೃಹತ್ತರಃ ॥ ೧೯ ॥

---

೧೨. ಆ ಮುನಿವರ್ಯನು ಒಂದಾನೊಂದು ದಿನ ತೀರ್ಥಯಾತ್ರಾನಿಮಿತ್ತದಿಂದ ಗಾಧಿ ಮಹಾರಾಜನ ಭೋಜಕಟವೆಂಬ ಸ್ಥಳಕ್ಕೆ ಬಂದನು. ಅಲ್ಲಿ ಕೌಶಿಕೀ ಎಂಬ ತ್ರಿಭುವನ ಪ್ರಖ್ಯಾತವಾದ ನದಿಯು ಹರಿಯುತ್ತಿತ್ತು.

೧೩–೧೪. ಆ ಮುನಿವರ್ಯನು ಆ ನದಿಯಲ್ಲಿ ಮಿಂದು ಪಿತೃದೇವತೆಗಳಿಗೆ ತರ್ಪಣಮಾಡಿ ದಡದಲ್ಲಿ ಜಪವನ್ನು ಮಾಡುತ್ತ ಧ್ಯಾನನಿರತನಾಗುವಷ್ಟರಲ್ಲಿ ಸಮಸ್ತ ಲಕ್ಷಣಗಳಿಂದಲೂ, ಗುಣಗಳಿಂದಲೂ ಕೂಡಿದ ಮಂಗಳಕರವಾದ ರಾಜಕನ್ಯೆಯು ಅಲ್ಲಿಗೆ ಬಂದಳು.

೧೫. ಅವನು ಸರ್ವಾಂಗಸುಂದರಿಯಾದ ಆ ರಾಜಕುವರಿಯನ್ನು ಕಂಡು ಮದನಶರಪೀಡಿತನಾಗಿ ಕರ್ತವ್ಯವನ್ನರಿಯಲಿಲ್ಲ.

೧೬–೧೭. ಅನಂತರ ಅವನು ಕಷ್ಟದಿಂದ ಜ್ಞಾನವನ್ನು ಹೊಂದಿ "ಈ ಸಾಧ್ವಿಯು ಯಾರ ಮಗಳು ? ಏತಕ್ಕಿಲ್ಲಿಗೆ ಬಂದಳು ? ಎಲ್ಲಿಗೆ ಹೋಗುವಳು ? ಎಲ್ಲವನ್ನೂ ನನಗೆ ಹೇಳಿರಿ" ಎಂದು ಜನರನ್ನು ಕೇಳಿದನು.

೧೮–೨೧. ಜನರು ಹೇಳುತ್ತಾರೆ:— ಗಾಧಿಯ ಸುತೆಯಾದ ಇವಳು ಸಮಸ್ತ ಗುಣಗಳಿಂದ ವಿರಾಜಿಸುವ ಒಳ್ಳೆಯ ಪತಿಯನ್ನು ಅಪೇಕ್ಷಿಸುತ್ತ ಗೌರೀ

ಉಮಾ ಸಂತಿಷ್ಠತೇ ಚಾಽತ್ರ ಸರ್ವೈಃ ಸಂಪೂಜಿತಾ ಸುರೈಃ ।
ಏತಾಂ ಚ ಸ್ನಾಪಯಿತ್ವೇಯಂ ಪೂಜಯಿತ್ವಾ ಯಥಾಕ್ರಮಂ ॥ ೨೦ ॥
ನೈವೇದ್ಯಂ ವಿವಿಧಂ ದತ್ವಾ ಕರಿಷ್ಯತಿ ತತಃ ಪರಂ ।
ವೀಣಾವಿನೋದಮಾತ್ರಂ ಚ ಶ್ರುತಿಮಾರ್ಗಸುಖಾವಹಂ ॥ ೨೧ ॥
ತತೋ ಯಾಸ್ಯತಿ ಹರ್ಮ್ಯಂ ಸ್ವಂ ಮಂದೀಭೂತೇ ಚ ಭಾಸ್ಕರೇ ।
ಋಚೀಕಸ್ತು ತದಾಕರ್ಣ್ಯ ಲೋಕಾನಾಂ ವಚನಂ ಚ ಯತ್ ॥ ೨೨ ॥
ಯಯೌ ಗಾಧಿಗೃಹಂ ಶೀಘ್ರಂ ಕಾಮಬಾಣಪ್ರಪೀಡಿತಃ ।
ತಂ ದೃಷ್ಟ್ವಾ ಸಹಸಾ ಪ್ರಾಪ್ತಮೃಚೀಕಂ ಭೃಗುಸತ್ತಮಂ ।
ಸಮ್ಮುಖಃ ಪ್ರಯಯೌ ತೂರ್ಣಂ ಗಾಧಿಃ ಪಾರ್ಥಿವಸತ್ತಮಃ ॥ ೨೩ ॥
ಗೃಹ್ಯೋಕ್ತೇನ ವಿಧಾನೇನ ಕೃತ್ವಾ ಚೈವಾರ್ಹಣಂ ತತಃ ।
ಕೃತಾಂಜಲಿಪುಟೋ ಭೂತ್ವಾ ವಾಕ್ಯಮೇತದುವಾಚ ಹ ॥ ೨೪ ॥
ನಿಃಸ್ಪೃಹಸ್ಯಾಽಪಿ ತೇ ವಿಪ್ರ ಕಿಮಾಗಮನಕಾರಣಂ ।
ತತ್ಸರ್ವಂ ಮೇ ಸಮಾಚಕ್ಷ್ವ ಯೇನ ಯಚ್ಛಾಮಿ ತೇಽಖಿಲಂ ॥ ೨೫ ॥

ಋಚೀಕ ಉವಾಚ :—

ತವ ಕನ್ಯಾಽಸ್ತಿ ವಿಪ್ರೇಂದ್ರ ವರಾರ್ಹಾ ವರವರ್ಣಿನೀ ।
ಬ್ರಾಹ್ಮೋಕ್ತೇನ ವಿವಾಹೇನ ತಾಂ ಮೇ ದೇಹಿ ಮಹೀಪತೇ ॥ ೨೬ ॥

---

ಪೂಜೆಗಾಗಿ ಅಂತಃಪುರದಿಂದ ಇಲ್ಲಿಗೆ ಬಂದಿರುವಳು. ಈ ನದಿಯ ದಡದಲ್ಲಿರುವ ದೇವಾಲಯದಲ್ಲಿ ಸಮಸ್ತ ದೇವತೆಗಳಿಂದ ಪೂಜ್ಯಳಾದ ಪಾರ್ವತಿಯು ಇರುವಳು. ಇವಳು ಈ ಗೌರಿಯನ್ನು ಅಭಿಷೇಕ ಮಾಡಿ ಕ್ರಮದಂತೆ ಪೂಜಿಸಿ ವಿವಿಧ ನೈವೇದ್ಯವನ್ನರ್ಪಿಸಿ ಕಿವಿಗಿಂಪಾಗಿ ವೀಣಾವಾದನವನ್ನು ಮಾಡುವಳು.

೨೨—೨೩. ಅನಂತರ ಸೂರ್ಯನು ಮುಳುಗಲು ತನ್ನ ಪ್ರಾಸಾದಕ್ಕೆ ತೆರಳುವಳು. ಋಚೀಕನು ಜನರ ಆ ಮಾತನ್ನು ಕೇಳಿ ಕಾಮಬಾಣದಿಂದ ಪೀಡಿತನಾಗಿ ತ್ವರೆಯಾಗಿ ಗಾಧಿಯ ಮನೆಗೆ ಹೋದನು. ಪಾರ್ಥಿವೇಂದ್ರನಾದ ಗಾಧಿಯು ಅಕಸ್ಮಾತ್ತಾಗಿ ಬಂದ ಋಚೀಕನನ್ನು ನೋಡಿ ಶೀಘ್ರವಾಗಿ ಎದುರುಗೊಂಡನು.

೨೪. ಅವನು ಮುನಿಗೆ ಗೃಹ್ಯೋಕ್ತವಿಧಿಯಿಂದ ಪೂಜಿಸಿ ಕೈಮುಗಿದುಕೊಂಡು ಇಂತೆಂದನು.

೨೫. "ವಿಪ್ರ! ನಿಸ್ಪೃಹನಾದ ನೀನು ಏತಕ್ಕೆ ಇಲ್ಲಿಗೆ ಬಂದಿರುವೆ? ಅದನ್ನೆಲ್ಲ ನನಗೆ ಹೇಳು. ನಿನಗೆ ಅದನ್ನು ಕೊಡುವೆನು."

೨೬. ಋಚೀಕನು ಹೇಳುತ್ತಾನೆ:—ನಿನಗೆ ಬ್ರಾಹ್ಮಣನು ವರಿಸಲರ್ಹಳಾದ ಕನ್ಯೆಯೊಬ್ಬಳಿರುವಳು. ರಾಜನೆ! ಅವಳನ್ನು ನನಗೆ ಬ್ರಾಹ್ಮವಿವಾಹ ವಿಧಿಯಿಂದ ಮದುವೆ ಮಾಡಿಕೊಡು.

ಏತದರ್ಥಮಹಂ ಪ್ರಾಪ್ತೋ ಗೃಹೇ ತವ ಸ್ಮರಾರ್ದಿತಃ ।
ಸಾ ಮಯಾ ವೀಕ್ಷಿತಾ ರಾಜನ್ ಗೌರೀ ಪೂಜಾರ್ಥಮಾಗತಾ ॥ ೨೭ ॥

ಸೂತ ಉವಾಚ :—

ತಚ್ಛ್ರುತ್ವಾ ಭಯಸಂತ್ರಸ್ತೋ ಗಾಧಿಃ ಪಾರ್ಥಿವಸತ್ತಮಃ ।
ಅಸವರ್ಣಂ ಚ ತಂ ಮತ್ವಾ ದರಿದ್ರಂ ವೃದ್ಧಮೇವ ಚ ।
ಅದಾನೇ ಶಾಪಭೀತಸ್ತು ತತೋ ವ್ಯಾಜಮುವಾಚ ಸಃ ॥ ೨೮ ॥
ಅಸ್ಮಾಕಂ ಕನ್ಯಕಾ ದಾನೇ ಶುಲ್ಕಮಸ್ತಿ ದ್ವಿಜೋತ್ತಮ ।
ತಚ್ಚೇದ್ಯಚ್ಛಸಿ ಕನ್ಯಾಂ ತಾಂ ತುಭ್ಯಂ ದಾಸ್ಯಾಮ್ಯಸಂಶಯಂ ॥ ೨೯ ॥

ಋಚೀಕ ಉವಾಚ :—

ಬ್ರೂಹಿ ಪಾರ್ಥಿವ ಶಾರ್ದೂಲ ಕನ್ಯಾಶುಲ್ಕಂ ಮಮ ದ್ರುತಂ ।
ಯೇನ ಯಚ್ಛಾಮಿ ತೇ ಸರ್ವಂ ಯದ್ಯಪಿ ಸ್ಯಾತ್ಸುದುರ್ಲಭಂ ॥ ೩೦ ॥

ಗಾಧಿರುವಾಚ :—

ಏಕತಃ ಶ್ಯಾಮಕರ್ಣಾನಾಮಶ್ವಾನಾಂ ವಾತರಂಹಸಾಂ ।
ಶತಾನಿ ಸಪ್ತ ವಿಪ್ರೇಂದ್ರ ಶ್ವೇತಾನಾಂ ಚೈವ ಸರ್ವತಃ ॥ ೩೧ ॥
ಯ ಆನೀಯ ಪ್ರದದ್ಯಾನ್ಮೇ ತಸ್ಮೈ ಕನ್ಯಾಂ ದದಾಮ್ಯಹಂ ॥ ೩೨ ॥

---

೨೭. ಇದಕ್ಕಾಗಿ ನಾನು ಮನ್ಮಥಪೀಡಿತನಾಗಿ ನಿನ್ನ ಮನೆಗೆ ಬಂದಿದ್ದೇನೆ. ಗೌರೀ ಪೂಜೆಗಾಗಿ ಬಂದ ಅವಳನ್ನು ನಾನು ನೋಡಿರುವೆನು.

೨೮. ಸೂತನು ಹೇಳುತ್ತಾನೆ:—ಅದನ್ನು ಕೇಳಿ ಭಯಗೊಂಡ ಗಾಧಿ ರಾಜನು ಅವನು ಅಸವರ್ಣನೂ, ದರಿದ್ರನೂ, ಮುದುಕನೂ ಆಗಿರುವನೆಂದರಿತು ಕನ್ಯೆಯನ್ನು ಕೊಡದಿದ್ದರೆ ಶಾಪವನ್ನಿತ್ತಾನೆಂದು ಒಂದು ಕಪಟದ ಮಾತನ್ನಾಡಿದನು.

೨೯. "ವಿಪ್ರ! ನಮ್ಮ ಕನ್ಯೆಯನ್ನು ಕೊಡಲು ಒಂದು ಮೂಲ್ಯವಿದೆ. ಅದನ್ನು ನೀನು ಕೊಡುವುದಾದರೆ ಆ ಕನ್ಯೆಯನ್ನು ನಿನಗೆ ವಿವಾಹ ಮಾಡಿ ಕೊಡುವೆನು.

೩೦. ಋಚೀಕನು ಹೇಳುತ್ತಾನೆ:—ಅರಸ! ಕನ್ಯಾಶುಲ್ಕವು ಯಾವುದೆಂಬುದನ್ನು ನನಗೆ ಶೀಘ್ರವಾಗಿ ಹೇಳು. ಅದು ದುರ್ಲಭವಾಗಿದ್ದರೂ ನಿನಗೆ ಕೊಡುವೆನು.

೩೧–೩೨. ಗಾಧಿಯು ಹೇಳುತ್ತಾನೆ:—ಬ್ರಾಹ್ಮಣ! ಒಂದು ಕಿವಿಯು ಮಾತ್ರ ಕಪ್ಪಾಗಿ ಗಾಳಿಯಂತೆ ವೇಗವುಳ್ಳ ಮೈಯೆಲ್ಲ ಬೆಳ್ಳಗಿರುವ ಏಳನೂರು ಕುದುರೆಗಳನ್ನು ತಂದುಕೊಟ್ಟವನಿಗೆ ನನ್ನ ಕನ್ಯೆಯನ್ನು ಕೊಡುವೆನು.

ಸೂತ ಉವಾಚ :—

ಸ ತಥೇತಿ ಪ್ರತಿಜ್ಞಾಯ ಋಚೀಕೋ ಮುನಿಸತ್ತಮಃ ।
ಕಾನ್ಯಕುಬ್ಜಂ ಸಮಾಸಾದ್ಯ ಗಂಗಾತೀರೇ ವಿವೇಶ ಹ ॥ ೩೩ ॥
ಅಶ್ವೋ ವೋಢೇತಿಯತ್ಸೂಕ್ತಂ ಚತುಃಷಷ್ಟಿ ಸಮುದ್ಭವಂ ।
ಛಂದಋಷಿ ದೇವತಾಯುಕ್ತಂ ಜಪಂ ಚಕ್ರೇ ತತಃ ಪರಂ ॥ ೩೪ ॥
ವಿನಿಯೋಗಂ ವಾಜಿಕೃತಂ ಗಾಧಿನಾ ಯತ್ಪ್ರಕೀರ್ತಿತಂ ।
ತತಸ್ತೇ ವಾಜಿನಸ್ತಸ್ಮಾನ್ನಿಷ್ಕ್ರಾಂತಾಃ ಸಲಿಲಾದ್ದ್ವಿಜಾಃ ॥ ೩೫ ॥
ಸರ್ವಶ್ವೇತಾಃ ಸುವೇಗಾಶ್ಚ ಶ್ಯಾಮೈಕ ಶ್ರವಣಾಸ್ತಥಾ ।
ಶತಾನಿ ಸಪ್ತಸಂಖ್ಯಾನಿ ತಾವತ್ಸಂಖ್ಯೈರ್ನರೈರ್ಯುತಾಃ ॥ ೩೬ ॥
ತತಃ ಪ್ರಭೃತಿ ವಿಖ್ಯಾತಮಶ್ವತೀರ್ಥಂ ಧರಾತಲೇ ।
ಗಂಗಾತೀರೇ ಶುಭೇ ಪುಣ್ಯೇ ಕಾನ್ಯಕುಬ್ಜ ಸಮೀಪಗಂ ।
ಯಸ್ಮಿನ್ ಸ್ನಾನೇ ಕೃತೇ ಮರ್ತ್ಯೋ ವಾಜಿಮೇಧಫಲಂ ಲಭೇತ್ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಶ್ವತೀರ್ಥೋತ್ಪತ್ತಿವರ್ಣನಂ" ನಾಮ ಪಂಚಷಷ್ಟ್ಯುತ್ತರಶತತಮೋಽಧ್ಯಾಯಃ

---

೩೩–೩೬. ಸೂತನು ಹೇಳುತ್ತಾನೆ :—ಅವನು ಹಾಗೆಯೇ ಆಗಲೆಂದು ಒಪ್ಪಿ ಕಾನ್ಯಕುಬ್ಜವನ್ನು ಸೇರಿ ಗಂಗೆಯ ದಡದಲ್ಲಿ ಕುಳಿತು ಗಾಧಿಯು ಹೇಳಿದ ಅಶ್ವಗಳಿಗಾಗಿ ಅರುವತ್ತನಾಲ್ಕನೆ ಅಶ್ವೋವೋಢೇತ್ಯಾದಿ ಸೂಕ್ತವನ್ನು ದೇವರ್ಷಿ ಛಂದಸ್ಸುಗಳೊಡನೆ ಜಪಿಸಿದನು. ಅನಂತರ ಆ ಗಂಗೆಯ ನೀರಿನಿಂದ ಮೈಯೆಲ್ಲ ಬೆಳ್ಳಗಿರುವುವೂ, ಅತ್ಯಂತ ವೇಗವುಳ್ಳುವೂ, ಒಂದು ಕಿವಿ ಮಾತ್ರ ಕಪ್ಪಗೂ ಇರುವ ಏಳನೂರು ಕುದುರೆಗಳು ಏಳನೂರು ಮನುಷ್ಯರೊಡನೆ ಮೇಲಕ್ಕೆ ಬಂದುವು.

೩೭. ಅದು ಮೊದಲ್ಗೊಂಡು ಕಾನ್ಯಕುಬ್ಜದ ಹತ್ತಿರ ಗಂಗಾ ದಡದಲ್ಲಿ ಅಶ್ವತೀರ್ಥವು ಪ್ರಸಿದ್ಧವಾಯಿತು. ಇದರಲ್ಲಿ ಮಿಂದ ಮನುಷ್ಯನು ಅಶ್ವಮೇಧಯಾಗದ ಫಲವನ್ನು ಪಡೆಯುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಶ್ವತೀರ್ಥೋತ್ಪತ್ತಿವರ್ಣನ" ವೆಂಬ
ನೂರರುವತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

### ಪರಶುರಾಮೋತ್ಪತ್ತಿವರ್ಣನಂ

ಸೂತ ಉವಾಚ :—

ಋಚೀಕೋಽಪಿ ಸಮಾದಾಯ ಪುರುಷೈರಾಪ್ತಕಾರಿಭಿಃ ।
ತಾನಶ್ವಾನ್ ಪ್ರಜಗಾಮಾಽಥ ಯತ್ರ ಗಾಧಿರ್ವ್ಯವಸ್ಥಿತಃ ॥ ೧ ॥
ತಸ್ಮೈ ನಿವೇದಯಾಮಾಸ ಕನ್ಯಾರ್ಥಂ ತಾನ್ ಹಯೋತ್ತಮಾನ್ ।
ಗಾಧಿಸ್ತು ತಾನ್ ಪ್ರಗೃಹ್ಯಾಽಥ ಯೋಗ್ಯಾನ್ ವಾಜಿಮಖಸ್ಯ ಚ ॥ ೨ ॥
ಏಕೈಕಂ ಪರಮಂ ತೇಷಾಂ ಸ ಜಗಾಮಾಽಥ ಪಾರ್ಥಿವಃ ।
ತತಸ್ತಾಂ ಪ್ರದದೌ ತಸ್ಮೈ ಕನ್ಯಾಂ ತ್ರೈಲೋಕ್ಯಸುಂದರೀಂ ॥ ೩ ॥
ವಿಪ್ರಾಗ್ನಿ ಸಾಕ್ಷಿ ಸಂಭೂತಾಂ ಗೃಹ್ಯೋಕ್ತವಿಧಿನಾನ್ವಿತಃ ।
ತತೋ ವಿವಾಹೇ ನಿರ್ವೃತ್ತೇ ಋಚೀಕೋ ಮುನಿಸತ್ತಮಃ ॥ ೪ ॥
ತಸ್ಯಾಃ ಸಂವೇಶನೇಚ್ಛೈವ ನಿಷ್ಕಾಮಃ ಸಮುಪದ್ಯತ ।
ಅಥಾಽಬ್ರವೀನ್ನಿಜಾಂ ಭಾರ್ಯಾಂ ನಿಷ್ಕಾಮಃ ಸಂಸ್ಥಿತೋ ಮುನಿಃ ॥ ೫ ॥
ಅಹಂ ಯಾಸ್ಯಾಮಿ ಸುಶ್ರೋಣಿ ಕಾನನಂ ತಪಸಃ ಕೃತೇ ।
ತ್ವಂ ಪ್ರಾರ್ಥಯ ವರಂ ಕಂಚಿದ್ಯೇನಾಭೀಷ್ಟಂ ದದಾಮಿ ತೇ ॥ ೬ ॥

---

### ಕನ್ನಡದ ಅನುವಾದ

#### ಪರಶುರಾಮೋತ್ಪತ್ತಿವರ್ಣನ

೧—೫. ಸೂತನು ಹೇಳುತ್ತಾನೆ :—ಋಚೀಕನು ಆಪ್ತರಾದವರಿಂದ ಆ ಕುದುರೆಗಳನ್ನು ತೆಗೆಯಿಸಿಕೊಂಡು ಗಾಧಿಯ ಹತ್ತಿರ ಹೋಗಿ ಅವನಿಗೆ ಆ ಉತ್ತಮ ಕುದುರೆಗಳನ್ನು ಕನ್ಯಾಶುಲ್ಕವಾಗಿ ಕೊಟ್ಟನು. ಗಾಧಿಯು ಅಶ್ವಮೇಧಯಾಗಕ್ಕೆ ಉಚಿತವಾದ ಶ್ರೇಷ್ಠವಾದ ಅವುಗಳನ್ನು ಸ್ವೀಕರಿಸಿ ತ್ರೈಲೋಕ್ಯಸುಂದರಿಯಾದ ಆ ತನ್ನ ಕನ್ಯೆಯನ್ನು ಅವನಿಗೆ ವಿಪ್ರಾಗ್ನಿಸಾಕ್ಷಿಯಾಗಿ ಗೃಹ್ಯೋಕ್ತವಿಧಿಯಿಂದ ವಿವಾಹ ಮಾಡಿಕೊಟ್ಟನು. ಹೀಗೆ ಮದುವೆಯಾಗಲು ಋಚೀಕನು ಅವಳೊಡನೆ ನಿದ್ರಿಸುವುದರಲ್ಲಿಯೇ ನಿಷ್ಕಾಮನಾಗಿ ಆ ಪತ್ನಿಯನ್ನು ಕುರಿತು ಇಂತೆಂದನು.

೬. ಸುಂದರಿ! ನಾನು ತಪಸ್ವಿಯಾಗಿ ಕಾಡಿಗೆ ಹೋಗುವೆನು. ನೀನು ವರವನ್ನು ಕೇಳಿಕೊ. ನಿನ್ನ ಅಭೀಷ್ಟವನ್ನು ಕೊಡುವೆನು.

ಸಾ ಶ್ರುತ್ವಾ ತಸ್ಯ ತದ್ವಾಕ್ಯಂ ನಿಷ್ಕಾಮಸ್ಯ ಪ್ರಜಲ್ಪಿತಂ ।
ಬಾಷ್ಪಪೂರ್ಣೇಕ್ಷಣಾ ದೀನಾ ಜಗಾಮ ಜನನೀಂ ಪ್ರತಿ ॥ ೭ ॥
ಪ್ರೋವಾಚ ವಚನಂ ತಸ್ಯ ಸಾ ನಿಷ್ಕಾಮಪತೇಸ್ತದಾ ।
ವರದಾನಂ ತಥಾ ತೇನ ಯಥೋಕ್ತಂ ದ್ವಿಜಸತ್ತಮಾಃ ॥ ೮ ॥
ಅಥ ಶ್ರುತ್ವೈವ ಸಾ ಮಾತಾ ಯಥಾ ತಜ್ಜಲ್ಪಿತಂ ತಯಾ ।
ಸುತಯಾ ಬ್ರಾಹ್ಮಣಶ್ರೇಷ್ಠಾಸ್ತತೋ ವಚನಮಬ್ರವೀತ್ ॥ ೯ ॥
ಯದ್ಯಯಂ ಪುತ್ರಿ ತೇ ಭರ್ತಾ ವರಂ ಯಚ್ಛತಿ ವಾಂಛಿತಂ ।
ತತ್ಪ್ರಾರ್ಥಯ ಸುತಂ ತಸ್ಮಾದ್ಬ್ರಾಹ್ಮಣ್ಯೇನ ಸಮನ್ವಿತಂ ॥ ೧೦ ॥
ಮದರ್ಥಂ ಚೈಕಪುತ್ರಂ ಚ ನಿಃಶೇಷಕ್ಷಾತ್ರ ತೇಜಸಾ ।
ಸಂಯುಕ್ತಂ ಯಾಚಯ ಶುಭೇ ಅಪುತ್ರಾಽಹಂ ಯತಃ ಸ್ಥಿತಾ ॥ ೧೧ ॥
ಸಾ ಶ್ರುತ್ವಾ ಜನನೀ ವಾಕ್ಯಮೃಚೀಕಂ ಪ್ರಾಪ್ಯ ಸುವ್ರತಾ ।
ಅಬ್ರವೀಜ್ಜನನೀ ವಾಕ್ಯಂ ಸರ್ವಂ ವಿಸ್ತರತೋ ದ್ವಿಜಾಃ ॥ ೧೨ ॥
ಸ ತಸ್ಯಾಶ್ಚ ವಚಃ ಶ್ರುತ್ವಾ ಚಕಾರಾಽಥ ಚರುದ್ವಯಂ ।
ಪುತ್ರೇಷ್ಟಿಂ ವಿಧಿವತ್ಕೃತ್ವಾ ನಮಸ್ಕೃತ್ಯ ಸ್ವಯಂಭುವಂ ॥ ೧೩ ॥
ಏಕಸ್ಮಿನ್ ಯೋಜಯಾಮಾಸ ಬ್ರಾಹ್ಮ್ಯಂ ತೇಜೋಽಖಿಲಂ ಚ ಸಃ ।
ಕ್ಷಾತ್ರಂ ತೇಜಸ್ತಥಾಽನ್ಯಸ್ಮಿನ್ ಸಕಲಂ ದ್ವಿಜಸತ್ತಮಾಃ ॥ ೧೪ ॥

---

೭–೮. ಅವಳು ನಿಷ್ಕಾಮನಾದ ಆ ಪತಿಯ ಆ ಮಾತನ್ನು ಕೇಳಿ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ತಾಯಿಯ ಹತ್ತಿರ ಹೋಗಿ ಅವನ ಮಾತನ್ನೂ, ಅವನು ವರವನ್ನು ಕೊಡುತ್ತೇನೆಂಬುದನ್ನೂ ಹೇಳಿದಳು.

೯. ತಾಯಿಯು ಮಗಳು ಹೇಳಿದ ಆ ಮಾತನ್ನು ಕೇಳಿ ಇಂತೆಂದಳು.

೧೦. "ಮಗು! ನಿನ್ನ ಪತಿಯು ಇಷ್ಟವಾದ ವರವನ್ನು ಕೊಡುವುದಾದರೆ ಬ್ರಾಹ್ಮಣ್ಯದಿಂದ ಕೂಡಿದ ಪುತ್ರನನ್ನು ಕೇಳು.

೧೧. ನಾನೂ ಅಪುತ್ರಳಾಗಿರುವುದರಿಂದ ನನಗಾಗಿ ಸಂಪೂರ್ಣ ಕ್ಷತ್ರಿಯ ತೇಜಸ್ಸಿನಿಂದ ಕೂಡಿದ ಒಬ್ಬ ಪುತ್ರನನ್ನು ಕೇಳು."

೧೨. ದ್ವಿಜರೆ! ಆ ಸುವ್ರತೆಯು ತಾಯಿಯ ಮಾತನ್ನು ಕೇಳಿ ಋಚೀಕನ ಹತ್ತಿರ ಹೋಗಿ ಆ ಮಾತನ್ನು ವಿಸ್ತಾರವಾಗಿ ಹೇಳಿದಳು.

೧೩–೧೪. ತರುವಾಯ ಅವನು ಅವಳ ಮಾತನ್ನು ಕೇಳಿ ಎರಡು ಚರುಗಳನ್ನು ಮಾಡಿ ವಿಧಿಯಂತೆ ಪುತ್ರೇಷ್ಟಿಯನ್ನು ನೆರವೇರಿಸಿ ಬ್ರಹ್ಮನನ್ನು ವಂದಿಸಿ ಒಂದು ಚರುವಿನಲ್ಲಿ ಸಕಲ ಬ್ರಾಹ್ಮತೇಜಸ್ಸನ್ನೂ, ಇನ್ನೊಂದರಲ್ಲಿ ಕ್ಷಾತ್ರ ತೇಜಸ್ಸನ್ನೂ ಸೇರಿಸಿದನು.

ಭಾರ್ಯಾಯೈ ಪ್ರದದೌ ಪೂರ್ವಂ ಬ್ರಾಹ್ಮ್ಯಂ ಚ ಚರುಮುತ್ತಮಂ ।
ಅಬ್ರವೀತ್ಪ್ರಾಶಯಿತ್ವೈನಮಶ್ವತ್ಥಾಲಿಂಗನಂ ಕುರು ॥ ೧೫ ॥
ತತಃ ಪ್ರಾಪ್ಸ್ಯಸಿ ಸತ್ಪುತ್ರಂ ಬ್ರಾಹ್ಮ್ಯತೇಜಃ ಸಮನ್ವಿತಂ ।
ದ್ವಿತೀಯಶ್ಚರುಕೋ ಯಶ್ಚ ತಂ ತ್ವಂ ಮಾತ್ರೇ ನಿವೇದಯ ॥ ೧೬ ॥
ಅಬ್ರವೀಚ್ಚ ತತಸ್ತಾಂ ತು ಋಚೀಕೋ ಮುನಿಸತ್ತಮಃ ।
ತ್ವಮೇನಂ ಚರುಕಂ ಪ್ರಾಶ್ಯ ನ್ಯಗ್ರೋಧಾಲಿಂಗನಂ ಕುರು ॥ ೧೭ ॥
ತತಃ ಪ್ರಾಪ್ಸ್ಯಸಿ ಸತ್ಪುತ್ರಂ ಸಂಯುಕ್ತಂ ಕ್ಷಾತ್ರತೇಜಸಾ ।
ನಿಃಶೇಷೇಣ ಮಹಾಭಾಗೇ ನ ಮೇ ಸ್ಯಾದ್ವಚನಂ ವೃಥಾ ॥ ೧೮ ॥
ಏವಮುಕ್ತ್ವಾ ಋಚೀಕಸ್ತು ಸ ವಿಸೃಜ್ಯ ಚ ತೇಜಸೀ ।
ಸುಹೃಷ್ಟೋ ಬ್ರಾಹ್ಮಣಶ್ರೇಷ್ಠಃ ಸ್ವಯಂ ಚ ಮಹಿತೋಽಭವತ್ ॥ ೧೯ ॥
ತೇ ಚೈವ ತು ಗೃಹೇ ಗತ್ವಾ ಪ್ರಹೃಷ್ಟೇನಾಂತರಾತ್ಮನಾ ।
ಊಚತುಶ್ಚ ಮಿಥಸ್ತೇ ಚ ಸತ್ಯಮೇತದ್ಭವಿಷ್ಯತಿ ॥ ೨೦ ॥
ತತೋ ಮಾತಾ ಸುತಾಂ ಪ್ರಾಹ ಆತ್ಮಾರ್ಥೇ ಸಕಲೋ ಜನಃ ।
ವಿಶೇಷಂ ಕುರುತೇ ಕೃತ್ಯೇ ಸಾಮಾನ್ಯೇ ಚ ವ್ಯವಸ್ಥಿತೇ ॥ ೨೧ ॥
ತತ್ತ್ವಾರ್ಥಂ ಕೃತೋಽನೇನ ಯಶ್ಚರುಶ್ಚಾರುಲೋಚನೇ ।
ಯಸ್ತಸ್ಮಿನ್ ವಿಹಿತೋಽನೇನ ಮಂತ್ರಗ್ರಾಮೋ ಭವಿಷ್ಯತಿ ।
ವಿಶೇಷೇಣ ಮಹಾಭಾಗೇ ಸತ್ಯಮೇತನ್ಮಯೋದಿತಂ ॥ ೨೨ ॥

---

೧೫. ಮೊದಲಿನ ಉತ್ತಮವಾದ ಬ್ರಾಹ್ಮ್ಯಚರುವನ್ನು ತನ್ನ ಪತ್ನಿಗೆ ಕೊಟ್ಟು ಹೀಗೆಂದನು. "ಈ ಚರುವನ್ನು ತಿಂದು ಅಶ್ವತ್ಥದ ಮರವನ್ನು ಆಲಿಂಗಿಸು.

೧೬. ಅದರಿಂದ ಬ್ರಾಹ್ಮಣ ತೇಜಸ್ಸಿನಿಂದ ಕೂಡಿದ ಒಳ್ಳೆ ಪುತ್ರನನ್ನು ಪಡೆಯುವೆ. ಎರಡನೆ ಚರುವನ್ನು ನಿನ್ನ ತಾಯಿಗೆ ಕೊಡು" ಎಂದನು.

೧೭. ಹಾಗೆಯೇ ಅವನು ಅವಳ ತಾಯಿಯನ್ನು ಕುರಿತು, "ನೀನು ಈ ಚರುವನ್ನು ತಿಂದು ಆಲದ ಮರವನ್ನು ಆಲಿಂಗಿಸು.

೧೮. ಅದರಿಂದ ಸಂಪೂರ್ಣ ಕ್ಷತ್ರಿಯ ತೇಜಸ್ಸಿನಿಂದ ಕೂಡಿದ ಸತ್ಪುತ್ರನನ್ನು ಪಡೆಯುವೆ. ನನ್ನ ಮಾತು ವ್ಯರ್ಥವಾಗುವುದಿಲ್ಲ" ಎಂದನು.

೧೯. ಬ್ರಾಹ್ಮಣೋತ್ತಮನಾದ ಋಚೀಕನು ಹೀಗೆ ಹೇಳಿ ಆ ತೇಜಸ್ಸುಗಳನ್ನು ಬಿಟ್ಟು ತಾನು ಸಂತೋಷದಿಂದ ಉತ್ಸವನಿರತನಾದನು.

೨೦. ಅವರಿಬ್ಬರೂ ಮನೆಗೆ ಹೋಗಿ ಸಂತೋಷಗೊಂಡ ಮನಸ್ಸಿನಿಂದ ಇದು ನಿಜವಾಗುವುದೆಂದು ಪರಸ್ಪರ ಮಾತಾಡಿಕೊಂಡರು.

೨೧. ಅನಂತರ ತಾಯಿಯು ಮಗಳನ್ನು ಕುರಿತು, "ಎಲ್ಲರೂ ತಮಗಾಗಿ ಸಾಮಾನ್ಯ ಕಾರ್ಯವನ್ನೂ ಅತಿಶಯವಾಗಿ ಮಾಡಿಕೊಳ್ಳುವರು.

೨೨. ಆದುದರಿಂದ ಈ ಋಚೀಕನು ನಿನಗಾಗಿ ಮಾಡಿದ ಚರುವಿನಲ್ಲಿ ಮಂತ್ರಗಳ ಸಮೂಹವನ್ನೆಲ್ಲ ವಿಧಿಸಿರುವನು. ನಾನು ಹೇಳಿರುವುದು ನಿಜ.

ತಸ್ಮಾಚ್ಚ ಚರುಕಂ ಮಹ್ಯಂ ತ್ವಂ ಗೃಹಾಣ ಶುಚಿಸ್ಮಿತೇ ।
ಆತ್ಮೀಯಂ ಮಮ ಯಚ್ಛಸ್ವ ವೃಕ್ಷಾಭ್ಯಾಂ ಚ ವಿಪರ್ಯಯಃ ।
ಕ್ರಿಯತಾಂ ಚ ಮಹಾಭಾಗೇ ಯೇನ ಮೇಸ್ಯಾತ್ಸುತೋತ್ತಮಃ ॥ ೨೩ ॥
ರಾಜ್ಯಕರ್ಮಣಿ ದಕ್ಷಶ್ಚ ಶೂರಃ ಪರಬಲಾರ್ದನಃ ।
ತ್ವದೀಯೋ ದ್ವಿಜಮಾತ್ರೋಽಪಿ ತವತುಷ್ಟಿಂ ಕರಿಷ್ಯತಿ ॥ ೨೪ ॥
ಅಥ ಸಾ ವಿಜನೇ ಪ್ರೋಕ್ತಾ ತಯಾ ಮಾತ್ರಾ ಯಶಸ್ವಿನೀ ।
ಅಕರೋದ್ವ್ಯತ್ಯಯಂ ವೃಕ್ಷೇ ಚರೌ ಚ ದ್ವಿಜಸತ್ತಮಾಃ ॥ ೨೫ ॥
ತತಃ ಪುಂಸವನೇ ಸ್ನಾತೇ ತೇ ಶುಭೇ ಚಾರುಲೋಚನೇ ।
ದಧಾತೇ ಗರ್ಭಮೇವಾಽಥ ಭರ್ತುಃ ಸಂಯೋಗತಃ ಕ್ಷಣಾತ್ ॥ ೨೬ ॥
ತತಸ್ತು ಗರ್ಭಮಾಸಾದ್ಯ ಸಾ ಚ ತ್ರೈಲೋಕ್ಯಸುಂದರೀ ।
ಕ್ಷಾತ್ರೇಣ ತೇಜಸಾ ಯುಕ್ತಾ ತತ್ಕ್ಷಣಾತ್ಸಮಪದ್ಯತ ।
ಮನೋ ರಾಜ್ಯೇ ತತಶ್ಚಕ್ರೇ ಹಸ್ತ್ಯಶ್ವಾರೋಹಣೋದ್ಭವೇ ॥ ೨೭ ॥
ಯುದ್ಧವಾರ್ತಾಸ್ತಥಾ ಚಕ್ರೇ ದೇವಾಸುರಗಣೋದ್ಭವಾಃ ।
ಶೃಣೋತಿ ಚ ತಥಾ ನಿತ್ಯಂ ವಿಲಾಸೇಷು ಮನೋ ದಧೇ ।
ಅನುಷ್ಠಾನಂ ತತಶ್ಚಕ್ರೇ ಮನೋರಾಜ್ಯಸಮುದ್ಭವಂ ॥ ೨೮ ॥

---

೨೩–೨೪. ಆದುದರಿಂದ ನೀನು ನನ್ನ ಚರುವನ್ನು ತೆಗೆದುಕೊಂಡು ನಿನ್ನ ಚರುವನ್ನು ನನಗೆ ಕೊಡು. ಆಲಿಂಗನೆಯಲ್ಲಿಯೂ ಮರಗಳನ್ನು ವ್ಯತ್ಯಾಸ ಮಾಡಿಕೊಳ್ಳೋಣ. ಅದರಿಂದ ನನಗೆ ರಾಜ್ಯಕಾರ್ಯದಲ್ಲಿ ಕುಶಲನೂ, ಶೂರನೂ, ಶತ್ರುಗಳನ್ನು ನಾಶಗೊಳಿಸುವವನೂ ಆದ ಉತ್ತಮ ಪುತ್ರನು ಜನಿಸುವನು. ನಿನ್ನ ಪುತ್ರನು ಕೇವಲ ಬ್ರಾಹ್ಮಣ ಮಾತ್ರನಾಗಿದ್ದರೂ ನಿನಗೆ ಸಂತೋಷವನ್ನುಂಟು ಮಾಡುವನು.''

೨೫. ದ್ವಿಜವರ್ಯರೆ! ಆ ಪುತ್ರಿಯು, ತಾಯಿಯು ರಹಸ್ಯದಲ್ಲಿ ಹೇಳಿದಂತೆ ವೃಕ್ಷ ಮತ್ತು ಚರುಗಳಲ್ಲಿ ವ್ಯತ್ಯಾಸವನ್ನು ಮಾಡಿದಳು.

೨೬. ಅನಂತರ ಅವರಿಬ್ಬರು ಹೆಂಗಸರು ಮಿಂದು ಪತಿಯ ಸಂಬಂಧದಿಂದ ಕೂಡಲೆ ಗರ್ಭವನ್ನು ಧರಿಸಿದರು.

೨೭. ತ್ರೈಲೋಕ್ಯಸುಂದರಿಯಾದ ಆ ಋಚೀಕನ ಪತ್ನಿಯು ಗರ್ಭಿಣಿ ಯಾಗಿ ಕೂಡಲೆ ಕ್ಷತ್ರಿಯ ತೇಜಸ್ಸಿನಿಂದ ಸಹಿತಳಾಗಿ ಮನಸ್ಸಿನಲ್ಲಿ ಆನೆ ಕುದುರೆ ಗಳನ್ನು ಏರಲು ಬಯಸಿದಳು.

೨೮–೨೯. ಹಾಗೆಯೇ ದೇವಾಸುರರ ಯುದ್ಧದ ಸಮಾಚಾರಗಳನ್ನು ಕೇಳಿ ದಳು. ವಿಲಾಸಕಾರ್ಯಗಳನ್ನು ಮಾಡಲು ಆಲೋಚಿಸಿದಳು. ತಂದೆಯ ಮನೆ

ಪಿತುರ್ಗೃಹಾತ್ಸಮಾನೀಯ ಜಾತ್ಯಾನಶ್ವಾಂಸ್ತಥಾ ಗಜಾನ್ ।
ರಕ್ತಾನಿ ಚೈವ ವಸ್ತ್ರಾಣಿ ಕಾಶ್ಮೀರಾದ್ಯಂ ವಿಲೇಪನಂ ॥ ೨೯ ॥
ತದ್ದೃಷ್ಟ್ವಾ ಚೇಷ್ಟಿತಂ ತಸ್ಯಾ ರಾಜ್ಯಾರ್ಹಂ ಬಹುಭೋಗಧೃಕ್ ।
ಬ್ರಾಹ್ಮಣಾರ್ಹೈಃ ಪರಿತ್ಯಕ್ತಂ ಸಮಾಚಾರೈಶ್ಚ ಕೃತ್ಸ್ನಶಃ ॥ ೩೦ ॥
ಅಬ್ರವೀಚ್ಚ ತತಃ ಕ್ರುದ್ಧೋ ಧಿಕ್ಪಾಪೇ ಕಿಮಿದಂ ಕೃತಂ ।
ವ್ಯತ್ಯಯೋ ವಿಹಿತೋ ನೂನಂ ಚರುಕಸ್ಯ ನಗಸ್ಯ ಚ ॥ ೩೧ ॥
ತ್ವಯಾ ಪಾಪೇ ಪ್ರಪಶ್ಯಾಮಿ ಯೇನೇದೃಕ್ತವ ಚೇಷ್ಟಿತಂ ।
ಕ್ಷತ್ರಿಯಾರ್ಹಂ ದ್ವಿಜಾಚಾರೈಃ ಸಕಲೈಃ ಪರಿವರ್ಜಿತಂ ॥ ೩೨ ॥
ಚೀರವಲ್ಕಲಸಂತ್ಯಕ್ತಂ ಸ್ನಾನಜಾಪ್ಯ ವಿವರ್ಜಿತಂ ।
ಸಂಯುಕ್ತಂ ವಿವಿಧೈರ್ಗಂಧೈರ್ಮೃಗನಾಭಿಪುರಃಸರೈಃ ॥ ೩೩ ॥
ತವ ಮಾತಾ ಶಮಸ್ಥಾ ಸಾ ಜಪಹೋಮಪರಾಯಣಾ ।
ತೀರ್ಥಯಾತ್ರಾ ಪರಾ ಚೈವ ವೇದಶ್ರವಣಲಾಲಸಾ ॥ ೩೪ ॥
ತಸ್ಮಾತ್ತೇ ಕ್ಷತ್ರಿಯಃ ಪುತ್ರೋ ಭವಿಷ್ಯತಿ ನ ಸಂಶಯಃ ॥ ೩೫ ॥
ಮಾತುಶ್ಚ ಬ್ರಾಹ್ಮಣಶ್ರೇಷ್ಠೋ ಬ್ರಹ್ಮಚರ್ಯಕಥಾಪರಃ ।
ಭವಿಷ್ಯತಿ ಸುತಶ್ಚಿಹ್ನೈರ್ಗರ್ಭಲಕ್ಷಣ ಸಂಭವೈಃ ॥ ೩೬ ॥

---

ಯಿಂದ ಒಳ್ಳೆ ಜಾತಿಯ ಅಶ್ವಗಳನ್ನೂ, ಆನೆಗಳನ್ನೂ, ಕೆಂಪು ವಸ್ತ್ರಗಳನ್ನೂ, ಕುಂಕುಮ ಮೊದಲಾದ ಲೇಪನ ದ್ರವ್ಯಗಳನ್ನೂ ತರಿಸಿ ಮನಸ್ಸಿನಲ್ಲಿ ರಾಜ್ಯಭಾರ ಮಾಡಿದಳು.

೩೦–೩೧. ಋಚೀಕನು ಅವಳ ಬ್ರಾಹ್ಮಣಾಚಾರವ್ಯತಿರಿಕ್ತವಾದ ರಾಜ್ಯಕ್ಕೆ ಯೋಗ್ಯವಾದ ಕಾರ್ಯವನ್ನು ನೋಡಿ ಕುಪಿತನಾಗಿ, "ಛೀ! ಪಾಪಿಷ್ಠಳೆ! ಇದೇನು ಹೀಗೆ ಮಾಡಿದೆ? ನೀನು ನಿಶ್ಚಯವಾಗಿಯೂ ಚರು ಮತ್ತು ವೃಕ್ಷ ಗಳನ್ನು ವ್ಯತ್ಯಾಸಗೊಳಿಸಿರುವೆ.

೩೨. ನಿನ್ನಲ್ಲಿ ಬ್ರಾಹ್ಮಣರ ಆಚಾರವಿಲ್ಲ. ಕೇವಲ ಕ್ಷತ್ರಿಯೋಚಿತವಾದ ಕಾರ್ಯವನ್ನು ನೋಡುವೆನು.

೩೩. ಚೀರ, ನಾರು ಬಟ್ಟೆ, ಸ್ನಾನ, ಜಪ ಇವುಗಳನ್ನು ಬಿಟ್ಟಿರುವೆ. ಕಸ್ತೂರಿ ಮೊದಲಾದ ನಾನಾವಿಧ ಗಂಧಗಳನ್ನು ಸೇವಿಸುತ್ತಿರುವೆ.

೩೪. ನಿನ್ನ ತಾಯಿಯು ಶಾಂತಳೂ, ಜಪಹೋಮ ನಿರತಳೂ, ತೀರ್ಥ ಯಾತ್ರಾಸಕ್ತಳೂ, ವೇದಶ್ರವಣೋತ್ಸುಕಳೂ ಆಗಿರುವಳು.

೩೫. ಆದುದರಿಂದ ನಿನಗೆ ನಿಜವಾಗಿಯೂ ಕ್ಷತ್ರಿಯ ಪುತ್ರನು ಹುಟ್ಟುವನು.

೩೬. ನಿನ್ನ ತಾಯಿಗೆ ಗರ್ಭಚಿಹ್ನೆಗಳಿಂದ ಬ್ರಾಹ್ಮಣೋತ್ತಮನೂ, ಬ್ರಹ್ಮ ಚರ್ಯನಿರತನೂ ಆದ ಸುತನು ಜನಿಸುವನೆಂದು ತೋರುವುದು.

ಯಸ್ಮಾದುದೀರಿತಃ ಪೂರ್ವಂ ಶ್ಲೋಕೋಽಯಂ ಶಾಸ್ತ್ರಚಿಂತಕೈಃ ।
ಯಾದೃಶಾ ದೋಹದಾಃ ಸಂತಿ ಸ ಗರ್ಭಿಣೀನಾಂ ಚ ಯೋಷಿತಾಂ ॥ ೩೭ ॥
ತಾದೃಗೇವ ಸ್ವಭಾವೇನ ತಾಸಾಂ ಪುತ್ರೋಽತ್ರ ಜಾಯತೇ ।
ಸೈವಮುಕ್ತ್ವಾ ಭಯತ್ರಸ್ತಾ ವೇಪಮಾನಾ ಕೃತಾಂಜಲಿಃ ॥ ೩೮ ॥
ಬಾಷ್ಪಪೂರ್ಣೇಕ್ಷಣಾ ದೀನಾ ವಾಕ್ಯಮೇತದುವಾಚ ಹ ।
ಸತ್ಯಮೇತತ್ಪ್ರಭೋ ವಾಕ್ಯಂ ಯತ್ತ್ವಯಾ ಸಮುದಾಹೃತಂ ॥ ೩೯ ॥
ಅತೀತಾನಾಗತಂ ವೇತ್ಥಿ ವಿನಾ ಲಿಂಗೈರ್ಭವಾನಿಹ ।
ತಸ್ಮಾತ್ಕುರು ಪ್ರಸಾದಂ ಮೇ ಯಥಾ ಸ್ಯಾದ್ಬ್ರಾಹ್ಮಣಃ ಸುತಃ ।
ಕ್ಷತ್ರಿಯಸ್ಯ ತು ಪುತ್ರಸ್ಯ ಭವಾನ್ನಾರ್ಹಃ ಕಥಂಚನ ॥ ೪೦ ॥

ಋಚೀಕ ಉವಾಚ :—

ಯತ್ಕಿಂಚಿದ್ಬ್ರಹ್ಮತೇಜಃ ಸ್ಯಾತ್ತನ್ನ್ಯಸ್ತಂ ತೇ ಚರೌ ಮಯಾ ।
ಕ್ಷಾತ್ರಂ ತೇಜಶ್ಚ ತೇ ಮಾತುರ್ವ್ಯತ್ಯಯಂ ಚ ಕಥಂಚನ ।
ಕರೋಮಿ ವಾಧಮೋ ಲೋಕೇ ಶಾಸ್ತ್ರಸ್ಯ ಚ ವ್ಯತಿಕ್ರಮಂ ॥ ೪೧ ॥

ಪತ್ನ್ಯುವಾಚ :—

ಯದ್ಯೇವಂ ಭೃಗುಶಾರ್ದೂಲ ಮಮ ಪೌತ್ರೋಽತ್ರ ಯೋ ಭವೇತ್ ।
ಕ್ಷಾತ್ರಂ ತೇಜೋಽಖಿಲಂ ತಸ್ಯ ಗಾತ್ರೇ ಭೂಯಾತ್ತ್ವಯಾಽಽಹೃತಂ ॥ ೪೨ ॥
ಪುತ್ರಸ್ತು ಬ್ರಾಹ್ಮಣಶ್ರೇಷ್ಠೋ ಭೂಯಾದಭ್ಯಧಿಕಸ್ತವ ॥ ೪೩ ॥

---

೩೭–೩೯. ಹಿಂದೆ ಶಾಸ್ತ್ರವನ್ನು ಪರ್ಯಾಲೋಚಿಸಿದವರು ಗರ್ಭಿಣಿಯರಾದ ಹೆಂಗಸರಿಗೆ ಎಂತಹ ಬಯಕೆಗಳುಂಟಾಗುವುವೊ ಅಂತಹ ಸ್ವಭಾವದ ಪುತ್ರನೇ ಜನಿಸುವನೆಂದು ಒಂದು ಶ್ಲೋಕವನ್ನು ಹೇಳಿರುವರು” ಎಂದನು. ಅವನು ಹೀಗೆ ಹೇಳಲು ಅವಳು ಭಯದಿಂದ ನಡುಗುತ್ತ ಕೈಮುಗಿದುಕೊಂಡು ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ಇಂತೆಂದಳು. “ನಾಥ! ನೀನು ನುಡಿದ ಮಾತು ನಿಜ.

೪೦. ನೀನು ಚಿಹ್ನೆಗಳಿಲ್ಲದೆಯೇ ಭೂತಭವಿಷ್ಯದ್ವೃತ್ತಾಂತವನ್ನು ತಿಳಿದಿರುವೆ. ಆದುದರಿಂದ ನನಗೆ ಬ್ರಾಹ್ಮಣಪುತ್ರನಾಗುವಂತೆ ಅನುಗ್ರಹಿಸು. ನಿನಗೆ ಕ್ಷತ್ರಿಯ ಪುತ್ರನು ಅನುಚಿತನು.

೪೧. ಋಚೀಕನು ಹೇಳುತ್ತಾನೆ:—ನಾನು ಬ್ರಹ್ಮತೇಜಸ್ಸನ್ನು ನಿನ್ನ ಚರುವಿನಲ್ಲಿಟ್ಟಿರುವೆನು. ನಿನ್ನ ತಾಯಿಯ ಚರುವಿನಲ್ಲಿ ಕ್ಷತ್ರಿಯ ತೇಜಸ್ಸನ್ನಿಟ್ಟಿರುವೆನು. ನಾನು ಶಾಸ್ತ್ರವನ್ನು ಮೀರಿ ವ್ಯತ್ಯಾಸಮಾಡಿ ಹೇಗೆ ಲೋಕದಲ್ಲಿ ಅಧಮನಾಗುವೆನು.

೪೨. ಪತ್ನಿಯು ಹೇಳುತ್ತಾಳೆ:—ಭೃಗುಕುಲಶ್ರೇಷ್ಠನೆ! ಹೀಗಾದರೆ ನನಗೆ ಹುಟ್ಟುವ ಮೊಮ್ಮಗನ ಶರೀರದಲ್ಲಿ ನೀನು ಸೇರಿಸಿರುವ ಸಕಲ ಕ್ಷಾತ್ರತೇಜಸ್ಸು ಸಂಭವಿಸಲಿ.

೪೩. ಮಗನು ಮಾತ್ರ ನಿನಗಿಂತ ಅಧಿಕನಾದ ಬ್ರಾಹ್ಮಣೋತ್ತಮನಾಗಲಿ.

**ಋಚೀಕ ಉವಾಚ:—**

**ಏವಂ ಭವತು ಮದ್ವಾಕ್ಯಾತ್ಪುತ್ರಸ್ತೇ ಬ್ರಾಹ್ಮಣಃ ಶುಭೇ ।**
**ಪೌತ್ರಃ ಸುದುರ್ಧರಃ ಸಂಖ್ಯೇ ಸಂಯುಕ್ತಃ ಕ್ಷಾತ್ರತೇಜಸಾ ॥ ೪೪ ॥**
**ತತಃ ಸತ್ಯಂ ವರಂ ಲಬ್ಧ್ವಾ ಪ್ರಸನ್ನವದನಾ ಸತೀ ।**
**ಮಾತುರ್ನಿವೇದಯಾಮಾಸ ತತ್ಸರ್ವಂ ಕಾಂತಜಲ್ಪಿತಂ ॥ ೪೫ ॥**
**ತತಃ ಸಾ ದಶಮೇ ಮಾಸಿ ಸಂಪ್ರಾಪ್ತೇ ಗುರುದೈವತೇ ।**
**ನಕ್ಷತ್ರೇ ಜನಯಾಮಾಸ ಪುತ್ರಂ ಬಾಲಾರ್ಕಸನ್ನಿಭಂ ॥ ೪೬ ॥**
**ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮೋಪೇತಂ ನಿಧಾನಂ ತಪಸಾಂ ಶುಚಿ ।**
**ಜಮದಗ್ನಿರಿತಿ ಖ್ಯಾತೋ ಯೋಽಸೌ ತ್ರೈಲೋಕ್ಯವಿಶ್ರುತಃ ।**
**ತಸ್ಯ ಪುತ್ರೋಽಭವತ್ಖ್ಯಾತೋ ರಾಮೋ ನಾಮ ಮಹಾಯಶಾಃ ॥ ೪೭ ॥**
**ಏಕವಿಂಶತಿವಾ ಯೇನ ಧರಾ ನಿಃಕ್ಷತ್ರಿಯಾ ಕೃತಾ ।**
**ಕ್ಷಾತ್ರತೇಜಃ ಪ್ರಭಾವೇನ ಪಿತಾಮಹ ಪ್ರಸಾದತಃ ॥ ೪೮ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪರಶುರಾಮೋತ್ಪತ್ತಿವರ್ಣನಂ" ನಾಮ
ಷಟ್‌ಷಷ್ಟ್ಯುತ್ತರಶತತಮೋಽಧ್ಯಾಯಃ

---

೪೪. ಋಚೀಕನು ಹೇಳುತ್ತಾನೆ:—ಹೀಗೆಯೇ ಆಗಲಿ. ಮಂಗಳಕರಳೆ! ನಿನಗೆ ನನ್ನ ಮಾತಿನಿಂದ ಬ್ರಾಹ್ಮಣಪುತ್ರನು ಜನಿಸುವನು. ಮೊಮ್ಮಗನು ಕ್ಷಾತ್ರ ತೇಜಸ್ಸಿನಿಂದ ಸಹಿತನಾಗಿ ಯುದ್ಧದಲ್ಲಿ ಸಹಿಸಲಶಕ್ಯನಾಗುವನು.

೪೫. ಹೀಗೆ ಅವಳು ಸತ್ಯವಾದ ವರವನ್ನು ಪಡೆದು ಪ್ರಸನ್ನಮುಖಳಾಗಿ ಪ್ರಿಯನು ಹೇಳಿದುದನ್ನೆಲ್ಲ ತಾಯಿಗೆ ತಿಳಿಸಿದಳು.

೪೬–೪೭. ತರುವಾಯ ಅವಳು ಹತ್ತನೆ ತಿಂಗಳು ಬರಲು ಗುರುದೇವತಾಕ ನಕ್ಷತ್ರದಲ್ಲಿ ಎಳೆ ನೇಸರಿಗೆ ಸಮಾನನೂ, ಬ್ರಾಹ್ಮತೇಜಸ್ಸಿನಿಂದ ವಿರಾಜಿಸು ವವನೂ, ತಪಸ್ಸಿಗೆ ನಿಧಿಯೂ ಆದ ಪುತ್ರನನ್ನು ಪ್ರಸವಿಸಿದಳು. ಅವನು ಜಮ ದಗ್ನಿಯೆಂದು ಮೂರು ಲೋಕಗಳಲ್ಲಿ ವಿಖ್ಯಾತನಾದನು. ಅವನ ಮಗನು ಪರಶು ರಾಮನೆಂದು ಜಗತ್ತಿನಲ್ಲಿ ಪ್ರಸಿದ್ಧನಾದನು.

೪೮. ಅವನು ಭೂಮಿಯಲ್ಲಿ ಬ್ರಹ್ಮನ ಅನುಗ್ರಹದಿಂದುಂಟಾದ ಕ್ಷಾತ್ರ ತೇಜಃಪ್ರಭಾವದಿಂದ ಇಪ್ಪತ್ತೊಂದು ಸಾರಿ ಕ್ಷತ್ರಿಯರಿಲ್ಲದಂತೆ ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪರಶುರಾಮೋತ್ಪತ್ತಿವರ್ಣನ"ವೆಂಬ
ನೂರರುವತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

## ವಿಶ್ವಾಮಿತ್ರರಾಜ್ಯಪರಿತ್ಯಾಗವರ್ಣನಂ

**ಸೂತ ಉವಾಚ :—**

**ಗಾಧೇಸ್ತು ಯಾಽಥ ಪತ್ನೀ ಚ ಪ್ರಾಶನಾಚ್ಚರುಕಸ್ಯ ವೈ ।**
**ಸಾಽಪಿ ಗರ್ಭಂ ದಧೇ ವಾಸರೇ ಮಂತ್ರತಃ ಶುಭಾ** ॥ ೧ ॥
**ಸಾ ಚ ಗರ್ಭಸಮೋಪೇತಾ ಯದಾ ಜಾತಾ ದ್ವಿಜೋತ್ತಮಾಃ ।**
**ತೀರ್ಥಯಾತ್ರಾಪರಾ ಸಾಧ್ವೀ ಜಾತಾ ವ್ರತಪರಾಯಣಾ** ॥ ೨ ॥
**ವೇದಧ್ವನಿರ್ಭವೇದ್ಯತ್ರ ತತ್ರ ಹರ್ಷಸಮನ್ವಿತಾ ।**
**ಪುಲಕಾಂಕಿತಸರ್ವಾಂಗೀ ಸಾ ಶುಶ್ರಾವ ಚ ಸರ್ವದಾ ।**
**ತ್ಯಕ್ತ್ವಾ ರಾಜ್ಯೋಚಿತಾನ್ ಸರ್ವಾನಲಂಕಾರಾನ್ ಸುಖಾನಿ ಚ** ॥ ೩ ॥
**ಅಥ ಸಾಽಪಿ ದ್ವಿಜಶ್ರೇಷ್ಠಾ ದಶಮೇ ಮಾಸಿ ಸಂಸ್ಥಿತೇ ।**
**ಸುಷುವೇ ಸುಪ್ರಭಂ ಪುತ್ರಂ ಬ್ರಾಹ್ಮ್ಯಾ ಲಕ್ಷ್ಮ್ಯಾ ಸಮಾವೃತಂ** ॥ ೪ ॥
**ವಿಶ್ವಾಮಿತ್ರಸ್ತಥಾ ಖ್ಯಾತಸ್ತ್ರೈಲೋಕ್ಯೇ ಸಚರಾಚರೇ ।**
**ವವೃಧೇ ಸ ಮಹಾಭಾಗೋ ನಿತ್ಯಮೇವಾಧಿಕಂ ನೃಣಾಂ** ॥ ೫ ॥
**ಶುಕ್ಲಪಕ್ಷಂ ಸಮಾಸಾದ್ಯ ತಾರಾಪತಿರಿವಾಂಬರೇ ।**
**ಯದಾಽಸೌ ಯೌವನೋಪೇತಃ ಸಂಜಾತೋ ದ್ವಿಜಸತ್ತಮಾಃ** ॥ ೬ ॥

---

## ಕನ್ನಡದ ಅನುವಾದ

### ವಿಶ್ವಾಮಿತ್ರರಾಜ್ಯಪರಿತ್ಯಾಗವರ್ಣನ

೧. ಸೂತನು ಹೇಳುತ್ತಾನೆ :—ಗಾಧಿಯ ಪತ್ನಿಯೂ ಚರುಪ್ರಾಶನ ಮಾಡಿದ ದಿನವೇ ಋಷಿಮಂತ್ರಪ್ರಭಾವದಿಂದ ಗರ್ಭಿಣಿಯಾದಳು.

೨. ದ್ವಿಜವರ್ಯರೆ! ಅವಳು ಗರ್ಭಿಣಿಯಾದ ಕೂಡಲೆ ತೀರ್ಥಯಾತ್ರಾ ನಿರತಳೂ, ವ್ರತಾಸಕ್ತಳೂ ಆದಳು.

೩. ಎಲ್ಲಿಯಾದರೂ ವೇದಧ್ವನಿಯು ಆದಕೂಡಲೆ ರೋಮಾಂಚಗೊಂಡ ಶರೀರವುಳ್ಳವಳಾಗಿ ರಾಜ್ಯೋಚಿತವಾದ ಸಕಲಾಲಂಕಾರಗಳನ್ನೂ, ಸುಖಗಳನ್ನೂ ತ್ಯಜಿಸಿ ಯಾವಾಗಲೂ ಅದನ್ನೇ ಕೇಳುತ್ತಿದ್ದಳು.

೪. ಹತ್ತನೆಯ ತಿಂಗಳಲ್ಲಿ ಬ್ರಾಹ್ಮಣತೇಜಸ್ಸಿನಿಂದ ಕೂಡಿದ ಸುಂದರನಾದ ಪುತ್ರನನ್ನು ಪ್ರಸವಿಸಿದಳು.

೫–೬. ಆ ಬಾಲಕನು ಚರಾಚರಪ್ರಪಂಚದಲ್ಲಿ ವಿಶ್ವಾಮಿತ್ರನೆಂದು ಪ್ರಸಿದ್ಧನಾದನು. ಅವನು ಶುಕ್ಲಪಕ್ಷದಲ್ಲಿ ಆಕಾಶದಲ್ಲಿ ಚಂದ್ರನು ವೃದ್ಧಿಯಾಗುವಂತೆ ಪ್ರತಿದಿನವೂ ಬೆಳೆದನು. ದ್ವಿಜವರ್ಯರೆ! ಅವನು ಯುವಕನಾಗಿ ರಾಜ್ಯಭಾರ

ರಾಜ್ಯಕ್ಷಮಸ್ತದಾ ರಾಜ್ಯೇ ಗಾಧಿನಾ ಸ ನಿಯೋಜಿತಃ ।
ಅನಿಚ್ಛಮಾನಃ ಸ್ವಂ ರಾಜ್ಯಂ ಪಿತೃಪೈತಾಮಹಂ ಮಹತ್ ॥ ೭ ॥
ವೇದಾಧ್ಯಯನಸಂಪನ್ನೋ ನಿತ್ಯಂ ಚ ಪಠತೇ ಹಿ ಸಃ ।
ಬ್ರಾಹ್ಮಣೋಚಿತಮಾರ್ಗೇಣ ಗಚ್ಛಮಾನೋ ದಿವಾನಿಶಂ ॥ ೮ ॥
ಸಂಸ್ಥಾಪ್ಯಾಥ ಸುತಂ ರಾಜ್ಯೇ ಬಭೂವ ವನಗೋಚರಃ ।
ಸಕಲತ್ರೋ ಮಹಾಭಾಗೋ ವಾನಪ್ರಸ್ಥಾಶ್ರಮೇ ರತಃ ॥ ೯ ॥
ವಿಶ್ವಾಮಿತ್ರೋಽಪಿ ರಾಜ್ಯಸ್ಥೋ ದ್ವಿಜಸಂಪೂಜನೇ ರತಃ ।
ದ್ವಿಜೈಃ ಸರ್ವೈಶ್ಚಚಾರಾಥ ಸ್ನಾನಜಾಪ್ಯಪರಾಯಣಃ ॥ ೧೦ ॥
ಕಸ್ಯಚಿತ್ತ್ವಥ ಕಾಲಸ್ಯ ಪಾಪರ್ಧಿಂ ಸಮುಪಾಗತಃ ।
ಪ್ರವಿವೇಶ ವನಂ ರೌದ್ರಂ ನಾನಾಮೃಗಸಮಾಕುಲಂ ॥ ೧೧ ॥
ಜಘಾನ ಸ ವನೇ ತತ್ರ ವರಾಹಾನ್ ಸಂಬರಾನ್ ಗಜಾನ್ ।
ತರಕ್ಷ್ವಂಶ್ಚ ರುರೂನ್ ಖಡ್ಗಾನಾರಣ್ಯಾನ್ಮಹಿಷಾಂಸ್ತಥಾ ॥ ೧೨ ॥
ಸಿಂಹಾನ್ ವ್ಯಾಘ್ರಾನ್ ಮಹಾಸರ್ಪಾಂಛರಭಾಂಶ್ಚ ದ್ವಿಜೋತ್ತಮಾಃ ।
ಮೃಗಯಾಸಕ್ತಚಿತ್ತಃ ಸ ಭ್ರಮಮಾಣೋ ಮಹಾವನೇ ॥ ೧೩ ॥
ಮಧ್ಯಾಹ್ನಸಮಯೇ ಪ್ರಾಪ್ತೇ ವೃಷಸ್ಥೇ ಚ ದಿವಾಕರೇ ।
ಕ್ಷುತ್ಪಿಪಾಸಾ ಪರಿಶ್ರಾಂತೋ ವಿಶ್ವಾಮಿತ್ರೋ ದ್ವಿಜೋತ್ತಮಾಃ ॥ ೧೪ ॥

---

ಮಾಡಲು ಸಮರ್ಥನಾಗಲು ಗಾಧಿಯು ಪಿತೃಪಿತಾಮಹರಿಂದ ಬಂದ ದೊಡ್ಡ ರಾಜ್ಯವನ್ನು ಅಪೇಕ್ಷಿಸದಿದ್ದರೂ ಅವನನ್ನು ಆ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿದನು.

೮. ಪಟ್ಟಾಭಿಷಿಕ್ತನಾದಮೇಲೆ ಅವನು ವೇದಾಧ್ಯಯನಸಂಪನ್ನನಾಗಿ ನಿತ್ಯವೂ ಬ್ರಾಹ್ಮಣರಿಗುಚಿತವಾದ ದಾರಿಯನ್ನು ಅನುಸರಿಸುತ್ತ ವೇದವನ್ನು ಪಠಿಸುತ್ತಿದ್ದನು.

೯. ಗಾಧಿಯಾದರೊ ಈರೀತಿ ರಾಜ್ಯದಲ್ಲಿ ಮಗನನ್ನು ನೇಮಿಸಿ ಪತ್ನಿಯೊಡನೆ ಕಾಡನ್ನು ಸೇರಿ ವಾನಪ್ರಸ್ಥಾಶ್ರಮದಲ್ಲಿ ನಿರತನಾದನು.

೧೦. ರಾಜ್ಯವನ್ನಾಳುತ್ತಿರುವ ವಿಶ್ವಾಮಿತ್ರನು ದ್ವಿಜಪೂಜೆಯಲ್ಲಿ ಆಸಕ್ತನಾಗಿ ಸ್ನಾನ ಜಪಗಳಲ್ಲಿ ನಿರತನಾಗಿ ಸಕಲ ಬ್ರಾಹ್ಮಣರೊಡನೆ ಸಂಚರಿಸಿದನು.

೧೧. ಒಂದಾನೊಂದು ಕಾಲದಲ್ಲಿ ಅವನು ಅತಿಶಯವಾದ ಪಾಪದಿಂದ ವೃದ್ಧಿಗೊಂಡು ಅನೇಕ ಮೃಗಗಳಿಂದ ತುಂಬಿರುವ ಭಯಂಕರವಾದ ಕಾಡನ್ನು ಹೊಕ್ಕನು.

೧೨–೧೩. ಅವನು ಬೇಟೆಯಲ್ಲಿ ಆಸಕ್ತನಾಗಿ ಆ ದೊಡ್ಡಕಾಡಿನಲ್ಲಿ ಸಂಚರಿಸುತ್ತ, ಹಂದಿ, ಸ್ಸಂಬರಮೃಗ, ಆನೆ, ಚಿರತೆ, ಜಿಂಕೆ, ಖಡ್ಗಮೃಗ, ಕಾಡುಕೋಣ, ಸಿಂಹ, ಹುಲಿ, ಸರ್ಪ, ಶರಭ ಮುಂತಾದ ಮೃಗಗಳನ್ನು ಕೊಂದನು.

೧೪–೧೭. ಸೂರ್ಯನು ವೃಷಭರಾಶಿಯಲ್ಲಿರಲು ಮಧ್ಯಾಹ್ನ ಸಮಯದಲ್ಲಿ ವಿಶ್ವಾಮಿತ್ರನು ಹಸಿವು ನೀರಡಿಕೆಗಳಿಂದ ಬಳಲಿ ವಸಿಷ್ಠಮಹರ್ಷಿಯ ಪುಣ್ಯ

ಅಸಸಾದಾಶ್ರಮಂ ಪುಣ್ಯಂ ವಸಿಷ್ಠಸ್ಯ ಮಹಾತ್ಮನಃ ।
ವಸಿಷ್ಠೋಽಪಿ ಸಮಾಲೋಕ್ಯ ವಿಶ್ವಾಮಿತ್ರಂ ನೃಪೋತ್ತಮಂ ॥ ೧೫ ॥
ನಿಜಾಶ್ರಮೇ ತು ಸಂಪ್ರಾಪ್ತಂ ಸಾನಂದಂ ಸಮ್ಮುಖೋ ಯಯೌ ।
ದತ್ವಾ ತಸ್ಮೈ ತದಾಽರ್ಘ್ಯಂ ಚ ಮಧುಪರ್ಕಂ ಚ ಭೂಭುಜೇ ॥ ೧೬ ॥
ಅಬ್ರವೀಚ್ಚ ತತೋ ವಾಕ್ಯಂ ಸ್ವಾಗತಂ ತೇ ಮಹೀಪತೇ ।
ವದ ಕೃತ್ಯಂ ಕರೋಮ್ಯೇವ ಗೃಹಾಯಾತಸ್ಯ ಯಚ್ಚ ತೇ ॥ ೧೭ ॥

ವಿಶ್ವಾಮಿತ್ರ ಉವಾಚ :—

ಮೃಗಯಾಯಾಂ ಪರಿಶ್ರಾಂತಃ ಪಿಪಾಸಾ ವ್ಯಾಕುಲೇಂದ್ರಿಯಃ ।
ಪಾನಾರ್ಥಮಿಹ ಸಂಪ್ರಾಪ್ತ ಆಶ್ರಮೇ ತೇ ಮುನೀಶ್ವರ ॥ ೧೮ ॥
ತತ್ಪೀತಂ ಶೀತಲಂ ತೋಯಂ ವಿತೃಷ್ಣೋಽಹಂ ವ್ಯವಸ್ಥಿತಃ ।
ಅನುಜ್ಞಾಂ ದೇಹಿ ಮೇ ಬ್ರಹ್ಮನ್ ಯೇನ ಗಚ್ಛಾಮಿ ಮಂದಿರಂ ॥ ೧೯ ॥

ವಸಿಷ್ಠ ಉವಾಚ :—

ಮಧ್ಯಾಹ್ನಸಮಯೋ ರೌದ್ರಃ ಸೂರ್ಯೋಽತೀವ ಸುತಾಪದಃ ।
ತತ್ಕೃತ್ವಾ ಭೋಜನಂ ರಾಜನ್ನಪರಾಹ್ಣೇ ವ್ಯವಸ್ಥಿತೇ ।
ಗಂತಾಸಿ ನಿಜಮಾವಾಸಂ ಭುಕ್ತ್ವಾಽನ್ನಂ ಮಮ ಚಾಶ್ರಮೇ ॥ ೨೦ ॥

ರಾಜೋವಾಚ :—

ಚತುರಂಗೇಣ ಸೈನ್ಯೇನ ಮೃಗಯಾಮಹಮಾಗತಃ ॥ ೨೧ ॥

---

ಕರವಾದ ಆಶ್ರಮಕ್ಕೆ ಹೋದನು. ವಸಿಷ್ಠನು ತನ್ನ ಆಶ್ರಮಕ್ಕೆ ಬಂದಿರುವ ವಿಶ್ವಾಮಿತ್ರ ಮಹಾರಾಜನನ್ನು ಕಂಡು ಎದುರುಗೊಂಡು ಅವನಿಗೆ ಅರ್ಘ್ಯ ಮಧುಪರ್ಕಗಳನ್ನಿತ್ತು, 'ಮಹಾರಾಜ! ನಿನಗೆ ಸುಖಾಗಮವೆ? ಮನೆಗೆ ಬಂದಿರುವ ನಿನಗೆ ನಾನೇನುಮಾಡಲಿ ಅದನ್ನು ಹೇಳು' ಎಂದನು.

೧೮–೧೯. ವಿಶ್ವಾಮಿತ್ರನು ಹೇಳುತ್ತಾನೆ:—ಮುನೀಶ್ವರ! ಬೇಟೆಯಿಂದ ಬಳಲಿ ಬಾಯಾರಿಕೆಯಿಂದ ವ್ಯಾಕುಲಗೊಂಡ ನಾನು ನಿನ್ನ ಆಶ್ರಮಕ್ಕೆ ಜಲಪಾನಕ್ಕಾಗಿ ಬಂದೆನು. ಈಗ ತಣ್ಣಗಿರುವ ನೀರನ್ನು ಕುಡಿದು ಬಾಯಾರಿಕೆಯನ್ನು ನೀಗಿಸಿಕೊಂಡೆನು. ನನಗೆ ಅಪ್ಪಣೆಯನ್ನು ಕೊಡು. ನಾನು ಮನೆಗೆ ಹೋಗುತ್ತೇನೆ.

೨೦. ವಸಿಷ್ಠನು ಹೇಳುತ್ತಾನೆ:—ದೊರೆಯೆ! ಮಧ್ಯಾಹ್ನವೇಳೆಯಾಗಿದೆ. ಸೂರ್ಯನು ಭಯಂಕರನಾಗಿ ಸುಡುತ್ತಿದ್ದಾನೆ. ಆದುದರಿಂದ ನನ್ನ ಆಶ್ರಮದಲ್ಲಿ ಭುಂಜಿಸಿ ಅಪರಾಹ್ಣವೇಳೆಯಲ್ಲಿ ನಿನ್ನ ವಾಸಸ್ಥಳಕ್ಕೆ ಹೋಗು.

೨೧. ರಾಜನು ಹೇಳುತ್ತಾನೆ:—ನಾನು ಚತುರಂಗಸೈನ್ಯದೊಡನೆ ಬೇಟೆಗಾಗಿ ಬಂದೆನು.

ತವಾಶ್ರಮಸ್ಯ ದ್ವಾರಸ್ಥಂ ಮಮ ಸೈನ್ಯಂ ವ್ಯವಸ್ಥಿತಂ ।
ಬುಭುಕ್ಷಿತೇಷು ಭೃತ್ಯೇಷು ಯಃ ಸ್ವಾಮೀ ಕುರುತೇಽಶನಂ ॥ ೨೨ ॥
ಸ ಯಾತಿ ನರಕಂ ಘೋರಂ ತ್ಯಜ್ಯತೇ ಚ ಗುಣೈರ್ದ್ರುತಂ ।
ತಸ್ಮಾದಾಜ್ಞಾಪಯ ಕ್ಷಿಪ್ರಂ ಮಾಂ ಮುನೇ ಸ್ವಗೃಹಾಯ ಭೋಃ ॥ ೨೩ ॥

ವಸಿಷ್ಠ ಉವಾಚ :—

ಯದಿ ತೇ ಸೇವಕಾಃ ಸಂತಿ ದ್ವಾರದೇಶೇ ವ್ಯವಸ್ಥಿತಾಃ ।
ಸರ್ವಾನಿಹಾನಯ ಕ್ಷಿಪ್ರಂ ತೃಪ್ತಿಂ ನೇಷ್ಯಾಮ್ಯಹಂ ಪರಂ ॥ ೨೪ ॥
ಅಸ್ತಿ ಮೇ ನಂದಿನೀನಾಮ ಕಾಮಧೇನುಃ ಸುಶೋಭನಾ ।
ವಾಂಛಿತಂ ಯಚ್ಛತೇ ಸರ್ವಂ ತಪಸಾ ಪಾರ್ಥಿವೋತ್ತಮ ॥ ೨೫ ॥
ತೃಪ್ತಿಂ ನೇಷ್ಯತಿ ತೇ ಸರ್ವಂ ಸೈನ್ಯಂ ಪಾರ್ಥಿವಸತ್ತಮ ।
ತಸ್ಮಾದಾನೀಯತಾಂ ಕ್ಷಿಪ್ರಂ ಪಶ್ಯ ಮೇ ಧೇನುಜಂ ಫಲಂ ॥ ೨೬ ॥
ತಚ್ಛ್ರುತ್ವಾ ಚಾನಯಾಮಾಸ ಸರ್ವಂ ಸೈನ್ಯಂ ಮಹೀಪತಿಃ ।
ಸ್ನಾತಶ್ಚ ಕೃತಜಪ್ಯಶ್ಚ ಸಂತರ್ಪ್ಯ ಪಿತೃದೇವತಾಃ ॥ ೨೭ ॥
ಬ್ರಾಹ್ಮಣಾನ್ ವಾಚಯಿತ್ವಾ ಚ ಸಿಂಹಾಸನ ಸಮಾಶ್ರಿತಃ ।
ಏತಸ್ಮಿನ್ನಂತರೇ ಧೇನುಃ ಸಮಾಹೂತಾ ಚ ನಂದಿನೀ ॥ ೨೮ ॥

---

೨೨—೨೩. ನನ್ನ ಸೈನ್ಯವು ನಿನ್ನ ಆಶ್ರಮದ ಬಾಗಿಲಿನಲ್ಲಿದೆ. ಸೇವಕರು ಹಸಿವುಗೊಂಡಿರುವಾಗ ಊಟಮಾಡಿದ ಸ್ವಾಮಿಯು ಗುಣರಹಿತನಾಗಿ ಘೋರ ನರಕಕ್ಕೆ ತೆರಳುವನು. ಆದುದರಿಂದ ಮುನಿಯೆ! ಶೀಘ್ರವಾಗಿ ಮನೆಗೆ ಹೋಗಲು ನನಗೆ ಅಪ್ಪಣೆ ಕೊಡು.

೨೪. ವಸಿಷ್ಠನು ಹೇಳುತ್ತಾನೆ:—ಬಾಗಿಲಿನಲ್ಲಿ ನಿನ್ನ ಸೇವಕರು ಹಸಿವುಗೊಂಡಿದ್ದರೆ ಅವರನ್ನೆಲ್ಲ ಇಲ್ಲಿಗೆ ಶೀಘ್ರವಾಗಿ ಕರೆದುಕೊಂಡು ಬಾ. ಅವರನ್ನೂ ನಾನು ತೃಪ್ತಿಗೊಳಿಸುವೆನು.

೨೫. ಮಹಾರಾಜ! ನನ್ನಲ್ಲಿ ನಂದಿನೀಯೆಂಬ ಮಂಗಳಕರವಾದ ಕಾಮಧೇನುವಿರುವುದು. ಅದು ತಪಸ್ಸಿನಿಂದ ಇಷ್ಟವಾದ ಎಲ್ಲ ಫಲವನ್ನೂ ಕೊಡುವುದು.

೨೬. ಅದು ನಿನ್ನ ಸೈನ್ಯದವರನ್ನೆಲ್ಲ ತೃಪ್ತಿಗೊಳಿಸುವುದು. ಆದುದರಿಂದ ಶೀಘ್ರವಾಗಿ ಸೈನ್ಯದವರನ್ನು ಕರೆದುಕೊಂಡು ಬಾ. ನನ್ನ ಧೇನುವಿನಿಂದಾಗುವ ಪ್ರಯೋಜನವನ್ನು ನೋಡು.

೨೭—೨೯. ಅರಸನು ಅದನ್ನು ಕೇಳಿ ಸಕಲ ಸೈನ್ಯವನ್ನೂ ಕರೆಯಿಸಿದನು. ತಾನು ಮಿಂದು, ಜಪವನ್ನು ಮಾಡಿ, ಪಿತೃದೇವತೆಗಳಿಗೆ ತರ್ಪಣಮಾಡಿ ಬ್ರಾಹ್ಮಣರಿಂದ ಸ್ವಸ್ತಿವಾಚನಮಾಡಿಸಿ ಸಿಂಹಾಸನದಲ್ಲಿ ಕುಳಿತನು. ಇಷ್ಟರಲ್ಲಿ ವಸಿಷ್ಠರಿಂದ

ವಸಿಷ್ಠೇನ ಸಮಾಹೂತಾ ವಿಶ್ವಾಮಿತ್ರಪುರಃಸ್ಥಿತಾ ।
ಅಬ್ರವೀಚ್ಚ ತತೋ ವಾಕ್ಯಂ ವಸಿಷ್ಠಮೃಷಿಸತ್ತಮಂ ॥ ೨೯ ॥
ಆದೇಶೋ ದೀಯತಾಂ ಮಹ್ಯಂ ಕಿಂ ಕರೋಮಿ ಪ್ರಶಾಧಿ ಮಾಂ ॥ ೩೦ ॥

ವಸಿಷ್ಠ ಉವಾಚ :—

ಪಾದಪ್ರಕ್ಷಾಲನಾದ್ಯಂತು ಕುರುಷ್ವ ವಚನಾನ್ಮಮ ।
ವಿಶ್ವಾಮಿತ್ರಸ್ಯ ರಾಜರ್ಷೇರ್ಯಾವದ್ಭೋಜನ ಸಂಸ್ಥಿತಿಂ ॥ ೩೧ ॥
ಖಾದ್ಯೈಃ ಸರ್ವೈಸ್ತಥಾ ಲೇಹ್ಯೈಶ್ಚೋಷ್ಯೈಃಪೇಯೈಃ ಪೃಥಗ್ವಿಧೈಃ ।
ಕುರುಷ್ವ ತೃಪ್ತಿಪರ್ಯಂತಂ ಸಸೈನ್ಯಸ್ಯ ಮಹೀಪತೇಃ ।
ಅಶ್ವಾನಾಂ ಚ ಗಜಾನಾಂ ಚ ಘಾಸಾದಿಭಿರ್ಯಥಾಕ್ರಮಂ ॥ ೩೨ ॥

ಸೂತ ಉವಾಚ :—

ಬಾಢಮಿತ್ಯೇವ ಸಾಽಪ್ಯುಕ್ತ್ವಾ ತತಸ್ತತ್ಸಸೃಜೇ ಕ್ಷಣಾತ್ ।
ಯಥೋಕ್ತಂ ತೇನ ಮುನಿನಾ ಭೃತ್ಯಾನಾಂ ಚಾಽಯುತಂ ತಥಾ ॥ ೩೩ ॥
ತತಸ್ತೇ ಸರ್ವಮಾದಾಯ ಭೃತ್ಯಾ ಭೋಜ್ಯಂ ದದುಸ್ತಥಾ ।
ಏಕೈಕಸ್ಯ ಪೃಥಕ್ತ್ವೇನ ಪ್ರತಿಪತ್ತಿಪುರಃಸರಂ ॥ ೩೪ ॥
ಏವಂ ತಯಾ ಕ್ಷಣೇನೈವ ತೃಪ್ತಿಂ ನೀತೋ ಮಹೀಪತಿಃ ।
ಸಸೈನ್ಯಃ ಸಪರೀವಾರೋ ಗಜೋಷ್ಟ್ರಾಶ್ವೈರ್ವೃಷೈಃ ಸಹ ॥ ೩೫ ॥

---

ಕರೆಯಿಸಲ್ಪಟ್ಟ ನಂದಿನೀಧೇನುವು ವಿಶ್ವಾಮಿತ್ರನ ಮುಂದೆ ನಿಂತು ವಸಿಷ್ಠನನ್ನು ಕುರಿತು ಇಂತೆಂದಿತು.

೩೦. 'ಋಷಿಯೇ! ಅಪ್ಪಣೆ ಮಾಡು ನಾನೇನು ಮಾಡಲಿ.'

೩೧–೩೨. ವಸಿಷ್ಠನು ಹೇಳುತ್ತಾನೆ:—ಸೈನ್ಯದಿಂದ ಕೂಡಿದ ವಿಶ್ವಾಮಿತ್ರನಿಗೆ ಪಾದಪ್ರಕ್ಷಾಳನಾದಿ ಭೋಜನದವರೆಗೆ ಎಲ್ಲವನ್ನೂ ಮಾಡಿ ಭಕ್ಷ್ಯ, ಭೋಜ್ಯ, ಚೋಷ್ಯ, ಪೇಯಗಳಿಂದ ತೃಪ್ತಿಗೊಳಿಸು. ಆನೆ ಕುದುರೆಗಳಿಗೆ ಹುಲ್ಲು ಮೊದಲಾದುವುಗಳಿಂದ ತೃಪ್ತಿಯನ್ನುಂಟುಮಾಡು.

೩೩. ಸೂತನು ಹೇಳುತ್ತಾನೆ:—ಆ ಧೇನುವು ಮುನಿಯ ಮಾತನ್ನು ಒಪ್ಪಿ ಹತ್ತುಸಾವಿರ ಸೇವಕರನ್ನು ಕೂಡಲೆ ಸೃಷ್ಟಿಮಾಡಿತು.

೩೪. ಅನಂತರ ಆ ಸೇವಕರು ಭೋಜ್ಯವನ್ನು ಒಬ್ಬೊಬ್ಬನಿಗೂ ಪ್ರತ್ಯೇಕವಾಗಿ ನಿಯಮದಂತೆ ಬಡಿಸಿದರು.

೩೫. ಹೀಗೆ ಆ ನಂದಿನೀಧೇನುವು ಒಂದು ಕ್ಷಣದಲ್ಲಿಯೇ ಸೈನ್ಯ, ಪರಿವಾರ, ಆನೆ, ಒಂಟೆ, ಕುದುರೆ, ಎತ್ತು ಇವುಗಳಿಂದ ಸಹಿತನಾದ ವಿಶ್ವಾಮಿತ್ರರಾಜನನ್ನು ತೃಪ್ತಿಗೊಳಿಸಿತು.

ತತಸ್ತು ಕೌತುಕಂ ದೃಷ್ಟ್ವಾ ವಿಶ್ವಾಮಿತ್ರೋ ಮಹೀಪತಿಃ ।
ಸಾಮಾತ್ಯೋ ವಿಸ್ಮಯಾವಿಷ್ಟೋ ಮಂತ್ರಯಾಮಾಸ ಚ ದ್ವಿಜಾಃ ॥ ೩೬ ॥
ಅಹೋ ಚಿತ್ರಮಹೋ ಚಿತ್ರಂ ಯಯಾಽಸ್ಮಾದ್ವರೂಥಿನೀ ।
ತೃಪ್ತಿಂ ನೀತೇಯಮಸ್ಮಾಕಂ ಕ್ಷುತ್ಪಿಪಾಸಾಸಮಾಕುಲಾ ॥ ೩೭ ॥
ತಸ್ಮಾತ್ಸನ್ನೀಯತಾಮೇಷಾ ಸ್ವಗೃಹಂ ಧೇನುರುತ್ತಮಾ ।
ಕಿಂ ಕರಿಷ್ಯತಿ ವಿಪ್ರೋಽಯಂ ನಿರ್ಭೃತ್ಯೋ ವನಸಂಸ್ಥಿತಃ ॥ ೩೮ ॥
ತತೋ ವಸಿಷ್ಠಮಾಹೂಯ ವಾಕ್ಯಮೇತದುವಾಚ ಸಃ ।
ನಂದಿನೀ ದೀಯತಾಂ ಮಹ್ಯಂ ಕಿಂ ಕರಿಷ್ಯಸಿ ಚಾಽನಯಾ ॥ ೩೯ ॥
ತ್ವಮೇಕೋ ವನಸಂಸ್ಥಸ್ತು ನಿರ್ದ್ವಂದ್ವೋ ನಿಷ್ಪರಿಗ್ರಹಃ ।
ಅಥವಾ ತವ ದಾಸ್ಯಾಮಿ ವ್ಯಯಾರ್ಥೇ ಮುನಿಸತ್ತಮ ।
ವರಾನ್ ಗ್ರಾಮಾಂಶ್ಚ ಹಸ್ತ್ಯಶ್ವಾನನ್ಯಾಂಶ್ಚಾಽಪಿ ಯಥೇಪ್ಸಿತಾನ್ ॥ ೪೦ ॥

ವಸಿಷ್ಠ ಉವಾಚ :—

ಹೋಮಧೇನುರಿಯಂ ರಾಜನ್ನಸ್ಮಾಕಂ ಕಾಮದೋಹಿನೀ ।
ಅದೇಯಾ ಗೌರ್ಮಹಾರಾಜ ಸಾಮಾನ್ಯಾಽಪಿ ದ್ವಿಜನ್ಮನಾಂ ॥ ೪೧ ॥
ಕಿಂ ಪುನರ್ನಂದಿನೀ ಯೈಷಾ ಸರ್ವಕಾಮಪ್ರದಾಯಿನೀ ।
ಅಪರಂ ಶೃಣು ರಾಜೇಂದ್ರ ಸ್ಮೃತಿವಾಕ್ಯಮನುತ್ತಮಂ ॥ ೪೨ ॥

---

೩೬. ದ್ವಿಜರೆ! ವಿಶ್ವಾಮಿತ್ರನು ಆ ಕೌತುಕವನ್ನು ನೋಡಿ ಆಶ್ಚರ್ಯದಿಂದ ಮಂತ್ರಿಗಳೊಡನೆ ಆಲೋಚಿಸಿದನು. .

೩೭–೩೮. "ಏನಿದಾಶ್ಚರ್ಯ! ಈ ಧೇನುವು ಹಸಿವು ಬಾಯಾರಿಕೆಗಳಿಂದ ವ್ಯಾಕುಲಗೊಂಡ ನಮ್ಮ ಸೈನ್ಯವನ್ನು ತೃಪ್ತಿಗೊಳಿಸಿದೆ. ಆದುದರಿಂದ ಉತ್ತಮವಾದ ಈ ಧೇನುವನ್ನು ನಮ್ಮ ಮನೆಗೆ ತೆಗೆದುಕೊಂಡು ಹೋಗಿರಿ. ಕಾಡಿನಲ್ಲಿ ವಾಸಮಾಡುತ್ತಿರುವ ಸೇವಕರಿಲ್ಲದ ಈ ಬ್ರಾಹ್ಮಣನು ಏನು ಮಾಡುತ್ತಾನೆ."

೩೯–೪೦. ಅನಂತರ ಆ ವಿಶ್ವಾಮಿತ್ರನು ವಸಿಷ್ಠನನ್ನು ಕರೆದು ಹೀಗೆಂದನು. "ನಂದಿನೀಧೇನುವನ್ನು ನನಗೆ ಕೊಡು. ಇದರಿಂದ ವನವಾಸಿಯೂ, ಸುಖ ದುಃಖಸಹಿಷ್ಣುವೂ, ನಿಷ್ಪರಿಗ್ರಹನೂ ಆದ ನೀನೊಬ್ಬನು ಏನು ಮಾಡುವೆ? ಅಥವಾ ಮುನಿವರ್ಯನೆ! ನಿನ್ನ ವ್ಯಯಕ್ಕಾಗಿ ಉತ್ತಮ ಗ್ರಾಮಗಳನ್ನೂ, ಆನೆ ಕುದುರೆಗಳನ್ನೂ, ಇತರ ವಸ್ತುಗಳನ್ನೂ ಕೊಡುವೆನು."

೪೧. ವಸಿಷ್ಠನು ಹೇಳುತ್ತಾನೆ:—ದೊರೆಯೆ! ಈ ಕಾಮಧೇನುವು ನಮಗೆ ಹೋಮಧೇನುವಾಗಿದೆ. ಬ್ರಾಹ್ಮಣರು ಸಾಮಾನ್ಯ ಹಸುಗಳನ್ನೂ ಕೊಡಬಾರದು.

೪೨–೪೫. ಸಕಲೇಷ್ಟಾರ್ಥಗಳನ್ನೀಯುವ ಈ ನಂದಿನಿಯ ವಿಷಯದಲ್ಲಿ ಏನು ಹೇಳತಕ್ಕುದು. ಮಹಾರಾಜ! ಇನ್ನೊಂದು ಗೋವಿಕ್ರಯಸಂಬಂಧವಾಗಿ

ಗವಾಂ ಹಿ ವಿಕ್ರಯಾರ್ಥೇ ಚ ಯದುಕ್ತಂ ಮನುನಾ ಸ್ವಯಂ ।
ಗವಾಂ ವಿಕ್ರಯಜಂ ವಿತ್ತಂ ಯೋ ಗೃಹ್ಣಾತಿ ದ್ವಿಜೋತ್ತಮಃ ॥ ೪೩ ॥
ಅಂತ್ಯಜಃ ಸ ಪರಿಜ್ಞೇಯೋ ಮಾತೃವಿಕ್ರಯಕಾರಕಃ ।
ತಸ್ಮಾನ್ನಾಽಹಂ ಪ್ರದಾಸ್ಯಾಮಿ ನಂದಿನೀಂ ತಾಂ ಮಹೀಪತೇ ॥ ೪೪ ॥
ನ ಸಾಮ್ನಾ ನೈವ ಭೇದೇನ ನ ದಾನೇನ ಕಥಂಚನ ।
ನ ದಂಡೇನ ಮಹಾರಾಜ ತಸ್ಮಾದ್ಗಚ್ಛ ನಿಜಾಲಯಂ ॥ ೪೫ ॥

ವಿಶ್ವಾಮಿತ್ರ ಉವಾಚ :—

ಯತ್ಕಿಂಚಿದ್ವಿದ್ಯತೇ ರತ್ನಂ ಪಾರ್ಥಿವಸ್ಯಕ್ಷಿತೌ ದ್ವಿಜ ।
ತತ್ಸರ್ವಂ ರಾಜಕೀಯಂ ಸ್ಯಾದಿತಿ ವಿತ್ತವಿದೋ ವಿದುಃ ॥ ೪೬ ॥
ರತ್ನಭೂತಾ ತತೋ ಧೇನುರ್ಮಮೇಯಂ ನಂದಿನೀ ಸ್ಥಿತಾ ।
ದಂಡೇನಾಽಪಿ ಗ್ರಹೀಷ್ಯಾಮಿ ಸಾಮ್ನಾ ಯಚ್ಛಸಿ ನೋ ಯದಿ ॥ ೪೭ ॥
ಏವಮುಕ್ತ್ವಾ ವಸಿಷ್ಠಂ ಸ ವಿಶ್ವಾಮಿತ್ರೋ ಮಹೀಪತಿಃ ।
ಆದಿದೇಶ ತತೋ ಭೃತ್ಯಾನ್ನಂದಿನೀಯಂ ಪ್ರಗೃಹ್ಯತಾಂ ॥ ೪೮ ॥
ಅಥ ಸಾ ಭೃತ್ಯವರ್ಗೇಣ ನೀಯಮಾನಾ ಚ ನಂದಿನೀ ।
ಹನ್ಯಮಾನಾ ಪ್ರಹಾರೈಶ್ಚ ಪಾಷಾಣೈರ್ಲಕುಟೈರಪಿ ॥ ೪೯ ॥
ಅಶ್ರುಪೂರ್ಣೇಕ್ಷಣಾ ದೀನಾ ಪ್ರಹಾರೈರ್ಜರ್ಜರೀಕೃತಾ ।
ಕೃಚ್ಛ್ರಾದುಪೇತ್ಯ ತಂ ಪ್ರಾಹ ವಸಿಷ್ಠಂ ಮುನಿಸತ್ತಮಂ ॥ ೫೦ ॥

---

ಮನುವು ಹೇಳಿದ ಉತ್ತಮ ಶ್ರುತಿವಾಕ್ಯವನ್ನು ಕೇಳು. ಗೋವಿಕ್ರಯದಿಂದ ಬಂದ ಹಣವನ್ನು ತೆಗೆದುಕೊಳ್ಳುವ ಬ್ರಾಹ್ಮಣನು ತಾಯಿಯನ್ನು ಮಾರಿದ ಚಂಡಾಲನೆಂದು ಭಾವಿಸಬೇಕು. ಆದುದರಿಂದ ನಾನು ಈ ನಂದಿನೀಧೇನುವನ್ನು ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳಿಂದಲೂ ಕೊಡುವುದಿಲ್ಲ. ಆದುದರಿಂದ ನೀನು ನಿನ್ನ ಮನೆಗೆ ತೆರಳು.

೪೬. ವಿಶ್ವಾಮಿತ್ರನು ಹೇಳುತ್ತಾನೆ:—ಬ್ರಾಹ್ಮಣ! ವಿತ್ತಜ್ಞರು ಭೂಮಿಯಲ್ಲಿರುವ ಉತ್ತಮವಸ್ತುಗಳೆಲ್ಲ ರಾಜನದೆಂದು ಹೇಳುತ್ತಾರೆ.

೪೭. ಈ ನಂದಿನಿಯು ನನಗೆ ರತ್ನವಾಗಿದೆ. ನೀನು ಸಾಮೋಪಾಯದಿಂದ ಕೊಡದಿದ್ದರೆ ದಂಡೋಪಾಯದಿಂದ ತೆಗೆದುಕೊಳ್ಳುತ್ತೇನೆ.

೪೮. ಆ ವಿಶ್ವಾಮಿತ್ರರಾಜನು ವಸಿಷ್ಠನನ್ನು ಕುರಿತು ಹೀಗೆ ಹೇಳಿ ಈ ನಂದಿನಿಯನ್ನು ತೆಗೆದುಕೊಳ್ಳಿರಿ ಎಂದು ಸೇವಕರಿಗೆ ಆಜ್ಞೆಯಿತ್ತನು.

೪೯–೫೦. ಭೃತ್ಯರು ನಂದಿನಿಯನ್ನು ಕಲ್ಲು, ದೊಣ್ಣೆಗಳಿಂದ ಹೊಡೆದು ಎಳೆದುಕೊಂಡು ಹೋಗುತ್ತಿರಲು ಏಟುಗಳಿಂದ ಶಿಥಿಲವಾದ ಆ ನಂದಿನಿಯು ಕಷ್ಟದಿಂದ ವಸಿಷ್ಠನ ಹತ್ತಿರ ಬಂದು ಇಂತೆಂದಿತು.

**ಕಿಂ ದತ್ತಾಸ್ಮಿ ಮುನಿಶ್ರೇಷ್ಠ ತ್ವಯಾಽಹಂ ಚಾಽಸ್ಯ ಭೂಪತೇಃ ।**
**ಯೇನ ಮಾಂ ಕಾಲಯಂತ್ಯಸ್ಯ ಪುರುಷಾಃ ಸ್ವಾಮಿನೋ ಯಥಾ ॥ ೫೧ ॥**
**ವಸಿಷ್ಠ ಉವಾಚ :—**
**ನ ತ್ವಾಂ ಯಚ್ಛಾಮ್ಯಹಂ ಧೇನೋ ಪ್ರಾಣತ್ಯಾಗೇಽಪಿ ಸಂಸ್ಥಿತೇ ।**
**ತದ್ರಕ್ಷಸ್ವ ಸ್ವಯಂ ಧೇನೋ ಆತ್ಮಾನಂ ಮತ್ಪ್ರಭಾವತಃ ॥ ೫೨ ॥**
**ಏವಮುಕ್ತ್ವಾ ತದಾ ಧೇನುರ್ವಸಿಷ್ಠೇನ ಮಹಾತ್ಮನಾ ।**
**ಕೋಪಾವಿಷ್ಟಾ ತತಶ್ಚಕ್ರೇ ಹುಂಕಾರಾನ್ದಾರುಣಾಂಸ್ತಥಾ ॥ ೫೩ ॥**
**ತಸ್ಯಾ ಹುಂಕಾರಶಬ್ದೈಶ್ಚ ನಿಷ್ಕ್ರಾಂತಾಃ ಸಾಯುಧಾ ನರಾಃ ।**
**ಶಬರಾಶ್ಚ ಪುಲಿಂದ್ರಾಶ್ಚ ಮ್ಲೇಚ್ಛಾಃ ಸಂಖ್ಯಾವಿವರ್ಜಿತಾಃ ॥ ೫೪ ॥**
**ತೈಶ್ಚ ಭೃತ್ಯಾ ಹತಾಃ ಸರ್ವೇ ವಿಶ್ವಾಮಿತ್ರಸ್ಯ ಭೂಪತೇಃ ।**
**ತತಃ ಕೋಪಾಭಿಭೂತೋಽಸೌ ವಿಶ್ವಾಮಿತ್ರೋ ಮಹೀಪತಿಃ ॥ ೫೫ ॥**
**ಸಜ್ಜಂ ಕೃತ್ವಾ ಸ್ವಸೈನ್ಯಂತು ಚತುರಂಗಂ ಪ್ರಕೋಪತಃ ।**
**ಯುದ್ಧಂ ಚಕ್ರೇ ಚ ತೈಃಸಾರ್ಧಂ ಮರಣೇ ಕೃತನಿಶ್ಚಯಃ ॥ ೫೬ ॥**
**ಅಥ ತೇ ಸೈನಿಕಾಸ್ತಸ್ಯ ತೇ ಗಜಾಸ್ತೇ ಚ ವಾಜಿನಃ ।**
**ಪಶ್ಯತೋ ನಿಹತಾಃ ಸರ್ವೇ ಪುರುಷೈರ್ಧೇನುಸಂಭವೈಃ ॥ ೫೭ ॥**

---

೫೧. "ಮುನಿವರ್ಯನೆ! ನೀನು ನನ್ನನ್ನು ಈ ರಾಜನಿಗೆ ಕೊಟ್ಟಿರುವೆಯೇನು? ಇವನ ಸೇವಕರು ನನ್ನನ್ನು ಯಜಮಾನರಂತೆ ಎಳೆದುಕೊಂಡು ಹೋಗುತ್ತಿದ್ದಾರೆ."

೫೨. ವಸಿಷ್ಠನು ಹೇಳುತ್ತಾನೆ:—ಧೇನುವೆ! ನಾನು ಸಾಯುವ ಸಂದರ್ಭ ಒದಗಿದರೂ ನಿನ್ನನ್ನು ಕೊಡುವುದಿಲ್ಲ. ಆದುದರಿಂದ ನನ್ನ ಪ್ರಭಾವದಿಂದ ನೀನೇ ನಿನ್ನನ್ನು ಕಾಪಾಡಿಕೊ.

೫೩. ಮಹಾತ್ಮನಾದ ವಸಿಷ್ಠನು ಹೀಗೆ ಹೇಳಲು ಆ ಧೇನುವು ಕೋಪಗೊಂಡು ಭಯಂಕರವಾಗಿ ಹುಂಕಾರಮಾಡಿತು.

೫೪. ಆ ಧೇನುವಿನ ಹುಂಕಾರ ಶಬ್ದಗಳಿಂದ ಲೆಕ್ಕವಿಲ್ಲದಷ್ಟು ಆಯುಧಗಳನ್ನು ಹಿಡಿದ ಶಬರರೂ, ಪುಲಿಂದರೂ, ಮ್ಲೇಚ್ಛರೂ ಹೊರಟರು.

೫೫–೫೬. ಅವರು ವಿಶ್ವಾಮಿತ್ರನ ಸೇವಕರನ್ನೆಲ್ಲ ಕೊಂದರು. ಅನಂತರ ಕುಪಿತನಾದ ವಿಶ್ವಾಮಿತ್ರರಾಜನು ತನ್ನ ಚತುರಂಗ ಸೈನ್ಯವನ್ನು ಸಿದ್ಧಗೊಳಿಸಿ ತಾನು ಸಾಯಲು ನಿಶ್ಚಯಿಸಿ ಯುದ್ಧಮಾಡಿದನು.

೫೭. ಅನಂತರ ಅವನು ನೋಡುತ್ತಿರುವಾಗಲೆ ನಂದಿನೀಧೇನುವಿನಿಂದ ಹುಟ್ಟಿದ ಮನುಷ್ಯರಿಂದ ಅವನ ಸೈನಿಕರೆಲ್ಲ ಹತರಾದರು.

ವಿಶ್ವಾಮಿತ್ರಂ ಪರಿತ್ಯಜ್ಯ ಶೇಷಂ ಸರ್ವಂ ನಿಪಾತಿತಂ ।
ತಂ ದೃಷ್ಟ್ವಾ ವೇಷ್ಟಿತಂ ಮ್ಲೇಚ್ಛೈರ್ಯುರ್ಧ್ಯಮಾನಂ ಮಹೀಪತಿಂ॥ ೫೮ ॥
ಕೃಪಾಂ ಕೃತ್ವಾ ವಸಿಷ್ಠಸ್ತು ನಂದಿನೀಮಿದಮಬ್ರವೀತ್ ।
ರಕ್ಷ ನಂದಿನಿ ಭೂಪಾಲಂ ಮ್ಲೇಚ್ಛೈರೇತೈಃ ಸಮಾವೃತಂ ॥ ೫೯ ॥
ರಾಜಾಹಿ ಯತ್ನತೋ ರಕ್ಷ್ಯೋ ಯತ್ಪ್ರಸಾದಾದಿದಂ ಜಗತ್ ।
ಸನ್ಮಾರ್ಗೇ ವರ್ತತೇ ಸರ್ವಂ ನ ಚಾಮಾರ್ಗೇ ಪ್ರವರ್ತತೇ ॥ ೬೦ ॥
ತತಸ್ತು ನಂದಿನೀಂ ಯಾವನ್ನಿಷೇಧಯಿತುಮಾಗತಾಂ ।
ವಿಶ್ವಾಮಿತ್ರೋಽಸಿಮುದ್ಯಮ್ಯ ಪ್ರಹರ್ತುಮುಪಚಕ್ರಮೇ ॥ ೬೧ ॥
ವಸಿಷ್ಠೋಽಪಿ ಸಮಾಲೋಕ್ಯ ವಧ್ಯಮಾನಾಂ ಚ ತಾಂ ತದಾ ।
ಬಾಹುಂ ಸಂಸ್ತಂಭಯಾಮಾಸ ಖಡ್ಗಂ ತಸ್ಯ ಚ ಭೂಪತೇಃ ॥ ೬೨ ॥
ಅಥ ವೈಲಕ್ಷ್ಯಮಾಪನ್ನೋ ವಿಶ್ವಾಮಿತ್ರೋ ಮಹೀಪತಿಃ ।
ಪ್ರೋವಾಚ ವ್ರೀಡಯಾ ಯುಕ್ತೋ ವಸಿಷ್ಠಂ ಮುನಿಸತ್ತಮಂ ॥ ೬೩ ॥
ರಕ್ಷ ಮಾಂ ತ್ವಂ ಮುನಿಶ್ರೇಷ್ಠ ವಧ್ಯಮಾನಂ ಸುದಾರುಣೈಃ ।
ಮ್ಲೇಚ್ಛೈಃ ಕುರುಷ್ವ ಮೇ ಬಾಹುಂ ಸ್ತಂಭೇನತು ವಿವರ್ಜಿತಂ ॥ ೬೪ ॥
ಮಮಾಽಪರಾಧಾತ್ಸನ್ನಷ್ಟಂ ಸರ್ವಂ ಸೈನ್ಯಮನಂತಕಂ ।
ತಸ್ಮಾದ್ಯಾಸ್ಯಾಮ್ಯಹಂ ಹರ್ಮ್ಯಂ ನ ಯುದ್ಧೇನ ಪ್ರಯೋಜನಂ ॥ ೬೫ ॥

---

೫೮—೫೯. ವಿಶ್ವಾಮಿತ್ರನೊಬ್ಬನನ್ನು ಬಿಟ್ಟು ಉಳಿದವರೆಲ್ಲ ಹತರಾದರು. ಆ ವಸಿಷ್ಠನು ಮ್ಲೇಚ್ಛರೊಡನೆ ಯುದ್ಧಮಾಡುತ್ತಿರುವ ವಿಶ್ವಾಮಿತ್ರನನ್ನು ನೋಡಿ ದಯೆಗೊಂಡು ನಂದಿನಿಯನ್ನು ಕುರಿತು ಹೀಗೆಂದನು. "ನಂದಿನಿ! ಈ ಮ್ಲೇಚ್ಛರು ಸುತ್ತುವರಿದಿರುವ ದೊರೆಯನ್ನು ಕಾಪಾಡು.

೬೦—೬೧. ರಾಜನ ಅನುಗ್ರಹದಿಂದ ಈ ಜಗತ್ತಿನ ಜನರು ಸನ್ಮಾರ್ಗವಲ್ಲಿ ನಿರತರಾಗುವರು. ದುರ್ಮಾರ್ಗದಲ್ಲಿ ನಡೆಯುವುದಿಲ್ಲ. ಆದುದರಿಂದ ರಾಜನನ್ನು ರಕ್ಷಿಸಬೇಕು." ಅನಂತರ ನಂದಿನಿಯು ಮ್ಲೇಚ್ಛರನ್ನು ತಡೆಯಲು ಬರುವಷ್ಟರಲ್ಲಿ ವಿಶ್ವಾಮಿತ್ರನು ಕತ್ತಿಯನ್ನು ಎತ್ತಿ ಅದನ್ನು ಹೊಡೆಯಲುದ್ಯುಕ್ತನಾದನು.

೬೨—೬೩. ವಸಿಷ್ಠನು ಹಾಗೆ ಕೊಲ್ಲಲ್ಪಡುತ್ತಿರುವ ನಂದಿನಿಯನ್ನೀಕ್ಷಿಸಿ ಆ ವಿಶ್ವಾಮಿತ್ರನ ತೋಳನ್ನೂ ಕತ್ತಿಯನ್ನೂ ಸ್ತಂಭೀಕರಿಸಿದನು. ಅನಂತರ ನಾಚಿಕೆಗೊಂಡ ವಿಶ್ವಾಮಿತ್ರನು ವಸಿಷ್ಠಮುನಿವರನನ್ನು ಕುರಿತು ಇಂತೆಂದನು.

೬೪. "ಮುನಿವರ್ಯನೆ! ದಾರುಣವಾದ ಮ್ಲೇಚ್ಛರಿಂದ ಕೊಲ್ಲಲ್ಪಡುತ್ತಿರುವ ನನ್ನನ್ನು ರಕ್ಷಿಸು. ನನ್ನ ತೋಳನ್ನು ಚಲಿಸುವಂತೆ ಮಾಡು.

೬೫. ನನ್ನ ತಪ್ಪಿನಿಂದ ಮಿತಿಯಿಲ್ಲದ ಸೈನ್ಯವೆಲ್ಲ ನಾಶವಾಯಿತು. ಆದುದರಿಂದ ನಾನು ಅರಮನೆಗೆ ಹೋಗುವೆನು. ಯುದ್ಧದಿಂದ ಪ್ರಯೋಜನವಿಲ್ಲ.

**ದುರ್ವಿನೀತಃ ಶ್ರಿಯಂ ಪ್ರಾಪ್ಯ ವಿದ್ಯಾಮೈಶ್ವರ್ಯಮೇವ ಚ ।**
**ನ ತಿಷ್ಠತಿ ಚಿರಂ ಯುದ್ಧೇ ಯಥಾಽಹಂ ಮದಗರ್ವಿತಃ ॥ ೬೬ ॥**
**ಸೂತ ಉವಾಚ :—**
**ಏವಮುಕ್ತೋ ವಸಿಷ್ಠಸ್ತು ವಿಶ್ವಾಮಿತ್ರೇಣ ಭೂಭುಜಾ ।**
**ಚಕಾರ ತಂ ಭುಜಂ ತಸ್ಯ ಸ್ತಂಭದೋಷವಿವರ್ಜಿತಂ ॥ ೬೭ ॥**
**ಅಬ್ರವೀತ್ಪ್ರಹಸನ್ವಾಕ್ಯಂ ವಿಧಾಯ ಸ ಶುಭಂ ಕರಂ ।**
**ಗಚ್ಛ ರಾಜನ್ ವಿಮುಕ್ತೋಽಸಿ ಸ್ತಂಭದೋಷೇಣ ವೈ ಮಯಾ ॥ ೬೮ ॥**
**ಮಾ ಕಾರ್ಷೀರ್ಬ್ರಾಹ್ಮಣೈಃ ಸಾರ್ಧಂ ವಿರೋಧಂ ಭೂಯ ಏವ ಹಿ ।**
**ಅನುಜ್ಞಾತಃ ಸ ತೇನಾಽಥ ವಿಶ್ವಾಮಿತ್ರೋ ಮಹೀಪತಿಃ ॥ ೬೯ ॥**
**ಸವ್ರೀಡಂ ಪ್ರಯಯೌ ಹರ್ಮ್ಯಂ ಪದ್ಭ್ಯಾಮೇವ ದ್ವಿಜೋತ್ತಮಾಃ ।**
**ಸ್ವಪುರದ್ವಾರಮಾಸಾದ್ಯ ಸುಗುಪ್ತೇ ರಜನೀಮುಖೇ ॥ ೭೦ ॥**
**ಪ್ರಲಾಪಮಕರೋತ್ತತ್ರ ಬಾಷ್ಪಪರ್ಯಾಕುಲೇಕ್ಷಣಃ ।**
**ಧಿಗ್ಬಲಂ ಕ್ಷತ್ರಿಯಾಣಾಂ ಚ ಧಿಗ್ವೀರ್ಯಂ ಧಿಗ್ವಿಜೀವಿತಂ ॥ ೭೧ ॥**
**ಶ್ಲಾಘ್ಯಂ ಬ್ರಹ್ಮಬಲಂ ಚೈಕಂ ಬ್ರಾಹ್ಮ್ಯಂ ತೇಜಶ್ಚ ಕೇವಲಂ ॥ ೭೨ ॥**
**ಏತತ್ಕರ್ಮ ಮಯಾಕಾರ್ಯಂ ಯಥಾಸ್ಯಾದ್ಬ್ರಹ್ಮಜಂ ಬಲಂ ।**
**ತ್ಯಕ್ತ್ವಾ ಚೈವ ನಿಜಂ ರಾಜ್ಯಂ ಚರಿಷ್ಯಾಮಿ ಮಹತ್ತಪಃ ॥ ೭೩ ॥**

---

೬೬. ದುರ್ವಿನೀತನು ಸಂಪತ್ತು, ವಿದ್ಯೆ, ಪ್ರಭುತ್ವಗಳನ್ನು ಹೊಂದಿ ಮತ್ತನಾದ ನನ್ನಂತೆ ಹೆಚ್ಚುಕಾಲ ಯುದ್ಧಮಾಡಲಾರನು."

೬೭. ಸೂತನು ಹೇಳುತ್ತಾನೆ:—ವಿಶ್ವಾಮಿತ್ರನು ಹೀಗೆ ಹೇಳಲು ವಸಿಷ್ಠನು ಅವನ ತೋಳನ್ನು ಚಲಿಸುವಂತೆ ಮಾಡಿದನು.

೬೮. ನಗುತ್ತ ಅವನ ಕೈಯನ್ನು ಸರಿಮಾಡಿ, "ರಾಜನೆ! ಹೊರಡು. ನಿನ್ನ ಕೈಯನ್ನು ಸ್ತಂಭದೋಷವಿಲ್ಲದ್ದನ್ನಾಗಿ ಮಾಡಿದ್ದೇನೆ.

೬೯–೭೧. ಮರಳಿ ಬ್ರಾಹ್ಮಣರೊಡನೆ ದ್ವೇಷಬೆಳೆಸಬೇಡ" ಎಂದನು. ವಿಶ್ವಾಮಿತ್ರರಾಜನು ವಸಿಷ್ಠನ ಅನುಮತಿಯನ್ನು ಪಡೆದು ನಾಚಿಕೆಯಿಂದ ಅರಮನೆಗೆ ಕಾಲ್ನಡಗೆಯಿಂದಲೇ ಹೋದನು. ರಾತ್ರಿಯ ಆರಂಭವೇಳೆಯಲ್ಲಿ ತನ್ನ ಪಟ್ಟಣದ ಬಾಗಿಲನ್ನು ಹೊಂದಿ ಕಣ್ಣೀರನ್ನು ಸುರಿಸುತ್ತ, "ಕ್ಷತ್ರಿಯರ ಬಲ, ವೀರ್ಯ, ಜೀವನ ಇವುಗಳು ನಿಂದ್ಯವಾದುವು.

೭೨. ಬ್ರಾಹ್ಮಣ ಬಲ, ಬ್ರಾಹ್ಮಣ ತೇಜಸ್ಸು ಇವುಗಳು ಮಾತ್ರ ಶ್ಲಾಘ್ಯವಾದುವು.

೭೩. ಬ್ರಹ್ಮಬಲವುಂಟಾಗುವಂತೆ ನಾನು ಕೆಲಸಮಾಡಬೇಕು. ನನ್ನ ರಾಜ್ಯವನ್ನು ತ್ಯಜಿಸಿ ಮಹಾತಪಸ್ಸನ್ನು ಆಚರಿಸುವೆನು" ಎಂದು ನಿಶ್ಚಯಿಸಿದನು.

ಏವಂ ಸ ನಿಶ್ಚಯಂ ಕೃತ್ವಾ ರಾಜ್ಯೇ ಸಂಸ್ಥಾಪ್ಯ ವೈ ಸುತಂ ।
ನಾಮ್ನಾ ವಿಶ್ವಸಹಂ ಖ್ಯಾತಂ ಪ್ರಜಗಾಮ ತಪೋವನಂ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ವಿಶ್ವಾಮಿತ್ರರಾಜ್ಯಪರಿತ್ಯಾಗವರ್ಣನಂ " ನಾಮ
ಸಪ್ತಷಷ್ಟ್ಯುತ್ತರಶತತಮೋಽಧ್ಯಾಯಃ

---

೭೪. ಆ ವಿಶ್ವಾಮಿತ್ರನು ಹೀಗೆ ನಿಶ್ಚಯಿಸಿ ವಿಶ್ವಸಹನೆಂಬ ತನ್ನ ಮಗನನ್ನು ರಾಜ್ಯದಲ್ಲಿ ಸ್ಥಾಪಿಸಿ ತಪೋವನಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ವಿಶ್ವಾಮಿತ್ರರಾಜ್ಯಪರಿತ್ಯಾಗವರ್ಣನ " ವೆಂಬ
ನೂರರವತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥಾಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

### ಧಾರೋತ್ಪತ್ತಿಮಾಹಾತ್ಮ್ಯವರ್ಣನಂ

ಸೂತ ಉವಾಚ :—

ಏವಂ ರಾಜ್ಯಂ ಪರಿತ್ಯಜ್ಯ ವಿಶ್ವಾಮಿತ್ರೋ ದ್ವಿಜೋತ್ತಮಾಃ ।
ಹಿಮವಂತಂ ನಗಂ ಪ್ರಾಪ್ಯ ತಪಶ್ಚಕ್ರೇ ಸುದಾರುಣಂ ॥ ೧ ॥
ವರ್ಷಾಸ್ವಾಕಾಶಶಾಯೀ ಚ ಹೇಮಂತೇ ಸಲಿಲಾಶಯಃ ।
ಪಂಚಾಗ್ನಿಸಾಧಕೋ ಗ್ರೀಷ್ಮೇ ಸ್ಥಿತೋ ವರ್ಷಶತತ್ರಯಂ ॥ ೨ ॥
ಫಲಮೂಲ ಕೃತಾಹಾರಸ್ತತೋ ವರ್ಷಶತತ್ರಯಂ ।
ಧ್ಯಾಯಮಾನಃ ಪರಂ ಬ್ರಹ್ಮ ಸ್ಥಿತೋ ಬ್ರಾಹ್ಮಣಸತ್ತಮಾಃ ।
ಶೀರ್ಣಪರ್ಣಾಶನಃ ಪಶ್ಚಾತ್ತಾವತ್ಕಾಲಂ ವ್ಯವಸ್ಥಿತಃ ॥ ೩ ॥
ತತಶ್ಚೈವ ಜಲಾಹಾರಸ್ತಾವನ್ಮಾತ್ರಂ ವ್ಯವಸ್ಥಿತಃ ।
ಕಾಲಂ ಸ ವಾಯುಭಕ್ಷಶ್ಚ ತತಶ್ಚೈವಾಽಯುತಂ ಸಮಾಃ । ॥ ೪ ॥

ಸೂತ ಉವಾಚ :—

ಅಥ ದೃಷ್ಟ್ವಾ ತಪಃಶಕ್ತಿಂ ತಸ್ಯ ತಾಂ ತ್ರಿದಶಾಧಿಪಃ ।
ಪಾತಯಿಷ್ಯತಿ ಮಾಂ ನೂನಮೇಷ ಸ್ಥಾನಾನ್ನೃಪೋತ್ತಮಃ ॥ ೫ ॥

---

## ಕನ್ನಡದ ಅನುವಾದ

### ಧಾರೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ವಿಶ್ವಾಮಿತ್ರನು ಹೀಗೆ ರಾಜ್ಯವನ್ನು ತ್ಯಜಿಸಿ ಹಿಮಾಲಯಪರ್ವತವನ್ನು ಸೇರಿ ಭಯಂಕರ ತಪಸ್ಸನ್ನು ಆಚರಿಸಿದನು.

೨. ಅವನು ಮಳೆಗಾಲದಲ್ಲಿ ಆಕಾಶದಲ್ಲಿಯೂ, ಚಳಿಗಾಲದಲ್ಲಿ ನೀರಿನಲ್ಲಿಯೂ, ಗ್ರೀಷ್ಮಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ ಇದ್ದು ಮೂರು ವರ್ಷಕಾಲ ತಪಸ್ಸನ್ನು ಮಾಡಿದನು.

೩–೪. ಅನಂತರ ಮೂರು ವರ್ಷಕಾಲ ಗಡ್ಡೆಗೆಣಸುಗಳನ್ನು ತಿಂದುಕೊಂಡು ಪರಬ್ರಹ್ಮನನ್ನು ಧ್ಯಾನಿಸುತ್ತ ತಪಸ್ಸನ್ನು ಮಾಡಿದನು. ತರುವಾಯ ಮೂರು ವರ್ಷಕಾಲ ಒಣಗಿದ ತರಗುಗಳನ್ನು ತಿನ್ನುತ್ತಲೂ, ಮೂರು ವರ್ಷಕಾಲ ನೀರನ್ನು ಕುಡಿಯುತ್ತಲೂ, ಹತ್ತುಸಾವಿರ ವರ್ಷಕಾಲ ಗಾಳಿಯನ್ನು ಭಕ್ಷಿಸುತ್ತಲೂ ತಪಸ್ಸನ್ನು ಮಾಡಿದನು.

೫–೬. ಸೂತನು ಹೇಳುತ್ತಾನೆ:—ಬಳಿಕ ದೇವೇಂದ್ರನು ಅವನ ತಪಶ್ಶಕ್ತಿಯನ್ನು ನೋಡಿ ನಿಶ್ಚಯವಾಗಿಯೂ ಈ ರಾಜನು ನನ್ನನ್ನು ಸ್ಥಾನಭ್ರಷ್ಟನನ್ನಾಗಿ

ತತಃ ಪ್ರೋವಾಚ ಸಂಗತ್ಯ ಸಾಮ್ನಾ ಪರಮವಲ್ಗುನಾ ।
ವಿಶ್ವಾಮಿತ್ರಂ ನೃಪಶ್ರೇಷ್ಠಂ ಭಯೇನ ಮಹತಾನ್ವಿತಃ ॥ ೬ ॥
ಇಂದ್ರ ಉವಾಚ :—
ವಿಶ್ವಾಮಿತ್ರ ಪ್ರತುಷ್ಟೋಽಸ್ಮಿ ತಪಸಾಽನೇನ ಪಾರ್ಥಿವ ।
ವರಂ ವರಯ ಭದ್ರಂತೇ ಯದಭೀಷ್ಟಂ ಹೃದಿ ಸ್ಥಿತಂ ॥ ೭ ॥
ವಿಶ್ವಾಮಿತ್ರ ಉವಾಚ :—
ಬ್ರಾಹ್ಮಣ್ಯಂ ದೇಹಿ ಮೇ ಶಕ್ರ ಯದಿ ತುಷ್ಟೋಽಸಿ ಸಾಂಪ್ರತಂ ।
ತದರ್ಥಂ ತಪಸಶ್ಚರ್ಯಾಂ ಜಾನೀಹಿ ತ್ವಂ ಪುರಂದರ ॥ ೮ ॥
ಇಂದ್ರ ಉವಾಚ :—
ಅನೇನೈವ ಶರೀರೇಣ ಕ್ಷತ್ರಿಯಃ ಸ್ಯಾತ್ಕಥಂ ದ್ವಿಜಃ ।
ಚತುರ್ವಿಂಶತಿ ಸಂಸ್ಕಾರೈರ್ದ್ವಿಗುಣೈರ್ಯೋಃ ಪ್ರಜಾಯತೇ ।
ತದನ್ಯತ್ಪ್ರಾರ್ಥಯ ಕ್ಷಿಪ್ರಂ ಯತ್ತೇಽಭೀಷ್ಟತರಂ ಸ್ಥಿತಂ ॥ ೯ ॥
ವಿಶ್ವಾಮಿತ್ರ ಉವಾಚ :—
ನ ಬ್ರಾಹ್ಮಣ್ಯಾತ್ಪರಂ ಕಿಂಚಿತ್ಪ್ರಾರ್ಥಯಾಮಿ ಸುರೇಶ್ವರ ॥ ೧೦ ॥
ಅಪಿ ತ್ರೈಲೋಕ್ಯ ರಾಜ್ಯಂ ತೇ ವಸ್ತುಷ್ವನ್ಯೇಷು ಕಾ ಕಥಾ ।
ತಸ್ಮಾದ್ಗಚ್ಛ ಸುರಶ್ರೇಷ್ಠ ಸ್ವರಾಜ್ಯಂ ಪರಿಪಾಲಯ ॥ ೧೧ ॥

---

ಮಾಡುವನೆಂದರಿತು ಅವನೆಡೆಗೆ ಬಂದು ಭಯದಿಂದ ನಡುಗುತ್ತ ಆ ವಿಶ್ವಾಮಿತ್ರನನ್ನು ಕುರಿತು ಸಮಾಧಾನದಿಂದ ಹೀಗೆಂದನು.

೭. ಇಂದ್ರನು ಹೇಳುತ್ತಾನೆ:—ವಿಶ್ವಾಮಿತ್ರ! ನಿನ್ನೀ ತಪಸ್ಸಿಗೆ ನಾನು ಒಲಿದಿರುವೆನು. ನಿನಗೆ ಮಂಗಳವಾಗಲಿ. ನಿನಗೆ ಇಷ್ಟವಾದ ವರವನ್ನು ಕೇಳಿಕೊ.

೮. ವಿಶ್ವಾಮಿತ್ರನು ಹೇಳುತ್ತಾನೆ:—ಮಹೇಂದ್ರ! ನೀನು ಸಂತುಷ್ಟನಾಗಿದ್ದರೆ ನನಗೆ ಬ್ರಾಹ್ಮಣ್ಯವನ್ನು ಕೊಡು. ನನ್ನ ತಪಶ್ಚರ್ಯೆಯು ಅದಕ್ಕಾಗಿಯೇ ಎಂದು ತಿಳಿ.

೯. ಇಂದ್ರನು ಹೇಳುತ್ತಾನೆ:—ವಿಶ್ವಾಮಿತ್ರ! ಕ್ಷತ್ರಿಯನಾದ ನೀನು ಈ ಶರೀರದಿಂದಲೇ ಇಮ್ಮಡಿಯಾದ ಇಪ್ಪತ್ತನಾಲ್ಕು ಸಂಸ್ಕಾರಗಳಿಂದಾಗುವ ಬ್ರಾಹ್ಮಣನು ಹೇಗಾಗುವೆ? ಇದನ್ನು ಬಿಟ್ಟು ಬೇರೆ ಅಭೀಷ್ಟವನ್ನು ಕೇಳಿಕೊ.

೧೦. ವಿಶ್ವಾಮಿತ್ರನು ಹೇಳುತ್ತಾನೆ:—“ಸುರರಾಜ! ನಾನು ಬ್ರಾಹ್ಮಣ್ಯಕ್ಕಿಂತ ಬೇರೆ ಯಾವುದನ್ನೂ ಬಯಸುವುದಿಲ್ಲ.

೧೧. ನಿನ್ನ ತ್ರಿಭುವನ ರಾಜ್ಯವನ್ನೂ, ಇತರ ವಸ್ತುಗಳನ್ನೂ ಅಪೇಕ್ಷಿಸುವುದಿಲ್ಲವೆಂದು ಹೇಳಬೇಕೆ? ಆದುದರಿಂದ ನೀನು ಹೋಗು, ದೇವರಾಜ್ಯವನ್ನು ಪಾಲಿಸು.

**ಪರಿತ್ಯಕ್ಷ್ಯಾಮ್ಯಹಂ ದೇಹಂ ಯಾಸ್ಯೇವಾಽಹಂ ದ್ವಿಜನ್ಮತಾಂ ।**
**ತಚ್ಛ್ರುತ್ವಾ ವಚನಂ ತಸ್ಯ ದೇವರಾಜೋ ದಿವಂ ಗತಃ ॥ ೧೨ ॥**
**ತಸ್ಯ ತಂ ನಿಶ್ಚಯಂ ಜ್ಞಾತ್ವಾ ಸರ್ವದೇವಸಮಾವೃತಃ ।**
**ವಿಶ್ವಾಮಿತ್ರೋಽಪಿ ತದ್ರೂಪಂ ಚಕಾರ ದುಶ್ಚರಂ ತಪಃ ॥ ೧೩ ॥**
**ಅಥ ವರ್ಷಸಹಸ್ರೇತು ವ್ಯತಿಕ್ರಾಂತೇ ದ್ವಿಜೋತ್ತಮಾಃ ।**
**ಅನ್ಯಸ್ಮಿನ್ ವಾಯುಭಕ್ಷಸ್ಯ ವಿಶ್ವಾಮಿತ್ರಸ್ಯ ಭೂಪತೇಃ ॥ ೧೪ ॥**
**ಆಜಗಾಮ ಸ್ವಯಂ ಬ್ರಹ್ಮಾ ಪುಣ್ಯೈರ್ದೇವರ್ಷಿಭಿಃ ಸಹ ।**
**ಅಬ್ರವೀತ್ತಂ ಮಹೀಪಾಲಂ ತಪಸಾ ದಗ್ಧಕಿಲ್ಬಿಷಂ ॥ ೧೫ ॥**

**ಶ್ರೀ ಬ್ರಹ್ಮೋವಾಚ:—**

**ವಿಶ್ವಾಮಿತ್ರ ಪ್ರತುಷ್ಟೋಽಸ್ಮಿ ತಪಸಾಽನೇನ ಸತ್ತಮ ।**
**ವರಂ ವರಯ ಭದ್ರಂತೇ ಪ್ರದಾಸ್ಯಾಮ್ಯಪಿ ದುರ್ಲಭಂ ॥ ೧೬ ॥**

**ವಿಶ್ವಾಮಿತ್ರ ಉವಾಚ:—**

**ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।**
**ಬ್ರಾಹ್ಮಣ್ಯಂ ದೇಹಿ ಮೇ ದೇವ ನಾಽನ್ಯದಿಷ್ಟತಮಂ ಮಹತ್ ॥ ೧೭ ॥**

**ಬ್ರಹ್ಮೋವಾಚ:—**

**ಕ್ಷತ್ರಿಯೇಣ ಪ್ರಜಾತಸ್ಯ ದ್ವಿಜತ್ವಂ ಜಾಯತೇ ಕಥಂ ।**
**ಶ್ರುತಿಸ್ಮೃತಿ ವಿರುದ್ಧಂ ಹಿ ಕಿಮೇವಂ ವದಸೀಪ್ಸಿತಂ ॥ ೧೮ ॥**

---

೧೨—೧೩. ನಾನು ದೇಹವನ್ನು ತ್ಯಜಿಸುವೆನು. ಅಥವಾ ಬ್ರಾಹ್ಮಣ್ಯವನ್ನು ಪಡೆಯುವೆನು.'' ದೇವರಾಜನು ವಿಶ್ವಾಮಿತ್ರನ ದೃಢನಿಶ್ಚಯವನ್ನರಿತು ಸಮಸ್ತ ದೇವತೆಗಳೊಡನೆ ದೇವಲೋಕಕ್ಕೆ ತೆರಳಿದನು. ವಿಶ್ವಾಮಿತ್ರನೂ ಘೋರ ತಪವನ್ನಾಚರಿಸಿದನು.

೧೪—೧೫. ದ್ವಿಜವರ್ಯರೆ! ವಿಶ್ವಾಮಿತ್ರನು ವಾಯುಭಕ್ಷನಾಗಿ ಇನ್ನೊಂದು ಸಾವಿರ ವರ್ಷಕಾಲ ತಪಸ್ಸನ್ನು ಮಾಡುತ್ತಿರಲು ಚತುರ್ಮುಖನು ದೇವರ್ಷಿಗಳೊಡನೆ ಅಲ್ಲಿಗೆ ಬಂದು ತಪಸ್ಸಿನಿಂದ ಪಾಪರಹಿತನಾದ ಆ ವಿಶ್ವಾಮಿತ್ರನನ್ನು ಕುರಿತು ಇಂತೆಂದನು.

೧೬. ಶ್ರೀ ಬ್ರಹ್ಮನು ಹೇಳುತ್ತಾನೆ:—ಸಾಧುವರ್ಯನಾದ ವಿಶ್ವಾಮಿತ್ರನೆ! ನಿನ್ನೀ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

೧೭. ವಿಶ್ವಾಮಿತ್ರನು ಹೇಳುತ್ತಾನೆ:—ಸ್ವಾಮಿ! ನೀನು ನನ್ನಲ್ಲಿ ಸಂತುಷ್ಟನಾಗಿ ವರವನ್ನು ಕೊಡುವುದಾದರೆ ಬ್ರಾಹ್ಮಣ್ಯವನ್ನು ಕೊಡು. ಬೇರೆ ಯಾವುದೂ ನನಗೆ ಇಷ್ಟವಾಗಿಲ್ಲ.

೧೮. ಬ್ರಹ್ಮನು ಹೇಳುತ್ತಾನೆ:—ವಿಶ್ವಾಮಿತ್ರ! ಕ್ಷತ್ರಿಯನಿಂದ ಹುಟ್ಟಿ

ಯನ್ನ ಜಾತಂ ಧರಾಪೃಷ್ಠೇ ನ ಭವಿಷ್ಯತಿ ಕರ್ಹಿಚಿತ್ ॥ ೧೯ ॥

ವಿಶ್ವಾಮಿತ್ರ ಉವಾಚ:—

ಗಚ್ಛ ತ್ವಂ ದೇವದೇವೇಶ ಬ್ರಹ್ಮಲೋಕಮನುತ್ತಮಂ ।
ಅಹಂ ತ್ಯಕ್ಷ್ಯಾಮಿ ವಾ ಪ್ರಾಣಾನ್ ಸಂಪ್ರಾಪ್ಸ್ಯೇ ವಾ ದ್ವಿಜನ್ಮತಾಂ ॥ ೨೦ ॥
ಅಥ ದೇವರ್ಷಿಮಧ್ಯಸ್ಥ ಋಚೀಕೋ ವಾಕ್ಯಮಬ್ರವೀತ್ ।
ಅಸ್ಯ ಜನ್ಮಕೃತೇ ದೇವ ಬ್ರಾಹ್ಮ್ಯೈರ್ಮಂತ್ರೈರ್ಮಯಾ ಚರುಃ ॥ ೨೧ ॥
ಅಭಿತೋ ಬ್ರಹ್ಮಸರ್ವಸ್ವಂ ತತ್ರ ಸಂಯೋಜಿತಂ ಮಯಾ ।
ತೇನೈವ ಕ್ಷತ್ರಜನ್ಮಾಽಯಂ ಬ್ರಾಹ್ಮಣಶ್ಚತುರಾನನ ॥ ೨೨ ॥
ಬ್ರಹ್ಮರ್ಷಿಂ ಕೀರ್ತಯಸ್ವೈನಂ ತಸ್ಮಾತ್ತ್ವಂ ಪ್ರಪಿತಾಮಹ ।
ರಾಜ್ಯಸ್ಥೋಽಪಿ ದ್ವಿಜಾರ್ಹಾಣಿ ಸತ್ಕೃತ್ಯಾನ್ಯಕರೋದಸೌ ॥ ೨೩ ॥
ಬ್ರಾಹ್ಮ್ಯ ಮಂತ್ರಪ್ರಭಾವೇನ ತಸ್ಮಾದ್ಬ್ರಹ್ಮರ್ಷಿಮಾಹ್ವಯ ।
ಯೇನ ಕೀರ್ತಾಮಹೇ ಸರ್ವೇ ವಿಶ್ವಾಮಿತ್ರಂ ದ್ವಿಜೋತ್ತಮಂ ॥ ೨೪ ॥
ಅಥ ಬ್ರಹ್ಮಾ ಚಿರಂ ಧ್ಯಾತ್ವಾ ಬ್ರಾಹ್ಮ್ಯೈರ್ಮಂತ್ರೈಶ್ಚ ತೇಜಸಾ ।
ಸಮುತ್ಪನ್ನಂ ತತಃ ಪ್ರಾಹ ಬ್ರಾಹ್ಮಣಸ್ತ್ವಂ ಮಯಾ ಕೃತಃ ॥ ೨೫ ॥

---

ದವನಿಗೆ ಬ್ರಾಹ್ಮಣ್ಯವು ಹೇಗುಂಟಾಗುವುದು? ಶ್ರುತಿಸ್ಮೃತಿ ವಿರುದ್ಧವಾದ ಅಭೀಷ್ಟವನ್ನು ಏಕೆ ಕೇಳುತ್ತಿರುವೆ?

೧೯. ಇದು ಭೂಮಂಡಲದಲ್ಲಿ ಆಗಲಿಲ್ಲ. ಯಾವಾಗಲೂ ಆಗುವುದಿಲ್ಲ.

೨೦. ವಿಶ್ವಾಮಿತ್ರನು ಹೇಳುತ್ತಾನೆ:—ಚತುರ್ಮುಖ! ನೀನು ಶ್ರೇಷ್ಠವಾದ ಆ ಬ್ರಹ್ಮಲೋಕಕ್ಕೆ ಹೋಗು. ನಾನು ಪ್ರಾಣವನ್ನು ಬಿಡುವೆನು. ಅಥವಾ ಬ್ರಾಹ್ಮಣ್ಯವನ್ನು ಪಡೆಯುವೆನು.

೨೧—೨೨. ಬಳಿಕ ದೇವರ್ಷಿಗಳ ನಡುವೆ ಇರುವ ಋಚೀಕನು ಇಂತೆಂದನು. "ಸ್ವಾಮಿ! ನಾನು ಇವನ ಜನ್ಮಕ್ಕಾಗಿ ಬ್ರಾಹ್ಮ್ಯಮಂತ್ರಗಳಿಂದ ಚರುವನ್ನು ಸಂಸ್ಕರಿಸಿರುವೆನು. ಆದುದರಿಂದಲೇ ಕ್ಷತ್ರಿಯನಿಂದ ಜನಿಸಿದ ಇವನು ಬ್ರಾಹ್ಮಣನಾಗಿರುವನು.

೨೩. ಆದುದರಿಂದ ನೀನು ಇವನನ್ನು ಬ್ರಹ್ಮರ್ಷಿಯೆಂದು ಹೇಳು. ರಾಜ್ಯವನ್ನಾಳುತ್ತಿರುವ ಇವನು ಬ್ರಾಹ್ಮಣಯೋಗ್ಯವಾದ ಸತ್ಕಾರ್ಯಗಳನ್ನೆಸಗಿರುವನು.

೨೪. ಆ ಬ್ರಾಹ್ಮ್ಯಮಂತ್ರಪ್ರಭಾವದಿಂದ ಇವನನ್ನು ಬ್ರಹ್ಮರ್ಷಿಯೆಂದು ಕರೆ. ಆದುದರಿಂದ ನಾವೆಲ್ಲರೂ ಇವನನ್ನು ದ್ವಿಜೋತ್ತಮನೆಂದು ಹೇಳುತ್ತೇವೆ."

೨೫. ಅನಂತರ ಬ್ರಹ್ಮನು ಬಹಳ ಹೊತ್ತು ಆಲೋಚಿಸಿ ಬ್ರಾಹ್ಮ್ಯಮಂತ್ರಪ್ರಭಾವದಿಂದ ಹುಟ್ಟಿದ ವಿಶ್ವಾಮಿತ್ರನನ್ನು ಕುರಿತು, "ನಿನ್ನನ್ನು ಬ್ರಾಹ್ಮಣನನ್ನಾಗಿ ಮಾಡಿದ್ದೇನೆ.

ತ್ಯಜೇದಂ ದುಷ್ಕರಂ ಘೋರಂ ತಪೋ ಮದ್ವಚನಾದ್ದ್ರುತಂ ।
ಸ ಯದಾ ಬ್ರಹ್ಮಣಾ ಪ್ರೋಕ್ತೋ ಬ್ರಹ್ಮರ್ಷಿಸ್ತ್ವಮಸಂಶಯಂ ॥ ೨೬ ॥
ಋಚೀಕಾದ್ಯೈಸ್ತತಃ ಸರ್ವೈಃ ಪ್ರೋಕ್ತೋ ದೇವರ್ಷಿಭಿಸ್ತಥಾ ॥ ೨೭ ॥
ಅಥ ತೇಷಾಂ ಮಧ್ಯಗತೋ ವಸಿಷ್ಠೋ ಮುನಿಸತ್ತಮಃ ।
ಸೋಽಬ್ರವೀತ್ಕೋಪಸಂಯುಕ್ತೋ ನಾಽಹಂ ವಕ್ಷ್ಯಾಮಿ ಕರ್ಹಿಚಿತ್ ॥
ಬ್ರಾಹ್ಮಣಂ ಕ್ಷತ್ರಿಯಾಜ್ಜಾತಂ ಜಾನನ್ನಪಿ ಪಿತಾಮಹ ।
ಋಚೀಕಸ್ಯ ಚ ದಾಕ್ಷಿಣ್ಯಾತ್ತಥಾ ತ್ವಂ ವದಸಿ ಪ್ರಭೋ ॥ ೨೯ ॥
ಪ್ರೋಚ್ಯಮಾನೋಽಪಿ ಬಹುಧಾ ವಸಿಷ್ಠೋ ಮುನಿಸತ್ತಮಃ ।
ಪಿತಾಮಹೇನ ಮುನಿಭಿರ್ನಾರದಾದ್ಯೈರನೇಕಧಾ ।
ಜಗಾಮಾಽಥ ಪರಿತ್ಯಜ್ಯ ತಾನ್ ಸರ್ವಾನ್ ದ್ವಿಜಸತ್ತಮಾನ್ ॥ ೩೦ ॥
ಸ ಚಾಽಽಗತ್ಯ ಮುನಿಶ್ರೇಷ್ಠೋ ದೇಶಂ ಚಾನರ್ತಸಂಜ್ಞಿತಂ ।
ಹಾಟಕೇಶ್ವರಜೇ ಕ್ಷೇತ್ರೇ ಶಂಖತೀರ್ಥಸಮೀಪತಃ ॥ ೩೧ ॥
ಯತ್ರ ಬ್ರಹ್ಮಶಿಲಾ ಪುಣ್ಯಾ ಶ್ವೇತದ್ವೀಪಸಮನ್ವಿತಾ ।
ಸರಸ್ವತೀ ಸ್ಥಿತಾ ಯತ್ರ ನದೀ ಪಾಪಹರಾ ಶುಭಾ ॥ ೩೨ ॥
ತತ್ರಾಶ್ರಮಪದಂ ಕೃತ್ವಾ ಚಕಾರ ವಿಪುಲಂ ತಪಃ ।
ವಿಶ್ವಾಮಿತ್ರೋಽಪಿ ಸಾಮರ್ಷಸ್ತದ್ವಧಾರ್ಥಂ ಸಮಾಗತಃ ॥ ೩೩ ॥

---

೨೬–೨೭. ನನ್ನ ಮಾತಿನಿಂದ ಈ ಘೋರ ತಪಸ್ಸನ್ನು ಬಿಡು" ಎಂದನು. ಬ್ರಹ್ಮನು ಹೀಗೆ ನೀನು ಬ್ರಹ್ಮರ್ಷಿಯಾಗಿರುವೆಯೆಂದು ಹೇಳಲು ಋಚೀಕನೇ ಮೊದಲಾದ ದೇವರ್ಷಿಗಳೂ ಹಾಗೆಯೇ ಹೇಳಿದರು.

೨೮. ತರುವಾಯ ಅವರ ನಡುವೆ ಇರುವ ವಸಿಷ್ಠನು ಕೋಪದಿಂದ ಇಂತೆಂದನು. "ನಾನು ಎಂದಿಗೂ ಹಾಗೆ ಹೇಳುವುದಿಲ್ಲ.

೨೯. ಪಿತಾಮಹ! ವಿಶ್ವಾಮಿತ್ರನು ಕ್ಷತ್ರಿಯನಿಂದ ಜನಿಸಿರುವನೆಂದರಿತಿದ್ದರೂ ನೀನು ಋಚೀಕನ ದಾಕ್ಷಿಣ್ಯದಿಂದ ಹಾಗೆ ಹೇಳುತ್ತಿರುವೆ."

೩೦. ಬ್ರಹ್ಮನೂ, ನಾರದಾದಿ ಮುನಿಗಳೂ ಬಗೆಬಗೆಯಾಗಿ ಹೇಳಿದರೂ ವಸಿಷ್ಠನು ಆ ಬ್ರಾಹ್ಮಣರನ್ನೆಲ್ಲ ತೊರೆದು ಹೊರಟುಹೋದನು.

೩೧. ಆ ವಸಿಷ್ಠನು ಹಾಟಕೇಶ್ವರಕ್ಷೇತ್ರದಲ್ಲಿ ಶಂಖತೀರ್ಥದ ಸಮೀಪದಲ್ಲಿರುವ ಆನರ್ತದೇಶಕ್ಕೆ ಬಂದನು.

೩೨. ಅಲ್ಲಿ ಪುಣ್ಯಕರವಾದ ಶ್ವೇತದ್ವೀಪದಿಂದ ಕೂಡಿದ ಬ್ರಹ್ಮಶಿಲೆಯೂ, ಪಾಪನಾಶಿನಿಯಾದ ಸರಸ್ವತೀ ನದಿಯೂ ಇರುವುದು.

೩೩. ಅಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ಅತಿಶಯ ತಪಸ್ಸನ್ನು ಮಾಡಿದನು. ವಿಶ್ವಾಮಿತ್ರನೂ ಕೋಪದಿಂದ ಅವನನ್ನು ವಧಿಸಲು ಅಲ್ಲಿಗೆ ಬಂದನು.

ತಸ್ಯಾಶ್ರಮಸ್ಯ ದೂರೇ ಸ ಯಾಮ್ಯಾಂ ದಿಶಿ ಸಮಾಶ್ರಿತಃ ।
ಕೃತ್ವಾಶ್ರಮಪದಂ ತತ್ರ ತಸ್ಯ ಛಿದ್ರಾಣಿ ಚಿಂತಯನ್ ॥ ೩೪ ॥
ಸಂಸ್ಥಿತಃ ಸುಚಿರಂ ಕಾಲಂ ನ ಚ ಪಶ್ಯತಿ ಕಿಂಚನ ।
ಅಥಾಭಿಚಾರಿಕಂ ತೇನ ಪ್ರಾರಬ್ಧಂ ತಸ್ಯ ಚೋಪರಿ ॥ ೩೫ ॥
ಯದುಕ್ತಂ ಸಾಮವಿಧಿನಾ ಸಾಮವೇದೇ ವಧಾತ್ಮಕಂ ।
ತಸ್ಯ ತೈರ್ದಾರುಣೈರ್ಮಂತ್ರೈರ್ಜುಹ್ವತೋ ಜಾತವೇದಸಂ ॥ ೩೬ ॥
ನಿಷ್ಕ್ರಾಂತಾ ದಾರುಣಾ ಶಕ್ತಿರ್ಮುಕ್ತಕೇಶೀ ಭಯಾನಕಾ ।
ವಾನರಸ್ಕಂಧಮಾರೂಢಾ ಕುರ್ವಾಣಾ ಕಿಲ್ಕಿಲಾಧ್ವನಿಂ ॥ ೩೭ ॥
ನಾನಾಯುಧಸಮೋಪೇತಾ ಯಮಜಿಹ್ವಾ ಯಥಾ ಪರಾ ।
ಸಾಽಬ್ರವೀದ್ವದ ವಿಪ್ರೇಂದ್ರ ಕಿಂ ತೇ ಕೃತ್ಯಂ ಕರೋಮ್ಯಹಂ ॥ ೩೮ ॥
ತ್ರೈಲೋಕ್ಯಮಪಿ ಕೃತ್ಸ್ನಂ ಚ ಸಂಹರಾಮಿ ತವಾಜ್ಞಯಾ ॥ ೩೯ ॥

ವಿಶ್ವಾಮಿತ್ರ ಉವಾಚ :—

ಮಮ ಶತ್ರುರ್ಮಹಾನ್ಯೋಽತ್ರ ವಸಿಷ್ಠಃ ಕುಮುನಿಃ ಸ್ಥಿತಃ ।
ತಂ ತ್ವಂ ಜಹಿ ದ್ರುತಂ ಗತ್ವಾ ತದರ್ಥಂ ಚ ಮಯಾ ಕೃತಾ ॥ ೪೦ ॥

---

೩೪–೩೫. ಅವನು ವಸಿಷ್ಠಾಶ್ರಮಕ್ಕಿಂತ ದೂರದಲ್ಲಿ ದಕ್ಷಿಣದಿಕ್ಕಿನಲ್ಲಿ ಆಶ್ರಮವನ್ನು ರಚಿಸಿಕೊಂಡು ಆ ವಸಿಷ್ಠನ ಛಿದ್ರಗಳನ್ನು ಹುಡುಕುತ್ತ ಬಹುಕಾಲ ವಿದ್ದರೂ ಯಾವುದೊಂದು ಛಿದ್ರವನ್ನೂ ನೋಡಲಿಲ್ಲ. ತರುವಾಯ ಅವನು ಆ ಮುನಿಯ ಮೇಲೆ ಮಾಟವನ್ನು ಮಾಡಲುಪಕ್ರಮಿಸಿದನು.

೩೬–೩೯. ವಿಶ್ವಾಮಿತ್ರನು ಸಾಮವೇದದ ಭಯಂಕರ ಸಂಹಾರ ಮಂತ್ರಗಳಿಂದ ಅಗ್ನಿಯಲ್ಲಿ ಹೋಮಿಸುತ್ತಿರಲು ಆ ಅಗ್ನಿಕುಂಡದಿಂದ ಭಯಂಕರಳೂ, ಕೂದಲುಗಳನ್ನು ಬಿರಿಹೊಯ್ದುಕೊಂಡಿರುವವಳೂ, ಕಪಿಯ ಹೆಗಲಿನಮೇಲೆ ಕುಳಿತಿರುವವಳೂ, ಕಿಲಕಿಲ ಧ್ವನಿಗೈಯುತ್ತಿರುವವಳೂ, ಅನೇಕ ಆಯುಧಗಳನ್ನು ಹಿಡಿದಿರುವವಳೂ, ಮತ್ತೊಂದು ಯಮನ ನಾಲಿಗೆಯಂತಿರುವವಳೂ ಆದ ಓರ್ವ ಶಕ್ತಿದೇವತೆಯು ಹೊರಟು ಬಂದು, "ಬ್ರಾಹ್ಮಣ! ನಿನ್ನ ಯಾವ ಕೆಲಸವನ್ನು ಮಾಡಲಿ. ನಿನ್ನ ಅಪ್ಪಣೆಯಾದರೆ ಮೂರು ಲೋಕಗಳನ್ನು ಸಂಪೂರ್ಣವಾಗಿ ಸಂಹರಿಸುತ್ತೇನೆ" ಎಂದು ಕೇಳಿದಳು.

೪೦. ವಿಶ್ವಾಮಿತ್ರನು ಹೇಳುತ್ತಾನೆ :—ಇಲ್ಲಿ ನನ್ನ ಶತ್ರುವಾದ ವಸಿಷ್ಠನೆಂಬ ದೊಡ್ಡ ದುಷ್ಟ ಮುನಿಯಿರುವನು. ಶೀಘ್ರವಾಗಿ ಅಲ್ಲಿಗೆ ಹೋಗಿ ಅವನನ್ನು ವಧಿಸು. ಅದಕ್ಕಾಗಿಯೇ ನಾನು ನಿನ್ನನ್ನು ನಿರ್ಮಿಸಿದ್ದೇನೆ.

ಏವಮುಕ್ತ್ವಾ ತು ಸಾ ತೇನ ವಿಶ್ವಾಮಿತ್ರೇಣ ಧೀಮತಾ ।
ವಸಿಷ್ಠಾಶ್ರಮಮುದ್ದಿಶ್ಯ ಪ್ರಸ್ಥಿತಾ ಚೋತ್ತರಾಮುಖೀ ॥ ೪೧ ॥
ಏತಸ್ಮಿನ್ನೇವ ಕಾಲೇತು ವಸಿಷ್ಠಸ್ಯಾಶ್ರಮೇ ದ್ವಿಜಾಃ ।
ದುರ್ನಿಮಿತ್ತಾನಿ ಜಾತಾನಿ ಪ್ರಭೂತಾನಿ ಮಹಾಂತಿ ಚ ॥ ೪೨ ॥
ಪಪಾತ ಮಹತೀ ಚೋಲ್ಕಾ ನಿಹತ್ಯ ರವಿಮಂಡಲಂ ।
ತಥಾ ರುಧಿರವೃಷ್ಟಿಶ್ಚ ಅಸ್ಥಿಮಿಶ್ರಾ ವ್ಯಜಾಯತ ॥ ೪೩ ॥
ದೀಪ್ತಾಂ ದಿಶಂ ಸಮಾಸಾದ್ಯ ರುರೋದ ಚ ತಥಾ ಶಿವಾ ।
ತಾಂ ದೃಷ್ಟ್ವಾ ಸುಮಹೋತ್ಪಾತಾನ್ವಸಿಷ್ಠೋ ಮುನಿಪುಂಗವಃ ॥ ೪೪ ॥
ಯಾವದಾಲೋಕತೇ ರೂಪಂ ಜ್ವಾಲಾಮಾಲಾ ಸಮಾಕುಲಂ ।
ತತಃ ಸಮ್ಯಕ್ಪರಿಜ್ಞಾಯ ಸರ್ವಂ ದಿವ್ಯೇನ ಚಕ್ಷುಷಾ ॥ ೪೫ ॥
ವಿಶ್ವಾಮಿತ್ರಪ್ರಯುಕ್ತೇಯಂ ಶಕ್ತಿರ್ಮಮ ವಧಾಯ ಚ ।
ಕೃತ್ಯಾ ರೂಪಾ ಸುಮಂತ್ರೈಶ್ಚ ಸಾಮವೇದಸಮುದ್ಭವೈಃ ॥ ೪೬ ॥
ತಿಷ್ಠತಿಷ್ಠೇತಿ ತೇನೋಕ್ತಾ ತತಃ ಸಾ ನಿಶ್ಚಲಾಽಭವತ್ ।
ನಿಜಮಂತ್ರೈಶ್ಚ ಸಾ ತೇನ ಸ್ತಂಭಿತಾಥರ್ವಣೋದ್ಭವೈಃ ॥ ೪೭ ॥
ತತಃ ಸ್ತ್ರೀ ರೂಪಮಾದಾಯ ಪ್ರೋವಾಚ ಮುನಿಪುಂಗವಂ ।
ಸಾಮವೇದಸ್ತು ವೇದಾನಾಂ ಪ್ರಾಧಾನ್ಯೇನ ವ್ಯವಸ್ಥಿತಃ ॥ ೪೮ ॥

---

೪೧. ವಿಶ್ವಾಮಿತ್ರನು ಹೀಗೆ ಹೇಳಲು ಆ ಶಕ್ತಿದೇವತೆಯು ವಸಿಷ್ಠಾಶ್ರಮವನ್ನುದ್ದೇಶಿಸಿ ಉತ್ತರದಿಕ್ಕಿಗೆ ಹೋದಳು.

೪೨. ಈ ಸಮಯದಲ್ಲಿಯೇ ವಸಿಷ್ಠನ ಆಶ್ರಮದಲ್ಲಿ ಬಹುವಾಗಿ ದುಶ್ಶಕುನಗಳುಂಟಾದುವು.

೪೩. ಸೂರ್ಯಮಂಡಲವನ್ನು ತಡೆದು ದೊಡ್ಡ ಬೆಂಕಿಯ ಕೊಳ್ಳಿಯು ಬಿದ್ದಿತು. ಹಾಗೆಯೇ ಮೂಳೆಯಿಂದ ಕೂಡಿದ ರಕ್ತದ ಮಳೆಯು ಸುರಿಯಿತು.

೪೪. ನರಿಯು ಪ್ರಕಾಶಗೊಂಡ ದಿಕ್ಕನ್ನು ನೋಡಿ ಅತ್ತಿತು. ವಸಿಷ್ಠ ಮುನಿವರ್ಯನು ಆ ಉತ್ಪಾತಗಳನ್ನು ನೋಡಿದನು.

೪೫-೪೭. ಅವನು ಜ್ವಾಲೆಗಳಿಂದ ಕೂಡಿದ ರೂಪವನ್ನು ನೋಡಿ ದಿವ್ಯದೃಷ್ಟಿಯಿಂದ ವಿಶ್ವಾಮಿತ್ರನು ತನ್ನನ್ನು ವಧಿಸುವುದಕ್ಕಾಗಿ ಸಾಮವೇದದ ಮಂತ್ರಗಳಿಂದ ನಿರ್ಮಿಸಿದ ಮಾಟದ ಶಕ್ತಿಯೆಂದರಿತು ನಿಲ್ಲು ನಿಲ್ಲು ಎಂದನು. ಆ ಶಕ್ತಿಯು ಆ ಮುನಿಯು ಪ್ರಯೋಗಿಸಿದ ಆಥರ್ವಣ ಮಂತ್ರಗಳಿಂದ ನಿಶ್ಚಲವಾಯಿತು.

೪೮. ಅನಂತರ ಆ ಶಕ್ತಿಯು ಹೆಂಗಸಿನ ರೂಪವನ್ನು ತಾಳಿ ವಸಿಷ್ಠನನ್ನು ಕುರಿತು ಇಂತೆಂದಿತು. "ಸಾಮವೇದವು ವೇದಗಳಲ್ಲಿ ಮುಖ್ಯವಾಗಿರುವುದು.

ವಿಧಿನಾ ತೇನ ಸಂಸೃಷ್ಟಾ ವಿಶ್ವಾಮಿತ್ರೇಣ ಧೀಮತಾ ।
ಮಾ ಕುರು ತ್ವಪ್ರಮಾಣಂ ತು ಪ್ರಹಾರಂ ಸಹ ಮೇ ಮುನೇ ।
ರಕ್ಷಯಿಷ್ಯಾಮಿ ತೇ ಪ್ರಾಣಾನ್ ಸ್ವಲ್ಪಸ್ಪರ್ಶೇನ ತೇ ಮುನೇ ॥ ೪೯ ॥

ವಸಿಷ್ಠ ಉವಾಚ :—

ಯದ್ಯೇವಂ ಕುರು ಮೇ ಸ್ಪರ್ಶಂ ನ ಮರ್ಮಸ್ಪರ್ಶನಂ ಶುಭೇ ।
ಮಯಾ ಚಾಥರ್ವಣಾ ಮಂತ್ರಾಃ ಸಂಹೃತಾಃ ಕೃಪಯಾ ತವ ॥ ೫೦ ॥
ತತಃ ಸಾ ದಾರುಣಾ ಶಕ್ತಿರ್ವಿಶ್ವಾಮಿತ್ರ ಪ್ರಯೋಜಿತಾ ।
ತಸ್ಯಾಂಗದೇಶಂ ಸ್ಪೃಷ್ಟ್ವಾಽಥ ನಿಪಪಾತ ಧರಾತಲೇ ॥ ೫೧ ॥
ತತಸ್ತುಷ್ಟೋ ವಸಿಷ್ಠಸ್ತು ತಾಮಾಹ ಮಧುರಂ ವಚಃ ।
ಅದ್ಯ ಪ್ರಭೃತಿ ತೇ ಪೂಜಾಂ ಕರಿಷ್ಯಂತಿ ಸಮಾಹಿತಾಃ ।
ಜನಾಃ ಸರ್ವೇ ಮಹಾಭಾಗೇ ಭಕ್ತ್ಯಾ ಪರಮಯಾ ಯುತಾಃ ॥ ೫೨ ॥
ಚೈತ್ರಮಾಸೇ ಸಿತೇ ಪಕ್ಷೇ ಅಷ್ಟಮೀದಿವಸೇ ಸ್ಥಿತೇ ।
ಯೇ ತೇ ಪೂಜಾಂ ಕರಿಷ್ಯಂತಿ ಶ್ರದ್ಧಯಾ ಪರಯಾ ಯುತಾಃ ॥ ೫೩ ॥
ತೇ ಸರ್ವೇ ವತ್ಸರಂ ಯಾವದ್ಭವಿಷ್ಯಂತಿ ನಿರಾಮಯಾಃ ।
ತಸ್ಮಾದತ್ರೈವ ಸ್ಥಾತವ್ಯಂ ಸದೈವ ಮಮ ವಾಕ್ಯತಃ ॥ ೫೪ ॥

---

೪೯. ವಿಶ್ವಾಮಿತ್ರನು ಆ ಸಾಮವೇದದ ವಿಧಿಯಿಂದ ನನ್ನನ್ನು ಸೃಷ್ಟಿಸಿದ್ದಾನೆ. ನೀನು ಆ ವೇದವನ್ನು ಅಪ್ರಮಾಣಮಾಡಬೇಡ. ನನ್ನ ಪ್ರಹಾರವನ್ನು ಸಹಿಸು. ಮುನಿಯೇ! ನಾನು ನಿನ್ನನ್ನು ಸ್ವಲ್ಪವಾಗಿ ಮುಟ್ಟಿ ಪ್ರಾಣವನ್ನು ರಕ್ಷಿಸುವೆನು."

೫೦. ವಸಿಷ್ಠನು ಹೇಳುತ್ತಾನೆ:—ಹೀಗಾದರೆ ನೀನು ನನ್ನನ್ನು ಮುಟ್ಟು. ಮರ್ಮಸ್ಥಳವನ್ನು ಸ್ಪರ್ಶಮಾಡಬೇಡ. ನಾನು ನಿನ್ನಮೇಲೆ ಪ್ರಯೋಗಿಸಿರುವ ಆಥರ್ವಣ ಮಂತ್ರವನ್ನು ದಯೆಯಿಂದ ಹಿಂತೆಗೆದಿರುವೆನು.

೫೧. ಅನಂತರ ವಿಶ್ವಾಮಿತ್ರನು ಪ್ರಯೋಗಿಸಿದ ಆ ದಾರುಣಶಕ್ತಿಯು ವಸಿಷ್ಠನ ಶರೀರವನ್ನು ಸ್ಪರ್ಶಮಾಡಿ ಭೂಮಿಯಲ್ಲಿ ಬಿದ್ದಿತು.

೫೨. ಬಳಿಕ ಸಂತೋಷಗೊಂಡ ವಸಿಷ್ಠನು ಆ ಶಕ್ತಿಯನ್ನು ಕುರಿತು ಹೀಗೆ ಸವಿಯಾಗಿ ನುಡಿದನು. "ಮಹಾತ್ಮಳೆ! ಇಂದು ಮೊದಲ್ಗೊಂಡು ಸಮಸ್ತ ಜನರೂ ಅತಿಶಯ ಭಕ್ತಿಯಿಂದ ನಿನ್ನನ್ನು ಪೂಜಿಸುವರು.

೫೩–೫೪. ಚೈತ್ರ ಶುಕ್ಲ ಅಷ್ಟಮೀ ದಿನ ಅತಿ ಶ್ರದ್ಧೆಯಿಂದ ನಿನ್ನನ್ನು ಪೂಜಿಸುವವರು ಒಂದು ವರ್ಷವೆಲ್ಲ ನಿರೋಗಿಗಳಾಗುವರು. ಆದುದರಿಂದ ನೀನು ನನ್ನ ಮಾತಿನಂತೆ ಯಾವಾಗಲೂ ಇಲ್ಲಿಯೇ ನೆಲೆಸು."

**ಸೂತ ಉವಾಚ :—**

**ಏವಮುಕ್ತ್ವಾ ಚ ಸಾ ತೇನ ವಸಿಷ್ಠೇನ ಮಹಾತ್ಮನಾ ।**
**ಸ್ಥಿತಾ ತತ್ರೈವ ಸಾ ದೇವೀ ತಸ್ಯ ವಾಕ್ಯೇನ ತತ್ಕ್ಷಣಾತ್ ॥ ೫೫ ॥**
**ಪ್ರಾಪ್ನೋತಿ ಪರಮಾಂ ಪೂಜಾಂ ವಿಶೇಷಾನ್ನಾಗರೈಃ ಕೃತಾಂ ।**
**ಧಾರಾನಾಮೇತಿ ವಿಖ್ಯಾತಾ ಭಕ್ತಲೋಕಸುಖಪ್ರದಾ ॥ ೫೬ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
“ ಧಾರೋತ್ಪತ್ತಿ ಮಾಹಾತ್ಮ್ಯವರ್ಣನಂ ”
ನಾಮಾಷ್ಟಷಷ್ಟ್ಯುತ್ತರಶತತಮೋಽಧ್ಯಾಯಃ

---

೫೫. ಸೂತನು ಹೇಳುತ್ತಾನೆ:—ಮಹಾತ್ಮನಾದ ವಸಿಷ್ಠನು ಹೀಗೆನ್ನಲು ಅವಳು ಆ ಮುನಿಯ ಮಾತಿನಂತೆ ಅಲ್ಲಿಯೇ ಇದ್ದಳು.

೫೬. ಅವಳು ಧಾರೆಯೆಂದು ವಿಖ್ಯಾತಳಾಗಿ ಭಕ್ತರಿಗೆ ಸುಖವನ್ನುಂಟು ಮಾಡುತ್ತ ನಾಗರ ಜನರಿಂದ ವಿಶೇಷವಾಗಿ ಪೂಜೆಗೊಳ್ಳುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ,
ಮಾಹಾತ್ಮ್ಯದಲ್ಲಿ “ ಧಾರೋತ್ಪತ್ತಿಮಾಹಾತ್ಮ್ಯವರ್ಣನ ” ವೆಂಬ
ನೂರರವತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋನಸಪ್ತತ್ಯುತ್ತರಶತತಮೋಽಧ್ಯಾಯಃ

## ಧಾರಾದೇವೀಮಾಹಾತ್ಮ್ಯವರ್ಣನಂ

ಋಷಯ ಊಚುಃ :—

ಕಸ್ಮಾತ್ಸಾ ತುಷ್ಟಿದಾ ಪ್ರೋಕ್ತಾ ನಾಗರಾಣಾಂ ವಿಶೇಷತಃ ।
ಧಾರಾನಾಮೇತಿ ವಿಖ್ಯಾತಾ ಕಸ್ಮಾತ್ಸಾ ಧರಣೀತಲೇ ॥ ೧ ॥

ಸೂತ ಉವಾಚ :—

ಚಮತ್ಕಾರಪುರೇ ಪೂರ್ವಂ ಧಾರಾನಾಮೇತಿ ವಿಶ್ರುತಾ ।
ಆಸೀತ್ತಪಸ್ವಿನೀ ಸಾಧ್ವೀ ನಾಗರೀ ಬ್ರಾಹ್ಮಣೋತ್ತಮಾ ।
ತಸ್ಯಾಃ ಸಖ್ಯಮರುಂಧತ್ಯಾ ಆಸೀತ್ಪೂರ್ವಂ ಸುಮೇಧಯಾ ॥ ೨ ॥
ಅರುಂಧತೀ ಯದಾ ಪ್ರಾಪ್ತಾ ಚಮತ್ಕಾರಪುರೇ ಶುಭೇ ।
ಸ್ನಾನಾರ್ಥಂ ಶಂಖತೀರ್ಥಂ ತು ವಸಿಷ್ಠೇನ ಸಮಾಗತಾ ॥ ೩ ॥
ತಯಾ ದೃಷ್ಟಾಽಥ ಸಾ ತತ್ರ ಅಂಗುಷ್ಠಾಗ್ರೇಣ ಸಂಸ್ಥಿತಾ ।
ವಾಯುಭಕ್ಷಾ ನಿರಾಹಾರಾ ದಿವ್ಯೇನ ವಪುಷಾನ್ವಿತಾ ॥ ೪ ॥
ತಯಾ ಪೃಷ್ಟಾ ಚ ಸಾ ಸಾಧ್ವೀ ಕಾ ತ್ವಂ ಕಸ್ಯ ಸುತಾ ಶುಭೇ ।
ಕಿಮರ್ಥಂ ತು ಸ್ಥಿತಾ ಚೋಗ್ರೇ ತಪಸಿ ಬ್ರೂಹಿ ಮೇ ಶುಭೇ ॥ ೫ ॥

---

## ಕನ್ನಡದ ಅನುವಾದ

### ಧಾರಾದೇವೀಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ನಾಗರರಿಗೆ ಸಂತೋಷವನ್ನುಂಟುಮಾಡುವ ಅವಳು ಧಾರೆಯೆಂದು ಏಕೆ ವಿಖ್ಯಾತಳಾದಳು ?

೨. ಸೂತನು ಹೇಳುತ್ತಾನೆ :—ಹಿಂದೆ ಚಮತ್ಕಾರಪುರದಲ್ಲಿ ನಾಗರರಲ್ಲಿ ಧಾರೆಯೆಂಬ ಪತಿವ್ರತೆಯೊಬ್ಬಳಿದ್ದಳು. ಅವಳಿಗೆ ಅರುಂಧತಿಯೊಡನೆ ಸ್ನೇಹವಾಯಿತು.

೩–೪. ಚಮತ್ಕಾರಪುರದಲ್ಲಿರುವ ಶಂಖತೀರ್ಥಕ್ಕೆ ಸ್ನಾನಮಾಡುವುದಕ್ಕಾಗಿ ವಸಿಷ್ಠನೊಡನೆ ಬಂದ ಅರುಂಧತಿಯು ಅಂಗುಷ್ಠದ ಕೊನೆಯಿಂದ ನಿಂತಿರುವವಳೂ, ವಾಯುಭಕ್ಷಳೂ, ಆಹಾರವಿಲ್ಲದವಳೂ, ದಿವ್ಯಶರೀರವನ್ನು ಧರಿಸಿದವಳೂ ಆದ ಆ ಧಾರೆಯನ್ನು ಕಂಡಳು.

೫. ಆ ಅರುಂಧತಿಯು ಅವಳನ್ನು ಕುರಿತು, "ನೀನಾರು ? ಯಾರ ಮಗಳು ? ಕಠಿನ ತಪಸ್ಸನ್ನು ಏಕೆ ಮಾಡುತ್ತಿರುವೆ ? ಅದನ್ನು ನನಗೆ ಹೇಳು" ಎಂದಳು.

ಧಾರೋವಾಚ :—

ದೇವಶರ್ಮಾಖ್ಯ ವಿಪ್ರಸ್ಯ ಸುತಾಽಹಂ ನಾಗರಸ್ಯ ಚ ।
ಬಾಲತ್ವೇ ವರ್ತಮಾನಾಯಾ ವೈಧವ್ಯಂ ಮೇ ವ್ಯವಸ್ಥಿತಂ ॥ ೬ ॥
ಶಂಖತೀರ್ಥಸ್ಯ ಮಾಹಾತ್ಮ್ಯಂ ಶ್ರುತ್ವಾ ಶಂಖೇಶ್ವರಸ್ಯ ಚ ।
ತತೋಽಹಂ ಸಂಸ್ಥಿತಾ ಹ್ಯತ್ರ ತಸ್ಯೈವಾರಾಧನೇ ಸ್ಥಿತಾ ॥ ೭ ॥

ಅರುಂಧತ್ಯುವಾಚ :—

ತವೋಪರಿ ಮಹಾನ್ ಸ್ನೇಹೋ ದರ್ಶನಾತ್ತೇ ವ್ಯವಸ್ಥಿತಃ ।
ತಸ್ಮಾದಾಗಚ್ಛ ಗಚ್ಛಾವೋ ಮಮಾಶ್ರಮಪದಂ ಶುಭಂ ॥ ೮ ॥
ಸರಸ್ವತ್ಯಾಸ್ತಟೇ ಶುಭ್ರೇ ಸರ್ವಪಾತಕನಾಶನೇ ।
ಶಾಸ್ತ್ರ ಗೋಷ್ಠೀರತಾ ನಿತ್ಯಂ ತತ್ರ ತಿಷ್ಠ ಮಯಾ ಸಹ ॥ ೯ ॥
ತತಃ ಸಂಪ್ರಸ್ಥಿತಾ ಸಾ ತು ತಯಾ ಸಾರ್ಧಂ ತಪಸ್ವಿನೀ ।
ಅನುಜ್ಞಾತಾ ಸ್ವಪಿತ್ರಾತು ಜನನ್ಯಾ ಬಾಂಧವೈ ಸ್ತಥಾ ॥ ೧೦ ॥
ತಸ್ಯಾಃ ಸಖ್ಯಂ ಚಿರಂ ಕಾಲಂ ತಯಾ ಸಹ ಬಭೂವ ಹ ।
ಕಸ್ಯಚಿತ್ತ್ವಥ ಕಾಲಸ್ಯ ಸಾ ಶಕ್ತಿಸ್ತತ್ರ ಚಾಽಽಗತಾ ॥ ೧೧ ॥
ವಿಶ್ವಾಮಿತ್ರೇಣ ಸಂಸೃಷ್ಟಾ ವಸಿಷ್ಠಸ್ಯ ವಧಾಯ ಚ ।
ಸಾ ಸ್ತಂಭಿತಾ ವಸಿಷ್ಠೇನ ಕೃತಾ ದೇವೀ ಸ್ವರೂಪಿಣೀ ।
ಸಂಪೂಜ್ಯಾ ದೇವಮರ್ತ್ಯಾನಾಂ ಸರ್ವರಕ್ಷಾಪ್ರದಾ ಶುಭಾ ॥ ೧೨ ॥

---

೬. ಧಾರೆಯು ಹೇಳುತ್ತಾಳೆ:—ನಾನು ನಾಗರರ ದೇವಶರ್ಮನೆಂಬ ವಿಪ್ರನ ಸುತೆಯು. ನಾನು ಬಾಲಕಳಾಗಿರುವಾಗಲೇ ನನಗೆ ವೈಧವ್ಯವು ಸಂಭವಿಸಿತು.

೭. ಈ ಶಂಖತೀರ್ಥದ ಮತ್ತು ಶಂಖೇಶ್ವರನ ಮಾಹಾತ್ಮ್ಯವನ್ನು ಕೇಳಿ ಅವನನ್ನಾರಾಧಿಸುತ್ತ ಇಲ್ಲಿಯೇ ನೆಲೆಸಿದೆನು.

೮–೯. ಅರುಂಧತಿಯು ಹೇಳುತ್ತಾಳೆ:—ದರ್ಶನ ಮಾತ್ರದಿಂದಲೇ ನನಗೆ ನಿನ್ನಮೇಲೆ ಬಹಳ ಸ್ನೇಹವುಂಟಾಗಿದೆ. ಆದುದರಿಂದ ಬಾ. ಸರಸ್ವತೀ ನದಿಯ ದಡದಲ್ಲಿ ಸಕಲ ಪಾಪಗಳನ್ನೂ ನಾಶಗೊಳಿಸುವ ನಮ್ಮ ಆಶ್ರಮಕ್ಕೆ ಹೋಗೋಣ. ಅಲ್ಲಿ ನೀನು ನನ್ನೊಡನೆ ಯಾವಾಗಲೂ ಶಾಸ್ತ್ರಸಭೆಯಲ್ಲಿ ಆಸಕ್ತಳಾಗಿರು.

೧೦. ತರುವಾಯ ಆ ಧಾರೆಯು ತಂದೆ, ತಾಯಿ, ಬಾಂಧವರ ಆಜ್ಞೆಯನ್ನು ಪಡೆದು ಅರುಂಧತಿಯೊಡನೆ ಹೊರಟಳು.

೧೧–೧೨. ಅವಳಿಗೆ ಅರುಂಧತಿಯೊಡನೆ ಬಹುಕಾಲದವರೆಗೆ ಸ್ನೇಹವಾಯಿತು. ಕೆಲವು ಕಾಲದ ಮೇಲೆ ವಸಿಷ್ಠನ ವಧೆಗಾಗಿ ವಿಶ್ವಾಮಿತ್ರನು ಸೃಷ್ಟಿ ಮಾಡಿದ ಆ ಶಕ್ತಿಯು ಅಲ್ಲಿಗೆ ಬಂದಳು. ದೇವಸ್ವರೂಪವುಳ್ಳವಳೂ, ದೇವ ಮಾನವರಿಗೆ ಪೂಜ್ಯಳೂ, ಸಮಸ್ತವನ್ನು ರಕ್ಷಿಸುವವಳೂ ಆದ ಅವಳನ್ನು ವಸಿಷ್ಠನು ಸ್ತಂಭಿಸಿದನು.

ತತಸ್ತು ಧಾರಯಾ ತಸ್ಯಾಃ ಕೈಲಾಶಶಿಖರೋಪಮಃ ।
ಪ್ರಾಸಾದೋ ನಿರ್ಮಿತೋ ದಿವ್ಯೋ ನಾನಾರತ್ನವಿಚಿತ್ರಿತಃ ॥ ೧೩ ॥
ಚಕಾರಾಽಥ ತತಃ ಸ್ತೋತ್ರಂ ತಸ್ಯಾಃ ಸಾ ಚ ತಪಸ್ವಿನೀ ॥ ೧೪ ॥
ನಮಸ್ತೇ ಪರಮೇ ಬ್ರಾಹ್ಮಿ ಧಾರಯೋಗೇ ನಮೋನಮಃ ।
ಅರ್ಧಮಾತ್ರೇ ಪರೇ ಶೂನ್ಯೇ ತಸ್ಯಾರ್ಧಾರ್ಧೇ ನಮೋಸ್ತುತೇ ॥ ೧೫ ॥
ನಮಸ್ತೇ ಜಗದಾಧಾರೇ ನಮಸ್ತೇ ಭೂತಧಾರಿಣಿ ।
ನಮಸ್ತೇ ಪದ್ಮಪತ್ರಾಕ್ಷಿ ನಮಸ್ತೇ ಕಾಂಚನದ್ಯುತೇ ॥ ೧೬ ॥
ನಮಸ್ತೇ ಸಿಂಹಯಾನಾದ್ಯೇ ನಮಸ್ತೇಽಸ್ತು ಮಹಾಭುಜೇ ।
ನಮಸ್ತೇ ದೇವತಾಭೀಷ್ಟೇ ನಮಸ್ತೇ ದೈತ್ಯಸೂದಿನಿ ॥ ೧೭ ॥
ನಮಸ್ತೇ ಮಹಿಷಾಕ್ರಾಂತಶರೀರಚ್ಛಿನ್ನಮಸ್ತಕೇ ।
ನಮಸ್ತೇ ವಿಂಧ್ಯನಿರತೇ ಸುರಾಮಾಂಸಬಲಿಪ್ರಿಯೇ ॥ ೧೮ ॥
ತ್ವಂ ಲಕ್ಷ್ಮೀ ಸ್ತ್ವಂ ಶಚೀ ಗೌರೀ ತ್ವಂ ಸಿದ್ಧಿಸ್ತ್ವಂ ವಿಭಾವರೀ ।
ತ್ವಂ ಸ್ವಾಹಾ ತ್ವಂ ಸ್ವಧಾ ತುಷ್ಟಿಸ್ತ್ವಂ ಪುಷ್ಟಿಸ್ತ್ವಂ ಸುರೇಶ್ವರೀ ॥ ೧೯ ॥

---

೧೩. ಅನಂತರ ಧಾರೆಯು ಅವಳಿಗೆ ಕೈಲಾಸ ಶಿಖರದಂತಿರುವುದೂ, ಅನೇಕ ರತ್ನಗಳಿಂದ ಆಶ್ಚರ್ಯಕರವೂ ಆದ ಪ್ರಾಸಾದವನ್ನು ನಿರ್ಮಿಸಿದಳು.

೧೪. ಮತ್ತು ಅವಳನ್ನು ಹೀಗೆ ಸ್ತುತಿಸಿದಳು.

೧೫. "ಉತ್ತಮಳೂ, ಬ್ರಾಹ್ಮಿಯೂ, ಜಗದುದ್ಧಾರಕವಾದ ಯೋಗವುಳ್ಳವಳೂ, ಅರ್ಧಮಾತ್ರಾರೂಪಳೂ, ಶೂನ್ಯಳೂ, ಅರ್ಧಾರ್ಧಭಾಗಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೧೬. ಪ್ರಪಂಚಕ್ಕೆ ಆಧಾರಳೂ, ಜಂತುಗಳನ್ನು ಪೋಷಿಸುವವಳೂ, ತಾವರೆ ದಳದಂತೆ ನಯನಗಳುಳ್ಳವಳೂ, ಸುವರ್ಣದಂತೆ ಕಾಂತಿಯುಳ್ಳವಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೧೭. ಸಿಂಹವಾಹನಳೂ, ದೀರ್ಘವಾದ ಭುಜಗಳುಳ್ಳವಳೂ, ದೇವತಾ ಪ್ರಿಯಳೂ, ದೈತ್ಯನಾಶಕಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೧೮. ಮಹಿಷನ ಶರೀರ, ತಲೆಗಳನ್ನು ಕಡಿದವಳೂ, ವಿಂಧ್ಯವಾಸಿನಿಯೂ, ಮದ್ಯಮಾಂಸಗಳ ಬಲಿಯಲ್ಲಿ ಪ್ರೀತಿಯುಳ್ಳವಳೂ ಆದ ದೇವಿಯೆ! ನಿನಗೆ ನಮಸ್ಕಾರವು.

೧೯. ಲಕ್ಷ್ಮಿಯೂ, ಶಚಿಯೂ, ಗೌರಿಯೂ, ಸಿದ್ಧಿಯೂ, ವಿಭಾವರಿಯೂ, ಸ್ವಾಹೆಯೂ, ಸ್ವಧೆಯೂ, ತುಷ್ಟಿಯೂ, ಪುಷ್ಟಿಯೂ, ಸುರೇಶ್ವರಿಯೂ ನೀನೇ ಆಗಿರುವೆ.

ಶಕ್ತಿರೂಪಾಽಸಿ ದೇವಿತ್ವಂ ಸೃಷ್ಟಿಸಂಹಾರಕಾರಿಣೀ ।
ತ್ವಯಿ ದೃಷ್ಟಮಿದಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥ ೨೦ ॥
ಯಥಾ ತಿಲೇ ಸ್ಥಿತಂ ತೈಲಂ ದಧಿಸಂಸ್ಥಂ ಯಥಾ ಘೃತಂ ।
ಹವಿರ್ಭುಜಶ್ಚ ಕಾಷ್ಠಸ್ಥಃ ಸುಗುಪ್ತಂ ಲಭ್ಯತೇ ನ ಹಿ ॥ ೨೧ ॥
ತಥಾ ತ್ವಮಪಿ ದೇವೇಶಿ ಸರ್ವಗಾಽಪಿ ನ ಲಕ್ಷ್ಯಸೇ ॥ ೨೨ ॥

ಸೂತ ಉವಾಚ :—

ಏತೇನ ಸ್ತೋತ್ರಮುಖ್ಯೇನ ಸ್ಮೃತಾ ಸಾ ಪರಮೇಶ್ವರೀ ।
ಬಹೂನಿ ವರ್ಷಪೂಗಾನಿ ಪೂಜಯಂತ್ಯಾ ದಿನೇದಿನೇ ॥ ೨೩ ॥
ಕಸ್ಯಚಿತ್ತ್ವಥ ಕಾಲಸ್ಯ ಚೈತ್ರಶುಕ್ಲಾಷ್ಟಮೀ ಸ್ಥಿತಾ ।
ತಸ್ಮಿನ್ನಹನಿ ದೇವೀ ಸಾ ನದ್ಯಾಂ ಸಂಸ್ನಾಪ್ಯ ಪೂಜಿತಾ ॥ ೨೪ ॥
ಬಲಿಪೂಜಾಂ ತತೋ ದತ್ವಾ ಸ್ತೋತ್ರೇಣಾನೇನ ಚ ಸ್ತುತಾ ।
ತತಃ ಪ್ರತ್ಯಕ್ಷತಾಂ ಗತ್ವಾ ತಾಮುವಾಚ ತಪಸ್ವಿನೀಂ ॥ ೨೫ ॥
ಪುತ್ರಿ ತುಷ್ಟಾಸ್ಮಿ ಬದ್ರಂ ತೇ ಸ್ತೋತ್ರೇಣಾನೇನ ಚಾಽನಘೇ ।
ವರಂ ವರಯ ಭದ್ರಂತೇ ತವ ದಾಸ್ಯಾಮಿ ವಾಂಛಿತಂ ॥ ೨೬ ॥

ಧಾರೋವಾಚ :—

ಯದಿ ತುಷ್ಟಾಸಿ ಮೇ ದೇವಿ ಯದಿ ದೇಯೋ ವರೋ ಮಮ ।
ತನ್ಮೇ ನಾಮ ತವಾಽಪ್ಯಸ್ತು ಪ್ರಸಾದೇಽತ್ರ ಹಿ ಕೇವಲಂ ॥ ೨೭ ॥

---

೨೦. ದೇವಿ ! ನೀನು ಸೃಷ್ಟಿಸಂಹಾರಗಳನ್ನುಮಾಡುವ ಶಕ್ತಿರೂಪಳಾಗಿರುವೆ. ನಿನ್ನಲ್ಲಿ ಈ ಎಲ್ಲ ಚರಾಚರಾತ್ಮಕ ಜಗತ್ತೂ ಕಾಣುತ್ತಿರುವುದು.

೨೧–೨೨. ಎಳ್ಳಿನಲ್ಲಿ ಅಡಗಿರುವ ತೈಲವೂ, ಮೊಸರಿನಲ್ಲಿರುವ ತುಪ್ಪವೂ, ಕಟ್ಟಿಗೆಯಲ್ಲಿರುವ ಬೆಂಕಿಯೂ ಹೇಗೆ ಕಾಣಿಸುವುದಿಲ್ಲವೋ. ಹಾಗೆಯೇ ನೀನು ಎಲ್ಲೆಡೆಯಲ್ಲಿದ್ದರೂ ಕಾಣಿಸುವುದಿಲ್ಲ.''

೨೩. ಸೂತನು ಹೇಳುತ್ತಾನೆ:—ಧಾರೆಯು ಅವಳನ್ನು ಅನೇಕವರ್ಷಕಾಲ ಪ್ರತಿದಿನವೂ ಪೂಜಿಸುತ್ತ ಈ ಉತ್ತಮ ಸ್ತೋತ್ರದಿಂದ ಸ್ಮರಿಸಿದಳು.

೨೪. ಒಂದಾನೊಂದು ಚೈತ್ರಶುಕ್ಲಾಷ್ಟಮಿಯಾದಿನ ಆ ಧಾರೆಯು ದೇವಿಯನ್ನು ನದಿಯಲ್ಲಿ ಅಭಿಷೇಕಮಾಡಿ ಪೂಜಿಸಿದಳು.

೨೫–೨೬. ಬಲಿಪೂಜೆಯನ್ನು ಮಾಡಿ ಈ ಸ್ತೋತ್ರದಿಂದ ಸ್ತುತಿಸಲು ದೇವಿಯು ಪ್ರತ್ಯಕ್ಷಳಾಗಿ ಅವಳನ್ನು ಕುರಿತು ಇಂತೆಂದಳು. "ಮಗಳೆ! ನಿನ್ನೀ ಸ್ತೋತ್ರದಿಂದ ನಾನು ಸಂತುಷ್ಟಳಾಗಿದ್ದೇನೆ. ನಿನಗೆ ಮಂಗಳವಾಗಲಿ. ನಿರ್ದುಷ್ಟಳೆ! ಇಷ್ಟವಾದ ವರವನ್ನು ಕೇಳಿಕೊ. ಅದನ್ನು ಕೊಡುತ್ತೇನೆ.''

೨೭. ಧಾರೆಯು ಹೇಳುತ್ತಾಳೆ:—ದೇವಿ ! ನೀನು ನನ್ನಲ್ಲಿ ಸಂತುಷ್ಟ

**ಅಪರಂ ನಾಗರೋ ಯೋಽತ್ರ ತ್ವಸ್ಮಿನ್ನಹನಿ ಸಂಸ್ಥಿತೇ ।**
**ಪ್ರದಕ್ಷಿಣಾತ್ರಯಂ ಕೃತ್ವಾ ತವ ದತ್ವಾ ಫಲತ್ರಯಂ ॥ ೨೮ ॥**
**ಸ್ತೋತ್ರೇಣಾನೇನ ಭವತೀಂ ಸ್ತುತ್ವಾ ಚ ಕುರುತೇ ನತಿಂ ।**
**ತಸ್ಯ ಸಂವತ್ಸರಂ ಯಾವದ್ರೋಗೋ ರಕ್ಷ್ಯಸ್ತ್ವಯಾಽಖಿಲಃ ॥ ೨೯ ॥**
**ಯಾ ಚ ವಂಧ್ಯಾ ಭವೇನ್ನಾರೀ ಸಾ ಭೂಯಾತ್ಪುತ್ರಸಂಯುತಾ ।**
**ದುರ್ಭಗಾ ಚ ಸಸೌಭಾಗ್ಯಾ ಕುರೂಪಾ ರೂಪಸಂಭವಾ ।**
**ರೋಗಿಣೀ ರೋಗನಿರ್ಮುಕ್ತಾ ಸರ್ವಸೌಖ್ಯಸಮನ್ವಿತಾ ॥ ೩೦ ॥**

ದೇವ್ಯುವಾಚ :—

**ಅಹಂ ಧಾರೇತಿ ವಿಖ್ಯಾತಾ ಪ್ರಾಸಾದೇಽತ್ರ ತ್ವಯಾ ಕೃತೇ ।**
**ಭವಿಷ್ಯಾಮಿ ನ ಸಂದೇಹಸ್ತವ ಕೀರ್ತಿಕೃತೇ ಸದಾ ॥ ೩೧ ॥**
**ಅತ್ರ ಯೋ ನಾಗರೋ ಭಕ್ತ್ಯಾ ಸಮಾಗತ್ಯ ತಪಸ್ವಿನಿ ।**
**ಪ್ರದಕ್ಷಿಣಾತ್ರಯಂ ಕುರ್ಯಾದ್ದತ್ವಾ ಮಮ ಫಲತ್ರಯಂ ॥ ೩೨ ॥**
**ಸೋಽಪಿ ಸಂವತ್ಸರಂ ಯಾವದ್ಭವಿತಾ ರೋಗವರ್ಜಿತಃ ।**
**ಏವಮುಕ್ತ್ವಾ ತು ಸಾ ದೇವೀ ತತಶ್ಚಾದರ್ಶನಂ ಗತಾ ॥ ೩೩ ॥**
**ಧಾರಾಽಪಿ ಸಂಸ್ಥಿತಾ ತತ್ರ ಅರುಂಧತ್ಯಾ ಸಮನ್ವಿತಾ ।**
**ಅದ್ಯಾಽಪಿ ದೃಶ್ಯತೇ ವ್ಯೋಮ್ನಿ ತಸ್ಯಾಶ್ಚಾಽಪಿ ಸಮೀಪಗಾ ॥ ೩೪ ॥**

---

ಳಾಗಿದ್ದರೆ, ನನಗೆ ವರವನ್ನು ಕೊಡುವುದಾದರೆ ಈ ದೇವಾಲಯದಲ್ಲಿರುವ ನಿನಗೆ ನನ್ನ ಹೆಸರಾಗಲಿ.

೨೮–೨೯. ಈದಿನ ಇಲ್ಲಿಗೆ ಬಂದು ನಿನಗೆ ಮೂರು ಪ್ರದಕ್ಷಿಣೆಗಳನ್ನು ಮಾಡಿ ಮೂರು ಫಲಗಳನ್ನು ಅರ್ಪಿಸಿ ಈ ಸ್ತೋತ್ರದಿಂದ ಸ್ತುತಿಸಿ ನಮಸ್ಕರಿಸಿದ ನಾಗರನನ್ನು ಒಂದು ವರ್ಷಕಾಲ ರೋಗಬಾರದಂತೆ ನೀನು ರಕ್ಷಿಸಬೇಕು.

೩೦. ಬಂಜೆಯು ಪೂಜಿಸಿದರೆ ಮಕ್ಕಳುಳ್ಳವಳೂ, ದುರ್ಭಗಳು ಸೌಭಾಗ್ಯವತಿಯೂ, ಕುರೂಪಿಯು ಸುಂದರಿಯೂ, ರೋಗವುಳ್ಳವಳು ರೋಗವಿಲ್ಲದವಳೂ ಸಕಲ ಸೌಖ್ಯಗಳಿಂದ ಕೂಡಿದವಳೂ ಆಗಲಿ.

೩೧. ದೇವಿಯು ಹೇಳುತ್ತಾಳೆ:—"ನಾನು ನಿನ್ನ ಕೀರ್ತಿಗಾಗಿ ನಿಶ್ಚಯವಾಗಿಯೂ ಈ ಪ್ರಾಸಾದದಲ್ಲಿ ನಿನ್ನ ಹೆಸರಿನಿಂದ ಪ್ರಸಿದ್ಧಳಾಗುವೆನು.

೩೨–೩೩. ಇಲ್ಲಿಗೆ ಬಂದು ಭಕ್ತಿಯಿಂದ ಮೂರು ಫಲಗಳನ್ನರ್ಪಿಸಿ ಮೂರು ಪ್ರದಕ್ಷಿಣೆಗಳನ್ನು ಮಾಡಿದ ನಾಗರನು ಒಂದು ವರ್ಷದವರೆಗೆ ರೋಗವಿಲ್ಲದವನಾಗಲಿ." ದೇವಿಯು ಹೀಗೆ ಹೇಳಿ ಅದೃಶ್ಯಳಾದಳು.

೩೪. ಧಾರೆಯೂ ಅಲ್ಲಿ ಅರುಂಧತಿಯೊಡನೆ ನೆಲೆಸಿದಳು. ಅವಳು ಈಗಲೂ ಆಕಾಶದಲ್ಲಿ ಅರುಂಧತಿಯ ಹತ್ತಿರವೇ ಕಾಣಿಸುತ್ತಿರುವಳು.

ಏತದ್ಧಾರೋದ್ಭವಂ ಯೋऽತ್ರ ವೃತ್ತಾಂತಂ ಕೀರ್ತಯಿಷ್ಯತಿ ।
ಶೃಣುಯಾದ್ವಾ ದ್ವಿಜಶ್ರೇಷ್ಠಾ ಮುಚ್ಯೇತ್ಪಾಪಾದ್ದಿನೋದ್ಭವಾತ್ ॥ ೩೫ ॥
ತಸ್ಮಾತ್ಸರ್ವಪ್ರಯತ್ನೇನ ಪಠನೀಯಂ ವಿಶೇಷತಃ ।
ಶ್ರೋತವ್ಯಂ ಚ ಪ್ರಭಕ್ತ್ಯೇದಂ ನಾಗರೈಶ್ಚ ವಿಶೇಷತಃ ॥ ೩೬ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಧಾರಾದೇವೀಮಾಹಾತ್ಮ್ಯವರ್ಣನಂ"**
**ನಾಮೈಕೋನಸಪ್ತತ್ಯುತ್ತರಶತತಮೋऽಧ್ಯಾಯಃ**

---

೩೫. ದ್ವಿಜವರ್ಯರೆ! ಈ ಧಾರೆಯ ವೃತ್ತಾಂತವನ್ನು ಹೇಳುವವನಾಗಲಿ, ಕೇಳುವವನಾಗಲಿ ಒಂದು ದಿನದ ಪಾಪದಿಂದ ಮುಕ್ತನಾಗುವನು.

೩೬. ಆದುದರಿಂದ ನಾಗರರೂ, ಇತರರೂ ಇದನ್ನು ಭಕ್ತಿಯಿಂದ ಪಠಿಸಬೇಕು ಮತ್ತು ಕೇಳಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಧಾರಾದೇವೀಮಾಹಾತ್ಮ್ಯವರ್ಣನ"ವೆಂಬ
ನೂರರವತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತತ್ಯುತ್ತರಶತತಮೋಽಧ್ಯಾಯಃ

### ಧಾರಾತೀರ್ಥೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ತಥಾಽನ್ಯದಪಿ ಸಂಜಾತಮಾಶ್ಚರ್ಯಂ ಯದಭೂದ್ದ್ವಿಜಾಃ ।**
**ವಿಶ್ವಾಮಿತ್ರೇಣ ಸಾ ಶಕ್ತಿರ್ವಸಿಷ್ಠಾಯ ವಿಸರ್ಜಿತಾ ॥ ೧ ॥**
**ವಧಾರ್ಥಂ ತಸ್ಯ ವಿಪ್ರರ್ಷೇರ್ವಸಿಷ್ಠೇನ ಚ ಧೀಮತಾ ।**
**ಸ್ತಂಭಿತಾಥರ್ವಣೈರ್ಮಂತ್ರೈಃ ಪ್ರಸ್ವೇದಃ ಸಮಜಾಯತ ॥ ೨ ॥**
**ಸ್ವೇದಾತ್ಸಮಭವತ್ತೋಯಂ ಶೀತಲಂ ತದಜಾಯತ ।**
**ಪಾದಾಭ್ಯಾಂ ನಿರ್ಗತಂ ತೋಯಮತ್ರ ದೃಶ್ಯಮಜಾಯತ ॥ ೩ ॥**
**ವಿದಾರ್ಯ ಭೂಮಿಂ ಸಂಜಾತಾ ಜಲಧಾರಾ ಸುಶೀತಲಾ ।**
**ನಿರ್ಮಲಂ ಪಾವನಂ ಸ್ವಚ್ಛಂ ಗಂಗಾಂಭ ಇವ ನಿಃಸೃತಂ ॥ ೪ ॥**
**ಗಂಗಾ ಪ್ರತ್ಯಕ್ಷತಾಂ ಯಾತಾ ತೀರ್ಥೈಃ ಸರ್ವೈಃ ಸಮನ್ವಿತಾ ।**
**ಪೂರಿತಂ ವಾರಿಣಾ ಕುಂಡಂ ನಿರ್ಮಲಂ ಶೀತಲಂ ಶಿವಂ ॥ ೫ ॥**

---

### ಕನ್ನಡದ ಅನುವಾದ

#### ಧಾರಾತೀರ್ಥೋತ್ಪತ್ತಿಮಾಹಾತ್ಮ್ಯವರ್ಣನ

೧—೨. ಸೂತನು ಹೇಳುತ್ತಾನೆ:—ದ್ವಿಜರೆ! ಅಲ್ಲಿ ಹಾಗೆಯೇ ಮತ್ತೊಂದು ಆಶ್ಚರ್ಯವುಂಟಾಯಿತು. ವಿಶ್ವಾಮಿತ್ರನು ವಸಿಷ್ಠನನ್ನು ಕೊಲ್ಲಲು ಕಳುಹಿಸಿದ ಶಕ್ತಿಯನ್ನು ವಸಿಷ್ಠನು ಆಥರ್ವಣ ಮಂತ್ರಗಳಿಂದ ಸ್ತಂಭಿಸಿದನಷ್ಟೆ. ಆಗ ಸ್ವೇದ ವುಂಟಾಯಿತು.

೩—೪. ಆ ಬೆವರಿನಿಂದ ತಣ್ಣಗಿರುವ ನೀರು ಪಾದಗಳಿಂದ ಹೊರಟು ಪ್ರತ್ಯಕ್ಷ ವಾಯಿತು. ಆ ನೀರಿನ ಧಾರೆಯು ಭೂಮಿಯನ್ನು ಸೀಳಿಕೊಂಡು ಹೊರಗೆ ಹೊರಟು ಸ್ವಚ್ಛವಾದ ಗಂಗಾಜಲದಂತೆ ಕಾಣಿಸಿತು.

೫. ಅಲ್ಲಿ ಗಂಗೆಯು ಸಕಲ ತೀರ್ಥಗಳೊಡನೆ ಪ್ರತ್ಯಕ್ಷಳಾಗಿ ನಿರ್ಮಲ ವಾಗಿಯೂ, ಶೀತಳವಾಗಿಯೂ ಇರುವ ನೀರಿನಿಂದ ಆ ಕುಂಡವನ್ನು ತುಂಬಿದಳು.

ತಸ್ಯಾಂ ಯಾ ಕುರುತೇ ಸ್ನಾನಂ ನಾರೀ ವಂಧ್ಯಾ ದ್ವಿಜೋತ್ತಮಾಃ ।
ಸದ್ಯಃ ಪುತ್ರವತೀ ಸಾ ಸ್ಯಾದ್ರೌದ್ರೇ ಕಲಿಯುಗೇ ದ್ವಿಜಾಃ ॥ ೬ ॥
ಅನ್ಯೋಽಪಿ ಕುರುತೇ ಸ್ನಾನಂ ಸರ್ವತೀರ್ಥಫಲಂ ಲಭೇತ್ ॥ ೭ ॥
ಸ್ನಾತ್ವಾ ತತ್ರ ತು ಯೋ ದೇವೀಂ ಪಶ್ಯೇಚ್ಚ ವಿಧಿನಾ ನರಃ ।
ಧನಂ ಧಾನ್ಯಂ ತಥಾ ಪುತ್ರಾನ್ರಾಜ್ಯೋತ್ಥಂ ಚ ಸುಖಂ ಲಭೇತ್ ॥ ೮ ॥
ಯಾ ನಾರೀ ದುರ್ಭಗಾ ವಂಧ್ಯಾ ಸಾಽಪಿ ಪುತ್ರವತೀ ಭವೇತ್ ।
ಚೈತ್ರೇ ಮಾಸಿ ಸಿತಾಷ್ಟಮ್ಯಾಂ ಭಕ್ತಿಯೋಗಸಮನ್ವಿತಾ ।
ಮಹಾನಿಶಾಯಾಂ ತತ್ರೈವ ನೈವೇದ್ಯಬಲಿಪಿಂಡಿಕಾಂ ॥ ೯ ॥
ಪ್ರಸನ್ನಯಾ ಕುಮಾರ್ಯಾ ತು ಸ್ವಯಂ ವಾಽಥ ಕರೋತಿ ಯಾ ।
ಗೃಹ್ಣಾತಿ ಯಾ ಚ ವೈ ನಾರೀ ಪಿಂಡಿಕಾಂ ಬಲಿಸಂಯುತಾಂ ॥ ೧೦ ॥
ಶತವರ್ಷಾ ತು ಯಾ ನಾರೀ ಪಿಂಡಿಕಾಂ ಭಕ್ಷಯೇದ್ದ್ವಿಜಾಃ ।
ಸಾಽಪಿ ಪುತ್ರವತೀ ಚ ಸ್ಯಾದ್ಯದಿ ವೃದ್ಧತಮಾ ಭವೇತ್ ॥ ೧೧ ॥
ಕಿಂ ಪುನರ್ಯೌವನೋಪೇತಾ ಸೌಭಾಗ್ಯೇನ ಸಮನ್ವಿತಾ ।
ಪುತ್ರ ಸೌಖ್ಯವತೀ ನಾರೀ ದೇವ್ಯಾ ವೈ ದರ್ಶನೇನ ಚ ॥ ೧೨ ॥
ಸರ್ವೇಷಾಂ ನಾಗರಾಣಾಂ ತು ಭಾವಜಾ ದೇವತಾ ಸ್ಮೃತಾ ।
ಸಾ ಸಾರ್ಧಾಷ್ಟ ದ್ವಿಪಂಚಾಶದ್ಗೋತ್ರಾಣಾಂ ಕುಲದೇವತಾ ॥ ೧೩ ॥

---

೬. ದ್ವಿಜರೆ! ಈ ಭಯಂಕರ ಕಲಿಯುಗದಲ್ಲಿ ಆ ಕುಂಡದಲ್ಲಿ ಮಿಂದ ಬಂಜೆಯಾದ ಹೆಂಗಸೂ ಕೂಡಲೆ ಪುತ್ರರನ್ನು ಪಡೆಯುವಳು.

೭. ಇತರರು ಸ್ನಾನಮಾಡಿದರೂ ಸಕಲ ತೀರ್ಥಗಳ ಫಲವನ್ನು ಪಡೆಯುವರು.

೮. ಅಲ್ಲಿ ವಿಧಿಯಂತೆ ಮಿಂದು ದೇವಿಯನ್ನು ದರ್ಶನಮಾಡಿದ ಪುರುಷನು ಧನ, ಧಾನ್ಯ, ರಾಜ್ಯಸುಖ ಇವುಗಳನ್ನು ಪಡೆಯುವನು.

೯–೧೧. ಬಂಜೆಯಾದ ನಾರಿಯು ಪುತ್ರವತಿಯಾಗುವಳು. ಚೈತ್ರ ಶುಕ್ಲ ಅಷ್ಟಮಿ ದಿನ ರಾತ್ರಿ ಅಲ್ಲಿ ಭಕ್ತಿಯಿಂದ ತಾನಾಗಲಿ, ಪ್ರಸನ್ನಳಾದ ಕುಮಾರಿಯಿಂದಾಗಲಿ ನೈವೇದ್ಯ ಬಲಿಪಿಂಡಗಳನ್ನು ಮಾಡಿಸಿ ಬಲಿಯೊಡನೆ ತೆಗೆದುಕೊಂಡು ಭಕ್ಷಿಸಿದವಳು ನೂರುವರ್ಷದ ಮುದುಕಿಯಾದರೂ ಪುತ್ರವತಿಯಾಗುವಳು.

೧೨. ಸೌಭಾಗ್ಯದಿಂದ ಕೂಡಿದ ಯುವತಿಯ ವಿಷಯದಲ್ಲಿ ಇನ್ನೇನು? ಅವಳು ದೇವಿಯ ದರ್ಶನದಿಂದಲೇ ಪುತ್ರವತಿಯಾಗುವಳು.

೧೩. ಅವಳು ಅರುವತ್ತನಾಲ್ಕು ಗೋತ್ರದ ನಾಗರರಿಗೆ ಕುಲದೇವತೆಯಾಗಿರುವಳು.

ಏತಸ್ಮಾತ್ಕಾರಣಾದ್ಯಾತ್ರಾ ನಾಗರೈಃ ಸುಕೃತಾ ಭವೇತ್ ।
ನ ವಿನಾ ನಾಗರೈರ್ಯಾತ್ರಾಂ ತುಷ್ಟಿಂ ಯಾತಿ ಸುರೇಶ್ವರೀ ॥ ೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ಧಾರಾತೀರ್ಥೋತ್ಪತ್ತಿಮಾಹಾತ್ಮ್ಯವರ್ಣನಂ " ನಾಮ
ಸಪ್ತತ್ಯುತ್ತರಶತತಮೋಽಧ್ಯಾಯಃ

---

೧೪. ಆದುದರಿಂದ ನಾಗರರು ಅವಳ ಯಾತ್ರೆಯನ್ನು ಮಾಡಬೇಕು. ಅವರು ಯಾತ್ರೆಯನ್ನು ಮಾಡದಿದ್ದರೆ ಆ ಸುರೇಶ್ವರಿಯು ಸಂತುಷ್ಟಳಾಗುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ಧಾರಾತೀರ್ಥೋತ್ಪತ್ತಿಮಾಹಾತ್ಮ್ಯವರ್ಣನ "ವೆಂಬ
ನೂರೆಪ್ಪತ್ತನೆಯ ಅಧ್ಯಾಯವು ಮುಗಿದುದು

*

॥ ಶ್ರೀಃ ॥

# ಅಷ್ಟೈಕಸಪ್ತತ್ಯುತ್ತರಶತತಮೋಽಧ್ಯಾಯಃ

## ದಿವ್ಯಾಸ್ತ್ರನಿವರ್ತನವರ್ಣನಂ

**ಸೂತ ಉವಾಚ:—**

**ಏತಸ್ಮಿನ್ನೇವ ಕಾಲೇತು ವಿಶ್ವಾಮಿತ್ರೋ ಮಹಾಮುನಿಃ ।**
**ತಾಂ ಶಕ್ತಿಂ ವ್ಯರ್ಥತಾಂ ಪ್ರಾಪ್ತಾಂ ಜ್ಞಾತ್ವಾ ಕೋಪಸಮನ್ವಿತಃ ॥ ೧ ॥**
**ಮುಮೋಚ ತದ್ವಧಾರ್ಥಾಯ ಬ್ರಹ್ಮಾಸ್ತ್ರಂ ಸೋಽಭಿಮಂತ್ರಿತಂ ।**
**ತಸ್ಯ ಸಂಹಿತಮಾತ್ರಸ್ಯ ಪ್ರಸ್ವನಃ ಸಮಜಾಯತ ॥ ೨ ॥**
**ತತಶ್ಚೋಲ್ಕಾಃ ಪ್ರಭೂತಾಶ್ಚ ಪ್ರಯಾಂತಿ ಚ ನಭಸ್ತಲಾತ್ ।**
**ತತಃ ಕುಂತಾಃ ಶಕ್ತಯಶ್ಚ ತೋಮರಾಃ ಪರಿಘಾಸ್ತಥಾ ॥ ೩ ॥**
**ಭಿಂಡಿಪಾಲಾ ಗದಾಶ್ಚೈವ ಖಡ್ಗಾಶ್ಚೈವ ಪರಶ್ವಧಾಃ ।**
**ಬಾಣಾಃ ಪ್ರಾಸಾಃ ಶತಘ್ನ್ಯಶ್ಚ ಶತಶೋಽಥ ಸಹಸ್ರಶಃ ॥ ೪ ॥**
**ವಸಿಷ್ಠೋಽಪಿ ಪರಿಜ್ಞಾಯ ಪ್ರೇಷಿತಂ ಗಾಧಿಸೂನುನಾ ।**
**ಬ್ರಹ್ಮಾಸ್ತ್ರಂ ಮೃತ್ಯವೇ ತೇನ ಶುಚಿರ್ಭೂತ್ವಾ ತತಃ ಪರಂ ॥ ೫ ॥**
**ಇಷೀಕಾಂ ಚ ಸಮಾದಾಯ ಬ್ರಹ್ಮಾಸ್ತ್ರಂ ತತ್ರ ಯೋಜಯನ್ ।**
**ಅಬ್ರವೀದ್ಗಾಧಿಪುತ್ರಾಯ ಸ್ವಸ್ತ್ಯಸ್ತು ತವ ಪಾರ್ಶ್ವತಃ ॥ ೬ ॥**
**ಹನ್ಯತಾಮಸ್ತ್ರಮೇತದ್ಧಿ ಮಮ ವಾಕ್ಯಾದಸಂಶಯಂ ।**
**ತತಸ್ತೇನ ಹತಂ ತಚ್ಚ ಬ್ರಹ್ಮಾಸ್ತ್ರಂ ತತ್ಸಮುದ್ಭವಂ ॥ ೭ ॥**

---

## ಕನ್ನಡದ ಅನುವಾದ

### ದಿವ್ಯಾಸ್ತ್ರನಿವರ್ತನವರ್ಣನ

೧—೨. ಸೂತನು ಹೇಳುತ್ತಾನೆ:—ಈ ಸಮಯದಲ್ಲಿ ವಿಶ್ವಾಮಿತ್ರನು ಆ ಶಕ್ತಿಯು ವ್ಯರ್ಥವಾಗಿರುವುದನ್ನರಿತು ಕೋಪದಿಂದ ಆ ವಸಿಷ್ಠನನ್ನು ಕೊಲ್ಲಲೋಸುಗ ಬ್ರಹ್ಮಾಸ್ತ್ರವನ್ನಭಿಮಂತ್ರಿಸಿ ಪ್ರಯೋಗಿಸಿದನು. ಹಾಗೆ ಪ್ರಯೋಗಿಸಿದ ಅಸ್ತ್ರದಿಂದ ಬಹಳ ಧ್ವನಿಯುಂಟಾಯಿತು.

೩—೪. ಅನಂತರ ಆಕಾಶದಿಂದ ಅನೇಕ ಉಲ್ಕಗಳು ಬಿದ್ದುವು. ಮತ್ತು ಸಾವಿರಾರು ಕುಂತ, ಶಕ್ತಿ, ತೋಮರ, ಪರಿಘ, ಬಿಂಡಿಪಾಲ, ಗದಾ, ಕತ್ತಿ, ಕೊಡಲಿ, ಬಾಣ, ಪ್ರಾಸ, ಶತಘ್ನಿಗಳೂ ಬಿದ್ದುವು.

೫—೭. ವಿಶ್ವಾಮಿತ್ರನು ತನ್ನನ್ನು ಕೊಲ್ಲಲು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿರುವನೆಂದರಿತು ವಸಿಷ್ಠನು ಶುದ್ಧನಾಗಿ ತೃಣವನ್ನು ತೆಗೆದುಕೊಂಡು ಅದರಲ್ಲಿ ಬ್ರಹ್ಮಾಸ್ತ್ರವನ್ನು ಯೋಜಿಸಿ ವಿಶ್ವಾಮಿತ್ರನಿಗೆ ಮಂಗಳವಾಗಲಿ. ಅವನ ಹತ್ತಿರ

**ವಜ್ರಾಸ್ತ್ರಂ ಚ ತತೋ ಮುಕ್ತಂ ವಜ್ರಾಸ್ತ್ರೇಣ ವಿನಾಶಿತಂ ।**
**ಯದ್ಯದಸ್ತ್ರಂ ಕ್ಷಿಪತ್ಯೇಷ ವಿಶ್ವಾಮಿತ್ರಃ ಪ್ರಕೋಪಿತಃ ॥ ೮ ॥**
**ತತ್ತದ್ಧಂತಿ ವಸಿಷ್ಠಸ್ತು ಮಂತ್ರಸ್ಯ ಚ ಪ್ರಭಾವತಃ ।**
**ಏತಸ್ಮಿನ್ನೇವ ಕಾಲೇ ತು ಕ್ಷುಭಿತೋ ಮಕರಾಲಯಃ ॥ ೯ ॥**
**ಶೀರ್ಯಂತೇ ಗಿರಿಶೃಂಗಾಣಿ ರಕ್ತವೃಷ್ಟಿಃ ಪರಾ ಸ್ಥಿತಾ ।**
**ಪ್ರಲಯಸ್ಯೇವ ಚಿಹ್ನಾನಿ ಸಂಜಾತಾನಿ ಧರಾತಲೇ ।**
**ಕಿಮಕಾಲೇ ಮಹಾನೇಷ ಪ್ರಲಯಃ ಸಂಭವಿಷ್ಯತಿ ॥ ೧೦ ॥**
**ತತಃ ಪಿತಾಮಹಂ ಜಗ್ಮುಃ ಸರ್ವೇ ದೇವಾಃ ಸವಾಸವಾಃ ।**
**ಪ್ರೋಚುಃ ಪ್ರಲಯ ಚಿಹ್ನಾನಿ ಯಾನಿ ಸಂತಿ ಧರಾತಲೇ ॥ ೧೧ ॥**
**ತತೋ ಬ್ರಹ್ಮಾ ಚಿರಂ ಧ್ಯಾತ್ವಾ ತಾನುವಾಚ ದಿವೌಕಸಃ ।**
**ವಿಶ್ವಾಮಿತ್ರ ವಸಿಷ್ಠಾಭ್ಯಾಂ ಯುದ್ಧಮೇತದ್ವ್ಯವಸ್ಥಿತಂ ॥ ೧೨ ॥**
**ದಿವ್ಯಾಸ್ತ್ರ ಸಂಭವಂ ದೇವಾಸ್ತೇನೈತದ್ವ್ಯಾಕುಲಂ ಜಗತ್ ॥ ೧೩ ॥**
**ತಸ್ಮಾದ್ಗಚ್ಛಾಮಹೇ ತತ್ರ ಯಾವನ್ನೋ ಜಾಯತೇ ಕ್ಷಯಃ ।**
**ಸರ್ವೇಷಾಮೇವ ಭೂತಾನಾಂ ದಿವ್ಯಾಸ್ತ್ರಾಣಾಂ ಪ್ರಭಾವತಃ ॥ ೧೪ ॥**

---

ಇರುವ ಅಸ್ತ್ರವನ್ನು ಈ ನನ್ನ ಅಸ್ತ್ರವು ಹೊಡೆಯಲಿ ಎಂದನು. ತರುವಾಯ ವಸಿಷ್ಠನ ಅಸ್ತ್ರವು ವಿಶ್ವಾಮಿತ್ರನ ಬ್ರಹ್ಮಾಸ್ತ್ರವನ್ನು ನಾಶಗೊಳಿಸಿತು.

೮–೯. ಬಳಿಕ ವಿಶ್ವಾಮಿತ್ರನು ಪ್ರಯೋಗಿಸಿದ ವಜ್ರಾಸ್ತ್ರವನ್ನು ವಸಿಷ್ಠನು ವಜ್ರಾಸ್ತ್ರದಿಂದಲೇ ನಾಶಗೊಳಿಸಿದನು. ಹೀಗೆ ವಿಶ್ವಾಮಿತ್ರನು ಯಾವ ಯಾವ ಅಸ್ತ್ರಗಳನ್ನು ಕೋಪದಿಂದ ಪ್ರಯೋಗಿಸಿದನೊ, ವಸಿಷ್ಠನು ಅವುಗಳನ್ನೆಲ್ಲ ಮಂತ್ರಪ್ರಭಾವದಿಂದ ಹಾಳುಮಾಡಿದನು. ಈ ಸಮಯದಲ್ಲಿ ಸಮುದ್ರವು ಅಲ್ಲೋಲಕಲ್ಲೋಲವಾಯಿತು.

೧೦–೧೧. ಪರ್ವತಶಿಖರಗಳು ಸೀಳಿಹೋದುವು. ಅತ್ಯಂತ ರಕ್ತವೃಷ್ಟಿಯಾಯಿತು. ಭೂಮಿಯಲ್ಲಿ ಪ್ರಳಯಕಾಲದ ಚಿಹ್ನೆಗಳು ಕಾಣಿಸಿಕೊಂಡುವು. ಅನಂತರ ದೇವತೆಗಳೆಲ್ಲ ಅಕಾಲದಲ್ಲಿ ಏಕೆ ಈ ಪ್ರಳಯವುಂಟಾಗುವುದೆಂದು ಆಶ್ಚರ್ಯಗೊಂಡು ಬ್ರಹ್ಮನೆಡೆಗೆ ತೆರಳಿ ಭೂಮಿಯಲ್ಲಿ ಉಂಟಾದ ಪ್ರಳಯ ಚಿಹ್ನೆಗಳನ್ನು ಹೇಳಿದರು.

೧೨–೧೩. ಬಳಿಕ ಬ್ರಹ್ಮನು ಬಹಳ ಹೊತ್ತು ಆಲೋಚಿಸಿ ದೇವತೆಗಳನ್ನು ಕುರಿತು ಇಂತೆಂದನು. “ದೇವತೆಗಳೆ! ವಿಶ್ವಾಮಿತ್ರ ವಸಿಷ್ಠರಿಗೆ ದಿವ್ಯಾಸ್ತ್ರಗಳಿಂದ ಯುದ್ಧವು ನಡೆಯುತ್ತಿರುವುದು. ಆದುದರಿಂದ ಹೀಗೆ ಕ್ಷೋಭೆಯುಂಟಾಗಿದೆ.

೧೪. ಆದುದರಿಂದ ಸಕಲ ಪ್ರಾಣಿಗಳು ದಿವ್ಯಾಸ್ತ್ರಗಳ ಪ್ರಭಾವದಿಂದ ನಾಶವಾಗುವಷ್ಟರಲ್ಲಿ ಅಲ್ಲಿಗೆ ಹೋಗೋಣ.”

**ತತೋಽಭಿಗಮ್ಯ ತೇ ದೇಶಂ ಯತ್ರ ತೌ ಮುನಿಸತ್ತಮೌ ।**
**ವಿಶ್ವಾಮಿತ್ರವಸಿಷ್ಠೌ ತೌ ಯುಧ್ಯಮಾನೌ ಪರಸ್ಪರಂ ॥ ೧೫ ॥**
**ತತಃ ಪ್ರೋವಾಚ ತೌ ಬ್ರಹ್ಮಾ ಸಾಮ್ನಾ ಪರಮವಲ್ಗುನಾ ।**
**ನಿವರ್ತ್ಯತಾಮಿದಂ ಯುದ್ಧಮೇತದ್ದಿವ್ಯಾಸ್ತ್ರ ಸಂಭವಂ ।**
**ಯಾವನ್ನ ಪ್ರಲಯೋ ಭಾವಿ ಸಮಸ್ತೇ ಧರಣೀತಲೇ ॥ ೧೬ ॥**
**ವಸಿಷ್ಠ ಉವಾಚ:—**
**ನಾಽಹಮಸ್ತ್ರಂ ಪ್ರಯುಂಜಾಮಿ ವಿಶ್ವಾಮಿತ್ರವಧೇಚ್ಛಯಾ ।**
**ಆತ್ಮರಕ್ಷಾಕೃತೇ ದೇವ ಅಸ್ತ್ರಮಸ್ತ್ರೇಣ ಶಾಮಯನ್ ॥ ೧೭ ॥**
**ಅಯಂ ಮಮ ವಿನಾಶಾಯ ಕೇವಲಂ ಚಾಽಸ್ತ್ರಮೋಕ್ಷಣಂ ।**
**ಕುರುತೇ ನಿರ್ದಯೋ ಬ್ರಹ್ಮಂಸ್ತಂ ನಿವಾರಯ ಸಾಂಪ್ರತಂ ॥ ೧೮ ॥**
**ಬ್ರಹ್ಮೋವಾಚ:—**
**ವಿಶ್ವಾಮಿತ್ರ ಮುನಿಶ್ರೇಷ್ಠ ವಸಿಷ್ಠಂ ಬ್ರಾಹ್ಮಣೋತ್ತಮಂ ।**
**ತ್ವಂ ರಕ್ಷ ಮಮ ವಾಕ್ಯೇನ ತಥಾ ಸರ್ವಮಿದಂ ಜಗತ್ ॥ ೧೯ ॥**
**ಅಸ್ತ್ರಮೋಕ್ಷವಿರಾಮಂ ತ್ವಂ ಬ್ರಹ್ಮರ್ಷೇ ಕುರು ಸತ್ವರಂ ॥ ೨೦ ॥**
**ವಿಶ್ವಾಮಿತ್ರ ಉವಾಚ:—**
**ನ ಮಾಮೇಷ ದ್ವಿಜಂ ಬ್ರೂತೇ ಕಥಂಚಿತ್ಪ್ರಪಿತಾಮಹ ।**
**ತಸ್ಮಾದೇಷ ಪ್ರಕೋಪೋ ಮೇ ಸಂಜಾತೋಽಸ್ಯ ವಧೋಪರಿ ॥ ೨೧ ॥**

---

೧೫. ಅನಂತರ ಬ್ರಹ್ಮಾದಿ ದೇವತೆಗಳು ವಿಶ್ವಾಮಿತ್ರ ವಸಿಷ್ಠರು ಯುದ್ಧ ಮಾಡುತ್ತಿರುವ ಸ್ಥಳಕ್ಕೆ ಹೋದರು.

೧೬. ಬ್ರಹ್ಮನು ವಿಶ್ವಾಮಿತ್ರ ವಸಿಷ್ಠರನ್ನು ಕುರಿತು, "ಸಕಲ ಭೂಮಂಡಲವೂ ಪ್ರಳಯವಾಗುವಷ್ಟರಲ್ಲಿ ನೀವಿಬ್ಬರು ಈ ದಿವ್ಯಾಸ್ತ್ರಯುದ್ಧವನ್ನು ನಿಲ್ಲಿಸಿರಿ" ಎಂದು ಸಮಾಧಾನದ ಮಾತಿನಿಂದ ಹೇಳಿದನು.

೧೭–೧೮. ವಸಿಷ್ಠನು ಹೇಳುತ್ತಾನೆ:—ನಾನು ವಿಶ್ವಾಮಿತ್ರನನ್ನು ಕೊಲ್ಲುವುದಕ್ಕಾಗಿ ಅಸ್ತ್ರವನ್ನು ಪ್ರಯೋಗಿಸುವುದಿಲ್ಲ. ನನ್ನ ರಕ್ಷಣೆಗಾಗಿ ಅಸ್ತ್ರವನ್ನು ಅಸ್ತ್ರದಿಂದ ತಡೆಯುತ್ತೇನೆ. ಈ ವಿಶ್ವಾಮಿತ್ರನು ನನ್ನನ್ನು ಕೊಲ್ಲುವುದಕ್ಕಾಗಿಯೇ ನಿರ್ದಯನಾಗಿ ಅಸ್ತ್ರವನ್ನು ಪ್ರಯೋಗಿಸುತ್ತಿರುವನು. ಎಲೈ ಬ್ರಹ್ಮನೆ! ಅವನನ್ನು ಈಗ ತಡೆ.

೧೯–೨೦. ಬ್ರಹ್ಮನು ಹೇಳುತ್ತಾನೆ:—ಮುನಿವರ್ಯನಾದ ವಿಶ್ವಾಮಿತ್ರನೆ! ನೀನು ನನ್ನಮಾತಿನಿಂದ ಬ್ರಾಹ್ಮಣೋತ್ತಮನಾದ ವಸಿಷ್ಠನನ್ನೂ, ಈ ಸಕಲಜಗತ್ತುಗಳನ್ನೂ ರಕ್ಷಿಸು. ಬ್ರಹ್ಮರ್ಷಿಯೆ! ಶೀಘ್ರವಾಗಿ ಅಸ್ತ್ರಪ್ರಯೋಗವನ್ನು ನಿಲ್ಲಿಸು.

೨೧. ವಿಶ್ವಾಮಿತ್ರನು ಹೇಳುತ್ತಾನೆ:—ಪಿತಾಮಹ! ಇವನು ನನ್ನನ್ನು ಬ್ರಾಹ್ಮಣನೆಂದು ಹೇಳುವುದಿಲ್ಲ. ಆದುದರಿಂದ ನನಗೆ ಇವನನ್ನು ಕೊಲ್ಲಬೇಕೆಂದು ಕೋಪವುಂಟಾಗಿದೆ.

ತಸ್ಮಾದ್ವದತು ದೇವೇಶ ಮಾಮೇಷ ಬ್ರಾಹ್ಮಣಂ ದ್ರುತಂ ।
ನಿವಾರಯಾಮಿ ಯೇನಾಽಸ್ತ್ರಂ ಯದಸ್ಯೋಪರಿ ಸಂಧಿತಂ ॥ ೨೨ ॥

ಬ್ರಹ್ಮೋವಾಚ :—

ತ್ವಂ ವಸಿಷ್ಠಾಽಧುನಾ ಬ್ರೂಹಿ ವಿಶ್ವಾಮಿತ್ರಂ ಮಮಾಜ್ಞಯಾ ।
ಬ್ರಾಹ್ಮಣೋ ಜಾಯತೇ ತೇನ ತವ ಜೀವಸ್ಯ ರಕ್ಷಣಂ ॥ ೨೩ ॥

ವಸಿಷ್ಠ ಉವಾಚ :—

ನಾಽಹಂ ಕ್ಷತ್ರಿಯಸಂಜಾತಂ ಬ್ರಾಹ್ಮಣಂ ವಚ್ಮಿ ಪದ್ಮಜ ।
ನ ವಧೇ ಮಮ ಶಕ್ತೋಽಯಂ ಕಥಂಚಿತ್ಕ್ಷತ್ರಿಯೋದ್ಭವಃ ॥ ೨೪ ॥
ಬ್ರಾಹ್ಮ್ಯಂ ತೇಜೋ ನ ಕ್ಷಾತ್ರೇಣ ತೇಜಸಾ ಸಂಪ್ರಣಶ್ಯತಿ ।
ಏವಂ ಜ್ಞಾತ್ವಾ ಚತುರ್ವಕ್ತ್ರ ಯದ್ಯುಕ್ತಂ ತತ್ಸಮಾಚರ ॥ ೨೫ ॥

ಬ್ರಹ್ಮೋವಾಚ :—

ವಿಶ್ವಾಮಿತ್ರ ದ್ವಿಜಶ್ರೇಷ್ಠ ತ್ಯಕ್ತ್ವಾ ದಿವ್ಯಾಸ್ತ್ರಸಂಭವಂ ।
ಕುರು ಯುದ್ಧಂ ವಸಿಷ್ಠೇನ ನೋಚೇಚ್ಛಪ್ಸ್ಯಾಮ್ಯಹಂ ಚ ತೇ ॥ ೨೬ ॥

ವಿಶ್ವಾಮಿತ್ರ ಉವಾಚಃ—

ದಿವ್ಯಾಸ್ತ್ರಾಣಿ ಚ ಸಂತ್ಯಜ್ಯ ಮಯಾ ವಧ್ಯಃ ಸುದುರ್ಮತಿಃ ।
ಕಿಂಚಿಚ್ಛಿದ್ರಂ ಸಮಾಸಾದ್ಯ ತ್ವಂ ಗಚ್ಛ ನಿಜಸಂಶ್ರಯಂ ॥ ೨೭ ॥

---

೨೨. ಇವನು ಶೀಘ್ರವಾಗಿ ನನ್ನನ್ನು ಬ್ರಾಹ್ಮಣನೆನ್ನಲಿ. ಅದರಿಂದ ಇವನ ಮೇಲೆ ಪ್ರಯೋಗಿಸಿದ ಅಸ್ತ್ರವನ್ನು ಹಿಂತೆಗೆಯುವೆನು.

೨೩. ಬ್ರಹ್ಮನು ಹೇಳುತ್ತಾನೆ:—ವಸಿಷ್ಠ! ಈಗ ನೀನು ನನ್ನ ಆದೇಶದಿಂದ ವಿಶ್ವಾಮಿತ್ರನು ಬ್ರಾಹ್ಮಣನೆಂದು ಹೇಳು. ಅದರಿಂದವನು ಬ್ರಾಹ್ಮಣನಾಗುವನು. ನಿನ್ನ ಜೀವವೂ ಉಳಿಯುವುದು.

೨೪. ವಸಿಷ್ಠನು ಹೇಳುತ್ತಾನೆ:—ಪಿತಾಮಹ! ನಾನು ಕ್ಷತ್ರಿಯಸಂಭೂತನನ್ನು ಬ್ರಾಹ್ಮಣನೆಂದು ಎಂದಿಗೂ ಹೇಳುವುದಿಲ್ಲ. ಕ್ಷತ್ರಿಯಪುತ್ರನಾದ ಇವನು ನನ್ನನ್ನು ಕೊಲ್ಲಲು ಸಮರ್ಥನಲ್ಲ.

೨೫. ಬ್ರಾಹ್ಮಣ ತೇಜಸ್ಸು ಕ್ಷತ್ರಿಯ ತೇಜಸ್ಸಿನಿಂದ ಹಾಳಾಗುವುದಿಲ್ಲ. ನೀನು ಇದನ್ನರಿತು ಯುಕ್ತವಾದುದನ್ನಾಚರಿಸು.

೨೬. ಬ್ರಹ್ಮನು ಹೇಳುತ್ತಾನೆ:—ವಿಶ್ವಾಮಿತ್ರ! ನೀನು ದಿವ್ಯಾಸ್ತ್ರಗಳನ್ನು ತ್ಯಜಿಸಿ ವಸಿಷ್ಠನೊಡನೆ ಯುದ್ಧಮಾಡು. ಇಲ್ಲದಿದ್ದರೆ ನಿನಗೆ ಶಾಪಕೊಡುವೆನು.

೨೭. ವಿಶ್ವಾಮಿತ್ರನು ಹೇಳುತ್ತಾನೆ:—ಪಿತಾಮಹ! ನಾನು ದಿವ್ಯಾಸ್ತ್ರಗಳನ್ನು ತ್ಯಜಿಸಿ ಯಾವುದಾದರೊಂದು ಅವಕಾಶದಿಂದ ಆ ದುಷ್ಟಮುನಿಯನ್ನು ವಧಿಸುವೆನು. ನೀನು ನಿನ್ನ ಆಲಯಕ್ಕೆ ಹೋಗು.

ಸೂತ ಉವಾಚ :—

ಬಾಢಮಿತ್ಯೇವಮುಕ್ತ್ವಾ ಚ ಬ್ರಹ್ಮಲೋಕಂ ಗತೋ ವಿಧಿಃ ।
ವಿಶ್ವಾಮಿತ್ರ ವಸಿಷ್ಠೌ ಚ ಸರಸ್ವತ್ಯಾಸ್ತಟೇ ಸ್ಥಿತೌ ॥ ೨೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
" ದಿವ್ಯಾಸ್ತ್ರನಿವರ್ತನವರ್ಣನಂ "
ನಾಮೈಕಸಪ್ತತ್ಯುತ್ತರಶತತಮೋಽಧ್ಯಾಯಃ

---

೨೮. ಸೂತನು ಹೇಳುತ್ತಾನೆ:—ಬ್ರಹ್ಮನು ಅದಕ್ಕೆ ಒಪ್ಪಿಗೆಯನ್ನಿತ್ತು ಬ್ರಹ್ಮಲೋಕಕ್ಕೆ ತೆರಳಿದನು. ವಿಶ್ವಾಮಿತ್ರ ವಸಿಷ್ಠರು ಸರಸ್ವತೀ ನದಿಯ ದಡದಲ್ಲಿಯೇ ನೆಲೆಸಿದರು.

ಇಲ್ಲಿಗೆ ಎಂಬತ್ತೊಂದುಸಾಸಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ " ದಿವ್ಯಾಸ್ತ್ರನಿವರ್ತನವರ್ಣನ " ವೆಂಬ
ನೂರೆಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

### ಸರಸ್ವತೀ ಶಾಪವೃತ್ತಾಂತವರ್ಣನಂ

ಸೂತ ಉವಾಚ :—

ತತಃ ಪ್ರಭೃತಿ ಛಿದ್ರಾಣಿ ವಿಶ್ವಾಮಿತ್ರೋ ನಿರೀಕ್ಷಯನ್ ।
ವಸಿಷ್ಠಸ್ಯ ವಧಾರ್ಥಾಯ ಸಂಸ್ಥಿತೋ ದ್ವಿಜಸತ್ತಮಾಃ ॥ ೧ ॥
ಆತ್ಮಶಕ್ತಿ ಪ್ರಭಾವೇನ ಮಶಕಸ್ಯ ಯಥಾ ಗಜಃ ।
ಅನ್ಯಸ್ಮಿನ್ನಹನಿ ಪ್ರಾಪ್ತೇ ವಿಶ್ವಾಮಿತ್ರೇಣ ಸಾ ನದೀ ॥ ೨ ॥
ಸಮಾಹೂತಾ ಸಮಾಯಾತಾ ದ್ರುತಂ ಸಾ ಸ್ತ್ರೀಸ್ವರೂಪಿಣೀ ।
ಅಬ್ರವೀತ್ಪ್ರಾಂಜಲಿರ್ಭೂತ್ವಾ ಆದೇಶೋ ದೀಯತಾಂ ಮಮ ।
ಬ್ರಹ್ಮರ್ಷೇ ಯೇನ ಕಾರ್ಯೇಣ ಸಮಾಹೂತಾಸ್ಮಿ ಸಾಂಪ್ರತಂ ॥ ೩ ॥

ವಿಶ್ವಾಮಿತ್ರ ಉವಾಚ :—

ಯದಾ ನಿಮಜ್ಜನಂ ಕುರ್ಯಾತ್ತವ ತೋಯೇ ಮಹಾನದಿ ।
ಪರಮಂ ವೇಗಮಾಸ್ಥಾಯ ತದಾಽಽನಯ ಮಮಾಂತಿಕಂ ॥ ೪ ॥
ಪೂರ್ಣಶ್ರೋತ್ರಂ ಜಲೇನೈವ ವ್ಯಾಕುಲಾಂಗಂ ವ್ಯವಸ್ಥಿತಂ ।
ನಿಹನ್ಮಿ ಯೇನ ಶೀಘ್ರಂ ಚ ನಾನ್ಯಚ್ಛಿದ್ರಂ ಪ್ರಲಕ್ಷಯೇ ॥ ೫ ॥

---

### ಕನ್ನಡದ ಅನುವಾದ

#### ಸರಸ್ವತೀ ಶಾಪವೃತ್ತಾಂತವರ್ಣನ

೧–೩. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ಅನಂತರ ವಿಶ್ವಾಮಿತ್ರನು ಅದು ಮೊದಲ್ಗೊಂಡು ವಸಿಷ್ಠನ ಛಿದ್ರಗಳನ್ನು ನಿರೀಕ್ಷಿಸುತ್ತ ಆನೆಯನ್ನು ಸೊಳ್ಳೆಯಂತೆ ತನ್ನ ಶಕ್ತಿಯಿಂದ ಅವನನ್ನು ಕೊಲ್ಲಲು ಅಲ್ಲಿದ್ದನು. ಮತ್ತೊಂದು ದಿನ ವಿಶ್ವಾಮಿತ್ರನು ಸರಸ್ವತೀ ನದಿಯನ್ನು ಕರೆಯಲು ಅದು ಬೇಗನೆ ಸ್ತ್ರೀಸ್ವರೂಪವನ್ನಾಂತು ಅವನೆಡೆಗೆ ಬಂದು ಕೈಮುಗಿದುಕೊಂಡು, "ಬ್ರಹ್ಮರ್ಷಿಯೆ! ನೀನು ನನ್ನನ್ನು ಏಕೆ ಕರೆಯಿಸಿರುವೆ. ಆಜ್ಞೆಮಾಡು" ಎಂದಿತು.

೪. ವಿಶ್ವಾಮಿತ್ರನು ಹೇಳುತ್ತಾನೆ :—ಮಹಾನದಿಯೆ! ಆ ವಸಿಷ್ಠನು ನಿನ್ನ ನೀರಿನಲ್ಲಿ ಸ್ನಾನಮಾಡುತ್ತಿರುವಾಗ ನೀನು ಅತಿ ವೇಗದಿಂದ ಅವನನ್ನು ನನ್ನೆಡೆಗೆ ಕರೆದುಕೊಂಡು ಬಾ.

೫. ಆಗ ನಾನು ನೀರಿನಿಂದ ತುಂಬಿದ ಕಿವಿಯುಳ್ಳವನೂ, ವ್ಯಾಕುಲಗೊಂಡ ಅವಯವವುಳ್ಳವನೂ ಆದ ಅವನನ್ನು ಬೇಗನೆ ಕೊಲ್ಲುವೆನು. ಬೇರೆ ಅವಕಾಶ ತೋರುವುದಿಲ್ಲ.

ಏವಮುಕ್ತಾ ತದಾ ತೇನ ವಿಶ್ವಾಮಿತ್ರೇಣ ಸಾ ನದೀ ।
ವಿತ್ರಸ್ತಾ ಭಯ ಸಂಯುಕ್ತಾ ಶಾಪಾದ್ವಾಕ್ಯಮುವಾಚ ಸಾ ॥ ೬ ॥
ನಾಽಹಂ ದ್ರೋಹಂ ಕರಿಷ್ಯಾಮಿ ವಸಿಷ್ಠಸ್ಯ ಮಹಾತ್ಮನಃ ।
ಬ್ರಹ್ಮರ್ಷೇ ನ ಚ ತೇ ಯುಕ್ತಂ ಕರ್ತುಂ ವೈ ಬ್ರಹ್ಮಣೋ ವಧಂ ॥ ೭ ॥
ಯದಿ ತ್ವಂ ಬ್ರಹ್ಮಣಾ ಪ್ರೋಕ್ತೋ ಬ್ರಹ್ಮರ್ಷಿಃ ಸ್ವಯಮೇವ ತು ।
ಕಾಮಾನ್ನಾಽಯಂ ವಸಿಷ್ಠಸ್ತು ತಸ್ಮಾತ್ಕೋಪಂ ಪರಿತ್ಯಜ ॥ ೮ ॥
ಮನಸಾಽಪಿ ವಧಂ ಯಸ್ತು ಬ್ರಾಹ್ಮಣಸ್ಯ ವಿಚಿಂತಯೇತ್ ।
ತಪ್ತಕೃಚ್ಛ್ರೇಣ ಮುಚ್ಯೇತ ಮನುಃ ಸ್ವಾಯಂಭುವೋಽಬ್ರವೀತ್ ॥ ೯ ॥
ವಾಚಯಾ ಪ್ರವದೇದ್ಯಸ್ತು ಬ್ರಾಹ್ಮಣಸ್ಯ ವಧಂ ನರಃ ।
ಚಾಂದ್ರಾಯಣೇನ ಶುದ್ಧಿಃ ಸ್ಯಾತ್ತಸ್ಯ ದೇವ್ಯೋಽಬ್ರವೀದಿದಂ ॥ ೧೦ ॥
ತಸ್ಮಾನ್ನಾಽಹಂ ಕರಿಷ್ಯಾಮಿ ತವ ವಾಕ್ಯಂ ಕಥಂಚನ ।
ವಸಿಷ್ಠಾರ್ಥಂ ತು ಯತ್ಪ್ರೋಕ್ತಂ ಕುರು ಯತ್ತವ ರೋಚತೇ ॥ ೧೧ ॥
ತಚ್ಛ್ರುತ್ವಾ ಕುಪಿತಸ್ತಸ್ಯಾ ವಿಶ್ವಾಮಿತ್ರೋ ದ್ವಿಜೋತ್ತಮಾಃ ।
ಶಶಾಪ ತಾಂ ನದೀಂ ಶ್ರೇಷ್ಠಾಂ ಯತ್ತದ್ವಕ್ಷ್ಯಾಮಿ ಶ್ರೂಯತಾಂ ॥ ೧೨ ॥

---

೬. ವಿಶ್ವಾಮಿತ್ರನು ಹೀಗೆನ್ನಲು ಆ ಸರಸ್ವತೀ ನದಿಯು ಶಾಪದಿಂದ ಹೆದರಿ ಇಂತೆಂದಿತು.

೭. "ನಾನು ಮಹಾತ್ಮನಾದ ವಸಿಷ್ಠನಿಗೆ ದ್ರೋಹವನ್ನಾಚರಿಸಲಾರೆ. ಬ್ರಹ್ಮರ್ಷಿಯೆ! ನೀನು ಬ್ರಾಹ್ಮಣನನ್ನು ವಧಿಸಲರ್ಹನಲ್ಲ.

೮. ಬ್ರಹ್ಮನು ತನ್ನಿಚ್ಛೆಯಿಂದ ಹೇಳಿದುದರಿಂದ ನೀನು ಬ್ರಹ್ಮರ್ಷಿಯಾಗಿರುವೆ. ವಸಿಷ್ಠನು ತಾನೇ ಬ್ರಹ್ಮರ್ಷಿಯಾಗಿರುವನು. ಆದುದರಿಂದ ಸಿಟ್ಟು ಮಾಡಬೇಡ.

೯. ಮನಸ್ಸಿನಿಂದಲೂ ಬ್ರಾಹ್ಮಣನ ವಧೆಯನ್ನು ಆಲೋಚಿಸಿದವನು ತಪ್ತಕೃಚ್ಛ್ರದಿಂದ ಶುದ್ಧನಾಗುವನೆಂದು ಸ್ವಾಯಂಭುವ ಮನುವು ಹೇಳಿರುವನು.

೧೦. ಬ್ರಾಹ್ಮಣನ ವಧೆಯನ್ನು ಮಾತಿನಿಂದ ಹೇಳಿದವನು ಚಾಂದ್ರಾಯಣದಿಂದ ಶುದ್ಧನಾಗುವನೆಂದು ಮನುವು ಹೇಳಿದ್ದಾನೆ.

೧೧. ಆದುದರಿಂದ ನೀನು ವಸಿಷ್ಠನಿಗಾಗಿ ಹೇಳಿದ ಮಾತನ್ನು ನಾನು ನಡೆಸಲಾರೆ. ನಿನಗಿಷ್ಟಬಂದಂತೆ ಮಾಡು."

೧೨. ದ್ವಿಜವರ್ಯರೆ! ಆ ಮಾತನ್ನು ಕೇಳಿ ವಿಶ್ವಾಮಿತ್ರನು ಕುಪಿತನಾಗಿ ಶ್ರೇಷ್ಠವಾದ ಆ ನದಿಯನ್ನು ಶಪಿಸಿದ ಬಗೆಯನ್ನು ಹೇಳುವೆನು ಕೇಳಿರಿ.

ಯಸ್ಮಾತ್ಪಾಪೇ ವಚೋ ಮಹ್ಯಂ ನ ಕೃತಂ ಕುನದಿ ತ್ವಯಾ ।
ತಸ್ಮಾದ್ರಕ್ತಪ್ರವಾಹಸ್ತೇ ಜಲಜೋಽಯಂ ಭವಿಷ್ಯತಿ ॥ ೧೩ ॥
ಏವಮುಕ್ತ್ವಾ ಕರಾತ್ತೋಯಂ ಸಪ್ತವಾರಾಭಿಮಂತ್ರಿತಂ ।
ಚಿಕ್ಷೇಪಾಥ ಜಲೇ ತಸ್ಯಾಃ ಕ್ರೋಧಸಂರಕ್ತಲೋಚನಃ ॥ ೧೪ ॥
ತತಶ್ಚ ತತ್ಕ್ಷಣಾಜ್ಜಾತಂ ತತ್ತೋಯಂ ರುಧಿರಂ ದ್ವಿಜಾಃ ।
ಸಾರಸ್ವತಂ ಸುಪುಣ್ಯಂ ಚ ಯದಾಸೀಚ್ಛಂಖಸನ್ನಿಭಂ ॥ ೧೫ ॥
ಏತಸ್ಮಿನ್ನಂತರೇ ಪ್ರಾಪ್ತಾ ಭೂತಪ್ರೇತ ನಿಶಾಚರಾಃ ।
ಪೀತ್ವಾ ಪೀತ್ವಾ ಪ್ರನೃತ್ಯಂತಿ ಗಾಯಂತಿ ಚ ಹಸಂತಿ ಚ ॥ ೧೬ ॥
ಯೇ ತತ್ರ ತಾಪಸಾಃ ಕೇಚಿತ್ತಟೇ ತಸ್ಯಾ ವ್ಯವಸ್ಥಿತಾಃ ।
ತೇ ಸರ್ವೇಽಪಿ ಚ ತಾಂ ತ್ಯಕ್ತ್ವಾ ದೂರದೇಶಂ ಸಮಾಶ್ರಿತಾಃ ॥ ೧೭ ॥
ಬಹಿರ್ವಾಸಾಶ್ಚ ಯೇ ತತ್ರ ನಾಗರಾಃ ಸಮವಸ್ಥಿತಾಃ ।
ಚಂಡಶರ್ಮ ಪ್ರಭೃತಯಸ್ತೇಽಪಿ ಯಾತಾಃ ಸುದೂರತಃ ॥ ೧೮ ॥
ವಸಿಷ್ಠೋಽಪಿ ಮುನಿಶ್ರೇಷ್ಠೋ ಜಗಾಮಾರ್ಬುದಪರ್ವತಂ ।
ವಿಶ್ವಾಮಿತ್ರಸ್ತು ವಿಪ್ರರ್ಷಿಶ್ಚಮತ್ಕಾರಪುರಂ ಗತಃ ॥ ೧೯ ॥

---

೧೩. "ಎಲೈ ಪಾಪಿಷ್ಠವಾದ ದುಷ್ಟನದಿಯೆ! ನೀನು ನನ್ನ ಮಾತನ್ನು ನಡೆಸದಕಾರಣ ನಿನ್ನ ನೀರಿನ ಪ್ರವಾಹವು ರಕ್ತಮಯವಾಗಲಿ" ಎಂದು ಶಪಿಸಿದನು.

೧೪. ಆ ಮುನಿಯು ಹೀಗೆ ಹೇಳಿ ಕ್ರೋಧದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಕೈಯಲ್ಲಿ ನೀರನ್ನು ತೆಗೆದುಕೊಂಡು ಏಳು ಸಾರಿ ಅಭಿಮಂತ್ರಿಸಿ ಅದರ ನೀರಿನಲ್ಲಿ ಹಾಕಿದನು.

೧೫. ಕೂಡಲೆ ಪುಣ್ಯಕರವೂ, ಶಂಖದಂತೆ ಬೆಳ್ಳಗೂ ಇರುವ ಆ ಸರಸ್ವತೀ ನದಿಯ ನೀರು ರಕ್ತವಾಯಿತು.

೧೬. ಇಷ್ಟರಲ್ಲಿ ಭೂತ, ಪ್ರೇತ, ರಾಕ್ಷಸರು ಅಲ್ಲಿಗೆ ಬಂದು ಆ ರಕ್ತವನ್ನು ಕುಡಿದು ಕುಣಿದರು, ಹಾಡಿದರು, ನಕ್ಕರು.

೧೭. ಆ ನದಿಯ ತೀರದಲ್ಲಿ ನಿವಾಸಿಸುತ್ತಿದ್ದ ತಾಪಸರು ಅದನ್ನು ತ್ಯಜಿಸಿ ದೂರದೇಶಕ್ಕೆ ತೆರಳಿದರು.

೧೮. ಅದರ ಹೊರಗಡೆ ವಾಸಮಾಡುತ್ತಿದ್ದ ಚಂಡಶರ್ಮನೇ ಮೊದಲಾದ ನಾಗರರೂ ದೂರ ಹೋದರು.

೧೯. ವಸಿಷ್ಠ ಮುನಿವರ್ಯನು ಅರ್ಬುದ ಪರ್ವತಕ್ಕೆ ಹೋದನು. ವಿಶ್ವಾಮಿತ್ರನು ಚಮತ್ಕಾರಪುರಕ್ಕೆ ತೆರಳಿದನು.

ಹಾಟಕೇಶ್ವರಜೇ ಕ್ಷೇತ್ರಂ ಯತ್ಸ್ಥಿತಂ ವಿಪ್ರಸಂಕುಲಂ ।
ತತ್ರಾಶ್ರಮಪದಂ ಕೃತ್ವಾ ತಪಸ್ತೇಪೇ ಸುದಾರುಣಂ ॥ ೨೦ ॥
ಯೇನ ಸೃಷ್ಟಿಕ್ಷಮೋ ಜಾತಃ ಸ್ಪರ್ಧತೇ ಬ್ರಹ್ಮಣಾ ಸಹ ।
ಏತದ್ವಃ ಸರ್ವಮಾಖ್ಯಾತಂ ಯಥಾ ಸಾರಸ್ವತಂ ಜಲಂ ॥ ೨೧ ॥
ರುಧಿರತ್ವಮನುಪ್ರಾಪ್ತಂ ವಿಶ್ವಾಮಿತ್ರಸ್ಯ ಶಾಪತಃ ।
ಚಂಡಶರ್ಮಾದಯೋ ವಿಪ್ರಾ ಯಥಾ ದೇಶಾಂತರಂ ಗತಾಃ ॥ ೨೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಸರಸ್ವತೀ ಶಾಪವೃತ್ತಾಂತವರ್ಣನಂ" ನಾಮ
ದ್ವಿಸಪ್ತತ್ಯುತ್ತರಶತತಮೋಽಧ್ಯಾಯಃ

---

೨೦. ಅವನು ಹಾಟಕೇಶ್ವರಕ್ಷೇತ್ರದಲ್ಲಿರುವ ಬ್ರಾಹ್ಮಣಾಗ್ರಹಾರದ ಬಳಿ ಆಶ್ರಮವನ್ನು ರಚಿಸಿ ದಾರುಣ ತಪವನ್ನಾಚರಿಸಿದನು.

೨೧–೨೨. ಅವನು ಅದರಿಂದ ಸೃಷ್ಟಿಮಾಡಲು ಸಮರ್ಥನಾಗಿ ಬ್ರಹ್ಮನೊಡನೆ ಸ್ಪರ್ಧಿಸಿದನು. ಸಾರಸ್ವತದ ನೀರು ವಿಶ್ವಾಮಿತ್ರನ ಶಾಪದಿಂದ ಹೇಗೆ ರಕ್ತವಾಯಿತು? ಚಂಡಶರ್ಮಾದಿ ಬ್ರಾಹ್ಮಣರು ಹೇಗೆ ದೇಶಾಂತರಕ್ಕೆ ಹೋದರೆಂಬುದನ್ನು ಸಂಪೂರ್ಣವಾಗಿ ನಿಮಗೆ ಹೇಳಿದ್ದೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸರಸ್ವತೀ ಶಾಪವೃತ್ತಾಂತವರ್ಣನ"ವೆಂಬ
ನೂರೆಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ

### ಸಾಭ್ರಮುತ್ಯುತ್ಪತ್ತಿವರ್ಣನಂ

ಋಷಯ ಊಚುಃ :—

**ಅಹೋ ಬತ ಮಹಾಶ್ಚರ್ಯಂ ವಿಶ್ವಾಮಿತ್ರಸ್ಯ ಸನ್ಮುನೇಃ ।**
**ಮಂತ್ರಪಭಾವತೋ ಯೇನ ತತ್ತೋಽಯಂ ರುಧಿರೀಕೃತಂ ॥ ೧ ॥**
**ತತಃ ಪ್ರಭೃತಿ ಸಂಪ್ರಾಪ್ತಂ ಕಥಂ ತೋಽಯಂ ಪ್ರಕೀರ್ತಯ ।**
**ಸರಸ್ವತ್ಯಾ ಮಹಾಭಾಗ ಸರ್ವಂ ವಿಸ್ತರತೋ ವದ ॥ ೨ ॥**

ಸೂತ ಉವಾಚ :—

**ಬಹುಕಾಲಂ ಪ್ರವಾಹಃ ಸ ಸರಸ್ವತ್ಯಾ ದ್ವಿಜೋತ್ತಮಾಃ ।**
**ಮಹಾನ್ರಕ್ತಮಯೋ ಜಾತೋ ಭೂತರಾಕ್ಷಸಸೇವಿತಃ ॥ ೩ ॥**
**ಕಸ್ಯಚಿತ್ತ್ವಥ ಕಾಲಸ್ಯ ವಸಿಷ್ಠೋ ಮುನಿಸತ್ತಮಃ ।**
**ಅರ್ಬುದಸ್ಥಸ್ತಯಾ ಪ್ರೋಕ್ತೋ ದೀನಯಾ ದುಃಖಯುಕ್ತಯಾ ॥ ೪ ॥**
**ತವಾರ್ಥಾಯ ಮುನೇ ಶಪ್ತಾ ವಿಶ್ವಾಮಿತ್ರೇಣ ಕೋಪತಃ ।**
**ರುಧಿರೌಘವಹಾ ಜಾತಾ ತಪಸ್ವಿಜನ ವರ್ಜಿತಾ ॥ ೫ ॥**

---

## ಕನ್ನಡದ ಅನುವಾದ

### ಸಾಭ್ರಮುತ್ಯುತ್ಪತ್ತಿವರ್ಣನ

೧. ಋಷಿಗಳು ಹೇಳುತ್ತಾರೆ :—ವಿಶ್ವಾಮಿತ್ರ ಮುನಿಯು ಮಂತ್ರಪ್ರಭಾವದಿಂದ ಆ ಸರಸ್ವತೀ ನದಿಯ ನೀರು ರಕ್ತವಾದುದು ಆಶ್ಚರ್ಯವನ್ನುಂಟುಮಾಡಿದೆ.

೨. ಮಹಾತ್ಮನೆ! ಅನಂತರ ಆ ಸರಸ್ವತೀ ನದಿಯು ಶುದ್ಧ ಜಲವನ್ನು ಹೇಗೆ ಪಡೆಯಿತೆಂಬುದನ್ನು ವಿಸ್ತಾರವಾಗಿ ನಮಗೆ ಹೇಳು.

೩. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಸರಸ್ವತೀ ನದಿಯ ಪ್ರವಾಹವು ಬಹಳಕಾಲ ರಕ್ತಮಯವೂ, ರಾಕ್ಷಸರಿಂದ ಸೇವಿಸಲ್ಪಟ್ಟದ್ದೂ ಆಗಿದ್ದಿತು.

೪. ಒಂದಾನೊಂದು ದಿನ ದೀನಳೂ, ದುಃಖಗೊಂಡವಳೂ ಆದ ಸರಸ್ವತೀ ನದಿಯು ಅರ್ಬುದ ಪರ್ವತದಲ್ಲಿ ವಾಸಮಾಡುತ್ತಿರುವ ವಸಿಷ್ಠಮುನಿಯನ್ನು ಕುರಿತು ಹೀಗೆಂದಳು.

೫. ಮುನಿಯೆ! ನಿನಗೋಸ್ಕರ ವಿಶ್ವಾಮಿತ್ರನು ನನ್ನನ್ನು ಶಪಿಸಿದನು. ಅದರಿಂದ ನಾನು ತಪಸ್ವಿಗಳಿಂದ ತ್ಯಜಿಸಲ್ಪಟ್ಟು ರಕ್ತಪ್ರವಾಹವುಳ್ಳವಳಾದೆನು.

ತಸ್ಮಾತ್ಕುರು ಪ್ರಸಾದಂ ಮೇ ಯಥಾ ಸ್ಯಾತ್ಸಲಿಲಂ ಪುನಃ ।
ಪ್ರವಾಹೇ ಮಮ ವಿಪ್ರೇಂದ್ರ ಪ್ರಯಾತಿ ರುಧಿರಂ ಕ್ಷಯಂ ॥ ೬ ॥
ತ್ರೈಲೋಕ್ಯಕರಣೇ ವಿಪ್ರ ಸಂಕ್ಷಯೇ ವಾ ಸ್ಥಿತೌ ಹಿ ವಾ ।
ನಾಶಕ್ತಿರ್ವಿದ್ಯತೇ ಕಾಚಿತ್ತವ ಸರ್ವಮುನೀಶ್ವರ ॥ ೭ ॥
ವಸಿಷ್ಠ ಉವಾಚ :—
ತಥಾ ಭದ್ರೇ ಕರಿಷ್ಯಾಮಿ ಯಥಾಸ್ಯಾತ್ಸಲಿಲಂ ಪುನಃ ।
ಪ್ರವಾಹೇ ತವ ನಿರ್ಯಾತಿ ಸರ್ವಂ ರಕ್ತಂ ಪರಿಕ್ಷಯಂ ॥ ೮ ॥
ಏವಮುಕ್ತ್ವಾ ಸ ವಿಪ್ರರ್ಷಿರವತೀರ್ಯ ಧರಾತಲೇ ।
ಗತಃ ಪ್ಲಕ್ಷತರುಂ ಯಸ್ಮಾದವತೀರ್ಣಾ ಸರಸ್ವತೀ ॥ ೯ ॥
ಸಮಾಧಿಂ ತತ್ರ ಸಂಧಾಯ ನಿವಿಷ್ಟೋ ಧರಣೀತಲೇ ।
ಸಂಭ್ರಮಂ ಪರಮಂ ಗತ್ವಾ ವಿಶ್ವಾಮಿತ್ರಸ್ಯ ಚೋಪರಿ ॥ ೧೦ ॥
ವಾರುಣೇನ ತು ಮಂತ್ರೇಣ ವೀಕ್ಷಯನ್ ವಸುಧಾತಲಂ ।
ತತೋ ನಿರ್ಭಿದ್ಯ ವಸುಧಾಂ ಭೂರಿ ತೋಯಂ ವಿನಿರ್ಗತಂ ॥ ೧೧ ॥
ರಂಧ್ರದ್ವಯೇನ ವಿಪ್ರೇಂದ್ರಾ ಲೋಚನಾಭ್ಯಾಂ ನಿರೀಕ್ಷಣಾತ್ ।
ಏಕಸ್ಯ ಸಲಿಲಂ ಕ್ಷಿಪ್ರಂ ಯತ್ರ ಜಾತಾ ಸರಸ್ವತೀ ॥ ೧೨ ॥
ಪ್ಲಕ್ಷಮೂಲೇ ತತಸ್ತಸ್ಯ ವೇಗೇನಾಪಹೃತಂ ಬಲಾತ್ ।
ತದ್ರಕ್ತಂ ತೇನ ಸಂಪೂರ್ಣಂ ತತಸ್ತೇನ ಮಹಾನದೀ ॥ ೧೩ ॥

---

೬. ಆದುದರಿಂದ ನನ್ನ ಪ್ರವಾಹದಲ್ಲಿ ರಕ್ತವು ಕ್ಷಯಿಸಿ ಶುದ್ಧ ಜಲವು ಹೆಚ್ಚುವಂತೆ ಅನುಗ್ರಹಿಸು.

೭. ಮುನಿವರ! ನಿನಗೆ ಮೂರು ಲೋಕವನ್ನು ಸೃಷ್ಟಿಸುವುದಕ್ಕೂ, ನಾಶಗೊಳಿಸುವುದಕ್ಕೂ, ಪಾಲಿಸುವುದಕ್ಕೂ ಶಕ್ತಿಯಿರುವುದು.

೮. ವಸಿಷ್ಠನು ಹೇಳುತ್ತಾನೆ:—ಮಂಗಳಕರಳೆ! ನಿನ್ನ ಪ್ರವಾಹದಲ್ಲಿ ರಕ್ತವು ಕ್ಷಯಿಸಿ ಮರಳಿ ಶುದ್ಧೋದಕವು ಬರುವಂತೆ ಮಾಡುವೆನು.

೯. ವಸಿಷ್ಠ ಮುನಿಯು ಹೀಗೆಂದು ಭೂಮಿಗೆ ಇಳಿದು ಸರಸ್ವತೀ ನದಿಯು ಉದ್ಭವಿಸಿದ ಪ್ಲಕ್ಷತರುವಿನೆಡೆಗೆ ಹೋದನು.

೧೦–೧೩. ಅಲ್ಲಿ ನೆಲದಮೇಲೆ ಕುಳಿತು ಅವನು ವಿಶ್ವಾಮಿತ್ರನ ಮೇಲೆ ಕುಪಿತನಾಗಿ ವಾರುಣಮಂತ್ರದಿಂದ ಧ್ಯಾನಿಸಿ ಭೂಮಿಯನ್ನು ನೋಡಿದನು. ಅವನು ಎರಡು ಕಣ್ಣುಗಳಿಂದ ನೋಡಿದ್ದರಿಂದ ನೀರು ಭೂಮಿಯನ್ನು ಸೀಳಿಕೊಂಡು ಎರಡು ರಂಧ್ರದಿಂದ ಹೊರಟಿತು. ಒಂದರ ನೀರು ತ್ವರೆಯಾಗಿ ಸರಸ್ವತೀ ನದಿಯು ಹುಟ್ಟಿದ ಪ್ಲಕ್ಷವೃಕ್ಷದ ಬುಡದಲ್ಲಿ ರಕ್ತವನ್ನೆಲ್ಲ ಹೀರಿತು. ಅದರಿಂದ ನದಿಯು ನೀರಿನಿಂದ ತುಂಬಿತು.

**ದ್ವಿತೀಯಸ್ತು ಪ್ರವಾಹೋ ಯಃ ಸಂಭ್ರಮಾತ್ತಸ್ಯ ನಿರ್ಗತಃ ।**
**ಸಾ ಚ ಸಾಭ್ರಮತೀ ನಾಮ ನದೀ ಜಾತಾ ಧರಾತಲೇ ॥ ೧೪ ॥**
**ಏವಂ ಪ್ರಕೃತಿಮಾಪನ್ನಾ ಭೂಯ ಏವ ಸರಸ್ವತೀ ।**
**ಯತ್ಪೃಷ್ಟೋಽಸ್ಮಿ ಮಹಾಭಾಗಾಃ ಸರಸ್ವತ್ಯಾಃ ಕೃತೇ ದ್ವಿಜಾಃ ॥ ೧೫ ॥**
**ಏತತ್ಸಾರಸ್ವತಂ ನಾಮ ವ್ಯಾಖ್ಯಾನಮತಿಬುದ್ಧಿದಂ ।**
**ಯಃ ಪಠೇಚ್ಛೃಣುಯಾದ್ವಾಽಪಿ ಮತಿಸ್ತಸ್ಯ ವಿವರ್ಧತೇ ।**
**ಸರಸ್ವತ್ಯಾಃ ಪ್ರಸಾದೇನ ಸತ್ಯಮೇತನ್ಮಯೋದಿತಂ ॥ ೧೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಸಾಭ್ರಮತ್ಯುತ್ಪತ್ತಿವರ್ಣನಂ" ನಾಮ**
**ತ್ರಿಸಪ್ತತ್ಯುತ್ತರಶತತಮೋಽಧ್ಯಾಯಃ**

---

೧೪. ಎರಡನೆಯ ಪ್ರವಾಹವು ಆ ಮುನಿಯ ಸಂಭ್ರಮದಿಂದ ಹೊರಟದ್ದರಿಂದ ಭೂಮಿಯಲ್ಲಿ ಸಾಭ್ರಮತೀ ಎಂಬ ನದಿಯಾಯಿತು.

೧೫–೧೬. ಹೀಗೆ ಆ ಸರಸ್ವತೀ ನದಿಯು ಮರಳಿ ಮೊದಲಿನಂತೆಯೇ ಆಯಿತು. ಅಯ್ಯಾ ದ್ವಿಜರೆ! ನೀವು ಕೇಳಿದ ಸರಸ್ವತೀ ನದಿಯ ಅತ್ಯಂತ ಬುದ್ಧಿಯನ್ನುಂಟುಮಾಡುವ ಈ ಸಾರಸ್ವತ ವ್ಯಾಖ್ಯಾನವನ್ನು ಪಠಿಸಿದವನ ಅಥವಾ ಕೇಳಿದವನ ಬುದ್ಧಿಯು ಸರಸ್ವತಿಯ ಅನುಗ್ರಹದಿಂದ ಅಭಿವೃದ್ಧಿಗೊಳ್ಳುವುದು. ನಾನು ಹೇಳಿರುವ ಈ ಮಾತು ನಿಜವಾದುದು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ**
**ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ**
**ಮಾಹಾತ್ಮ್ಯದಲ್ಲಿ "ಸಾಭ್ರಮತ್ಯುತ್ಪತ್ತಿವರ್ಣನ"ವೆಂಬ**
**ನೂರೆಪ್ಪತ್ತಮೂರನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

## ಪಿಪ್ಪಲಾದೋತ್ಪತ್ತಿವರ್ಣನಂ

**ಸೂತ ಉವಾಚ:—**

ತಥಾಽನ್ಯದಪಿ ವೋ ವಚ್ಮಿ ಲಿಂಗಂ ಯತ್ತತ್ರ ಸಂಸ್ಥಿತಂ ।
ಸ್ಥಾಪಿತಂ ಪಿಪ್ಪಲಾದೇನ ಕಂಸಾರೇಶ್ವರಮಿತ್ಯಹೋ ॥ ೧ ॥
ಯಸ್ಮಿನ್ ದೃಷ್ಟೇ ತು ಲೋಕಾನಾಂ ಪಾಪಂ ಯಾತಿ ದಿನೋದ್ಭವಂ ।
ನತೇ ಷಾಣ್ಮಾಸಿಕಂ ಚೈವ ಪೂಜಿತೇ ವರ್ಷಸಂಭವಂ ॥ ೨ ॥

**ಋಷಯ ಊಚುಃ:—**

ಪಿಪ್ಪಲಾದೇನ ಯಲ್ಲಿಂಗಂ ಸ್ಥಾಪಿತಂ ಸೂತನಂದನ ।
ಕಂಸಾರೇಶ್ವರಮಿತ್ಯುಕ್ತಂ ಕಸ್ಮಾತ್ತಚ್ಚ ಬ್ರವೀಹಿ ನಃ ॥ ೩ ॥
ಕ ಏಷ ಪಿಪ್ಪಲಾದಸ್ತು ತಸ್ಯ ಪುತ್ರೋ ವದಸ್ವ ನಃ ।
ಕಿಮರ್ಥಂ ಸ್ಥಾಪಿತಂ ಲಿಂಗಂ ಕ್ಷೇತ್ರೇ ತತ್ರ ಮಹಾತ್ಮನಾ ॥ ೪ ॥

**ಸೂತ ಉವಾಚ:—**

ಪ್ರಶ್ನಭಾರೋ ಮಹಾನೇಷ ಭವದ್ಭಿಃ ಸಮುದಾಹೃತಃ ।
ತಥಾಽಪಿ ಕಥಯಿಷ್ಯಾಮಿ ನಮಸ್ಕೃತ್ವಾ ಸ್ವಯಂಭುವಂ ॥ ೫ ॥

---

## ಕನ್ನಡದ ಅನುವಾದ

### ಪಿಪ್ಪಲಾದೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ಹಾಗೆಯೇ ನಿಮಗೆ ಅಲ್ಲಿ ಪಿಪ್ಪಲಾದನು ಸ್ಥಾಪಿಸಿರುವ ಕಂಸಾರೇಶ್ವರ ಎಂಬ ಶಿವಲಿಂಗವನ್ನು ಹೇಳುವೆನು.

೨. ಆ ಪಾರಮೇಶ್ವರಲಿಂಗವನ್ನು ನೋಡಿದರೆ ಜನರ ಒಂದು ದಿನದ ಪಾಪವೂ, ನಮಸ್ಕಾರ ಮಾಡಿದರೆ ಆರು ತಿಂಗಳ ಪಾಪವೂ, ಪೂಜಿಸಿದರೆ ಒಂದು ವರ್ಷದ ಪಾಪವೂ ಪರಿಹಾರವಾಗುವುದು.

೩. ಋಷಿಗಳು ಹೇಳುತ್ತಾರೆ:—ಸೂತ! ಪಿಪ್ಪಲಾದನು ಸ್ಥಾಪಿಸಿದ ಆ ಲಿಂಗವು ಕಂಸಾರೇಶ್ವರವೆಂಬ ಹೆಸರನ್ನೇಕೆ ಪಡೆಯಿತು? ಅದನ್ನು ಹೇಳು.

೪. ಈ ಪಿಪ್ಪಲಾದನು ಯಾರು? ಯಾರ ಮಗ? ಈ ಮಹಾತ್ಮನು ಈ ಕ್ಷೇತ್ರದಲ್ಲಿ ಲಿಂಗವನ್ನೇಕೆ ಸ್ಥಾಪಿಸಿದನು? ನಮಗೆ ಹೇಳು.

೫. ಸೂತನು ಹೇಳುತ್ತಾನೆ:—ನೀವು ಕೇಳಿದ ಪ್ರಶ್ನೆಯ ಭಾರವು ಹೆಚ್ಚಾದುದು. ಆದರೂ ಬ್ರಹ್ಮನನ್ನು ನಮಸ್ಕರಿಸಿ ನಿಮಗೆ ಹೇಳುವೆನು.

ಯಾಜ್ಞವಲ್ಕ್ಯಸ್ಯ ಭಗಿನೀ ಕಂಸಾರೀತಿ ಚ ವಿಶ್ರುತಾ ।
ಕುಮಾರಬ್ರಹ್ಮಚರ್ಯೇಣ ತಪಸ್ತೇಪೇ ಸುದಾರುಣಂ ॥ ೬ ॥
ಯಾಜ್ಞವಲ್ಕ್ಯಾಶ್ರಮೇ ಪುಣ್ಯೇ ಬಾಂಧವೇನ ಸಮನ್ವಿತಾ ।
ಕಸ್ಮಿಚಿತ್ತ್ವಥ ಕಾಲಸ್ಯ ಯಾಜ್ಞವಲ್ಕ್ಯಸ್ಯ ಭೋ ದ್ವಿಜಾಃ ॥ ೭ ॥
ಚಸ್ಕಂದ ರೇತಃ ಸ್ವಪ್ನಾಂತೇ ದೃಷ್ಟ್ವಾ ಕಾಂಚಿದ್ವರಾಪ್ಸರಾಂ ।
ತಾರುಣ್ಯಭಾವಸಂಸ್ಥಸ್ಯ ತಪೋಯುಕ್ತಸ್ಯ ಸದ್ದ್ವಿಜಾಃ ॥ ೮ ॥
ರೇತಸಾ ತಸ್ಯ ಮಹತಾ ಪರಿಧಾನಂ ಪರಿಪ್ಲುತಂ ।
ತಚ್ಚ ತೇನ ಪರಿತ್ಯಕ್ತಂ ಪ್ರಭಾತೇ ಸಮುಪಸ್ಥಿತೇ ॥ ೯ ॥
ಕಂಸಾರಿಕಾಽಥ ಜಗ್ರಾಹ ಸ್ನಾನಾರ್ಥಂ ವಸನಂ ಚ ತತ್ ।
ಅಮೋಘ ರೇತಸಾ ಕ್ಲಿನ್ನಮಜಾನಂತೀ ದ್ವಿಜೋತ್ತಮಾಃ ॥ ೧೦ ॥
ಕುರ್ವಂತ್ಯಾ ಮಜ್ಜನಂ ತಸ್ಯಾ ಜಲಂ ವೀರ್ಯಸಮನ್ವಿತಂ ।
ಪ್ರವಿಷ್ಟಂ ಭಗಮಧ್ಯೇತು ಋತುಕಾಲ ಉಪಸ್ಥಿತೇ ॥ ೧೧ ॥
ತತೋ ಗರ್ಭಃ ಸಮಭವತ್ತಸ್ಯಾಸ್ತೂದರಮಧ್ಯಗಃ ।
ವೃದ್ಧಿಂ ಚಾಪ್ಯಗಮನ್ನಿತ್ಯಂ ಶುಕ್ಲಪಕ್ಷೇ ಯಥೋಡುರಾಟ್ ॥ ೧೨ ॥
ಸಾಽಪಿ ತಂ ಗರ್ಭಮಾದಾಯ ಸ್ವೋದರಸ್ಥಂ ತಪಸ್ವಿನೀ ।
ದುಃಖೇನ ಮಹತಾ ಯುಕ್ತಾ ಲಜ್ಜಯಾಽಥ ತದಾವೃತಾ ॥ ೧೩ ॥

---

೬–೮. ಯಾಜ್ಞವಲ್ಕ್ಯನ ಸಹೋದರಿಯಾದ ಕಂಸಾರೀ ಎಂಬುವಳು ಆ ಮುನಿಯ ಪವಿತ್ರವಾದ ಆಶ್ರಮದಲ್ಲಿ ಬಂಧುಗಳೊಡನೆ ಕುಮಾರಬ್ರಹ್ಮಚರ್ಯೆಯಿಂದ ದಾರುಣತಪಸ್ಸನ್ನು ಮಾಡಿದಳು. ಒಂದಾನೊಂದು ದಿನ ಯುವಕನೂ, ತಪಸ್ವಿಯೂ ಆದ ಯಾಜ್ಞವಲ್ಕ್ಯನು ಒಬ್ಬ ಅಪ್ಸರೆಯನ್ನು ನೋಡಿದ್ದರಿಂದ ಸ್ವಪ್ನದ ಅವಸಾನದಲ್ಲಿ ಅವನ ರೇತಸ್ಸು ಸ್ಖಲಿತವಾಯಿತು.

೯. ಅದರಿಂದ ಅವನ ಬಟ್ಟೆಯು ಒದ್ದೆಯಾದ್ದರಿಂದ ಮುನಿಯು ಬೆಳಗ್ಗೆ ಆ ಬಟ್ಟೆಯನ್ನು ಬಿಡಿಸಿಹಾಕಿದನು.

೧೦. ದ್ವಿಜವರ್ಯರೆ! ಬಳಿಕ ಕಂಸಾರಿಯು ಆ ಬಟ್ಟೆಯು ಮುನಿಯ ಸಫಲ ರೇತಸ್ಸಿನಿಂದ ಒದ್ದೆಯಾಗಿರುವುದನ್ನರಿಯದೆ ಸ್ನಾನಕ್ಕೋಸ್ಕರ ಅದನ್ನು ತೆಗೆದುಕೊಂಡಳು.

೧೧–೧೨. ಅವಳು ಆ ಬಟ್ಟೆಯನ್ನುಟ್ಟು ಸ್ನಾನಮಾಡುತ್ತಿರಲು ಋತುಕಾಲವಾದ್ದರಿಂದ ವೀರ್ಯದಿಂದ ಕೂಡಿದ ನೀರು ಅವಳ ಯೋನಿಯೊಳಗೆ ಸೇರಿ ಗರ್ಭಿಣಿಯಾದಳು. ಆ ಗರ್ಭವು ಪ್ರತಿದಿನವೂ ಶುಕ್ಲಪಕ್ಷದ ಚಂದ್ರನಂತೆ ವೃದ್ಧಿಯಾಯಿತು.

೧೩–೧೪. ಆ ಕಂಸಾರಿಯು ಹೊಟ್ಟೆಯಲ್ಲಿ ಆ ಗರ್ಭವನ್ನು ಧರಿಸಿ ದುಃಖ,

ಚಿಂತಯಾಮಾಸ ಸುಚಿರಂ ವಿಸ್ಮಯೇನ ಸಮನ್ವಿತಾ ।
ಗೋಪಾಯಂತೀ ತದಾತ್ಮಾನಂ ದರ್ಶನಂ ಯಾತಿ ನೋ ನೃಣಾಂ । ೧೪ ॥
ವ್ರತಚರ್ಯಾನಿಮಿಷಂ ಕೃತ್ವಾ ಸದಾ ರಹಸಿ ಸಂಸ್ಥಿತಾ ।
ಸಂಪ್ರಾಪ್ತೇ ದಶಮೇ ಮಾಸಿ ನಿಶೀಥೇ ಸಮುಪಸ್ಥಿತೇ ।
ತಸ್ಯಾಃ ಕುಮಾರಕೋ ಜಾತೋ ಬಾಲಾರ್ಕಸದೃಶದ್ಯುತಿಃ ॥ ೧೫ ॥
ಅಥ ಸಾ ತಂ ಸಮಾದಾಯ ಸೂಕ್ಷ್ಮವಸ್ತ್ರೇಣ ವೇಷ್ಟಿತಂ ।
ಕೃತ್ವಾ ಜಗಾಮ ಚಾಽರಣ್ಯಂ ಮನುಷ್ಯಪರಿವರ್ಜಿತಂ ।
ಅಶ್ರುಪೂರ್ಣೇಕ್ಷಣಾ ದೀನಾ ರುದಂತೀ ಗುಪ್ತಮೇವ ಚ ॥ ೧೬ ॥
ತತೋ ಗತ್ವಾ ಚ ಸಾಽಶ್ವತ್ಥಂ ವಿಜನೇ ಸುಮಹತ್ತರಂ ।
ತಸ್ಯಾಽಧಸ್ತಾದ್ವಿಮುಚ್ಯಾಽಥ ವಾಕ್ಯಮೇತದುವಾಚ ಹ ॥ ೧೭ ॥
ಅಶ್ವತ್ಥ ವಿಷ್ಣುರೂಪೋಽಸಿ ತ್ವಂ ದೇವೇಷು ಪ್ರತಿಷ್ಠಿತಃ ।
ತಸ್ಮಾದ್ರಕ್ಷಸ್ವ ಮೇ ಪುತ್ರಂ ಸರ್ವತಸ್ತ್ವಂ ವನಸ್ಪತೇ ॥ ೧೮ ॥
ಏಷ ತೇ ಶರಣಂ ಪ್ರಾಪ್ತೋ ಮಮ ಪುತ್ರಸ್ತು ಬಾಲಕಃ ।
ಪಾಪಾಯಾ ನಿರ್ದಯಾಯಾಶ್ಚ ತಸ್ಮಾದ್ರಕ್ಷಾಂ ಸಮಾಚರ । ೧೯ ॥
ಏವಮುಕ್ತ್ವಾ ರುದಿತ್ವಾ ಚ ಸುಚಿರಂ ಸಾ ತಪಸ್ವಿನೀ ।
ಜಗಾಮ ಸ್ವಾಶ್ರಮಂ ಪಶ್ಚಾದ್ಬಾಷ್ಪವ್ಯಾಕುಲಲೋಚನಾ ॥ ೨೦ ॥

---

ನಾಚಿಕೆ, ಆಶ್ಚರ್ಯ ಇವುಗಳಿಂದ ಕೂಡಿ ಮನುಷ್ಯರ ದೃಷ್ಟಿಗೆ ಬೀಳದಂತೆ ತನ್ನನ್ನು ಕಾಪಾಡಿಕೊಂಡು ಬಹಳ ಕಾಲ ಆಲೋಚಿಸಿದಳು.

೧೫. ಅವಳು ವ್ರತಮಾಡುವ ನೆಪದಿಂದ ಯಾವಾಗಲೂ ರಹಸ್ಯದಲ್ಲಿರುತ್ತ ಹತ್ತನೆಯ ತಿಂಗಳು ಬರಲು ಅರ್ಧರಾತ್ರಿಯ ವೇಳೆಯಲ್ಲಿ ಬಾಲಸೂರ್ಯನಂತೆ ಪ್ರಕಾಶಮಾನನಾದ ಬಾಲಕನನ್ನು ಹಡೆದಳು.

೧೬–೧೭. ಬಳಿಕ ಅವಳು ಆ ಶಿಶುವನ್ನು ಸಣ್ಣ ಬಟ್ಟೆಯಿಂದ ಸುತ್ತಿ ತೆಗೆದುಕೊಂಡು ಕಣ್ಣೀರನ್ನು ಸುರಿಸಿ ಗುಟ್ಟಾಗಿ ಅಳುತ್ತ ಮನುಷ್ಯರಿಲ್ಲದ ಕಾಡಿಗೆ ಹೋದಳು. ಅಲ್ಲಿ ಒಂದು ದೊಡ್ಡ ಅಶ್ವತ್ಥವೃಕ್ಷವನ್ನು ನೋಡಿ ಆ ಶಿಶುವನ್ನು ಅದರ ಕೆಳಗೆ ಮಲಗಿಸಿ ಹೀಗೆಂದಳು.

೧೮. "ಅಶ್ವತ್ಥ ! ನೀನು ದೇವತೆಗಳಲ್ಲಿ ಪ್ರಸಿದ್ಧನಾದ ವಿಷ್ಣುರೂಪನಾಗಿರುವೆ. ಆದುದರಿಂದ ನನ್ನ ಮಗನನ್ನು ಕಾಪಾಡು.

೧೯. ಪಾಪಿಯೂ, ನಿರ್ದಯಳೂ ಆದ ನನ್ನ ಪುತ್ರನು ನಿನ್ನನ್ನು ಮರೆ ಹೊಕ್ಕಿರುವನು. ಆದುದರಿಂದ ಇವನನ್ನು ಕಾಪಾಡು."

೨೦. ಆ ಕಂಸಾರಿಯು ಹೀಗೆ ಹೇಳಿ ಬಹಳ ಹೊತ್ತು ಅತ್ತು ಕಂಬನಿ ಸುರಿಸುತ್ತ ತನ್ನ ಆಶ್ರಮಕ್ಕೆ ಹೋದಳು.

ಯಾವದ್ರೋದಿತಿ ಸಾ ಮಾತಾ ತಸ್ಯಾಽಧಸ್ತಾದ್ವನಸ್ಪತೇಃ ।
ತಾವದಾಕಾಶಜಾ ವಾಣೀ ಸಂಜಾತಾ ಮೇಘನಿಃಸ್ವನಾ ॥ ೨೧ ॥
ಮಾ ತ್ವಂ ಶೋಕಂ ಕುರುಷ್ವಾಽಸ್ಯ ಬಾಲಕಸ್ಯ ಕೃತೇ ಶುಭೇ ।
ಏಷ ಶಾಪಾದುತಥ್ಯಸ್ಯ ಜ್ಯೇಷ್ಠಭ್ರಾತುರ್ಬೃಹಸ್ಪತಿಃ ।
ಅವತೀರ್ಣೋ ಧರಾಪೃಷ್ಠೇ ಯೋಗ್ಯತಾಂ ಸಮವಾಪ್ಸ್ಯತಿ ॥ ೨೨ ॥
ಏಷ ಚಾಥರ್ವಣಂ ವೇದಂ ಶತಕಲ್ಪಂ ಸುವಿಸ್ತರಂ ।
ಶತಭೇದಂ ಚ ನವಧಾ ಪಂಚಕಲ್ಪಂ ಕರಿಷ್ಯತಿ ॥ ೨೩ ॥
ಪಿಪ್ಪಲಸ್ಯ ತರೋರೇಷ ರಸಂ ಸಂಭಕ್ಷಯಿಷ್ಯತಿ ।
ಪಿಪ್ಪಲಾದ ಇತಿಖ್ಯಾತಸ್ತತೋ ಲೋಕೇ ಭವಿಷ್ಯತಿ ॥ ೨೪ ॥
ಯಾ ತ್ವಂ ವಿಸ್ಮಯಮಾಪನ್ನಾ ಪುರುಷೇಣ ವಿನಾ ಶಿಶುಃ ।
ಸಂಜಾತೋಽಯಂ ಮಮ ಸ್ತ್ರಾಂಶುಸ್ತತಸ್ತತ್ಕಾರಣಂ ಶೃಣು ॥ ೨೫ ॥
ಸ್ನಾನವಸ್ತ್ರಂ ಚ ತೇ ಭ್ರಾತೂ ರೇತಸಾ ಯತ್ಪರಿಪ್ಲುತಂ ।
ತತ್ತ್ವಯಾ ಋತುಕಾಲೇ ತು ಪರಿಧಾನಂ ಕೃತಂ ಶುಭೇ ॥ ೨೬ ॥
ಸ್ನಾನಕಾಲೇ ತು ತೋಯಾನಿ ರೇತೋದರಮಥಾಸ್ಪೃಶನ್ ।
ಅಮೋಘರೇತಸಾ ತೇನ ಪುತ್ರೋಽಯಂ ತವ ಸಂಸ್ಥಿತಃ ॥ ೨೭ ॥

---

೨೧. ಅವಳು ಆ ಮರದ ಕೆಳಗೆ ಅಳುತ್ತಿರುವಾಗ ಮೇಘಧ್ವನಿಯುಳ್ಳ ಆಕಾಶವಾಣಿಯು ಹೀಗೆ ಕೇಳಿಸಿತು.

೨೨. "ಮಂಗಳಕರಳೆ! ನೀನು ಈ ಬಾಲಕನಿಗಾಗಿ ಅಳಬೇಡ. ಬೃಹಸ್ಪತಿಯಾದ ಇವನು ಅಣ್ಣನಾದ ಉತಥ್ಯನ ಶಾಪದಿಂದ ಭೂಮಿಯಲ್ಲಿ ಅವತರಿಸಿದ್ದಾನೆ. ಇವನು ತನ್ನ ಯೋಗ್ಯತೆಯನ್ನು ತಾನು ಹೊಂದುವನು.

೨೩. ಇವನು ಶತಕಲ್ಪವಾಗಿ ನೂರು ಭೇದಗಳಿಂದ ವಿಸ್ತಾರಗೊಂಡಿರುವ ಅಥರ್ವಣ ವೇದವನ್ನು ಒಂಬತ್ತು ವಿಧವಾಗಿ ಐದು ಕಲ್ಪಗಳಿಂದ ವಿಸ್ತರಿಸುವನು.

೨೪. ಇವನು ಪಿಪ್ಪಲವೃಕ್ಷದ ರಸವನ್ನು ಭಕ್ಷಿಸುವುದರಿಂದ ಲೋಕದಲ್ಲಿ ಪಿಪ್ಪಲಾದನೆಂದು ವಿಖ್ಯಾತನಾಗುವನು.

೨೫. ಪುರುಷಸಂಬಂಧವಿಲ್ಲದೆ ಉದ ವಾದ ಈ ಶಿಶುವು ಹೇಗೆ ಹುಟ್ಟಿತೆಂದು ಆಶ್ಚರ್ಯಗೊಂಡಿರುವ ನೀನು ಹೀಗೆ ಆಗುವುದಕ್ಕೆ ಕಾರಣವನ್ನು ಕೇಳು.

೨೬. ನೀನು ಋತುಕಾಲದಲ್ಲಿ ನಿಮ್ಮ ಅಣ್ಣನ ರೇತಸ್ಸಿನಿಂದ ಒದ್ದೆಯಾದ ಸ್ನಾನದ ಬಟ್ಟೆಯನ್ನು ಉಟ್ಟುಕೊಂಡೆ.

೨೭. ಸ್ನಾನಕಾಲದಲ್ಲಿ ಆ ವಸ್ತ್ರದ ನೀರು ರೇತೋದರವನ್ನು ಮುಟ್ಟಿತು. ಸಫಲವಾದ ಆ ರೇತಸ್ಸಿನಿಂದ ನಿನಗೆ ಈ ಬಾಲಕನು ಹುಟ್ಟಿರುವನು.

ಏವಂ ಜ್ಞಾತ್ವಾ ಮಹಾಭಾಗೇ ಯದ್ಯುಕ್ತಂ ತತ್ಸಮಾಚರ ॥ ೨೮ ॥
ಸೂತ ಉವಾಚ:—
ತಚ್ಛ್ರುತ್ವಾ ದೇವಲೋಕಸ್ಯ ವಜ್ರಪಾತೋಪಮಂ ವಚಃ ।
ಹಾಹಾಕಾರಪರಾ ಭೂತ್ವಾ ನಿಪಪಾತ ಧರಾತಲೇ ॥ ೨೯ ॥
ಛಿನ್ನವೃಕ್ಷಲತಾ ಯದ್ವತ್ಪತಿತಾ ಸಾ ತಪಸ್ವಿನೀ ॥ ೩೦ ॥
ಚಿರಾಯಂತ್ಯಾಂ ತು ತಸ್ಯಾಂ ಸ ಯಾಜ್ಞವಲ್ಕ್ಯೋ ಮಹಾಮುನಿಃ ।
ಶೂನ್ಯಂ ತಮಾಶ್ರಮಂ ದೃಷ್ಟ್ವಾ ಪಪ್ರಚ್ಛಾನ್ಯಾನ್ಮುನೀಶ್ವರಾನ್ ॥ ೩೧ ॥
ಕ್ವ ಚ ಮೇ ಭಗಿನೀ ಯಾತಾ ಕಂಸಾರೀ ಸುತಪಸ್ವಿನೀ ।
ತಯಾ ವಿನಾಽದ್ಯಮೇ ಸರ್ವಂ ಶೂನ್ಯಮಾಶ್ರಮಮಂಡಲಂ ॥ ೩೨ ॥
ಆಚಖ್ಯೌ ತಾಪಸಃ ಕಶ್ಚಿದ್ಭಗಿನೀ ತೇ ಯಮೀಯಸೀ ।
ನಿಶ್ಚೇಷ್ಟಾ ಪತಿತಾ ಭೂಮಾವಶ್ವತ್ಥಸ್ಯ ಸಮೀಪತಃ ॥ ೩೩ ॥
ಮಯಾ ದೃಷ್ಟಾ ಮುನಿಶ್ರೇಷ್ಠ ತಾಂ ತ್ವಂ ಭಾವಯ ಮಾ ಚಿರಂ ।
ಅಥಾಽಸೌ ತ್ವರಯಾ ಯುಕ್ತಃ ಸಂಭ್ರಾಂತಸ್ತು ಪ್ರಧಾವಿತಃ ॥ ೩೪ ॥
ಯತ್ರ ಸಾ ಕಥಿತಾ ತೇನ ತಾಪಸೇನ ತಪಸ್ವಿನೀ ।
ವೀಕ್ಷತೇ ಯಾವತ್ತತ್ರಸ್ಥಾ ಶ್ವಸಮಾನಾ ವ್ಯವಸ್ಥಿತಾ ॥ ೩೫ ॥

---

೨೮. ಎಲೌ ಭಾಗ್ಯವಂತಳೆ! ಇದನ್ನರಿತು ಯುಕ್ತವಾದ ಕಾರ್ಯವನ್ನಾಚರಿಸು.''

೨೯–೩೦. ಸೂತನು ಹೇಳುತ್ತಾನೆ:—ಆ ತಪಸ್ವಿನಿಯು ದೇವಲೋಕದ ವಜ್ರಪಾತಕ್ಕೆ ಸರಿಯಾದ ಆ ಮಾತನ್ನು ಕೇಳಿ ಅಯ್ಯೋ! ಎಂದು ಕೂಗುತ್ತ ಮರವನ್ನು ಕಡಿದುದರಿಂದ ಆಶ್ರಯವಿಲ್ಲದ ಲತೆಯಂತೆ ನೆಲದಮೇಲೆ ಬಿದ್ದಳು.

೩೧–೩೨. ಯಾಜ್ಞವಲ್ಕ್ಯಮಹಾಮುನಿಯು, ಕಂಸಾರಿಯು ಬರುವುದನ್ನು ಸಾವಕಾಶಮಾಡಲು ಬರಿದಾದ ಆಶ್ರಮವನ್ನು ನೋಡಿ ಇತರ ಮುನಿಗಳನ್ನು ಕುರಿತು, ''ನನ್ನ ಸಹೋದರಿಯಾದ ಕಂಸಾರಿಯು ಎಲ್ಲಿಗೆ ಹೋದಳು? ಅವಳಿಲ್ಲದಿರುವುದರಿಂದ ನನ್ನೀ ಆಶ್ರಮವು ಶೂನ್ಯವಾಗಿರುವುದಲ್ಲ!'' ಎಂದು ಕೇಳಿದನು.

೩೩–೩೫. ಆಗ ಒಬ್ಬ ಮುನಿಯು, ''ನಿನ್ನ ತಂಗಿಯು ಅಶ್ವತ್ಥವೃಕ್ಷದ ಬಳಿಯಲ್ಲಿ ನೆಲದಮೇಲೆ ನಿಶ್ಚೇಷ್ಟಳಾಗಿ ಬಿದ್ದಿರುವಳು. ನಾನು ನೋಡಿದ್ದೇನೆ. ನೀನು ಶೀಘ್ರವಾಗಿ ಹೋಗಿ ಅವಳನ್ನು ನೋಡು'' ಎಂದನು. ಯಾಜ್ಞವಲ್ಕ್ಯನು ಸಂಭ್ರಾಂತನಾಗಿ ಆ ಮುನಿಯು ಹೇಳಿದ ಸ್ಥಳಕ್ಕೆ ಓಡಿಹೋಗಿ ನಿಟ್ಟುಸಿರು ಬಿಡುತ್ತಿರುವ ಆ ತನ್ನ ತಂಗಿಯನ್ನು ಕಂಡನು.

ಅಥ ತೋಯೇನ ಶೀತೇನ ಸೇಚಯಿತ್ವಾ ಮುಹುರ್ಮುಹುಃ ।
ದತ್ವಾ ಭೂಯೋಽಪಿ ವಾತಂ ಚ ಯಾವಚ್ಚಕ್ರೇ ಸಚೇತನಾಂ ।
ತಾವತ್ಕಾತ್ಯಾಯನೀ ಪ್ರಾಪ್ತಾ ಮೈತ್ರೇಯಿ ಚ ಸಸಂಭ್ರಮಂ ॥ ೩೬ ॥
ಕಿಮಿದಂ ಕಿಮಿದಂ ಜಾತಂ ನನಾಂದರ್ವದ ಮಾಚಿರಂ ॥ ೩೭ ॥
ಕಿಂ ವಾ ಸರ್ಪೇಣ ದಷ್ಟಾಽಸಿ ಸನ್ನಿಪಾತೇನ ದೂಷಿತಾ ।
ಕಿಂ ವಾ ಭೂತಗೃಹೀತಾಽಸಿ ಮಾಹೇಂದ್ರೇಣ ಜ್ವರೇಣ ವಾ ॥ ೩೮ ॥
ಅಥ ಸಾ ಚೇತನಾಂ ಲಬ್ಧ್ವಾ ಯಾಜ್ಞವಲ್ಕ್ಯಂ ಪುರಃ ಸ್ಥಿತಂ ।
ಭಾರ್ಯಯಾ ಸಹಿತಂ ದೃಷ್ಟ್ವಾ ವ್ರೀಡಯಾಽಸೂನ್ ಮುಮೋಚ ಹ ॥
ಅಥ ತಾಂ ಚ ಮೃತಾಂ ದೃಷ್ಟ್ವಾ ರುದಿತ್ವಾ ಚ ಚಿರಂ ದ್ವಿಜಾಃ ।
ಯಾಜ್ಞವಲ್ಕ್ಯಃ ಸಭಾರ್ಯಸ್ತು ದತ್ವಾ ವಹ್ನಿಂ ಚ ಶೋಕಧೃಕ್ ।
ಜಗಾಮ ಸ್ವಾಶ್ರಮಂ ಪಶ್ಚಾದ್ದತ್ವಾ ಚ ಸಲಿಲಾಂಜಲಿಂ ॥ ೪೦ ॥
ಸೋಽಪಿ ಬಾಲೋಽಥ ವವೃಧೇ ಪಿಪ್ಪಲಾಸ್ವಾದಪುಷ್ಟಿಧೃಕ್ ।
ಅಶ್ವತ್ಥಸ್ಯ ತಲೇ ತಸ್ಯ ವೃದ್ಧಿಂ ಯಾತಿ ಶನೈಃ ಶನೈಃ ॥ ೪೧ ॥
ಕಸ್ಯಚಿತ್ತ್ವಥ ಕಾಲಸ್ಯ ನಾರದೋ ಮುನಿಸತ್ತಮಃ ।
ತೀರ್ಥಯಾತ್ರಾಪ್ರಸಂಗೇನ ತೇನ ಮಾರ್ಗೇಣ ಚಾಗತಃ ॥ ೪೨ ॥

---

೩೬. ಅವನು ತಣ್ಣೀರಿನಿಂದ ಅವಳಿಗೆ ಶೈತ್ಯೋಪಚಾರ ಮಾಡಿ ಗಾಳಿಯನ್ನು ಬೀಸಿ ಜ್ಞಾನವನ್ನುಂಟುಮಾಡುವಷ್ಟರಲ್ಲಿ ಕಾತ್ಯಾಯನೀ, ಮೈತ್ರೇಯಿಯರೂ ಸಂಭ್ರಮದಿಂದ ಅಲ್ಲಿಗೆ ಬಂದರು.

೩೭. ಅವರು, "ನಾದಿನಿ! ಇದೇನು? ಶೀಘ್ರವಾಗಿ ಹೇಳು.

೩೮. ನಿನಗೆ ಸರ್ಪವು ಕಚ್ಚಿತೊ? ಸನ್ನಿಪಾತ ಜ್ವರದಿಂದ ಪೀಡಿತಳಾಗಿರುವೆಯೊ? ಭೂತ ಹಿಡಿದಿದೆಯೊ? ಮಾಹೇಂದ್ರ ಜ್ವರವು ಬಂದಿದೆಯೊ?" ಎಂದು ಕೇಳಿದರು.

೩೯. ಬಳಿಕ ಅವಳು ಜ್ಞಾನವನ್ನು ಹೊಂದಿ ಭಾರ್ಯೆಯೊಡನೆ ಮುಂದೆ ನಿಂತಿರುವ ಯಾಜ್ಞವಲ್ಕ್ಯನನ್ನು ಕಂಡು ನಾಚಿಕೆಯಿಂದ ಪ್ರಾಣವನ್ನು ಬಿಟ್ಟಳು.

೪೦. ಬಳಿಕ ಯಾಜ್ಞವಲ್ಕ್ಯನು ಅವಳು ಮಡಿದಿರುವುದನ್ನರಿತು ಬಹಳ ಹೊತ್ತು ಅತ್ತು ಪತ್ನಿಯೊಡನೆ ಅವಳಿಗೆ ಅಗ್ನಿಸಂಸ್ಕಾರ ಮಾಡಿ ತರ್ಪಣವನ್ನಿತ್ತು ತನ್ನ ಆಶ್ರಮಕ್ಕೆ ತೆರಳಿದನು.

೪೧. ಆ ಬಾಲಕನು ಅಶ್ವತ್ಥರಸವನ್ನು ಕುಡಿಯುತ್ತ ಪುಷ್ಟನಾಗಿ ಆ ಮರದ ಕೆಳಗೆ ಮೆಲ್ಲಮೆಲ್ಲನೆ ಬೆಳೆದನು.

೪೨. ಒಂದಾನೊಂದು ದಿನ ನಾರದ ಮುನಿವರ್ಯನು ತೀರ್ಥಯಾತ್ರಾ ನಿಮಿತ್ತದಿಂದ ಆ ದಾರಿಯಲ್ಲಿ ಬಂದನು.

ಸ ದೃಷ್ಟ್ವಾ ಬಾಲಕಂ ತತ್ರ ದ್ವಾದಶಾರ್ಕ ಸಮುಪ್ರಭಂ ।
ಏಕಾಕಿನಂ ವನೇ ಶೂನ್ಯೇ ಪಿಪ್ಪಲಾಸ್ವಾದತತ್ಪರಂ ।
ಪಪ್ರಚ್ಛ ವಿಸ್ಮಯಾವಿಷ್ಟ ಏಕಾಕೀ ಕೋ ಭವಾನಿಹ ॥ ೪೩ ॥
ವನೇ ಶೂನ್ಯೇ ಮಹಾರೌದ್ರೇ ಸಿಂಹವ್ಯಾಘ್ರಸಮಾಕುಲೇ ।
ಕ್ವ ತೇ ಮಾತಾ ಪಿತಾ ಚೈವ ಕಿಮರ್ಥಂ ಚೇಹ ತಿಷ್ಠಸಿ ॥ ೪೪ ॥
ನಿವತ್ಸ್ಯಸಿ ಕಥಂ ಚೈವ ಸರ್ವಂ ಮೇ ವಿಸ್ತರಾದ್ವದ ॥ ೪೫ ॥

ಪಿಪ್ಪಲಾದ ಉವಾಚ :—

ನಾಽಹಂ ಜಾನಾಮಿ ಪಿತರಂ ಮಾತರಂ ನ ಚ ಬಾಂಧವಂ ।
ನಾಽಪಿ ತ್ವಾಂ ಕೋಽತ್ರ ಚಾಽಯಾತೋ ಮಮ ಪಾರ್ಶ್ವೇ ತು ಸಾಂಪ್ರತಂ ॥

ಸೂತ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಚಿರಂ ಧ್ಯಾತ್ವಾ ಮುನೀಶ್ವರಃ ।
ತತಸ್ತಂ ಪ್ರಹಸನ್ ಪ್ರಾಹ ಜ್ಞಾತ್ವಾ ದಿವ್ಯೇನ ಚಕ್ಷುಷಾ ॥ ೪೭ ॥

ನಾರದ ಉವಾಚ :—

ಮಯಾ ಜ್ಞಾತೋಽಸಿ ವತ್ಸ ತ್ವಂ ಯಾಜ್ಞವಲ್ಕ್ಯಸ್ಯ ರೇತಸಾ ।
ದೈವಯೋಗಾತ್ಸಮುತ್ಪನ್ನೋ ಭಗಿನ್ಯಾ ಉದರೇ ಹೃತೌ ॥ ೪೮ ॥
ಉತಥ್ಯಶಾಪದೋಷೇಣ ದೇವಾಚಾರ್ಯೋ ಬೃಹಸ್ಪತಿಃ ।
ದೇವಕಾರ್ಯಸ್ಯ ಸಿದ್ಧ್ಯರ್ಥಂ ತಸ್ಮಾತ್ತಚ್ಛೃಣು ಕಾರಣಂ ॥ ೪೯ ॥

---

೪೩–೪೫. ಆ ಮುನಿಯು ದ್ವಾದಶಾದಿತ್ಯರಂತೆ ಕಾಂತಿಯುಳ್ಳವನೂ, ಒಬ್ಬಂಟಿಗನೂ, ಪಿಪ್ಪಲರಸವನ್ನು ಕುಡಿಯುವುದರಲ್ಲಿ ಆಸಕ್ತನೂ ಆದ ಆ ಬಾಲಕನನ್ನು ಕಂಡು ಆಶ್ಚರ್ಯಗೊಂಡು, "ಒಬ್ಬಂಟಿಗನಾಗಿರುವ ನೀನಾರು? ನಿನ್ನ ತಾಯಿ ತಂದೆಗಳಾರು? ಶೂನ್ಯವೂ, ಭಯಂಕರವೂ, ಸಿಂಹ ಹುಲಿಗಳಿಂದ ತುಂಬಿರುವುದೂ ಆದ ಈ ಕಾಡಿನಲ್ಲಿ ಏತಕ್ಕೆ ವಾಸಮಾಡುತ್ತಿರುವೆ? ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು" ಎಂದನು.

೪೬. ಪಿಪ್ಪಲಾದನು ಹೇಳುತ್ತಾನೆ:—ನಾನು ತಂದೆ ತಾಯಿಗಳನ್ನೂ, ಬಂಧುಗಳನ್ನೂ ತಿಳಿದಿಲ್ಲ. ನಿನ್ನನ್ನೂ ತಿಳಿಯೆ. ಈಗ ಇಲ್ಲಿ ನನ್ನ ಹತ್ತಿರಕ್ಕೆ ಬಂದ ನೀನು ಯಾರು?

೪೭. ಸೂತನು ಹೇಳುತ್ತಾನೆ:—ನಾರದನು ಅವನ ಆ ಮಾತನ್ನು ಕೇಳಿ ಬಹಳ ಹೊತ್ತು ಆಲೋಚಿಸಿ ದಿವ್ಯದೃಷ್ಟಿಯಿಂದ ತಿಳಿದು ನಗುತ್ತ ಅವನನ್ನು ಕುರಿತು ಇಂತೆಂದನು.

೪೮–೪೯. ನಾರದನು ಹೇಳುತ್ತಾನೆ:—"ಮಗು! ನಾನು ತಿಳಿದುಕೊಂಡೆನು. ನೀನು ಉತಥ್ಯನ ಶಾಪದೋಷದಿಂದ ಯಾಜ್ಞವಲ್ಕ್ಯನ ರೇತಸ್ಸಿನಿಂದ ಅವನ ತಂಗಿಯ ಹೊಟ್ಟೆಯಲ್ಲಿ ದೇವತೆಗಳ ಕಾರ್ಯಕ್ಕಾಗಿ ದೈವಯೋಗದಿಂದ ಹುಟ್ಟಿರುವ ದೇವಗುರುವಾದ ಬೃಹಸ್ಪತಿಯಾಗಿರುವೆ. ಆದುದರಿಂದ ಆ ಕಾರಣವನ್ನು ಕೇಳು.

ಅಥರ್ವವೇದೋ ಯಚ್ಛೈಷ ಶತಶಾಖೋ ವಿನಿರ್ಮಿತಃ ।
ಶತಕಲ್ಪಶ್ಚ ಗೂಢಾರ್ಥೋ ಭೂಪಾನಾಂ ಕಾರ್ಯಸಿದ್ಧಯೇ ॥ ೫೦ ॥
ನವಶಾಖಃ ಪಂಚಕಲ್ಪಸ್ತ್ವಯಾ ಕಾರ್ಯಃ ಸುಖಾವಹಃ ॥ ೫೧ ॥
ತವ ಮಾತ್ರಾ ಮಹಾಭಾಗ ರೇತಸಾ ಚ ಪರಿಪ್ಲುತಂ ।
ಯದ್ವಸ್ತ್ರಂ ಯಾಜ್ಞವಲ್ಕ್ಯಸ್ಯ ಪರಿಧಾನಂ ಕೃತಂ ಚ ಯತ್ ॥ ೫೨ ॥
ಭಗಿನ್ಯಾ ಸುತಪಸ್ವಿನ್ಯಾ ಸ್ನಾನಾರ್ಥಂ ನ ಚ ಕಾಮ್ಯಯಾ ।
ತದ್ರೇತೋ ಜಲಮಿಶ್ರಂ ತು ಭಗಮಧ್ಯೇ ವಿನಿರ್ಗತಂ ॥ ೫೩ ॥
ಅಮೋಘಂ ತೇನ ಸಂಭೂತಸ್ತ್ವಮತ್ರ ಜಗತೀ ತಲೇ ।
ಮಾತಾ ವೈ ಮೃತ್ಯುಮಾಪನ್ನಾ ಜ್ಞಾತ್ವೈವಂ ಲಜ್ಜಯಾ ತಯಾ ॥ ೫೪ ॥
ಚಮತ್ಕಾರಪುರೇ ತುಭ್ಯಂ ಮಾತುಲೋ ಜನಕಸ್ತಥಾ ।
ಸಂತಿಷ್ಠತೇ ಮಹಾಭಾಗ ತತ್ಪಾರ್ಶ್ವೇ ತ್ವಮಿತೋ ವ್ರಜ ॥ ೫೫ ॥
ಸಾಂಪ್ರತಂ ವ್ರತಕಾಲಸ್ತೇ ವರ್ಷಂ ಚೈವಾಷ್ಟಮಂ ಸ್ಥಿತಂ ।
ತಚ್ಛ್ರುತ್ವಾ ವಚನಂ ತಸ್ಯ ಲಜ್ಜಯಾಧೋಮುಖಃ ಸ್ಥಿತಃ ॥ ೫೬ ॥
ತತಶ್ಚಿರೇಣ ದೀನಂ ಸ ವಾಕ್ಯಮೇತದುವಾಚ ತಂ ।
ಕಿಂ ಮಯಾ ಪಾಪಮಾಖ್ಯಾಹಿ ಪೂರ್ವದೇಹಾಂತರೇ ಕೃತಂ ॥ ೫೭ ॥

---

೫೦–೫೧. ಶತಶಾಖೆಯಾಗಿಯೂ, ಶತಕಲ್ಪವಾಗಿಯೂ ನಿರ್ಮಿತವಾದ ಗೂಢಾರ್ಥವುಳ್ಳ ಅಥರ್ವವೇದವನ್ನು ನೀನು ರಾಜರ ಕಾರ್ಯಸಿದ್ಧಿಗಾಗಿ ಒಂಬತ್ತು ಶಾಖೆ ಐದುಕಲ್ಪವುಳ್ಳದನ್ನಾಗಿ ರಚಿಸಬೇಕು.

೫೨–೫೪. ಯಾಜ್ಞವಲ್ಕ್ಯನ ತಂಗಿಯಾದ ನಿನ್ನ ತಾಯಿಯು ಆ ಅಣ್ಣನ ರೇತಸ್ಸಿನಿಂದ ಒದ್ದೆಯಾದ ಬಟ್ಟೆಯನ್ನು ಸ್ನಾನಮಾಡಲು ಉಟ್ಟುಕೊಂಡಳು. ಕಾಮಾರ್ಥವಾಗಿ ಅಲ್ಲ. ಅಮೋಘವಾದ ಆ ರೇತಸ್ಸು ಜಲದೊಡನೆ ಬೆರೆತು ಅವಳ ಯೋನಿಯಲ್ಲಿ ಸೇರಿತು. ಆದರಿಂದ ನೀನು ಹುಟ್ಟಿದೆ. ಆ ನಿನ್ನ ತಾಯಿಯು ಇದನ್ನರಿತು ನಾಚಿಕೆಯಿಂದ ಮೃತಳಾದಳು.

೫೫. ಮಹಾತ್ಮನೆ! ಚಮತ್ಕಾರಪುರದಲ್ಲಿ ನಿನ್ನ ಸೋದರಮಾವನೂ, ತಂದೆಯೂ ಇದ್ದಾರೆ. ನೀನು ಇಲ್ಲಿಂದ ಅಲ್ಲಿಗೆ ಹೋಗು.

**೫೬.** ಈಗ ನಿನಗೆ ಎಂಟು ವರ್ಷವಾಗಿದೆ. ವ್ರತಕಾಲವು ಸಮಾಪಿಸಿದೆ." ಆ ಮುನಿಯ ಮಾತನ್ನು ಕೇಳಿ ಪಿಪ್ಪಲಾದನು ನಾಚಿಕೆಯಿಂದ ಮುಖವನ್ನು ತಗ್ಗಿಸಿದನು.

೫೭–೫೮. ಅನಂತರ ಅವನು ದೈನ್ಯದಿಂದ ಇಂತೆಂದನು. "ನಾನು ಹಿಂದಿನ ಜನ್ಮದಲ್ಲಿ ಏನು ಪಾಪವನ್ನು ಮಾಡಿದ್ದೇನೆ? ಏಕೆ ನನಗೆ ಇಂತಹ ನಿಂದ್ಯವಾದ

ಯೇನೇದಂ ಗರ್ಹಿತಂ ಜನ್ಮ ವಿಯೋಗೋ ಮಾತೃಸಂಭವಃ ।
ಪರಿತ್ಯಕ್ಷ್ಯಾಮಿ ಜೀವಂ ಸ್ವಂ ದುಃಖೇನಾಽನೇನ ಸನ್ಮುನೇ ॥ ೫೮ ॥
ನಾರದ ಉವಾಚ :—
ನ ತ್ವಯಾ ದುಷ್ಕೃತಂ ಕಿಂಚಿತ್ಪೂರ್ವದೇಹಾಂತರೇ ಕೃತಂ ।
ಪರಂ ಯೇನ ಸುಸಂಜಾತಂ ತವೇದಂ ವ್ಯಸನಂ ಶೃಣು ॥ ೫೯ ॥
ಜನ್ಮಸ್ಥೇನ ಭವಾಂಜಾತಃ ಶನಿನಾ ನಾಽತ್ರ ಸಂಶಯಃ ।
ತೇನಾಽವಸ್ಥಾಮಿಮಾಂ ಪ್ರಾಪ್ತೋ ನಾನ್ಯದಸ್ತಿ ಹಿ ಕಾರಣಂ ॥ ೬೦ ॥
ತಚ್ಛ್ರುತ್ವಾ ವಚನಂ ತಸ್ಯ ಕೋಪಸಂರಕ್ತಲೋಚನಃ ।
ಊರ್ಧ್ವಮಾಲೋಕಯಾಮಾಸ ಸಮುದ್ದಿಶ್ಯ ಶನೈಶ್ಚರಂ ॥ ೬೧ ॥
ತಸ್ಯ ದೃಷ್ಟಿನಿಪಾತೇನ ನ್ಯಪತತ್ಸತು ತತ್ಕ್ಷಣಾತ್ ।
ವಿಮಾನಾತ್ಸ್ವದ್ರವೇಃ ಪುತ್ರೋ ಯಯಾತಿರಿವ ನಾಹುಷಃ ॥ ೬೨ ॥
ಅಧೋವಕ್ತ್ರೋ ದ್ವಿಜಶ್ರೇಷ್ಠಾಃ ಪಿತುರಾದೇಶಮಾಶ್ರಿತಃ ।
ಬಾಲಭಾವೇಽಪಿ ತೇನೈವ ದಗ್ಧೌ ಪಾದೌ ತದಾ ರವೇಃ ॥ ೬೩ ॥
ಅಥ ತಂ ನಾರದಃ ಪ್ರಾಹ ಪತಮಾನಮಧೋಮುಖಂ ।
ಬಾಲ್ಯಭಾವಾದನೇನ ತ್ವಂ ಪಾತಿತೋಽಸಿ ಶನೈಶ್ಚರ ॥ ೬೪ ॥

---

ಜನ್ಮವೂ, ಮಾತೃವಿಯೋಗವೂ ಸಂಭವಿಸಿತು? ಮುನಿಯೆ! ಈ ದುಃಖದಿಂದ ನಾನು ಜೀವವನ್ನೇ ತ್ಯಜಿಸುವೆನು'' ಎಂದನು.

೫೯. ನಾರದನು ಹೇಳುತ್ತಾನೆ:—ನೀನು ಹಿಂದಿನ ಜನ್ಮದಲ್ಲಿ ಯಾವ ಪಾಪವನ್ನೂ ಮಾಡಲಿಲ್ಲ. ಆದರೆ ನಿನಗೆ ಯಾವುದರಿಂದ ಈ ದುಃಖವೊದಗಿತು ಎಂಬುದನ್ನು ಕೇಳು.

೬೦. ಶನಿಯು ಜನ್ಮಸ್ಥಾನದಲ್ಲಿರುವಾಗ ನೀನು ಹುಟ್ಟಿರುವುದರಿಂದ ಇಂತಹ ಅವಸ್ಥೆಯನ್ನು ಹೊಂದಿರುವೆ. ಬೇರೆ ಕಾರಣವಿಲ್ಲ.

೬೧. ಅವನು ನಾರದನ ಆ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ ಶನಿಯನ್ನುದ್ದೇಶಿಸಿ ಮೇಲಕ್ಕೆ ನೋಡಿದನು.

೬೨—೬೩. ಆ ಬಾಲಕನ ನೋಟದಿಂದ ರವಿತನಯನಾದ ಶನೈಶ್ಚರನು ಕೂಡಲೆ ತನ್ನ ವಿಮಾನದಿಂದ ನಹುಷನ ಮಗನಾದ ಯಯಾತಿಯಂತೆ ತಂದೆಯ ಅಪ್ಪಣೆಯಿಂದ ಕೆಳಮುಖನಾಗಿ ಬಿದ್ದನು. ಅವನು ಬಾಲ್ಯದಲ್ಲಿಯೇ ತಂದೆಯಾದ ಸೂರ್ಯನ ಪಾದಗಳನ್ನು ಸುಟ್ಟಿದ್ದನು.

೬೪, ಬಳಿಕ ನಾರದ ಮುನಿಯು ಕೆಳಮುಖವಾಗಿ ಬೀಳುತ್ತಿರುವ ಶನೈಶ್ಚರನನ್ನು ಕುರಿತು ಹೀಗೆಂದನು. ''ಶನೈಶ್ಚರ! ಈ ಬಾಲಕನು ಬಾಲ್ಯದಿಂದ ನಿನ್ನನ್ನು ಕೆಡವಿರುವನು.

ತಸ್ಮಾನ್ನಾ ವೀಕ್ಷಯಸ್ವೈನಂ ಭವಿಷ್ಯತಿ ಪ್ರಕೋಪಭಾಕ್ ।
ಮಾ ಪತಸ್ವ ತಥಾ ಭೂಮೌ ಬಲಾನ್ಮದ್ವಾಕ್ಯ ಸಂಭವಾತ್ ॥ ೬೫ ॥
ಸ್ತಂಭಯಿತ್ವಾ ತಥಾಪ್ಯೇವಂ ಗಗನಸ್ಥಂ ಶನೈಶ್ಚರಂ ।
ತತಃ ಪ್ರೋವಾಚ ತಂ ಬಾಲಂ ಪಿಪ್ಪಲಾದಂ ಮುನೀಶ್ವರಃ ॥ ೬೬ ॥
ಮಾ ಕೋಪಂ ಕುರುಬಾಲ ತ್ವಮೇಷ ಸೂರ್ಯಸುತೋ ಗ್ರಹಃ ।
ದೇವಾನಾಮಪಿ ಪೀಡಾಂ ಚ ಕುರುತೇಽಷ್ಟಮರಾಶಿಗಃ ॥ ೬೭ ॥
ಜನ್ಮಸ್ಥಸ್ತು ವಿಶೇಷೇಣ ದ್ವಿತೀಯಸ್ತು ತಥಾಽಪರಃ ।
ಯದ್ಯೇಷ ಕುಪಿತಸ್ತ್ವಾಂತು ವೀಕ್ಷಯಿಷ್ಯತಿ ಕರ್ಹಿಚಿತ್ ॥ ೬೮ ॥
ಕರಿಷ್ಯತಿ ನ ಸಂದೇಹೋ ಭಸ್ಮರಾಶಿಂ ಮಮಾಗ್ರತಃ ।
ಅನೇನ ವೀಕ್ಷಿತೌ ಪಾದೌ ಜಾತಮಾತ್ರೇಣ ಸೂರ್ಯಕೌ ॥ ೬೯ ॥
ಆಯಾತಸ್ಯ ತು ತುಷ್ಟಸ್ಯ ಪುತ್ರದರ್ಶನವಾಂಛಯಾ ।
ಅಂತರ್ಧಾನೀ ಕೃತೇ ವಸ್ತ್ರೇ ಜ್ಞಾತ್ವಾ ತಂ ರೌದ್ರ ಚಕ್ಷುಷಂ ॥ ೭೦ ॥
ತತೋ ದಗ್ಧಾವುಭೌ ಚಾಽಪಿ ತಿಷ್ಠತಶ್ಚರ್ಮವೇಷ್ಟಿತೌ ।
ದೃಶ್ಯತೇಽದ್ಯಾಽಪಿ ಮೂರ್ತೌ ತೌ ಘುಟಿತಾಯಾಂ ಧರಾತಲೇ ॥ ೭೧ ॥

---

೬೫. ಆದುದರಿಂದ ನೀನು ಇವನನ್ನು ನೋಡಬೇಡ. ನೋಡಿದರೆ ಕೋಪಗೊಳ್ಳುವನು. ಹಾಗೆ ನನ್ನ ಮಾತಿನಂತೆ ಭೂಮಿಯಲ್ಲಿ ಬೀಳಬೇಡ."

೬೬. ನಾರದನು ಶನೈಶ್ಚರನನ್ನು ಹಾಗೆ ಆಕಾಶದಲ್ಲಿ ತಡೆದು ನಿಲ್ಲಿಸಿ ಪಿಪ್ಪಲಾದನನ್ನು ಕುರಿತು ಇಂತೆಂದನು.

೬೭. "ಬಾಲಕ! ನೀನು ಕೋಪಿಸಿಕೊಳ್ಳಬೇಡ. ಸೂರ್ಯನ ಮಗನಾದ ಈ ಶನಿಯು ಅಷ್ಟಮರಾಶಿಯಲ್ಲಿರುವವನಾಗಿ ದೇವತೆಗಳಿಗೂ ಪೀಡೆಯನ್ನುಂಟುಮಾಡುವನು.

೬೮–೭೦. ಜನ್ಮ ಮತ್ತು ದ್ವಿತೀಯ ರಾಶಿಯಲ್ಲಿದ್ದರೆ ಅತಿಶಯವಾಗಿ ಬಾಧಿಸುವನು. ಒಂದುವೇಳೆ ಇವನು ಕುಪಿತನಾಗಿ ನಿನ್ನನ್ನು ನೋಡಿದರೆ ನನ್ನ ಮುಂದೆಯೇ ನಿನ್ನನ್ನು ಭಸ್ಮರಾಶಿಯನ್ನಾಗಿ ಮಾಡುವನು. ಇವನು ತನ್ನನ್ನು ನೋಡಲು ಸಂತೋಷದಿಂದ ಬಂದ ಸೂರ್ಯನ ಪಾದಗಳನ್ನು ಈಕ್ಷಿಸಲು ಆ ಸೂರ್ಯನು ಇವನು ಭಯಂಕರ ಕಣ್ಣುಗಳುಳ್ಳವನಾಗಿರುವುದನ್ನು ಕಂಡು ಪಾದಗಳಿಗೆ ಬಟ್ಟೆಯನ್ನು ಮುಚ್ಚಿಕೊಂಡನು.

೭೧. ಅನಂತರ ಸುಟ್ಟುಹೋದ ಆ ಎರಡು ಕಾಲುಗಳೂ ಚರ್ಮದಿಂದ ಸುತ್ತಲ್ಪಟ್ಟು ಈಗಲೂ ಭೂಮಿಯಲ್ಲಿರುವ ಅವನ ಮೂರ್ತಿಯಲ್ಲಿ ಕಾಣಿಸುವುವು.

ಸೂತ ಉವಾಚ :—

ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ಸ ಬಾಲಕಃ ।
ಭಯೇನ ಮಹತಾ ಯುಕ್ತಸ್ತತಃ ಪಪ್ರಚ್ಛ ತಂ ಮುನಿಂ ॥ ೭೨ ॥
ಕಥಂ ಯಾಸ್ಯತಿ ಮೇ ತುಷ್ಟಿಂ ವದೈಷ ಮಮ ಸನ್ಮುನೇ ।
ಅಜ್ಞಾನಾತ್ಪಾತಿತೋ ವ್ಯೋಮ್ನಃ ಶಕ್ತಿಂ ಚಾಸ್ಯಾವಿಜಾನತಾ ॥ ೭೩ ॥

ನಾರದ ಉವಾಚ :—

ಗ್ರಹಾ ಗಾವೋ ನರೇಂದ್ರಾಶ್ಚ ಬ್ರಾಹ್ಮಣಾಶ್ಚ ವಿಶೇಷತಃ ।
ಪೂಜಿತಾಃ ಪ್ರತಿಪೂಜ್ಯಂತೇ ನಿರ್ದಹಂತ್ಯಪಮಾನಿತಾಃ ॥ ೭೪ ॥
ತಸ್ಮಾತ್ಕುರು ಸ್ತುತಿಂ ಚಾಽಸ್ಯ ಸ್ವಶಕ್ತ್ಯಾ ಭಾಸ್ಕರೇಃ ಪ್ರಭೋ ।
ಪ್ರಸಾದಂ ಗಚ್ಛತೇ ಯೇನ ಕೋಪಂ ತ್ಯಜತಿ ಪಾಪಜಂ ॥ ೭೫ ॥
ತತಃ ಕೃತಾಂಜಲಿರ್ಭೂತ್ವಾ ಸ್ತುತಿಂ ಚಕ್ರೇ ಸ ಬಾಲಕಃ ।
ಭಯೇನ ಮಹತಾ ಯುಕ್ತಸ್ತತಃ ಸಂಪೃಚ್ಛ್ಯ ತಂ ಮುನಿಂ ॥ ೭೬ ॥
ಪಿಪ್ಪಲಾದೋ ದ್ವಿಜಶ್ರೇಷ್ಠಃ ಪ್ರಣಿಪತ್ಯ ಮುಹುರ್ಮುಹುಃ ।
ನಮಸ್ತೇ ಕ್ರೋಧಸಂಸ್ಥಾಯ ಪಿಂಗಲಾಯ ನಮೋಽಸ್ತುತೇ ॥ ೭೭ ॥
ನಮಸ್ತೇ ಬಭ್ರುರೂಪಾಯ ಕೃಷ್ಣಾಯ ಚ ನಮೋಽಸ್ತುತೇ ।
ನಮಸ್ತೇ ರೌದ್ರದೇಹಾಯ ನಮಸ್ತೇ ಚಾಂತಕಾಯ ಚ ॥ ೭೮ ॥

---

೭೨. ಸೂತನು ಹೇಳುತ್ತಾನೆ:—ಆ ಬಾಲಕನು ನಾರದನ ಮಾತನ್ನು ಕೇಳಿ ಅತಿಯಾಗಿ ಹೆದರಿ ಆ ಮುನಿಯನ್ನು ಪ್ರಶ್ನಿಸಿದನು.

೭೩. "ಮುನಿಯೆ! ನಾನು ಇವನ ಶಕ್ತಿಯನ್ನರಿಯದೆ ಆಕಾಶದಿಂದ ಬೀಳಿಸಿದೆನು. ಇವನು ನನಗೆ ಹೇಗೆ ಸಂತುಷ್ಟನಾಗುವನು?"

೭೪. ನಾರದನು ಹೇಳುತ್ತಾನೆ:—ಗ್ರಹಗಳು, ಗೋವುಗಳು, ರಾಜರು, ಬ್ರಾಹ್ಮಣರು ಇವರನ್ನು ಪೂಜಿಸಿದರೆ ಪ್ರತಿಯಾಗಿ ಪೂಜಿಸುತ್ತಾರೆ. ಅವಮಾನ ಮಾಡಿದರೆ ಕೆಡಕು ಮಾಡುತ್ತಾರೆ.

೭೫. ಆದುದರಿಂದ ನಿನ್ನ ಶಕ್ತ್ಯನುಸಾರ ಈ ಸೂರ್ಯಪುತ್ರನಾದ ಶನಿಯನ್ನು ಸ್ತೋತ್ರಮಾಡು. ಅದರಿಂದ ಪ್ರಸನ್ನನಾಗಿ ಕೆಳಗೆ ಬೀಳಿಸಿದುದರಿಂದುಂಟಾದ ಕೋಪವನ್ನು ತ್ಯಜಿಸುವನು.

೭೬–೭೭. ಬಳಿಕ ಆ ಬಾಲಕನು ಕೈಜೋಡಿಸಿಕೊಂಡು ಆ ಮುನಿಯನ್ನು ಕೇಳಿ ಬಹಳ ಭಯದಿಂದ ಬಾರಿಬಾರಿಗೂ ನಮಸ್ಕರಿಸಿ ಹೀಗೆ ಸ್ತುತಿಸಿದನು. "ಕ್ರುದ್ಧನೂ, ಪಿಂಗಳವರ್ಣನೂ ಆದ ಶನೈಶ್ಚರ! ನಿನಗೆ ನಮಸ್ಕಾರವು.

೭೮. ಬಭ್ರುರೂಪನೂ, ಕೃಷ್ಣವರ್ಣನೂ, ಭಯಂಕರ ಶರೀರವುಳ್ಳವನೂ, ಅಂತಕನೂ ಆದ ನಿನಗೆ ನಮಸ್ಕಾರವು.

ನಮಸ್ತೇ ಯಮಸಂಜ್ಞಾಯ ನಮಸ್ತೇ ಸೌರಯೇ ವಿಭೋ ।
ನಮಸ್ತೇ ಮಂದಸಂಜ್ಞಾಯ ಶನೈಶ್ಚರ ನಮೋಽಸ್ತು ತೇ ॥ ೭೯ ॥
ಪ್ರಸಾದಂ ಕುರು ದೇವೇಶ ದೀನಸ್ಯ ಪ್ರಣತಸ್ಯ ಚ ॥ ೮೦ ॥

ಶನೈಶ್ಚರ ಉವಾಚ:—

ಪರಿತುಷ್ಟೋಽಸ್ಮಿ ತೇ ವತ್ಸ ಸ್ತೋತ್ರೇಣಾನೇನ ಸಾಂಪ್ರತಂ ।
ವರಂ ವರಯ ಭದ್ರಂತೇ ಯೇನ ಯಚ್ಛಾಮಿ ಸಾಪ್ರತಂ ॥ ೮೧ ॥

ಪಿಪ್ಪಲಾದ ಉವಾಚ:—

ಅದ್ಯ ಪ್ರಭೃತಿ ನೋ ಪೀಡಾ ಬಾಲಾನಾಂ ಸೂರ್ಯನಂದನ ।
ತ್ವಯಾ ಕಾರ್ಯಾ ಮಹಾಭಾಗ ಸ್ವಕೀಯಾ ಚ ಕಥಂಚನ ॥ ೮೨ ॥
ಯಾವದ್ವರ್ಷಾಷ್ಟಮಂ ಜಾತಂ ಮಮ ವಾಕ್ಯೇನ ಸೂರ್ಯಜ ।
ಸ್ತೋತ್ರೇಣಾನೇನ ಯೋಽತ್ರ ತ್ವಾಂ ಸ್ತುಯಾತ್ಪ್ರಾತಃ ಸಮುತ್ಥಿತಃ ॥ ೮೩ ॥
ತಸ್ಯ ಪೀಡಾ ನ ಕರ್ತವ್ಯಾ ತ್ವಯಾ ಭಾಸ್ಕರ ನಂದನ ।
ತವ ವಾರೇ ಚ ಸಂಜಾತೇ ತೈಲಾಭ್ಯಂಗಂ ಕರೋತಿ ಯಃ ॥ ೮೪ ॥
ದಿನಾಷ್ಟಕಂ ನ ಕರ್ತವ್ಯಾ ತಸ್ಯ ಪೀಡಾ ಕಥಂಚನ ।
ಯಸ್ತ್ವಾಂ ಲೋಹಮಯಂ ಕೃತ್ವಾ ತೈಲಮಧ್ಯೇ ಹ್ಯಧೋಮುಖಂ ॥ ೮೫ ॥
ಧಾರಯೇತ್ತೇನ ತೈಲೇನ ತತಃ ಸ್ನಾನಂ ಸಮಾಚರೇತ್ ।
ತಸ್ಯ ಪೀಡಾ ನ ಕರ್ತವ್ಯಾ ದೇಯೋ ಲಾಭೋ ಮಹೀಭುಜಃ ॥ ೮೬ ॥

---

೭೯. ಯಮನಾಮಕನೂ, ಸೂರ್ಯಪುತ್ರನೂ, ಮಂದನಾಮಕನೂ ಆದ ಎಲೈ ಶನೈಶ್ಚರನೆ ! ನಿನಗೆ ನಮಸ್ಕಾರವು.

೮೦. ದೇವೇಶ! ದೀನನೂ, ನಮ್ರನೂ ಆದ ನನ್ನಲ್ಲಿ ಅನುಗ್ರಹಮಾಡು."

೮೧. ಶನೈಶ್ಚರನು ಹೇಳುತ್ತಾನೆ:—ಮಗು! ನಿನ್ನೀ ಸ್ತುತಿಯಿಂದ ಈಗ ನಾನು ಪ್ರಸನ್ನನಾಗಿರುವೆನು. ವರವನ್ನು ಕೇಳಿಕೊ, ಕೊಡುವೆನು.

೮೨–೮೬. ಪಿಪ್ಪಲಾದನು ಹೇಳುತ್ತಾನೆ:—ಸೂರ್ಯತನಯ! ನೀನು ಇದು ಮೊದಲ್ಗೊಂಡು ಎಂಟು ವರ್ಷದವರೆಗಿನ ಬಾಲಕರಿಗೆ ನನ್ನ ಮಾತಿನಂತೆ ಪೀಡೆಯನ್ನುಂಟುಮಾಡಬೇಡ. ಬೆಳಗ್ಗೆ ಎದ್ದು ಈ ಸ್ತೋತ್ರದಿಂದ ನಿನ್ನನ್ನು ಸ್ತುತಿಸುವವನಿಗೆ ಬಾಧೆಯನ್ನುಂಟುಮಾಡಬೇಡ. ನಿನ್ನ ವಾರದಲ್ಲಿ ತೈಲಾಭ್ಯಂಗವನ್ನು ಮಾಡಿಕೊಂಡವನಿಗೆ ಎಂಟು ದಿವಸಗಳವರೆಗೆ ಪೀಡೆಯನ್ನುಂಟುಮಾಡಬೇಡ. ಎಣ್ಣೆಯ ನಡುವೆ ನಿನ್ನ ಲೋಹದ ಪ್ರತಿಮೆಯನ್ನು ಕೆಳಮುಖವಾಗಿರಿಸಿ ಆ ಎಣ್ಣೆಯಿಂದ ಮಿಂದವನನ್ನು ಪೀಡಿಸಬೇಡ. ಅವನು ದೊರೆಯಾಗಿದ್ದರೆ ಲಾಭವನ್ನುಂಟುಮಾಡು.

ಅಧ್ಯರ್ಧಾಷ್ಟಮಿಕಾ ಯೋಗೇ ತಾವಕೇ ಸಂಸ್ಥಿತೇ ನರಃ ।
ತವ ವಾರೇತು ಸಂಪ್ರಾಪ್ತೇ ಯಸ್ತಿಲಾಂಲ್ಲೋಹಸಂಯುತಾನ್ ॥ ೮೭ ॥
ಸ್ವಶಕ್ತ್ಯಾ ರಾತಿ ನೋ ತಸ್ಯ ಪೀಡಾ ಕಾರ್ಯಾ ತ್ವಯಾ ವಿಭೋ ।
ಕೃಷ್ಣಾಂ ಗಾಂ ಯಸ್ತು ವಿಪ್ರಾಯ ತವೋದ್ದೇಶೇನ ಯಚ್ಛತಿ ॥ ೮೮ ॥
ಅಧ್ಯರ್ಧಾಷ್ಟಮಜಾ ಪೀಡಾ ನಾಽಸ್ಯ ಕಾರ್ಯಾ ತ್ವಯಾ ವಿಭೋ ।
ಶಮೀಸಮಿದ್ಭಿರ್ಯೋ ಹೋಮಂ ತವೋದ್ದೇಶೇನ ಯಚ್ಛತಿ ॥ ೮೯ ॥
ತಥಾ ಕೃಷ್ಣತಿಲೈಶ್ಚೈವ ಕೃಷ್ಣಪುಷ್ಪಾನುಲೇಪನೈಃ ।
ಪೂಜಾಂ ಕರೋತಿ ಯಸ್ತುಭ್ಯಂ ಧೂಪಂ ವೈ ಗುಗ್ಗುಲಂ ದಹೇತ್ ।
ಕೃಷ್ಣವಸ್ತ್ರೇಣ ಸಂವೇಷ್ಟ್ಯ ತ್ಯಾಜ್ಯಾ ತಸ್ಯ ವ್ಯಥಾ ತ್ವಯಾ ॥ ೯೦ ॥

ಸೂತ ಉವಾಚ :—

ಏವಮುಕ್ತಃ ಶನಿಸ್ತೇನ ಬಾಢಮಿತ್ಯೇವ ಜಲ್ಪ್ಯ ಚ ।
ನಾರದಂ ಸಮನುಜ್ಞಾಪ್ಯ ಜಗಾಮ ನಿಜಸಂಶ್ರಯಂ ॥ ೯೧ ॥
ನಾರದೋಽಪಿ ತಮಾದಾಯ ಬಾಲಕಂ ಕೃಪಯಾನ್ವಿತಃ ।
ಚಮತ್ಕಾರಪುರಂ ಗತ್ವಾ ಯಾಜ್ಞವಲ್ಕ್ಯಾಯ ಚಾರ್ಪಯತ್ ॥ ೯೨ ॥
ಕಥಯಾಮಾಸ ವೃತ್ತಾಂತಂ ತಸ್ಯ ಸಂಭೂತಿಸಂಭವಂ ।
ಯದ್ದೃಷ್ಟಂ ಜ್ಞಾನದೀಪೇನ ತಸ್ಮೈ ಸರ್ವಂ ನ್ಯವೇದಯತ್ ॥ ೯೩ ॥

---

೮೭–೯೦. ನಿನ್ನ ಏಳೂವರೆ ವರ್ಷದ ಯೋಗವು ಸಂಭವಿಸಿದಾಗ ನಿನ್ನ ವಾರದಲ್ಲಿ ಕಬ್ಬಿಣದೊಡನೆ ಎಳ್ಳನ್ನು ಶಕ್ತ್ಯನುಸಾರ ದಾನಮಾಡಿದವನನ್ನು ಬಾಧಿಸಬೇಡ. ನಿನ್ನ ಉದ್ದೇಶದಿಂದ ಕೃಷ್ಣವರ್ಣದ ಹಸುವನ್ನು ಬ್ರಾಹ್ಮಣನಿಗೆ ದಾನ ಮಾಡಿದವನಿಗೆ ನೀನು ಏಳೂವರೆ ವರ್ಷದ ಯೋಗದಲ್ಲಿ ಪೀಡೆಯನ್ನುಂಟುಮಾಡಬೇಡ. ಶಮೀಸಮಿತ್ತು ಕೃಷ್ಣತಿಲಗಳಿಂದ ನಿನ್ನನ್ನು ಉದ್ದೇಶಿಸಿ ಹೋಮಮಾಡಿ ಕೃಷ್ಣಪುಷ್ಪ ಗಂಧಗಳಿಂದ ಪೂಜಿಸಿ ಕರಿಯ ಬಟ್ಟೆಯನ್ನು ಸುತ್ತಿ ಗುಗ್ಗುಳಧೂಪವನ್ನರ್ಪಿಸುವವನಿಗೆ ವ್ಯಥೆಯನ್ನುಂಟುಮಾಡಬೇಡ.

೯೧. ಸೂತನು ಹೇಳುತ್ತಾನೆ:—ಪಿಪ್ಪಲಾದನು ಹೀಗೆ ಹೇಳಲು ಶನಿಯು ಹಾಗೆಯೇ ಆಗಲೆಂದು ಹೇಳಿ ನಾರದನ ಅಪ್ಪಣೆಯನ್ನು ಪಡೆದು ತನ್ನ ಸ್ಥಳಕ್ಕೆ ತೆರಳಿದನು.

೯೨. ನಾರದನೂ ದಯೆಯಿಂದ ಆ ಬಾಲಕನನ್ನು ಕರೆದುಕೊಂಡು ಚಮತ್ಕಾರಪುರಕ್ಕೆ ಹೋಗಿ ಯಾಜ್ಞವಲ್ಕ್ಯನಿಗೆ ಒಪ್ಪಿಸಿದನು.

೯೩. ತಾನು ಜ್ಞಾನದೃಷ್ಟಿಯಿಂದ ಕಂಡ ಆ ಬಾಲಕನ ಉತ್ಪತ್ತಿಯ ಸಮಾಚಾರವನ್ನೆಲ್ಲ ಆ ಯಾಜ್ಞವಲ್ಕ್ಯನಿಗೆ ಹೀಗೆ ತಿಳಿಸಿದನು.

ಏಷ ತೇ ವೀರ್ಯಸಂಭೂತೋ ಬಾಲಕೋ ಭಗಿನೀಸುತಃ ।
ಮಯಾಽಶ್ವತ್ಥತಲೇ ಲಬ್ಧಃ ಕಾನನೇಽಶ್ವತ್ಥಸನ್ನಿಧೌ ॥ ೯೪ ॥
ವ್ರತಬಂಧಂ ಕುರುಷ್ವಾಽಸ್ಯ ಸಾಂಪ್ರತಂ ಚಾಷ್ಟವಾರ್ಷಿಕಃ ।
ನಾಽತ್ರ ದೋಷೋಽಸ್ತಿ ವಿಪ್ರೇಂದ್ರ ನ ಭಗಿನ್ಯಾಸ್ತಥಾ ತವ ।
ತಸ್ಮಾದ್ಗೃಹಾಣ ಪುತ್ರಂ ಸ್ವಂ ಭಾಗಿನೇಯಂ ವಿಶೇಷತಃ ॥ ೯೫ ॥

ಸೂತ ಉವಾಚ:—

ಏವಮುಕ್ತ್ವಾ ಸ ದೇವರ್ಷಿಸ್ತತಶ್ಚಾದರ್ಶನಂ ಗತಃ ।
ಯಾಜ್ಞವಲ್ಕ್ಯೋಽಪಿ ತಚ್ಛ್ರುತ್ವಾ ವಿಷಾದಂ ಪರಮಂ ಗತಃ ॥ ೯೬ ॥
ಪಾಪಂ ಸಂಚಿಂತಯನ್ನೇವ ನ ಶಾಂತಿಮಧಿಗಚ್ಛತಿ ।
ಆತ್ಮಾನಂ ಗರ್ಹಯನ್ನಿತ್ಯಂ ದಿವಾನಕ್ತಂ ಚ ಶೋಚತಿ ॥ ೯೭ ॥
ತಂ ಚ ಪುತ್ರಂ ಪರಿಜ್ಞಾಯ ತೈಸ್ತೈಶ್ಚಿಹ್ನೈರ್ನಿಜೈಃ ಸ್ಥಿತೈಃ ।
ತತಸ್ತು ಪೋಷಯಿತ್ವಾ ತಂ ವ್ರತೇನ ಸಮಯೋಜಯತ್ ॥ ೯೮ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಿಪ್ಪಲಾದೋತ್ಪತ್ತಿವರ್ಣನಂ" ನಾಮ ಚತುಃಸಪ್ತತ್ಯುತ್ತರಶತತಮೋಽಧ್ಯಾಯಃ

---

೯೪. ದ್ವಿಜವರ್ಯನೆ! ಈಗ ಈ ಬಾಲಕನಿಗೆ ಎಂಟನೆಯ ವರ್ಷದಲ್ಲಿ ಮಾಡಬೇಕಾದ ಉಪನಯನವನ್ನು ಮಾಡು. ಇವನ ವಿಷಯದಲ್ಲಿ ನಿನ್ನ ಮತ್ತು ನಿನ್ನ ತಂಗಿಯ ದೋಷವಿಲ್ಲ. ಆದುದರಿಂದ ನಿನ್ನ ಮಗನೂ, ಸೋದರಳಿಯನೂ ಆದ ಇವನನ್ನು ಪರಿಗ್ರಹಿಸು.

೯೫. ಇವನು ನಿನ್ನ ವೀರ್ಯದಿಂದ ಸಹೋದರಿಯಲ್ಲಿ ಜನಿಸಿರುವನು. ನನಗೆ ಅಶ್ವತ್ಥಮರದ ಬುಡದಲ್ಲಿ ಸಿಕ್ಕಿದನು.

೯೬. ಸೂತನು ಹೇಳುತ್ತಾನೆ:—ನಾರದನು ಹೀಗೆ ಹೇಳಿ ಅದೃಶ್ಯನಾದನು. ಯಾಜ್ಞವಲ್ಕ್ಯನು ಆ ಮಾತನ್ನು ಕೇಳಿ ಅತ್ಯಂತ ವ್ಯಸನಗೊಂಡನು.

೯೭. ಆ ಪಾಪವನ್ನೇ ಆಲೋಚಿಸುತ್ತ ಚಿತ್ತಶಾಂತಿಯನ್ನು ಹೊಂದಲಿಲ್ಲ. ತನ್ನನ್ನು ತಾನೇ ನಿಂದಿಸಿಕೊಳ್ಳುತ್ತ ಹಗಲು ರಾತ್ರಿ ದುಃಖಿಸುತ್ತಿದ್ದನು.

೯೮. ತನ್ನ ಆಯಾಚಿಹ್ನೆಗಳಿಂದ ಅವನು ಪುತ್ರನೆಂದರಿತು ಪೋಷಿಸಿ ಉಪನಯನ ಮಾಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಿಪ್ಪಲಾದೋತ್ಪತ್ತಿವರ್ಣನ" ವೆಂಬ
ನೂರೆಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

## ಯಾಜ್ಞವಲ್ಕ್ಯೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಏವಂ ಸಂಶೋಚತೇ ಯಾವದಾತ್ಮಾನಂ ಪರಿಗರ್ಹಯನ್ ।**
**ತತಸ್ತು ಬ್ರಹ್ಮಣಾ ಪ್ರೋಕ್ತಃ ಸ್ವಯಮುಭ್ಯೇತ್ಯ ಭೋ ದ್ವಿಜಾಃ ॥ ೧ ॥**
**ತ್ವಯಾ ಶಂಕಾ ನ ಕರ್ತವ್ಯಾ ಸುತಸ್ಯಾಸ್ಯ ಕೃತೇ ದ್ವಿಜ ।**
**ಅಜ್ಞಾನಾದೇವ ತೇ ಜಾತೋ ದೈವಯೋಗೇನ ಬಾಲಕಃ ॥ ೨ ॥**

**ಯಾಜ್ಞವಲ್ಕ್ಯ ಉವಾಚ :—**

**ತಥಾಽಪಿ ದೇವ ಮೇ ಶುದ್ಧಿರ್ಹೃದಯಸ್ಯ ನ ಜಾಯತೇ ।**
**ತಸ್ಮಾದ್ವದ ಸುರಶ್ರೇಷ್ಠ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ೩ ॥**

**ಬ್ರಹ್ಮೋವಾಚ :—**

**ಯದಿ ತೇ ಚಿತ್ತಶುದ್ಧಿಸ್ತು ನ ಕಥಂಚಿತ್ಪ್ರವರ್ತತೇ ।**
**ತತ್ಸ್ಥಾಪಯ ಮಹಾಭಾಗ ಲಿಂಗಂ ದೇವಸ್ಯ ಶೂಲಿನಃ ॥ ೪ ॥**
**ಅಜ್ಞಾನಾಜ್ಜ್ಞಾನತೋ ವಾಽಪಿ ಯತ್ಪಾಪಂ ಕುರುತೇ ನರಃ ।**
**ಬ್ರಹ್ಮಹತ್ಯಾದಿಕಂ ಚಾಽಪಿ ಸ್ತ್ರೀವಧಾದ್ವಾಽಪಿ ಯದ್ಭವೇತ್ ॥ ೫ ॥**

---

### ಕನ್ನಡದ ಅನುವಾದ

#### ಯಾಜ್ಞವಲ್ಕ್ಯೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಯಾಜ್ಞವಲ್ಕ್ಯನು ಹೀಗೆ ತನ್ನನ್ನು ನಿಂದಿಸಿ ಕೊಳ್ಳುತ್ತ ದುಃಖಿಸುತ್ತಿರಲು ಬ್ರಹ್ಮನು ತಾನೇ ಅವನೆಡೆಗೆ ಬಂದು ಇಂತೆಂದನು.

೨. "ಬ್ರಾಹ್ಮಣ! ನೀನು ಈ ಸುತನಿಗಾಗಿ ಶಂಕಿಸಬೇಡ. ಈ ಬಾಲಕನು ನಿನಗೆ ತಿಳಿಯದೆ ದೈವಯೋಗದಿಂದ ಹುಟ್ಟಿದ್ದಾನೆ."

೩. ಯಾಜ್ಞವಲ್ಕ್ಯನು ಹೇಳುತ್ತಾನೆ:—ಸ್ವಾಮಿ! ಹಾಗಾದರೂ ನನ್ನ ಮನಸ್ಸು ಶುದ್ಧವಾಗುವುದಿಲ್ಲವಲ್ಲ! ಆದುದರಿಂದ ಚಿತ್ತಶುದ್ಧಿಗಾಗಿ ಪ್ರಾಯಶ್ಚಿತ್ತ ವನ್ನು ಹೇಳು.

೪. ಬ್ರಹ್ಮನು ಹೇಳುತ್ತಾನೆ:—ಯಾವ ವಿಧದಿಂದಲೂ ನಿನಗೆ ಚಿತ್ತಶುದ್ಧಿ ಯಾಗದಿದ್ದರೆ ಮಾಹೇಶ್ವರಲಿಂಗವನ್ನು ಸ್ಥಾಪಿಸು.

೫–೬. ನರನು ಅಜ್ಞಾನದಿಂದಾಗಲಿ, ಜ್ಞಾನದಿಂದಾಗಲಿ ಬ್ರಹ್ಮಹತ್ಯೆ, ಸ್ತ್ರೀಹತ್ಯೆ ಮೊದಲಾದ ಪಾಪಗಳನ್ನು ಮಾಡಿದ್ದರೂ ಐದು ಇಟ್ಟಿಗೆಗಳಿಂದ

ಪಂಚೇಷ್ಟಿಕಾಮಯಂ ವಾಽಪಿ ಯಃ ಕುರ್ಯಾದ್ಧರಮಂದಿರಂ ।
ತಸ್ಯ ತನ್ನಾಶಮಾಯಾತಿ ತಮಃ ಸೂರ್ಯೋದಯೇ ಯಥಾ ॥ ೬ ॥
ವಿಶೇಷೇಣ ಮಹಾಭಾಗ ಹಾಟಕೇಶ್ವರಸಂಭವೇ ।
ಕ್ಷೇತ್ರೇ ತತ್ರ ಸುಮೇಧ್ಯೇತು ಸರ್ವಪಾತಕನಾಶನೇ ॥ ೭ ॥
ಕಲಿಕಾಲೇ ಚ ಸಂಪ್ರಾಪ್ತೇ ಯತ್ರ ಪಾಪಂ ನ ವಿದ್ಯತೇ ।
ಅಹಮಪ್ಯತ್ರ ವಾಂಛಾಮಿ ಯಜ್ಞಂ ಕರ್ತುಂ ದ್ವಿಜೋತ್ತಮ ॥ ೮ ॥
ಆನಯಿಷ್ಯಾಮಿ ತತ್ತೀರ್ಥಂ ಪುಷ್ಕರಂ ಚಾತ್ಮನಃ ಪ್ರಿಯಂ ।
ಕಲಿಕಾಲಭಯಾಚ್ಚೈತದ್ಯಾವನ್ನೋ ವ್ಯರ್ಥತಾಂ ವ್ರಜೇತ್ ॥ ೯ ॥
ಕಲಿಕಾಲೇತು ಸಂಪ್ರಾಪ್ತೇ ತೀರ್ಥಾನಿ ಸಕಲಾನಿ ಚ ।
ಯಾಸ್ಯಂತಿ ವ್ಯರ್ಥತಾಂ ವಿಪ್ರ ಮುಕ್ತ್ವೇದಂ ಕ್ಷೇತ್ರಮುತ್ತಮಂ ॥ ೧೦ ॥

ಸೂತ ಉವಾಚ:—

ಏವಮುಕ್ತ್ವಾ ಚತುರ್ವಕ್ತ್ರಸ್ತತಶ್ಚಾದರ್ಶನಂ ಗತಃ ।
ಯಾಜ್ಞವಲ್ಕ್ಯೋಽಪಿ ತಚ್ಛ್ರುತ್ವಾ ಪಿತಾಮಹವಚೋಽಖಿಲಂ ॥ ೧೧ ॥
ಲಿಂಗಂ ಸಂಸ್ಥಾಪಯಾಮಾಸ ಜ್ಞಾತ್ವಾ ಕ್ಷೇತ್ರಮನುತ್ತಮಂ ।
ಅಬ್ರವೀಚ್ಚ ತತೋ ವಾಕ್ಯಂ ಮೇಘಗಂಭೀರಯಾ ಗಿರಾ ॥ ೧೨ ॥
ಅಷ್ಟಮ್ಯಾಂ ಚ ಚತುರ್ದಶ್ಯಾಂ ಯೋ ಲಿಂಗಂ ಮಾಮಕಂ ತ್ವಿದಂ ।
ಸ್ನಾಪಯಿಷ್ಯತಿ ಸದ್ಭಕ್ತ್ಯಾ ತಸ್ಯ ಪಾಪಂ ಪ್ರಯಾಸ್ಯತಿ ॥ ೧೩ ॥

---

ಶಿವಮಂದಿರವನ್ನು ನಿರ್ಮಿಸಿದರೆ ಆ ಪಾಪಗಳು ಸೂರ್ಯೋದಯಕಾಲದಲ್ಲಿ ಕತ್ತಲೆಯಂತೆ ನಾಶವಾಗುವುವು.

೭. ಮಹಾತ್ಮನೆ! ಪವಿತ್ರವೂ, ಸಕಲ ಪಾಪಗಳನ್ನು ಪರಿಹರಿಸುವುದೂ ಆದ ಈ ಹಾಟಕೇಶ್ವರಕ್ಷೇತ್ರದಲ್ಲಿ ವಿಶೇಷವಾಗಿ ಪರಿಹಾರವಾಗುವುದು.

೮–೯. ಇಲ್ಲಿ ಕಲಿಕಾಲದಲ್ಲಿಯೂ ಪಾಪವಿರುವುದಿಲ್ಲ. ನಾನು ಇಲ್ಲಿ ಯಜ್ಞ ಮಾಡಬಯಸುವೆನು. ಕಲಿಕಾಲದ ಭಯದಿಂದ ಈ ಕ್ಷೇತ್ರವು ವ್ಯರ್ಥವಾಗದಿರುವಷ್ಟರಲ್ಲಿ ನನಗೆ ಪ್ರಿಯವಾದ ಆ ಪುಷ್ಕರ ತೀರ್ಥವನ್ನು ಇಲ್ಲಿಗೆ ತರುವೆನು.

೧೦. ದ್ವಿಜನೆ! ಕಲಿಕಾಲವು ಬರಲು ಈ ತೀರ್ಥದ ಹೊರತು ಸಕಲ ತೀರ್ಥಗಳೂ ವ್ಯರ್ಥವಾಗುವುವು.

೧೧–೧೩. ಸೂತನು ಹೇಳುತ್ತಾನೆ:—ಪಿತಾಮಹನು ಹೀಗೆ ಹೇಳಿ ಅದೃಶ್ಯನಾದನು. ಯಾಜ್ಞವಲ್ಕ್ಯನು ಅವನ ಎಲ್ಲ ಮಾತುಗಳನ್ನು ಕೇಳಿ ಅದು ಉತ್ತಮ ಕ್ಷೇತ್ರವೆಂದರಿತು ಲಿಂಗವನ್ನು ಪ್ರತಿಷ್ಠೆಮಾಡಿದನು. ಅನಂತರ ಮೇಘದಂತೆ ಗಂಭೀರವಾದ ವಾಣಿಯಿಂದ ಇಂತೆಂದನು. “ಅಷ್ಟಮಿ, ಚತುರ್ದಶೀ ದಿನಗಳಲ್ಲಿ ಯಾವನು ನಾನು ಪ್ರತಿಷ್ಠೆಮಾಡಿದ ಈ ಪಾರಮೇಶ್ವರಲಿಂಗಕ್ಕೆ ಭಕ್ತಿಯಿಂದ ಅಭಿಷೇಕ ಮಾಡುವನೋ ಅವನ ಪಾಪವು ಶಾಂತವಾಗುವುದು.

ಪರದಾರಕೃತಂ ಯಚ್ಚ ಮಾತ್ರಾಪಿ ಚ ಸಮಂಕೃತಂ ।
ಕ್ಷಾಲಯಿಷ್ಯತಿ ತತ್ಪಾಪಂ ಸ್ನಾಪಿತಂ ಪೂಜಿತಂ ವರೈಃ ॥ ೧೪ ॥
ಅಸ್ಮಿನ್ನಹನಿ ಸಂಪ್ರಾಪ್ತೇ ತಸ್ಯ ಪಕ್ಷ ಸಮುದ್ಭವಂ ।
ಪ್ರಯಾಸ್ಯತಿ ಕೃತಂ ಪಾಪಂ ಯದಜ್ಞಾನಾದ್ವಿನಿರ್ಮಿತಂ ॥ ೧೫ ॥
ತತಃ ಪ್ರಭೃತಿ ವಿಖ್ಯಾತೋ ಯಾಜ್ಞವಲ್ಕ್ಯೇಶ್ವರಶ್ಶುಭಃ ।
ತಸ್ಮಿನ್ ಕ್ಷೇತ್ರೇ ದ್ವಿಜಶ್ರೇಷ್ಠಾ ಹಾಟಕೇಶ್ವರಸಂಜ್ಞಕೇ ॥ ೧೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಾಜ್ಞವಲ್ಕ್ಯೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಪಂಚಸಪ್ತತ್ಯುತ್ತರಶತತಮೋಽಧ್ಯಾಯಃ

---

೧೪–೧೫. ಈ ದಿನಗಳಲ್ಲಿ ಅಭಿಷೇಕ ಮಾಡಿ ಪೂಜಿಸಿದರೆ ಪರಪತ್ನೀ, ತಾಯಿ ಇವರ ಸಂಗಮದಿಂದುಂಟಾದ ಪಾಪವೂ, ಅರಿಯದೆ ಮಾಡಿದ ಒಂದು ಪಕ್ಷದ ಪಾಪವೂ ಪರಿಹಾರವಾಗುವುದು.

೧೬. ದ್ವಿಜವರ್ಯರೆ! ಅದು ಮೊದಲ್ಗೊಂಡು ಆ ಹಾಟಕೇಶ್ವರಕ್ಷೇತ್ರವಲ್ಲಿ ಯಾಜ್ಞವಲ್ಕ್ಯೇಶ್ವರನು ವಿಖ್ಯಾತನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಾಜ್ಞವಲ್ಕ್ಯೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ನೂರೆಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ

### ಕಂಸಾರೀಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ದೃಷ್ಟ್ವಾ ಪ್ರತಿಷ್ಠಿತಂ ಲಿಂಗಂ ಯಾಜ್ಞವಲ್ಕ್ಯೇನ ಧೀಮತಾ ।**
**ಸ್ವಮಾತುಃ ಶುದ್ಧಿಹೇತೋಃ ಸ ತನ್ನಾಮ್ನಾ ಲಿಂಗಮುತ್ತಮಂ ॥ ೧ ॥**
**ಸ್ಥಾಪಯಾಮಾಸ ವಿಪ್ರೇಂದ್ರಾಃ ಶ್ರದ್ಧಯಾ ಪರಯಾ ಯುತಃ ।**
**ತತಶ್ಚಾನೀಯ ವಿಪ್ರೇಂದ್ರಂ ಮಧ್ಯಗಂ ನಾಗರೋದ್ಭವಂ ॥ ೨ ॥**
**ಗರ್ತಾತೀರ್ಥಸಮುದ್ಭೂತಮಾಹಿತಾಗ್ನಿಂ ಪ್ರಯಾಜಿನಂ ।**
**ಯಥೈತನ್ನಗರಸ್ಥಾನಂ ತಥಾ ತ್ವಮಪಿ ದೀಕ್ಷಿತಃ ॥ ೩ ॥**
**ಅಷ್ಟಷಷ್ಟಿಷು ಗೋತ್ರಾಣಾಂ ನಾಯಕತ್ವೇ ವ್ಯವಸ್ಥಿತಃ ।**
**ತವ ವಾಕ್ಯೇನ ಸರ್ವಾಣಿ ಗೋತ್ರಾಣಿ ದ್ವಿಜಸತ್ತಮ ॥ ೪ ॥**
**ವರ್ತಯಿಷ್ಯಂತಿ ಕೃತ್ಯೇಷು ಯಾವಚ್ಚಂದ್ರಾರ್ಕತಾರಕಾಃ ।**
**ಗೋವರ್ಧನ ತ್ವಯಾ ಚಿಂತಾ ಕಾರ್ಯಾಚಾಸ್ಯ ಸಮುದ್ಭವಾ ॥ ೫ ॥**
**ಲಿಂಗಸ್ಯ ಪೂಜನಾರ್ಥಾಯ ಪ್ರೇರಣೀಯಾಶ್ಚ ನಾಗರಾಃ ।**
**ಪೂಜಯಾ ತಸ್ಯ ಲಿಂಗಸ್ಯ ವೃದ್ಧಿಂ ಯಾಸ್ಯತಿ ತೇಽನ್ವಯಃ ॥ ೬ ॥**

---

### ಕನ್ನಡದ ಅನುವಾದ

#### ಕಂಸಾರೀಶ್ವರೋತ್ಪತ್ತಿಮಾಹಾತ್ಮ್ಯವರ್ಣನ

೧–೫. ಸೂತನು ಹೇಳುತ್ತಾನೆ :—ವಿಪ್ರವರ್ಯರೆ! ಪಿಪ್ಪಲಾದನು ಯಾಜ್ಞವಲ್ಕ್ಯನು ಪ್ರತಿಷ್ಠೆಮಾಡಿದ ಶಿವಲಿಂಗವನ್ನು ನೋಡಿ ತಾನೂ ತನ್ನ ತಾಯಿಯ ಶುದ್ಧಿಗಾಗಿ ಅವಳ ಹೆಸರಿನಿಂದ ಅತಿ ಶ್ರದ್ಧೆಯಿಂದ ಲಿಂಗವನ್ನು ಸ್ಥಾಪಿಸಿದನು. ಅನಂತರ ನಾಗರದ ಮಧ್ಯಗನೂ, ಗರ್ತಾತೀರ್ಥದಲ್ಲಿ ಜನಿಸಿದವನೂ, ಆಹಿತಾಗ್ನಿಯೂ, ಯಾಗ ಮಾಡುವವನೂ ಆದ ಬ್ರಾಹ್ಮಣನನ್ನು ಕರೆಯಿಸಿ, "ಈ ನಗರ ಸ್ಥಾನದಂತೆಯೇ ದೀಕ್ಷಿತನಾದ ನೀನು ಅರುವತ್ತನಾಲ್ಕು ಗೋತ್ರದವರಿಗೆ ನಾಯಕನಾಗಿರುವೆ. ನಿನ್ನ ಮಾತಿನಂತೆ ಸಕಲ ಗೋತ್ರದವರೂ ಸೂರ್ಯ ಚಂದ್ರರಿರುವವರೆಗೆ ಕಾರ್ಯದಲ್ಲಿ ತೊಡಗುವರು. ಗೋವರ್ಧನ! ನೀನು ಈ ಲಿಂಗದ ವಿಷಯದಲ್ಲಿ ಎಚ್ಚರಿಕೆಯಿಂದಿರು.

೬. ನಾಗರರು ಈ ಲಿಂಗವನ್ನು ಪೂಜಿಸುವಂತೆ ಪ್ರೇರಣೆ ಮಾಡು. ಇದರ ಪೂಜೆಯಿಂದ ನಿನ್ನ ವಂಶವು ವೃದ್ಧಿಯಾಗುವುದು.

ಅಪೂಜಯಾ ವಿನಾಶಂ ಚ ಯಾಸ್ಯತ್ಯತ್ರ ನ ಸಂಶಯಃ ।
ತವ ವಂಶೋದ್ಭವಾ ಯೇ ಚ ಪೂಜಯಿತ್ವಾ ಪ್ರಭಕ್ತಿತಃ ॥ ೭ ॥
ಏತಲ್ಲಿಂಗಂ ಕರಿಷ್ಯಂತಿ ಕೃತ್ಯಾನಿ ವಿವಿಧಾನಿ ಚ ।
ತಾನಿ ಸಿದ್ಧಿಂ ಪ್ರಯಾಸ್ಯಂತಿ ಪ್ರಸಾದಾದಸ್ಯ ದೀಕ್ಷಿತ ॥ ೮ ॥

ಗೋವರ್ಧನ ಉವಾಚ :—

ಅಹಮರ್ಚಾಂ ಕರಿಷ್ಯಾಮಿ ಲಿಂಗಸ್ಯಾಸ್ಯ ಸದಾ ದ್ವಿಜ ।
ಭಕ್ತಿಂ ಚ ಪ್ರಕರಿಷ್ಯಾಮಿ ಹೇತೋರಸ್ಯ ಕೃತೇ ದ್ವಿಜ ।
ಪೂಜಾರ್ಥಂ ಚೈವ ಯೇ ಚಾನ್ಯೇ ಮಮ ವಂಶಸಮುದ್ಭವಾಃ ॥ ೯ ॥

ಪಿಪ್ಪಲಾದ ಉವಾಚ :—

ಗೋವರ್ಧನ ದ್ರುತಂ ವಿಪ್ರಾಂಸ್ತತ್ರ ಚಾನಯ ನಾಗರಾನ್ ।
ತೇಷಾಂ ಮತೇನ ದೇವಸ್ಯ ನಾಮಮಾತ್ರಂ ಕರೋಮ್ಯಹಂ ॥ ೧೦ ॥
ತತಶ್ಚಾನಾಯಯಾಮಾಸ ವಿಪ್ರಾಂಶ್ಚೈವ ವಿಚಕ್ಷಣಾನ್ ।
ಶ್ರುತಾಧ್ಯಯನಸಂಪನ್ನಾನ್ ಯಜ್ಞಕರ್ಮಪರಾಯಣಾನ್ ॥ ೧೧ ॥
ತಾನಬ್ರವೀತ್ಪ್ರಣಮ್ಯೋಚ್ಚೈಃ ಪಿಪ್ಪಲಾದೋ ಮಹಾಮುನಿಃ ।
ಮಮ ಮಾತಾ ಮೃತಾ ಪೂರ್ವಂ ಕಂಸಾರೀತಿ ಚ ನಾಮತಃ ॥ ೧೨ ॥
ತಸ್ಯಾ ಉದ್ದೇಶತೋ ಲಿಂಗಂ ಮಯೈತತ್ಸಂಪ್ರತಿಷ್ಠಿತಂ ।
ಯುಷ್ಮದ್ವಾಕ್ಯಾತ್ಪ್ರಸಿದ್ಧಿಂ ಚ ಪ್ರಯಾತು ದ್ವಿಜಸತ್ತಮಾಃ ॥ ೧೩ ॥

---

೭—೮. ದೀಕ್ಷಿತ! ಇದನ್ನು ಪೂಜಿಸದಿದ್ದರೆ ನಾಶವಾಗುವುದು. ಇದನ್ನು ಭಕ್ತಿಯಿಂದ ಪೂಜಿಸಿದ ನಿನ್ನ ವಂಶದವರು ಮಾಡಿದ ಕಾರ್ಯವೆಲ್ಲ ಇದರ ಅನುಗ್ರಹದಿಂದ ಕೈಗೂಡುವುವು.

೯. ಗೋವರ್ಧನನು ಹೇಳುತ್ತಾನೆ:—ದ್ವಿಜನೆ! ನಾನು ಇದನ್ನು ಯಾವಾಗಲೂ ಪೂಜಿಸುವೆನು. ಭಕ್ತಿಯನ್ನೂ ಮಾಡುವೆನು. ನನ್ನ ವಂಶದವರೂ ಇದರಲ್ಲಿ ಭಕ್ತಿಯನ್ನಿಡುವರು.

೧೦—೧೧. ಪಿಪ್ಪಲಾದನು ಹೇಳುತ್ತಾನೆ:—"ಗೋವರ್ಧನ! ಬೇಗನೆ ನಾಗರ ಬ್ರಾಹ್ಮಣರನ್ನು ಕರೆದುಕೊಂಡು ಬಾ. ಅವರ ಅಭಿಪ್ರಾಯದಂತೆ ಈ ಲಿಂಗಕ್ಕೆ ಹೆಸರನ್ನಿಡುವೆನು." ಅನಂತರ ಗೋವರ್ಧನನು ಕುಶಲರೂ, ವೇದಾಧ್ಯಯನ ಸಂಪನ್ನರೂ, ಯಜ್ಞಕರ್ಮನಿರತರೂ ಆದ ವಿಪ್ರರನ್ನು ಕರೆತಂದನು.

೧೨. ಪಿಪ್ಪಲಾದ ಮುನಿಯು ಅವರನ್ನು ವಂದಿಸಿ ಇಂತೆಂದನು. "ಹಿಂದೆ ಕಂಸಾರಿಯೆಂಬ ನನ್ನ ತಾಯಿಯು ಮೃತಳಾಗಿರುವಳು.

೧೩. ನಾನು ಅವಳನ್ನು ಉದ್ದೇಶಿಸಿ ಈ ಲಿಂಗವನ್ನು ಪ್ರತಿಷ್ಠೆಮಾಡಿದೆನು. ಇದು ನಿಮ್ಮ ಮಾತಿನಿಂದ ಪ್ರಸಿದ್ಧವಾಗಲಿ.

ಅಷ್ಟಮ್ಯಾಂ ಚ ಚತುರ್ದಶ್ಯಾಂ ಯಶ್ಚೈತತ್ಸ್ನಾಪಯಿಷ್ಯತಿ ।
ಯಾಜ್ಞವಲ್ಕ್ಯೇಶ್ವರೋತ್ಥಂ ಚ ಸ ವೈ ಶ್ರೇಯೋಽಪ್ಯವಾಪ್ಸ್ಯತಿ ॥ ೧೪ ॥
ಸೂತ ಉವಾಚ :—
ಅಥ ತೈರ್ಬ್ರಾಹ್ಮಣೈಃ ಸರ್ವೈಸ್ತಸ್ಯನಾಮ ಪ್ರತಿಷ್ಠಿತಂ ।
ಕಂಸಾರೀಶ್ವರ ಇತ್ಯೇವಂ ಗೌರವಾತ್ತಸ್ಯ ಸನ್ಮುನೇಃ ॥ ೧೫ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಕಂಸಾರೀಶ್ವರ ಸಂಜ್ಞಸ್ತು ಯಥಾ ಜಾತಸ್ತು ಪಾಪಹಾ ।
ಸ್ಥಾಪಿತಃ ಪಿಪ್ಪಲಾದೇನ ಸ್ವಯಂ ಚೈವ ಮಹಾತ್ಮನಾ ॥ ೧೬ ॥
ಯಶ್ಚೈತತ್ಪುಣ್ಯಮಾಖ್ಯಾನಂ ತಸ್ಯ ದೇವಸ್ಯ ಸನ್ನಿಧೌ ।
ಸಂಪಠೇಚ್ಛೃಣುಯಾದ್ವಾಽಪಿ ಸಮ್ಯಕ್ಭಕ್ತಿಸಮನ್ವಿತಃ ॥ ೧೭ ॥
ಮನಸಾ ಚಿಂತಿತಂ ಪಾಪಂ ಪರದಾರಕೃತಂ ಚ ಯತ್ ।
ತಸ್ಯ ತನ್ನಾಶಮಾಯಾತಿ ಪಿಪ್ಪಲಾದವಚೋ ಯಥಾ ॥ ೧೮ ॥
ಯಸ್ತಸ್ಯ ಪುರತೋ ಭಕ್ತ್ಯಾ ನೀಲರುದ್ರಾನ್ ಸದಾ ಜಪೇತ್ ।
ಪ್ರಾಣರುದ್ರಾನ್ ವಿಶೇಷೇಣ ಭವರುದ್ರ ಸಮನ್ವಿತಾನ್ ॥ ೧೯ ॥
ಬ್ರಹ್ಮಹತ್ಯೋದ್ಭವಂ ಚೈವ ಅಪಿ ತಸ್ಯ ಪ್ರಣಶ್ಯತಿ ।
ಪರಚಕ್ರಭಯೇ ಜಾತೇ ಹ್ಯನಾವೃಷ್ಟಿಭಯೇ ತಥಾ ॥ ೨೦ ॥
ಅಥರ್ವವೇದೇ ಸಾದ್ಯಂತೇ ಪಠಿತೇ ತಸ್ಯ ಚಾಗ್ರತಃ ।
ಶತ್ರುರ್ವಿಲಯಮಭ್ಯೇತಿ ವೃಷ್ಟಿಃ ಸಂಜಾಯತೇ ದ್ರುತಂ ॥ ೨೧ ॥

---

೧೪. ಅಷ್ಟಮೀ ಚತುರ್ದಶೀ ದಿನಗಳಲ್ಲಿ ಇದನ್ನೂ, ಯಾಜ್ಞವಲ್ಕ್ಯೇಶ್ವರನನ್ನೂ ಅಭಿಷೇಕ ಮಾಡಿದವನು ಶ್ರೇಯಸ್ಸನ್ನು ಹೊಂದುವನು."

೧೫. ಸೂತನು ಹೇಳುತ್ತಾನೆ :–ತರುವಾಯ ಆ ಬ್ರಾಹ್ಮಣರೆಲ್ಲ ಆ ಲಿಂಗಕ್ಕೆ ಪಿಪ್ಪಲಾದನ ಗೌರವದಿಂದ ಕಂಸಾರೀಶ್ವರ ಎಂದು ಹೆಸರನ್ನಿಟ್ಟರು.

೧೬. ದ್ವಿಜವರ್ಯರೆ! ಮಹಾತ್ಮನಾದ ಪಿಪ್ಪಲಾದನು ತಾನೇ ಪ್ರತಿಷ್ಠೆ ಮಾಡಿದ ಆ ಶಿವಲಿಂಗಕ್ಕೆ ಕಂಸಾರಿಯೆಂದು ಹೆಸರು ಬರಲು ಕಾರಣವನ್ನು ನೀವು ಕೇಳಿದಂತೆ ಹೇಳಿದ್ದೇನೆ.

೧೭–೧೮. ಪುಣ್ಯಕರವಾದ ಈ ಆಖ್ಯಾನವನ್ನು ಆ ಕಂಸಾರೀಶ್ವರನ ಸನ್ನಿಧಿಯಲ್ಲಿ ಭಕ್ತಿಯಿಂದ ಚೆನ್ನಾಗಿ ಹೇಳುವವನ ಮತ್ತು ಕೇಳುವವನ ಮಾನಸಿಕ ಪಾಪವೂ, ಪರಪತ್ನೀ ಸಂಗಮದಿಂದುಂಟಾದ ಪಾಪವೂ ಪಿಪ್ಪಲಾದನ ಮಾತಿನಂತೆ ಪರಿಹಾರವಾಗುವುದು.

೧೯–೨೧. ಆ ಲಿಂಗದ ಮುಂದೆ ನೀಲರುದ್ರ, ಪ್ರಾಣರುದ್ರ, ಭವರುದ್ರಗಳನ್ನು ಯಾವಾಗಲೂ ಜಪಿಸುವವನ ಬ್ರಹ್ಮಹತ್ಯೆಯಿಂದುಂಟಾದ ಪಾಪವು ನಾಶ

ರಾಜದೌಃಸ್ಥ್ಯೇ ಸಮುತ್ಪನ್ನೇ ರಾಜಾಭವತಿ ಧಾರ್ಮಿಕಃ ।
ಸರ್ವರೋಗವಿನಿರ್ಮುಕ್ತಃ ಪ್ರಜಾಪಾಲನತತ್ಪರಃ ॥ ೨೨ ॥
ಉಪಸರ್ಗಭಯೇ ಜಾತೇ ತಸ್ಯದೋಷಃ ಪ್ರಶಾಮ್ಯತಿ ।
ಶನೈಃ ಶನೈರಸಂದಿಗ್ಧಂ ಪಿಪ್ಪಲಾದವಚೋ ಯಥಾ ॥ ೨೩ ॥
ಕಿಂ ವಾ ತೇ ಬಹುನೋಕ್ತೇನ ಯತ್ಕಿಂಚಿದ್ವ್ಯಸನಂ ಮಹತ್ ।
ನತಸ್ಯವ್ಯಸನಂ ಕಿಂಚಿದಥರ್ವಣಪ್ರಕೀರ್ತನಾತ್ ॥ ೨೪ ॥
ಅಸ್ಯ ದೇವಸ್ಯ ಪುರತೋ ಯಾತಿ ನಾಶಂ ಚ ವೈ ದ್ರುತಂ ॥ ೨೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಕಂಸಾರೇಶ್ವರೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಷಟ್‌ಸಪ್ತತ್ಯುತ್ತರಶತತಮೋಽಧ್ಯಾಯಃ

---

ವಾಗುವುದು. ಶತ್ರುಸೈನ್ಯ, ಅನಾವೃಷ್ಟಿ ಇವುಗಳ ಭಯವುಂಟಾದಾಗ ಅವನ ಮುಂದೆ ಅಥರ್ವಣವೇದವನ್ನು ಸಂಪೂರ್ಣವಾಗಿ ಪಠಿಸಿದರೆ ಶತ್ರುವು ನಾಶವಾಗುವನು. ಕೂಡಲೆ ಮಳೆ ಸುರಿಯುವುದು.

೨೨. ರಾಜನಿಗೆ ದುರವಸ್ಥೆಯುಂಟಾದಾಗ ಪಠಿಸಿದರೆ ಅವನು ಧಾರ್ಮಿಕನೂ, ಸಕಲ ರೋಗಮುಕ್ತನೂ, ಪ್ರಜಾಪಾಲನೆಯಲ್ಲಿ ಆಸಕ್ತನೂ ಆಗುವನು.

೨೩. ಉತ್ಪಾತದ ಭಯವುಂಟಾದಾಗ ಪಠಿಸಿದರೆ ಅದರ ದೋಷವು ಪಿಪ್ಪಲಾದನ ಮಾತಿನಂತೆ ಮೆಲ್ಲಮೆಲ್ಲನೆ ನಿಶ್ಚಯವಾಗಿಯೂ ಶಾಂತವಾಗುವುದು.

೨೪–೨೫. ಬಹಳವಾಗಿ ಹೇಳುವುದರಿಂದೇನು ಪ್ರಯೋಜನ? ಈ ಮಹೇಶ್ವರ ಲಿಂಗದ ಮುಂದೆ ಅಥರ್ವಣವೇದವನ್ನು ಪಠಿಸುವುದರಿಂದ ಮಹಾ ವ್ಯಸನವೂ ಪರಿಹಾರವಾಗುವುದು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಕಂಸಾರೇಶ್ವರೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ನೂರೆಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ

### ಪಂಚಪಿಂಡಿಕೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ತಥಾನ್ಯಾಪಿ ಚ ತತ್ರಾಸ್ತಿ ಗೌರೀ ವೈ ಪಂಚಪಿಂಡಿಕಾ ।**
**ಲಕ್ಷ್ಮ್ಯಾ ಸಂಸ್ಥಾಪಿತಾ ಚೈವ ಮಾನುಷತ್ವ ವ್ಯವಸ್ಥಯಾ ॥ ೧ ॥**
**ತಸ್ಯಾ ದರ್ಶನಮಾತ್ರೇಣ ಗೌರೀ ಸೌಭಾಗ್ಯಮಾಪ್ನುಯಾತ್ ।**
**ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ವೃಷಸ್ಥೇ ಚ ದಿವಾಕರೇ ॥ ೨ ॥**
**ತಸ್ಯಾ ಉಪರಿ ನಾರೀ ಯಾ ಜಲಯಂತ್ರೇ ದಧಾತಿ ವೈ ।**
**ಸ್ರಾವ್ಯಮಾಣಂ ದಿವಾನಕ್ತಂ ಸೌಭಾಗ್ಯಂ ಪರಮಂ ಲಭೇತ್ ॥ ೩ ॥**
**ಯತ್ಫಲಂ ಲಭತೇ ಗೌರೀ ಸಮಸ್ತೈರ್ವಿಹಿತೈರ್ವ್ರತೈಃ ।**
**ಗೌರೀಸಮುದ್ಭವೈಶ್ಚೈವ ದಾನೈರ್ದತ್ತೈಸ್ತದಿಷ್ಟಜೈಃ ।**
**ತತ್ಫಲಂ ಲಭತೇ ಸರ್ವಂ ಜಲಯಂತ್ರಸ್ಯ ಕಾರಣಾತ್ ॥ ೪ ॥**
**ತಸ್ಮಾತ್ಸರ್ವಪ್ರಯತ್ನೇನ ಸ್ತ್ರೀಭಿಃ ಸೌಭಾಗ್ಯಕಾರಣಾತ್ ।**
**ಜಲಯಂತ್ರಂ ವಿಧಾತವ್ಯಂ ಜ್ಯೇಷ್ಠೇ ಗೌರ್ಯಾಃ ಪ್ರಯತ್ನತಃ ॥ ೫ ॥**

---

### ಕನ್ನಡದ ಅನುವಾದ

#### ಪಂಚಪಿಂಡಿಕೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :—ಅಲ್ಲಿ ಮನುಷ್ಯಳಾಗಿ ಅವತರಿಸಿದ ಲಕ್ಷ್ಮಿಯು ಸ್ಥಾಪಿಸಿದ ಪಂಚಪಿಂಡಿಕಾ ಗೌರಿಯಿರುವಳು.

೨–೩. ಹೆಂಗಸು ಅವಳ ದರ್ಶನ ಮಾತ್ರದಿಂದಲೇ ಸೌಭಾಗ್ಯವನ್ನು ಹೊಂದುವಳು. ದಿವಾಕರನು ವೃಷಭರಾಶಿಯಲ್ಲಿರುವಾಗ ಜ್ಯೇಷ್ಠ ಶುಕ್ಲಪಕ್ಷದಲ್ಲಿ ಆ ಗೌರಿಯಮೇಲೆ ಹಗಲು ರಾತ್ರಿ ನೀರನ್ನು ಸುರಿಸುವ ಜಲಯಂತ್ರವನ್ನು ಸ್ಥಾಪಿಸಿದವಳು ಉತ್ತಮ ಸೌಭಾಗ್ಯವನ್ನು ಹೊಂದುವಳು.

೪. ಈ ಜಲಯಂತ್ರ ಸ್ಥಾಪನೆಯಿಂದ ಸ್ತ್ರೀಯು ಸಕಲ ಗೌರೀ ವ್ರತಗಳಿಂದಲೂ, ಅವಳಿಗೆ ಪ್ರಿಯವಾದ ದಾನಗಳಿಂದಲೂ ಪಡೆಯುವ ಫಲವನ್ನೆಲ್ಲ ಹೊಂದುವಳು.

೫. ಆದುದರಿಂದ ಹೆಂಗಸರು ಜ್ಯೇಷ್ಠಮಾಸದಲ್ಲಿ ಸೌಭಾಗ್ಯಕ್ಕಾಗಿ ಗೌರಿಗೆ ಜಲಯಂತ್ರವನ್ನು ಸ್ಥಾಪಿಸಬೇಕು.

ಕಿಂ ವ್ರತೈರ್ನಿಯಮೈರ್ವಾಽಪಿ ಸ್ತ್ರೀಣಾಂ ಬ್ರಾಹ್ಮಣಸತ್ತಮಾಃ ।
ಜಪೈರ್ಹೋಮೈಃ ಕೃತ್ಯೈರನ್ಯೈರ್ಬಹುಕ್ಲೇಶಕರೈಶ್ಚ ತೈಃ ॥ ೬ ॥
ಸ್ತ್ರೀಣಾಂ ಬ್ರಾಹ್ಮಣ ಶಾರ್ದೂಲಾ ಜಲಯಂತ್ರೇ ಧೃತೇ ಸತಿ ।
ಗೌರ್ಯಾ ಉಪರಿ ಸದ್ಭಕ್ತ್ಯಾ ವೃಷಸ್ಥೇ ತೀಕ್ಷ್ಣದೀಧಿತೌ ॥ ೭ ॥
ನೈವಂ ಸಂಜಾಯತೇ ವಂಧ್ಯಾ ಕಾಕವಂಧ್ಯಾ ನ ಜಾಯತೇ ।
ನ ದೌರ್ಭಾಗ್ಯ ಸಮೋಪೇತಾ ಸಪ್ತಜನ್ಮಾಂತರಾಣಿ ಸಾ ॥ ೮ ॥

ಋಷಯ ಊಚುಃ:—

ಗೌರೀ ಚತುರ್ಭುಜಾ ಪ್ರೋಕ್ತಾ ದೃಶ್ಯತೇ ಪರಮೇಶ್ವರೀ ।
ಪಂಚ ಪಿಂಡಾ ಕಥಂ ಜಾತಾ ಹ್ಯೇತಂ ನಃ ಸಂಶಯಂ ವದ ॥ ೯ ॥

ಸೂತ ಉವಾಚ:—

ಯದಾ ಚ ಪ್ರಲಯೋ ಭಾವಿ ತದಾತ್ಮಾನಂ ಕರೋತ್ಯಸೌ ।
ಪಂಚ ಪಿಂಡೀಮಯಂ ವಿಪ್ರಾಃ ಕುರುತೇ ರೂಪಮುತ್ತಮಂ ॥ ೧೦ ॥
ಏಷಾ ಸಾ ಪರಮಾ ಶಕ್ತಿಃ ಸರ್ವಂ ವ್ಯಾಪ್ಯ ಸುರೇಶ್ವರೀ ।
ತಯಾ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥ ೧೧ ॥
ಪೃಥಿವ್ಯಾಪಶ್ಚ ತೇಜಶ್ಚ ವಾಯುರಾಕಾಶಮೇವ ಚ ।
ಸೃಷ್ಟ್ಯರ್ಥಂ ರಕ್ಷಯೇದೇಷಾ ತತಃ ಸ್ಯಾತ್ಪಂಚಪಿಂಡಿಕಾ ॥ ೧೨ ॥

---

೬–೭. ಬ್ರಾಹ್ಮಣೋತ್ತಮರೆ! ಸೂರ್ಯನು ವೃಷಭ ರಾಶಿಯಲ್ಲಿರುವಾಗ ಗೌರಿಯಮೇಲೆ ಜಲಯಂತ್ರವನ್ನು ಭಕ್ತಿಯಿಂದ ಸ್ಥಾಪಿಸಿದ ಹೆಂಗಸಿಗೆ ಅನೇಕ ಕ್ಲೇಶವನ್ನೆಸಗುವ ವ್ರತ, ಜಪ, ಹೋಮ ಇವುಗಳಿಂದೇನು ಪ್ರಯೋಜನ?

೮. ಅವಳು ಏಳು ಜನ್ಮಗಳಲ್ಲಿ ಬಂಜೆಯೂ, ಹುಟ್ಟುಬಂಜೆಯೂ, ದುರ್ಭಗಳೂ ಆಗುವುದಿಲ್ಲ.

೯. ಋಷಿಗಳು ಹೇಳುತ್ತಾರೆ:—ನಾವು ನಾಲ್ಕು ಭುಜಗಳುಳ್ಳ ಗೌರಿಯನ್ನು ನೋಡಿದ್ದೇವೆ. ಇವಳು ಪಂಚಪಿಂಡಿಕೆಯು ಹೇಗಾದಳು? ನಮಗೆ ಸಂದೇಹ ವುಂಟಾಗಿದೆ. ಇದನ್ನು ನಮಗೆ ಹೇಳು.

೧೦. ಸೂತನು ಹೇಳುತ್ತಾನೆ:—ವಿಪ್ರರೆ! ಈ ಗೌರಿಯು ಪ್ರಳಯವಾಗುವಾಗ ತನ್ನನ್ನು ಪಂಚಪಿಂಡರೂಪಳನ್ನಾಗಿ ಮಾಡುವಳು.

೧೧. ಪರಮಶಕ್ತಿರೂಪಳಾದ ಇವಳು ಚರಾಚರಾತ್ಮಕವಾದ ಮೂರು ಲೋಕಗಳನ್ನು ವ್ಯಾಪಿಸಿಕೊಂಡಿರುವಳು.

೧೨. ಇವಳು ಪೃಥಿವೀ, ನೀರು, ತೇಜಸ್ಸು, ಗಾಳಿ, ಆಕಾಶ ಈ ಐದನ್ನು ಸೃಷ್ಟಿಗಾಗಿ ರಕ್ಷಿಸುವುದರಿಂದ ಪಂಚಪಿಂಡರೂಪಳಾಗಿರುವಳು

ಯದಸ್ಯಾಂ ಪೂಜಿತಾಯಾಂ ತು ಪ್ರತ್ಯಕ್ಷಾಯಾಂ ಪ್ರಜಾಯತೇ ।
ಸಹಸ್ರ ತ್ರಿಗುಣಂ ತಚ್ಚ ಯತ್ರ ಸ್ಯಾತ್ಪಂಚಪಿಂಡಿಕಾ ॥ ೧೩ ॥
ಜ್ಯೇಷ್ಠೇ ಮಾಸಿ ವಿಶೇಷೇಣ ಜಲಯಂತ್ರಾರ್ಚನೇನ ಚ ।
ಅತ್ರ ವಃ ಕೀರ್ತಯಿಷ್ಯಾಮಿ ತ್ವಿತಿಹಾಸಂ ಪುರಾತನಂ ॥ ೧೪ ॥
ಯದ್ವೃತ್ತಂ ಕಾಶಿರಾಜಸ್ಯ ಭಾರ್ಯಾಯಾ ದ್ವಿಜಸತ್ತಮಾಃ ।
ಯಚ್ಚ ಪ್ರೋಕ್ತಂ ಪುರಾ ಲಕ್ಷ್ಮ್ಯಾ ವಿಷ್ಣವೇ ಪರಿಪೃಷ್ಟಯಾ ॥ ೧೫ ॥

ಲಕ್ಷ್ಮೀರುವಾಚ :—

**ಕಾಶಿರಾಜಃ ಪುರಾ ಹ್ಯಾಸೀಜ್ಜಯಸೇನ ಇತಿ ಶ್ರುತಃ ।**
**ತಸ್ಯ ಭಾರ್ಯಾಸಹಸ್ರಂತು ಹ್ಯಾಸೀದ್ರೂಪಸಮನ್ವಿತಂ ॥ ೧೬ ॥**
**ಅಥ ಚಾಽನ್ಯಾ ಪ್ರಿಯಾ ತೇನ ಲಬ್ಧಾ ಭಾರ್ಯಾ ಸುಶೋಭನಾ ।**
**ಮನುಷ್ಯತ್ವವ್ಯವಸ್ಥಾಯಾ ಮಮ ಚಾಂಶಕಲಾ ಹಿ ಯಾ ।**
**ಸುತಾ ಮದ್ರಾಧಿರಾಜಸ್ಯ ವಿಷ್ವಕ್ಸೇನಸ್ಯ ಧೀಮತಃ ॥ ೧೭ ॥**
**ಸಾ ಗತ್ವಾ ಪ್ರಾತರುತ್ಥಾಯ ಶುಭೇ ಗಂಗಾತಟೇ ತದಾ ।**
**ಪಂಚಪಿಂಡಾತ್ಮಿಕಾಂ ಗೌರೀಂ ಕೃತ್ವಾ ಕರ್ದಮಸಂಭವಾಂ ॥ ೧೮ ॥**
**ತತಃ ಸಂಪೂಜಯಾಮಾಸ ಮಂತ್ರೈಃ ಪಂಚಭಿರೇವ ಚ ।**
**ತತೋ ಗಂಧೈಃಪುಷ್ಪೈರ್ಮಾಲ್ಯೈರ್ಧೂಪೈರ್ವಸ್ತ್ರೈಃ ಸುಶೋಭನೈಃ ॥ ೧೯ ॥**
**ನೈವೇದ್ಯೈಃ ಪರಮಾನ್ನೈಶ್ಚ ಗೀತೈರ್ನೃತ್ಯೈಃ ಪ್ರವಾದಿತ್ರೈಃ ।**
**ತತೋ ವಿಸೃಜ್ಯ ತಾಂ ದೇವೀಂ ತದುದ್ದೇಶೇನ ವೈ ತತಃ ॥ ೨೦ ॥**

---

೧೩–೧೪. ಈ ಪಂಚಪಿಂಡಿಕಾ ಗೌರಿಯನ್ನು ಜ್ಯೇಷ್ಠಮಾಸದಲ್ಲಿ ಜಲಯಂತ್ರವನ್ನಿಟ್ಟು ಪೂಜಿಸಿದರೆ ಅವಳು ಪ್ರತ್ಯಕ್ಷಳಾಗಿ ಮೂರು ಸಾವಿರದಷ್ಟು ಅಧಿಕವಾದ ಫಲಗಳನ್ನು ಕೊಡುವಳು. ಈ ವಿಷಯದಲ್ಲಿ ನಿಮಗೆ ಹಿಂದಿನ ಒಂದು ಇತಿಹಾಸವನ್ನು ಹೇಳುವೆನು.

೧೫. ಇದು ಕಾಶಿರಾಜನ ಪತ್ನಿಯ ವಿಷಯದಲ್ಲಿ ನಡೆದಿರುವುದು. ಹಿಂದೆ ಈ ಇತಿಹಾಸವನ್ನು ಲಕ್ಷ್ಮಿಯು ತನ್ನನ್ನು ಪ್ರಶ್ನೆಮಾಡಿದ ವಿಷ್ಣುವಿಗೆ ಹೇಳಿರುವಳು.

೧೬. ಲಕ್ಷ್ಮಿಯು ಹೇಳುತ್ತಾಳೆ :—ಹಿಂದೆ ಜಯಸೇನನೆಂಬ ಕಾಶಿದೇಶದ ದೊರೆಯಿದ್ದನು. ಅವನಿಗೆ ಸುಂದರಿಯರಾದ ಸಾವಿರ ಮಂದಿ ಮಡದಿಯರಿದ್ದರು.

೧೭. ಅವನಿಗೆ ನನ್ನ ಅಂಶದಿಂದ ಮನುಷ್ಯಳಾಗಿ ಅವತರಿಸಿದ ವಿಷ್ವಕ್ಸೇನನೆಂಬ ಮದ್ರರಾಜನ ಮಗಳು ಇನ್ನೊಬ್ಬ ಪ್ರೇಯಸಿಯಾದಳು.

೧೮–೨೧. ಅವಳು ಬೆಳಗ್ಗೆ ಎದ್ದು ಗಂಗಾದಡಕ್ಕೆ ಹೋಗಿ ಕೆಸರಿನಿಂದ ಪಂಚಪಿಂಡಿಕಾ ಗೌರಿಯನ್ನು ನಿರ್ಮಿಸಿ ಐದು ಮಂತ್ರಗಳಿಂದಲೂ, ಗಂಧ, ಮಾಲ್ಯ, ಧೂಪ, ವಸ್ತ್ರ, ನೈವೇದ್ಯ, ಪರಮಾನ್ನ, ಗೀತ, ನೃತ್ಯ, ವಾದ್ಯಗಳಿಂದಲೂ

**ದತ್ವಾ ದಾನಾನಿ ಭೂರೀಣಿ ಗೌರಿಣೀನಾಂ ದ್ವಿಜನ್ಮನಾಂ ।**
**ತತಶ್ಚ ಗೃಹಮಭ್ಯೇತಿ ಭೂರಿವಾದಿತ್ರ ನಿಃಸ್ವನೈಃ ॥ ೨೧ ॥**
**ಯಥಾ ಯಥಾ ಚ ತಾಂ ಪೂಜಾಂ ತಸ್ಯಾ ಗೌರ್ಯಾ ಕರೋತಿ ಸಾ ।**
**ತಥಾ ತಥಾ ತು ಸೌಭಾಗ್ಯಂ ತಸ್ಯಾಶ್ಚಾಪ್ಯಧಿಕಂ ಭವೇತ್ ॥ ೨೨ ॥**
**ಸರ್ವಾಸಾಂ ಚ ಸಪತ್ನೀನಾಂ ಸೌಭಾಗ್ಯಂ ವಾಧಿಕಂ ಭವೇತ್ ॥ ೨೩ ॥**
**ಅಥ ತಸ್ಯಾಃ ಸಪತ್ನ್ಯೋ ಯಾಃ ಸರ್ವಾ ದುಃಖಸಮನ್ವಿತಾಃ ।**
**ದೃಷ್ಟ್ವಾ ಸೌಭಾಗ್ಯವೃದ್ಧಿಂ ತಾಂ ತಸ್ಯಾ ಏವ ದಿನೇ ದಿನೇ ॥ ೨೪ ॥**
**ಏಕಾಃ ಪ್ರೋಚುಃ ಕರ್ಮಚೈತದ್ಯದೇಷಾ ಕುರುತೇ ಸದಾ ।**
**ಮೃಣ್ಮಯಾಂಶ್ಚ ಸಮಾದಾಯ ಪೂಜಯೇತ್ಪಂಚಪಿಂಡಕಾನ್ ॥ ೨೫ ॥**
**ಅನ್ಯಾಸ್ತ್ವಾಂ ಮಂತ್ರಸಂಸಿದ್ಧಾಂ ಪ್ರವದಂತಿ ಮಹರ್ಷಯಃ ।**
**ಅನ್ಯಾ ವದಂತಿ ಪುಣ್ಯಾನಿ ಹ್ಯಸ್ಯಾಃ ಪೂರ್ವಕೃತಾನಿ ಚ ॥ ೨೬ ॥**
**ಏವಂ ತಾಸಾಂ ಸುದುಃಖಾನಾಂ ಮಹಾನ್ ಕಾಲೋ ಜಗಾಮ ಹ ।**
**ಕಸ್ಯಚಿತ್ತ್ವಥ ಕಾಲಸ್ಯ ಸರ್ವಾಃ ಸಂಮಂತ್ರ್ಯ ತಾ ಮಿಥಃ ॥ ೨೭ ॥**
**ತಸ್ಯಾಃ ಸನ್ನಿಧಿಮಾಜಗ್ಮುಸ್ತಸ್ಮಿನ್ನೇವ ಜಲಾಶಯೇ ।**
**ಯತ್ರ ಸಾ ಪೂಜಯೇದ್ಗೌರೀಂ ಕೃತ್ವಾ ತಾಂ ಪಂಚಪಿಂಡಿಕಾಂ ॥ ೨೮ ॥**

---

ಪೂಜಿಸಿ ವಿಸರ್ಜನೆಮಾಡಿ ಗೌರಿಯ ಉದ್ದೇಶದಿಂದ ಕನ್ಯಕೆಯರಿಗೂ, ಬ್ರಾಹ್ಮಣರಿಗೂ ಬಹಳ ದಾನಗಳನ್ನು ಮಾಡಿ ವಾದ್ಯಧ್ವನಿಗಳೊಡನೆ ಮನೆಗೆ ಬರುತ್ತಿದ್ದಳು.

೨೨–೨೩. ಅವಳು ಗೌರಿಯನ್ನು ಪೂಜಿಸಿದ ಹಾಗೆಲ್ಲ ಅವಳ ಸೌಂದರ್ಯವು ಎಲ್ಲ ಸವತಿಯರಿಗಿಂತಲೂ ಅಧಿಕವಾಯಿತು.

೨೪. ತರುವಾಯ ಸವತಿಯರು ಪ್ರತಿದಿನವೂ ಅವಳ ಸೌಭಾಗ್ಯವು ಅಭಿವೃದ್ಧಿಯಾಗುತ್ತಿರುವುದನ್ನು ನೋಡಿ ದುಃಖಿಗೊಂಡರು.

೨೫. ಕೆಲವರು ಇವಳು ಮಣ್ಣಿನಿಂದ ಪಂಚಪಿಂಡಗಳನ್ನು ಮಾಡಿ ಪೂಜಿಸುವುದರಿಂದ ಹೀಗಾಗಿರುವಳೆಂದರು.

೨೬. ಮತ್ತೆ ಕೆಲವರು ಮಂತ್ರಸಿದ್ಧಿಯೆಂದರು. ಇನ್ನು ಕೆಲವರು ಇವಳು ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯವೆಂದರು.

೨೭–೨೮. ಹೀಗೆ ಆ ಸವತಿಯರು ಅತ್ಯಂತವಾಗಿ ದುಃಖಪಡುತ್ತಿರಲು ಬಹಳಕಾಲವು ಕಳೆಯಿತು. ಕೆಲವು ಕಾಲದ ಮೇಲೆ ಅವರೆಲ್ಲ ಪರಸ್ಪರ ಆಲೋಚಿಸಿ ಅವಳು ಪಂಚಪಿಂಡಿಕಾ ಗೌರಿಯನ್ನು ಪೂಜಿಸುತ್ತಿರುವ ಸರೋವರಕ್ಕೆ ಬಂದರು.

ತತಃ ಸರ್ವಾಃ ಸಮಾಲೋಕ್ಯ ತ್ಯಕ್ತ್ವಾ ಗೌರೀ ಪ್ರಪೂಜನಂ ।
ಸಮ್ಮುಖೀ ಪ್ರಯಯೌ ತೂರ್ಣಂ ಕೃತಾಂಜಲಿಪುಟಾ ಸ್ಥಿತಾ ॥ ೨೯ ॥
ಸ್ವಾಗತಂ ವೋ ಮಹಾಭಾಗಾ ಭೂಯಃ ಸುಸ್ವಾಗತಂ ಚ ವಃ ।
ಕೃತ್ಯಂ ನಿವೇದ್ಯತಾಂ ಶೀಘ್ರಂ ಯೇನಾಶು ಪ್ರಕರೋಮ್ಯಹಂ ॥ ೩೦ ॥

ಸಪತ್ನ್ಯ ಊಚುಃ:—

ವಯಂ ಸರ್ವಾಃ ಸಮಾಯಾತಾಃ ಕೌತುಕೇನ ತವಾಂತಿಕಂ ।
ದೌರ್ಭಾಗ್ಯವಹ್ನಿ ನಿರ್ದಗ್ಧಾಸ್ತವ ಸೌಭಾಗ್ಯಜೇನ ಚ ॥ ೩೧ ॥
ತಸ್ಮಾದ್ವದ ಮಹಾಭಾಗೇ ಮೃಣ್ಮಯಾಂ ಪಂಚಪಿಂಡಿಕಾಂ ।
ನಿತ್ಯಮರ್ಚಯಸಿ ತ್ವಂ ಕಿಂ ಸೌಭಾಗ್ಯಸ್ಯ ವಿವರ್ಧನಂ ॥ ೩೨ ॥
ಕಿಂ ತೇ ಕಾರಣಮೇತದ್ಧಿ ಕಿಂ ವಾ ಮಂತ್ರಸಮುದ್ಭವಃ ।
ಪ್ರಭಾವೋಽಯಂ ಮಹಾಭಾಗೇ ಗುಹ್ಯಂ ಚೇನ್ನೋ ವದಸ್ವ ನಃ ॥ ೩೩ ॥

ಪದ್ಮಾವತ್ಯುವಾಚ:—

ರಹಸ್ಯಂ ಪರಮಂ ಗುಹ್ಯಂ ಯತ್ಪೃಷ್ಟಾಸ್ಮಿ ಶುಭಾನನಾಃ ।
ಅವಕ್ತವ್ಯಂ ವದಿಷ್ಯಾಮಿ ಭವತೀನಾಂ ತಥಾಽಪಿ ಚ ॥ ೩೪ ॥
ಗೌರೀಪೂಜನಕಾಲೇ ತು ಯಸ್ಮಾಚ್ಚೈವ ಸಮಾಗತಾಃ ।
ಸರ್ವಾ ಮಮ ಭಗಿನ್ಯಃಸ್ಥ ಈರ್ಷ್ಯಾರ್ಥವರ್ೋ ನಮೇಽಸ್ತಿ ಚ ॥ ೩೫ ॥

---

೨೯. ಅವಳು ಸವತಿಯರನ್ನೆಲ್ಲ ನೋಡಿ ಗೌರೀಪೂಜೆಯನ್ನು ತ್ಯಜಿಸಿ ಕೈಮುಗಿದುಕೊಂಡು ಬೇಗನೆ ಅವರನ್ನು ಎದುರುಗೊಂಡಳು.

೩೦. ಮಹಾ ಭಾಗ್ಯವತಿಯರೆ! ನಿಮಗೆ ಸ್ವಾಗತವಾಗಲಿ. ಸುಸ್ವಾಗತವಾಗಲಿ. ನಾನು ಮಾಡಬೇಕಾದ ಕಾರ್ಯವನ್ನು ಬೇಗನೆ ತಿಳಿಸಿರಿ. ಶೀಘ್ರವಾಗಿ ಅದನ್ನು ಮಾಡುವೆನು.

೩೧. ಸವತಿಯರು ಹೇಳುತ್ತಾರೆ:—ದೌರ್ಭಾಗ್ಯವಹ್ನಿಯಿಂದ ದಗ್ಧರಾದ ನಾವು ನಿನ್ನ ಸೌಭಾಗ್ಯವನ್ನು ನೋಡಿ ಕುತೂಹಲದಿಂದ ನಿನ್ನ ಬಳಿಗೆ ಬಂದಿದ್ದೇವೆ.

೩೨. ಆದುದರಿಂದೆಲೈ ಮಹಾತ್ಮಳೆ! ನೀನು ನಿತ್ಯವೂ ಮಣ್ಣಿನ ಪಂಚಪಿಂಡಗಳನ್ನು ಪೂಜಿಸುತ್ತಿರುವೆ. ಇದು ನಿನ್ನ ಸೌಭಾಗ್ಯವನ್ನು ಹೆಚ್ಚಿಸುವುದೇ?

೩೩. ಈ ಪೂಜೆಯು ನಿನ್ನ ಸೌಭಾಗ್ಯಕ್ಕೆ ಕಾರಣವಾಗಿರುವುದೇ? ಅಥವಾ ಮಂತ್ರಪ್ರಭಾವವೊ? ರಹಸ್ಯವಲ್ಲದಿದ್ದರೆ ನಮಗೆ ಹೇಳು.

೩೪–೩೫. ಪದ್ಮಾವತಿಯು ಹೇಳುತ್ತಾಳೆ:— ಸುಂದರಿಯರೆ! ನೀವು ಕೇಳಿರುವುದು ಅತ್ಯಂತ ರಹಸ್ಯವಾದುದು ಮತ್ತು ಹೇಳತಕ್ಕುದಲ್ಲ. ಆದರೂ ನಿಮಗೆ ಅದನ್ನು ಹೇಳುತ್ತೇನೆ. ನಾನು ಗೌರೀಪೂಜೆಯನ್ನು ಮಾಡುತ್ತಿರುವಾಗ ನೀವು ಬಂದಿದ್ದೀರಿ. ನೀವೆಲ್ಲ ನನಗೆ ಸಹೋದರಿಯರು. ನನಗೆ ಅಸೂಯೆಯಿಲ್ಲ.

ಅಹಮಾಸಂ ಪುರಾ ಕನ್ಯಾ ಪುರೇ ಕುಸುಮಸಂಜ್ಞಿತೇ ।
ವೀರಸೇನಸ್ಯ ಶೂದ್ರಸ್ಯ ವಣಿಕ್ಪುತ್ರಸ್ಯ ಧೀಮತಃ ।
ತೇನ ದತ್ತಾಽಸ್ಮಿ ಧರ್ಮೇಣ ವಿವಾಹಾರ್ಥಂ ಮಹಾತ್ಮನಾ ॥ ೩೬ ॥
ತತೋ ವಿವಾಹಸಮಯೇ ಮಮ ದತ್ತಾನಿ ವೃದ್ಧಯೇ ।
ಪಂಚಾಕ್ಷರಾಣಿ ಶ್ರೇಷ್ಠಾನಿ ಯೋಷಿತಾ ದೀಕ್ಷಯಾ ಸಹ ।
ಗೌರೀ ಪೂಜಾ ಕೃತೇ ಚೈವ ಪ್ರೋಕ್ತಾ ಚಾಽಹಂ ತತಃ ಪರಂ ॥ ೩೭ ॥
ಯಾವತ್ಪುತ್ರಿ ತ್ವಮಾತ್ಮಾಸಮೇತೈಃ ಪೂಜಯಸೇಽಕ್ಷರೈಃ ।
ಜಲಪಾನಂ ನ ಕರ್ತವ್ಯಂ ತಾವಚ್ಚೈವ ಕಥಂಚನ ॥ ೩೮ ॥
ಯೇನ ಸಂಪ್ರಾಪ್ಸ್ಯಸೇಽಭೀಷ್ಟಂ ತತ್ಪ್ರಭಾವಾದ್ಯದೀಪ್ಸಿತಂ ।
ತಥೇತಿ ಚ ಮಯಾ ಪ್ರೋಕ್ತಂ ತಸ್ಯಾಶ್ಚೈವ ವರಾನನೇ ॥ ೩೯ ॥
ತತೋ ವಿವಾಹೇ ನಿರ್ವೃತ್ತೇ ಗತಾಽಹಂ ಪತಿನಾ ಸಹ ।
ಶ್ವಶುರಸ್ತಿಷ್ಠತೇ ಯತ್ರ ಶ್ವಶ್ರೂಶ್ಚೈವ ಸುದಾರುಣಾ ॥ ೪೦ ॥
ಗೌರೀ ಪೂಜಾ ಕೃತೇ ಮಾಂ ಚ ನಿವಾರಯತಿ ಸರ್ವದಾ ।
ತತೋಽಹಂ ಭಯಸಂತ್ರಸ್ತಾ ಗೌರೀ ಭಕ್ತಿಪರಾಯಣಾ ।
ಜಲಾರ್ಥಂ ಯತ್ರ ಗಚ್ಛಾಮಿ ತಸ್ಮಿಂಶ್ಚೈವ ಜಲಾಶ್ರಯೇ ॥ ೪೧ ॥
ತತಃ ಕರ್ದಮಮಾದಾಯ ಮಂತ್ರೈಃ ಪಂಚಭಿರೇವ ಚ ।
ತೈರೇವ ಪೂಜಯಾಮ್ಯೇವ ಗೌರೀಂ ಭಕ್ತಿಪರಾಯಣಾ ॥ ೪೨ ॥

---

೩೬. ನಾನು ಹಿಂದೆ ಕುಸುಮಪುರದಲ್ಲಿರುವ ವೀರಸೇನನೆಂಬ ಶೂದ್ರನ ಕನ್ಯೆಯಾಗಿದ್ದೆನು. ನನ್ನ ತಂದೆಯು ನನ್ನನ್ನು ಒಬ್ಬ ವರ್ತಕನ ಮಗನಿಗೆ ವಿವಾಹ ಮಾಡಿಕೊಟ್ಟನು.

೩೭. ಆ ವಿವಾಹ ಸಮಯದಲ್ಲಿ ನನ್ನ ಅಭಿವೃದ್ಧಿಗಾಗಿ ಸುಮಂಗಲಿಯು ಗೌರಿಯ ಪೂಜೆಗಾಗಿ ಐದು ಅಕ್ಷರಗಳನ್ನಿತ್ತು ಹೀಗೆಂದಳು.

೩೮–೩೯. "ನೀನು ಈ ಅಕ್ಷರಗಳಿಂದ ಪೂಜಿಸುವವರೆಗೆ ನೀರನ್ನು ಕುಡಿಯ ಬಾರದು. ನೀನು ಗೌರಿಯ ಪ್ರಭಾವದಿಂದ ಅಭೀಷ್ಟವನ್ನು ಹೊಂದುವೆ." ನಾನು ಹಾಗೆಯೇ ಆಗಲೆಂದು ಅವಳಿಗೆ ಮಾತುಕೊಟ್ಟೆನು.

೪೦–೪೩. ತರುವಾಯ ನಾನು ವಿವಾಹವು ಮುಗಿಯಲು ಪತಿಯೊಡನೆ ಅತ್ತೆ ಮಾವಂದಿರ ಹತ್ತಿರಕ್ಕೆ ಹೋದೆನು. ಅಲ್ಲಿ ನನ್ನ ಅತ್ತೆಯು ಯಾವಾಗಲೂ ಗೌರೀಪೂಜೆಯನ್ನು ಮಾಡಬಾರದೆಂದು ತಡೆಯುತ್ತಿದ್ದಳು. ನಾನು ಭಯದಿಂದ ಗೌರೀಭಕ್ತಿಯಲ್ಲಿ ನಿರತಳಾಗಿ ನೀರನ್ನು ತರಲು ಹೋಗುತ್ತಿದ್ದ ಸರೋವರದಲ್ಲಿಯೇ ಕೆಸರನ್ನು ತೆಗೆದುಕೊಂಡು ಅದರಲ್ಲಿಯೇ ಆ ಐದು ಮಂತ್ರಗಳಿಂದ ಗೌರಿಯನ್ನು ಪೂಜಿಸಿ ಆ ಕೆಸರನ್ನು ನೀರಿನಲ್ಲಿ ಎಸೆದು ಮನೆಗೆ ಹೋಗುತ್ತಿದ್ದೆನು. ಕೆಲವು

ಪ್ರಕ್ಷ್ಯಾಮಿ ತತಸ್ತೋಯೇ ತತೋ ಗಚ್ಛಾಮಿ ಮಂದಿರಂ ।
ಕಸ್ಯಚಿತ್ತ್ವಥ ಕಾಲಸ್ಯ ಭರ್ತಾ ಮೇ ಪ್ರಸ್ಥಿತಃ ಶುಭಃ ।
ದೇಶಾಂತರಂ ವಣಿಗ್ವೃತ್ತ್ಯಾ ಸೋಽಪಿ ಮಾರ್ಗಂ ಸಮಾಶ್ರಿತಃ ॥ ೪೩ ॥
ಸ ಗಚ್ಛನ್ಮರುಮಾರ್ಗೇಣ ಮಾಂ ಸಮಾದಾಯ ಸ್ನೇಹತಃ ।
ಸಂಪ್ರಾಪ್ತೋ ನಿರ್ಜಲಂ ದೇಶಂ ಸುರೌದ್ರಂ ಮರುಮಂಡಲಂ ॥ ೪೪ ॥
ತಥಾ ರೌದ್ರತರೇ ಕಾಲೇ ವೃಷಸ್ಥೇ ದಿವಸಾಧಿಪೇ ।
ತತಃ ಸಾರ್ಥಃ ಸಮಸ್ತಶ್ಚ ವಿಶ್ರಾಂತಃ ಸ್ಥಲಮಧ್ಯಗಃ ॥ ೪೫ ॥
ಕೂಪಮೇಕಂ ಸಮಾಶ್ರಿತ್ಯ ಗಂಭೀರಂ ಜಲದೋಪಮಂ ।
ಏತಸ್ಮಿನ್ನೇವ ಕಾಲೇ ತು ಮಯಾ ದೃಷ್ಟಃ ಸಮೀಪಗಃ ।
ತೋಯಾಕಾರೋ ಮರುದ್ದೇಶಸ್ತತಶ್ಚಿತ್ತೇ ವಿಚಿಂತಿತಂ ॥ ೪೬ ॥
ಯತ್ತಚ್ಚ ದೃಶ್ಯತೇ ತೋಯಂ ಸಮೀಪಸ್ಥಂ ತಥಾ ಬಹು ।
ಅತ್ರ ಸ್ನಾತ್ವಾ ಶುಚಿರ್ಭೂತ್ವಾ ಗೌರೀಮಭ್ಯರ್ಚ್ಯ ಭಕ್ತಿತಃ ।
ಪಿಬಾಮಿ ಸಲಿಲಂ ಪಶ್ಚಾತ್ಸುಸ್ವಾದು ಸರಸೀಭವಂ ॥ ೪೭ ॥
ತತಃ ಸಂಪ್ರಸ್ಥಿತಾ ಯಾವತ್ಪ್ರಗಚ್ಛಾಮಿ ಪದಾತ್ಪದಂ ।
ಯಾವದ್ದೂರತರಂ ಯಾಮಿ ತಾವತ್ಸಾ ಮೃಗತೃಷ್ಣಿಕಾ ॥ ೪೮ ॥
ಏತಸ್ಮಿನ್ನಂತರೇ ಪ್ರಾಪ್ತೋ ನಭೋಮಧ್ಯಂ ದಿವಾಕರಃ ।
ವೃಷಸ್ಥೋ ಯೇನ ದಹ್ಯಾಮಿ ಹ್ಯುಪರಿಷ್ಟಾಚ್ಛುಭಾನನಾ ॥ ೪೯ ॥

---

ಕಾಲದಮೇಲೆ ದೇಶಾಂತರಕ್ಕೆ ವ್ಯಾಪಾರಕ್ಕಾಗಿ ಹೋದ ನನ್ನ ಪತಿಯು ಆ ಮಾರ್ಗದಲ್ಲಿ ಬಂದನು.

೪೪. ಅವನು ಸ್ನೇಹದಿಂದ ನನ್ನನ್ನು ಕರೆದುಕೊಂಡು ಮರುಭೂಮಿಯಲ್ಲಿ ಹೋಗುತ್ತ ನಿರ್ಜಲವೂ, ಭಯಂಕರವೂ ಆದ ಮರುಪ್ರದೇಶವನ್ನು ಹೊಂದಿದನು.

೪೫–೪೬. ಸೂರ್ಯನು ವೃಷಭ ರಾಶಿಯಲ್ಲಿರುವ ಆ ಭಯಂಕರ ಕಾಲದಲ್ಲಿ ಸಮಸ್ತ ವರ್ತಕರೂ ಮೇಘದಂತಿರುವ ಒಂದು ಬಾವಿಯನ್ನು ಹೊಂದಿ ವಿಶ್ರಾಂತಿಗೊಂಡರು. ಈ ಸಮಯದಲ್ಲಿ ನಾನು ಹತ್ತಿರದಲ್ಲಿ ನೀರಿನಂತೆ ಕಾಣುತ್ತಿದ್ದ ಮರುಭೂಮಿಯನ್ನು ನೋಡಿ ಮನಸ್ಸಿನಲ್ಲಿ ಹೀಗೆ ಆಲೋಚಿಸಿದೆನು.

೪೭. ನಾನು ಇಲ್ಲಿ ಸಮೀಪದಲ್ಲಿ ಕಾಣುತ್ತಿರುವ ನೀರಿನಲ್ಲಿ ಮಿಂದು ಶುದ್ಧಳಾಗಿ ಭಕ್ತಿಯಿಂದ ಗೌರಿಯನ್ನರ್ಚಿಸಿ ಅನಂತರ ಸರೋವರದ ಸಿಹಿ ನೀರನ್ನು ಕುಡಿಯುವೆನು.

೪೮–೪೯. ಅನಂತರ ಅಲ್ಲಿಂದ ಹೊರಟು ಹೆಜ್ಜೆಯಿಂದ ಹೆಜ್ಜೆ ಇಡುತ್ತ ಹೋಗುವಷ್ಟರಲ್ಲಿ ಅದು ಬಿಸಿಲುಕುದುರೆಯಾಗಿದ್ದಿತು. ಇಷ್ಟರಲ್ಲಿ ವೃಷಭ ಮಾಸದ ಭಾಸ್ಕರನು ಆಕಾಶಮಧ್ಯಕ್ಕೆ ಬಂದು ಮೇಲ್ಗಡೆ ನನ್ನನ್ನು ಸುಡುತ್ತಿದ್ದನು.

ಅಧೋಭಾಗೇ ಸುತಪ್ತಾಭಿರ್ವಾಲುಕಾಭಿಃ ಸಮಂತತಃ ।
ತೃಷ್ಣಾರ್ತಾಹಂ ತತಸ್ತಸ್ಮಿನ್ ಮರುದೇಶೇ ಸಮಾಕುಲಾ ॥ ೫೦ ॥
ತತಶ್ಚ ಪತಿತಾ ಭೂಮೌ ವಿಸ್ಫೋಟಕ ಸಮಾವೃತಾ ।
ತತೋ ಮಯಾ ಸ್ಮೃತಾ ಚಿತ್ತೇ ಕಥಾ ಭಾರತ ಸಂಭವಾ ॥ ೫೧ ॥
ನೃಗೇಣ ತು ಯಥಾ ಯಜ್ಞೋ ವಾಲುಕಾಭಿರ್ವಿನಿರ್ಮಿತಃ ।
ಕೂಪಾಂತಃ ಕ್ಷಿಪ್ಯಮಾಣೇನ ತೃಣಲೋಷ್ಟಾಂಬುವರ್ಜಿತಂ ॥ ೫೨ ॥
ಭಕ್ತಿಗ್ರಾಹ್ಯಾಸ್ತತೋ ದೇವಾಸ್ತುಷ್ಟಾಸ್ತಸ್ಯ ಮಹಾತ್ಮನಃ ।
ತದಹಂ ವಾಲುಕಾಭಿಶ್ಚ ಪೂಜಯಾಮಿ ಹರಪ್ರಿಯಾಂ ॥ ೫೩ ॥
ತೇನ ತುಷ್ಟಾ ತು ಸಾ ದೇವೀ ಮಮ ರಾಜ್ಯಂ ಪ್ರಯಚ್ಛತಿ ।
ಅದ್ಯ ದೇಹಾಂತರೇ ಪ್ರಾಪ್ತೇ ಮನೋಭೀಷ್ಟಮನಂತಕಂ ॥ ೫೪ ॥
ತತಸ್ತು ಪಂಚಭಿರ್ಮಂತ್ರೈಸ್ತೈರೇವ ಸ್ಮೃತಿಮಾಗತೈಃ ।
ಪಂಚಭಿರ್ಮುಷ್ಟಿಭಿರ್ದೇವೀ ವಾಲುಕೋತ್ಥೈಃ ಪ್ರಪೂಜಿತಾ ॥ ೫೫ ॥
ತತಃ ಪಂಚತ್ವಮಾಪನ್ನಾ ತತ್ಕಾಲೇಽಹಂ ವರಾಂಗನಾಃ ।
ದಶಾರ್ಣಾಧಿಪತೇರ್ಜಾತಾ ಸದನೇ ಲೋಕವಿಶ್ರುತೇ ॥ ೫೬ ॥
ಜಾತಿಸ್ಮರಣಸಂಯುಕ್ತಾ ತಸ್ಯಾ ದೇವ್ಯಾಃ ಪ್ರಸಾದತಃ ।
ಭವತೀನಾಂ ಕನಿಷ್ಠಾಽಸ್ಮಿ ಜ್ಯೇಷ್ಠಾ ಸೌಭಾಗ್ಯತಃ ಸ್ಥಿತಾ ॥ ೫೭ ॥

---

೫೦–೫೩. ಕೆಳಗೆ ಕಾದ ಮರಳು ಸುಡುತ್ತಿತ್ತು. ಅನಂತರ ಬಾಯಾರಿಕೆಗೊಂಡ ನಾನು ಆ ಮರುಭೂಮಿಯಲ್ಲಿ ವ್ಯಾಕುಲಗೊಂಡು ಕೆಳಗೆ ಬೀಳಲು ಶರೀರದಲ್ಲಿ ಗುಳ್ಳೆಗಳಾದುವು. ಅನಂತರ ನಾನು ಮನಸ್ಸಿನಲ್ಲಿ ಭಾರತವಲ್ಲಿ ನೃಗನು ಹುಲ್ಲು, ಹೆಂಟೆ, ನೀರಿಲ್ಲದೆ ಮರಳನ್ನು ಬಾವಿಯೊಳಗೆ ಎಸೆದು ಮಾಡಿದ ಯಜ್ಞದಿಂದ ಆ ಮಹಾತ್ಮನಿಗೆ ಭಕ್ತಿಪರವಶರಾದ ದೇವತೆಗಳು ಸಂತುಷ್ಟರಾಗಿರುವ ಕಥೆಯನ್ನು ಸ್ಮರಿಸಿದೆನು. ಅದರಂತೆ ನಾನು ಗೌರಿಯನ್ನು ಪೂಜಿಸುವೆನು.

೫೪. ಅದರಿಂದ ಸಂತುಷ್ಟಳಾದ ದೇವಿಯು ಈ ಜನ್ಮದಲ್ಲಿ ರಾಜ್ಯವನ್ನೂ, ಇನ್ನೊಂದು ಜನ್ಮದಲ್ಲಿ ಅನಂತಾಭೀಷ್ಟಗಳನ್ನೂ ಕೊಡುವಳು ಎಂದು ಆಲೋಚಿಸಿದೆನು.

೫೫. ಅನಂತರ ಸ್ಮರಣೆಗೆ ಬಂದ ಆ ಐದು ಮಂತ್ರಗಳಿಂದಲೇ ಐದು ಮುಷ್ಟಿ ಮರಳಿನಿಂದ ದೇವಿಯನ್ನಾರಾಧಿಸಿದೆನು.

೫೬–೫೭. ಆಗಲೇ ಮೃತಳಾಗಿ ಆ ದೇವಿಯ ಅನುಗ್ರಹದಿಂದ ಜಾತಿಸ್ಮರಣೆಯಿಂದ ಸಹಿತಳಾಗಿ ಪ್ರಪಂಚದಲ್ಲಿ ಪ್ರಸಿದ್ಧವಾದ ದಶಾರ್ಣಾಧಿಪತಿಯ ಮನೆಯಲ್ಲಿ ಹುಟ್ಟಿದೆನು. ಈಗ ನಿಮಗೆ ತಂಗಿಯೂ, ಸೌಭಾಗ್ಯದಿಂದ ಜ್ಯೇಷ್ಠಳೂ ಆಗಿದ್ದೇನೆ.

ಏತಸ್ಮಾತ್ಕಾರಣಾದ್ಗೌರೀಂ ಮುಕ್ತ್ವೈತಾನ್ ಪಂಚಪಿಂಡಕಾನ್ ।
ಕರ್ದಮೇನ ವಿಧಾಯಾಥ ಪೂಜಯಾಮಿ ದಿನೇ ದಿನೇ ॥ ೫೮ ॥
ಏತದ್ಗುಹ್ಯಂ ಮಯಾ ಖ್ಯಾತಂ ಭವತೀನಾಮಸಂಶಯಂ ।
ಸತ್ಯೇನಾನೇನ ಮೇ ಗೌರೀ ಮನೋಽಭೀಷ್ಟಂ ಪ್ರಯಚ್ಛತು ॥ ೫೯ ॥

ಲಕ್ಷ್ಮೀರುವಾಚ :—

ತತಃ ಸರ್ವಾಃ ಸಪತ್ನ್ಯಸ್ತಾಃ ಕೃತಾಂಜಲಿಪುಟಾಃ ಸ್ಥಿತಾಃ ।
ಮಾಮೂಚುರ್ವಿನಯಾದ್ವಾಚಾ ಪ್ರಣಿಪತ್ಯ ಮುಹುರ್ಮುಹುಃ ॥ ೬೦ ॥
ಪ್ರಸಾದಂ ಕುರು ಚಾಸ್ಮಾಕಂ ದೀಯತಾಂ ಮಂತ್ರಪಂಚಕಂ ।
ತದೇವ ಯೇನ ತೇ ದೇವೀ ತುಷ್ಟಾ ಸಾ ಪರಮೇಶ್ವರೀ ॥ ೬೧ ॥
ಮಯಾ ಪ್ರೋಕ್ತಾಶ್ಚ ತಾಃ ಸರ್ವಾಃ ಪ್ರಾರ್ಥಯಧ್ವಂ ಯಥೇಚ್ಛಯಾ ।
ಅಹಂ ಸರ್ವಂ ಪ್ರದಾಸ್ಯಾಮಿ ತತ್ಸತ್ಯಂ ವಚನಂ ಮಮ ॥ ೬೨ ॥
ತತೋ ದೇವ ಮಯಾ ಪ್ರೋಕ್ತಂ ತಾಸಾಂ ತನ್ಮಂತ್ರಪಂಚಕಂ ।
ಶಿಷ್ಯತ್ವಂ ಗಮಿತಾನಾಂ ಚ ವಾಙ್ಮನಃಕಾಯಕರ್ಮಭಿಃ ॥ ೬೩ ॥

ವಿಷ್ಣುರುವಾಚ :—

ಮಮಾಪಿ ವದ ದೇವೇಶಿ ಕೀದೃಕ್ತನ್ಮಂತ್ರಪಂಚಕಂ ।
ಯತ್ತ್ವಯಾಽನುಷ್ಠಿತಂ ಪೂರ್ವಂ ತಯಾ ತಾಸಾಂ ನಿವೇದಿತಂ ॥ ೬೪ ॥

---

೫೮. ಈ ಕಾರಣದಿಂದ ಗೌರಿಯನ್ನು ಬಿಟ್ಟು ಐದು ಉಂಡೆಗಳನ್ನು ಕೆಸರಿನಿಂದ ಮಾಡಿ ಪ್ರತಿದಿನವೂ ಪೂಜಿಸುತ್ತೇನೆ.

೫೯. ನಿಮಗೆ ಗುಟ್ಟಾದ ಈ ವಿಷಯವನ್ನು ಹೇಳಿದ್ದೇನೆ. ನನ್ನೀ ಸತ್ಯದಿಂದ ಗೌರಿಯು ನಿಮಗೆ ಮನೋಭೀಷ್ಟವನ್ನು ಕೊಡಲಿ.

೬೦. ಲಕ್ಷ್ಮಿಯು ಹೇಳುತ್ತಾಳೆ:—ಅನಂತರ ಆ ಎಲ್ಲ ಸವತಿಯರೂ ಕೈ ಮುಗಿದುಕೊಂಡು ಬಾರಿ ಬಾರಿಗೂ ನಮಸ್ಕರಿಸಿ ವಿನಯದಿಂದ ಇಂತೆಂದರು.

೬೧. ನಿನಗೆ ದೇವಿಯು ಯಾವ ಮಂತ್ರದಿಂದ ಸಂತುಷ್ಟಳಾಗಿರುವಳೊ, ಆ ಐದು ಮಂತ್ರಗಳನ್ನು ನಮಗಿತ್ತು ಅನುಗ್ರಹಿಸು.

೬೨—೬೩. ನಾನು ಅವರನ್ನು ಕುರಿತು, "ಸ್ವೇಚ್ಛೆಯಾಗಿ ಪ್ರಾರ್ಥಿಸಿರಿ. ನಾನು ಎಲ್ಲವನ್ನೂ ಕೊಡುವೆನು. ಆ ನನ್ನ ಮಾತು ನಿಜ" ಎಂದು ಹೇಳಿ ಮಾತು, ಮನಸ್ಸು, ಶರೀರ, ಕಾರ್ಯಗಳಿಂದ ಶಿಷ್ಯರಾದ ಅವರಿಗೆ ಆ ಐದು ಮಂತ್ರಗಳನ್ನು ಹೇಳಿದೆನು.

೬೪. ವಿಷ್ಣುವು ಹೇಳುತ್ತಾನೆ:—ದೇವಿ! ಹಿಂದೆ ನೀನು ಅನುಷ್ಠಾನಮಾಡಿ ಆ ಸವತಿಯರಿಗೆ ತಿಳಿಸಿದ ಆ ಐದು ಮಂತ್ರಗಳಾವುವು? ಅವನ್ನು ನನಗೆ ಹೇಳು.

ಲಕ್ಷ್ಮೀರುವಾಚ :—
ನಮಃ ಪೃಥಿವ್ಯೈ ಕ್ಷಾಂತೀಶಿ ನಮ ಆಪ್ರೋಮಯೇ ಶುಭೇ ।
ತೇಜಸ್ವಿನಿ ನಮಸ್ತುಭ್ಯಂ ನಮಸ್ತೇ ವಾಯುರೂಪಿಣಿ ॥ ೬೫ ॥
ಆಕಾಶರೂಪ ಸಂಪನ್ನೇ ಪಂಚರೂಪೇ ನಮೋ ನಮಃ ॥ ೬೬ ॥
ಏಭಿರ್ಮಂತ್ರೈರ್ಮಯಾ ಪೂರ್ವಂ ಪೂಜಿತಾ ಪರಮೇಶ್ವರೀ ।
ತೇನ ರಾಜ್ಯಂ ಮಯಾ ಪ್ರಾಪ್ತಂ ಸರ್ವಸ್ತ್ರೀಣಾಂ ಸುದುರ್ಲಭಂ ॥ ೬೭ ॥
ತತಶ್ಚ ಸ್ಥಾಪಿತಾ ದೇವೀ ಕೃತ್ವಾ ರತ್ನಮಯೀ ಶುಭಾ ।
ಹಾಟಕೇಶ್ವರಜೇ ಕ್ಷೇತ್ರೇ ಮಯಾ ತತ್ರ ಸುರೇಶ್ವರ ॥ ೬೮ ॥
ತಾಂ ಯಾ ಪೂಜಯತೇ ನಾರೀ ಸದ್ಯೋಽಪಿ ಪತಿವಲ್ಲಭಾ ।
ಜಾಯತೇ ನಾಽತ್ರ ಸಂದೇಹಃ ಸರ್ವಪಾಪ ವಿವರ್ಜಿತಾ ॥ ೬೯ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಪಂಚಪಿಂಡಿಕೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ ಸಪ್ತಸಪ್ತತ್ಯುತ್ತರಶತತಮೋಽಧ್ಯಾಯಃ**

---

೬೫–೬೬. ಲಕ್ಷ್ಮಿಯು ಹೇಳುತ್ತಾಳೆ :—ಪೃಥ್ವೀರೂಪಳೂ, ಕ್ಷಮೆಗೆ ಒಡೆಯಳೂ, ಜಲಮಯಳೂ, ತೇಜೋರೂಪಳೂ, ವಾಯುರೂಪಳೂ, ಆಕಾಶ ರೂಪಳೂ ಆದ ದೇವಿಗೆ ನಮಸ್ಕಾರವು.

೬೭. ಹಿಂದೆ ನಾನು ಈ ಮಂತ್ರಗಳಿಂದ ದೇವಿಯನ್ನು ಪೂಜಿಸಿದೆನು. ಅದರಿಂದ ನಾನು ಸಕಲ ಸ್ತ್ರೀಯರಿಗೆ ದುರ್ಲಭವಾದ ರಾಜ್ಯವನ್ನು ಹೊಂದಿದೆನು.

೬೮. ಸುರೇಶ್ವರ! ಅನಂತರ ನಾನು ಹಾಟಕೇಶ್ವರಕ್ಷೇತ್ರದಲ್ಲಿ ರತ್ನಮಯ ವಾದ ದೇವಿಯ ಪ್ರತಿಮೆಯನ್ನು ಸ್ಥಾಪಿಸಿದೆನು.

೬೯. ಆ ದೇವಿಯನ್ನು ಪೂಜಿಸಿದ ನಾರಿಯು ಕೂಡಲೆ ಸಮಸ್ತ ಪಾಪರಹಿತ ಳಾಗಿ ಪತಿಗೆ ವಲ್ಲಭೆಯಾಗುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಪಂಚಪಿಂಡಿಕೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ ನೂರೆಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

## ಪಂಚಪಿಂಡಿಕಾಗೌರ್ಯುತ್ಪತ್ತಿಮಾಹಾತ್ಮ್ಯವರ್ಣನಂ

**ಲಕ್ಷ್ಮೀರುವಾಚ:—**

**ಏವಂ ರಾಜ್ಯಂ ಮಯಾ ಪ್ರಾಪ್ತಂ ಗೌರೀ ಪೂಜಾ ಕೃತೇ ವಿಭೋ ।**
**ಸೌಭಾಗ್ಯಂ ಪರಮಂ ಚೈವ ದುರ್ಲಭಂ ಸರ್ವಯೋಷಿತಾಂ ॥ ೧ ॥**
**ನ ಚಾಽಪತ್ಯಂ ಮಯಾ ಲಬ್ಧಂ ತಥಾಽಪಿ ಪರಮೇಶ್ವರ ।**
**ತಾದೃಶೇಽಪಿ ಚ ಸೌಭಾಗ್ಯೇ ತಾರುಣ್ಯೇ ತಾದೃಶೇ ಸ್ಥಿತೇ ॥ ೨ ॥**
**ದಹ್ಯಾಮಿ ತೇನ ದುಃಖೇನ ದಿವಾನಕ್ತಂ ಸುಖಂ ನ ಮೇ ।**
**ಕಸ್ಯಚಿತ್ತ್ವಥ ಕಾಲಸ್ಯ ದುರ್ವಾಸಾ ಮುನಿಸತ್ತಮಃ ॥ ೩ ॥**
**ಆನರ್ತಾಧಿಪತೇರ್ಹರ್ಮ್ಯಂ ಸಂಪ್ರಾಪ್ತೋ ಗೌರವಾಯ ಸಃ ।**
**ಚಾತುರ್ಮಾಸ್ಯ ಕೃತೇ ಚೈವ ಮೃತ್ತಿಕಾ ಗ್ರಹಣಾಯ ಚ ॥ ೪ ॥**
**ತತಃ ಸಂಪೂಜಿತೋ ರಾಜ್ಞಾ ಆನರ್ತೇನ ಯಥಾಕ್ರಮಂ ।**
**ದತ್ವಾಘ್ಯಂ ಮಧುಪರ್ಕಂ ಚ ತತಃಪ್ರೋಕ್ತಂ ಪ್ರಣಮ್ಯ ಚ ॥ ೫ ॥**

---

## ಕನ್ನಡದ ಅನುವಾದ

### ಪಂಚಪಿಂಡಿಕಾಗೌರ್ಯುತ್ಪತ್ತಿಮಾಹಾತ್ಮ್ಯವರ್ಣನ

೧. ಲಕ್ಷ್ಮಿಯು ಹೇಳುತ್ತಾಳೆ:—ನಾಥ! ನಾನು ಹೀಗೆ ಗೌರೀಪೂಜೆಯಿಂದ ರಾಜ್ಯವನ್ನೂ, ಸಕಲ ಸ್ತ್ರೀಯರಿಗೆ ದುರ್ಲಭವಾದ ಸೌಭಾಗ್ಯವನ್ನೂ ಹೊಂದಿದೆನು.

೨. ಆದರೆ ನಾನು ಅಂತಹ ಸೌಭಾಗ್ಯ, ಯೌವನಗಳುಳ್ಳವಳಾದರೂ ಮಕ್ಕಳನ್ನು ಪಡೆಯಲಿಲ್ಲ.

೩–೪. ಆ ದುಃಖದಿಂದ ಹಗಲು ರಾತ್ರಿ ಸುಡಲ್ಪಡುತ್ತಿದ್ದೆನು. ಒಂದಾನೊಂದು ದಿನ ದುರ್ವಾಸನೆಂಬ ಮುನಿವರ್ಯನು ಗೌರವಕ್ಕಾಗಿಯೂ, ಚಾತುರ್ಮಾಸ್ಯಕ್ಕಾಗಿಯೂ, ಮೃತ್ತಿಕೆಯನ್ನು ತೆಗೆದುಕೊಳ್ಳುವುದಕ್ಕಾಗಿಯೂ ಆನರ್ತರಾಜನ ಅರಮನೆಗೆ ಬಂದನು.

೫. ತರುವಾಯ ಆನರ್ತರಾಜನು ಕ್ರಮವಾಗಿ ಅವನಿಗೆ ಅರ್ಘ್ಯ, ಮಧುಪರ್ಕಗಳನ್ನಿತ್ತು ನಮಸ್ಕರಿಸಿ ಹೀಗೆಂದನು.

ಸ್ವಾಗತಂ ತೇ ಮುನಿಶ್ರೇಷ್ಠ ಭೂಯಃ ಸುಸ್ವಾಗತಂ ಚ ತೇ ।
ನಾಽನ್ಯೋ ಧನ್ಯತಮೋ ಲೋಕೇ ಭೂಪೋಽಸ್ತಿ ಸದೃಶೋ ಮಯಾ ॥೬॥
ಯೌ ತೇ ಪಾದೌ ರಜೋಧ್ವಸ್ತೌ ಕೇಶೈರ್ಮೇ ನಿರ್ಮಲೀಕೃತೌ ।
ತದ್ಬ್ರೂಹಿ ಕಿಂ ಕರೋಮ್ಯದ್ಯ ಗೃಹಾಯಾತಸ್ಯ ತೇ ಮುನೇ ॥ ೭ ॥
ಅಪಿ ರಾಜ್ಯಂ ಪ್ರಯಚ್ಛಾಮಿ ಕಾ ವಾರ್ತಾಽನ್ಯೇಷು ವಸ್ತುಷು ॥ ೮ ॥

ದುರ್ವಾಸ ಉವಾಚ :—

ಚಾತುರ್ಮಾಸೀ ವಿಧಾನಂ ತೇ ಕರಿಷ್ಯೇ ನೃಪಮಂದಿರೇ ।
ವೃತ್ತಿಕಾಗ್ರಹಣಂ ತಾವಚ್ಛುಶ್ರೂಷಾ ಕ್ರಿಯತಾಂ ಮಮ ।
ಸ ತಥೇತಿ ಪ್ರತಿಜ್ಞಾಯ ಮಾಮುವಾಚೇ ಪಾರ್ಥಿವೋತ್ತಮಃ ॥ ೯ ॥
ಶುಶ್ರೂಷಾ ಚಾಽಸ್ಯ ಕರ್ತವ್ಯಾ ಸರ್ವದೈವ ವರಾನನೇ ।
ಚಾತುರ್ಮಾಸೀವ್ರತಂ ಯಾವದ್ದೇವತಾರ್ಚನ ಪೂರ್ವಕಂ ॥ ೧೦ ॥
ಬಾಢಮಿತ್ಯೇವಮುಕ್ತ್ವಾಽಥ ಮಯಾ ಸರ್ವಮನುಷ್ಠಿತಂ ।
ಶುಶ್ರೂಷಾರ್ಹಂ ಚ ಯತ್ಕರ್ಮ ದುಹಿತೇವ ಪಿತುರ್ಯಥಾ ॥ ೧೧ ॥
ಚಾತುರ್ಮಾಸ್ಯಾಂ ವ್ಯತೀತಾಯಾಂ ಯದಾ ಸಂಪ್ರಸ್ಥಿತೋ ಮುನಿಃ ।
ತದಾ ಪ್ರೋವಾಚ ಮಾಂ ತುಷ್ಟಃ ಪುತ್ರಿ ಕಿಂ ಕರವಾಣಿ ತೇ ॥ ೧೨ ॥

---

೬—೭. ಮುನಿವರ್ಯನೆ! ನಿನಗೆ ಸ್ವಾಗತವಾಗಲಿ. ಸುಸ್ವಾಗತವಾಗಲಿ. ನಿನ್ನ ರಜೋರಹಿತವಾದ-ಪಾದಗಳನ್ನು ನನ್ನ ತಲೆಗೂದಲುಗಳು ನಿರ್ಮಲಗೊಳಿಸಿದ್ದರಿಂದ ಲೋಕದಲ್ಲಿ ನನಗೆ ಸದೃಶನಾದ ಬೇರೆ ರಾಜನಿಲ್ಲ. ಆದುದರಿಂದ ಮನೆಗೆ ಬಂದ ನಿನಗೆ ಏನನ್ನು ಮಾಡಲಿ? ಅದನ್ನು ಹೇಳು.

೮. ರಾಜ್ಯವನ್ನು ಕೊಡಲೆ? ಬೇರೆ ವಸ್ತುಗಳ ವಿಷಯವೇನು?

೯—೧೦. ದುರ್ವಾಸನು ಹೇಳುತ್ತಾನೆ:—"ದೊರೆಯೆ! ನಿನ್ನ ಮನೆಯಲ್ಲಿ ಚಾತುರ್ಮಾಸ್ಯ ವ್ರತವನ್ನಾಚರಿಸುವೆನು. ನನಗೆ ವೃತ್ತಿಕೆಯನ್ನು ತಂದುಕೊಟ್ಟು ಸೇವೆ ಮಾಡು." ದೊರೆಯು ಹಾಗೆಯೇ ಆಗಲೆಂದು ಒಪ್ಪಿ ನನ್ನನ್ನು ಕುರಿತು ಹೀಗೆಂದನು. "ಸುಂದರಿ! ನೀನು ಯಾವಾಗಲೂ ದೇವತಾರ್ಚನಪೂರ್ವಕವಾಗಿ ಚಾತುರ್ಮಾಸ್ಯ ವ್ರತವು ಮುಗಿಯುವವರೆಗೆ ಈ ಮುನಿಯನ್ನು ಸೇವಿಸು."

೧೧. ನಾನು ಹಾಗೆಯೇ ಆಗಲೆಂದು ಹೇಳಿ ತಂದೆಗೆ ಮಗಳು ಹೇಗೋ ಹಾಗೆ ಮಾಡಲರ್ಹವಾದ ಕಾರ್ಯವನ್ನೆಲ್ಲ ಮಾಡಿದೆನು.

೧೨. ಚಾತುರ್ಮಾಸ್ಯವು ಕಳೆದ ಕೂಡಲೆ ಮುನಿಯು ಹೊರಟುಹೋಗುತ್ತ ಸಂತುಷ್ಟನಾಗಿ, ನನ್ನನ್ನು ಕುರಿತು, "ಮಗು! ನಿನಗೆ ಯಾವ ಅನುಗ್ರಹವನ್ನು ಮಾಡಲಿ" ಎಂದು ಕೇಳಿದನು.

ತತಃ ಸ ಭಗವಾನ್ ಪ್ರೋಕ್ತಃ ಪ್ರಣಿಪತ್ಯ ಮಯಾ ಮುಹುಃ ।
ಅಪತ್ಯಂ ನಾಽಸ್ತಿ ಮೇ ಬ್ರಹ್ಮಂಸ್ತೇನ ದಹ್ಯಾಮ್ಯಹರ್ನಿಶಂ ॥ ೧೩ ॥
ಈದೃಶೇ ಸತಿ ರಾಜ್ಯೇಽಪಿ ಯೌವನೇ ಚ ಮಹತ್ತರೇ ।
ತತ್ತ್ವಂ ವದ ಮುನಿಶ್ರೇಷ್ಠ ಯೇನ ಸ್ಯಾನ್ಮಮ ಸಂತತಿಃ ॥ ೧೪ ॥
ವ್ರತೇನ ನಿಯಮೇನಾಽಥ ದಾನೇನ ಚ ಹುತೇನ ಚ ।
ತತಃ ಸ ಸುಚಿರಂ ಧ್ಯಾತ್ವಾ ಮಾಮುವಾಚ ಸ್ಮಯನ್ನಿವ ॥ ೧೫ ॥
ಅನ್ಯದೇಹಾಂತರೇ ಪುತ್ರಿ ತ್ವಯಾ ಗೌರೀ ಪ್ರಪೂಜಿತಾ ।
ತಪ್ತಾಭಿರ್ವಾಲುಕಾಭಿಃ ಸಾ ಮೃತ್ಯುಕಾಲ ಉಪಸ್ಥಿತೇ ॥ ೧೬ ॥
ತದ್ಭಕ್ತ್ಯಾ ಲಬ್ಧರಾಜ್ಯಾಽಪಿ ದಾಹೇನ ಪರಿಯುಜ್ಯಸೇ ।
ಗೌರೀ ಯತ್ತಾಪಸಂಯುಕ್ತಾ ವಾಲುಕಾಭಿಃ ಕೃತಾ ತ್ವಯಾ ॥ ೧೭ ॥
ನ ದೇವೋ ವಿದ್ಯತೇ ಕಾಷ್ಠೇ ಪಾಷಾಣೇ ಮೃತ್ತಿಕಾಸು ಚ ।
ಭಾವೇಷು ವಿದ್ಯತೇ ದೇವೋ ಮಂತ್ರ ಸಂಯೋಗ ಸಂಯುತಃ ॥ ೧೮ ॥
ಭಾವಭಕ್ತಿ ಸಮಾಯುಕ್ತಾ ಮಂತ್ರ ಸಂಯೋಜನೇನ ಚ ।
ದೇವೀ ಮಂತ್ರ ಸಮಾಯಾತಾ ತ್ವಯಾ ವಾಲುಕಯಾರ್ಚಿತಾ ॥ ೧೯ ॥

---

೧೩–೧೪. ಅನಂತರ ನಾನು ಆ ಮುನಿಗೆ ನಮಸ್ಕರಿಸಿ ಹೀಗೆಂದೆನು. "ಮಹರ್ಷಿಯೆ ! ನನಗೆ ಇಂತಹ ರಾಜನೂ, ಯೌವನವೂ ಇದ್ದಾಗ್ಯೂ ಮಕ್ಕಳಿಲ್ಲದಿರುವುದರಿಂದ ನಾನು ಹಗಲು ರಾತ್ರಿ ದುಃಖಪಡುತ್ತಿದ್ದೇನೆ. ಆದುದರಿಂದ ನೀನು ನನಗೆ ಸಂತತಿಯು ಹೇಗೆ ಆಗುವುದೆಂಬುದನ್ನು ಹೇಳು.

೧೫. ವ್ರತ, ನಿಯಮ, ದಾನ, ಹೋಮ ಇವುಗಳಲ್ಲಿ ಯಾವುದರಿಂದ ಸಂತಾನವಾಗುವುದು?" ಆ ದುರ್ವಾಸಮುನಿಯು ಬಹಳ ಹೊತ್ತು ಆಲೋಚಿಸಿ ನಗುತ್ತ ನನ್ನನ್ನು ಕುರಿತು ಇಂತೆಂದನು.

೧೬. "ಮಗು ! ನೀನು ಹಿಂದಿನ ಜನ್ಮದಲ್ಲಿ ಮರಣಕಾಲವೊದಗಲು ಕಾದ ಮರಳಿನಿಂದ ಗೌರಿಯನ್ನು ಪೂಜಿಸಿರುವೆ.

೧೭. ನೀನು ಗೌರಿಯನ್ನು ಕಾದ ಮರಳಿನಿಂದ ಸಂತಾಪಗೊಳಿಸಿದುದರಿಂದ ಈಗ ರಾಜ್ಯವನ್ನು ಪಡೆದಿದ್ದರೂ ಸಂತಾಪಗೊಳ್ಳುತ್ತಿರುವೆ.

೧೮. ಕಟ್ಟಿಗೆ, ಕಲ್ಲು, ಮಣ್ಣುಗಳಲ್ಲಿ ದೇವತೆಗಳಿರುವುದಿಲ್ಲ. ಮಂತ್ರಗಳ ಸಂಯೋಗದಿಂದ ದೇವತೆಗಳು ಭಾವಗಳಲ್ಲಿ ಸನ್ನಿಹಿತರಾಗುವರು.

೧೯. ನೀನು ಭಾವಭಕ್ತಿಯಿಂದ ಕೂಡಿದವಳಾಗಿ ಮಂತ್ರಗಳಿಂದ ಆವಾಹನೆ ಮಾಡಿ ಮರಳಿನಿಂದ ಗೌರಿಯನ್ನು ಪೂಜಿಸಿರುವೆ.

ತ್ವತ್ಕಾಯೇ ತೇನ ಸಂತಾಪಃ ಸರ್ವದಾಽಯಂ ವ್ಯವಸ್ಥಿತಃ ।
ತಸ್ಮಾದ್ರತ್ನಮಯೀಂ ಗೌರೀಂ ಕೃತ್ವಾ ತ್ವಂ ಪಂಚಪಿಂಡಿಕಾಂ ।
ಹಾಟಕೇಶ್ವರಜೇ ಕ್ಷೇತ್ರೇ ಸಂಸ್ಥಾಪಯ ಶುಭಾನನೇ ॥ ೨೦ ॥
ವೃಷಸ್ಥೇ ಭಾಸ್ಕರೇ ಪಶ್ಚಾತ್ತಸ್ಯಾ ಉಪರಿ ಸ್ರಾವಿ ಯತ್ ।
ಜಲಯಂತ್ರಂ ದಿವಾರಾತ್ರಂ ಧಾರಯಸ್ವ ಪ್ರಯತ್ನತಃ ॥ ೨೧ ॥
ತತೋ ಯಥಾ ಯಥಾ ತಸ್ಯಾಃ ಶೀತಭಾವೋ ಭವಿಷ್ಯತಿ ।
ತಥಾ ತಥಾ ಚ ತೇ ದಾಹಃ ಶಾಂತಿಂ ಯಾಸ್ಯತ್ಯಹರ್ನಿಶಂ ॥ ೨೨ ॥
ದಾಹಾಂತೇ ಭವಿತಾ ಗರ್ಭಸ್ತತಃ ಪುತ್ರಮವಾಪ್ಸ್ಯಸಿ ।
ರಾಜ್ಯಭಾರಕ್ಷಮಂ ಶೂರಂ ತ್ರಿಷು ಲೋಕೇಷು ವಿಶ್ರುತಂ ॥ ೨೩ ॥
ಅನ್ಯಾಽಪಿ ಕಾಮಿನೀ ಯಾಽತ್ರ ಏವಂ ತಾಂ ಪೂಜಯಿಷ್ಯತಿ ।
ಜ್ಯೇಷ್ಠೇ ಮಾಸೇ ತಥಾ ಸಾಽಪಿ ಯಥಾ ತ್ವಂ ಪ್ರಭವಿಷ್ಯತಿ ॥ ೨೪ ॥

ಲಕ್ಷ್ಮೀರುವಾಚ :—

ತತೋ ಮಯಾ ಪುನಃ ಪ್ರೋಕ್ತೋ ಭಗವಾನ್ ಸ ಮುನೀಶ್ವರಃ ।
ಮಾನುಷತ್ವೇ ನ ಮೇ ರಾಗೋ ವಿರಕ್ತಿರ್ಮಹತೀ ಸ್ಥಿತಾ ॥ ೨೫ ॥
ನದೀವೇಗೋಪಮಂ ದೃಷ್ಟ್ವಾ ಜೀವಿತಂ ಸರ್ವದೇಹಿನಾಂ ।
ತನ್ಮೇ ವದ ಮಹಾಭಾಗ ಯತ್ಕಿಂಚಿದ್ವ್ರತಮುತ್ತಮಂ ॥ ೨೬ ॥

---

೨೦. ಆದುದರಿಂದ ನಿನ್ನ ಶರೀರದಲ್ಲಿ ಯಾವಾಗಲೂ ಈ ಸಂತಾಪವು ಇರುವುದು. ಆದಕಾರಣ ನೀನು ರತ್ನದಿಂದ ಪಂಚಪಿಂಡಿಕಾ ಗೌರಿಯನ್ನು ನಿರ್ಮಿಸಿ ಹಾಟಕೇಶ್ವರಕ್ಷೇತ್ರದಲ್ಲಿ ಸ್ಥಾಪಿಸು.

೨೧. ಅನಂತರ ಸೂರ್ಯನು ವೃಷಭ ರಾಶಿಗೆ ಬರಲು ಅವಳ ಮೇಲೆ ಹಗಲು ರಾತ್ರಿ ನೀರು ಸ್ರವಿಸುವ ಜಲಯಂತ್ರವನ್ನು ಇಡು.

೨೨. ಆ ದೇವಿಗೆ ಶೈತ್ಯವುಂಟಾದ ಹಾಗೆಲ್ಲ ನಿನ್ನ ದಾಹವು ಶಾಂತವಾಗುವುದು.

೨೩. ಈ ದಾಹವು ಕೊನೆಗಾಣಲು ನೀನು ಗರ್ಭವತಿಯಾಗಿ ರಾಜ್ಯಭಾರದಲ್ಲಿ ಸಮರ್ಥನೂ, ಶೂರನೂ, ಮೂರು ಲೋಕಗಳಲ್ಲಿ ಪ್ರಸಿದ್ಧನೂ ಆದ ಪುತ್ರನನ್ನು ಪಡೆಯುವೆ.

೨೪. ಜ್ಯೇಷ್ಠ ಮಾಸದಲ್ಲಿ ಆ ದೇವಿಯನ್ನು ಪೂಜಿಸಿದ ಇತರ ನಾರಿಯೂ ನಿನ್ನಂತೆಯೇ ಆಗುವಳು.''

೨೫–೨೬. ಲಕ್ಷ್ಮಿಯು ಹೇಳುತ್ತಾಳೆ:—ಅನಂತರ ನಾನು ಆ ಮುನಿಯನ್ನು ಕುರಿತು, ''ನನಗೆ ಮನುಷ್ಯ ಜನ್ಮದಲ್ಲಿ ಪ್ರೀತಿಯಿಲ್ಲ. ನದೀ ವೇಗದಂತಿರುವ ಸಕಲ ಪ್ರಾಣಿಗಳ ಜೀವನವನ್ನು ನೋಡಿ ಅತ್ಯಂತ ವೈರಾಗ್ಯವುಂಟಾಗಿದೆ. ಆದುದರಿಂದ ಚೆನ್ನಾಗಿ ಅನುಷ್ಠಾನಮಾಡಿದರೆ ಮನುಷ್ಯತ್ವವನ್ನು ನೀಗಿಸುವ ಉತ್ತಮವಾದ

ಮಾನುಷತ್ವಂ ನ ಯೇನ ಸ್ಯಾತ್ಸಮ್ಯಕ್ಚೀರ್ಣೇನ ಸದ್ದ್ವಿಜ ।
ತತಃ ಸ ಸುಚಿರಂ ಧ್ಯಾತ್ವಾ ಮಾಮಾಹ ಪರಮೇಶ್ವರ ॥ ೨೭ ॥
ಅಸ್ತಿ ಪುತ್ರಿ ವ್ರತಂ ಪುಣ್ಯಂ ಗೌರೀತುಷ್ಟಿಕರಂ ಪರಂ ।
ಯೇನ ಚೀರ್ಣೇನ ವೈ ಸಮ್ಯಗ್ಯೋಷಿದ್ದೇವತ್ವಮಾಪ್ನುಯಾತ್ ॥ ೨೮ ॥
ಗೋಮಯಾಖ್ಯಾ ಮಹಾದೇವೀ ಕೃತಾ ವೈ ಗೋಮಯೇನ ಸಾ ।
ತತೋ ಗೋ ಲೋಕಮಾಪನ್ನಾಃ ಸರ್ವಾಸ್ತಾ ವರವರ್ಣಿನಿ ॥ ೨೯ ॥
ತಾಂ ತ್ವಂ ಕುರುಷ್ವ ಕಲ್ಯಾಣಿ ಯೇನ ದೇವತ್ವಮಾಪ್ಸ್ಯಸಿ ।
ತತೋ ಮಯಾ ಪುನಃ ಪ್ರೋಕ್ತಃ ಸ ಮುನಿಃ ಸುರಸತ್ತಮ ॥ ೩೦ ॥
ಕಸ್ಮಿನ್ ಕಾಲೇ ಪ್ರಕರ್ತವ್ಯಾ ವಿಧಿನಾ ಕೇನ ಸನ್ಮುನೇ ।
ಸರ್ವಂ ವಿಸ್ತರತೋ ಬ್ರೂಹಿ ಯೇನ ತಾಂ ಪ್ರಕರೋಮ್ಯಹಂ ॥ ೩೧ ॥

ದುರ್ವಾಸ ಉವಾಚ:—

ನಭಸ್ಯೇ ಚಾಸಿತೇ ಪಕ್ಷೇ ತೃತೀಯಾ ದಿವಸೇ ಸ್ಥಿತೇ ।
ಪ್ರಾತರುತ್ಥಾಯ ಪಶ್ಚಾಚ್ಚ ಭಕ್ಷಯೇದ್ದಂತಧಾವನಂ ॥ ೩೨ ॥
ತತಶ್ಚ ನಿಯಮಂ ಕೃತ್ವಾ ಉಪವಾಸ ಸಮುದ್ಭವಂ ।
ಗೌರೀ ನಾಮ ಸಮುಚ್ಚಾರ್ಯ ಶ್ರದ್ಧಾಪೂತೇನ ಚೇತಸಾ ॥ ೩೩ ॥

---

ಒಂದು ವ್ರತವನ್ನು ನನಗೆ ಹೇಳು" ಎಂದೆನು. ಆ ಮುನಿಯು ಬಹಳ ಹೊತ್ತು ಆಲೋಚಿಸಿ ನನ್ನನ್ನು ಕುರಿತು ಇಂತೆಂದನು.

೨೮. "ಮಗು! ಗೌರಿಗೆ ಸಂತೋಷವನ್ನುಂಟುಮಾಡುವ ಒಂದು ಉತ್ತಮ ವ್ರತವಿದೆ. ಅದನ್ನು ಚೆನ್ನಾಗಿ ಅನುಷ್ಠಾನಮಾಡಿದರೆ ನಾರಿಯು ದೇವತ್ವವನ್ನು ಹೊಂದುವಳು.

೨೯. ಗೋಮಯದಿಂದ ಗೋಮಯಳೆಂಬ ದೇವಿಯನ್ನು ನಿರ್ಮಿಸಿ ಪೂಜಿಸಿದ ಸ್ತ್ರೀಯರೆಲ್ಲ ಗೋಲೋಕವನ್ನು (ಸ್ವರ್ಗಲೋಕವನ್ನು) ಪಡೆದಿರುವರು.

೩೦–೩೧. ಮಂಗಳಕರಳೆ! ನೀನು ಆ ದೇವಿಯನ್ನು ನಿರ್ಮಿಸು. ಅದರಿಂದ ದೇವತ್ವವನ್ನು ಪಡೆಯುವೆ." ಅನಂತರ ನಾನು ಆ ಮುನಿಯನ್ನು ಕುರಿತು, "ಮಹರ್ಷಿಯೆ! ಯಾವಾಗ ಯಾವ ವಿಧಿಯಿಂದ ಆ ವ್ರತವನ್ನಾಚರಿಸಬೇಕು. ಎಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು. ಅದರಿಂದ ನಾನು ಆ ವ್ರತವನ್ನಾಚರಿಸುವೆನು" ಎಂದು ಕೇಳಿದೆನು.

೩೨. ದುರ್ವಾಸನು ಹೇಳುತ್ತಾನೆ:—ಶ್ರಾವಣ ಬಹುಳ ತದಿಗೆಯ ದಿನ ಬೆಳಗ್ಗೆ ಎದ್ದು ದಂತಧಾವನ ಮಾಡಬೇಕು.

೩೩. ಬಳಿಕ ಶ್ರದ್ಧೆಯಿಂದ ಸಹಿತವಾದ ಮನಸ್ಸಿನಿಂದ **ಗೌರೀನಾಮ**ವನ್ನುಚ್ಚರಿಸಿ ಉಪವಾಸ ವ್ರತವನ್ನಾಚರಿಸಬೇಕು.

ತತೋ ನಿಶಾಗಮೇ ಪ್ರಾಪ್ತೇ ಕೃತ್ವಾ ಗೌರೀ ಚತುಷ್ಟಯಂ ।
ಮೃನ್ಮಯಂ ಯಾದೃಶಂ ಚೈವ ತದಿಹೈಕಮನಾಃ ಶೃಣು ॥ ೩೪ ॥
ಏಕಾ ಗೌರೀ ಪ್ರಕರ್ತವ್ಯಾ ಪಂಚಪಿಂಡಾ ಯಥೋದಿತಾ ।
ಪ್ರಹರೇ ಪ್ರಹರೇ ಪ್ರಾಪ್ತೇ ತಾಸು ಪೂಜಾಂ ಸಮಾಚರೇತ್ ।
ಯೈರ್ಮಂತ್ರೈಸ್ತಾನ್ನಿಬೋಧ ತ್ವಮೇಕೈಕಸ್ಯಾಃ ಪೃಥಕ್ ಪೃಥಕ್ ॥ ೩೫ ॥
ಹಿಮಾಚಲಗೃಹೇ ಜಾತಾ ದೇವಿ ತ್ವಂ ಶಂಕರಪ್ರಿಯೇ ।
ಮೇನಾಗರ್ಭ ಸಮುದ್ಭೂತಾ ಪೂಜಾಂ ಗೃಹ್ಣ ನಮೋಽಸ್ತು ತೇ ॥ ೩೬ ॥
ಧೂಪಂ ದದ್ಯಾತ್ತತಶ್ಚೈವ ಕರ್ಪೂರಂ ಶ್ರದ್ಧಯಾ ಸಹ ।
ರಕ್ತಸೂತ್ರೇಣ ದೀಪಂ ಚ ಘೃತೇನ ಪರಿಕಲ್ಪಯೇತ್ ॥ ೩೭ ॥
ಜಾತಿಪುಷ್ಪೈಃ ಸಮಭ್ಯರ್ಚ್ಯ ನೈವೇದ್ಯೇ ಮೋದಕಾನ್ ನ್ಯಸೇತ್ ।
ರಕ್ತವಸ್ತ್ರೇಣ ಸಂಛಾದ್ಯ ಅರ್ಘ್ಯಂ ದತ್ವಾ ತತಃ ಪರಂ ॥ ೩೮ ॥
ಯಸ್ಯ ವೃಕ್ಷಸ್ಯ ಪುಷ್ಪಂ ಚ ತಸ್ಯ ಸ್ಯಾದ್ದಂತಧಾವನಂ ।
ಮಾತುಲಿಂಗೇನ ತಸ್ಯಾಸ್ತು ಮಂತ್ರೇಣಾನೇನ ಭಕ್ತಿತಃ ॥ ೩೯ ॥
ಅರ್ಘ್ಯಂ ದದ್ಯಾತ್ಪ್ರಯತ್ನೇನ ಗಂಧಪುಷ್ಪಾಕ್ಷತಾನ್ವಿತಂ ।
ಶಂಕರಸ್ಯ ಪ್ರಿಯೇ ದೇವಿ ಹಿಮಾಚಲ ಸುತೇ ಶುಭೇ ।
ಅರ್ಘ್ಯಮೇನಂ ಮಯಾ ದತ್ತಂ ಪ್ರತಿಗೃಹ್ಣ ನಮೋಽಸ್ತು ತೇ ॥ ೪೦ ॥

---

೩೪. ಸಾಯಂಕಾಲ ಮಣ್ಣಿನ ನಾಲ್ಕು ಗೌರೀ ಪ್ರತಿಮೆಗಳನ್ನು ಮಾಡಬೇಕು. ಅದು ಹೇಗಿರಬೇಕೆಂಬುದನ್ನು ಒಮ್ಮನಸ್ಸಿನಿಂದ ಕೇಳು.

೩೫. ವಿಧಿಯಂತೆ ಪಂಚಪಿಂಡಿಕಾ ಗೌರಿಯನ್ನು ರಚಿಸಿ ಪ್ರತಿ ಜಾಮದಲ್ಲಿಯೂ ಪೂಜೆಯನ್ನು ಮಾಡಬೇಕು. ಅವರಲ್ಲೊಬ್ಬೊಬ್ಬರನ್ನೂ ಪೂಜಿಸುವ ಪ್ರತ್ಯೇಕ ಮಂತ್ರಗಳನ್ನು ತಿಳಿದುಕೊ.

೩೬–೩೭. ಹಿಮಾಲಯದ ಮನೆಯಲ್ಲಿ ಹುಟ್ಟಿದವಳೂ, ಶಂಕರಪ್ರಿಯಳೂ, ಮೇನೆಯ ಗರ್ಭದಲ್ಲಿ ಜನಿಸಿದವಳೂ ಆದ ದೇವಿಯೆ! ನೀನು ಪೂಜೆಯನ್ನು ಸ್ವೀಕರಿಸು. ನಿನಗೆ ನಮಸ್ಕಾರವು. ತರುವಾಯ ಶ್ರದ್ಧೆಯಿಂದ ಕರ್ಪೂರ ಧೂಪವನ್ನೂ ಕೆಂಪು ನೂಲಿನಿಂದ ತುಪ್ಪದ ದೀಪವನ್ನೂ ಸಮರ್ಪಿಸಬೇಕು.

೩೮. ಜಾಜಿ ಹೂವುಗಳಿಂದ ಪೂಜಿಸಿ ಮೋದಕವನ್ನು ನಿವೇದಿಸಿ ಕೆಂಪು ಬಟ್ಟೆಯನ್ನು ಹೊದ್ದಿಸಿ ಅರ್ಘ್ಯವನ್ನು ಕೊಡಬೇಕು.

೩೯–೪೦. ಯಾವ ವೃಕ್ಷದ ಪುಷ್ಪದಿಂದ ಪೂಜಿಸುವೆವೋ ಅದರ ಕಡ್ಡಿಯನ್ನೇ ದಂತಧಾವನಕ್ಕೆ ಉಪಯೋಗಿಸಬೇಕು. ಆ ದೇವಿಗೆ ಮಾದಲ ಹಣ್ಣನ್ನು ಸಮರ್ಪಿಸಿ ಮುಂದೆ ಹೇಳುವ ಮಂತ್ರದಿಂದ ಗಂಧ, ಪುಷ್ಪ, ಅಕ್ಷತೆಗಳೊಡನೆ ಅರ್ಘ್ಯವನ್ನು ಕೊಡಬೇಕು. "ಶಂಕರಪ್ರಿಯಳೂ, ಹಿಮಾಚಲಸುತೆಯೂ ಆದ ಗೌರೀ ದೇವಿಯೆ! ನಾನಿತ್ತ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನಮಸ್ಕಾರವು."

ತದೇವ ಪ್ರಾಶನಂ ಕುರ್ಯಾತ್ತತಃ ಕಾಯವಿಶುದ್ಧಯೇ ।
ಪ್ರಹರಾಂತೇ ಚ ಸಂಪೂಜ್ಯ ಅರ್ಧನಾರೀಶ್ವರಂ ತತಃ ॥ ೪೧ ॥
ಸುರಭ್ಯಾ ಪೂಜಯೇದ್ಭಕ್ತ್ಯಾ ಮಂತ್ರೇಣಾನೇನ ಪಾರ್ವತಿ ।
ವಾಮಮರ್ಧಂ ಶರೀರಸ್ಯ ಯಾ ಹರಸ್ಯ ವ್ಯವಸ್ಥಿತಾ ।
ಸಾ ಮೇ ಪೂಜಾಂ ಪ್ರಗೃಹ್ಣಾತು ತಸ್ಯೈ ದೇವ್ಯೈ ನಮೋಸ್ತು ತೇ ॥ ೪೨ ॥
ಅಗರುಂ ಚ ತತೋ ಭಕ್ತ್ಯಾ ಧೂಪಂ ದದ್ಯಾತ್ತಥಾ ಶುಭೇ ।
ನೈವೇದ್ಯೇ ಗುಣಕಾಂಶ್ಚೈವ ನಾಲಿಕೇರೇಣ ಚಾರ್ಘಕಂ ॥ ೪೩ ॥
ಮಂತ್ರೇಣಾನೇನ ದಾತವ್ಯಂ ತದೇವ ಪ್ರಾಶನಂ ಸ್ಮೃತಂ ।
ಅರ್ಧನಾರೀಶ್ವರೌ ಯೌ ಚ ಸಂಸ್ಥಿತೌ ಪರಮೇಶ್ವರೌ ॥ ೪೪ ॥
ಅರ್ಘ್ಯೋ ಮೇ ಗೃಹ್ಯತಾಂ ದೇವೌ ಸ್ಯಾತಂ ಸರ್ವಸುಖಪ್ರದೌ ।
ತೃತೀಯೇ ಪ್ರಹರೇ ಪ್ರಾಪ್ತೇ ಶತಪತ್ರ್ಯಾ ಪ್ರಪೂಜಯೇತ್ ॥ ೪೫ ॥
ಉಮಾಮಹೇಶ್ವರೌ ದೇವೌ ಮಂತ್ರೇಣಾನೇನ ಪೂಜಯೇತ್ ॥ ೪೬ ॥
ಉಮಾಮಹೇಶ್ವರೌ ದೇವೌ ಯೌ ತೌ ಸೃಷ್ಟಿಲಯಾನ್ವಿತೌ ।
ತೌ ಗೃಹ್ಣೀತಾಮಿಮಾಂ ಪೂಜಾಂ ಮಯಾ ದತ್ತಾಂ ಪ್ರಭಕ್ತಿತಃ ॥ ೪೮ ॥
ಗುಗ್ಗುಲೋತ್ಥಂ ತತೋ ಧೂಪಂ ನೈವೇದ್ಯಂ ಘಾರಿಕಾತ್ಮಕಂ ।
ಜಾತೀಫಲೇನ ಚಾರ್ಘ್ಯಂ ಚ ತದೇವ ಪ್ರಾಶನಂ ಸ್ಮೃತಂ ॥ ೪೯ ॥

---

೪೧–೪೨. ಅನಂತರ ಕಾಯಶುದ್ಧಿಗಾಗಿ ಆ ಅರ್ಘ್ಯೋದಕವನ್ನೇ ಪ್ರಾಶನ ಮಾಡಿ ಎರಡನೇ ಜಾಮದ ಆದಿಯಲ್ಲಿ ಅರ್ಧನಾರೀಶ್ವರನನ್ನು ಈ ಮಂತ್ರದಿಂದ ಸುರಭಿ ಪುಷ್ಪದಿಂದ ಪೂಜಿಸಬೇಕು. "ಶಂಕರನ ಶರೀರಾರ್ಧಭಾಗದಲ್ಲಿ ನೆಲೆಸಿರುವ ಗೌರೀದೇವಿಯು ನನ್ನ ಪೂಜೆಯನ್ನು ಸ್ವೀಕರಿಸಲಿ. ಆ ದೇವಿಗೆ ನಮಸ್ಕಾರವು."

೪೩–೪೬. ಬಳಿಕ ಅಗರು ಧೂಪವನ್ನಿತ್ತು ಗುಣಕ ನೈವೇದ್ಯವನ್ನರ್ಪಿಸಬೇಕು. ತೆಂಗಿನಕಾಯಿಯಿಂದ ಮುಂದಿನ ಮಂತ್ರದಿಂದ ಅರ್ಘ್ಯವನ್ನು ಕೊಟ್ಟು ಆ ನೀರನ್ನೇ ಪ್ರಾಶನ ಮಾಡಬೇಕು. ಅರ್ಧನಾರೀಶ್ವರರಾದ ಪರಮೇಶ್ವರರು ನನ್ನೀ ಅರ್ಘ್ಯವನ್ನು ಸ್ವೀಕರಿಸಿ ಸಮಸ್ತ ಸುಖವನ್ನೀಯಲಿ. ಮೂರನೇ ಜಾಮದಲ್ಲಿ ತಾವರೆ ಹೂವಿನಿಂದ ಪಾರ್ವತೀ ಪರಮೇಶ್ವರರನ್ನು ಈ ಮಂತ್ರದಿಂದ ಪೂಜಿಸಬೇಕು.

೪೮. "ಸೃಷ್ಟಿ ಲಯಗಳನ್ನುಂಟುಮಾಡುವ ಉಮಾಮಹೇಶ್ವರರು ನಾನು ಭಕ್ತಿಯಿಂದ ಮಾಡಿದ ಪೂಜೆಯನ್ನು ಸ್ವೀಕರಿಸಲಿ."

೪೯. ಅನಂತರ ಗುಗ್ಗುಲ ಧೂಪವನ್ನೂ, ಗಾರಿಗೆ ನೈವೇದ್ಯವನ್ನೂ ಸಮರ್ಪಿಸಿ ಜಾತೀಫಲದಿಂದ ಅರ್ಘ್ಯವನ್ನಿತ್ತು ಅದನ್ನೇ ಪ್ರಾಶನೆ ಮಾಡಬೇಕು.

ತತಶ್ಚಾರ್ಘ್ಯಃ ಪ್ರದಾತವ್ಯೋ ಮಂತ್ರೇಣಾನೇನ ಭಕ್ತಿತಃ ।
ಗ್ರಂಥಿಚೂರ್ಣೇನ ಧೂಪಂ ಚ ಅರ್ಘ್ಯಂ ಮದನಜಂ ಫಲಂ ॥ ೪೯ ॥
ತದೇವ ಪ್ರಾಶನಂ ಕಾರ್ಯಂ ತತಃ ಕಾಯವಿಶುದ್ಧಯೇ ॥ ೫೦ ॥
ಉಮಾಮಹೇಶ್ವರೌ ದೇವೌ ಸರ್ವಕಾರ್ಯಸುಖಪ್ರದೌ ।
ಗೃಹ್ಣೀತಾಮರ್ಘ್ಯಮೇತಂ ಮೇ ದಯಾಂ ಕೃತ್ವಾ ಮಹತ್ತಮಾಂ ॥ ೫೧ ॥
ಚತುರ್ಥೇ ಪ್ರಹರೇ ಪ್ರಾಪ್ತೇ ತಾಂ ಗೌರೀಂ ಪಂಚಪಿಂಡಿಕಾಂ ।
ಭೃಂಗರಾಜೇನ ಸಂಪೂಜ್ಯ ಮಂತ್ರೇಣಾನೇನ ಭಕ್ತಿತಃ ॥ ೫೨ ॥
ಪೃಥಿವ್ಯಾದೀನಿ ಭೂತಾನಿ ಯಾನಿ ಪ್ರೋಕ್ತಾನಿ ಪಂಚ ಚ ।
ಪಂಚರೂಪಾಣಿ ದೇವೇಶಿ ಪೂಜಾಂ ಗೃಹ್ಣ ನಮೋಽಸ್ತು ತೇ ॥ ೫೩ ॥
ನೈವೇದ್ಯೇ ಘೃತಪೂಪಾಂಶ್ಚ ದದ್ಯಾದ್ದೇವ್ಯಾಃ ಪ್ರಭಕ್ತಿತಃ ।
ಗ್ರಂಥಿಚೂರ್ಣೇನ ಧೂಪಂ ಚ ಹ್ಯರ್ಘ್ಯಂ ಮದನಜಂ ಫಲಂ ।
ತದೇವ ಪ್ರಾಶನಂ ಕಾರ್ಯಮರ್ಘ್ಯ ಮಂತ್ರಮಿದಂ ಸ್ಮೃತಂ ॥ ೫೪ ॥
ಪಂಚಭೂತಮಯೀ ದೇವೀ ಪಂಚಧಾ ಯಾ ವ್ಯವಸ್ಥಿತಾ ।
ಅರ್ಘ್ಯಮೇನಂ ಮಯಾ ದತ್ತಂ ಸಾ ಗೃಹ್ಣಾತು ಸುರೇಶ್ವರೀ ॥ ೫೫ ॥
ಏವಂ ಸರ್ವಾ ನಿಶಾ ಸಾ ಚ ಗೀತವಾದ್ಯಾದಿ ನಿಃಸ್ವನೈಃ ।
ತಾಸಾಂ ಚೈವಾಗ್ರತೋ ನೇಯಾ ನೈವ ನಿದ್ರಾಂ ಸಮಾಚರೇತ್ ॥ ೫೬ ॥

---

೪೯–೫೦. ಅನಂತರ ಗ್ರಂಥಿಚೂರ್ಣದಿಂದ ಧೂಪವನ್ನಿತ್ತು ಮದನಜ ಫಲದಿಂದ ಈ ಮಂತ್ರವನ್ನು ಹೇಳಿ ಅರ್ಘ್ಯವನ್ನು ಕೊಟ್ಟು ಕಾಯಶುದ್ಧಿಗಾಗಿ ಆ ಅರ್ಘ್ಯದ ನೀರನ್ನು ಪ್ರಾಶನ ಮಾಡಬೇಕು.

೫೧. ಸಮಸ್ತ ಕಾಮ, ಸುಖಗಳನ್ನು ಕೊಡುವ ಉಮಾಮಹೇಶ್ವರರು ನನ್ನಲ್ಲಿ ಮಹಾ ದಯೆಯನ್ನು ಮಾಡಿ ಈ ಅರ್ಘ್ಯವನ್ನು ಸ್ವೀಕರಿಸಲಿ.

೫೨–೫೩. ನಾಲ್ಕನೇ ಜಾಮದಲ್ಲಿ ಭೃಂಗರಾಜದಿಂದ ಈ ಪಂಚಪಿಂಡಿಕಾ ಗೌರಿಯನ್ನು ಈ ಮಂತ್ರದಿಂದ ಪೂಜಿಸಬೇಕು. "ದೇವೇಶಿ! ಪೃಥಿವ್ಯಾದಿ ಪಂಚ ಮಹಾಭೂತಗಳು ನಿನ್ನ ಪಂಚರೂಪಗಳಾಗಿರುವುವು. ಆ ನೀನು ನನ್ನೀ ಪೂಜೆಯನ್ನು ಸ್ವೀಕರಿಸು. ನಿನಗೆ ನಮಸ್ಕಾರವು."

೫೪–೫೫. ಆ ದೇವಿಗೆ ಗ್ರಂಥಿಚೂರ್ಣದಿಂದ ಧೂಪವನ್ನೂ, ಘೃತಾಪೂಪ ನೈವೇದ್ಯವನ್ನೂ ಅರ್ಪಿಸಿ ಮದನಜ ಫಲದಿಂದ ಅರ್ಘ್ಯವನ್ನಿತ್ತು ಅದನ್ನೇ ಪ್ರಾಶನ ಮಾಡಬೇಕು. ಇದು ಅರ್ಘ್ಯಮಂತ್ರವಾಗಿರುವುದು. ಪಂಚಭೂತಮಯಳಾಗಿ ಪಂಚರೂಪಳಾಗಿರುವ ದೇವಿಯು ನಾನಿತ್ತ ಈ ಅರ್ಘ್ಯವನ್ನು ಸ್ವೀಕರಿಸಲಿ.

೫೬. ಹೀಗೆ ಆ ದೇವಿಯ ಮುಂದೆ ಆ ರಾತ್ರಿಯನ್ನು ಸಂಗೀತ, ವಾದ್ಯಾದಿಗಳ ಧ್ವನಿಯಿಂದ ಕಳೆಯಬೇಕು. ನಿದ್ರಿಸಬಾರದು.

ತತಃ ಪ್ರಭಾತೇ ವಿಮಲೇ ಪ್ರೋದ್ಗತೇ ರವಿಮಂಡಲೇ ।
ಸ್ನಾತ್ವಾ ಸಂಪೂಜಯೇದ್ವಿಪ್ರಂ ಸಹ ಪತ್ನ್ಯಾ ಪ್ರಭಕ್ತಿತಃ ॥ ೫೭ ॥
ವಸ್ತ್ರೈರಾಭರಣೈಶ್ಚೈವ ಸ್ವಶಕ್ತ್ಯಾ ನೃಪನಂದಿನಿ ।
ಗೌರ್ಯೈ ಭಕ್ಷ್ಯಂ ಚ ದಾತವ್ಯಂ ಮಿಷ್ಟಾನ್ನೇನ ಶುಚಿಸ್ಮಿತೇ ॥ ೫೮ ॥
ತತಃ ಕರೇಣುಮಾನೀಯ ವಡವಾಂ ವಾ ಸುಮಧ್ಯಮೇ ।
ಗೌರೀಚತುಷ್ಟಯಂ ತಚ್ಚ ಸಮಾರೋಪ್ಯ ತಥೋಪರಿ ॥ ೫೯ ॥
ಗೀತವಾದಿತ್ರಶಬ್ದೇನ ವೇದಧ್ವನಿಯುತೇನ ಚ ।
ನದ್ಯಾಂ ವಾಽಥ ತಡಾಗೇ ವಾ ವಾಪ್ಯಾಂ ವಾಽಥ ಪರಿಕ್ಷಿಪೇತ್ ॥ ೬೦ ॥
ಮಂತ್ರೇಣಾನೇನ ಸದ್ಭಕ್ತ್ಯಾ ತವೇದಂ ವಚ್ಮಿ ಸುಂದರಿ ॥ ೬೧ ॥
ಆಹೂತಾಸಿ ಮಯಾ ದೇವಿ ಪೂಜಿತಾಽಸಿ ಮಯಾ ಶುಭೇ ।
ಮಮ ಸೌಭಾಗ್ಯದಾನಾಯ ಯಥೇಷ್ಟಂ ಗಮ್ಯತಾಮಿತಿ ॥ ೬೨ ॥

ಲಕ್ಷ್ಮೀರುವಾಚ :—

ಏವಂ ಮಯಾ ಕೃತಾ ದೇವ ಸಾ ತೃತೀಯಾ ಯಥೋದಿತಾ ।
ನಭಸ್ಯೇ ಮಾಸಿ ಸಂಪ್ರಾಪ್ತೇ ಭಕ್ತ್ಯಾ ಪರಮಯಾ ವಿಭೋ ॥ ೬೩ ॥
ದ್ವಿತೀಯೇ ಚ ತಥಾ ಪ್ರಾಪ್ತೇ ತೃತೀಯೇ ಚ ವಿಶೇಷತಃ ।
ಯಾವತ್ಪಶ್ಯಾಮಿ ಪ್ರತ್ಯೂಷೇ ತಾವದ್ಗೌರೀ ಚತುಷ್ಟಯಂ ।
ಜಾತಂ ರತ್ನಮಯಂ ತಚ್ಚ ಮಯಾ ಯತ್ಪರಿಪೂಜಿತಂ ॥ ೬೪ ॥

---

೫೭–೫೮. ತರುವಾಯ ಬೆಳಗ್ಗೆ ಸೂರ್ಯನು ಉದಯಿಸಲು ಮಿಂದು, ಬ್ರಾಹ್ಮಣ ದಂಪತಿಗಳನ್ನು ಒಡವೆ ವಸ್ತ್ರಗಳಿಂದ ಶಕ್ತ್ಯನುಸಾರ ಪೂಜಿಸಿ ಮಿಷ್ಟಾನ್ನದೊಡನೆ ಗೌರಿಗೆ ಭಕ್ಷ್ಯವನ್ನರ್ಪಿಸಬೇಕು.

೫೯–೬೧. ಬಳಿಕ ಹೆಣ್ಣಾನೆಯನ್ನಾಗಲಿ, ಹೆಣ್ಣು ಕುದುರೆಯನ್ನಾಗಲಿ ತಂದು ಅದರ ಮೇಲೆ ಆ ನಾಲ್ವರು ಗೌರಿಯರನ್ನು ಕುಳ್ಳಿರಿಸಿ ಗೀತ, ವಾದ್ಯ, ವೇದಧ್ವನಿಗಳಿಂದ ನದಿ, ಕೆರೆ ಅಥವಾ ಬಾವಿಗೆ ತೆಗೆದುಕೊಂಡು ಹೋಗಿ ಅಲ್ಲಿ ನಾನು ಈಗ ಹೇಳುವ ಮಂತ್ರದಿಂದ ಭಕ್ತಿಯಿಂದ ವಿಸರ್ಜನೆ ಮಾಡಬೇಕು.

೬೨. "ದೇವಿ! ನಾನು ನಿನ್ನನ್ನು ಆವಾಹನೆ ಮಾಡಿ ಪೂಜಿಸಿದ್ದೇನೆ. ನನಗೆ ಸೌಭಾಗ್ಯವನ್ನು ಕೊಡುವುದಕ್ಕಾಗಿ ನೀನು ಸ್ವೇಚ್ಛೆಯಾಗಿ ಹೋಗು."

೬೩. ಲಕ್ಷ್ಮಿಯು ಹೇಳುತ್ತಾಳೆ:—ಸ್ವಾಮಿ! ನೀನು ಹೇಳಿದಂತೆ ನಾನು ಶ್ರಾವಣ ಮಾಸದ ತದಿಗೆ ರಾತ್ರಿ ಅತಿ ಭಕ್ತಿಯಿಂದ ಗೌರಿಯನ್ನು ಪೂಜಿಸಿದೆನು.

೬೪. ಹಾಗೆಯೇ ಎರಡನೆಯ ಮತ್ತು ಮೂರನೆಯ ಜಾಮದಲ್ಲಿ ಪೂಜಿಸಿ. ಬೆಳಗ್ಗೆ ನೋಡುವಷ್ಟರಲ್ಲಿ ನಾನು ಪೂಜಿಸಿದ ನಾಲ್ಕು ಮಂದಿ ಗೌರಿಯರೂ ರತ್ನಮಯವಾಗಿದ್ದರು.

ಪ್ರಸ್ಥಿತಾಂ ಮಾಂ ನದೀತೀರಮುದ್ದಿಶ್ಯ ಚ ವಿಸರ್ಜನಂ ।
ಕರಿಷ್ಯಾಮೀತಿ ಸಾ ಪ್ರಾಹ ವ್ಯಕ್ತೀ ಭೂತಾ ಸುರೇಶ್ವರೀ ॥ ೬೫ ॥
ಮಾ ಪುತ್ರಿ ಜಲಮಧ್ಯೇಽತ್ರ ಮಮ ಮೂರ್ತಿಚತುಷ್ಟಯಂ ।
ಪರಿಭಾವಯ ಮದ್ವಾಕ್ಯಂ ಶ್ರುತ್ವಾ ಚೈವ ವಿಧೀಯತಾಂ ॥ ೬೬ ॥
ಹಾಟಕೇಶ್ವರಜೇ ಕ್ಷೇತ್ರೇ ಸ್ಥಾಪಯ ತ್ವಂ ಚ ಮಾಕ್ಷಿಪ ।
ಅಕ್ಷಯಂ ಜಾಯತೇ ಯೇನ ಸರ್ವಸ್ತ್ರೀಣಾಂ ಹಿತಾಯ ಚ ॥ ೬೭ ॥
ತ್ವಂ ಪ್ರಾರ್ಥಯ ವರಂ ಸರ್ವಂ ದದಾಮ್ಯಹಮಿಹಾರ್ಚಿತಾ ।
ಅಭ್ಯರ್ಚಿತಾ ಗಿರಿಸುತಾ ಮಯಾ ಪ್ರೋಕ್ತಾ ಸುರೇಶ್ವರೀ ॥ ೬೮ ॥
ಯದಿ ಯಚ್ಛಸಿ ಮೇ ದೇವಿ ವರಂ ತುಷ್ಟಾ ಸುರೇಶ್ವರಿ ।
ತದಹಂ ಮಾನುಷೇ ಗರ್ಭೇ ಮಾ ಭೂಯಾಸಂ ಕಥಂಚನ ॥ ೬೯ ॥
ಭರ್ತಾ ಭವತು ಮೇ ವಿಷ್ಣುಃ ಶಾಶ್ವತಾಭೀಷ್ಟದಃ ಸದಾ ।
ನಾನ್ಯತ್ಕಿಂಚಿದಭೀಷ್ಟಂ ಮೇ ರಾಜ್ಯಂ ತ್ರಿದಿವಶೋಭನಂ ॥ ೭೦ ॥
ಅನ್ಯಾಽಪಿ ಕುರುತೇ ಯಾಚ ವ್ರತಮೇತತ್ಸಮಾಹಿತಾ ।
ಸರ್ವೈರ್ವ್ರತೈರ್ಯಥಾ ತುಷ್ಟಿಸ್ತಥಾ ದೇವಿ ಪ್ರಜಾಯತೇ ॥ ೭೧ ॥
ತಥಾ ತಸ್ಯಾಃ ಪ್ರಕರ್ತವ್ಯಮೇಕೇನಾಽನೇನ ಪಾರ್ವತಿ ।
ತಥೇತಿ ಗೌರೀ ಮಾಮುಕ್ತ್ವಾ ತತಶ್ಚಾದರ್ಶನಂ ಗತಾ ॥ ೭೨ ॥

---

೬೫. ಅವರನ್ನು ವಿಸರ್ಜನೆ ಮಾಡಲು ನದೀತೀರಕ್ಕೆ ಹೋಗುವಾಗ ಗೌರಿಯು ಪ್ರತ್ಯಕ್ಷಳಾಗಿ ಹೀಗೆಂದಳು.

೬೬. "ಮಗಳೆ! ನನ್ನ ನಾಲ್ಕು ಮೂರ್ತಿಗಳನ್ನು ನೀರಿನಲ್ಲಿ ಹಾಕಬೇಡ. ನನ್ನ ಮಾತನ್ನು ಕೇಳಿ ಅದರಂತೆ ಮಾಡು.

೬೭. ನನ್ನೀ ಮೂರ್ತಿಗಳನ್ನು ಹಾಟಕೇಶ್ವರಕ್ಷೇತ್ರದಲ್ಲಿ ಸಕಲ ಸ್ತ್ರೀಯರ ಹಿತಕ್ಕಾಗಿ ಸ್ಥಾಪಿಸು. ಎಸೆಯಬೇಡ. ಅದರಿಂದ ಅಕ್ಷಯವಾಗುವುದು.

೬೮–೬೯. ನೀನೂ ವರವನ್ನು ಕೇಳಿಕೊ. ಇಲ್ಲಿ ಪೂಜಿತಳಾದ ನಾನು ನಿನಗೆ ಅದನ್ನೆಲ್ಲ ಕೊಡುವೆನು." ನಾನು ಅವಳ ಮಾತಿನಂತೆ ಅವಳನ್ನು ಪೂಜಿಸಿ ಹೀಗೆ ಹೇಳಿದೆನು. "ಸುರೇಶ್ವರಿ! "ನೀನು ಸಂತುಷ್ಟಳಾಗಿ ವರವನ್ನು ಕೊಡುವುದಾದರೆ ನಾನು ಮರಳಿ ಮನುಷ್ಯಗರ್ಭದಲ್ಲಿ ಜನಿಸದಂತೆ ಮಾಡು.

೭೦. ಶಾಶ್ವತವಾದ ಇಷ್ಟಾರ್ಥವನ್ನು ಕೊಡುವ ವಿಷ್ಣುವು ನನಗೆ ಪತಿಯಾಗಲಿ. ಮಂಗಳಕರವಾದ ದೇವರಾಜ್ಯವನ್ನೂ ನಾನು ಬಯಸುವುದಿಲ್ಲ.

೭೧–೭೨. ಗೌರಿ! ಇತರ ಹೆಂಗಸರೂ ಈ ವ್ರತವನ್ನಾಚರಿಸಿದರೆ ಅವರಿಗೆ ಇದೊಂದರಿಂದಲೇ ಸಮಸ್ತ ವ್ರತಗಳಿಂದಾಗುವ ಸಂತೋಷವುಂಟಾಗಲಿ." ಬಳಿಕ ಗೌರಿಯು ಹಾಗೆಯೇ ಆಗಲೆಂದು ಹೇಳಿ ಅದೃಶ್ಯಳಾದಳು.

**ಸಾ ದೇವೀ ಚ ಮಯಾ ತತ್ರ ತಚ್ಚ ಗೌರೀಚತುಷ್ಟಯಂ ।**
**ಹಾಟಕೇಶ್ವರಜೇ ಕ್ಷೇತ್ರೇ ಶುಭೇ ಸಂಸ್ಥಾಪಿತಂ ವಿಭೋ ॥ ೭೩ ॥**
**ತತ್ಪ್ರಭಾವಾನ್ಮಯಾ ಲಬ್ಧೋ ಭರ್ತಾ ತ್ವಂ ಪರಮೇಶ್ವರ ।**
**ಶಾಶ್ವತಶ್ಚಾಕ್ಷಯಶ್ಚೈವ ಮುಖಪ್ರೇಕ್ಷಶ್ಚ ಸರ್ವದಾ ॥ ೭೪ ॥**
**ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟಾಽಸ್ಮಿ ಸುರೇಶ್ವರ ।**
**ಸತ್ಯೇನಾನೇನ ದೇವೇಶ ತವ ಪಾದೌ ಸ್ಪೃಶಾಮ್ಯಹಂ ॥ ೭೫ ॥**

**ಸೂತ ಉವಾಚ :—**

**ತಚ್ಛ್ರುತ್ವಾ ವಚನಂ ತಸ್ಯಾಃ ಶಂಖಚಕ್ರಗದಾಧರಃ ।**
**ವಿಹಸ್ಯಾಽಥ ಮಹಾಲಕ್ಷ್ಮೀಂ ತಾಮುವಾಚ ಪ್ರಹರ್ಷಿತಃ ।**
**ಮುಹುರ್ಮುಹುಃ ಸಮಾಲಿಂಗ್ಯ ವಕ್ಷಸಶ್ಚೋಪರಿಸ್ಥಿತಾಂ ॥ ೭೬ ॥**
**ಸಾಧು ಸಾಧು ಮಹಾಭಾಗೇ ಸತ್ಯಮೇತತ್ತ್ವಯೋದಿತಂ ।**
**ಜಾನತಾಽಪಿ ಮಯಾ ಪೃಷ್ಟಾ ಭವತೀ ವರವರ್ಣಿನಿ ॥ ೭೭ ॥**

**ಸೂತ ಉವಾಚ :—**

**ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।**
**ಚತುರ್ಭುಜಾ ಯಥಾ ಗೌರೀ ಸಂಜಾತಾ ಪಂಚಪಿಂಡಿಕಾ ॥ ೭೮ ॥**
**ಯಶ್ಚೈತತ್ಪಠತೇ ಭಕ್ತ್ಯಾ ಪ್ರಾತರುತ್ಥಾಯ ಮಾನವಃ ।**
**ನ ಸ ಲಕ್ಷ್ಮ್ಯಾ ವಿಮುಚ್ಯೇತ ನ ಚ ದೌರ್ಭಾಗ್ಯಮಾಪ್ನುಯಾತ್ ॥ ೭೯ ॥**

---

೭೩. ಸ್ವಾಮಿ! ನಾನು ಮಂಗಳಕರವಾದ ಆ ಹಾಟಕೇಶ್ವರಕ್ಷೇತ್ರದಲ್ಲಿ ಆ ನಾಲ್ಕು ಗೌರಿಯರನ್ನು ಸ್ಥಾಪಿಸಿದೆನು.

೭೪. ಆಕೆಯ ಪ್ರಭಾವದಿಂದಲೇ ನಾನು ಶಾಶ್ವತನೂ, ಅಕ್ಷಯನೂ, ಯಾವಾಗಲೂ ಪ್ರಿಯನೂ ಆದ ನಿನ್ನನ್ನು ಪತಿಯನ್ನಾಗಿ ಪಡೆದೆನು.

೭೫. ಸುರೇಶ್ವರ! ನೀನು ಕೇಳಿದ್ದನ್ನೆಲ್ಲ ಹೇಳಿದ್ದೇನೆ. ಇದೆಲ್ಲ ನಿಜವು. ನಿನ್ನ ಪಾದಗಳನ್ನು ಮುಟ್ಟಿ ಹೇಳುತ್ತೇನೆ.

೭೬–೭೭. ಸೂತನು ಹೇಳುತ್ತಾನೆ:—ಶಂಖ ಚಕ್ರ ಗದಾಧರನಾದ ಆ ಮಹಾವಿಷ್ಣುವು ಆಕೆಯ ಮಾತನ್ನು ಕೇಳಿ ಸಂತೋಷದಿಂದ ನಕ್ಕು ವಕ್ಷಸ್ಥಳಸ್ಥಿತೆಯಾದ ಆಕೆಯನ್ನು ಆಲಿಂಗಿಸಿ ಇಂತೆಂದನು. "ಮಹಾ ಭಾಗ್ಯಶಾಲಿನಿಯೆ! ಒಳ್ಳೆಯದು. ನೀನು ಹೇಳಿರುವುದು ನಿಜವೆ! ನಾನು ಇದನ್ನರಿತಿದ್ದರೂ ನಿನ್ನನ್ನು ಕೇಳಿದ್ದೇನೆ."

೭೮. ಸೂತನು ಹೇಳುತ್ತಾನೆ:–ದ್ವಿಜವರ್ಯರೆ! ನೀವು ಕೇಳಿದ ಚತುರ್ಭುಜ ಗೌರಿಯೂ ಪಂಚಪಿಂಡಿಕೆಯೂ ಹೇಗಾದಳೆಂಬುದನ್ನು ಹೇಳಿದ್ದೇನೆ.

೭೯. ಬೆಳಗ್ಗೆ ಎದ್ದು ಇದನ್ನು ಭಕ್ತಿಯಿಂದ ಪಠಿಸುವ ಮನುಷ್ಯನು **ಲಕ್ಷ್ಮಿಯಿಂದ ಮುಕ್ತನಾಗುವುದಿಲ್ಲ, ದೌರ್ಭಾಗ್ಯವನ್ನೂ ಹೊಂದುವುದಿಲ್ಲ.**

ತಸ್ಮಾತ್ಸರ್ವಪ್ರಯತ್ನೇನ ಪಠನೀಯಮಿದಂ ಶುಭಂ ।
ಆಖ್ಯಾನಂ ಗೌರಿಕಂ ವಿಪ್ರಾ ಯನ್ಮಯಾ ಪರಿಕೀರ್ತಿತಂ ॥ ೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಂಚಪಿಂಡಿಕಾಗೌರ್ಯುತ್ಪತ್ತಿಮಾಹಾತ್ಮ್ಯವರ್ಣನಂ"
ನಾಮಾಷ್ಟಸಪ್ತತ್ಯುತ್ತರಶತತಮೋಽಧ್ಯಾಯಃ

---

೮೦. ಆದುದರಿಂದ ನಾನು ಹೇಳಿದ ಈ ಗೌರಿಯ ಆಖ್ಯಾನವನ್ನು ಪಠಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಂಚಪಿಂಡಿಕಾಗೌರ್ಯುತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರೆಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನಾಽಶೀತ್ಯುತ್ತರಶತತಮೋಽಧ್ಯಾಯಃ

### ಬ್ರಾಹ್ಮಣಾಮಂತ್ರಣಾದಿಪ್ರಕಾರಕಥನಂ

**ಸೂತ ಉವಾಚ :—**

**ತಥಾಽನ್ಯದಪಿ ತತ್ರಾಽಸ್ತಿ ಪುಷ್ಕರತ್ರಿತಯಂ ಶುಭಂ ।**
**ಹಾಟಕೇಶ್ವರಜೇ ಕ್ಷೇತ್ರೇ ಸರ್ವಪಾತಕನಾಶನಂ ॥ ೧ ॥**
**ಯಸ್ಮಿನ್ ದೃಷ್ಟೇಽಥವಾ ಸ್ಪೃಷ್ಟೇ ಕೀರ್ತಿತೇ ವಾ ದ್ವಿಜೋತ್ತಮಾಃ ।**
**ಪಾತಕಂ ನಾಶಮಾಯಾತಿ ಭಾಸ್ಕರೇಣ ತಮೋ ಯಥಾ ॥ ೨ ॥**
**ಪುನಂತಿ ಸರ್ವತೀರ್ಥಾನಿ ಸ್ನಾನಾದ್ದಾನಾದಸಂಶಯಂ ।**
**ಪುಷ್ಕರಾಲೋಕನಾದೇವ ಸರ್ವಪಾಪೈಃ ಪ್ರಮುಚ್ಯತೇ ॥ ೩ ॥**

**ಋಷಯ ಊಚುಃ :—**

**ಶ್ರೂಯತೇ ಪುಷ್ಕರಂ ನಾಮ ತೀರ್ಥಂ ತ್ರೈಲೋಕ್ಯವಿಶ್ರುತಂ ।**
**ಬ್ರಹ್ಮಣಾ ನಿರ್ಮಿತಂ ತತ್ರ ಯಚ್ಚ ಯೋಜನಮಾತ್ರಕಂ ॥ ೪ ॥**
**ಉತ್ತರೇ ಚಂದ್ರಭಾಗಾಯಾ ನದ್ಯಾ ಯಾವತ್ಸರಸ್ವತೀ ।**
**ದಕ್ಷಿಣೇ ಕರತೋಯಾಯಾಃ ಸೀಮೇಯಂ ಪುಷ್ಕರತ್ರಯೇ ॥ ೫ ॥**

---

## ಕನ್ನಡದ ಅನುವಾದ

### ಬ್ರಾಹ್ಮಣಾಮಂತ್ರಣಾದಿಪ್ರಕಾರಕಥನ

೧. ಸೂತನು ಹೇಳುತ್ತಾನೆ:—ಆ ಹಾಟಕೇಶ್ವರಕ್ಷೇತ್ರದಲ್ಲಿ ಸಕಲ ಪಾಪಗಳನ್ನು ನಿವಾರಿಸುವ ಇನ್ನೂ ಬೇರೆ ಮೂರು ಪುಷ್ಕರಗಳಿರುವುವು.

೨. ದ್ವಿಜವರ್ಯರೆ! ಅವನ್ನು ನೋಡಿದರೆ, ಮುಟ್ಟಿದರೆ ಅಥವಾ ಕೀರ್ತಿಸಿದರೆ ಸೂರ್ಯನಿಂದ ಕತ್ತಲೆಯು ಹೇಗೋ ಹಾಗೆ ಪಾತಕವೆಲ್ಲ ನಾಶವಾಗುವುದು.

೩. ಸಕಲ ತೀರ್ಥಗಳೂ ಸ್ನಾನ ದಾನಗಳಿಂದ ನಿಶ್ಚಯವಾಗಿಯೂ ಮಾನವನನ್ನು ಪವಿತ್ರಗೊಳಿಸುವುವು. ಪುಷ್ಕರದ ದರ್ಶನಮಾತ್ರದಿಂದಲೇ ಮಾನವನು ಸಕಲ ಪಾಪಮುಕ್ತನಾಗುವನು.

೪. ಋಷಿಗಳು ಹೇಳುತ್ತಾರೆ:—ಬ್ರಹ್ಮನು ನಿರ್ಮಿಸಿದ ಯೋಜನ ಪರಿಮಾಣದ ತ್ರೈಲೋಕ್ಯ ಪ್ರಸಿದ್ಧವಾದ ಪುಷ್ಕರತೀರ್ಥವನ್ನು ಕೇಳಿದ್ದೇವೆ.

೫. ಈ ಪುಷ್ಕರತ್ರಯಕ್ಕೆ ಉತ್ತರಭಾಗದಲ್ಲಿ ಚಂದ್ರಭಾಗಾ ನದಿಯಿಂದ ಸರಸ್ವತೀ ನದಿಯುವರೆಗೂ, ದಕ್ಷಿಣದಲ್ಲಿ ಕರತೋಯಾ ನದಿಯುವರೆಗೂ ಎಲ್ಲೆಯಾಗಿರುವುದು.

ಅಸ್ಮಾಕಂ ತು ಪುರಾ ಸೂತ ತ್ವಯೋಕ್ತಂ ವಿಯತಿ ಸ್ಥಿತಂ ।
ಏತನ್ನಃ ಕೌತುಕಂ ಸೂತ ತತ್ಕಥಂ ಹಾಟಕೇಶ್ವರೇ ।
ತತ್ರ ಕ್ಷೇತ್ರೇ ಸಮಾಯಾತಂ ತಸ್ಮಾತ್ತ್ವಂ ವಕ್ತುಮರ್ಹಸಿ ॥ ೬ ॥

ಸೂತ ಉವಾಚ :—

ಸತ್ಯಮೇತನ್ಮಹಾಭಾಗಾ ಯದ್ಭವದ್ಭಿರುದಾಹೃತಂ ।
ತಸ್ಮಿನ್ ಕ್ಷೇತ್ರೇ ದ್ವಿಜಶ್ರೇಷ್ಠಾಸ್ತಚ್ಛೃಣುಧ್ವಂ ಸಮಾಹಿತಾಃ ॥ ೭ ॥
ಸರ್ವತೋ ವಿಸ್ತರಾದ್ವಚ್ಮಿ ನಮಸ್ಕೃತ್ಯ ಸ್ವಯಂಭುವಂ ॥ ೮ ॥
ಬ್ರಹ್ಮಲೋಕೇ ನಿವಸತೋ ಬ್ರಹ್ಮಣೋಽವ್ಯಕ್ತಜನ್ಮನಃ ।
ದೇವರ್ಷಿರ್ನಾರದಃ ಪ್ರಾಪ್ತೋ ಭ್ರಾಂತ್ವಾ ಲೋಕತ್ರಯಂ ಮುನಿಃ ॥ ೯ ॥
ಸ ನತ್ವಾ ಶಿರಸಾ ಪಾದಾವುಪವಿಷ್ಟಸ್ತದಗ್ರತಃ ॥ ೧೦ ॥

ಬ್ರಹ್ಮೋವಾಚ :—

ಕಸ್ಮಾದ್ವತ್ಸ ಚಿರಾದ್ದೃಷ್ಟಃ ಕುತಃ ಪ್ರಾಪ್ತೋಽಧುನಾ ಭವಾನ್ ।
ಕ್ವ ಭ್ರಾಂತಸ್ತ್ವಂ ಸಮಾಚಕ್ಷ್ವ ಬ್ರೂಹಿ ವತ್ಸಾತ್ರ ಕಾರಣಂ ॥ ೧೧ ॥

ನಾರದ ಉವಾಚ :—

ಮರ್ತ್ಯಲೋಕಾದ್ವಿಭೋ ಪ್ರಾಪ್ತಃ ಸಾಂಪ್ರತಂ ಚ ತ್ವರಾನ್ವಿತಃ ।
ತವ ಪಾದಪ್ರಪೂಜಾರ್ಥಂ ಸತ್ಯೇನಾತ್ಮಾನಮಾಲಭೇ ॥ ೧೨ ॥

---

೬. ಸೂತ! ನೀನು ಈ ಪುಷ್ಕರತ್ರಯವು ಆಕಾಶದಲ್ಲಿದೆ ಎಂದು ಹಿಂದೆ ಹೇಳಿರುವೆ. ಇದು ಹಾಟಕೇಶ್ವರಕ್ಷೇತ್ರಕ್ಕೆ ಹೇಗೆ ಬಂದಿತು? ಎಂಬುದನ್ನು ನೀನು ನಮಗೆ ಹೇಳಬೇಕು.

೭–೮. ಸೂತನು ಹೇಳುತ್ತಾನೆ:—ಮಹಾ ಭಾಗ್ಯವಂತರೆ! ನೀವು ಹೇಳಿರುವುದು ನಿಜ. ಆ ಕ್ಷೇತ್ರಕ್ಕೆ ಇದು ಹೇಗೆ ಬಂದಿತೆಂಬುದನ್ನು ಬ್ರಹ್ಮನನ್ನು ವಂದಿಸಿ ಸಂಪೂರ್ಣವಾಗಿ ಹೇಳುತ್ತೇನೆ ಕೇಳಿರಿ.

೯–೧೦. ಅವ್ಯಕ್ತವಾದ ಜನ್ಮವುಳ್ಳ ಬ್ರಹ್ಮನು ಸತ್ಯಲೋಕದಲ್ಲಿ ವಾಸಮಾಡುತ್ತಿರಲು ನಾರದ ಮುನಿಯು ಮೂರು ಲೋಕಗಳಲ್ಲಿಯೂ ಸಂಚರಿಸಿ ಅಲ್ಲಿಗೆ ಬಂದು ಪಿತಾಮಹನ ಪಾದಗಳಿಗೆರಗಿ ಅವನ ಮುಂದೆ ಕುಳಿತನು.

೧೧. ಬ್ರಹ್ಮನು ಹೇಳುತ್ತಾನೆ:—ಮಗು! ನೀನು ಬಹಳಕಾಲದ ಮೇಲೆ ದರ್ಶನ ವಿಷಯನಾಗಿರುವೆಯಲ್ಲ! ಈಗ ಎಲ್ಲಿಂದ ಬಂದೆ? ಎಲ್ಲಿ ಸಂಚಾರ ಮಾಡುತ್ತಿರುವೆ? ಇಲ್ಲಿಗೆ ಬರಲು ಕಾರಣವೇನು? ಹೇಳು.

೧೨. ನಾರದನು ಹೇಳುತ್ತಾನೆ:—ನಾನು ಈಗ ನಿನ್ನ ಪಾದವನ್ನು ವಂದಿಸುವುದಕ್ಕಾಗಿ ಮನುಷ್ಯಲೋಕದಿಂದ ತ್ವರೆಯಿಂದ ಬಂದಿದ್ದೇನೆ. ಇದು ನಿಜ.

ಬ್ರಹ್ಮೋವಾಚ :—

ಕಿಂವದಂತೀಂ ಸಮಾಚಕ್ಷ್ವ ಮರ್ತ್ಯಲೋಕಸಮುದ್ಭವಾಂ ।
ಕೀದೃಶಾಃ ಪಾರ್ಥಿವಾಸ್ತತ್ರ ಕೀದೃಶಾ ದ್ವಿಜಸತ್ತಮಾಃ ।
ಕೀದೃಶಾ ವ್ಯವಹಾರಾಶ್ಚ ವರ್ತಂತೇ ತತ್ರ ಸಾಂಪ್ರತಂ ॥ ೧೩ ॥

ನಾರದ ಉವಾಚ :—

ಮರ್ತ್ಯಲೋಕೇ ಕಲಿರ್ಜಾತಃ ಸಾಂಪ್ರತಂ ಸುರಸತ್ತಮ ॥ ೧೪ ॥
ರಾಜಾನಃ ಸತ್ಪಥಂ ತ್ಯಕ್ತ್ವಾ ತಥಾ ಲೋಭಪರಾಯಣಾಃ ।
ಪೀಡಯಂತಿ ಚ ಲೋಕಾಂಶ್ಚ ಅರ್ಥಹೇತೋಃ ಸುನಿರ್ಘೃಣಾಃ ॥ ೧೫ ॥
ಶೌರ್ಯಭಾವಪರಿತ್ಯಕ್ತಾಃ ಪರದಾರವಿಮರ್ದಕಾಃ ।
ಪೂಜಯಂತಿ ನ ತೇ ವಿಪ್ರಾನ್ನ ದೇವಾನ್ನ ಗುರೂನಪಿ ॥ ೧೬ ॥
ವೇದವಿಕ್ರಯಕರ್ತಾರೋ ಬ್ರಾಹ್ಮಣಾಃ ಶೌಚವರ್ಜಿತಾಃ ।
ಪಾಪಪ್ರತಿಗ್ರಹಾಸಕ್ತಾಃ ಸಂಧ್ಯಾಹೀನಾಃ ಸುನಿರ್ಘೃಣಾಃ ॥ ೧೭ ॥
ಕೃಷಿಕರ್ಮರತಾ ನಿತ್ಯಂ ವೈಶ್ಯವತ್ಪಶುಪಾಲಕಾಃ ।
ವೈಶ್ಯಾಃ ಸರ್ವೇ ಸಮುಚ್ಛೇದಂ ಪ್ರಯಾತಾ ಧರಣೀತಲೇ ॥ ೧೮ ॥
ಶೂದ್ರಾ ನಿತ್ಯಂ ಧರ್ಮಕಾಮಾಃ ಶೂದ್ರಾಶ್ಚೈವ ತಪಸ್ವಿನಃ ।
ಲೋಕಯಾತ್ರಾಕ್ರಿಯಾಃ ಸರ್ವೇ ಪ್ರಹಸಂತಿ ವ್ಯಪತ್ರಪಾಃ ॥ ೧೯ ॥

---

೧೩. ಬ್ರಹ್ಮನು ಹೇಳುತ್ತಾನೆ:—ಭೂಲೋಕದ ಸಮಾಚಾರವನ್ನು ನನಗೆ ಹೇಳು. ಅಲ್ಲಿರುವ ರಾಜರು ಹೇಗಿರುವರು? ಬ್ರಾಹ್ಮಣರು ಹೇಗಿದ್ದಾರೆ? ವ್ಯವಹಾರಗಳು ಹೇಗಿರುವುವು?

೧೪–೧೫. ನಾರದನು ಹೇಳುತ್ತಾನೆ:—ಸುರೋತ್ತಮ! ಈಗ ಭೂಲೋಕದಲ್ಲಿ ಜಗಳವುಂಟಾಗಿದೆ. ರಾಜರು ಹಣಕ್ಕಾಗಿ ಸನ್ಮಾರ್ಗವನ್ನು ತೊರೆದು ಲೋಭಿಗಳಾಗಿ ದಯೆಯಿಲ್ಲದೆ ಜನರನ್ನು ಪೀಡಿಸುತ್ತಿದ್ದಾರೆ.

೧೬. ಶೌರ್ಯವನ್ನು ತ್ಯಜಿಸಿ ಪರಪತ್ನಿಯರ ಸಂಗವನ್ನು ಮಾಡುತ್ತ ದೇವ, ಬ್ರಾಹ್ಮಣ ಗುರುಗಳನ್ನು ಪೂಜಿಸುತ್ತಿಲ್ಲ.

೧೭–೧೮. ಬ್ರಾಹ್ಮಣರು ಶೌಚವಿಲ್ಲದವರೂ, ವೇದವನ್ನು ಮಾರುವವರೂ, ಪಾಪಿಗಳಿಂದ ದಾನವನ್ನು ತೆಗೆದುಕೊಳ್ಳುವವರೂ, ಸಂಧ್ಯಾವಂದನೆ ಮಾಡದವರೂ, ದಯಾಹೀನರೂ, ವೈಶ್ಯರಂತೆ ಕೃಷಿನಿರತರೂ, ಪಶುಗಳನ್ನು ಪಾಲಿಸುವವರೂ ಆಗಿದ್ದಾರೆ. ಭೂಲೋಕದಲ್ಲಿರುವ ವೈಶ್ಯರೆಲ್ಲರೂ ನಾಶವಾಗಿದ್ದಾರೆ.

೧೯. ಶೂದ್ರರೇ ಯಾವಾಗಲೂ ಧರ್ಮವನ್ನಾಚರಿಸುವವರು. ಶೂದ್ರರೇ ತಪಸ್ವಿಗಳು. ಅವರು ನಾಚಿಕೆಯಿಲ್ಲದೆ ಪ್ರಪಂಚದ ಕಾರ್ಯಗಳನ್ನೆಲ್ಲ ಹಾಸ್ಯ ಮಾಡುತ್ತಾರೆ.

ಯಸ್ಯ ಚಾಽಸ್ತಿ ಗೃಹೇ ವಿತ್ತಂ ತರುಣ್ಯಶ್ಚ ತಥಾ ಸ್ತ್ರಿಯಃ ।
ತೇನ ತೇನ ಸಮಂ ಸಖ್ಯಂ ಪ್ರಕುರ್ವಂತಿ ನರಾ ಭುವಿ ॥ ೨೦ ॥
ವಿಧವಾನಾಂ ವ್ರತಸ್ಥಾನಾಂ ಸರ್ವೇಷಾಂ ಲಿಂಗಿನಾಂ ತಥಾ ।
ಹೃದಿ ಸ್ಥಿತೋ ಮಹಾನ್ಕಾಮೋ ವ್ರತಚರ್ಯಾ ಬಹಿಃಸ್ಥಿತಾಃ ॥ ೨೧ ॥
ತೀರ್ಥಾನಿ ವಿಪ್ಲವಂ ಯಾಂತಿ ಪಾಪಲೋಕಶ್ರಿತಾನಿ ಚ ।
ಕಲೇರ್ಭೀತಾನಿ ಸರ್ವಾಣಿ ಪ್ರದ್ರವಂತಿ ದಿಶೋ ದಶ ॥ ೨೨ ॥
ಅಹಂ ತತ್ರ ಸ್ಥಿತೋ ಯಸ್ಮಾತ್ಕಲಿಕಾಲೇ ಪಿತಾಮಹ ॥ ೨೩ ॥
ಕಲಿಕಾಲೇ ವಿಶೇಷೇಣ ಸ್ವೈರಿಣ್ಯಾ ಲಲಿತಸ್ಪೃಹಾಃ ।
ಭರ್ತ್ರಾ ವಿವದಮಾನಾಶ್ಚ ಸ್ತ್ರಿಯಃ ಕಾರ್ಮಣ ತತ್ಪರಾಃ ।
ವೃಥಾ ವ್ರತಾನಿ ಕುರ್ವಂತಿ ತ್ಯಕ್ತ್ವಾ ತಾಃ ಸ್ವಪತೇಃ ಕಥಾಂ ॥ ೨೪ ॥
ಕಲಿರ್ಬಲಿಷ್ಠಃ ಸುತರಾಂ ವರದಾನೇನ ತೇ ಕೃತಃ ।
ಯದಾ ಮರ್ತ್ಯೇ ಭವೇದ್ಯುದ್ಧಂ ಕಂಡೂತಿರ್ಜಾಯತೇ ಹೃದಿ ॥ ೨೫ ॥
ಸ್ವರ್ಗೇ ವಾ ಮಸ್ತಕೇ ಚೈವ ಪಾತಾಲೇ ಚಾಽಥ ಪಾದಯೋಃ ।
ಸಾಂಪ್ರತಂ ಮರ್ತ್ಯಲೋಕೇ ಚ ಮಯಾ ದೃಷ್ಟಮನೇಕಶಃ ॥ ೨೬ ॥
ಶ್ವಶ್ರೂಣಾಂ ಚ ವಧೂನಾಂ ಚ ತಥಾ ಜನಕಪುತ್ರಯೋಃ ।
ಬಾಂಧವಾನಾಂ ವಿಶೇಷೇಣ ತಥಾ ಚ ಸ್ವಾಮಿಭೃತ್ಯಯೋಃ ॥ ೨೭ ॥

---

೨೦. ಮಾನವರು ಯಾವನ ಮನೆಯಲ್ಲಿ ದ್ರವ್ಯವೂ, ಯುವತಿಯರಾದ ಹೆಂಗಸರೂ ಇರುವರೊ, ಅವನೊಡನೆ ಸ್ನೇಹವನ್ನು ಬೆಳಸುತ್ತಾರೆ.

೨೧. ವಿಧವೆಯರು, ವ್ರತಿಗಳು, ಯತಿಗಳು ಇವರ ಮನಸ್ಸಿನಲ್ಲಿ ವ್ರತಾಚರಣೆಗೆ ವಿರುದ್ಧವಾಗಿ ಅತಿಶಯವಾದ ಕಾಮವು ನೆಲೆಸಿರುವುದು.

೨೨. ಪಾಪಿಗಳಾದ ಜನರು ಆಶ್ರಯಿಸಿರುವುದರಿಂದ ತೀರ್ಥಗಳು ಹಾಳಾಗಿವೆ. ಕಲಿಭಯದಿಂದ ಅವುಗಳೆಲ್ಲ ದಶದಿಕ್ಕುಗಳಿಗೆ ಓಡುತ್ತಿವೆ.

೨೩–೨೪. ನಾನು ಆ ಕಲಿಕಾಲದಲ್ಲಿ ಅಲ್ಲಿದ್ದೆನು. ಕಲಿಕಾಲದಲ್ಲಿ ಹೆಂಗಸರು ವಿಶೇಷವಾಗಿ ವ್ಯಭಿಚಾರಿಣಿಯರೂ, ಸೌಂದರ್ಯವನ್ನಪೇಕ್ಷಿಸುವವರೂ, ಗಂಡನೊಡನೆ ಜಗಳವಾಡುವವರೂ, ಮದ್ದನ್ನಿಡುವವರೂ, ತಮ್ಮ ಪತಿಯ ವಾರ್ತೆಯನ್ನು ತ್ಯಜಿಸಿ ವ್ಯರ್ಥವಾಗಿ ವ್ರತಗಳನ್ನಾಚರಿಸುವವರೂ ಆಗುವರು.

೨೫–೩೦. ನೀನು ವರವನ್ನಿತ್ತು ಕಲಿಯನ್ನು ಬಲಿಷ್ಠನನ್ನಾಗಿ ಮಾಡಿರುವೆ. ಭೂಲೋಕದಲ್ಲಿ ಯುದ್ಧವಾದರೆ ನನ್ನ ಎದೆಯಲ್ಲಿಯೂ, ಸ್ವರ್ಗದಲ್ಲಿ ಯುದ್ಧ ನಡೆದರೆ ತಲೆಯಲ್ಲಿಯೂ, ಪಾತಾಳದಲ್ಲಿ ಸಮರವಾದರೆ ಪಾದಗಳಲ್ಲಿಯೂ ನವೆಯಾಗುವುದು. ಈಗ ನಾನು ಭೂಲೋಕದಲ್ಲಿ ಅತ್ತೆ ಸೊಸೆಯರಿಗೂ, ತಂದೆ ಮಕ್ಕಳಿಗೂ, ಬಾಂಧವರೊಳಗೂ, ಯಜಮಾನ ಸೇವಕರಿಗೂ, ಕಳ್ಳರು ಮತ್ತು

ಚೌರಾಣಾಂ ಪಾರ್ಥಿವಾನಾಂ ಚ ದಂಪತ್ಯೋಶ್ಚ ವಿಶೇಷತಃ ।
ಸ್ವಲ್ಪೋದಕಾಸ್ತಥಾ ಮೇಘಾಃ ಸ್ವಲ್ಪಸಸ್ಯಾ ಚ ಮೇದಿನೀ ॥ ೨೮ ॥
ಸ್ವಲ್ಪಕ್ಷೀರಾಸ್ತಥಾಗಾವಃ ಕ್ಷೀರೇ ಸರ್ಪಿರ್ನ ವಿದ್ಯತೇ ।
ಏವಂ ಯುದ್ಧಾನಿ ತೇಷಾಂ ಚ ವೀಕ್ಷಮಾಣೋ ದಿವಾನಿಶಂ ॥ ೨೯ ॥
ಅಹಂ ಮರ್ತ್ಯೇ ಪರಿಭ್ರಾಂತಶ್ಚಿರಾತ್ತೇನ ಸಮಾಗತಃ ।
ಭೂಯೋ ಯಾಸ್ಯಾಮಿ ತತ್ರೈವ ಕಂಡೂತಿರ್ಮಹತೀ ಸ್ಥಿತಾ ॥ ೩೦ ॥
ತಚ್ಛ್ರುತ್ವಾ ವಚನಂ ತಸ್ಯ ನಾರದಸ್ಯ ಪಿತಾಮಹಃ ।
ಪುಷ್ಕರಸ್ಯ ಕೃತೇ ಜಾತಶ್ಚಿಂತಾ ವ್ಯಾಕುಲಿತೇಂದ್ರಿಯಃ ॥ ೩೧ ॥
ಮರ್ತ್ಯೇ ಚ ಮಾಮಕಂ ತೀರ್ಥಂ ಪುಷ್ಕರಂ ನಾಮ ವಿಶ್ರುತಂ ।
ನಾಶಂ ಯಾಸ್ಯತಿ ತನ್ನೂನಂ ಕಲಿಕಾಲಪರಿಪ್ಲುತಂ ॥ ೩೨ ॥
ತಸ್ಮಾದನ್ಯತ್ರ ನೇಷ್ಯಾಮಿ ಕಲಿರ್ಯತ್ರ ನ ವಿದ್ಯತೇ ।
ಯೇನ ತತ್ರ ವಿಮುಂಚಾಮಿ ನಿಜಂ ತೀರ್ಥಂ ಚ ಪುಷ್ಕರಂ ॥ ೩೩ ॥
ಕಲಿಕಾಲೇ ಚ ಸಂಪ್ರಾಪ್ತೇ ಸರ್ವಪ್ರಾಣಿಭಯಂಕರೇ ।
ತತ್ರ ಪ್ರಯಾಂತು ತೀರ್ಥಾನಿ ಸರ್ವಾಣ್ಯೇವ ವಿಶೇಷತಃ ॥ ೩೪ ॥
ಗತೇ ಕಲೌ ಪ್ರಯಾಸ್ಯಂತಿ ನಿಜಂ ಸ್ಥಾನಮಸಂಶಯಂ ॥ ೩೫ ॥

---

ರಾಜರಿಗೂ, ಗಂಡ ಹೆಂಡರಿಗೂ ಜಗಳವಾಗುತ್ತಿರುವುದನ್ನು ಅನೇಕಸಾರಿ ನೋಡಿದ್ದೇನೆ. ಹಾಗೆಯೇ ಮೋಡಗಳು ಅಲ್ಪನೀರನ್ನು ಸುರಿಸುವುವೂ, ಭೂಮಿಯು ಅಲ್ಪಸಸ್ಯಗಳುಳ್ಳದ್ದೂ, ಗೋವುಗಳು ಸ್ವಲ್ಪ ಹಾಲನ್ನು ಕೊಡುವುವೂ ಆಗಿರುವುವು. ಹಾಲಿನಲ್ಲಿ ತುಪ್ಪವಿಲ್ಲ. ನಾನು ಹೀಗೆ ಆ ಮನುಷ್ಯರ ಯುದ್ಧಗಳನ್ನು ಹಗಲು ರಾತ್ರಿ ನೋಡುತ್ತ, ಭೂಲೋಕದಲ್ಲಿ ಸಂಚರಿಸುತ್ತ ಬಹಳಕಾಲದ ಮೇಲೆ ಅಲ್ಲಿಂದ ಇಲ್ಲಿಗೆ ಬಂದೆನು. ನನಗೆ ನವೆಯು ಬಹಳವಾಗಿರುವುದರಿಂದ ಮರಳಿ ಅಲ್ಲಿಗೇ ಹೋಗುವೆನು.

೩೧. ಚತುರ್ಮುಖನು ನಾರದನ ಆ ಮಾತನ್ನು ಕೇಳಿ ಪುಷ್ಕರದ ವಿಷಯದಲ್ಲಿ ಚಿಂತಾಕ್ರಾಂತನಾದನು.

೩೨. ಭೂಲೋಕದಲ್ಲಿರುವ ಪುಷ್ಕರವೆಂಬ ನನ್ನ ತೀರ್ಥವು ಕಲಿಕಾಲದಿಂದ ನಿಶ್ಚಯವಾಗಿಯೂ ನಾಶವಾಗುವುದು.

೩೩. ಆದುದರಿಂದ ಕಲಿಯಿಲ್ಲದ ಸ್ಥಳದಲ್ಲಿ ನನ್ನ ತೀರ್ಥವನ್ನು ತೆಗೆದುಕೊಂಡು ಹೋಗಿ ಸ್ಥಾಪಿಸುವೆನು.

೩೪. ಸಮಸ್ತ ಪ್ರಾಣಿಗಳಿಗೆ ಭಯವನ್ನುಂಟುಮಾಡುವ ಕಲಿಕಾಲವು ಬರಲು ಸಕಲ ತೀರ್ಥಗಳೂ ಅಲ್ಲಿಗೆ ಹೋಗಲಿ.

೩೫. ಕಲಿಕಾಲವು ಕಳೆಯಲು ಆ ತೀರ್ಥಗಳು ತಮ್ಮ ಸ್ಥಳಕ್ಕೆ ತೆರಳಲಿ.

ಏವಂ ನಿಶ್ಚಿತ್ಯ ಮನಸಾ ಹಸ್ತಸ್ಥಂ ಕಮಲಂ ತತಃ ।
ಪ್ರೋವಾಚ ಸಾದರಂ ತಚ್ಚ ಸ್ವಯಂ ಧ್ಯಾತ್ವಾ ಪಿತಾಮಹಃ ॥ ೩೬ ॥
ಪತ ತ್ವಂ ಪದ್ಮ ಭೂಪೃಷ್ಠೇ ಕಲಿರ್ಯತ್ರ ನ ವಿದ್ಯತೇ ।
ಯೇನಾನಯಾಮಿ ತತ್ರೈವ ಪುಷ್ಕರಂ ತೀರ್ಥಮಾತ್ಮನಃ ॥ ೩೭ ॥
ತತಸ್ತತ್ಪ್ರೇಷಿತಂ ತೇನ ಪದ್ಮಂ ಭ್ರಾಂತ್ವಾ ಮಹೀತಲೇ ।
ಸಮಸ್ತೇ ಪತಿತಂ ಕ್ಷೇತ್ರೇ ಹಾಟಕೇಶ್ವರಸಂಭವೇ ॥ ೩೮ ॥
ದೃಷ್ಟ್ವಾ ವೇದವಿದೋ ವಿಪ್ರಾನ್ ಸ್ವಾಧ್ಯಾಯನಿರತಾಂಛುಚೀನ್ ।
ತೇಷಾಂ ಯಜ್ಞಕ್ರಿಯಾಭಿಶ್ಚ ಯಜ್ಞೋಪಾಂತ್ಯೈಃ ಸಮಂತತಃ ॥ ೩೯ ॥
ಯೂಪಾದ್ಯೈಃ ಸರ್ವತೋ ವ್ಯಾಪ್ತೇ ಸದಿಶೇ ಗಗನಾಂಗಣೇ ।
ಋಗ್ಯಜುಃ ಸಾಮಘೋಷೇಣ ತಥಾ ಚಾಥರ್ವಜೇನ ಚ ॥ ೪೦ ॥
ದಿಙ್ಮಂಡಲೇ ತಥಾ ವ್ಯಾಪ್ತೇ ನಾನ್ಯಃ ಸಂಶ್ರೂಯತೇ ಧ್ವನಿಃ ।
ತಥಾ ಚ ತಾರ್ಕಿಕಾಣಾಂ ಚ ವಿವಾದೇಷು ಮಹತ್ಸು ಚ ॥ ೪೧ ॥
ವೇದಾಂತಾನಾಂ ಸಮಸ್ತಾನಾಂ ವ್ಯಾಖ್ಯಾನೇ ಬಹುಧಾ ಕೃತೇ ।
ದೃಶ್ಯಂತೇ ಮುನಯೋ ಯತ್ರ ಸಂಸ್ಥಿತಾ ನಿಯಮೇಷು ಚ ॥ ೪೨ ॥
ಏಕಾಹಾರಾ ನಿರಾಹಾರಾ ಏಕಾಂತರಕೃತಾಶನಾಃ ।
ತ್ರಿರಾತ್ರೋಪೋಷಿತಾಶ್ಚಾಽನ್ಯೇ ಕೃಚ್ಛ್ರ ಚಾಂದ್ರಾಯಣೇ ರತಾಃ ॥ ೪೩ ॥
ಮಹಾ ಪಾರಾಕಿಣಶ್ಚಾಽನ್ಯೇ ತಥಾ ಮಾಸೋಪವಾಸಿನಃ ।
ಅಶ್ಮಕುಟ್ಟಾಶಿನಶ್ಚಾಽನ್ಯೇ ದಂತೋಲೂಖಲಿಕಾಸ್ತಥಾ ॥ ೪೪ ॥

---

೩೬. ಬ್ರಹ್ಮನು ಮನಸ್ಸಿನಲ್ಲಿ ಹೀಗೆ ನಿಶ್ಚಯಿಸಿ ಧ್ಯಾನಮಾಡಿ ಕೈಯಲ್ಲಿರುವ ಕಮಲವನ್ನು ಕುರಿತು ಪ್ರೀತಿಯಿಂದ ಹೀಗೆಂದನು.

೩೭. "ಕಮಲವೆ! ನೀನು ಭೂಲೋಕದಲ್ಲಿ ಕಲಿಯಿಲ್ಲದಿರುವ ಸ್ಥಳದಲ್ಲಿ ಬೀಳು. ನಾನು ಅಲ್ಲಿಗೆ ನನ್ನ ತೀರ್ಥವನ್ನು ಒಯ್ಯುವೆನು."

೩೮–೪೭. ಅನಂತರ ಅವನು ಕಳುಹಿಸಿದ ಪದ್ಮವು ಸಕಲ ಭೂಮಂಡಲ ದಲ್ಲಿ ಅಲೆದು ವೇದಾಧ್ಯಯನನಿರತರಾದ ಶುದ್ಧ ಬ್ರಾಹ್ಮಣರು ಮಾಡುತ್ತಿರುವ ಯಾಗ, ಯೂಪಸ್ತಂಭಗಳಿಂದ ವ್ಯಾಪ್ತವಾದುದೂ, ದಿಙ್ಮಂಡಲವನ್ನು ಆವರಿಸಿರುವ ಚತುರ್ವೇದಗಳ ಶಬ್ದವುಳ್ಳುದೂ, ತಾರ್ಕಿಕರ ವಿವಾದಗಳು, ಸಮಸ್ತ ವೇದಾಂತ ಗಳ ವ್ಯಾಖ್ಯಾನಗಳಿಂದ ಬಹುವಾಗಿ ವ್ಯಾಪ್ತವಾದುದೂ, ನಿಯಮನಿರತರೂ, ಏಕಾಹಾರರೂ, ನಿರಾಹಾರರೂ, ದಿನಬಿಟ್ಟು ದಿನ ಭೋಜನ ಮಾಡುವವರೂ, ಮೂರು ರಾತ್ರಿ ಉಪವಾಸ ಮಾಡುವವರೂ, ಕೃಚ್ಛ್ರ, ಚಾಂದ್ರಾಯಣ, ಮಹಾ ಪಾರಾಕ ವ್ರತವನ್ನಾಚರಿಸುವವರೂ, ಒಂದು ತಿಂಗಳು ಉಪವಾಸ ಮಾಡುವವರೂ, ಕಲ್ಲಿನಿಂದ ಧಾನ್ಯವನ್ನು ಕುಟ್ಟಿ ತಿನ್ನುವವರೂ, ಹಲ್ಲುಗಳಿಂದ ಕಾಳನ್ನು ಕಡಿದು

ಶೀರ್ಣಪರ್ಣಾಶಿನಶ್ಚೈಕೇ ಫಲಾಹಾರಾ ಮಹರ್ಷಯಃ ।
ತದ್ದೃಷ್ಟ್ವಾ ತಾದೃಶಂ ಕ್ಷೇತ್ರಂ ಸಂಯುಕ್ತಂ ವಿವಿಧೈರ್ಗುಣೈಃ ॥ ೪೫ ॥
ತತಸ್ತತ್ಪತಿತಂ ತತ್ರ ಪುಣ್ಯಂ ಜ್ಞಾತ್ವಾ ಮಹೀತಲೇ ।
ಯತ್ರ ಸ್ಥಾನೇಽಪತತ್ಪೂರ್ವಂ ತಸ್ಮಾದುಚ್ಚಲಿತಂ ಪುನಃ ॥ ೪೬ ॥
ಅನ್ಯಸ್ಮಿಂಶ್ಚ ತತಃ ಸ್ಥಾನೇ ದ್ವಿತೀಯೇ ದ್ವಿಜಸತ್ತಮಾಃ ।
ತಸ್ಮಾದಪಿ ತೃತೀಯೇ ತು ತೃತೀಯಂ ಪಂಕಜಂ ಹಿತಂ ॥ ೪೭ ॥
ತತೋ ಗರ್ತಾತ್ರಯಂ ಜಾತಂ ತೇಷು ಸ್ಥಾನೇಷು ಚ ತ್ರಿಷು ।
ಗರ್ತಾಸು ಚ ಜಲಂ ಜಾತಂ ಸ್ವಚ್ಛಂ ಸ್ಫಟಿಕಸನ್ನಿಭಂ ॥ ೪೮ ॥
ಏತಸ್ಮಿನ್ನಂತರೇ ಪ್ರಾಪ್ತಃ ಸ್ವಯಮೇವ ಪಿತಾಮಹಃ ।
ತತ್ರ ಸ್ಥಾನೇ ದ್ವಿಜಶ್ರೇಷ್ಠಾ ಯಜ್ಞಕರ್ಮಪ್ರಸಿದ್ಧಯೇ ॥ ೪೯ ॥
ದೃಷ್ಟ್ವಾ ಸಮಂತತಃ ಕ್ಷೇತ್ರಂ ಹಾಟಕೇಶ್ವರಸಂಜ್ಞಿತಂ ।
ನಾನಾವಿಪ್ರೈಃ ಸಮಾಕೀರ್ಣಂ ವೇದವೇದಾಂಗಪಾರಗೈಃ ॥ ೫೦ ॥
ಅಹೋ ಕ್ಷೇತ್ರಮಹೋ ಕ್ಷೇತ್ರಂ ಪುಣ್ಯಂ ರಮ್ಯಂ ದ್ವಿಜಪ್ರಿಯಂ ।
ತಸ್ಮಾದ್ಯಜ್ಞಂ ಕರಿಷ್ಯಾಮಿ ಕ್ಷೇತ್ರೇಽಸ್ಮಿಂಶ್ಚ ದ್ವಿಜಾಶ್ರಯೇ ॥ ೫೧ ॥
ಆನಯಿಷ್ಯಾಮಿ ತಚ್ಚಾಽಪಿ ಪುಷ್ಕರತ್ರಿತಯಂ ಶುಭಂ ।
ಗರ್ತಾಸ್ವೇತಾಸು ಪುಣ್ಯಾಸು ಜ್ಯೇಷ್ಠಂ ಮಧ್ಯಂ ಕನೀಯಕಂ ॥ ೫೨ ॥

---

ತಿನ್ನುವವರೂ, ಒಣಗಿದ ತರಗು, ಹಣ್ಣು ಇವುಗಳನ್ನು ತಿನ್ನುವವರೂ ಆದ ಮಹರ್ಷಿಗಳಿಂದ ತುಂಬಿರುವುದೂ ಆದ ನಾನಾ ಗುಣಗಳುಳ್ಳ ಹಾಟಕೇಶ್ವರ ಕ್ಷೇತ್ರವನ್ನು ನೋಡಿ ಇದು ಭೂಮಂಡಲದಲ್ಲಿ ಪವಿತ್ರವಾದುದೆಂದರಿತು ಅಲ್ಲಿ ಬಿದ್ದಿತು. ಅಲ್ಲಿಂದ ಹೊರಟು ಮತ್ತೊಂದು ಸ್ಥಳದಲ್ಲಿ ಬಿದ್ದಿತು. ಅಲ್ಲಿಂದ ಮೂರನೆಯ ಸ್ಥಳದಲ್ಲಿ ಬಿದ್ದಿತು.

೪೮. ಅನಂತರ ಅವು ಮೂರು ಕುಣಿಗಳಾಗಿ ಅವುಗಳಲ್ಲಿ ಸ್ಫಟಿಕದಂತಿರುವ ಸ್ವಚ್ಛವಾದ ನೀರು ತುಂಬಿತು.

೪೯. ದ್ವಿಜವರ್ಯರೆ! ಈ ಸಮಯದಲ್ಲಿ ಬ್ರಹ್ಮನು ಯಜ್ಞಕಾರ್ಯದ ಸಿದ್ಧಿಗಾಗಿ ಅಲ್ಲಿಗೆ ಬಂದನು.

೫೦–೫೧. ಅವನು ವೇದವೇದಾಂಗಪಾರಂಗತರಾದ ಬ್ರಾಹ್ಮಣರಿಂದಲೂ, ವ್ರತಾಚರಣೆಯಲ್ಲಿ ನಿರತರಾದ ಮುನಿಗಳಿಂದಲೂ ತುಂಬಿರುವ ಆ ಹಾಟಕೇಶ್ವರ ಕ್ಷೇತ್ರವನ್ನು ನೋಡಿ, "ಇದು ಬ್ರಾಹ್ಮಣಪ್ರಿಯವಾದ ಪುಣ್ಯಕ್ಷೇತ್ರವಾಗಿದೆ. ಇದರಲ್ಲಿ ಯಜ್ಞವನ್ನು ಮಾಡುವೆನು.

೫೨–೫೪. ಈ ಕುಣಿಗಳಲ್ಲಿ ಜ್ಯೇಷ್ಠ, ಮಧ್ಯ, ಕನಿಷ್ಠವೆಂಬ ಮೂರು ಪುಷ್ಕರತೀರ್ಥಗಳನ್ನು ಸೇರಿಸುವೆನು. ಅದರಿಂದ ಕಲಿಕಾಲವು ಬರಲು ಅವು

ಕಲಿಕಾಲೇ ಚ ಸಂಪ್ರಾಪ್ತೇ ಯೇನ ಲೋಪಂ ನ ಗಚ್ಛತಿ ।
ಸ್ವಯಂ ನಿಶ್ಚಿತ್ಯ ಮನಸಾ ಚೋಪವಿಶ್ಯ ಧರಾತಲೇ ॥ ೫೩ ॥
ಧ್ಯಾತ್ವಾ ಚ ಸುಚಿರಂ ಕಾಲಮಾನಯಾಮಾಸ ತತ್ರ ಚ ।
ಪುಷ್ಕರತ್ರಿತಯಂ ಶ್ರೇಷ್ಠಂ ಜ್ಯೇಷ್ಠಮಧ್ಯಕನೀಯಕಂ ॥ ೫೪ ॥
ತತೋಽಬ್ರವೀತ್ಸುಹೃಷ್ಟಾತ್ಮಾ ಹ್ಯೇತದ್ಧಿ ಪುಷ್ಕರತ್ರಯಂ ।
ಮಯಾ ಸಮ್ಯಕ್ಸಮಾನೀತಂ ಕಲಿಕಾಲಭಯೇನ ಚ ॥ ೫೫ ॥
ಯೇಽತ್ರ ಸ್ನಾನಂ ಕರಿಷ್ಯಂತಿ ಶ್ರದ್ಧಯಾ ಪರಯಾ ಯುತಾಃ ।
ತೇ ಯಾಸ್ಯಂತಿ ಪರಾಂ ಸಿದ್ಧಿಮಕ್ಷಯಾಂ ಮತ್ಪ್ರಸಾದತಃ ॥ ೫೬ ॥
ಯೇ ಚ ಶ್ರಾದ್ಧಂ ಕರಿಷ್ಯಂತಿ ಕಾರ್ತಿಕ್ಯಾಂ ಸುಸಮಾಹಿತಾಃ ।
ಕರಿಷ್ಯಂತಿ ಗಯಾಶೀರ್ಷೇ ತೇಷಾಂ ಪುಣ್ಯಂ ಮಹತ್ತಮಂ ॥ ೫೭ ॥
ತತ್ಪ್ರಾದ್ಯಾತ್ಪುಷ್ಕರಾತ್ಪುಣ್ಯಂ ಲಭಿಷ್ಯಂತಿ ಶತಾಧಿಕಂ ।
ಮಯಾ ಯಜ್ಞಃ ಕೃತಸ್ತತ್ರ ಕಾರ್ತಿಕ್ಯಾಂ ಪೂರ್ವಪುಷ್ಕರೇ ॥ ೫೮ ॥
ವೈಶಾಖ್ಯಾಂ ಚ ಕರಿಷ್ಯಾಮಿ ಅತ್ರಾಽಹಂ ಚ ದ್ವಿತೀಯಕೇ ॥ ೫೯ ॥
ಏವಮುಕ್ತ್ವಾ ತತೋ ಬ್ರಹ್ಮಾ ಹ್ಯಾದಿದೇಶ ಸದಾಗತಿಂ ।
ಮಮಾದೇಶಾದ್ದ್ರುತಂ ವಾಯೋ ಸಮಾನಯ ಪುರಂದರಂ ॥ ೬೦ ॥

---

ನಾಶವಾಗುವುದಿಲ್ಲ.'' ಬ್ರಹ್ಮನು ಹೀಗೆ ನಿಶ್ಚಯಿಸಿ ಭೂಮಿಯಲ್ಲಿ ಕುಳಿತು ಬಹಳ ಹೊತ್ತು ಆಲೋಚಿಸಿ ಜ್ಯೇಷ್ಠ, ಮಧ್ಯ, ಕನೀಯಕವೆಂಬ ಮೂರು ಪುಷ್ಕರಗಳನ್ನು ತರಿಸಿದನು.

೫೫. ಅನಂತರ ಬ್ರಹ್ಮನು ಸಂತೋಷದಿಂದ ಇಂತೆಂದನು. ''ನಾನು ಕಲಿಕಾಲದ ಭಯದಿಂದ ಈ ಮೂರು ಪುಷ್ಕರಗಳನ್ನು ತಂದಿರುವೆನು.

೫೬. ಇಲ್ಲಿ ಅತಿ ಶ್ರದ್ಧೆಯಿಂದ ಸ್ನಾನಮಾಡುವವರು ನನ್ನ ಅನುಗ್ರಹದಿಂದ ಅಕ್ಷಯವಾದ ಸಿದ್ಧಿಯನ್ನು ಪಡೆಯುವರು.

೫೭. ಕಾರ್ತಿಕ ಮಾಸದಲ್ಲಿ ಇಲ್ಲಿ ಸ್ನಾನ ಮಾಡುವವರು ಗಯೆಯಲ್ಲಿಮಿಂದ ಪುಣ್ಯವನ್ನು ಹೊಂದುವರು.

೫೮. ನಾನು ಕಾರ್ತಿಕ ಮಾಸದ ಪೂರ್ಣಿಮೆಯ ದಿನ ಪೂರ್ವಪುಷ್ಕರದಲ್ಲಿ ಯಜ್ಞಮಾಡಿರುವುದರಿಂದ ಅಲ್ಲಿ ಮನುಷ್ಯನು ನೂರಕ್ಕಿಂತಲೂ ಅಧಿಕ ಪುಣ್ಯವನ್ನು ಪಡೆಯುವನು.

೫೯. ವೈಶಾಖ ಮಾಸದ ಹುಣ್ಣಿಮೆಯ ದಿನ ನಾನು ಈ ಎರಡನೆಯ ಪುಷ್ಕರದಲ್ಲಿ ಯಜ್ಞವನ್ನು ಮಾಡುವೆನು.''

೬೦–೬೨. ಬ್ರಹ್ಮನು ಹೀಗೆ ಹೇಳಿ ವಾಯುದೇವನನ್ನು ಕುರಿತು, ''ನನ್ನ ಅಪ್ಪಣೆಯಿಂದ ಆದಿತ್ಯರು, ವಸುಗಳು, ರುದ್ರರು, ಮರುದ್ಗಣರು, ಗಂಧರ್ವರು,

ಆದಿತ್ಯೈರ್ವಸುಭಿಃ ಸಾರ್ಧಂ ರುದ್ರೈಶ್ಚೈವ ಮರುದ್ಗಣೈಃ ।
ಗಂಧರ್ವೈರ್ಲೋಕಪಾಲೈಶ್ಚ ಸಿದ್ಧೈರ್ವಿದ್ಯಾಧರೈಸ್ತಥಾ ॥ ೬೧ ॥
ಯೇನ ಮೇ ಸ್ಯಾತ್ಸಹಾಯತ್ವಂ ಸಮಸ್ತೇ ಯಜ್ಞಕರ್ಮಣಿ ।
ತಚ್ಛ್ರುತ್ವಾ ಸಕಲಂ ವಾಯುರ್ಗತ್ವಾ ಶಕ್ರನಿವೇಶನಂ ।
ಕಥಯಾಮಾಸ ತತ್ಸರ್ವಂ ಯದುಕ್ತಂ ಪರಮೇಷ್ಠಿನಾ ॥ ೬೨ ॥
ಸತ್ವರಂ ಪ್ರಯಯೌ ತತ್ರ ಸರ್ವೈರ್ದೇವಗಣೈಃ ಸಹ ।
ಪ್ರಣಿಪತ್ಯ ತತಸ್ತಂ ಸ ಬ್ರಹ್ಮಾಣಂ ವಾಕ್ಯಮಬ್ರವೀತ್ ॥ ೬೩ ॥
ಆದೇಶೋ ದೀಯತಾಂ ದೇವ ಹ್ಯಹಮಾಕಾರಿತಸ್ತ್ವಯಾ ।
ಯದರ್ಥಂ ತತ್ಕರಿಷ್ಯಾಮಿ ತಸ್ಮಾಚ್ಛೀಘ್ರಂ ನಿವೇದಯ ॥ ೬೪ ॥

ಬ್ರಹ್ಮೋವಾಚ :—

ಮಯಾ ಶಕ್ರಾತ್ರ ಚಾನೀತಂ ಸುಪುಣ್ಯಂ ಪುಷ್ಕರತ್ರಯಂ ।
ಕಲಿಕಾಲಭಯಾಚ್ಚೈವ ಕರಿಷ್ಯೇ ತದಹಂ ಸ್ಥಿರಂ ॥ ೬೫ ॥
ಅಗ್ನಿಷ್ಟೋಮತ್ರಯಂ ಕೃತ್ವಾ ವೈಶಾಖ್ಯಾಂ ಚ ಯಥಾರ್ಚಿತಂ ।
ಸಂಭಾರಮಾಹರಸ್ವಾಶು ತದರ್ಥಂ ಸರ್ವಮೇವ ಹಿ ॥ ೬೬ ॥
ಬ್ರಾಹ್ಮಣಾಂಶ್ಚ ತದರ್ಹಾಂಶ್ಚ ವೇದವೇದಾಂಗಪಾರಗಾನ್ ।
ತಚ್ಛ್ರುತ್ವಾ ವಿನಯಾಚ್ಛಕ್ರಸ್ತಥೇತ್ಯುಕ್ತ್ವಾ ತ್ವರಾನ್ವಿತಃ ।
ಸಂಭಾರಾನಾನಯಾಮಾಸ ತದರ್ಹಾಂಶ್ಚ ದ್ವಿಜೋತ್ತಮಾನ್ ॥ ೬೭ ॥

---

ಲೋಕಪಾಲರು, ಸಿದ್ಧರು, ವಿದ್ಯಾಧರರು ಇವರೊಡನೆ ಇಂದ್ರನನ್ನು ಕರೆದುಕೊಂಡು ಬಾ. ಅವರಿಂದ ನನಗೆ ಸಮಸ್ತ ಯಜ್ಞಕಾರ್ಯಗಳಲ್ಲಿ ಸಹಾಯವಾಗುವುದು'' ಎಂದನು. ವಾಯುವು ಅದನ್ನೆಲ್ಲ ಕೇಳಿ ಇಂದ್ರನ ಮನೆಗೆ ಹೋಗಿ ಬ್ರಹ್ಮನು ಹೇಳಿದುದನ್ನೆಲ್ಲ ತಿಳಿಸಿದನು.

೬೩–೬೪. ಇಂದ್ರನು ಸಮಸ್ತ ದೇವತೆಗಳೊಡನೆ ಬ್ರಹ್ಮನೆಡೆಗೆ ಹೋಗಿ ಇಂತೆಂದನು. ''ಸ್ವಾಮಿ! ನೀನು ನನ್ನನ್ನು ಏತಕ್ಕೆ ಕರೆಯಿಸಿದೆ? ಅಪ್ಪಣೆ ಮಾಡು. ಅದನ್ನು ಮಾಡುವೆನು. ಶೀಘ್ರವಾಗಿ ತಿಳಿಸು.''

೬೫–೬೭. ಬ್ರಹ್ಮನು ಹೇಳುತ್ತಾನೆ:—'' ಇಂದ್ರ! ನಾನು ಕಲಿಕಾಲದ ಭಯದಿಂದ ಪುಣ್ಯಕರವಾದ ಮೂರು ಪುಷ್ಕರಗಳನ್ನು ಇಲ್ಲಿಗೆ ತಂದಿರುವೆನು. ಅದನ್ನು ವೈಶಾಖ ಪೂರ್ಣಿಮಾ ದಿನ ಅಗ್ನಿಷ್ಟೋಮವನ್ನು ಮಾಡಿ ಸ್ಥಿರಗೊಳಿಸುವೆನು. ಅದಕ್ಕಾಗಿ ಎಲ್ಲ ಸಾಮಗ್ರಿಗಳನ್ನೂ ಸಜ್ಜುಗೊಳಿಸು. ವೇದಪಾರಂಗತರಾದ ಯೋಗ್ಯ ಬ್ರಾಹ್ಮಣರನ್ನು ತ್ವರೆಯಾಗಿ ಕರೆದುಕೊಂಡು ಬಾ.'' ಇಂದ್ರನು ಆ ಮಾತನ್ನು ಕೇಳಿ ವಿನಯದಿಂದ ಹಾಗೆಯೇ ಆಗಲೆಂದು ಬೇಗನೆ ಅದಕ್ಕುಚಿತವಾದ ಸಾಮಗ್ರಿಗಳನ್ನು ತರಿಸಿದನು. ಮತ್ತು ದ್ವಿಜೋತ್ತಮರನ್ನು ಕರೆಯಿಸಿದನು.

**ತತಶ್ಚಕಾರ ವಿಧಿವದ್ಯಜ್ಞಂ ಸ ಪ್ರಪಿತಾಮಹಃ ।
ಯಥೋಕ್ತವಿಧಿನಾ ಸರ್ವಂ ತಥಾ ಸಂಪೂರ್ಣದಕ್ಷಿಣಂ ॥ ೬೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬ್ರಾಹ್ಮಣಾಮಂತ್ರಣಾದಿಪ್ರಕಾರಕಥನಂ"
ನಾಮ್ನೈಕೋನಾಽಶೀತ್ಯುತ್ತರಶತತಮೋಽಧ್ಯಾಯಃ**

---

೬೮. ಅನಂತರ ಪಿತಾಮಹನು ವಿಧಿಯಂತೆ ಯಜ್ಞವನ್ನುಮಾಡಿ ಸಂಪೂರ್ಣವಾಗಿ ದಕ್ಷಿಣೆಯನ್ನಿತ್ತನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬ್ರಾಹ್ಮಣಾಮಂತ್ರಣಾದಿಪ್ರಕಾರಕಥನ"ವೆಂಬ
ನೂರೆಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಅಶೀತ್ಯುತ್ತರಶತತಮೋಽಧ್ಯಾಯಃ

## ಅಧ್ವರಕವರ್ಾರಂಭವರ್ಣನಂ

ಋಷಯ ಊಚುಃ :—

ಅತ್ಯದ್ಭುತಮಿದಂ ಸೂತ ಯತ್ತ್ವಯಾ ಸಮುದಾಹೃತಂ ।
ಬ್ರಹ್ಮಣಾ ಯತ್ಕೃತೋ ಯಜ್ಞಸ್ತತ್ರ ಕ್ಷೇತ್ರೇ ಮಹಾತ್ಮನಾ ॥ ೧ ॥
ಅಗ್ನಿಷ್ಟೋಮಾದಯೋ ಯಜ್ಞಾ ಯೇ ವರ್ತಂತೇ ಧರಾತಲೇ ।
ಯಷ್ಟವ್ಯಸ್ತೇಷು ಯಜ್ಞೇಷು ಸ ಏವ ಹಿ ಸುರೇಶ್ವರಃ ॥ ೨ ॥
ತೇನೈವ ಯಜತಾ ತತ್ರ ಕೋಽಹೀಷ್ಟಃ ಪ್ರಬ್ರವೀಹಿ ನಃ ।
ಋತ್ವಿಜಃ ಕೇ ಸ್ಥಿತಾಸ್ತತ್ರ ಯೈಸ್ತತ್ಕರ್ಮ ಮುಖೋದ್ಭವಂ ।
ತತ್ರತ್ಯಕ್ಷೇ ಕೃತಂ ಸರ್ವಮೇತನ್ನಃ ಕೌತುಕಂ ಪರಂ ॥ ೩ ॥
ಕಾ ಚೈವ ದಕ್ಷಿಣಾ ದತ್ತಾ ತೇನ ತೇಷಾಂ ದ್ವಿಜನ್ಮನಾಂ ।
ಕೋಽಧ್ವರ್ಯುರ್ವಿಹಿತಸ್ತತ್ರ ಯೇನ ತದ್ಯಜನಂ ಕೃತಂ ॥ ೪ ॥
ಕೋ ಹೋತಾ ಕಶ್ಚ ವಾಽಽಗ್ನೀಧ್ರಃ ಕೋ ಬ್ರಹ್ಮಾ ತತ್ರ ಸಂಸ್ಥಿತಃ ।
ಉದ್ಗಾತಾ ಕಃ ಸ್ಥಿತಸ್ತತ್ರ ಹ್ಯಾಚಾರ್ಯೋ ಯಜ್ಞಕರ್ಮಣಿ ॥ ೫ ॥

---

## ಕನ್ನಡದ ಅನುವಾದ

### ಅಧ್ವರಕರ್ಮಾರಂಭವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ ! ಬ್ರಹ್ಮನು ಆ ಕ್ಷೇತ್ರದಲ್ಲಿ ಮಾಡಿದ ಯಜ್ಞದ ವಿಷಯವು ಅತ್ಯಾಶ್ಚರ್ಯಕರವಾದುದು.

೨. ಭೂಮಿಯಲ್ಲಿ ಆ ಬ್ರಹ್ಮನನ್ನೇ ಕುರಿತು ಅಗ್ನಿಷ್ಟೋಮಾದಿ ಯಾಗಗಳನ್ನು ಮಾಡುವರು.

೩–೫. ಆ ಬ್ರಹ್ಮನು ಯಾರನ್ನು ಉದ್ದೇಶಿಸಿ ಯಾಗ ಮಾಡಿದನು ? ಅದರಲ್ಲಿ ಋತ್ವಿಜರು ಯಾರು ? ಆತನ ಮುಂದೆ ಯಜ್ಞಕರ್ಮವನ್ನು ಯಾರು ಮಾಡಿದರು? ಆ ಬ್ರಹ್ಮನು ಬ್ರಾಹ್ಮಣರಿಗೆ ಯಾವ ದಕ್ಷಿಣೆಯನ್ನಿತ್ತನು? ಅದರಲ್ಲಿ ಅಧ್ವರ್ಯುವು ಯಾರು? ಯಾರು ಯಾಗ ಮಾಡಿದರು ? ಆ ಯಜ್ಞದಲ್ಲಿ ಹೋತಾ, ಅಗ್ನೀಧ್ರ, ಬ್ರಹ್ಮ, ಉದ್ಗಾತಾ, ಆಚಾರ್ಯ, ಇವರಾರು ? ನಮಗೆ ಬಹಳ ಕುತೂಹಲವುಂಟಾಗಿದೆ. ಅದನ್ನು ಹೇಳು.

**ಸೂತ ಉವಾಚ :—**

**ಅಹಂ ವಃ ಕೀರ್ತಯಿಷ್ಯಾಮಿ ಸರ್ವಂ ಯಜ್ಞಸ್ಯ ಸಂಭವಂ ।**
**ವೃತ್ತಾಂತಂ ಯಚ್ಚ ತತ್ರಸ್ಥಮಾಶ್ಚರ್ಯಂ ದ್ವಿಜಪುಂಗವಾಃ ॥ ೬ ॥**
**ಯೇ ಸದಸ್ಯಾಃ ಸ್ಥಿತಾಸ್ತತ್ರ ಋತ್ವಿಜಶ್ಚ ದ್ವಿಜೋತ್ತಮಾಃ ।**
**ದಕ್ಷಿಣಾ ಯಾಃ ಪ್ರದತ್ತಾಶ್ಚ ತೇಭ್ಯಸ್ತೇನ ಮಹಾತ್ಮನಾ ॥ ೭ ॥**
**ಯಜತಾ ದೇವದೇವೇನ ಬ್ರಹ್ಮಣಾಮಿತ ತೇಜಸಾ ।**
**ಯಜ್ಞಕಾಮಂ ಚತುರ್ವಕ್ತ್ರಂ ಜ್ಞಾತ್ವಾ ದೇವಃ ಶತಕ್ರತುಃ ॥ ೮ ॥**
**ಸರ್ವೈಃ ಸುರಗಣೈಃ ಸಾರ್ಧಂ ಸಾಹಾಯ್ಯಾರ್ಥಮುಪಾಗತಃ ।**
**ತಥಾ ಚ ಭಗವಾಂಛಂಭುಃ ಸರ್ವದೇವಗಣೈಃ ಸಹ ॥ ೯ ॥**
**ತಾನ್ ದೃಷ್ಟ್ವಾಽಭ್ಯಾಗತಾನ್ ಬ್ರಹ್ಮಾ ಮರ್ತ್ಯಧರ್ಮಸಮಾಶ್ರಿತಾನ್ ।**
**ಪ್ರೋವಾಚ ವಿನಯೋಪೇತಃ ಕೃತಾಂಜಲಿಪುಟಃ ಸ್ಥಿತಃ ॥ ೧೦ ॥**
**ಸ್ವಾಗತಂ ವಃ ಸುರಶ್ರೇಷ್ಠಾಃ ಪ್ರಸಾದಃ ಕ್ರಿಯತಾಂ ಮಮ ।**
**ನಿವಿಶ್ಯತಾಂ ಯಥಾ ನ್ಯಾಯಂ ಸ್ಥಾನೇಷು ರುಚಿರೇಷು ಚ ॥ ೧೧ ॥**
**ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯದ್ಯೂಯಂ ಸ್ವಯಮಾಗತಾಃ ।**
**ಮಂತ್ರಾಹೂತಾ ಯಥಾ ಕೃತ್ಸ್ನಾತ್ಸರ್ವಸತ್ರೇಷು ಗಚ್ಛಥ ॥ ೧೨ ॥**

---

೬. ಸೂತನು ಹೇಳುತ್ತಾನೆ :—ನಾನು ನಿಮಗೆ ಯಜ್ಞದ ಆಶ್ಚರ್ಯಕರವಾದ ಎಲ್ಲ ವೃತ್ತಾಂತವನ್ನು ಹೇಳುವೆನು.

೭–೯. ದ್ವಿಜವರ್ಯರೆ! ಅಲ್ಲಿ ಋತ್ವಿಜರೂ, ಸದಸ್ಯರೂ ಯಾರಿದ್ದರು? ಯಾಗ ಮಾಡುತ್ತಿರುವ ಬ್ರಹ್ಮನು ಏನನ್ನು ದಕ್ಷಿಣೆಯಾಗಿ ಕೊಟ್ಟನು? ಇದನ್ನೂ ತಿಳಿಸುತ್ತೇನೆ. ಬ್ರಹ್ಮನು ಯಜ್ಞಮಾಡಲಿಚ್ಛಿಸುವುದನ್ನು ಇಂದ್ರನರಿತು ಸಕಲ ದೇವತೆಗಳೊಡನೆ ಆತನಿಗೆ ಸಹಾಯ ಮಾಡಲು ಅಲ್ಲಿಗೆ ಬಂದನು. ಹಾಗೆಯೇ ಪೂಜ್ಯನಾದ ಮಹೇಶ್ವರನೂ ಸಕಲ ದೇವತೆಗಳೊಡನೆ ಬಂದನು.

೧೦. ಬ್ರಹ್ಮನು ಮನುಷ್ಯರಾಗಿ ಬಂದ ಆ ದೇವತೆಗಳನ್ನು ನೋಡಿ ವಿನಯ ದಿಂದ ಕೈಮುಗಿದುಕೊಂಡು ಇಂತೆಂದನು.

೧೧. ಸುರವರ್ಯರೆ! ನಿಮಗೆ ಸುಖಾಗಮನವಾಗಲಿ. ನನ್ನಲ್ಲಿ ಅನುಗ್ರಹ ಮಾಡಿರಿ. ರಮ್ಯವಾದ ಸ್ಥಾನಗಳಲ್ಲಿ ನ್ಯಾಯದಂತೆ ಕುಳಿತುಕೊಳ್ಳಿರಿ.

೧೨. ಮಂತ್ರಗಳ ಆಹ್ವಾನದಿಂದ ಸಮಸ್ತ ಯಜ್ಞಗಳಿಗೆ ಹೋಗುವ ನೀವು ನೀವಾಗಿಯೇ ಇಲ್ಲಿಗೆ ಬಂದಿರುವುದರಿಂದ ನಾನು ಧನ್ಯನಾದೆನು. ಅನುಗೃಹೀತ ನಾದೆನು.

ದೇವಾ ಊಚುಃ:—

**ಯೇನ ಯಚ್ಚಾಽತ್ರ ಕರ್ತವ್ಯಂ ತಚ್ಛೀಘ್ರಂ ವದ ಪದ್ಮಜ ।**
**ಯಜ್ಞೇ ತವ ಮಹಾಭಾಗ ತಸ್ಯ ತತ್ತ್ವಂ ಸಮಾದಿಶ ॥ ೧೩ ॥**

ಬ್ರಹ್ಮೋವಾಚ:—

**ವಿಶ್ವಕರ್ಮನ್ ದ್ರುತಂ ಗಚ್ಛ ಯಜ್ಞಮಂಡಪಸಿದ್ಧಯೇ ।**
**ಪತ್ನೀಶಾಲಾಂ ತತಶ್ಚೈವ ಯಜ್ಞವೇದೀಸ್ತಥೈವ ಚ ॥ ೧೪ ॥**
**ಕುಂಡಾನಿ ಚೈವ ಸರ್ವಾಣಿ ಯಥಾಸ್ಥಾನೇಷು ಕಾರಯ ।**
**ಯಜ್ಞಪಾತ್ರಾಣಿ ಸರ್ವಾಣಿ ಗ್ರಹಾಶ್ಚ ಚಮಸಾಸ್ತಥಾ ॥ ೧೫ ॥**
**ಯೂಪಾಶ್ಚ ಯತ್ಪ್ರಮಾಣೇನ ಕರ್ತವ್ಯಾಃ ಸಚಷಾಲಕಾಃ ।**
**ಪಚನಾರ್ಥಂ ತಥಾ ಗರ್ತಾಃ ಕರ್ತವ್ಯಾ ಯತ್ಪ್ರಮಾಣತಃ ॥ ೧೬ ॥**
**ಇಷ್ಟಿಕಾನಾಂ ಸಹಸ್ರಾಣಿ ದಶ ಚಾಷ್ಟಶತಾನಿ ಚ ।**
**ಕರ್ತವ್ಯಾನಿ ತ್ವಯಾ ಶೀಘ್ರಂ ಚಯನಾನೀತಿ ಸತ್ವರಂ ॥ ೧೭ ॥**
**ತಥಾ ಹಿರಣ್ಮಯಶ್ಚಾಽಪಿ ಪುರುಷಃ ಕಾರ್ಯ ಏವ ಹಿ ।**
**ತಥೇತ್ಯುಕ್ತ್ವಾ ತತಸ್ತ್ವಷ್ಟಾ ಶೀಘ್ರಾಚ್ಛೀಘ್ರತರಂ ಯಯೌ ॥ ೧೮ ॥**
**ತತಸ್ತು ಪದ್ಮಜಃ ಪ್ರಾಹ ದೇವಾಚಾರ್ಯಂ ಬೃಹಸ್ಪತಿಂ ।**
**ಬೃಹಸ್ಪತೇ ತ್ವಮಾನೀಹಿ ಯಜ್ಞಾರ್ಹಾನೃತ್ವಿಜೋಽಖಿಲಾನ್ ॥ ೧೯ ॥**
**ಯಾವತ್ಷೋಡಶ ಸಂಖ್ಯಾಶ್ಚ ನಾಽನ್ಯಸ್ಯೈತದ್ಧಿ ಯುಜ್ಯತೇ ।**
**ತ್ವಯಾ ಶಕ್ರ ಸದಾ ಕಾರ್ಯಾ ಶುಶ್ರೂಷಾ ಚ ದ್ವಿಜನ್ಮನಾಂ ॥ ೨೦ ॥**

---

೧೩. ದೇವತೆಗಳು ಹೇಳುತ್ತಾರೆ:—ಚತುರ್ಮುಖ! ಯಜ್ಞದಲ್ಲಿ ನಿನಗೆ ಯಾರಿಂದ ಏನಾಗಬೇಕೆಂಬುದನ್ನು ತಿಳಿಸಿ ಅಪ್ಪಣೆ ಮಾಡು.

೧೪–೧೬. ಬ್ರಹ್ಮನು ಹೇಳುತ್ತಾನೆ:—ವಿಶ್ವಕರ್ಮ! ನೀನು ಯಜ್ಞಮಂಡಪವನ್ನು ತಯಾರಿಸಲು ಬೇಗನೆ ಹೋಗು. ನೀನು ಪತ್ನೀಶಾಲೆ, ಯಜ್ಞವೇದಿ, ಕುಂಡಗಳು ಇವುಗಳನ್ನು ಆಯಾ ಸ್ಥಾನಗಳಲ್ಲಿ ರಚಿಸು. ಯಜ್ಞಪಾತ್ರ, ಗ್ರಹ, ಚಮಸಗಳನ್ನು ಸಿದ್ಧಗೊಳಿಸು. ಯೂಪಕಟಕಗಳೊಡನೆ ಯೂಪಸ್ತಂಭಗಳನ್ನೂ, ಅಡುಗೆಗಾಗಿ ಕುಣಿಗಳನ್ನೂ ಪ್ರಮಾಣವನ್ನನುಸರಿಸಿ ನಿರ್ಮಿಸು.

೧೭–೧೮. ಹತ್ತುಸಾವಿರದ ಎಂಟುನೂರು ಇಟ್ಟಿಗೆಗಳಿಂದ ಚಯನಗಳನ್ನೂ, ಹಿರಣ್ಮಯನಾದ ಪುರುಷನನ್ನೂ ನಿರ್ಮಿಸು. ವಿಶ್ವಕರ್ಮನು ಹಾಗೆಯೇ ಆಗಲೆಂದು ಅತಿ ಶೀಘ್ರವಾಗಿ ಹೊರಟುಹೋದನು.

೧೯–೨೩. ಅನಂತರ ಬ್ರಹ್ಮನು ಬೃಹಸ್ಪತಿಯನ್ನು ಕುರಿತು ದೇವಾಚಾರ್ಯನೆ! ನೀನು ಯಜ್ಞಕ್ಕೆ ಯೋಗ್ಯರಾದ ಹದಿನಾರು ಮಂದಿ ಋತ್ವಿಜರನ್ನು ಕರೆದುಕೊಂಡು ಬಾ. ಇದು ಇತರರಿಗೆ ಉಚಿತವಲ್ಲ ಎಂದನು. ಇಂದ್ರ! ನೀನು

ಹಸ್ತಪಾದಾವಮರ್ದಶ್ಚ ಶ್ರಾಂತಾನಾಂ ಪೃಷ್ಠಮರ್ದನಂ ।
ಧನಾಧ್ಯಕ್ಷ ತ್ವಯಾ ದೇಯಾ ದಕ್ಷಿಣಾ ಕಾಲಸಂಭವಾ ॥ ೨೧ ॥
ಸುವಸ್ತ್ರಾಣಿ ಹಿರಣ್ಯಂ ಚ ತಥಾಽನ್ಯದ್ವಾಽಪಿ ವಾಂಛಿತಂ ।
ತ್ವಯಾ ವಿಷ್ಣೋ ಸದಾ ಕಾರ್ಯಂ ಕೃತ್ಯಾಽಕೃತ್ಯಪರೀಕ್ಷಣಂ ॥ ೨೨ ॥
ಯುಕ್ತಂ ಕೃತಮಥೋ ನೈವ ಸಾವಧಾನೇನ ಸರ್ವದಾ ।
ಲೋಕಪಾಲಾಶ್ಚ ಯೇ ಸರ್ವೇ ರಕ್ಷಂತು ಸಕಲಾ ದಿಶಃ ।
ಭೂತಪ್ರೇತಪಿಶಾಚಾನಾಂ ಪ್ರವೇಶಂ ರಾಕ್ಷಸೋದ್ಭವಂ ॥ ೨೩ ॥
ಯೋಽಯಂ ಕಾಮಯತೇ ಕಾಮಂ ಕಿಂಚಿದ್ವಸ್ತ್ರಂ ಧನಂ ಚ ವಾ ।
ವಿಚಾರ್ಯ ತಸ್ಯ ತದ್ದೇಯಂ ಸರ್ವಯಜ್ಞಾಧಿಪೇನ ತು ॥ ೨೪ ॥
ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।
ಭವಂತು ಪರಿವೇಷ್ಟಾರೋ ಭೋಕ್ತುಕಾಮಜನಸ್ಯ ಚ ॥ ೨೫ ॥
ಏತಸ್ಮಿನ್ನಂತರೇ ಪ್ರಾಪ್ತೋ ವಿಶ್ವಕರ್ಮಾ ತ್ವರಾನ್ವಿತಃ ।
ಅಬ್ರವೀತ್ಪಂಕಜಭವಂ ಸ ಸಿದ್ಧೋ ಯಜ್ಞಮಂಡಪಃ ॥ ೨೬ ॥
ಸರ್ವಮನ್ಯತ್ಸಮಾದಿಷ್ಟಂ ಯತ್ತ್ವಯೋಕ್ತಂ ಚತುರ್ಮುಖ ॥ ೨೭ ॥
ತತೋ ಬೃಹಸ್ಪತಿಃ ಪ್ರಾಹ ಸಮಭ್ಯೇತ್ಯ ಪಿತಾಮಹಂ ।
ಸಮಾನೀತಾ ಮಯಾ ದೇವ ಬ್ರಾಹ್ಮಣಾ ಯಜ್ಞಕರ್ಮಣಿ ॥ ೨೮ ॥

---

ಯಾವಾಗಲೂ ಬಳಲಿದ ಬ್ರಾಹ್ಮಣರ ಕೈಕಾಲುಗಳನ್ನೂ, ಬೆನ್ನನ್ನೂ ಒತ್ತುವುದರಿಂದ ಅವರನ್ನು ಸೇವಿಸು. ಕುಬೇರ! ನೀನು ಕಾಲವನ್ನನುಸರಿಸಿ ದಕ್ಷಿಣೆಯನ್ನೂ, ವಸ್ತ್ರಗಳನ್ನೂ, ಸುವರ್ಣವನ್ನೂ, ಇತರ ಇಷ್ಟವಾದ ವಸ್ತುವನ್ನೂ ಕೊಡು. ವಿಷ್ಣುವೆ! ನೀನು ಸರಿಯಾಗಿ ಮಾಡಿದ್ದಾರೊ, ಇಲ್ಲವೊ? ಎಂದು ಕೃತ್ಯ ಅಕೃತ್ಯಗಳನ್ನು ಪರೀಕ್ಷಿಸು. ಲೋಕಪಾಲಕರೆಲ್ಲ ಭೂತ, ಪ್ರೇತ, ಪಿಶಾಚಗಳು ಪ್ರವೇಶಿಸದಂತೆ ಸಕಲ ದಿಕ್ಕುಗಳನ್ನೂ ರಕ್ಷಿಸಲಿ.

೨೪. ಯಜ್ಞಾಧಿಪನು ಯಾರು ವಸ್ತ್ರ, ಧನಗಳಲ್ಲಿ ಯಾವುದನ್ನು ಅಪೇಕ್ಷಿಸುವರೊ, ಅದನ್ನು ವಿಚಾರಿಸಿ ಅವರಿಗೆ ಕೊಡಬೇಕು.

೨೫. ಆದಿತ್ಯರು, ವಸುಗಳು, ರುದ್ರರು, ವಿಶ್ವೇದೇವರು, ಮರುತ್ತುಗಳು ಇವರು ಊಟಮಾಡಲಪೇಕ್ಷಿಸುವ ಜನರಿಗೆ ಬಡಿಸಲಿ ಎಂದನು.

೨೬–೨೭. ಇಷ್ಟರಲ್ಲಿ ವಿಶ್ವಕರ್ಮನು ತ್ವರೆಯಿಂದ ಬಂದು ಬ್ರಹ್ಮನನ್ನು ಕುರಿತು ಯಜ್ಞಮಂಡಪವು ಸಿದ್ಧನಾಗಿದೆ. ನೀನು ಅಪ್ಪಣೆಮಾಡಿದ್ದನ್ನೆಲ್ಲ ನೆರವೇರಿಸಿದ್ದೇನೆ ಎಂದನು.

೨೮–೨೯. ಅನಂತರ ಬೃಹಸ್ಪತಿಯು ಸಮಿಾಪಿಸಿ ಬ್ರಹ್ಮನನ್ನು ಕುರಿತು ಯಜ್ಞಕಾರ್ಯದಲ್ಲಿ ನಿಪುಣರಾದ ಹದಿನಾರು ಮಂದಿ ಬ್ರಾಹ್ಮಣರನ್ನು ಕರೆ

ವಿಪ್ರಾಃ ಷೋಡಶ ಸಂಖ್ಯಾಶ್ಚ ಋತ್ವಿಕ್ಕರ್ಮಣಿ ಯೋಜಯ ।
ಸ್ವಯಂ ಪರೀಕ್ಷ್ಯ ದೇವೇಶ ಯಜ್ಞಕರ್ಮಪ್ರಸಿದ್ಧಯೇ ॥ ೨೯ ॥
ತತೋ ಬ್ರಹ್ಮಾ ಸ್ವಯಂ ದೃಷ್ಟ್ವಾ ತಾನ್ ಪರೀಕ್ಷ್ಯ ಪ್ರಯತ್ನತಃ ।
ಋತ್ವಿಕ್ತ್ವೇಽಥ ನಿಯೋಜ್ಯಾಽಥ ತತಶ್ಚಕ್ರೇ ತದರ್ಹಣಂ ॥ ೩೦ ॥

ಋಷಯ ಊಚುಃ:—

ಋತ್ವಿಜಾಂ ಚೈವ ಸರ್ವೇಷಾಂ ಸೂತ ನಾಮಾನಿ ಕೀರ್ತಯ ।
ಯೇನ ಯೋ ವಿಹಿತಸ್ತತ್ರ ಪದಾರ್ಥಃ ಸೂತ ತಂ ವದ ॥ ೩೧ ॥

ಸೂತ ಉವಾಚ:—

ಭೃಗುರ್ಹೌತ್ರೇ ತತಸ್ತೇನ ವೃತೋ ಬ್ರಾಹ್ಮಣಸತ್ತಮಾಃ ।
ಮೈತ್ರಾವರುಣಸಂಜ್ಞಸ್ತು ತಥೈವ ಚ್ಯವನೋ ಮುನಿಃ ॥ ೩೨ ॥
ಅಚ್ಛಾವಾಕೋ ಮರೀಚಿಶ್ಚ ಗ್ರಾವಸ್ತೂದ್ದಾಲವೋ ಮುನಿಃ ।
ಪುಲಸ್ತ್ಯಶ್ಚ ತಥಾಽಧ್ವರ್ಯುಃ ಪ್ರಸ್ಥಾತಾತ್ರಿಶ್ಚ ಸಂಸ್ಥಿತಃ ॥ ೩೩ ॥
ತತ್ರ ರೈಭ್ಯೋ ಮುನಿರ್ನೇಷ್ಟಾ ತತ್ರೋನ್ನೇತಾ ಸನಾತನಃ ।
ಬ್ರಹ್ಮಾ ಚ ನಾರದೋ ಗರ್ಗೋ ಬ್ರಾಹ್ಮಣಾಚ್ಛಂಸಿರೇವ ಚ ॥ ೩೪ ॥
ಅಗ್ನೀಧ್ರಶ್ಚ ಭರದ್ವಾಜೋ ಹೋತಾ ಪಾರಾಶರಸ್ತಥಾ ।
ತಥೈವ ತತ್ರ ಕ್ಷೇತ್ರೇ ಚ ಉದ್ಗಾತಾ ಗೋಭಿಲೋ ಮುನಿಃ ॥ ೩೫ ॥
ತಥೈವ ಕೌಥುಮೋ ಜಜ್ಞೇ ಪ್ರಸ್ತೋತಾ ಯಜ್ಞಕರ್ಮಣಿ ।
ಶಾಂಡಿಲ್ಯಃ ಪ್ರತಿಹರ್ತಾ ಚ ಸುಬ್ರಹ್ಮಣ್ಯಸ್ತಥಾಂಗಿರಾಃ ॥ ೩೬ ॥

---

ತಂದಿರುವೆನು. ಅವರನ್ನು ನೀನು ಸ್ವಂತವಾಗಿ ಪರೀಕ್ಷಿಸಿ ಯಜ್ಞಕರ್ಮಸಿದ್ಧಿಗಾಗಿ ನೇಮಿಸು ಎಂದನು.

೩೦. ಅನಂತರ ಬ್ರಹ್ಮನು ಅವರನ್ನು ತಾನೇ ನೋಡಿ ಪರೀಕ್ಷಿಸಿ ಋತ್ವಿಜರನ್ನಾಗಿ ನೇಮಿಸಿ ಪೂಜಿಸಿದನು.

೩೧. ಋಷಿಗಳು ಹೇಳುತ್ತಾರೆ:—ಸೂತ! ಅವನು ನೇಮಿಸಿದ ಋತ್ವಿಜರ ಹೆಸರುಗಳನ್ನೂ, ಉಪಯೋಗಿಸಿರುವ ವಸ್ತುಗಳ ಹೆಸರನ್ನೂ ಹೇಳು.

೩೨–೩೮. ಸೂತನು ಹೇಳುತ್ತಾನೆ:—ಬ್ರಾಹ್ಮಣರೆ! ಅವನು ಯಜ್ಞಸಿದ್ಧಿಗಾಗಿ ಭೃಗುವನ್ನು ಹೌತ್ರನನ್ನಾಗಿಯೂ, ಚ್ಯವನನನ್ನು ಮೈತ್ರಾವರುಣನನ್ನಾಗಿಯೂ, ಮರೀಚಿಯನ್ನು ಅಚ್ಛಾವಕನನ್ನಾಗಿಯೂ, ಉದ್ದಾಲವನನ್ನು ಗ್ರಾವನನ್ನಾಗಿಯೂ, ಪುಲಸ್ತ್ಯನನ್ನು ಅಧ್ವರ್ಯುವನ್ನಾಗಿಯೂ, ಅತ್ರಿಯನ್ನು ಪ್ರಸ್ತೋತನನ್ನಾಗಿಯೂ, ರೈಭ್ಯನನ್ನು ನೇಷ್ಟನನ್ನಾಗಿಯೂ, ಸನಾತನನನ್ನು ಉನ್ನೇತನನ್ನಾಗಿಯೂ, ನಾರದನನ್ನು ಬ್ರಹ್ಮನನ್ನಾಗಿಯೂ, ಗರ್ಗನನ್ನು ಬ್ರಾಹ್ಮಣಾಚ್ಛಂಸಿಯನ್ನಾಗಿಯೂ, ಭರದ್ವಾಜನನ್ನು ಅಗ್ನೀಧ್ರನನ್ನಾಗಿಯೂ, ಪಾರಾಶರ

**ತಸ್ಯ ಯಜ್ಞಸ್ಯ ಸಿದ್ಧ್ಯರ್ಥಮಿತ್ಯೇತೇ ಷೋಡಶರ್ತ್ವಿಜಃ ।**
**ವಸ್ತ್ರಾಭರಣಶೋಭಾಢ್ಯಾ ವಿನಯೇನ ಕೃತಾಶ್ಚ ತೇ ॥ ೩೭ ॥**
**ತತಃ ಕೃತ್ವಾ ಸ್ವಯಂ ಬ್ರಹ್ಮಾ ಸರ್ವೇಷಾಮರ್ಹಣಕ್ರಿಯಾಂ ।**
**ಗೃಹ್ಯೋಕ್ತೇನ ವಿಧಾನೇನ ತತಃ ಪ್ರೋವಾಚ ಸಾದರಂ ॥ ೩೮ ॥**
**ಏಷೋಽಹಂ ಶರಣಂ ಪ್ರಾಪ್ತೋ ಯುಷ್ಮಾಕಂ ದ್ವಿಜಸತ್ತಮಾಃ ।**
**ಅನುಗೃಹ್ಣೀತ ಮಾಂ ಸರ್ವೇ ದೀಕ್ಷಾಯೈ ಯಜ್ಞಕರ್ಮಣಃ ॥ ೩೯ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅಧ್ವರಕರ್ಮಾರಂಭವರ್ಣನಂ" ನಾಮ
ಅಶೀತ್ಯುತ್ತರಶತತಮೋಽಧ್ಯಾಯಃ

---

ನನ್ನ ಹೋತನನ್ನಾಗಿಯೂ, ಗೋಭಿಲನನ್ನು ಉದ್ಗಾತನನ್ನಾಗಿಯೂ, ಕೌಥುಮನನ್ನು ಪ್ರಸ್ತೋತನನ್ನಾಗಿಯೂ, ಶಾಂಡಿಲ್ಯನನ್ನು ಪ್ರತಿಹರ್ತನನ್ನಾಗಿಯೂ ನೇಮಿಸಿ ವಿನೀತರೂ, ಒಡನೆ ವಸ್ತ್ರಗಳಿಂದ ಅಲಂಕಾರಗೊಂಡವರೂ ಆದ ಅವರನ್ನು ಗೃಹ್ಯೋಕ್ತವಿಧಿಯಿಂದ ಪೂಜೆಮಾಡಿ ಪ್ರೀತಿಯಿಂದ ಇಂತೆಂದನು.

೩೯. ದ್ವಿಜವರ್ಯರೆ! ಈ ನಾನು ನಿಮ್ಮನ್ನು ಮರೆಹೊಕ್ಕಿರುವೆನು. ಯಜ್ಞಕರ್ಮದ ದೀಕ್ಷೆಗಾಗಿ ನನ್ನನ್ನು ಅನುಗ್ರಹಿಸು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅಧ್ವರಕರ್ಮಾರಂಭವರ್ಣನ" ವೆಂಬ
ನೂರೆಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕಾಶೀತ್ಯುತ್ತರಶತತಮೋಽಧ್ಯಾಯಃ

### ಗಾಯತ್ರೀತೀರ್ಥಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಏತಸ್ಮಿನ್ನಂತರೇ ಸರ್ವೈರ್ನಾಗರೈರ್ಬ್ರಾಹ್ಮಣೋತ್ತಮೈಃ ।**
**ಪ್ರೇಷಿತೋ ಮಧ್ಯಗಸ್ತತ್ರ ಗರ್ತಾತೀರ್ಥಸಮುದ್ಭವಃ ॥ ೧ ॥**
**ರೇ ರೇ ಮಧ್ಯಗ ಗತ್ವಾ ತ್ವಂ ಬ್ರೂಹಿ ತಂ ಕುಪಿತಾಮಹಂ ।**
**ವಿಪ್ರವೃತ್ತಿಪ್ರಹಂತಾರಂ ನೀತಿಮಾರ್ಗವಿವರ್ಜಿತಂ ॥ ೨ ॥**
**ಏತತ್ಕ್ಷೇತ್ರಂ ಪ್ರದತ್ತಂ ನಃ ಪೂರ್ವೇಷಾಂ ಚ ದ್ವಿಜನ್ಮನಾಂ ।**
**ಮಹೇಶ್ವರೇಣ ತುಷ್ಟೇನ ಪೂರಿತೇ ಸರ್ಪಜೇ ಬಿಲೇ ॥ ೩ ॥**
**ತಸ್ಯ ದತ್ತಸ್ಯ ಚಾಽದ್ಯೈವ ಪಿತಾಮಹಶತಂ ಗತಂ ।**
**ಪಂಚೋತ್ತರಮಸಂದಿಗ್ಧಂ ಯಾವತ್ತ್ವಂ ಕುಪಿತಾಮಹ ॥ ೪ ॥**
**ನ ಕೇನಾಽಪಿ ಕೃತೋಽಸ್ಮಾಕಂ ತಿರಸ್ಕಾರೋ ಯಥಾಽಧುನಾ ।**
**ತ್ವಾಂ ಮುಕ್ತ್ವಾ ಪಾಪಕರ್ಮಾಣಂ ನ್ಯಾಯಮಾರ್ಗವಿವರ್ಜಿತಂ ॥ ೫ ॥**
**ನಾಗರೈರ್ಬ್ರಾಹ್ಮಣೈರ್ಬಾಹ್ಯಂ ಯೋಽತ್ರ ಯಜ್ಞಂ ಸಮಾಚರೇತ್ ।**
**ಶ್ರಾದ್ಧಂ ವಾ ಸ ಹಿ ವಧ್ಯಃ ಸ್ಯಾತ್ಸರ್ವೇಷಾಂ ಚ ದ್ವಿಜನ್ಮನಾಂ ॥ ೬ ॥**

---

### ಕನ್ನಡದ ಅನುವಾದ

#### ಗಾಯತ್ರೀತೀರ್ಥಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ :— ಈ ಸಮಯದಲ್ಲಿ ನಾಗರದ ಸಕಲ ಬ್ರಾಹ್ಮಣರು ಗರ್ತಾತೀರ್ಥದ ಮಧ್ಯಗನನ್ನು ಕಳುಹಿಸಿದರು.

೨–೫. ಮತ್ತು ಅವನ ಹತ್ತಿರ ಹೀಗೆ ಹೇಳಿದರು. ಎಲೈ ಮಧ್ಯಗ! ನೀನು ಬ್ರಾಹ್ಮಣರ ವೃತ್ತಿಯನ್ನು ಹಾಳುಮಾಡಿದವನೂ, ನೀತಿಮಾರ್ಗಬಾಹ್ಯನೂ ಆದ ಆ ದುಷ್ಟ ಬ್ರಹ್ಮನನ್ನು ಕುರಿತು ಸರ್ಪದ ಬಿಲವನ್ನು ತುಂಬಿದ್ದರಿಂದ ಸಂತುಷ್ಟನಾದ ಮಹೇಶ್ವರನು ನಮ್ಮ ಪೂರ್ವಕರಿಗೆ ಈ ಕ್ಷೇತ್ರವನ್ನಿತ್ತಿರುವನು. ಅವನು ಈ ಕ್ಷೇತ್ರವನ್ನು ಕೊಟ್ಟಮೇಲೆ ಇಲ್ಲಿಯವರೆಗೆ ನೂರೈದು ಮಂದಿ ಬ್ರಹ್ಮರು ಕಳೆದು ಹೋಗಿರುವರು. ಪಾಪಿಯೂ, ನ್ಯಾಯಮಾರ್ಗಬಹಿಷ್ಕೃತನೂ ಆದ ನಿನ್ನಂತೆ ಯಾವ ಬ್ರಹ್ಮನೂ ಹೀಗೆ ನಮ್ಮನ್ನು ತಿರಸ್ಕರಿಸಲಿಲ್ಲ.

೬. ನಾಗರ ಬ್ರಾಹ್ಮಣರನ್ನು ತ್ಯಜಿಸಿ ಇಲ್ಲಿ ಯಜ್ಞವನ್ನಾಗಲಿ, ಶ್ರಾದ್ಧವನ್ನಾಗಲಿ ಮಾಡಿದವನು ಸಕಲ ಬ್ರಾಹ್ಮಣರಿಗೆ ವಧ್ಯನಾಗುವನು.

ನ ತಸ್ಯ ಜಾಯತೇ ಶ್ರೇಯಸ್ತತ್ಸಮುತ್ಥಂ ಕಥಂಚನ ।
ಏತತ್ಪ್ರೋಕ್ತಂ ತದಾ ತೇನ ಯದಾ ಸ್ಥಾನಂ ದದೌ ಹಿ ನಃ ॥ ೭ ॥
ತಸ್ಮಾದ್ಯತ್ಕುರುಷೇ ಯಜ್ಞಂ ಬ್ರಾಹ್ಮಣೈರ್ನಾಗರೈಃ ಕುರು ।
ನಾಽನ್ಯಥಾ ಲಪ್ಸ್ಯಸೇ ಕರ್ತುಂ ಜೀವದ್ಭಿರ್ನಾಗರೈರ್ದ್ವಿಜೈಃ ॥ ೮ ॥
ಏವಮುಕ್ತಸ್ತತೋ ಗತ್ವಾ ಮಧ್ಯಗೋ ಯತ್ರ ಪದ್ಮಜಃ ।
ಯಜ್ಞಮಂಡಪದೂರಸ್ಥೋ ಬ್ರಾಹ್ಮಣೈಃ ಪರಿವಾರಿತಃ ॥ ೯ ॥
ಯತ್ಪ್ರೋಕ್ತಂ ನಾಗರೈಃ ಸರ್ವೈಃ ಸವಿಶೇಷಂ ತದಾಹ ಸಃ ।
ತಚ್ಛ್ರುತ್ವಾ ಪದ್ಮಜಃ ಪ್ರಾಹ ಸಾಂತ್ವಪೂರ್ವಮಿದಂ ವಚಃ ॥ ೧೦ ॥
ಮಾನುಷಂ ಭಾವಮಾಪನ್ನಃ ಋತ್ವಿಗ್ಭಿಃ ಪರಿವಾರಿತಃ ।
ತ್ವಯಾ ಸತ್ಯಮಿದಂ ಪ್ರೋಕ್ತಂ ಸರ್ವಂ ಮಧ್ಯಗ ಸತ್ತಮ ॥ ೧೧ ॥
ಕಿಂ ಕರೋಮಿ ವೃತಾಃ ಸರ್ವೇ ಮಯಾ ತೇ ಯಜ್ಞಕರ್ಮಣಿ ।
ಋತ್ವಿಜೋಽಧ್ವರ್ಯುಪೂರ್ವಾ ಯೇ ಪ್ರಮಾದೇನ ನ ಕಾಮ್ಯಯಾ ॥೧೨॥
ತಸ್ಮಾದಾನಯ ತಾನ್ ಸರ್ವಾನತ್ರಸ್ಥಾನೇ ದ್ವಿಜೋತ್ತಮಾನ್ ।
ಅನುಜ್ಞಾತಸ್ತು ತೈರ್ಯೇನ ಗಚ್ಛಾಮಿ ಮಖಮಂಡಪೇ ॥ ೧೩ ॥

---

೭. ಮತ್ತು ಅವನಿಗೆ ಆ ಯಜ್ಞದಿಂದ ಶ್ರೇಯಸ್ಸುಂಟಾಗುವುದಿಲ್ಲ. ಇದನ್ನು ಆ ಮಹೇಶ್ವರನು ಕೊಡುವಾಗಲೇ ಹೇಳಿದ್ದಾನೆ.

೮. ಆದುದರಿಂದ ನೀನು ಯಜ್ಞವನ್ನು ಮಾಡುವುದಾದರೆ ನಾಗರ ಬ್ರಾಹ್ಮಣರಿಂದ ಮಾಡು. ಹಾಗೆ ಮಾಡದಿದ್ದರೆ ಅವರು ಬದುಕಿರುವಾಗ ನೀನು ಯಾಗ ಮಾಡಲು ಶಕ್ತನಾಗಲಾರೆ ಎಂದು ಹೇಳು.

೯–೧೦. ನಾಗರರು ಹೀಗೆ ಹೇಳಲು, ಮಧ್ಯಗನು ಬ್ರಹ್ಮನೆಡೆಗೆ ಹೋಗಿ ಯಜ್ಞಮಂಡಪದ ದೂರದಲ್ಲಿಯೇ ಬ್ರಾಹ್ಮಣರೊಡನೆ ನಿಂತು ನಾಗರರು ಹೇಳಿದ ಮಾತನ್ನೆಲ್ಲ ಹೇಳಿದನು. ಬ್ರಹ್ಮನು ಅದನ್ನು ಕೇಳಿ ಸಮಾಧಾನದಿಂದ ಹೀಗೆಂದನು.

೧೧–೧೨. ಮಧ್ಯಗ! ನೀನು ಹೇಳಿರುವುದು ನಿಜ. ಮನುಷ್ಯತ್ವವನ್ನು ಹೊಂದಿ ಋತ್ವಿಜರಿಂದ ಸಹಿತನಾದ ನಾನು ಈಗ ಏನನ್ನು ಮಾಡಲಿ? ಅಧ್ವರ್ಯು ಮೊದಲಾದ ಋತ್ವಿಜರು ಪ್ರಮಾದದಿಂದ ವರಿಸಲ್ಪಟ್ಟಿರುವರೇ ಹೊರತು ಬುದ್ಧಿಪೂರ್ವಕವಾಗಿ ಅಲ್ಲ.

೧೩. ಆದುದರಿಂದ ಆ ದ್ವಿಜಶ್ರೇಷ್ಠರನ್ನೆಲ್ಲ ಇಲ್ಲಿಗೆ ಕರೆದುಕೊಂಡು ಬಾ ನಾನು ಅವರ ಅನುಮತಿಯನ್ನು ಪಡೆದು ಯಜ್ಞಶಾಲೆಯನ್ನು ಪ್ರವೇಶ ಮಾಡುವೆನು.

ಮಧ್ಯಗ ಉವಾಚ :—
ತ್ವಂ ದೇವತ್ವಂ ಪರಿತ್ಯಜ್ಯ ಮಾನುಷಂ ಭಾವಮಾಶ್ರಿತಃ ।
ತತ್ಕಥಂ ತೇ ದ್ವಿಜಶ್ರೇಷ್ಠಾಃ ಸಮಾಗಚ್ಛಂತಿ ತೇಽಂತಿಕಂ ॥ ೧೪ ॥
ಶ್ರೇಷ್ಠಾ ಗಾವಃ ಪಶೂನಾಂ ಚ ಯಥಾ ಪದ್ಮಸಮುದ್ಭವ ।
ವಿಪ್ರಾಣಾಮಿಹ ಸರ್ವೇಷಾಂ ತಥಾ ಶ್ರೇಷ್ಠಾ ಹಿ ನಾಗರಾಃ ॥ ೧೫ ॥
ತಸ್ಮಾಚ್ಚೇದ್ವಾಂಛಸಿ ಪ್ರಾಪ್ತಿಂ ತ್ವಮೇತಾಂ ಯಜ್ಞಸಂಭವಾಂ ।
ತದ್ಭಕ್ತ್ಯಾ ನಾಗರಾನ್ ಸರ್ವಾನ್ ಪ್ರಸಾದಯ ಪಿತಾಮಹ ॥ ೧೬ ॥
ಸೂತ ಉವಾಚ :—
ತಚ್ಛ್ರುತ್ವಾ ಪದ್ಮಜೋ ಭೀತಃ ಋತ್ವಿಗ್ಭಿಃ ಪರಿವಾರಿತಃ ।
ಜಗಾಮ ತತ್ರ ಯತ್ರಸ್ಥಾ ನಾಗರಾಃ ಕುಪಿತಾ ದ್ವಿಜಾಃ ॥ ೧೭ ॥
ಪ್ರಣಿಪತ್ಯ ತತಃ ಸರ್ವಾನ್ ವಿನಯೇನ ಸಮನ್ವಿತಃ ।
ಪ್ರೋವಾಚ ವಚನಂ ಶ್ರುತ್ವಾ ಕೃತಾಂಜಲಿಪುಟಃ ಸ್ಥಿತಃ ॥ ೧೮ ॥
ಜಾನಾಮ್ಯಹಂ ದ್ವಿಜಶ್ರೇಷ್ಠಾಃ ಕ್ಷೇತ್ರೇಽಸ್ಮಿನ್ ಹಾಟಕೇಶ್ವರೇ ।
ಯುಷ್ಮದ್ಬಾಹ್ಯಂ ವೃಥಾ ಶ್ರಾದ್ಧಂ ಯಜ್ಞಕರ್ಮ ತಥೈವ ಚ ॥ ೧೯ ॥
ಕಲಿಭೀತ್ಯಾ ಮಯಾಽಽನೀತಂ ಸ್ಥಾನೇಽಸ್ಮಿನ್ ಪುಷ್ಕರಂ ನಿಜಂ ।
ತೀರ್ಥಂ ಚ ಯುಷ್ಮದೀಯಂ ಚ ನಿಕ್ಷೇಪೋಽಯಂ ಸಮರ್ಪಿತಃ ॥ ೨೦ ॥

---

೧೪. ಮಧ್ಯಗನು ಹೇಳುತ್ತಾನೆ:—ನೀನು ದೇವತ್ವವನ್ನು ತ್ಯಜಿಸಿ ಮನುಷ್ಯನಾಗಿರುವೆ. ಆ ದ್ವಿಜೋತ್ತಮರು ಹೇಗೆ ನಿನ್ನ ಹತ್ತಿರ ಬರುವರು?

೧೫. ಚತುರ್ಮುಖ! ಪಶುಗಳಲ್ಲಿ ಗೋವುಗಳು ಶ್ರೇಷ್ಠವಾಗಿರುವಂತೆ ಸಕಲ ಬ್ರಾಹ್ಮಣರಲ್ಲಿ ನಾಗರ ಬ್ರಾಹ್ಮಣರು ಉತ್ತಮರು.

೧೬. ಆದುದರಿಂದ ನೀನು ಈ ಯಜ್ಞದ ಫಲವನ್ನು ಹೊಂದಲು ಬಯಸುವುದಾದರೆ ನಾಗರ ಬ್ರಾಹ್ಮಣರನ್ನು ಭಕ್ತಿಯಿಂದ ಪ್ರಸನ್ನರನ್ನಾಗಿ ಮಾಡು.

೧೭. ಸೂತನು ಹೇಳುತ್ತಾನೆ:—ಅದನ್ನು ಕೇಳಿ ಬ್ರಹ್ಮನು ಭಯಗೊಂಡು ಋತ್ವಿಜರೊಡನೆ ಕುಪಿತರಾದ ನಾಗರ ಬ್ರಾಹ್ಮಣರೆಡೆಗೆ ಹೋದನು.

೧೮. ಅವನು ಆ ನಾಗರ ಬ್ರಾಹ್ಮಣರನ್ನೆಲ್ಲ ನಮಸ್ಕರಿಸಿ ವಿನಯದಿಂದ ಕೈಮುಗಿದುಕೊಂಡು ಇಂತೆಂದನು.

೧೯. ದ್ವಿಜವರ್ಯರೆ! ಈ ಹಾಟಕೇಶ್ವರಕ್ಷೇತ್ರದಲ್ಲಿ ನಿಮ್ಮನ್ನು ಬಿಟ್ಟು ಮಾಡಿದ ಶ್ರಾದ್ಧ ಯಜ್ಞಕರ್ಮಗಳು ನಿಷ್ಫಲವಾಗುವುವೆಂದು ನಾನರಿತಿರುವೆನು.

೨೦. ನಾನು ಕಲಿಭಯದಿಂದ ಇಲ್ಲಿಗೆ ನನ್ನ ಪುಷ್ಕರತೀರ್ಥವನ್ನು ತರಿಸಿರುವೆನು. ಇದು ನಿಮ್ಮ ತೀರ್ಥವೇ. ನಿಮಗೆ ಪುಷ್ಕರವನ್ನು ನಿಧಿಯನ್ನಾಗಿ ಸಮರ್ಪಿಸಿದ್ದೇನೆ.

ಋತ್ವಿಜೋಽಮೀ ಸಮಾನೀತಾ ಗುರುಣಾ ಯಜ್ಞಸಿದ್ಧಯೇ ।
ಅಜಾನತಾ ದ್ವಿಜಶ್ರೇಷ್ಠಾ ಆಧಿಕ್ಯಂ ನಾಗರಾತ್ಮಕಂ ॥ ೨೧ ॥
ತಸ್ಮಾಚ್ಚ ಕ್ಷಮ್ಯತಾಂ ಮಹ್ಯಂ ಯತಶ್ಚ ವರಣಂ ಕೃತಂ ।
ಏತೇಷಾಮೇವ ವಿಪ್ರಾಣಾಮಗ್ನಿಷ್ಟೋಮಕೃತೇ ಮಯಾ ॥ ೨೨ ॥
ಏತಚ್ಚ ಮಾಮಕಂ ತೀರ್ಥಂ ಯುಷ್ಮಾಕಂ ಪಾಪನಾಶನಂ ।
ಭವಿಷ್ಯತಿ ನ ಸಂದೇಹಃ ಕಲಿಕಾಲೇಽಪಿ ಸಂಸ್ಥಿತೇ ॥ ೨೩ ॥

ಬ್ರಾಹ್ಮಣಾ ಊಚುಃ:—

ಯದಿ ತ್ವಂ ನಾಗರೈರ್ಬಾಹ್ಯಂ ಯಜ್ಞಂ ಚಾಽತ್ರ ಕರಿಷ್ಯಸಿ ।
ತದನ್ಯೇಽಪಿ ಸುರಾಃ ಸರ್ವೇ ತವ ಮಾರ್ಗಾನುಯಾಯಿನಃ ।
ಭವಿಷ್ಯಂತಿ ತಥಾ ಭೂಪಾಸ್ತತ್ಕಾರ್ಯೋ ನ ಮಖಸ್ತ್ವಯಾ ॥ ೨೪ ॥
ಯದ್ಯೇವಮಪಿ ದೇವೇಶ ಯಜ್ಞಕರ್ಮ ಕರಿಷ್ಯಸಿ ।
ಅವಮನ್ಯ ದ್ವಿಜಾನ್ ಸರ್ವಾನ್ ಕ್ಷಿಪ್ರಂ ಗಚ್ಛಾಽಸ್ಮದಂತಿಕಾತ್ ॥ ೨೫ ॥

ಬ್ರಹ್ಮೋವಾಚ:—

ಅದ್ಯ ಪ್ರಭೃತಿ ಯಃ ಕಶ್ಚಿದ್ಯಜ್ಞಮತ್ರ ಕರಿಷ್ಯತಿ ।
ಶ್ರಾದ್ಧಂ ವಾ ನಾಗರೈರ್ಬಾಹ್ಯಂ ವೃಥಾ ತತ್ಸಂಭವಿಷ್ಯತಿ ॥ ೨೬ ॥
ನಾಗರೋಽಪಿ ಚ ಯೋಽನ್ಯತ್ರ ಕಶ್ಚಿದ್ಯಜ್ಞಂ ಕರಿಷ್ಯತಿ ।
ಏತತ್ಕ್ಷೇತ್ರಂ ಪರಿತ್ಯಜ್ಯ ವೃಥಾ ತತ್ಸಂಭವಿಷ್ಯತಿ ॥ ೨೭ ॥

---

೨೧–೨೨. ಬೃಹಸ್ಪತಿಯು ನಿಮ್ಮ ನಾಗರತ್ವಾಧಿಕ್ಯವನ್ನರಿಯದೆ ಯಜ್ಞಸಿದ್ಧಿಗಾಗಿ ಈ ಋತ್ವಿಜರನ್ನು ಕರೆತಂದನು. ಆದುದರಿಂದ ಅಗ್ನಿಷ್ಟೋಮಕ್ಕಾಗಿ ನಾನು ಈ ಬ್ರಾಹ್ಮಣರನ್ನು ವರಿಸಿದ್ದರಿಂದುಂಟಾದ ಅಪರಾಧವನ್ನು ಕ್ಷಮಿಸಿರಿ.

೨೩. ಕಲಿಕಾಲವು ಬಂದರೂ ಪಾಪವನ್ನು ನಿವಾರಿಸುವ ನನ್ನೀ ತೀರ್ಥವು ನಿಮ್ಮದೇ ಆಗುವುದು.

೨೪. ಬ್ರಾಹ್ಮಣರು ಹೇಳುತ್ತಾರೆ:—ನೀನು ಇಲ್ಲಿ ನಾಗರರನ್ನು ಬಿಟ್ಟು ಯಜ್ಞವನ್ನು ಮಾಡಿದರೆ ಇತರ ಸುರರೂ, ಭೂಪತಿಗಳೂ ನಿನ್ನ ಮಾರ್ಗವನ್ನೇ ಅನುಸರಿಸುವರು. ಆದುದರಿಂದ ನೀನು ಯಜ್ಞ ಮಾಡಬಾರದು.

೨೫. ದೇವೇಶ! ಹೀಗಿದ್ದರೂ ನೀನು ನಮ್ಮನ್ನು ಅವಮಾನ ಮಾಡಿ ಯಜ್ಞವನ್ನು ಮಾಡುವುದಾದರೆ ಜಾಗ್ರತೆಯಾಗಿ ನಮ್ಮ ಹತ್ತಿರದಿಂದ ಹೊರಡು.

೨೬–೨೭. ಬ್ರಹ್ಮನು ಹೇಳುತ್ತಾನೆ:—ಇದು ಮೊದಲ್ಗೊಂಡು ಇಲ್ಲಿ ಯಾರಾದರೂ ನಾಗರರನ್ನು ಮೀರಿ ಯಜ್ಞವನ್ನಾಗಲಿ, ಶ್ರಾದ್ಧವನ್ನಾಗಲಿ ಮಾಡಿದರೆ ಅದು ನಿಷ್ಫಲವಾಗುವುದು. ನಾಗರನೂ ಈ ಕ್ಷೇತ್ರವನ್ನು ತ್ಯಜಿಸಿ ಬೇರೆ ಕಡೆ ಯಜ್ಞವನ್ನು ಮಾಡಿದರೆ ಅದು ನಿಷ್ಫಲವಾಗುವುದು.

ಮರ್ಯಾದೇಯಂ ಕೃತಾ ವಿಪ್ರಾ ನಾಗರಾಣಾಂ ಮಯಾಽಧುನಾ ।
ಕೃತ್ವಾ ಪ್ರಸಾದಮಸ್ಮಾಕಂ ಯಜ್ಞಾರ್ಥಂ ದಾತುಮರ್ಹಥ ।
ಅನುಜ್ಞಾಂ ವಿಧಿವದ್ವಿಪ್ರಾ ಯೇನ ಯಜ್ಞಂ ಕರೋಮ್ಯಹಂ ॥ ೨೮ ॥
ಸೂತ ಉವಾಚ:—
ತತಸ್ತೈರ್ಬ್ರಾಹ್ಮಣೈಸ್ತುಷ್ಟೈರನುಜ್ಞಾತಃ ಪಿತಾಮಹಃ ।
ಚಕಾರ ವಿಧಿವದ್ಯಜ್ಞಂ ಯೇ ವೃತಾ ಬ್ರಾಹ್ಮಣಾಶ್ಚ ತೈಃ ॥ ೨೯ ॥
ವಿಶ್ವಕರ್ಮಾ ಸಮಾಗತ್ಯ ತತೋ ಮಸ್ತಕಮಂಡನಂ ।
ಚಕಾರ ಬ್ರಾಹ್ಮಣಶ್ರೇಷ್ಠಾ ನಾಗರಾಣಾಂ ಮತೇ ಸ್ಥಿತಃ ॥ ೩೦ ॥
ಬ್ರಹ್ಮಾಽಪಿ ಪರಮಂ ತೋಷಂ ಗತ್ವಾ ನಾರದಮಬ್ರವೀತ್ ।
ಸಾವಿತ್ರೀಮಾನಯ ಕ್ಷಿಪ್ರಂ ಯೇನ ಗಚ್ಛಾಮಿ ಮಂಡಪೇ ॥ ೩೧ ॥
ವಾದ್ಯಮಾನೇಷು ವಾದ್ಯೇಷು ಸಿದ್ಧಕಿನ್ನರಗುಹ್ಯಕೈಃ ।
ಗಂಧರ್ವೈರ್ಗೀತಸಂಸಕ್ತೈರ್ವೇದೋಚ್ಚಾರಪರೈರ್ದ್ವಿಜೈಃ ।
ಅರಣಿಂ ಸಮುಪಾದಾಯ ಪುಲಸ್ತ್ಯೋ ವಾಕ್ಯಮಬ್ರವೀತ್ ॥ ೩೨ ॥
ಪತ್ನೀ ಪತ್ನೀತಿ ವಿಪ್ರೇಂದ್ರಾಃ ಪ್ರೋಚ್ಚೈಸ್ತತ್ರ ವ್ಯವಸ್ಥಿತಾಃ ॥ ೩೩ ॥
ಏತಸ್ಮಿನ್ನಂತರೇ ಬ್ರಹ್ಮಾ ನಾರದಂ ಮುನಿಸತ್ತಮಂ ।
ಸಂಜ್ಞಯಾ ಪ್ರೇಷಯಾಮಾಸ ಪತ್ನೀ ಚಾಽಽನೀಯತಾಮಿತಿ ॥ ೩೪ ॥

---

೨೮. ವಿಪ್ರರೆ! ಈಗ ನಾನು ನಾಗರರಿಗೆ ಒಂದು ನೇಮವನ್ನು ಮಾಡಿದ್ದೇನೆ. ನೀವು ಅನುಗ್ರಹಿಸಿ ಯಜ್ಞಮಾಡಲು ನನಗೆ ಅನುಮತಿಯನ್ನು ಕೊಡಿರಿ. ಅದರಿಂದ ನಾನು ವಿಧಿಯಂತೆ ಯಜ್ಞವನ್ನು ಮಾಡುವೆನು.

೨೯. ಸೂತನು ಹೇಳುತ್ತಾನೆ:—ಅನಂತರ ಆ ನಾಗರ ಬ್ರಾಹ್ಮಣರು ಅನುಮತಿಯನ್ನು ಕೊಡಲು ಪಿತಾಮಹನು ತಾನು ವರಿಸಿದ ಬ್ರಾಹ್ಮಣರಿಂದ ವಿಧಿಯಂತೆ ಯಜ್ಞವನ್ನು ಮಾಡಿದನು.

೩೦—೩೧. ಬ್ರಾಹ್ಮಣವರ್ಯರೆ! ತರುವಾಯ ನಾಗರರ ಅಭಿಪ್ರಾಯದಂತೆ ವಿಶ್ವಕರ್ಮನು ಬಂದು ಮಸ್ತಕಾಲಂಕಾರ ಮಾಡಿದನು. ಬ್ರಹ್ಮನೂ ಅತ್ಯಂತ ಹರ್ಷಗೊಂಡು ನಾರದನನ್ನು ಕುರಿತು ತ್ವರೆಯಿಂದ ಸಾವಿತ್ರಿಯನ್ನು ಕರೆದುಕೊಂಡು ಬಾ. ಅದರಿಂದ ನಾನು ಮಂಡಪವನ್ನು ಪ್ರವೇಶಿಸುವೆನು ಎಂದನು.

೩೨-೩೩. ಸಿದ್ಧಕಿನ್ನರಗುಹ್ಯಕರು ವಾದ್ಯಗಳನ್ನು ಬಾರಿಸುತ್ತಿರಲು, ಗಂಧರ್ವರು ಗೀತಾಸಕ್ತರಾಗಿರಲು, ದ್ವಿಜರು ವೇದವನ್ನುಚ್ಚರಿಸುತ್ತಿರಲು ಪುಲಸ್ತ್ಯನು ಅರಣಿಯನ್ನು ಹಿಡಿದುಕೊಂಡು ಪತ್ನೀ, ಪತ್ನೀ ಎಂದು ಗಟ್ಟಿಯಾಗಿ ಹೇಳಿದನು.

೩೪. ಇಷ್ಟರಲ್ಲಿ ಬ್ರಹ್ಮನು ನಾರದ ಮುನಿಯನ್ನು ಕುರಿತು ಪತ್ನಿಯನ್ನು ಕರೆದುಕೊಂಡು ಬಾ ಎಂದು ಸಂಜ್ಞೆಮಾಡಿದನು.

ಸೋಽಪಿ ಮಂದಂ ಸಮಾಗತ್ಯ ಸಾವಿತ್ರೀಂ ಪ್ರಾಹ ಲೀಲಯಾ ।
ಯುದ್ಧಪ್ರಿಯೋಽಂತರಂ ವಾಂಛನ್ ಸಾವಿತ್ರ್ಯಾ ಸಹ ವೇಧಸಃ ॥ ೩೫ ॥
ಅಹಂ ಸಂಪ್ರೇಷಿತಃ ಪಿತ್ರಾ ತವ ಪಾರ್ಶ್ವೇ ಸುರೇಶ್ವರಿ ।
ಆಗಚ್ಛ ಪ್ರಸ್ಥಿತಃ ಸ್ನಾತಃ ಸಾಂಪ್ರತಂ ಯಜ್ಞಮಂಡಪೇ ॥ ೩೬ ॥
ಪರಮೇಕಾಕಿನೀ ತತ್ರ ಗಚ್ಛಮಾನಾ ಸುರೇಶ್ವರಿ ।
ಕೀದೃಗ್ರೂಪಾ ಸದಸಿ ವೈ ದೃಶ್ಯಸೇ ತ್ವಮನಾಥವತ್ ॥ ೩೭ ॥
ತಸ್ಮಾದಾನೀಯಂತಾಂ ಸರ್ವಾ ಯಾಃ ಕಾಶ್ಚಿದ್ದೇವಯೋಷಿತಃ ।
ಯಾಭಿಃ ಪರಿವೃತಾ ದೇವಿ ಯಾಸ್ಯಸಿ ತ್ವಂ ಮಹಾಮಖೇ ॥ ೩೮ ॥
ಏವಮುಕ್ತ್ವಾ ಮುನಿಶ್ರೇಷ್ಠೋ ನಾರದೋ ಮುನಿಸತ್ತಮಃ ।
ಅಬ್ರವೀತ್ಪಿತರಂ ಗತ್ವಾ ತಾತಾಂಬಾಽಽಕಾರಿತಾ ಮಯಾ ॥ ೩೯ ॥
ಪರಂ ತಸ್ಯಾಃ ಸ್ಥಿರೋ ಭಾವಃ ಕಿಂಚಿತ್ಸಂಲಕ್ಷಿತೋ ಮಯಾ ।
ತಸ್ಯ ತದ್ವಚನಂ ಶ್ರುತ್ವಾ ತತೋ ಮನ್ಯುಸಮನ್ವಿತಃ ॥ ೪೦ ॥
ಪುಲಸ್ತ್ಯಂ ಪ್ರೇಷಯಾಮಾಸ ಸಾವಿತ್ರ್ಯಾಃ ಸನ್ನಿಧೌ ತತಃ ।
ಗಚ್ಛ ವತ್ಸ ತ್ವಮಾನೀಹಿ ಸ್ಥಾನಂ ಸಾ ಶಿಥಿಲಾತ್ಮಿಕಾ ।
ಸೋಮಭಾರಪರಿಶ್ರಾಂತಂ ಪಶ್ಯ ಮಾಮೂರ್ಧ್ವಸಂಸ್ಥಿತಂ ॥ ೪೧ ॥

---

೩೫. ಅವನು ಬ್ರಹ್ಮ ಸಾವಿತ್ರಿಯರು ಜಗಳವಾಡುವುದನ್ನು ನೋಡಲಿಚ್ಛಿಸುವವನಾಗಿ ಮೆಲ್ಲನೆ ಸಾವಿತ್ರಿಯನ್ನು ಕುರಿತು ಹೀಗೆಂದನು.

೩೬. ಅಮ್ಮಾ, ತಂದೆಯು ಮಿಂದು ಯಜ್ಞಮಂಡಪಕ್ಕೆ ಹೊರಟಿದ್ದಾನೆ. ನಿನ್ನನ್ನು ಕರೆದುಕೊಂಡು ಬಾ ಎಂದು ನನ್ನನ್ನು ನಿನ್ನೆಡೆಗೆ ಕಳುಹಿಸಿದ್ದಾನೆ. ಬಾ.

೩೭. ಆದರೆ ನೀನೊಬ್ಬಳೇ ಸಭೆಯಲ್ಲಿ ಹೋಗುತ್ತಿದ್ದರೆ ಅನಾಥಳಂತೆ ಕಾಣುವೆ.

೩೮. ಆದುದರಿಂದ ದೇವತಾಸ್ತ್ರೀಯರನ್ನು ಕರೆಯಿಸು. ದೇವಿ! ಅವರೊಡನೆ ನೀನು ಯಜ್ಞಕ್ಕೆ ಹೋಗಬಹುದು.

೩೯–೪೧. ಮುನಿವರ್ಯನಾದ ನಾರದನು ಹೀಗೆಂದು ತಂದೆಯ ಹತ್ತಿರ ಹೋಗಿ ಅಪ್ಪ! ಅಮ್ಮನನ್ನು ಕರೆದಿರುವೆನು. ಆದರೆ ಅವಳು ಯಾವುದೋ ಒಂದು ವಿಷಯದಲ್ಲಿ ದೃಢಚಿತ್ತಳಾಗಿರುವಂತೆ ಕಂಡಳು ಎಂದನು. ಬ್ರಹ್ಮನು ನಾರದನ ಆ ಮಾತನ್ನು ಕೇಳಿ ಕ್ರುದ್ಧನಾಗಿ ಪುಲಸ್ತ್ಯನನ್ನು ಕುರಿತು ನೀನು ಸಾವಿತ್ರಿಯ ಹತ್ತಿರ ಹೋಗಿ ವಿಳಂಬಮಾಡುತ್ತಿರುವ ಅವಳನ್ನು ಕರೆದುಕೊಂಡು ಬಾ. ಸೋಮರಸವನ್ನು ಹೊತ್ತುಕೊಂಡು ನಿಂತಿರುವುದರಿಂದ ಬಳಲಿದ ನನ್ನನ್ನು ನೋಡು.

ಏಷ ಕಾಲಾತ್ಯಯೋ ಭಾವಿ ಯಜ್ಞಕರ್ಮಣಿ ಸಾಂಪ್ರತಂ ।
ಯಜ್ಞಯಾನಮುಹೂರ್ತೋಽಯಂ ಸಾವಶೇಷೋ ವ್ಯವಸ್ಥಿತಃ ॥ ४೨ ॥
ತಸ್ಯ ತದ್ವಚನಂ ಶ್ರುತ್ವಾ ಪುಲಸ್ತ್ಯಃ ಸತ್ವರಂ ಯಯೌ ।
ಸಾವಿತ್ರೀ ತಿಷ್ಠತೇ ಯತ್ರ ಗೀತನೃತ್ಯಸಮಾಕುಲಾ ॥ ೪೩ ॥
ತತಃ ಪ್ರೋವಾಚ ಕಿಂ ದೇವಿ ತ್ವಂ ತಿಷ್ಠಸಿ ನಿರಾಕುಲಾ ।
ಯಜ್ಞಯಾನೋಚಿತಃ ಕಾಲಃ ಸೋಽಯಂ ಶೇಷಸ್ತು ತಿಷ್ಠತಿ ॥ ೪೪ ॥
ತಸ್ಮಾದಾಗಚ್ಛ ಗಚ್ಛಾಮಸ್ತಾತಃ ಕೃಚ್ಛ್ರೇಣ ತಿಷ್ಠತಿ ।
ಸೋಮಭಾರಾದ್ವಿತಶ್ಚೋರ್ಧ್ವಂ ಸರ್ವೈರ್ದೇವೈಃ ಸಮಾವೃತಃ ॥ ೪೫ ॥

ಸಾವಿತ್ರ್ಯುವಾಚ :—

ಸರ್ವದೇವವೃತಸ್ತಾತ ತವ ತಾತೋ ವ್ಯವಸ್ಥಿತಃ ।
ಏಕಾಕಿನೀ ಕಥಂ ತತ್ರ ಗಚ್ಛಾಮ್ಯಹಮನಾಥವತ್ ॥ ೪೬ ॥
ತದ್ಬ್ರೂಹಿ ಪಿತರಂ ಗತ್ವಾ ಮುಹೂರ್ತಂ ಪರಿಪಾಲ್ಯತಾಂ ॥ ೪೭ ॥
ಯಾವದಭ್ಯೇತಿ ಶಕ್ರಾಣೀ ಗೌರೀ ಲಕ್ಷ್ಮೀ ಸ್ತಥಾ ಪರಾಃ ।
ದೇವಕನ್ಯಾಃ ಸಮಾಜೇಽತ್ರ ತಾಭಿರೇಷ್ಯಾಮ್ಯಹಂ ದ್ರುತಂ ॥ ೪೮ ॥
ಸರ್ವಾಸಾಂ ಪ್ರೇಷಿತೋ ವಾಯುರ್ನಿಮಂತ್ರಣಕೃತೇ ಮಯಾ ।
ಆಗಮಿಷ್ಯಂತಿ ತಾಃ ಶೀಘ್ರಮೇವಂ ವಾಚ್ಯಃ ಪಿತಾ ತ್ವಯಾ ॥ ೪೯ ॥

---

೪೨. ಈಗ ಯಜ್ಞಕಾಲವು ಮೀರುವುದು. ಯಜ್ಞಕ್ಕೆ ಪ್ರಯಾಣ ಬೆಳೆಸುವ ಮುಹೂರ್ತವು ಸಮೀಪಿಸುತ್ತಿದೆ ಎಂದನು.

೪೩. ಪುಲಸ್ತ್ಯನು ಬ್ರಹ್ಮನ ಆ ಮಾತನ್ನು ಕೇಳಿ ಕೂಡಲೆ ಗೀತನೃತ್ಯಗಳಲ್ಲಿ ನಿರತಳಾದ ಸಾವಿತ್ರಿಯೆಡೆಗೆ ತೆರಳಿದನು.

೪೪. ಅನಂತರ ಅವಳನ್ನು ಕುರಿತು ದೇವಿ! ಇದೇನು? ನೀನು ಆಲಸ್ಯದಿಂದಿರುವೆ? ಯಜ್ಞದ ಪ್ರಯಾಣ ಕಾಲವು ಸಮೀಪಿಸುತ್ತಿದೆ.

೪೫. ಆದುದರಿಂದ ಬಾ ಹೋಗೋಣ. ತಂದೆಯು ಸಕಲ ದೇವತೆಗಳೊಡನೆ ಸೋಮಭಾರದಿಂದ ಬಳಲಿ ನಿಂತಿದ್ದಾನೆ.

೪೬–೪೭. ಸಾವಿತ್ರಿಯು ಹೇಳುತ್ತಾಳೆ:—ಮಗು! ನಿನ್ನ ತಂದೆಯು ಎಲ್ಲ ದೇವತೆಗಳೊಡನೆ ಅಲ್ಲಿರುವನು. ನಾನೊಬ್ಬಳೇ ಅನಾಥಳಂತೆ ಹೇಗೆ ಅಲ್ಲಿಗೆ ಹೋಗುವೆನು? ಆದುದರಿಂದ ತಂದೆಯನ್ನು ಕುರಿತು ಒಂದು ಕ್ಷಣ ನಿರೀಕ್ಷಿಸು ಎಂದು ಹೇಳು.

೪೮. ಶಚೀ, ಗೌರಿ, ಲಕ್ಷ್ಮಿ, ಇತರ ದೇವಕನ್ಯೆಯರು ಇವರೊಡನೆ ನಾನು ಶೀಘ್ರವಾಗಿ ಸಭೆಗೆ ಬರುವೆನು.

೪೯. ಎಲ್ಲರನ್ನೂ ಕರೆಯುವುದಕ್ಕಾಗಿ ವಾಯುದೇವನನ್ನು ಕಳುಹಿಸಿರುತ್ತೇನೆ. ಅವರೆಲ್ಲ ಬೇಗನೆ ಬರುತ್ತಾರೆ. ಹೀಗೆಂದು ನೀನು ತಂದೆಗೆ ಹೇಳು.

**ಸೂತ ಉವಾಚ :—**

**ಸೋಽಪಿ ಗತ್ವಾ ದ್ರುತಂ ಪ್ರಾಹ ಸೋಮಭಾರಾದ್ದ್ವಿತಂ ವಿಧಿಂ ।**
**ನೈಷಾಽಭ್ಯೇತಿ ಜಗನ್ನಾಥ ಪ್ರಸಕ್ತಾ ಗೃಹಕರ್ಮಣಿ ॥ ೫೦ ॥**
**ಸಾ ಮಾಂ ಪ್ರಾಹ ಚ ದೇವಾನಾಂ ಪತ್ನೀಭಿಃ ಸಹಿತಾ ಮಖೇ ।**
**ಅಹಂ ಯಾಸ್ಯಾಮಿ ತಾಸಾಂ ಚ ನೈಕಾಽದ್ಯಾಽಪಿ ಪ್ರದೃಶ್ಯತೇ ॥ ೫೧ ॥**
**ಏವಂ ಜ್ಞಾತ್ವಾ ಸುರಶ್ರೇಷ್ಠ ಕುರು ಯತ್ತೇ ಸುರೋಚತೇ ।**
**ಅತಿಕ್ರಾಮತಿ ಕಾಲೋಽಯಂ ಯಜ್ಞಯಾನಸಮುದ್ಭವಃ ।**
**ತಿಷ್ಠತೇ ಚ ಗೃಹವ್ಯಗ್ರಾ ಸಾಽಪಿ ಸ್ತ್ರೀ ಶಿಥಿಲಾತ್ಮಿಕಾ ॥ ೫೨ ॥**
**ತಚ್ಛ್ರುತ್ವಾ ವಚನಂ ತಸ್ಯ ಪುಲಸ್ತ್ಯಸ್ಯ ಪಿತಾಮಹಃ ।**
**ಸಮೀಪಸ್ಥಂ ತದಾ ಶಕ್ರಂ ಪ್ರೋವಾಚ ವಚಸಂ ದ್ವಿಜಾಃ ॥ ೫೩ ॥**

**ಬ್ರಹ್ಮೋವಾಚ :—**

**ಶಕ್ರ ನಾಯಾತಿ ಸಾವಿತ್ರೀ ಸಾಽಪಿ ಸ್ತ್ರೀ ಶಿಥಿಲಾತ್ಮಿಕಾ ।**
**ಅನಯಾ ಭಾರ್ಯಯಾ ಯಜ್ಞೋ ಮಯಾ ಕಾರ್ಯೋಽಯಮೇವ ತು ॥**
**ಗಚ್ಛ ಶಕ್ರ ಸಮಾನೀಹಿ ಕನ್ಯಾಂ ಕಾಂಚಿತ್ತ್ವರಾನ್ವಿತಃ ।**
**ಯಾವನ್ನಕ್ರಮತೇ ಕಾಲೋ ಯಜ್ಞಯಾನಸಮುದ್ಭವಃ ॥ ೫೫ ॥**

---

೫೦. ಸೂತನು ಹೇಳುತ್ತಾನೆ:—ಆ ಪುಲಸ್ತ್ಯನೂ ಶೀಘ್ರನಾಗಿ ಹೋಗಿ ಸೋಮರಸದ ಭಾರದಿಂದ ವ್ಯಥಗೊಂಡ ಬ್ರಹ್ಮನನ್ನು ಕುರಿತು ಜಗನ್ನಾಥ! ಮನೆಯ ಕೆಲಸದಲ್ಲಿ ನಿರತಳಾದ ಈ ಸಾವಿತ್ರಿಯು ಬರುವುದಿಲ್ಲ.

೫೧. ಅವಳು ನನ್ನನ್ನು ಕುರಿತು ನಾನು ದೇವಪತ್ನಿಯರೊಡನೆ ಯಜ್ಞಕ್ಕೆ ಬರುತ್ತೇನೆ. ಅವರೆಲ್ಲೊಬ್ಬರೂ ಈಗ ಕಾಣಿಸುವುದಿಲ್ಲ ಎಂದಳು.

೫೨. ಸುರೇಶ! ಇದನ್ನರಿತು ನಿನಗಿಷ್ಟಬಂದಂತೆ ಮಾಡು. ಯಜ್ಞಯಾನದ ಸಮಯವು ಮೀರುತ್ತಿದೆ. ಅವಳೋ ಮನೆಯ ಕೆಲಸದಲ್ಲಿ ಆಸಕ್ತಳಾಗಿ ಸಾವಕಾಶ ಮಾಡುತ್ತಿದ್ದಾಳೆ ಎಂದನು.

೫೩. ದ್ವಿಜರೇ! ಪಿತಾಮಹನು ಆ ಪುಲಸ್ತ್ಯನ ಮಾತನ್ನು ಕೇಳಿ ಹತ್ತಿರದಲ್ಲಿರುವ ಇಂದ್ರನನ್ನು ಕುರಿತು ಇಂತೆಂದನು.

೫೪. ಬ್ರಹ್ಮನು ಹೇಳುತ್ತಾನೆ:—ಇಂದ್ರ! ಮಂದಸ್ವಭಾವವುಳ್ಳ ಸಾವಿತ್ರಿಯು ಬರುವುದಿಲ್ಲ. ನಾನು ಈ ಪತ್ನಿಯೊಡನೆಯೇ ಈ ಯಜ್ಞವನ್ನು ಮಾಡಬೇಕಾಗಿದೆ.

೫೫. ಆದುದರಿಂದ ನೀನು ಈ ಯಜ್ಞಯಾನದ ಸಮಯವು ಮೀರದಿರುವಷ್ಟರಲ್ಲಿ ತ್ವರೆಯಾಗಿ ಯಾವಳಾದರೊಬ್ಬ ಕನ್ಯೆಯನ್ನು ಕರೆದುಕೊಂಡು ಬಾ.

**ಪಿತಾಮಹವಚಃ ಶ್ರುತ್ವಾ ತದರ್ಥಂ ಕನ್ಯಕಾ ದ್ವಿಜಾಃ ।**
**ಶಕ್ರೇಣಾಸಾದಿತಾ ಶೀಘ್ರಂ ಭ್ರಮಮಾಣಾ ಸಮೀಪತಃ ॥ ೫೬ ॥**
**ಅಥ ತಕ್ರಘಟವ್ಯಗ್ರಮಸ್ತಕಾ ತೇನ ವೀಕ್ಷಿತಾ ।**
**ಕನ್ಯಕಾ ಗೋಪಜಾ ತನ್ವೀ ಚಂದ್ರಾಸ್ಯಾ ಪದ್ಮಲೋಚನಾ ॥ ೫೭ ॥**
**ಸರ್ವಲಕ್ಷಣಸಂಪೂರ್ಣಾ ಯೌವನಾರಂಭಮಾಶ್ರಿತಾ ।**
**ಸಾ ಶಕ್ರೇಣಾಽಥ ಸಂಪೃಷ್ಟಾ ಕಾ ತ್ವಂ ಕಮಲಲೋಚನೇ ॥ ೫೮ ॥**
**ಕುಮಾರೀ ವಾ ಸನಾಥಾ ವಾ ಸುತಾ ಕಸ್ಯ ಬ್ರವೀಹಿ ನಃ ॥ ೫೯ ॥**

**ಕನ್ಯೋವಾಚ :—**

**ಗೋಪಕನ್ಯಾಽಸ್ಮಿ ಭದ್ರಂತೇ ತಕ್ರಂ ವಿಕ್ರೇತುಮಾಗತಾ ।**
**ಯದಿ ಗೃಹ್ಣಾಸಿ ಮೇ ಮೂಲ್ಯಂ ತಚ್ಛೀಘ್ರಂ ದೇಹಿ ಮಾಚಿರಂ ॥ ೬೦ ॥**
**ತಚ್ಛ್ರುತ್ವಾ ತ್ರಿದಿವೇಂದ್ರೋಽಪಿ ಮತ್ವಾ ತಾಂ ಗೋಪಕನ್ಯಕಾಂ ।**
**ಜಗೃಹೇ ತ್ವರಯಾ ಯುಕ್ತಸ್ತಕ್ರಂ ಚೋತ್ಸೃಜ್ಯ ಭೂತಲೇ ॥ ೬೧ ॥**
**ಅಥ ತಾಂ ರುದತೀಂ ಶಕ್ರಃ ಸಮಾದಾಯ ತ್ವರಾನ್ವಿತಃ ।**
**ಗೋವಕ್ತ್ರೇಣ ಪ್ರವೇಶ್ಯಾಽಥ ಗುಹ್ಯೇನಾಕರ್ಷಯತ್ತತಃ ॥ ೬೨ ॥**
**ಏವಂ ಮೇಧ್ಯತಮಾಂ ಕೃತ್ವಾ ಸಂಸ್ನಾಪ್ಯ ಸಲಿಲೈಃ ಶುಭೈಃ ।**
**ಜ್ಯೇಷ್ಠಕುಂಡಸ್ಯ ವಿಪ್ರೇಂದ್ರಾಃ ಪರಿಧಾಪ್ಯ ಸುವಾಸಸೀ ॥ ೬೩ ॥**

---

೫೬–೫೯. ಇಂದ್ರನು ಬ್ರಹ್ಮನ ಮಾತನ್ನು ಕೇಳಿ ಅವಸರವಾಗಿ ಕನ್ಯೆಯನ್ನು ಹುಡುಕುತ್ತ ಸಮೀಪದಲ್ಲಿಯೇ ಸಂಚರಿಸುವವಳೂ, ತಲೆಯಲ್ಲಿ ಮೊಸರಿನ ಮಡಿಕೆಯನ್ನು ಹೊತ್ತಿರುವವಳೂ, ಚಂದ್ರಮುಖಿಯೂ, ಕಮಲದಂತೆ ಕಣ್ಣುಗಳುಳ್ಳವಳೂ, ಸಮಸ್ತ ಲಕ್ಷಣಗಳಿಂದ ಕೂಡಿದವಳೂ, ಹೊಸ ತಾರುಣ್ಯವುಳ್ಳವಳೂ ಆದ ಓರ್ವ ಗೊಲ್ಲರ ಹುಡುಗಿಯನ್ನು ನೋಡಿ ಅವಳನ್ನು ಕುರಿತು, ಕಮಲಾಕ್ಷಿ! ನೀನಾರು? ಕನ್ಯೆಯೊ? ವಿವಾಹಿತಳೊ? ಯಾರ ಮಗಳು? ನನಗೆ ಹೇಳು ಎಂದನು.

೬೦. ಕನ್ಯೆಯು ಹೇಳುತ್ತಾಳೆ:—ನಾನು ಗೊಲ್ಲರ ಹುಡುಗಿಯು. ನಿನಗೆ ಮಂಗಳವಾಗಲಿ. ಮಜ್ಜಿಗೆಯನ್ನು ಮಾರಲು ಬಂದಿದ್ದೇನೆ. ಮಜ್ಜಿಗೆಯನ್ನು ಕೊಂಡುಕೊಳ್ಳುವುದಾದರೆ ಬೇಗನೆ ಬೆಲೆಯನ್ನು ಸಲ್ಲಿಸು.

೬೧. ಇಂದ್ರನು ಆ ಮಾತನ್ನು ಕೇಳಿ ಅವಳು ಗೊಲ್ಲರ ಹುಡುಗಿಯೆಂದರಿತು, ಮಜ್ಜಿಗೆಯನ್ನು ನೆಲದಮೇಲೆ ಸುರಿದು ಅವಳನ್ನು ಹಿಡಿದುಕೊಂಡನು.

೬೨. ಅನಂತರ ಇಂದ್ರನು ಅಳುತ್ತಿರುವ ಅವಳನ್ನು ಶೀಘ್ರವಾಗಿ ಕರೆದುಕೊಂಡುಹೋಗಿ ಹಸುವಿನ ಬಾಯಿಯಲ್ಲಿ ತೂರಿ ಗುದದ್ವಾರದಿಂದ ಎಳೆದನು.

೬೩–೬೪. ಅನಂತರ ಜ್ಯೇಷ್ಠಕುಂಡದ ಶುಭಜಲದಿಂದ ಸ್ನಾನಮಾಡಿಸಿ

ತತಶ್ಚ ಹರ್ಷಸಂಯುಕ್ತಃ ಪ್ರೋವಾಚ ಚತುರಾನನಂ ।
ದ್ರುತಂ ಗತ್ವಾ ಪುರೋ ಧೃತ್ವಾ ಸರ್ವದೇವಸಮಾಗಮೇ ॥ ೬೪ ॥
ಕನ್ಯಕೇಯಂ ಸುರಶ್ರೇಷ್ಠ ಸಮಾನೀತಾ ಮಯಾಽಧುನಾ ।
ತವಾರ್ಥಾಯ ಸುರೂಪಾಂಗಾ ಸರ್ವಲಕ್ಷಣಲಕ್ಷಿತಾ ॥ ೬೫ ॥
ಗೋಪಕನ್ಯಾಂ ವಿದಿತ್ವೇ ಮಾಂ ಗೋವಕ್ತ್ರೇಣ ಪ್ರವೇಶ್ಯ ಚ ।
ಆಕರ್ಷಿತಾ ಚ ಗುಹ್ಯೇನ ಪಾವನಾರ್ಥಂ ಚತುರ್ಮುಖ ॥ ೬೬ ॥
ಶ್ರೀ ವಾಸುದೇವ ಉವಾಚ :—
ಗವಾಂ ಚ ಬ್ರಾಹ್ಮಣಾನಾಂ ಚ ಕುಲಮೇಕಂ ದ್ವಿಧಾಕೃತಂ ।
ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ॥ ೬೭ ॥
ಧೇನೂದರಾದ್ವಿನಿಷ್ಕ್ರಾಂತಾ ತಜ್ಜಾತೇಯಂ ದ್ವಿಜನ್ಮನಾಂ ।
ಅಸ್ಯಾಃ ಪಾಣಿಗ್ರಹಂ ದೇವ ತ್ವಂ ಕುರುಷ್ವ ಮಖಾಪ್ತಯೇ ॥ ೬೮ ॥
ಯಾವನ್ನ ಚಲತೇ ಕಾಲೋ ಯಜ್ಞಯಾನಸಮುದ್ಭವಃ ॥ ೬೯ ॥
ರುದ್ರ ಉವಾಚ :—
ಪ್ರವಿಷ್ಟಾ ಗೋಮುಖೇ ಯಸ್ಮಾದಪಾನೇನ ವಿನಿರ್ಗತಾ ।
ಗಾಯತ್ರೀ ನಾಮ ತೇ ಪತ್ನೀ ತಸ್ಮಾದೇಷಾ ಭವಿಷ್ಯತಿ ॥ ೭೦ ॥

---

ಒಳ್ಳೆಯ ಬಟ್ಟೆಗಳನ್ನು ಉಡಿಸಿ ಸಮಸ್ತ ದೇವತೆಗಳು ನೋಡುತ್ತಿರುವಾಗ ಬ್ರಹ್ಮನ ಮುಂದೆ ನಿಲ್ಲಿಸಿ ಹೀಗೆಂದನು.

೬೫. ಸುರೋತ್ತಮ! ನಾನೀಗ ನಿನಗಾಗಿ ಸುಂದರಿಯೂ, ಸಕಲ ಲಕ್ಷಣಗಳುಳ್ಳವಳೂ ಆದ ಓರ್ವ ಕನ್ಯೆಯನ್ನು ಕರೆದುಕೊಂಡು ಬಂದಿದ್ದೇನೆ.

೬೬. ಇವಳು ಗೋಪಕನ್ಯೆಯೆಂದರಿತು ಶುದ್ಧಿಗಾಗಿ ಗೋವಿನ ಬಾಯಿಯಲ್ಲಿ ತೂರಿಸಿ ಗುದದ್ವಾರದಿಂದ ಎಳೆದಿರುವೆನು.

೬೭. ಶ್ರೀ ವಾಸುದೇವನು ಹೇಳುತ್ತಾನೆ:—ಗೋವುಗಳ ಮತ್ತು ಬ್ರಾಹ್ಮಣರ ಒಂದೇ ಕುಲವು ಎರಡಾಗಿ ಮಾಡಲ್ಪಟ್ಟಿರುವುದು. ಅದರಲ್ಲಿ ಒಂದು ಕುಲದಲ್ಲಿ ಮಂತ್ರಗಳೂ, ಇನ್ನೊಂದರಲ್ಲಿ ಹವಿಸ್ಸೂ ಇರುವುದು.

೬೮–೬೯. ಹಸುವಿನ ಹೊಟ್ಟೆಯಿಂದ ಹೊರಟದ್ದರಿಂದ ಇವಳು ಬ್ರಾಹ್ಮಣ ಕನ್ಯೆಯೇ ಆದಳು. ಆದುದರಿಂದ ಕಾಲವು ಮೀರುವುದರೊಳಗಾಗಿ ಇವಳನ್ನು ಯಜ್ಞಕ್ಕಾಗಿ ಮದುವೆ ಮಾಡಿಕೊ.

೭೦. ರುದ್ರನು ಹೇಳುತ್ತಾನೆ:—ಇವಳು ಗೋವಿನ ಮುಖದಲ್ಲಿ ಹೊಕ್ಕು ಅಪಾನಮಾರ್ಗದಿಂದ ಹೊರಟದ್ದರಿಂದ ಗಾಯತ್ರಿಯೆಂದು ಪ್ರಸಿದಳಾಗಿ ನಿನಗೆ ಪತ್ನಿಯಾಗುವಳು.

ಬ್ರಹ್ಮೋವಾಚ :—
ವದಂತು ಬ್ರಾಹ್ಮಣಾಃ ಸರ್ವೇ ಗೋಪಕನ್ಯಾಪ್ಯಸೌ ಯದಿ ।
ಸಂಭೂಯ ಬ್ರಾಹ್ಮಣೀ ಶ್ರೇಷ್ಠಾ ಯಥಾ ಪತ್ನೀ ಭವೇನ್ಮಮ ॥ ೭೧ ॥
ಬ್ರಾಹ್ಮಣಾ ಊಚುಃ :—
ಏಷಾ ಸ್ಯಾದ್ಬ್ರಾಹ್ಮಣಶ್ರೇಷ್ಠಾ ಗೋಪಜಾತಿವಿವರ್ಜಿತಾ ।
ಅಸ್ಮದ್ವಾಕ್ಯಾಚ್ಚತುರ್ವಕ್ತ್ರ ಕುರು ಪಾಣಿಗ್ರಹಂ ದ್ರುತಂ ॥ ೭೨ ॥
ಸೂತ ಉವಾಚ :—
ತತಃ ಪಾಣಿಗ್ರಹಂ ಚಕ್ರೇ ತಸ್ಯಾ ದೇವಃ ಪಿತಾಮಹಃ ।
ಕೃತ್ವಾ ಸೋಮಂ ತತೋ ಮೂರ್ಧ್ನಿ ಗೃಹ್ಯೋಕ್ತವಿಧಿನಾ ದ್ವಿಜಾಃ ॥ ೭೩ ॥
ಸಂತಿಷ್ಠತಿ ಚ ತತ್ರಸ್ಥಾ ಮಹಾದೇವೀ ಸುಪಾವನೀ ।
ಅದ್ಯಾಪಿ ಲೋಕೇ ವಿಖ್ಯಾತಾ ಧನಸೌಭಾಗ್ಯದಾಯಿನೀ ॥ ೭೪ ॥
ಯಸ್ತಸ್ಯಾಂ ಕುರುತೇ ಮರ್ತ್ಯಃ ಕನ್ಯಾದಾನಂ ಸಮಾಹಿತಃ ।
ಸಮಸ್ತಂ ಫಲಮಾಪ್ನೋತಿ ರಾಜಸೂಯಾಽಶ್ವಮೇಧಯೋಃ ॥ ೭೫ ॥
ಕನ್ಯಾ ಹಸ್ತಗ್ರಹಂ ತತ್ರ ಯಾಽಽಪ್ನೋತಿ ಪತಿನಾ ಸಹ ।
ಸಾ ಸ್ಯಾತ್ಪುತ್ರವತೀ ಸಾಧ್ವೀ ಸುಖಸೌಭಾಗ್ಯಸಂಯುತಾ ॥ ೭೬ ॥

---

೭೧. ಬ್ರಹ್ಮನು ಹೇಳುತ್ತಾನೆ:—ಸಕಲ ಬ್ರಾಹ್ಮಣರೂ ಸೇರಿ ಇವಳು ಗೋಪಕನ್ಯೆಯಾದರೂ ಬ್ರಾಹ್ಮಣಿಯಾಗಿ ನನಗೆ ಪತ್ನಿಯಾಗಲರ್ಹಳೆಂದು ಹೇಳಿರಿ.

೭೨. ಬ್ರಾಹ್ಮಣರು ಹೇಳುತ್ತಾರೆ:—ಚತುರ್ಮುಖ! ಇವಳು ಗೋಪಜಾತಿಯನ್ನು ಬಿಟ್ಟು ಬ್ರಾಹ್ಮಣಿಯಾಗಿರುವಳು. ನಮ್ಮ ಮಾತಿನಿಂದ ಇವಳನ್ನು ಬೇಗನೆ ವಿವಾಹ ಮಾಡಿಕೊ.

೭೩. ಸೂತನು ಹೇಳುತ್ತಾನೆ:—ಅನಂತರ ಪಿತಾಮಹನು ತಲೆಯಲ್ಲಿ ಸೋಮವನ್ನು ಗೃಹ್ಯೋಕ್ತವಿಧಿಯಿಂದ ಧರಿಸಿ ಆ ಗೋಪಕನ್ಯೆಯನ್ನು ಮದುವೆ ಮಾಡಿಕೊಂಡನು.

೭೪. ಆ ಮಹಾದೇವಿಯು ಈಗಲೂ ಅಲ್ಲಿ ಧನಸೌಭಾಗ್ಯಗಳನ್ನು ಕೊಡುವವಳೆಂದು ವಿಖ್ಯಾತಳಾಗಿರುವಳು.

೭೫. ಅವಳ ಮುಂದೆ ಸಾವಧಾನ ಮನಸ್ಸಿನಿಂದ ಕನ್ಯಾದಾನವನ್ನು ಮಾಡುವವನು ರಾಜಸೂಯ ಮತ್ತು ಅಶ್ವಮೇಧ ಯಾಗಗಳ ಫಲವನ್ನು ಪಡೆಯುವನು.

೭೬. ಅಲ್ಲಿ ಪತಿಯ ಪಾಣಿಯನ್ನು ಹಿಡಿದ ಕನ್ಯೆಯು ಪುತ್ರವತಿಯೂ, ಪತಿವ್ರತೆಯೂ, ಸುಖಸೌಭಾಗ್ಯವುಳ್ಳವಳೂ ಆಗುವಳು.

**ಪಿಂಡದಾನಂ ನರಸ್ತತ್ರ ಯಃ ಕರೋತಿ ದ್ವಿಜೋತ್ತಮಾಃ ।**
**ಪಿತರಸ್ತಸ್ಯ ಸಂತುಷ್ಟಾಸ್ತರ್ಪಿತಾಃ ಪಿತೃತೀರ್ಥವತ್ ॥ ೭೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಗಾಯತ್ರೀತೀರ್ಥಮಾಹಾತ್ಮ್ಯವರ್ಣನಂ" ನಾಮೈಕಾಶೀತ್ಯುತ್ತರಶತತಮೋಽಧ್ಯಾಯಃ**

---

೭೭. ದ್ವಿಜವರ್ಯರೆ! ಅಲ್ಲಿ ಪಿಂಡಪ್ರದಾನ ಮಾಡುವವನ ಪಿತೃಗಳು ಪಿತೃತೀರ್ಥದಲ್ಲಿ ತೃಪ್ತಿಗೊಂಡಂತೆ ಸಂತುಷ್ಟರಾಗುವರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಗಾಯತ್ರೀತೀರ್ಥಮಾಹಾತ್ಮ್ಯವರ್ಣನ" ವೆಂಬ ನೂರೆಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

## ಪ್ರಥಮಯಜ್ಞದಿವಸವೃತ್ತಾಂತವರ್ಣನಂ

**ಸೂತ ಉವಾಚ :—**

**ಏವಂ ಪತ್ನೀಂ ಸಮಾಸಾದ್ಯ ಗಾಯತ್ರೀಂ ಚತುರಾನನಃ ।**
**ಸಂಪ್ರಹೃಷ್ಟಮನಾ ಭೂತ್ವಾ ಪ್ರಸ್ಥಿತೋ ಯಜ್ಞಮಂಡಪಂ ॥ ೧ ॥**
**ಗಾಯತ್ರ್ಯಪಿ ಸಮಾದಾಯ ಮೂರ್ಧ್ನಿ ತಾಮರಣಿಂ ಮುದಾ ।**
**ಪ್ರತಸ್ಥೇ ಸಂಪರಿತ್ಯಜ್ಯ ಗೋಪಭಾವಂ ವಿಗರ್ಹಿತಂ ॥ ೨ ॥**
**ವಾದ್ಯಮಾನೇಷು ವಾದ್ಯೇಷು ಬ್ರಹ್ಮಘೋಷೇ ದಿವಂಗತೇ ।**
**ಕಲಂ ಪ್ರಗಾಯಮಾನೇಷು ಗಂಧರ್ವೇಷು ಸಮಂತತಃ ॥ ೩ ॥**
**ಸರ್ವದೇವದ್ವಿಜೋಪೇತಃ ಸಂಪ್ರಾಪ್ತೋ ಯಜ್ಞಮಂಡಪೇ ।**
**ಗಾಯತ್ರ್ಯಾ ಸಹಿತೋ ಬ್ರಹ್ಮಾ ಮಾನುಷಂ ಭಾವಮಾಶ್ರಿತಃ ॥ ೪ ॥**
**ಏತಸ್ಮಿನ್ನಂತರೇ ಚಕ್ರೇ ಕೇಶನಿರ್ವಪಣಂ ವಿಧೇಃ ।**
**ವಿಶ್ವಕರ್ಮಾ ನಖಾನಾಂ ಚ ಗಾಯತ್ರ್ಯಾಸ್ತದನಂತರಂ ॥ ೫ ॥**

---

## ಕನ್ನಡದ ಅನುವಾದ

### ಪ್ರಥಮಯಜ್ಞದಿವಸವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ಬ್ರಹ್ಮನು ಹೀಗೆ ಗಾಯತ್ರಿಯನ್ನು ಪತ್ನಿಯನ್ನಾಗಿ ಪಡೆದು ಸಂತೋಷದಿಂದ ಯಜ್ಞಶಾಲೆಗೆ ಹೊರಟನು.

೨. ಗಾಯತ್ರಿಯೂ ಗೊಲ್ಲಜಾತಿಯನ್ನು ತ್ಯಜಿಸಿ ತಲೆಯಮೇಲೆ ಆ ಅರಣಿಯನ್ನು ಧರಿಸಿ ಹೊರಟಳು.

೩–೪. ಬ್ರಹ್ಮನು ಮನುಷ್ಯತ್ವವನ್ನು ಹೊಂದಿ ವಾದ್ಯಗಳು ಮೊಳಗುತ್ತಿರಲು, ವೇದಧ್ವನಿಯು ಗಗನಮಂಡಲಕ್ಕೇರುತ್ತಿರಲು, ಗಾಯಕರು ಇಂಪಾಗಿ ಹಾಡುತ್ತಿರಲು ಸಮಸ್ತ ಬ್ರಾಹ್ಮಣರಿಂದಲೂ, ಗಾಯತ್ರಿಯಿಂದಲೂ ಸಹಿತನಾಗಿ ಯಜ್ಞಶಾಲೆಯನ್ನು ಸೇರಿದನು.

೫. ಈ ಸಮಯದಲ್ಲಿ ವಿಶ್ವಕರ್ಮನು ಬ್ರಹ್ಮ ಮತ್ತು ಗಾಯತ್ರಿಯರ ಕೇಶನಿರ್ವಪಣ, ನಖಕರ್ತನಗಳನ್ನು ಮಾಡಿದನು.

**ಔದುಂಬರಂ ತತೋ ದಂಡಂ ಪುಲಸ್ತ್ಯೋಽಸ್ಮೈ ಸಮಾದದೇ ।**
**ಏಣಶೃಂಗಾನ್ವಿತಂ ಚರ್ಮ ಮಂತ್ರವದ್ದ್ವಿಜಸತ್ತಮಾಃ ॥ ೬ ॥**
**ಪತ್ನೀಶಾಲಾಂ ಗೃಹೀತ್ವಾ ಚ ಗಾಯತ್ರೀಂ ಮೌನಧಾರಿಣೀಂ ।**
**ಮೇಖಲಾಂ ನಿದಧೇ ಚಾಽಸ್ಯಾಂ ಕಟ್ಯಾಂ ಮೌಂಜೀಮಯೀಂ ಶುಭಾಂ ॥ ೭ ॥**
**ತತಶ್ಚಕ್ರೇ ಪರಂ ಕರ್ಮ ಯದುಕ್ತಂ ಯಜ್ಞಮಂಡಪೇ ।**
**ಋತ್ವಿಗ್ಭಿಃ ಸಹಿತೋ ವೇಧಾ ವೇದವಾಕ್ಯಸಮಾದೃತಃ ॥ ೮ ॥**
**ಪ್ರವರ್ಗ್ಯೇ ಜಾಯಮಾನೇ ಚ ತತ್ರಾಶ್ಚರ್ಯಮಭೂನ್ಮಹತ್ ।**
**ಜಾಲ್ಮರೂಪಧರಃ ಕಶ್ಚಿದ್ದಿಗ್ವಾಸಾ ವಿಕೃತಾನನಃ ॥ ೯ ॥**
**ಕಪಾಲಪಾಣಿರಾಯಾತೋ ಭೋಜನಂ ದೀಯತಾಮಿತಿ ।**
**ನಿಷೇಧ್ಯಮಾನೋಽಪಿ ಚ ತೈಃ ಪ್ರವಿಷ್ಟೋ ಯಾಜ್ಞಿಕಂ ಸದಃ ।**
**ಸ ಕೃತ್ವಾಟನಮನ್ಯಾಯ್ಯಂ ತರ್ಜ್ಯಮಾನೋಽಪಿ ತಾಪಸೈಃ ॥ ೧೦ ॥**

**ಸದಸ್ಯಾ ಊಚುಃ:—**

**ಕಸ್ಮಾತ್ಪಾಪ ಸಮೇತಸ್ತ್ವಂ ಪ್ರವಿಷ್ಟೋ ಯಜ್ಞಮಂಡಪೇ ।**
**ಕಪಾಲೀ ನಗ್ನರೂಪೋ ಯೋ ಯಜ್ಞಕರ್ಮವಿವರ್ಜಿತಃ ॥ ೧೧ ॥**
**ತಸ್ಮಾದ್ಗಚ್ಛ ದ್ರುತಂ ಮೂಢ ಯಾವದ್ಬ್ರಹ್ಮಾ ನ ಕುಪ್ಯತಿ ।**
**ತಥಾಽನ್ಯೇ ಬ್ರಾಹ್ಮಣಶ್ರೇಷ್ಠಾಸ್ತಥಾ ದೇವಾಃ ಸವಾಸವಾಃ ॥ ೧೨ ॥**

---

೬. ದ್ವಿಜವರ್ಯರೆ! ತರುವಾಯ ಪುಲಸ್ತ್ಯನು ಇವನಿಗೆ ಅತ್ತಿಯ ದಂಡ, ಜಿಂಕೆಯ ಕೊಂಬುಳ್ಳ ಅಜಿನಗಳನ್ನಿತ್ತನು.

೭. ಮೌನವುಳ್ಳ ಗಾಯತ್ರಿಯನ್ನು ಪತ್ನೀಶಾಲೆಗೆ ಕರೆದುಕೊಂಡುಹೋಗಿ ಸೊಂಟದಲ್ಲಿ ನೊಸೆ ಹುಲ್ಲಿನ ಬೇರೆ ಮೇಖಲೆಯನ್ನು ಕಟ್ಟಿದನು.

೮. ಅನಂತರ ಬ್ರಹ್ಮನು ಯಜ್ಞಶಾಲೆಯಲ್ಲಿ ಋತ್ವಿಜರೊಡನೆ ವೇದವಾಕ್ಯಗಳಲ್ಲಿ ಆದರವುಳ್ಳವನಾಗಿ ವಿಹಿತಕರ್ಮಗಳನ್ನಾಚರಿಸಿದನು.

೯–೧೦. ಅಲ್ಲಿ ಪ್ರವರ್ಗ್ಯವು ನಡೆಯುತ್ತಿರಲು ಒಂದು ಆಶ್ಚರ್ಯಕರವಾದ ವಿಷಯವು ಸಂಭವಿಸಿತು. ಅವಿವೇಕಿಯ ರೂಪವನ್ನು ಧರಿಸಿದವನೂ, ದಿಗಂಬರನೂ, ವಿಕಾರವಾದ ಮುಖವುಳ್ಳವನೂ, ಕಪಾಲವನ್ನು ಹಿಡಿದವನೂ ಆದ ಒಬ್ಬ ಮನುಷ್ಯನು ಭೋಜನವನ್ನು ಕೊಡಿರೆಂದು ಅಲ್ಲಿರುವ ತಾಪಸರು ಹೆದರಿಸಿ ತಡೆದರೂ ಅನುಚಿತವಾಗಿ ಅಲೆಯುತ್ತ ಯಜ್ಞಶಾಲೆಯನ್ನು ಹೊಕ್ಕನು.

೧೧–೧೨. ಸದಸ್ಯರು ಹೇಳುತ್ತಾರೆ:—ಪಾಪಿಯೂ, ಕಪಾಲಧಾರಿಯೂ, ದಿಗಂಬರನೂ, ಯಜ್ಞಕರ್ಮಬಾಹ್ಯನೂ ಆದ ನೀನು ಯಜ್ಞಶಾಲೆಯನ್ನೇಕೆ ಪ್ರವೇಶಿಸಿದೆ? ಮೂಢ! ಬ್ರಹ್ಮನೂ, ಇತರ ಬ್ರಾಹ್ಮಣವರ್ಯರೂ, ಇಂದ್ರಾದಿ ದೇವತೆಗಳೂ ಕೋಪಿಸಿಕೊಳ್ಳದಿರುವಷ್ಟರಲ್ಲಿ ಇಲ್ಲಿಂದ ಹೊರಡು.

ಜಾಲ್ಮ ಉವಾಚ :—

ಬ್ರಹ್ಮಯಜ್ಞಮಿಮಂ ಶ್ರುತ್ವಾ ದೂರಾದತ್ರ ಸಮಾಗತಃ ।
ಬುಭುಕ್ಷಿತೋ ದ್ವಿಜಶ್ರೇಷ್ಠಾಸ್ತತ್ಕಿಮರ್ಥಂ ವಿಗರ್ಹಥ ॥ ೧೩ ॥
ದೀನಾಂಧೈಃ ಕೃಪಣೈಃ ಸರ್ವೈಸ್ತರ್ಪಿತೈಃ ಕ್ರತುರುಚ್ಯತೇ ।
ಅನ್ಯಥಾಽಸೌ ವಿನಾಶಾಯ ಯದುಕ್ತಂ ಬ್ರಾಹ್ಮಣೈರ್ವಚಃ ॥ ೧೪ ॥
ಅನ್ನಹೀನೋ ದಹೇದ್ರಾಷ್ಟ್ರಂ ಮಂತ್ರಹೀನಸ್ತು ಋತ್ವಿಜಃ ।
ಯಾಜ್ಞಿಕಂ ದಕ್ಷಿಣಾಹೀನೋ ನಾಸ್ತಿ ಯಜ್ಞಸಮೋ ರಿಪುಃ ॥ ೧೫ ॥

ಬ್ರಾಹ್ಮಣಾ ಊಚುಃ :—

ಯದಿ ತ್ವಂ ಭೋಕ್ತುಕಾಮಸ್ತು ಸಮಾಯಾತೋ ವ್ರಜ ದ್ರುತಂ ।
ಏತಸ್ಯಾಂ ಸತ್ರಶಾಲಾಯಾಂ ಭುಂಜತೇ ಯತ್ರ ತಾಪಸಾಃ ।
ದೀನಾಂಧಾಃ ಕೃಪಣಾಶ್ಚೈವ ತತಃ ಕ್ಷುತ್ಕ್ಷಾಮಕಂಠಿತಾಃ ॥ ೧೬ ॥
ಅಥವಾ ಧನಕಾಮಸ್ತ್ವಂ ವಸ್ತ್ರಕಾಮೋಽಥ ತಾಪಸ ।
ವ್ರಜ ವಿತ್ತಪತಿರ್ಯತ್ರ ದಾನಶಾಲಾಂ ಸಮಾಶ್ರಿತಃ ॥ ೧೭ ॥
ಅನಿಂದ್ಯೋಽಯಂ ಮಹಾಮೂರ್ಖ ಯಜ್ಞಃ ಪೈತಾಮಹೋ ಯತಃ ।
ಅರ್ಚಿತಃ ಸರ್ವತಃ ಪುಣ್ಯಂ ತತ್ಕಿಂ ನಿಂದಸಿ ದುರ್ಮತೇ ॥ ೧೮ ॥

---

೧೩. ಜಾಲ್ಮನು ಹೇಳುತ್ತಾನೆ:—ದ್ವಿಜವರ್ಯರೆ! ಹಸಿವುಗೊಂಡ ನಾನು ಈ ಬ್ರಹ್ಮನ ಯಜ್ಞವನ್ನು ಕೇಳಿ ದೂರದಿಂದ ಬಂದಿದ್ದೇನೆ. ಏತಕ್ಕೆ ನನ್ನನ್ನು ತಡೆಯುತ್ತೀರಿ?

೧೪. ದೀನರು, ಕುರುಡರು, ಕೃಪಣರು, ಇವರನ್ನು ಸಂತೋಷಗೊಳಿಸಿದರೆ ಯಜ್ಞವೆನ್ನಿಸಿಕೊಳ್ಳುವುದು. ಹಾಗೆ ಮಾಡದಿದ್ದರೆ ಈ ಯಜ್ಞವು ನಾಶಕರವಾಗುವುದೆಂದು ಬ್ರಾಹ್ಮಣರು ಹೇಳಿರುತ್ತಾರೆ.

೧೫. ಯಜ್ಞವು ಅನ್ನಹೀನವಾದರೆ ರಾಜ್ಯವನ್ನೂ, ಮಂತ್ರಹೀನವಾದರೆ ಪುರೋಹಿತರನ್ನೂ, ದಕ್ಷಿಣೆಯಿಲ್ಲದಿದ್ದರೆ ಯಾಜ್ಞಿಕನನ್ನೂ ಕೊಲ್ಲುವುದು. ಯಜ್ಞಕ್ಕೆ ಸಮಾನನಾದ ಶತ್ರುವಿಲ್ಲ.

೧೬. ಬ್ರಾಹ್ಮಣರು ಹೇಳುತ್ತಾರೆ:—ನೀನು ಊಟಮಾಡಲಿಚ್ಛಿಸಿ ಬಂದವನಾದರೆ ಈ ಯಜ್ಞಶಾಲೆಯಲ್ಲಿ ಮುನಿಗಳೂ, ದೀನರೂ, ಕುರುಡರೂ, ಕೃಪಣರೂ ಹಸಿವಿನಿಂದ ಭೋಜನ ಮಾಡುವ ಸ್ಥಳಕ್ಕೆ ಶೀಘ್ರವಾಗಿ ಹೋಗು.

೧೭. ಅಥವಾ ನೀನು ಹಣ ವಸ್ತ್ರಗಳನ್ನು ಬಯಸುವವನಾದರೆ ಕುಬೇರನಿರುವ ದಾನಶಾಲೆಗೆ ಹೋಗು.

೧೮. ಮೂಢ! ಈ ಬ್ರಹ್ಮನ ಯಜ್ಞವು ಅನಿಂದ್ಯವೂ, ಸರ್ವಜನ ಪೂಜಿತವೂ, ಪುಣ್ಯಕರವೂ ಆಗಿರುವುದರಿಂದ ಏತಕ್ಕೆ ನಿಂದಿಸುವೆ?

**ಸೂತ ಉವಾಚ :—**

**ಏವಮುಕ್ತಃ ಕಪಾಲಂ ಸ ಪರಿಕ್ಷಿಪ್ಯ ಧರಾತಲೇ ।**
**ಜಗಾಮದರ್ಶನಂ ಸದ್ಯೋ ದೀಪವದ್ವಿಜಸತ್ತಮಾಃ ॥ ೧೯ ॥**

**ಋತ್ವಿಜ ಊಚುಃ :—**

**ಕಥಂ ಯಜ್ಞಕ್ರಿಯಾ ಕಾರ್ಯಾ ಕಪಾಲೇ ಸದಸಿ ಸ್ಥಿತೇ ।**
**ಪರಿಕ್ಷಿಪಥ ತಸ್ಮಾತ್ತು ಏವಮೂಚುರ್ದ್ವಿಜೋತ್ತಮಾಃ ॥ ೨೦ ॥**
**ಅಥೈಕೋ ಬಹುಧಾ ಪ್ರೋಕ್ತಃ ಸದಸ್ಯೈಶ್ಚ ದ್ವಿಜೋತ್ತಮೈಃ ।**
**ದಂಡಕಾಷ್ಠಂ ಸಮುದ್ಯಮ್ಯ ಪ್ರಚಿಕ್ಷೇಪ ಬಹಿಸ್ತಥಾ ॥ ೨೧ ॥**
**ಅಥಾಽನ್ಯತ್ತತ್ರ ಸಂಜಾತಂ ಕಪಾಲಂ ತಾದೃಶಂ ಪುನಃ ।**
**ತಸ್ಮಿನ್ನಪಿ ತಥಾ ಕ್ಷಿಪ್ತೇ ಭೂಯೋಽನ್ಯತ್ಸಮುಪದ್ಯತ ॥ ೨೨ ॥**
**ಏವಂ ಶತ ಸಹಸ್ರಾಣಿ ಹ್ಯಯುತಾನ್ಯರ್ಬುದಾನಿ ಚ ।**
**ತತ್ರ ಜಾತಾನಿ ತೈರ್ವ್ಯಾಪ್ತೋ ಯಜ್ಞವಾಟಃ ಸಮಂತತಃ ॥ ೨೩ ॥**
**ಹಾಹಾಕಾರಸ್ತತೋ ಜಜ್ಞೇ ಸಮಸ್ತೇ ಯಜ್ಞಮಂಡಪೇ ।**
**ದೃಷ್ಟ್ವಾ ಕಪಾಲ ಸಂಘಾಂಸ್ತಾನ್ಯಜ್ಞಕರ್ಮಪ್ರದೂಷಕಾನ್ ॥ ೨೪ ॥**
**ಅಥ ಸಂಚಿಂತಯಾಮಾಸ ಧ್ಯಾನಂ ಕೃತ್ವಾ ಪಿತಾಮಹಃ ।**
**ಹರಾರಿಷ್ಟಂ ಸಮಾಜ್ಞಾಯ ತತ್ಸರ್ವಂ ದೃಷ್ಟರೂಪ ಧೃಕ್ ॥ ೨೫ ॥**

---

೧೯. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಬ್ರಾಹ್ಮಣರು ಹೀಗೆ ಹೇಳಲು ಆ ಬಾಲ್ಮನು ನೆಲದಮೇಲೆ ಕಪಾಲವನ್ನು ಎಸೆದು ದೀಪದಂತೆ ಕೂಡಲೆ ಅದೃಶ್ಯನಾದನು.

೨೦. ಋತ್ವಿಜರು ಹೇಳುತ್ತಾರೆ:—ಸದಸ್ಸಿನಲ್ಲಿ ಕಪಾಲವಿರಲು ಯಜ್ಞವನ್ನು ಮಾಡುವುದು ಹೇಗೆ? ಆದುದರಿಂದ ಇದನ್ನು ಆಚೆಗೆ ಎಸೆಯಿರಿ.

೨೧. ಅನಂತರ ಸಭೆಯಲ್ಲಿರುವ ಬ್ರಾಹ್ಮಣರು ಒಬ್ಬನನ್ನು ಕುರಿತು ಬಹು ವಾಗಿ ಹೇಳಲು ಅವನು ಒಂದು ಕೋಲಿನಿಂದ ಆ ಕಪಾಲವನ್ನು ಎತ್ತಿ ಹೊರಗೆ ಬಿಸಾಡಿದನು.

೨೨. ತರುವಾಯ ಅಲ್ಲಿ ಅಂತಹ ಮತ್ತೊಂದು ಕಪಾಲವು ಉಂಟಾಯಿತು. ಅದನ್ನು ಹೊರಗೆ ಎಸೆಯಲು ಮರಳಿ ಮತ್ತೊಂದು ಉಂಟಾಯಿತು.

೨೩. ಹೀಗೆ ಲಕ್ಷ, ಅಯುತ, ಅರ್ಬುದ ಕಪಾಲಗಳು ಅಲ್ಲಿ ಉಂಟಾಗಿ ಅವುಗಳಿಂದ ಯಜ್ಞಶಾಲೆಯು ತುಂಬಿತು.

೨೪. ತರುವಾಯ ಯಜ್ಞವನ್ನು ಕೆಡಿಸುವ ಆ ಕಪಾಲಗಳ ಸಮೂಹಗಳನ್ನು ನೋಡಿ ಯಜ್ಞಶಾಲೆಯಲ್ಲಿ ಹಾಹಾಕಾರವುಂಟಾಯಿತು.

೨೫–೨೬. ಬಳಿಕ ಪಿತಾಮಹನು ಧ್ಯಾನಿಸಿ ಅವೆಲ್ಲ ಶಿವನ ಅರಿಷ್ಟವೆಂದು

ಕೃತಾಂಜಲಿಪುಟೋ ಭೂತ್ವಾ ತತಃ ಪ್ರೋವಾಚ ಸಾದರಂ ।
ಮಹೇಶ್ವರಂ ಸಮಾಸಾದ್ಯ ಯಜ್ಞವಾಟಸಮಾಶ್ರಿತಂ ॥ ೨೬ ॥
ಕಿಮಿದಂ ಯುಜ್ಯತೇ ದೇವ ಯಜ್ಞೇಽಸ್ಮಿನ್ ಕರ್ಮಣಃ ಕ್ಷತಿಃ ।
ತಸ್ಮಾತ್ಸಂಹರ ಸರ್ವಾಣಿ ಕಪಾಲಾನಿ ಸುರೇಶ್ವರ ॥ ೨೭ ॥
ಯಜ್ಞಕರ್ಮ ವಿಲೋಪೋಽಯಂ ಮಾಭೂತ್ತ್ವಯಿ ಸಮಾಗತೇ ॥ ೨೮ ॥
ತತಃ ಪ್ರೋವಾಚ ಸಂಕ್ರುದ್ಧೋ ಭಗವಾಂಛಶಿಶೇಖರಃ ।
ತನ್ಮಮೇಷ್ಟತಮಂ ಪಾತ್ರಂ ಭೋಜನಾಯ ಸದಾ ಸ್ಥಿತಂ ॥ ೨೯ ॥
ಏತೇ ದ್ವಿಜಾಧಮಾಃ ಕಸ್ಮಾದ್ವಿದ್ವಿಷಂತಿ ಪಿತಾಮಹ ।
ತಥಾ ನ ಮಾಂ ಸಮುದ್ದಿಶ್ಯ ಜುಹುವುರ್ಜಾತವೇದಸಿ ॥ ೩೦ ॥
ಯಥಾಽನ್ಯಾ ದೇವತಾಸ್ತದ್ವನ್ಮಂತ್ರಪೂತಂ ಹವಿರ್ವಿಧೇ ।
ತಸ್ಮಾದ್ಯದಿ ವಿಧೇ ಕಾರ್ಯಾ ಸಮಾಪ್ತಿರ್ಯಜ್ಞ ಕರ್ಮಣಿ ॥ ೩೧ ॥
ತತ್ಕಪಾಲಾಶ್ರಿತಂ ಹವ್ಯಂ ಕರ್ತವ್ಯಂ ಸಕಲಂ ತ್ವಿದಂ ।
ತಥಾ ಚ ಮಾಂ ಸಮುದ್ದಿಶ್ಯ ವಿಶೇಷಾಜ್ಜಾತವೇದಸಿ ॥ ೩೨ ॥
ಹೋತವ್ಯಂ ಹವಿರೇವಾಽತ್ರ ಸಮಾಪ್ತಿಂ ಯಾಸ್ಯತಿ ಕ್ರತುಃ ।
ನಾಽನ್ಯಥಾ ಸತ್ಯಮೇವೋಕ್ತಂ ತವಾಗ್ರೇ ಚತುರಾನನ ॥ ೩೩ ॥

---

ತಿಳಿದು ಸಂತೋಷಗೊಂಡವನಾಗಿ ಯಜ್ಞವಾಟದಲ್ಲಿರುವ ಮಹೇಶ್ವರನನ್ನು ಸಮೀಪಿಸಿ ಕೈಮುಗಿದುಕೊಂಡು ಪ್ರೀತಿಯಿಂದ ಇಂತೆಂದನು.

೨೭. "ಶಂಕರ! ಈ ಯಜ್ಞಕರ್ಮದಲ್ಲಿ ಕೆಡಕನ್ನುಂಟುಮಾಡುವುದು ನಿನಗೆ ಉಚಿತವೆ? ಆದುದರಿಂದ ಎಲ್ಲ ಕಪಾಲಗಳನ್ನೂ ಹಿಂವಕ್ಕೆ ತೆಗೆದುಕೊ.

೨೮. ನೀನು ಬಂದುದರಿಂದ ಈ ಯಜ್ಞಕರ್ಮವು ಹಾಳಾಗದಿರಲಿ.

೨೯. ಅನಂತರ ಪೂಜ್ಯನಾದ ಮಹೇಶ್ವರನು ಕುಪಿತನಾಗಿ ಹೀಗೆಂದನು. "ಅದು ಯಾವಾಗಲೂ ನನ್ನ ಭೋಜನಕ್ಕೆ ಇಷ್ಟವಾದ ಪಾತ್ರೆಯಾಗಿರುವುದು.

೩೦–೩೩. ಪಿತಾಮಹ! ಈ ನೀಚ ಬ್ರಾಹ್ಮಣರು ಏತಕ್ಕೆ ಅದನ್ನು ದ್ವೇಷಿಸುತ್ತಾರೆ? ಹಾಗೆಯೇ ಇವರು ಇತರ ದೇವತೆಗಳಂತೆ ನನ್ನನ್ನು ಉದ್ದೇಶಿಸಿ ಅಗ್ನಿಯಲ್ಲಿ ಮಂತ್ರಪೂತವಾದ ಹವಿಸ್ಸನ್ನು ಹೋಮಿಸಲಿಲ್ಲ. ಆದುದರಿಂದ ನಿನ್ನ ಯಜ್ಞಕಾರ್ಯವು ಮುಗಿಯಬೇಕಾದರೆ ಈ ಎಲ್ಲ ಹವಿಸ್ಸನ್ನು ಕಪಾಲದಲ್ಲಿ ಹಾಕಿ ನನ್ನನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಿಸಬೇಕು. ಹಾಗೆ ಮಾಡಿದರೆ ಯಜ್ಞವು ಮುಗಿಯುವುದು. ಇಲ್ಲದಿದ್ದರೆ ಮುಗಿಯುವುದಿಲ್ಲ. ನಿನ್ನ ಮುಂದೆ ನಿಜವಾಗಿ ಹೇಳುತ್ತೇನೆ."

**ಪಿತಾಮಹ ಉವಾಚ:—**

**ರೂಪಾಣಿ ತವ ದೇವೇಶ ಪೃಥಗ್ಭೂತಾನ್ಯನೇಕಶಃ ।**
**ಸಂಖ್ಯಯಾ ಪರಿಹೀನಾನಿ ಧ್ಯೇಯಾನಿ ಸಕಲಾನಿ ಚ ॥ ೩೪ ॥**
**ಏತನ್ಮಹಾವ್ರತಂ ರೂಪಮಾಖ್ಯಾತಂ ತೇ ತ್ರಿಲೋಚನ ।**
**ನೈವಂ ಚ ಮಖಕರ್ಮ ಸ್ಯಾತ್ತತ್ರೈವ ಚ ನಯುಜ್ಯತೇ ॥ ೩೫ ॥**
**ಅದ್ಯೈತತ್ಕರ್ಮ ಕರ್ತುಂ ಚ ಶ್ರುತಿಬಾಹ್ಯಂ ಕಥಂಚನ ।**
**ತವ ವಾಕ್ಯಮಪಿ ತ್ರ್ಯಕ್ಷ ನಾನ್ಯಥಾ ಕರ್ತುಮುತ್ಸಹೇ ॥ ೩೬ ॥**
**ಮೃಣ್ಮಯೇಷು ಕಪಾಲೇಷು ಹವಿಃಶ್ರಾಪ್ಯಂ ಸುರೇಶ್ವರ ।**
**ಅದ್ಯಪ್ರಭೃತಿ ಯಜ್ಞೇಷು ಪುರೋಡಾಶಾತ್ಮಕಂ ದ್ವಿಜೈಃ ।**
**ತವೋದ್ದೇಶೇನ ದೇವೇಶ ಹೋತವ್ಯಂ ಶತರುದ್ರಿಯಂ ॥ ೩೭ ॥**
**ವಿಶೇಷಾತ್ಸರ್ವಯಜ್ಞೇಷು ಜಪ್ಯಂ ಚೈವ ವಿಶೇಷತಃ ।**
**ಕಪಾಲಾನಾಂ ತು ದ್ವಾರೇಣ ತ್ವಯಾ ರೂಪಂ ನಿಜಂ ಕೃತಂ ॥ ೩೮ ॥**
**ಪ್ರಕಟಂ ಚ ಸುರಶ್ರೇಷ್ಠ ಕಪಾಲೇಶ್ವರಸಂಜ್ಞಿತಃ ।**
**ತಸ್ಮಾತ್ತ್ವಂ ಭವಿತಾ ರುದ್ರ ಕ್ಷೇತ್ರೇಽಸ್ಮಿನ್ ದ್ವಾದಶೋಽಪರಃ ॥ ೩೯ ॥**
**ಅತ್ರ ಯಜ್ಞಂ ಸಮಾರಭ್ಯ ಯಸ್ತ್ವಾಂ ಪ್ರಾಕ್ ಪೂಜಯಿಷ್ಯತಿ ।**
**ಅವಿಘ್ನೇನ ಮಖಸ್ತಸ್ಯ ಸಮಾಪ್ತಿಂ ಪ್ರವ್ರಜಿಷ್ಯತಿ ॥ ೪೦ ॥**

---

೩೪. ಬ್ರಹ್ಮನು ಹೇಳುತ್ತಾನೆ:—ದೇವೇಶ! ಅಸಂಖ್ಯಾತವಾದ ನಿನ್ನ ಬೇರೆ ಬೇರೆ ರೂಪಗಳಿರುವುವು. ಅವೆಲ್ಲವೂ ಧ್ಯಾನಿಸಲರ್ಹವಾದುವು.

೩೫. ತ್ರಿಲೋಚನ! ನೀನು ಈ ಕಪಾಲ ಮಹಾವ್ರತದ ರೂಪವನ್ನು ಹೇಳಿರುವೆ.

೩೬. ಇದು ಯಜ್ಞಕರ್ಮವಾಗುವುದಿಲ್ಲ. ಆ ಯಜ್ಞದಲ್ಲಿ ಶ್ರುತಿವಿರುದ್ಧವಾದ ಈ ಕರ್ಮವನ್ನಾಚರಿಸುವುದು ಉಚಿತವಲ್ಲ. ನಿನ್ನ ಮಾತನ್ನೂ ಮೀರಲು ಇಚ್ಛಿಸುವುದಿಲ್ಲ.

೩೭–೩೯. ಇದು ಮೊದಲ್ಗೊಂಡು ಬ್ರಾಹ್ಮಣರು ಪುರೋಡಾಶರೂಪವಾದ ಹವಿಸ್ಸನ್ನು ಮಣ್ಣಿನ ಕಪಾಲಗಳಲ್ಲಿ ಸಿದ್ಧಗೊಳಿಸಿ ನಿನ್ನ ಉದ್ದೇಶದಿಂದ ಹೋಮಿಸಲಿ. ಮತ್ತು ಸಕಲ ಯಜ್ಞಗಳಲ್ಲಿಯೂ ಶತರುದ್ರಿಯವನ್ನು ಜಪಿಸಲಿ. ನೀನು ಈ ಕ್ಷೇತ್ರದಲ್ಲಿ ಕಪಾಲಗಳ ಮೂಲಕ ಪ್ರತ್ಯಕ್ಷನಾದ್ದರಿಂದ ಕಪಾಲೇಶ್ವರನೆಂದು ಹೆಸರನ್ನಾಂತು ಹನ್ನೆರಡನೆಯ ರುದ್ರನಾಗು.

೪೦. ಇಲ್ಲಿ ಯಜ್ಞವನ್ನು ಆರಂಭಿಸಿ ಮೊದಲು ನಿನ್ನನ್ನು ಪೂಜಿಸಿದವನ ಯಜ್ಞವು ವಿಘ್ನವಿಲ್ಲದೆ ನೆರವೇರುವುದು.

ಏವಮುಕ್ತೇ ತತಸ್ತೇನ ಕಪಾಲಾನಿ ದ್ವಿಜೋತ್ತಮಾಃ ।
ತಾನಿ ಸರ್ವಾಣಿ ನಷ್ಟಾನಿ ಸಂಖ್ಯಯಾ ರಹಿತಾನಿ ಚ ॥ ೪೧ ॥
ತತೋ ಹೃಷ್ಟಶ್ಚತುರ್ವಕ್ತ್ರಃ ಸ್ಥಾಪಯಾಮಾಸ ತತ್‌ಕ್ಷಣಾತ್ ।
ಲಿಂಗಂ ಮಾಹೇಶ್ವರಂ ತತ್ರ ಕಪಾಲೇಶ್ವರ ಸಂಜ್ಞಿತಂ ॥ ೪೨ ॥
ಅಬ್ರವೀಚ್ಚ ತತೋ ವಾಕ್ಯಂ ಯಶ್ಚೈತತ್ಪೂಜಯಿಷ್ಯತಿ ।
ಮಮ ಕುಂಡತ್ರಯೇ ಸ್ನಾತ್ವಾ ಸ ಯಾಸ್ಯತಿ ಪರಾಂ ಗತಿಂ ॥ ೪೩ ॥
ಶುಕ್ಲಪಕ್ಷೇ ಚತುರ್ದಶ್ಯಾಂ ಕಾರ್ತಿಕೇ ಜಾಗರಂ ತು ಯಃ ।
ಕರಿಷ್ಯತಿ ಪುನಶ್ಚಾಽಸ್ಯ ಲಿಂಗಸ್ಯ ಸುಸಮಾಹಿತಃ ।
ಆಜನ್ಮಪ್ರಭವಾತ್ಪಾಪಾತ್ಸ ವಿಮುಕ್ತಿಮವಾಪ್ಸ್ಯತಿ ॥ ೪೪ ॥
ಏವಮುಕ್ತೇಽಥ ವಿಧಿನಾ ಪ್ರಹೃಷ್ಟಸ್ತ್ರಿಪುರಾಂತಕಃ ।
ಯಜ್ಞಮಂಡಪಮಾಸಾದ್ಯ ಪ್ರಸ್ಥಿತೋ ವೇದಿಸನ್ನಿಧೌ ॥ ೪೫ ॥
ಬ್ರಾಹ್ಮಣೈಶ್ಚ ತತಃ ಕರ್ಮ ಪ್ರಾರಬ್ಧಂ ಯಜ್ಞಸಂಭವಂ ।
ವಿಸ್ಮಯೋತ್ಫುಲ್ಲನಯನೈರ್ನಮಸ್ಕೃತ್ಯ ಮಹೇಶ್ವರಂ ॥ ೪೬ ॥

ಸೂತ ಉವಾಚ :—

ಏವಂ ಚ ಯಜತಸ್ತಸ್ಯ ಚತುರ್ವಕ್ತ್ರಸ್ಯ ತತ್ರ ಚ ।
ಋಷೀಣಾಂ ಕೋಟಿರಾಯಾತಾ ದಕ್ಷಿಣಾಪಥವಾಸಿನಾಂ ॥ ೪೭ ॥

---

೪೧. ಅವನು ಹೀಗೆನ್ನಲು ಮಿತಿಯಿಲ್ಲದ ಆ ಕಪಾಲಗಳೆಲ್ಲ ಅದೃಶ್ಯವಾದುವು.

೪೨. ಅನಂತರ ಸಂತೋಷಗೊಂಡ ಚತುರ್ಮುಖನು ಕೂಡಲೆ ಕಪಾಲೇಶ್ವರ ವೆಂಬ ಮಹೇಶ್ವರ ಲಿಂಗವನ್ನು ಪ್ರತಿಷ್ಠೆಮಾಡಿದನು.

೪೩. ಮತ್ತು ಹೀಗೆಂದನು. "ನಾನು ನಿರ್ಮಿಸಿರುವ ಮೂರು ಕುಂಡಗಳಲ್ಲಿ ಮಿಂದು ಈ ಕಪಾಲೇಶ್ವರ ಲಿಂಗವನ್ನು ದರ್ಶನ ಮಾಡಿದವನು ಉತ್ತಮ ಗತಿಯನ್ನು ಪಡೆಯುವನು.

೪೪. ಕಾರ್ತಿಕ ಶುಕ್ಲ ಚತುರ್ದಶೀ ದಿನ ಈ ಲಿಂಗದ ಮುಂದೆ ಜಾಗರಣೆ ಮಾಡಿದವನು ಹುಟ್ಟಿದ ಮೊದಲ್ಗೊಂಡು ಮಾಡಿದ ಪಾಪಗಳಿಂದ ಮುಕ್ತನಾಗುವನು."

೪೫. ಬ್ರಹ್ಮನು ಹೀಗೆನ್ನಲು ಮಹೇಶ್ವರನು ಸಂತೋಷಗೊಂಡವನಾಗಿ ಯಜ್ಞಮಂಡಪವನ್ನು ಹೊಂದಿ ವೇದಿಯ ಹತ್ತಿರ ಹೊರಟನು.

೪೬. ಅನಂತರ ಆಶ್ಚರ್ಯಗೊಂಡ ಬ್ರಾಹ್ಮಣರು ಶಂಕರನನ್ನು ವಂದಿಸಿ ಯಜ್ಞಕಾರ್ಯವನ್ನಾರಂಭಿಸಿದರು.

೪೭–೪೯. ಸೂತನು ಹೇಳುತ್ತಾನೆ:—ಹೀಗೆ ಬ್ರಹ್ಮನು ಯಾಗ ಮಾಡುತ್ತಿರಲು ಅದನ್ನು ಕೇಳಿ ಕುತೂಹಲಗೊಂಡ ದಕ್ಷಿಣಾಪಥವಾಸಿಗಳಾದ ಕೋಟಿ

ಶ್ರುತ್ವಾ ಪ್ರೈತಾಮಹಂ ಯಜ್ಞಂ ಕೌತುಕೇನ ಸಮನ್ವಿತಾಃ ।
ಕೀದೃಶೋ ಭವಿತಾ ಯಜ್ಞೋ ದೀಕ್ಷಿತೋ ಯತ್ರ ಪದ್ಮಜಃ ॥ ೪೮ ॥
ಕೀದೃಕ್ಷೇತ್ರಂ ಚ ತತ್ಪುಣ್ಯಂ ಹಾಟಕೇಶ್ವರಸಂಜ್ಞಿತಂ ।
ಕೀದೃಶಾಸ್ತೇ ಚ ವಿಪ್ರೇಂದ್ರಾ ಋತ್ವಿಜಸ್ತತ್ರ ಯೇ ಸ್ಥಿತಾಃ ॥ ೪೯ ॥
ಅಥ ತೇ ಸುಪರಿಶ್ರಾಂತಾ ಮಧ್ಯಂದಿನಗತೇ ರವೌ ।
ರವಿವಾರೇಣ ಸಂಪ್ರಾಪ್ತೇ ನಕ್ಷತ್ರೇ ಚಾಽಶ್ವಿಸಂಸ್ಥಿತೇ ॥ ೫೦ ॥
ವೈವಸ್ವತ್ಯಾಂ ತಿಥೌ ಚೈವ ಸಂಪ್ರಾಪ್ತಾ ಘರ್ಮಪೀಡಿತಾಃ ।
ಕಂಚಿಜ್ಜಲಾಶಯಂ ಪ್ರಾಪ್ಯ ಪ್ರವಿಷ್ಟಾಃ ಸಲಿಲಂ ಶುಭಂ ॥ ೫೧ ॥
ಶಂಕುಕರ್ಣಾ ಮಹಾಕರ್ಣಾ ವಕ್ರನಾಸಾಸ್ತಥಾಽಪರೇ ।
ಮಹೋದರಾ ಬೃಹದ್ದಂತಾ ದೀರ್ಘೋಷ್ಠಾಃ ಸ್ಥೂಲಮಸ್ತಕಾಃ ॥ ೫೨ ॥
ಚಿಪಿಟಾಕ್ಷಾಸ್ತಥಾಚಾಽನ್ಯೇ ದೀರ್ಘಗ್ರೀವಾಸ್ತಥಾಪರೇ ।
ಕೃಷ್ಣಾಂಗಾಃ ಸ್ಫುಟಿತೈಃ ಪಾದೈರ್ನಖೈರ್ದೀರ್ಘೈಃ ಸಮುತ್ಥಿತೈಃ ॥ ೫೩ ॥
ತತೋ ಯಾವದ್ವಿನಿಷ್ಕ್ರಾಂತಾಃ ಪ್ರಪಶ್ಯಂತಿ ಪರಸ್ಪರಂ ।
ತಾವದ್ವೈರೂಪ್ಯ ನಿರ್ಮುಕ್ತಾಃ ಸಂಜಾತಾಃ ಕಾಮಸನ್ನಿಭಾಃ ॥ ೫೪ ॥

---

ಮುಂದಿ ಮುನಿಗಳು ಬ್ರಹ್ಮನು ದೀಕ್ಷೆಗೊಂಡ ಯಜ್ಞವು ಹೇಗಿರುವುದು? ಪುಣ್ಯಕರವಾದ ಆ ಹಾಟಕೇಶ್ವರಕ್ಷೇತ್ರವು ಎಂತಹದು? ಅಲ್ಲಿ ಪುರೋಹಿತರಾದ ಬ್ರಾಹ್ಮಣರು ಹೇಗಿರುವರು? ಎಂದು ತಿಳಿಯಲು ಅಲ್ಲಿಗೆ ಬಂದರು.

೫೦–೫೧. ತರುವಾಯ ಸೂರ್ಯನು ಆಕಾಶಮಧ್ಯವನ್ನು ಏರಿ ಮಧ್ಯಾಹ್ನವಾಗಲು ಉಷ್ಣದಿಂದ ಅತಿಯಾಗಿ ಬಳಲಿದ ಆ ಮುನಿಗಳು ಭಾನುವಾರ, ಅಶ್ವಿನೀ ನಕ್ಷತ್ರ, ಯಮ ತಿಥಿಗಳು ಒಟ್ಟಿಗೆ ಸೇರಿರಲು ಒಂದು ರಮ್ಯವಾದ ನೀರುಳ್ಳ ಕೆರೆಯನ್ನು ಪ್ರವೇಶಿಸಿದರು.

೫೨–೫೪. ಶಂಕುವಿನಂತೆ ಕಿವಿಯುಳ್ಳವರೂ, ದೊಡ್ಡ ಕಿವಿಯುಳ್ಳವರೂ, ವಕ್ರವಾದ ಮೂಗುಳ್ಳವರೂ, ದೊಡ್ಡಹೊಟ್ಟೆ ಹಲ್ಲುಗಳುಳ್ಳವರೂ, ಉದ್ದವಾದ ತುಟಿಯುಳ್ಳವರೂ, ದಪ್ಪವಾದ ತಲೆಯುಳ್ಳವರೂ, ಚಪ್ಪಟೆ ಕಣ್ಣುಳ್ಳವರೂ ಆದ ಕೆಲವರೂ, ಉದ್ದವಾದ ಕುತ್ತಿಗೆಯುಳ್ಳವರೂ, ಕೃಷ್ಣಾವಯವಗಳುಳ್ಳವರೂ, ಒಡೆದ ಕಾಲುಗಳುಳ್ಳವರೂ, ಉದ್ದವಾದ ಉಗುರುಗಳುಳ್ಳವರೂ ಆದ ಇನ್ನು ಕೆಲವರೂ ಆ ಸರೋವರದಿಂದ ಮೇಲಕ್ಕೆದ್ದು ಅನ್ಯೋನ್ಯವಾಗಿ ನೋಡುವಷ್ಟರಲ್ಲಿ ತಮ್ಮ ವಿಕಾರ ರೂಪವನ್ನು ತ್ಯಜಿಸಿ ಮನ್ಮಥರಂತೆ ಆಗಿದ್ದರು.

**ತತೋ ವಿಸ್ಮಯಮಾಪನ್ನಾ ಮಿಥಃ ಪ್ರೋಚುಃ ಪ್ರಹರ್ಷಿತಾಃ ।**
**ರೂಪವ್ಯತ್ಯಯಮಾಲೋಕ್ಯ ಜ್ಞಾತ್ವಾ ತೀರ್ಥಂ ತದುತ್ತಮಂ ।**
**ಅತ್ರ ಸ್ನಾನಾದಿದಂ ರೂಪಮಸ್ಮಾಭಿಃ ಪ್ರಾಪ್ತಮುತ್ತಮಂ ॥ ೫೫ ॥**
**ಯಸ್ಮಾತ್ತಸ್ಮಾದಿದಂ ತೀರ್ಥಂ ರೂಪತೀರ್ಥಂ ಭವಿಷ್ಯತಿ ।**
**ತ್ರೈಲೋಕ್ಯೇ ಸಕಲೇ ಖ್ಯಾತಂ ಸರ್ವಪಾತಕನಾಶನಂ ॥ ೫೬ ॥**
**ಯೇಽತ್ರ ಸ್ನಾನಂ ಕರಿಷ್ಯಂತಿ ಶ್ರದ್ಧಯಾ ಪರಯಾ ಯುತಾಃ ।**
**ಸುರೂಪಾಸ್ತೇ ಭವಿಷ್ಯಂತಿ ಸದಾ ಜನ್ಮನಿ ಜನ್ಮನಿ ॥ ೫೭ ॥**
**ಪಿತ್ರೂಂಶ್ಚ ತರ್ಪಯಿಷ್ಯಂತಿ ಯೇಽತ್ರ ಶ್ರದ್ಧಾಸಮನ್ವಿತಾಃ ।**
**ಜಲೇನಾಽಪಿ ಗಯಾ ಶ್ರಾದ್ಧಾತ್ತೇ ಲಪ್ಸ್ಯಂತೇಽಧಿಕಂ ಫಲಂ ॥ ೫೮ ॥**
**ಯೇಽತ್ರ ರತ್ನಪ್ರದಾನಂ ಚ ಪ್ರಕರಿಷ್ಯಂತಿ ಮಾನವಾಃ ।**
**ಭವಿಷ್ಯಂತಿ ನ ಸಂದೇಹೋ ರಾಜಾನಸ್ತೇ ಭವೇ ಭವೇ ॥ ೫೯ ॥**
**ಸ್ಥಾಸ್ಯಾಮೋ ವಯಮತ್ರೈವ ಸಾಂಪ್ರತಂ ಕೃತನಿಶ್ಚಯಾಃ ।**
**ನ ಯಾಸ್ಯಾಮೋ ವಯಂ ತೀರ್ಥಂ ಯದ್ಯಪಿ ಸ್ಯಾತ್ಸುಶೋಭನಂ ॥ ೬೦ ॥**
**ಏವಮುಕ್ತ್ವಾಽಥ ವಿಭಜಂಸ್ತತ್ಸರ್ವಂ ಮುನಯಶ್ಚ ತೇ ।**
**ಯಜ್ಞೋಪವೀತಮಾತ್ರಾಣಿ ಸ್ವಾನಿ ತೀರ್ಥಾನಿ ಚಕ್ರಿರೇ ॥ ೬೧ ॥**

---

೫೫–೫೬. ಅನಂತರ ಅವರು ತಮ್ಮ ರೂಪವು ವ್ಯತ್ಯಾಸವಾದುದನ್ನು ನೋಡಿ ಆಶ್ಚರ್ಯಗೊಂಡವರಾಗಿ ಅದು ಉತ್ತಮ ತೀರ್ಥವೆಂದರಿತು ಸಂತೋಷದಿಂದ ಪರಸ್ಪರವಾಗಿ ಹೀಗೆಂದರು. "ನಾವಿಲ್ಲಿ ಸ್ನಾನಮಾಡಿದ್ದರಿಂದ ಉತ್ತಮ ರೂಪವನ್ನು ಹೊಂದಿದ ಕಾರಣ ಇದು ಮೂರು ಲೋಕಗಳಲ್ಲಿಯೂ ಸಕಲ ಪಾಪಗಳನ್ನು ನೀಗಿಸುವ ರೂಪತೀರ್ಥವೆಂದು ವಿಖ್ಯಾತವಾಗುವುದು.

೫೭. ಇಲ್ಲಿ ಅತ್ಯಂತ ಶ್ರದ್ಧೆಯಿಂದ ಮಿಂದವರು ಪ್ರತಿ ಜನ್ಮದಲ್ಲಿಯೂ ಸುಂದರರಾಗುವರು.

೫೮. ಇಲ್ಲಿ ನೀರಿನಿಂದಲೇ ಶ್ರದ್ಧೆಯಿಂದ ಪಿತೃಗಳಿಗೆ ತರ್ಪಣ ಮಾಡಿದವರು ಗಯಾ ಶ್ರಾದ್ಧಕ್ಕಿಂತ ಅಧಿಕ ಫಲವನ್ನು ಪಡೆಯುವರು.

೫೯. ಇಲ್ಲಿ ರತ್ನವನ್ನು ದಾನಮಾಡಿದವರು ಪ್ರತಿ ಜನ್ಮದಲ್ಲಿಯೂ ರಾಜರಾಗುವರು.

೬೦. ಈಗ ನಾವು ಇನ್ನೊಂದು ಉತ್ತಮ ತೀರ್ಥವು ದೊರಕಿದರೂ ಇಲ್ಲಿಂದ ಹೊರಡುವುದಿಲ್ಲವೆಂದು ನಿರ್ಣಯಿಸಿ ಇಲ್ಲಿಯೇ ಇರೋಣ."

೬೧. ಆ ಮುನಿಗಳು ಹೀಗೆ ಹೇಳಿ ಆ ತೀರ್ಥವನ್ನು ವಿಭಾಗಿಸಿ ಯಜ್ಞೋಪವೀತದ ಪರಿಮಾಣದಷ್ಟು ತಮ್ಮ ತೀರ್ಥಗಳನ್ನು ಕಲ್ಪಿಸಿಕೊಂಡರು.

**ಸೂತ ಉವಾಚ :—**

**ಅದ್ಯಾಪಿ ಚ ದ್ವಿಜಶ್ರೇಷ್ಠಾಸ್ತತ್ರ ತೀರ್ಥೇ ಜಗದ್ಗುರುಃ ।**
**ಪ್ರಥಮಂ ಸ್ಪೃಶತೇ ತೋಯಂ ನಿತ್ಯಂ ಸ್ವಾದ್ವಯಿತಂ ಶುಭಂ ॥ ೬೨ ॥**
**ನಿಷ್ಕಾಮಸ್ತು ಪುನರ್ಮರ್ತ್ಯೋ ಯಃ ಸ್ನಾನಂ ತತ್ರ ಶ್ರದ್ಧಯಾ ।**
**ಕುರುತೇ ಸ ಪರಂ ಶ್ರೇಯಃ ಪ್ರಾಪ್ನುಯಾತ್ಸಿದ್ಧಿಲಕ್ಷಣಂ ॥ ೬೩ ॥**
**ಏವಂ ತೇ ಮುನಯಃ ಸರ್ವೇ ವಿಭಜ್ಯ ತನ್ಮಹತ್ಸರಃ ।**
**ಸಾಯಂತನಂ ಚ ತತ್ರೈವ ಕೃತ್ವಾ ಕರ್ಮ ಸುವಿಸ್ತರಂ ॥ ೬೪ ॥**
**ತತೋ ನಿಶಾಮುಖೇ ಪ್ರಾಪ್ತಾ ಯತ್ರ ದೇವಃ ಪಿತಾಮಹಃ ।**
**ದೀಕ್ಷಿತಸ್ತ್ವಥ ಮೌನೀ ಚ ಯಜ್ಞಮಂಡಪಸಂಶ್ರಿತಃ ॥ ೬೫ ॥**
**ತಂ ಪ್ರಣಮ್ಯ ತತಃ ಸರ್ವೇ ಗತಾ ಯತ್ರರ್ತ್ವಿಜಃ ಸ್ಥಿತಾಃ ।**
**ಉಪವಿಷ್ಟಾಃ ಪರಿಶ್ರಾಂತಾ ದಿವಾ ಯಜ್ಞೀಯಕರ್ಮಣಾ ॥ ೬೬ ॥**
**ಇಂದ್ರಾದಿಕೈಃ ಸುರೈರ್ಭಕ್ತ್ಯಾ ಮೃದ್ಯಮಾನಾಂಘ್ರಯಃ ಸ್ಥಿತಾಃ ।**
**ಅಭಿವಾದ್ಯಾಽಥ ತಾನ್ ಸರ್ವಾನುಪವಿಷ್ಟಾಸ್ತತೋಽಗ್ರತಃ ॥ ೬೭ ॥**
**ಚಕ್ರುಶ್ಚಾಽಥ ಕಥಾಶ್ಚಿತ್ರಾ ಯಜ್ಞಕರ್ಮಸಮುದ್ಭವಾಃ ।**
**ಸೋಮಪಾನಸ್ಯ ಸಂಬಂಧೋ ವ್ಯತ್ಯಯಂ ಚ ಸಮುದ್ಭವಮ್ ॥ ೬೮ ॥**
**ಉದ್ಗಾತುಃ ಪ್ರಭವಂ ಚೈವ ತಥಾಽಧ್ವರ್ಯೋಃ ಪರಸ್ಪರಂ ।**
**ಪ್ರೋಚುಸ್ತೇ ತತ್ವಮಾಶ್ರಿತ್ಯ ತಥಾಽನ್ಯೇ ದೂಷಯಂತಿ ತತ್ ॥ ೬೯ ॥**

---

೬೨. ಸೂತನು ಹೇಳುತ್ತಾನೆ:—ಈಗಲೂ ಆ ತೀರ್ಥದಲ್ಲಿ ಮೊದಲು ಜಗದ್ಗುರುವು ಶುಭ ಸಲಿಲವನ್ನು ಸ್ಪರ್ಶಮಾಡುವನು.

೬೩. ನಿಷ್ಕಾಮನಾದ ಮಾನವನು ಅಲ್ಲಿ ಶ್ರದ್ಧೆಯಿಂದ ಮಿಂದರೆ ಸಿದ್ಧಿರೂಪವಾದ ಉತ್ತಮ ಶ್ರೇಯಸ್ಸನ್ನು ಹೊಂದುವನು.

೬೪—೬೫. ಹೀಗೆ ಆ ಮುನಿಗಳೆಲ್ಲ ಆ ಮಹಾ ಸರೋವರವನ್ನು ವಿಭಾಗಿಸಿ ಸಾಯಂಕಾಲದ ಕರ್ಮವನ್ನು ವಿಸ್ತಾರವಾಗಿ ಮಾಡಿ ರಾತ್ರಿಯ ಆರಂಭದಲ್ಲಿ ದೀಕ್ಷಿತನೂ, ಮೌನಿಯೂ, ಯಜ್ಞಶಾಲೆಯಲ್ಲಿರುವವನೂ ಆದ ಬ್ರಹ್ಮನೆಡೆಗೆ ಹೋದರು.

೬೬—೬೭. ಆ ಮುನಿಗಳು ಬ್ರಹ್ಮನನು ವಂದಿಸಿ ಯಜ್ಞಕರ್ಮದಿಂದ ಬಳಲಿ ಕುಳಿತಿರುವವರೂ, ಇಂದ್ರಾದಿ ದೇವತೆಗಳಿಂದ ಭಕ್ತಿಯಿಂದ ಒತ್ತಲ್ಪಡುತ್ತಿರುವ ಪಾದಗಳುಳ್ಳವರೂ ಆದ ಋತ್ವಿಜರನ್ನು ನಮಸ್ಕರಿಸಿ ಅವರ ಮುಂದೆ ಕುಳಿತುಕೊಂಡರು.

೬೮—೬೯. ಅನಂತರ ಅವರು ಯಜ್ಞಸಂಬಂಧವಾದ ಸೋಮಪಾನ, ಉದ್ಗಾತನ ವಿನಿಮಯ, ಅಧ್ವರ್ಯುಗಳ ಪರಸ್ಪರ ವ್ಯತ್ಯಾಸ ಇವುಗಳ ವಿಷಯದಲ್ಲಿ ಯಥಾಸ್ಥಿತಿಯನ್ನವಲಂಬಿಸಿ ಮಾತನಾಡಿದರು. ಇತರರು ಅದನ್ನು ದೂಷಿಸಿದರು.

ಅನ್ಯೇ ಮೀಮಾಂಸಕಾಸ್ತತ್ರ ಕೋಪಸಂರಕ್ತಲೋಚನಾಃ ।
ಹನ್ಯುಸ್ತೇಷಾಂ ಮತಂ ವಾದಮಾಶ್ರಿತಾ ವಾಗ್ವಿಚಕ್ಷಣಾಃ ॥ ೭೦ ॥
ಪರಿಶಿಷ್ಟವಿದಶ್ಚಾಽನ್ಯೇ ಮಧ್ಯಸ್ಥಾ ದ್ವಿಜಸತ್ತಮಾಃ ।
ಪ್ರೋಚುರ್ವಾದಂ ಪರಿತ್ಯಜ್ಯ ಸಾಭಿಪ್ರಾಯಂ ಯಥೋದಿತಂ ॥ ೭೧ ॥
ಮಹಾವೀರ ಪುರೋಡಾಶ ಚಯನ ಪ್ರಮುಖಾಂಸ್ತಥಾ ।
ವಿವಾದಾಂಶ್ಚಕ್ರಿರೇ ಚಾಽನ್ಯೇ ಸ್ವಂ ಸ್ವಂ ಪಕ್ಷಂ ಸಮಾಶ್ರಿತಾಃ ॥ ೭೨ ॥
ಏವಂ ಸಾ ರಜನೀ ತೇಷಾಮತಿಕ್ರಾಂತಾ ದ್ವಿಜನ್ಮನಾಂ ॥ ೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪ್ರಥಮಯಜ್ಞದಿವಸವೃತ್ತಾಂತವರ್ಣನಂ"
ನಾಮ ದ್ವ್ಯಶೀತ್ಯುತ್ತರಶತತಮೋಽಧ್ಯಾಯಃ

---

೭೦. ಇನ್ನೂ ವಾಗ್ಮಿಗಳಾದ ಇತರ ಮೀಮಾಂಸಕರು ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ವಾದಮಾರ್ಗವನ್ನವಲಂಬಿಸಿ ಅವರ ಮತವನ್ನು ನಿರಾಕರಿಸಿದರು.

೭೧. ಪರಿಶಿಷ್ಟವನ್ನರಿತ ಇತರ ಮಧ್ಯಸ್ಥರು ವಾದವನ್ನು ತೊರೆದು ಶಾಸ್ತ್ರದಲ್ಲಿ ಹೇಳಿದಂತೆ ಸಾಭಿಪ್ರಾಯಸೂಚಕವಾಗಿ ಮಾತನಾಡಿದರು.

೭೨. ಮತ್ತೆ ಕೆಲವರು ಮಹಾವೀರ, ಪುರೋಡಾಶ, ಚಯನ ಮೊದಲಾದವುಗಳಲ್ಲಿ ತಮ್ಮ ತಮ್ಮ ಪಕ್ಷವನ್ನಾಶ್ರಯಿಸಿ ವಿವಾದ ಮಾಡಿದರು.

೭೩. ಹೀಗೆ ಆ ಬ್ರಾಹ್ಮಣರಿಗೆ ರಾತ್ರಿಯು ಕಳೆಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪ್ರಥಮಯಜ್ಞದಿವಸವೃತ್ತಾಂತವರ್ಣನ"ವೆಂಬ
ನೂರೆಂಬತ್ತೆರಡನೆಯ ಅಧ್ಯಾಯವು ಮುಗಿದುದು

# ಅಥ ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

## ನಾಗತೀರ್ಥೋತ್ಪತ್ತಿಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ದ್ವಿತೀಯೇ ದಿವಸೇ ಪ್ರಾಪ್ತೇ ಯಜ್ಞಕರ್ಮ ಸಮುದ್ಭವೇ ।**
**ದ್ವಾದಶ್ಯಾಮಭವತ್ತತ್ರ ಶೃಣುಧ್ವಂ ತದ್ದ್ವಿಜೋತ್ತಮಾಃ ।**
**ವೃತ್ತಾಂತಂ ಸರ್ವದೇವಾನಾಂ ಮಹಾವಿಸ್ಮಯಕಾರಕಂ** ॥ ೧ ॥
**ಮಖಕರ್ಮಣಿ ಪ್ರಾರಬ್ಧ ಋತ್ವಿಗ್ಭಿರ್ವೇದಪಾರಗೈಃ ।**
**ಜಲಸರ್ಪಂ ಸಮಾದಾಯ ವಟುಃ ಕಶ್ಚಿತ್ಸ ನರ್ಮಕೃತ್** ॥ ೨ ॥
**ಪ್ರವಿಶ್ಯಾಽಥ ಸದಸ್ತತ್ರ ತಂ ಸರ್ಪಂ ಬ್ರಾಹ್ಮಣಾಂತಿಕೇ ।**
**ಚಿಕ್ಷೇಪ ಪ್ರಹಸಂಶ್ಚೈವ ಸರ್ವದುಃಖಭಯಂಕರಂ** ॥ ೩ ॥
**ತತಸ್ತು ಡುಂಡುಭಸ್ತೂರ್ಣಂ ಭ್ರಮಮಾಣ ಇತಸ್ತತಃ ।**
**ವಿಪ್ರಾಣಾಂ ಸದಸಿಸ್ಥಾನಾಂ ಸಕ್ತಾನಾಂ ಯಜ್ಞಕರ್ಮಣಿ** ॥ ೪ ॥
**ಅಹೋ ಹೋತುಃ ಸ್ಥಿತೇ ಪ್ರೈಷೇ ದೀರ್ಘಸತ್ರ ಸಮುದ್ಭವೇ ।**
**ಸ ಸರ್ಪೋ ವೇಷ್ಟಯಾಮಾಸ ತಸ್ಯ ಗಾತ್ರಂ ಸಮಂತತಃ** ॥ ೫ ॥

---

## ಕನ್ನಡದ ಅನುವಾದ

### ನಾಗತೀರ್ಥೋತ್ಪತ್ತಿಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ದ್ವಾದಶೀ ದಿನ ಎರಡನೆಯ ದಿವಸದ ಯಜ್ಞಕಾರ್ಯವು ಆರಂಭವಾಗಲು ಅಲ್ಲಿ ಸಕಲ ದೇವತೆಗಳಿಗೂ ಆಶ್ಚರ್ಯವನ್ನುಂಟುಮಾಡುವ ವೃತ್ತಾಂತವೊಂದು ಸಂಭವಿಸಿತು; ಅದನ್ನು ಕೇಳಿರಿ.

೨-೩. ವೇದಪಾರಂಗತರಾದ ಋತ್ವಿಜರು ಯಜ್ಞಕರ್ಮವನ್ನಾರಂಭಿಸಲು ಒಬ್ಬ ಹುಡುಗನು ನೀರಿನ ಹಾವನ್ನು ತಗೆದುಕೊಂಡು ಆಡುತ್ತ ಆ ಸದಸ್ಸನ್ನು ಪ್ರವೇಶಿಸಿ ನಗುತ್ತ ಭಯಂಕರವಾದ ಆ ಸರ್ಪವನ್ನು ಬ್ರಾಹ್ಮಣರ ಬಳಿ ಎಸೆದನು.

೪-೫. ಅನಂತರ ಆ ಹಾವು ಇಲ್ಲಿ ಅಲ್ಲಿ ಸುತ್ತುತ್ತ ಯಜ್ಞಕರ್ಮದಲ್ಲಿ ಆಸಕ್ತರಾದ ಸದಸ್ಸಿನಲ್ಲಿರುವ ಬ್ರಾಹ್ಮಣರ ಮಧ್ಯದಲ್ಲಿ ದೀರ್ಘಸತ್ರ ಸಂಬಂಧವಾದ ಪ್ರೈಷಕರ್ಮವು ನಡೆಯುತ್ತಿರಲು ಹೋತೃವಿನ ಶರೀರವನ್ನು ಸುತ್ತಿಕೊಂಡಿತು.

ನ ಚಚಾಲ ನಿಜಸ್ಥಾನಾತ್ಪ್ರಾಯಶ್ಚಿತ್ತವಿಭೀಷಯಾ ।
ನೋವಾಚ ವಚನಂ ಸೋಽತ್ರ ಚಯನನ್ಯಸ್ತಲೋಚನಃ ॥ ೬ ॥
ಹಾಹಾಕಾರೋ ಮಹಾಂಜಜ್ಞೇ ಏತಸ್ಮಿನ್ನಂತರೇ ದ್ವಿಜಾಃ ।
ತಸ್ಮಿನ್ ಸದಸಿ ವಿಪ್ರಾಣಾಂ ವಿಷಾಢ್ಯಾಹಿ ಪ್ರಶಂಕಯಾ ॥ ೭ ॥
ಹಾಹಾಕಾರೋ ಮಹಾನಾಸೀತ್ತಂ ದೃಷ್ಟ್ವಾ ಸರ್ಪವೇಷ್ಟಿತಂ ।
ತಸ್ಯ ಪುತ್ರೋ ವಿನೀತಾತ್ಮಾ ಮೈತ್ರಾವರುಣಕರ್ಮಣಿ ॥ ೮ ॥
ಸಂಸ್ಥಿತಸ್ತೇನ ಸಂದೃಷ್ಟಃ ಪಿತಾಸರ್ಪಾಭಿವೇಷ್ಟಿತಃ ।
ಜ್ಞಾತ್ವಾ ತು ಚೇಷ್ಟಿತಂ ತಸ್ಯ ಭಯೇ ಸರ್ಪಸಮುದ್ಭವೇ ।
ಶಶಾಪ ಕ್ರೋಧಸಂಯುಕ್ತಸ್ತತಸ್ತಂ ಸ ಬಟುಂ ಮುನಿಃ ॥ ೯ ॥
ಯಸ್ಮಾತ್ಪಾಪ ತ್ವಯಾ ಸರ್ಪಃ ಕ್ಷಿಪ್ತಃ ಸದಸಿ ದುರ್ಮತೇ ।
ತಸ್ಮಾದ್ಭವ ದ್ರುತಂ ಸರ್ಪೋ ಮಮ ವಾಕ್ಯಾದಸಂಶಯಂ ॥ ೧೦ ॥

ಬಟುರುವಾಚ :—

ಹಾಸ್ಯೇನ ಜಲಸರ್ಪೋಽಯಂ ಮಯಾ ಮುಕ್ತೋಽತ್ರ ಲೀಲಯಾ ।
ನ ತೇ ತಾತಂ ಸಮುದ್ದಿಶ್ಯ ತತ್ಕಿಂ ಮಾಂ ಶಪಸಿ ದ್ವಿಜ ॥ ೧೧ ॥
ಏತಸ್ಮಿನ್ನಂತರೇ ಮುಕ್ತ್ವಾ ತಸ್ಯ ಗಾತ್ರಂ ಸ ಪನ್ನಗಃ ।
ಜಗಾಮಾಽನ್ಯತ್ರ ತಸ್ಯಾಽಪಿ ಸರ್ಪತ್ವಂ ಸಮಪದ್ಯತ ॥ ೧೨ ॥

---

೬. ಆಗ ಹೋತೃವು ಪ್ರಾಯಶ್ಚಿತ್ತದ ಭಯದಿಂದ ತನ್ನ ಸ್ಥಾನದಿಂದ ಚಲಿಸಲಿಲ್ಲ. ಚಯನವನ್ನು ನೋಡುತ್ತ ಮಾತನಾಡಲಿಲ್ಲ.

೭. ಈ ಸಮಯದಲ್ಲಿ ಸದಸ್ಸಿನಲ್ಲಿರುವ ಬ್ರಾಹ್ಮಣರು ಅದು ವಿಷದ ಸರ್ಪವೆಂದು ತಿಳಿದು ಹಾಹಾಕಾರಗೈದರು.

೮–೯. ಹೀಗೆ ಹಾಹಾಕಾರವುಂಟಾಗಲು ಮೈತ್ರಾವರುಣಕಾರ್ಯದಲ್ಲಿ ನಿರತನಾದ ಅವನ ಮಗನು ಸರ್ಪವೇಷ್ಟಿತನಾದ ತಂದೆಯನ್ನು ನೋಡಿ ಆ ಸರ್ಪದ ಚೇಷ್ಟೆಯನ್ನರಿತು ಕೋಪದಿಂದ ಆ ಬಾಲಕನಿಗೆ ಹೀಗೆ ಶಾಪ ಕೊಟ್ಟನು.

೧೦. "ಪಾಪಿಯೆ! ನೀನು ಸದಸ್ಸಿನಲ್ಲಿ ಸರ್ಪವನ್ನು ಬಿಸುಟಿದುದರಿಂದ ನನ್ನ ಮಾತಿನಿಂದ ನೀನು ನಿಶ್ಚಯವಾಗಿಯೂ ಸರ್ಪವಾಗುವೆ."

೧೧. ವಟುವು ಹೇಳುತ್ತಾನೆ:—ದ್ವಿಜನೆ! ನಾನು ಹಾಸ್ಯಾರ್ಥವಾಗಿ ನೀರಿನ ಹಾವನ್ನು ಸಭೆಯಲ್ಲಿ ಎಸೆದೆನು. ನಿನ್ನ ತಂದೆಗೆ ಎಸೆಯಲಿಲ್ಲ. ಏತಕ್ಕೆ ನನ್ನನ್ನು ಶಪಿಸುವೆ?

೧೨. ಇಷ್ಟರಲ್ಲಿ ಆ ಹಾವು ಅವನ ಶರೀರವನ್ನು ತ್ಯಜಿಸಿ ಬೇರೆ ಕಡೆಗೆ ಹೋಯಿತು. ಆ ಬಾಲಕನೂ ಸರ್ಪನಾದನು.

ಸೋಽಪಿ ಸರ್ಪತ್ವಮಾಪನ್ನಃ ಸನಾತನಸುತೋ ಬಟುಃ ।
ದುಃಖಶೋಕಸಮಾಪನ್ನೋ ಬ್ರಾಹ್ಮಣೈಃ ಪರಿವೇಷ್ಟಿತಃ ॥ ೧೩ ॥
ಅಥ ಗತ್ವಾ ಭೃಗುಂ ಸೋಽಪಿ ಬಾಷ್ಪವ್ಯಾಕುಲಲೋಚನಃ ।
ಪ್ರೋವಾಚ ಗದ್ಗದಂ ವಾಕ್ಯಂ ಪ್ರಣಿಪತ್ಯ ಪುರಸ್ಸರಃ ॥ ೧೪ ॥
ಸನಾತನಸುತಶ್ಚಾಽಸ್ಮಿ ಪೌತ್ರಸ್ತು ಪರಮೇಷ್ಠಿನಃ ।
ಶಪ್ತಸ್ತವ ಸುತೇನಾಽಸ್ಮಿ ಚ್ಯವನೇನ ಮಹಾತ್ಮನಾ ॥ ೧೫ ॥
ನಿರ್ದೋಷೋ ಬ್ರಾಹ್ಮಣಶ್ರೇಷ್ಠ ತಸ್ಮಾಚ್ಛಾಪಾತ್ಪ್ರರಕ್ಷ ಮಾಂ ।
ತಚ್ಛ್ರುತ್ವಾ ಚ್ಯವನಂ ಪ್ರಾಹ ಕೃಪಾವಿಷ್ಟೋ ಭೃಗುಃ ಸ್ವಯಂ ॥ ೧೬ ॥
ಅಯುಕ್ತಂ ವಿಹಿತಂ ತಾತ ಯಚ್ಛಪ್ತೋಽಯಂ ಬಟುಸ್ತ್ವಯಾ ।
ನ ಮಾಂ ಧರ್ಷಯಿತುಂ ಶಕ್ತೋ ವಿಷಾಢ್ಯೋಽಪಿ ಭುಜಂಗಮಃ ॥ ೧೭ ॥
ಕಿಂ ಪುನರ್ಜಲಸರ್ಪೋಽಯಂ ನಿರ್ವಿಷೋ ರಜ್ಜುಸನ್ನಿಭಃ ।
ನ ಮಾಮುದ್ದಿಶ್ಯ ನಿರ್ಮುಕ್ತಃ ಸರ್ಪೋಽನೇನ ದ್ವಿಜನ್ಮನಾ ।
ಶಾಪಮೋಕ್ಷಂ ಕುರುಷ್ವಾಽಸ್ಯ ತಸ್ಮಾಚ್ಛೀಘ್ರಂ ದ್ವಿಜನ್ಮನಃ ॥ ೧೮ ॥

ಚ್ಯವನ ಉವಾಚ :—

ಯದಿ ತ್ಯಜತಿ ಮರ್ಯಾದಾಮಬ್ಧಿಃ ಶೈತ್ಯಂ ತ್ಯಜೇದ್ರವಿಃ ।
ಉಷ್ಣತ್ವಂ ಚ ಕ್ಷಪಾನಾಥಸ್ತನ್ಮೇ ಸ್ಯಾದನೃತಂ ವಚಃ ॥ ೧೯ ॥

---

೧೩. ಸರ್ಪತ್ವವನ್ನು ಹೊಂದಿ ದುಃಖಿತನಾದ ಆ ಸನಾತನನ ಮಗನಾದ ಬಾಲಕನನ್ನು ಬ್ರಾಹ್ಮಣರು ಸುತ್ತಿಕೊಂಡರು.

೧೪. ತರುವಾಯ ಆ ಬಾಲಕನು ಕಣ್ಣೀರನ್ನು ಸುರಿಸುತ್ತ ಭೃಗುಮುನಿಯ ಹತ್ತಿರ ಹೋಗಿ ನಮಸ್ಕರಿಸಿ ಗದ್ಗದ ಧ್ವನಿಯಿಂದ ಇಂತೆಂದನು.

೧೫. "ಸನಾತನನ ಮಗನೂ, ಬ್ರಹ್ಮನ ಮೊಮ್ಮಗನೂ ಆದ ನನ್ನನ್ನು ನಿನ್ನ ಮಗನಾದ ಚ್ಯವನನು ಶಪಿಸಿದ್ದಾನೆ.

೧೬–೧೭. ನಾನು ನಿರ್ದುಷ್ಟನಾಗಿದ್ದೇನೆ. ಆದುದರಿಂದ ನನ್ನನ್ನು ಶಾಪದಿಂದ ರಕ್ಷಿಸು." ಅದನ್ನು ಕೇಳಿ ದಯೆಗೊಂಡ ಭೃಗುವು ಚ್ಯವನನನ್ನು ಕುರಿತು ಹೀಗೆಂದನು. "ಮಗು! ನೀನು ಈ ಬಾಲಕನಿಗೆ ಶಾಪವನ್ನಿತ್ತು ಅಯೋಗ್ಯವಾದ ಕೆಲಸವನ್ನು ಮಾಡಿರುವೆ. ವಿಷಸರ್ಪವೂ ನನ್ನನ್ನು ತೊಂದರೆಗೊಳಿಸಲಾರದು.

೧೮. ವಿಷವಿಲ್ಲದಿರುವುದೂ, ಹಗ್ಗದಂತಿರುವುದೂ ಆದ ನೀರಿನ ಹಾವಿನ ವಿಷಯವೇನ್ನೇನು. ಈ ಬ್ರಾಹ್ಮಣ ಬಾಲಕನು ನನ್ನನ್ನು ಉದ್ದೇಶಿಸಿ ಹಾವನ್ನು ಎಸೆಯಲಿಲ್ಲ. ಆದುದರಿಂದ ಇವನನ್ನು ಶಾಪಮುಕ್ತನನ್ನಾಗಿ ಮಾಡು."

೧೯. ಚ್ಯವನನು ಹೇಳುತ್ತಾನೆ:—ಸಮುದ್ರವು ದಡವನ್ನು ಮೀರಿದರೆ, ಸೂರ್ಯನು ತಣ್ಣಗಾದರೆ, ಚಂದ್ರನು ಬಿಸಿಯಾದರೆ ನನ್ನಮಾತು ಸುಳ್ಳಾದೀತು.

ತಚ್ಛ್ರುತ್ವಾ ವಚನಂ ತಸ್ಯ ಸ್ವಯಮೇವ ಪಿತಾಮಹಃ ।
ತತ್ರಾಯಾತಃ ಸ್ಥಿತೋ ಯತ್ರ ಸ ಪೌತ್ರಃ ಸರ್ಪರೂಪಧೃಕ್ ॥ ೨೦ ॥
ಪ್ರೋವಾಚ ನ ವಿಷಾದಸ್ತೇ ಪುತ್ರ ಕಾರ್ಯಃ ಕಥಂಚನ ।
ಯತ್ಸರ್ಪತ್ವಮನುಪ್ರಾಪ್ತಃ ಶೃಣುಷ್ವಾತ್ರ ವಚೋ ಮಮ ॥ ೨೧ ॥
ಪುರಾ ಸಂಸ್ರಷ್ಟುಕಾಮೋಽಹಂ ನಾಗಾನಾಂ ನವಮಂ ಕುಲಂ ।
ತದ್ಭವಿಷ್ಯತಿ ತ್ವತ್ಪಾರ್ಶ್ವಾತ್ಸಮರ್ಯಾದಂ ಧರಾತಲೇ ॥ ೨೨ ॥
ಮಂತ್ರೌಷಧಿಯುಜಾಂ ಪುಂಸಾಂ ನ ಪೀಡಾಮಾಚರಿಷ್ಯತಿ ।
ಸಂಪ್ರಾಪ್ಸ್ಯತಿ ಪರಾಂ ಪೂಜಾಂ ಸಮಸ್ತೇ ಜಗತೀ ತಲೇ ॥ ೨೩ ॥
ಅತ್ರಾಽಸ್ತಿ ಸುಶುಭಂ ತೋಯಂ ಹಾಟಕೇಶ್ವರಸಂಜ್ಞಿತೇ ।
ಕ್ಷೇತ್ರೇ ತವ ಸಮಾವಾಸಃ ಪುತ್ರ ಕಾರ್ಯಸ್ತ್ವಯಾ ಸದಾ ॥ ೨೪ ॥
ತತ್ರಸ್ಥಸ್ಯ ತಪಃಸ್ಥಸ್ಯ ನಾಗಃ ಕರ್ಕೋಟಕೋ ನಿಜಂ ।
ತವ ದಾಸ್ಯತಿ ಸತ್ಕನ್ಯಾಂ ತತಃ ಸೃಷ್ಟಿರ್ಭವಿಷ್ಯತಿ ॥ ೨೫ ॥
ನವಮಸ್ಯ ಕುಲಸ್ಯಾಽತ್ರ ಸಮರ್ಯಾದಸ್ಯ ಭೂತಲೇ ।
ಶ್ರಾವಣೇ ಕೃಷ್ಣಪಕ್ಷೇ ತು ಸಂಪ್ರಾಪ್ತೇ ಪಂಚಮೀ ದಿನೇ ॥ ೨೬ ॥
ಸಂಪ್ರಾಪ್ಸ್ಯತಿ ಪರಾಂ ಪೂಜಾಂ ಪೃಥಿವ್ಯಾಂ ನವಮಂ ಕುಲಂ ।
ಅದ್ಯ ಪ್ರಭೃತಿ ತತ್ತೋಯಂ ನಾಗತೀರ್ಥಮಿತಿ ಸ್ಮೃತಂ ॥ ೨೭ ॥

---

೨೦–೨೧. ಅವನ ಆ ಮಾತನ್ನು ಕೇಳಿ ಬ್ರಹ್ಮನು ತಾನೇ ಶಾಪದಿಂದ ಸರ್ಪರೂಪವನ್ನು ಹೊಂದಿದ ಮೊಮ್ಮಗನೆಡೆಗೆ ಬಂದು ಇಂತೆಂದನು. "ಮಗು! ನೀನು ಸರ್ಪನಾದ್ದರಿಂದ ವ್ಯಥೆಗೊಳ್ಳಬೇಡ; ಈ ವಿಷಯದಲ್ಲಿ ನನ್ನ ಮಾತನ್ನು ಕೇಳು.

೨೨. ಹಿಂದೆ ನಾನು ನಾಗಗಳ ಒಂಬತ್ತನೆಯ ವಂಶವನ್ನು ಸೃಷ್ಟಿಸಲಿಚ್ಛಿಸಿದ್ದೆನು. ಅದು ಈಗ ನಿನ್ನಿಂದ ಭೂಮಿಯಲ್ಲಿ ಉಂಟಾಗುವುದು.

೨೩. ಮಂತ್ರ, ಔಷಧಿಗಳುಳ್ಳ ಮಾನವರಿಗೆ ಪೀಡೆಯನ್ನುಂಟುಮಾಡಬೇಡ. ಸಮಗ್ರಭೂಮಿಯಲ್ಲಿ ಉತ್ತಮ ಪೂಜೆಯನ್ನು ಪಡೆಯುವೆ.

೨೪. ಇಲ್ಲಿ ಹಾಟಕೇಶ್ವರವೆಂಬ ಕ್ಷೇತ್ರದಲ್ಲಿ ಶುಭಕರವಾದ ಜಲವಿದೆ. ಅಲ್ಲಿ ನೀನು ಯಾವಾಗಲೂ ವಾಸಮಾಡು.

೨೫–೩೧. ಅಲ್ಲಿ ತಪವನ್ನಾಚರಿಸುತ್ತಿರುವ ನಿನಗೆ ಕರ್ಕೋಟಕನು ತನ್ನ ಕನ್ಯೆಯನ್ನು ಕೊಡುವನು. ಅವಳಿಂದ ಭೂಮಂಡಲದಲ್ಲಿ ನಿಯಮದಿಂದ ಸಹಿತವಾದ ಒಂಬತ್ತನೆಯ ವಂಶವು ಸೃಷ್ಟಿಯಾಗುವುದು. ಒಂಬತ್ತನೆಯ ವಂಶವು ಶ್ರಾವಣ ಬಹುಳ ಪಂಚಮೀ ದಿನ ಭೂಮಿಯಲ್ಲಿ ಉತ್ತಮವಾದ ಪೂಜೆಯನ್ನು ಹೊಂದುವುದು. ಇದು ಮೊದಲ್ಗೊಂಡು ಆ ನೀರು ಭೂತಳದಲ್ಲಿ ಸಕಲಪಾಪಗಳನ್ನು ನೀಗಿಸುವ ನಾಗತೀರ್ಥವೆಂದು ಪ್ರಖ್ಯಾತವಾಗುವುದು. ಪಂಚಮೀ ದಿನ

ಖ್ಯಾತಿಂ ಯಾಸ್ಯತಿ ಭೂಪೃಷ್ಠೇ ಸರ್ವಪಾತಕನಾಶನಂ ।
ಯೇಽತ್ರ ಸ್ನಾನಂ ಕರಿಷ್ಯಂತಿ ಸಂಪ್ರಾಪ್ತೇ ಪಂಚಮೀ ದಿನೇ ॥ ೨೮ ॥
ನ ತೇಷಾಂ ವತ್ಸರಂ ಯಾವದ್ಭವಿಷ್ಯತ್ಯಹಿಜಂ ಭಯಂ ।
ವಿಷಾರ್ದಿತಸ್ತು ಯೋ ಮರ್ತ್ಯಸ್ತತ್ರ ಸ್ನಾನಂ ಕರಿಷ್ಯತಿ ॥ ೨೯ ॥
ತತ್ಕ್ಷಣಾನ್ನಿರ್ವಿಷೋ ಭೂತ್ವಾ ಸಂಪ್ರಾಪ್ಸ್ಯತಿ ಪರಂ ಸುಖಂ ।
ಪುತ್ರಕಾಮಾ ತು ಯಾ ನಾರೀ ಪಂಚಮ್ಯಾಂ ಭಾಸ್ಕರೋದಯೇ ॥ ೩೦ ॥
ಕರಿಷ್ಯತಿ ತಥಾ ಸ್ನಾನಂ ಫಲಹಸ್ತಾ ಪ್ರಭಕ್ತಿತಃ ।
ಭವಿಷ್ಯತಿ ಚ ಸಾ ಶೀಘ್ರಂ ವಂಧ್ಯಾಪಿ ಚ ಸುಪುತ್ರಿಣೀ ॥ ೩೧ ॥

ಸೂತ ಉವಾಚ :—

ಏವಂ ಪ್ರವದತಸ್ತಸ್ಯ ಬ್ರಹ್ಮಣೋಽವ್ಯಕ್ತ ಜನ್ಮನಃ ।
ಅನ್ಯೇ ನಾಗಾಃ ಸಮಾಯಾತಾಸ್ತತ್ರ ಯಜ್ಞೇ ನಿಮಂತ್ರಿತಾಃ ॥ ೩೨ ॥
ವಾಸುಕಿಸ್ತಕ್ಷಕಶ್ಚೈವ ಪುಂಡರೀಕಃ ಕೃಶೋದರಃ ।
ಕಂಬಲಾಶ್ವತರೌ ನಾಗೌ ಶೇಷಃ ಕಾಲಿಯ ಏವ ಚ ॥ ೩೩ ॥
ತೇ ಪ್ರಣಮ್ಯ ವಚಃ ಪ್ರೋಚುಃ ಪ್ರೋಚ್ಚೈರ್ದೇವಂ ಪಿತಾಮಹಂ ।
ತವಾದೇಶಾದ್ವಯಂ ಪ್ರಾಪ್ತಾ ಯಜ್ಞೇಽತ್ರ ಪ್ರಪಿತಾಮಹ ॥ ೩೪ ॥
ಸಾಹಾಯ್ಯಾರ್ಥಂ ತದಾದೇಶೋ ದೀಯತಾಂ ಪ್ರಪಿತಾಮಹ ।
ಯೇನ ಸಕುರ್ಮೋ ವಯಂ ಶೀಘ್ರಂ ನಾಗರಾಜ್ಯೇಹ್ಯಧಿಷ್ಠಿತಾಃ ॥ ೩೫ ॥

---

ಇಲ್ಲಿ ಮಿಂದವರಿಗೆ ಒಂದು ವರ್ಷಕಾಲ ಸರ್ಪಭಯವು ಸಂಭವಿಸುವುದಿಲ್ಲ. ವಿಷಪೀಡಿತನಾದ ಮಾನವನು ಅಲ್ಲಿ ಸ್ನಾನಮಾಡಿದರೆ ಕೂಡಲೆ ನಿರ್ವಿಷನಾಗಿ ಅಧಿಕ ಸುಖವನ್ನು ಪಡೆಯುವನು. ಪುತ್ರರನ್ನು ಬಯಸುವ ನಾರಿಯು ಪಂಚಮೀ ದಿನ ಸೂರ್ಯೋದಯ ಕಾಲದಲ್ಲಿ ಕೈಯಲ್ಲಿ ಫಲವನ್ನು ಹಿಡಿದು ಕೊಂಡು ಭಕ್ತಿಯಿಂದ ಇಲ್ಲಿ ಮಿಂದರೆ ಅವಳು ಬಂಜೆಯಾಗಿದ್ದರೂ ಒಳ್ಳೆಯ ಪುತ್ರನುಳ್ಳವಳಾಗುವಳು."

೩೨—೩೩. ಸೂತನು ಹೇಳುತ್ತಾನೆ:—ಅವ್ಯಕ್ತಜನ್ಮನಾದ ಬ್ರಹ್ಮನು ಹೀಗೆ ಹೇಳುತ್ತಿರಲು ಯಜ್ಞಕ್ಕಾಗಿ ನಿಮಂತ್ರಣಮಾಡಲ್ಪಟ್ಟ ವಾಸುಕಿ, ತಕ್ಷಕ, ಪುಂಡರೀಕ, ಕೃಶೋದರ, ಕಂಬಲ, ಅಶ್ವತರ, ಶೇಷ, ಕಾಲಿಯ ನಾಗಗಳು ಅಲ್ಲಿಗೆ ಬಂದುವು.

೩೪—೩೫. ಅವುಗಳು ಪಿತಾಮಹನನ್ನು ವಂದಿಸಿ, "ಚತುರ್ಮುಖ! ನಾವು ನಿನ್ನ ಅಪ್ಪಣೆಯಂತೆ ಯಜ್ಞಕ್ಕೆ ಸಹಾಯಮಾಡಲು ಬಂದಿದ್ದೇವೆ. ನಮಗೆ ಅಪ್ಪಣೆಯನ್ನು ಮಾಡು. ಅದರಿಂದ ನಾವು ತ್ವರೆಯಾಗಿ ಅದನ್ನು ಮಾಡುತ್ತೇವೆ" ಎಂದುವು.

ಬ್ರಹ್ಮೋವಾಚ :—

ಸಾಹಾಯ್ಯಮೇತದಸ್ಮಾಕಂ ಭವದೀಯಂ ಮಹೋರಗಾಃ ।
ಗತ್ವಾಽನೇನ ಸಮಂ ಶೀಘ್ರಂ ನಾಗರಾಜೇನ ತಿಷ್ಠತ ॥ ೩೬ ॥
ನಾಗತೀರ್ಥೇ ತತಃ ಸ್ಥೇಯಂ ಸರ್ವೈಸ್ತತ್ರ ಸಮಾಸ್ಥಿತೈಃ ॥ ೩೭ ॥
ಯಃ ಕಶ್ಚಿನ್ಮಮ ಯಜ್ಞೇಽತ್ರ ದುಷ್ಟಭಾವಂ ಸಮಾಶ್ರಿತಃ ।
ಸಮಾಗಚ್ಛತಿ ವಿಘ್ನಾಯ ರಕ್ಷಣೀಯಃ ಸ ಸತ್ವರಂ ॥ ೩೮ ॥
ರಾಕ್ಷಸೋ ವಾ ಪಿಶಾಚೋ ವಾ ಭೂತೋ ವಾ ಮಾನುಷೋಽಪಿ ವಾ ।
ಏತತ್ಕೃತ್ಯತಮಂ ನಾಗಾ ಮಮ ಯಜ್ಞಸ್ಯ ರಕ್ಷಣಂ ॥ ೩೯ ॥
ತಥಾ ಯೂಯಮಪಿ ಪ್ರಾಪ್ತೇ ಮಾಸಿ ಭಾದ್ರಪದೇ ತಥಾ ।
ಪಂಚಮ್ಯಾಂ ಕೃಷ್ಣಪಕ್ಷಸ್ಯ ತತ್ರ ಪೂಜಾಮವಾಪ್ಸ್ಯಥ ॥ ೪೦ ॥

ಸೂತ ಉವಾಚ :—

ಬಾಢಮಿತ್ಯೇವ ತೇ ಪ್ರೋಚ್ಯ ಪ್ರಣಿಪತ್ಯ ಪಿತಾಮಹಂ ।
ಸನಾತನ ಸುತೋಪೇತಾ ನಾಗತೀರ್ಥಂ ಸಮಾಶ್ರಿತಾಃ ॥ ೪೧ ॥
ತತಃ ಪ್ರಭೃತಿ ತತ್ತೀರ್ಥಂ ನಾಗತೀರ್ಥಮಿತಿ ಸ್ಮೃತಂ ।
ಕಾಮಪ್ರದಂ ಚ ಭಕ್ತಾನಾಂ ನರಾಣಾಂ ಸ್ನಾನಕಾರಿಣಾಂ ॥ ೪೨ ॥
ಯಸ್ತತ್ರ ಕುರುತೇ ಸ್ನಾನಂ ಸಕೃದ್ಭಕ್ತ್ಯಾ ಸಮನ್ವಿತಃ ।
ನಾಽನ್ವಯೇಽಪಿ ಭಯಂ ತಸ್ಯ ಜಾಯತೇ ಸರ್ಪಸಂಭವಂ ॥ ೪೩ ॥

---

೩೬–೩೭. ಬ್ರಹ್ಮನು ಹೇಳುತ್ತಾನೆ:—ಎಲೈ ಸರ್ಪಗಳೆ! ನಿಮ್ಮಿಂದ ನನಗೆ ಈ ಸಹಾಯವಾಗಬೇಕು. ಈ ನಾಗರಾಜನೊಡನೆ ನೀವು ಹೋಗಿ ನಾಗತೀರ್ಥದಲ್ಲಿ ವಾಸಮಾಡಿರಿ.

೩೮–೪೦. ರಾಕ್ಷಸನಾಗಲಿ, ಪಿಶಾಚವಾಗಲಿ, ಭೂತವಾಗಲಿ, ಮನುಷ್ಯನಾಗಲಿ ಯಾರಾದರೂ ದೌಷ್ಟ್ಯವನ್ನು ವಹಿಸಿ ಯಜ್ಞವಿಘ್ನಕ್ಕಾಗಿ ಬಂದರೆ ಅವನನ್ನು ಬೇಗನೆ ತಡೆಯಬೇಕು. ಹಾಗೆಯೇ ನೀವೂ ಭಾದ್ರಪದ ಬಹುಳ ಪಂಚಮೀ ದಿನ ಅಲ್ಲಿ ಪೂಜೆಯನ್ನು ಹೊಂದುವಿರಿ.

೪೧. ಸೂತನು ಹೇಳುತ್ತಾನೆ:—ಆ ನಾಗಗಳು ಹಾಗೆಯೇ ಆಗಲೆಂದು ಹೇಳಿ ಬ್ರಹ್ಮನನ್ನು ವಂದಿಸಿ ಸನಾತನನ ಮಗನೊಡನೆ ನಾಗತೀರ್ಥದಲ್ಲಿ ನೆಲೆಸಿದುವು.

೪೨. ಅದು ಮೊದಲ್ಗೊಂಡು ಆ ತೀರ್ಥವು ಸ್ನಾನವನ್ನು ಮಾಡುವ ಭಕ್ತರಿಗೆ ಇಷ್ಟಾರ್ಥವನ್ನೀಯುವ ನಾಗತೀರ್ಥವೆನ್ನಿಸಿಕೊಂಡಿತು.

೪೩. ಅಲ್ಲಿ ಭಕ್ತಿಯಿಂದ ಮಿಂದವನ ವಂಶದಲ್ಲಿ ಸರ್ಪದ ಭಯವುಂಟಾಗುವುದಿಲ್ಲ.

ತತ್ರ ಯಚ್ಛತಿ ಮಿಷ್ಟಾನ್ನಂ ದ್ವಿಜಾನಾಂ ಸಜ್ಜನೈಃ ಸಹ ।
ಪೂಜಯಿತ್ವಾತು ನಾಗೇಂದ್ರಾನ್ ಸನಾತನಪುರಃಸರಾನ್ ॥ ೪೪ ॥
ಸಪ್ತಜನ್ಮಾಂತರಂ ಯಾವನ್ನ ಸ ದೌಃಸ್ಥ್ಯಮವಾಪ್ನುಯಾತ್ ।
ಭೂತಪ್ರೇತಪಿಶಾಚಾನಾಂ ಶಾಕಿನೀನಾಂ ವಿಶೇಷತಃ ।
ನ ಚ್ಛಿದ್ರಂ ನ ಚ ರೋಗಾಶ್ಚ ನಾಧಯೋ ನ ರಿಪೋರ್ಭಯಂ ॥ ೪೫ ॥
ಯಶ್ಚೈತಚ್ಛೃಣುಯಾದ್ಭಕ್ತ್ಯಾ ವಾಚ್ಯಮಾನಂ ದ್ವಿಜೋತ್ತಮಾಃ ।
ಸೋಽಪಿ ಸಂವತ್ಸರಂ ಯಾವತ್ಪನ್ನಗೈರ್ನಚ ಪೀಡ್ಯತೇ ॥ ೪೬ ॥
ಸರ್ಪದಷ್ಟಸ್ಯ ಯಸ್ಯೈತತ್ಪುರತಃ ಪಠ್ಯತೇ ಭೃಶಂ ।
ನಾಗತೀರ್ಥಸ್ಯ ಮಾಹಾತ್ಮ್ಯಂ ಕಾಲದಷ್ಟೋಽಪಿ ಜೀವತಿ ॥ ೪೭ ॥
ಪುಸ್ತಕೇ ಲಿಖಿತಂ ಚೈತನ್ನಾಗತೀರ್ಥಸಮುದ್ಭವಂ ।
ಮಾಹಾತ್ಮ್ಯಂ ತಿಷ್ಠತೇ ಯತ್ರ ನ ಸರ್ಪಸ್ತತ್ರ ತಿಷ್ಠತಿ ॥ ೪೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗತೀರ್ಥೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ತ್ರ್ಯಶೀತ್ಯುತ್ತರಶತತಮೋಽಧ್ಯಾಯಃ

---

೪೪–೪೫. ಅಲ್ಲಿ ಸನಾತನ ಪುತ್ರನೇ ಮೊದಲಾದ ನಾಗಗಳನ್ನು ಪೂಜಿಸಿ ಸಜ್ಜನರೊಡನೆ ಬ್ರಾಹ್ಮಣರಿಗೆ ಮೃಷ್ಟಾನ್ನವನ್ನು ನೀಡುವವನು ಏಳು ಜನ್ಮಗಳಲ್ಲಿ ದೌಸ್ಥ್ಯವನ್ನು ಹೊಂದುವುದಿಲ್ಲ. ಭೂತ, ಪ್ರೇತ, ಪಿಶಾಚ, ಶಾಕಿನಿ ಮತ್ತು ಶತ್ರುಗಳ ಭಯವುಂಟಾಗುವುದಿಲ್ಲ. ಆಪತ್ತು, ರೋಗ, ರುಜಿನಗಳ ಭಯವೂ ಇರುವುದಿಲ್ಲ.

೪೬. ದ್ವಿಜವರ್ಯರೆ! ಪಠಿಸುತ್ತಿರುವ ಈ ಉಪಾಖ್ಯಾನವನ್ನು ಭಕ್ತಿಯಿಂದ ಕೇಳಿದವನು ಒಂದು ವರ್ಷಕಾಲ ಸರ್ಪಗಳಿಂದ ಪೀಡಿತನಾಗುವುದಿಲ್ಲ.

೪೭. ಸರ್ಪದಿಂದ ಕಚ್ಚಲ್ಪಟ್ಟವನ ಮತ್ತು ಮೃತ್ಯುವಶನಾದವನ ಮುಂದೆ ಈ ನಾಗತೀರ್ಥದ ಮಾಹಾತ್ಮ್ಯವನ್ನು ಪಠಿಸಿದರೆ ಅವನು ಬದುಕುವನು.

೪೮. ಈ ನಾಗತೀರ್ಥ ಮಾಹಾತ್ಮ್ಯದ ಪುಸ್ತಕವಿದ್ದೆಡೆಯಲ್ಲಿ ಸರ್ಪ ಇರುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗತೀರ್ಥೋತ್ಪತ್ತಿಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರಶೀತ್ಯುತ್ತರಶತತಮೋಽಧ್ಯಾಯಃ

## ಪಿಂಗಲೋಪಾಖ್ಯಾನವರ್ಣನಂ

**ಸೂತ ಉವಾಚ :—**

**ತೃತೀಯೇ ಚ ದಿನೇ ಪ್ರಾಪ್ತೇ ತ್ರಯೋದಶ್ಯಾಂ ದ್ವಿಜೋತ್ತಮಾಃ ।**
**ಪ್ರಾತಃಸವನಮಾದಾಯ ಋತ್ವಿಜಃ ಸರ್ವ ಏವ ತೇ ।**
**ಸ್ವೇ ಸ್ವೇ ಕರ್ಮಣಿ ಸಂಲಗ್ನಾ ಯಜ್ಞಕೃತ್ಯಸಮುದ್ಭವೇ ॥ ೧ ॥**
**ತತಃ ಪ್ರವರ್ತತೇ ಯಜ್ಞಸ್ತದಾ ಪೈತಾಮಹೋ ಮಹಾನ್ ।**
**ಸರ್ವಕಾಮಸಮೃದ್ಧಸ್ತು ಸರ್ವೈಃ ಸಮುದಿತೋ ಗುಣೈಃ ॥ ೨ ॥**
**ದೀಯತಾಂ ದೀಯತಾಂ ತತ್ರ ಭುಜ್ಯತಾಂ ಭುಜ್ಯತಾಮಿತಿ ।**
**ಏಕಃ ಸಂಶ್ರೂಯತೇ ಶಬ್ದೋ ದ್ವಿತೀಯೋ ದ್ವಿಜಸಂಭವಃ ॥ ೩ ॥**
**ನಾಽನ್ಯಸ್ತತ್ರ ತೃತೀಯಸ್ತು ಯಜ್ಞೇ ಪೈತಾಮಹೇ ಶುಭೇ ।**
**ಯೋ ಯಂ ಕಾಮಯತೇ ಕಾಮಂ ಹೇಮರತ್ನಸಮುದ್ಭವಂ ॥ ೪ ॥**
**ಸ ತತ್ಪ್ರಾಪ್ನೋತ್ಯಸಂದಿಗ್ಧಂ ವಾಂಛಿತಾಚ್ಚ ಚತುರ್ಗುಣಂ ।**
**ಪಕ್ವಾನ್ನಸ್ಯ ಕೃತಾಸ್ತತ್ರ ದೃಶ್ಯಂತೇ ಪರ್ವತಾಃ ಶುಭಾಃ ॥ ೫ ॥**
**ಘೃತಕ್ಷೀರಮಹಾನದ್ಯೋ ದಾನಾರ್ಥಂ ವಿತ್ತರಾಶಯಃ ।**
**ಏತಸ್ಮಿನ್ನಂತರೇ ಪ್ರಾಪಃ ಕಶ್ಚಿಜ್ಜ್ಞಾನೀ ದ್ವಿಜೋತ್ತಮಾಃ ॥ ೬ ॥**

---

## ಕನ್ನಡದ ಅನುವಾದ

### ಪಿಂಗಲೋಪಾಖ್ಯಾನವರ್ಣನ

೧. ಸೂತನು ಹೇಳುತ್ತಾನೆ :—ದ್ವಿಜವರ್ಯರೆ! ತ್ರಯೋದಶೀ ದಿವಸ ಯಜ್ಞದ ಮೂರನೆಯ ದಿನವು ಪ್ರಾಪ್ತನಾಗಲು ಸಮಸ್ತ ಋತ್ವಿಜರು ಪ್ರಾತಸ್ಸವನವನ್ನು ಕೈಕೊಂಡು ತಮ್ಮ ತಮ್ಮ ಯಜ್ಞಕಾರ್ಯದಲ್ಲಿ ತೊಡಗಿದರು.

೨. ಆಗ ಸಕಲ ಗುಣಗಳಿಂದ ತುಂಬಿದ ಪಿತಾಮಹನ ಮಹಾ ಯಜ್ಞವು ಸಮಸ್ತೇಷ್ಟಾರ್ಥಗಳಿಂದ ಸಮೃದ್ಧಿಗೊಂಡಿತು.

೩–೬. ಆ ಯಜ್ಞದಲ್ಲಿ ದಾನ ಮಾಡಿರಿ, ದಾನ ಮಾಡಿರಿ. ಭೋಜನ ಮಾಡಿರಿ, ಭೋಜನ ಮಾಡಿರಿ ಎಂಬ ಬ್ರಾಹ್ಮಣರ ಎರಡು ಶಬ್ದಗಳು ಮಾತ್ರ ಕೇಳಿಸುತ್ತಿದ್ದುವು. ಬೇರೆ ಮೂರನೆಯ ಶಬ್ದವು ಕೇಳಿಸಲಿಲ್ಲ. ಯಾರು ಯಾರು ಚಿನ್ನ ರತ್ನಗಳನ್ನು ಬಯಸುತ್ತಿದ್ದರೊ, ಅವರು ಅಪೇಕ್ಷಿಸಿದ್ದಕ್ಕಿಂತ ನಾಲ್ಕರಷ್ಟು ಆ ವಸ್ತುಗಳನ್ನು ಪಡೆಯುತ್ತಿದ್ದರು. ಅಲ್ಲಿ ಪಕ್ವಾನ್ನದ ಪರ್ವತಗಳೂ, ಹಾಲು ತುಪ್ಪದ ನದಿಗಳೂ, ದಾನದ ದ್ರವ್ಯರಾಶಿಗಳೂ ಕಾಣುತ್ತಿದ್ದುವು. ಈ ಮಧ್ಯದಲ್ಲಿ ಒಬ್ಬ ಜ್ಞಾನಿಯು ಅಲ್ಲಿಗೆ ಬಂದನು.

ಅತೀತಾನಾಗತಾನ್ವೇತ್ತಿ ವರ್ತಮಾನಂ ಚ ಯಃ ಸದಾ ।
ಸ ಬ್ರಹ್ಮಾಣಂ ನಮಸ್ಕೃತ್ಯ ನಿವಿಷ್ಟಶ್ಚ ತದಗ್ರತಃ ॥ ೭ ॥
ಕರ್ಮಾಂತರೇಷು ವಿಪ್ರಾಣಾಂ ಸ ಸರ್ವೇಷಾಂ ದ್ವಿಜೋತ್ತಮಾಃ ।
ಕಥಯಾಮಾಸ ಯದ್ವೃತ್ತಂ ಬಾಲ್ಯಾತ್ಪ್ರಭೃತಿ ಕೃತ್ಸ್ನಶಃ ॥ ೮ ॥
ತತಸ್ತ ಋತ್ವಿಜಃ ಸರ್ವೇ ಕೌತುಕಾವಿಷ್ಟಚೇತಸಃ ।
ಪಪ್ರಚ್ಛುರ್ಜ್ಞಾನಿನಂ ತಂ ಚ ವಿಸ್ಮಯೋತ್ಫುಲ್ಲಲೋಚನಾಃ ॥ ೯ ॥
ವಿಸ್ಮೃತಾನಿ ಸ್ಮರಂತಸ್ತೇ ನಿಜಕೃತ್ಯಾನಿ ನೈ ತತಃ ।
ಪ್ರೋಕ್ತಾನಿ ಗರ್ಹಣೀಯಾನಿ ಹ್ಯಸಂಖ್ಯಾತಾನಿ ಸರ್ವಶಃ ॥ ೧೦ ॥
ತತಸ್ತೇ ಪುನರೇವಾಽಥ ಪಪ್ರಚ್ಛುರ್ಜ್ಞಾನಿನಂ ಚ ತಂ ।
ಲೋಕೋತ್ತರಮಿದಂ ಜ್ಞಾನಂ ಕಥಂ ತೇ ಸಂಸ್ಥಿತಂ ದ್ವಿಜ ॥ ೧೧ ॥
ಕೋ ಗುರುಸ್ತೇ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ।
ಅಹೋ ಜ್ಞಾನಮಹೋ ಜ್ಞಾನಂ ನೈತದ್ದೃಷ್ಟಂ ಶ್ರುತಂ ಚ ನ ॥ ೧೨ ॥
ಯಾದೃಶಂ ತೇ ದ್ವಿಜಶ್ರೇಷ್ಠ ದೃಶ್ಯತೇ ಪಾರ್ಶ್ವಸಂಸ್ಥಿತಂ ।
ಕಿಂ ಬ್ರಹ್ಮಣಾ ಸ್ವಯಂ ವಿಪ್ರ ತ್ವಮೇವಂ ಪ್ರತಿಬೋಧಿತಃ ॥ ೧೩ ॥
ಕಿಂ ವಾ ಹರೇಣ ತುಷ್ಟೇನ ಕಿಂ ವಾ ದೇವೇನ ಚಕ್ರಿಣಾ ।
ನಾನ್ಯಪ್ರಬೋಧಿತಸ್ಯೈವಂ ಜ್ಞಾನಂ ಸಂಜಾಯತೇ ಸ್ಫುಟಂ ॥ ೧೪ ॥

---

೭. ಯಾವಾಗಲೂ ಭೂತ, ಭವಿಷ್ಯದ್ವರ್ತಮಾನ ವಿಷಯಗಳನ್ನರಿತ ಅವನು ಬ್ರಹ್ಮನನ್ನು ವಂದಿಸಿ ಅವನ ಮುಂದೆ ಕುಳಿತನು.

೮. ದ್ವಿಜವರ್ಯರೆ! ಅವನು ಆ ಯಜ್ಞಕರ್ಮದ ಮಧ್ಯದಲ್ಲಿ ಬಾಲ್ಯದ ಮೊದಲ್ಗೊಂಡು ತನ್ನ ಕಥೆಯನ್ನು ಎಲ್ಲ ಬ್ರಾಹ್ಮಣರಿಗೂ ಹೇಳಿದನು.

೯–೧೦. ಅನಂತರ ಆ ಋತ್ವಿಜರು ಆಶ್ಚರ್ಯಕುತೂಹಲಗಳಿಂದ ಸಹಿತ ರಾಗಿ ತಾವು ಮರೆತ ತಮ್ಮ ಅಸಂಖ್ಯಾತ ನಿಂದ್ಯಕಾರ್ಯಗಳನ್ನು ಸ್ಮರಿಸುತ್ತ ಆ ಜ್ಞಾನಿಯನ್ನು ಹೀಗೆ ಪ್ರಶ್ನೆಮಾಡಿದರು.

೧೧–೧೪. "ನಿನಗೆ ಈ ಲೋಕೋತ್ತರ ಜ್ಞಾನವು ಹೇಗೆ ಸಂಭವಿಸಿತು? ನಿನ್ನ ಗುರುವಾರು? ಇದನ್ನು ಕೇಳಲು ನಮಗೆ ಬಹಳ ಕುತೂಹಲವುಂಟಾಗಿದೆ. ನಿನ್ನೀ ಜ್ಞಾನವು ಎಂತಹ ಆಶ್ಚರ್ಯಕರವಾದುದು! ಇದನ್ನು ನಾವು ಎಲ್ಲಿಯೂ ನೋಡಲಿಲ್ಲ, ಮತ್ತು ಕೇಳಿಯೂ ಇಲ್ಲ. ಬ್ರಹ್ಮನು ನಿನಗೆ ತಾನಾಗಿಯೇ ಬೋಧಿಸಿದನೆ? ಶಂಕರನು ತಿಳಿಸಿದನೆ? ಅಥವಾ ವಿಷ್ಣುವು ಉಪದೇಶ ಮಾಡಿದನೆ? ಇತರರಾರಾದರೂ ಉಪದೇಶ ಮಾಡಿದರೆ ಇಂತಹ ಸ್ಪಷ್ಟಜ್ಞಾನವುಂಟಾಗುವುದಿಲ್ಲ."

ಅತಿಥಿರುವಾಚ :—

ಪಿಂಗಲಾ ಕುರರಃ ಸರ್ಪಃ ಸಾರಂಗಶ್ಚೈವ ಯೋ ವನೇ ।
ಇಷುಕಾರಃ ಕುಮಾರೀ ಚ ಷಡೇತೇ ಗುರವೋ ಮಮ ॥ ೧೫ ॥
ಏತೇಷಾಂ ಚೇಷ್ಟಿತಂ ದೃಷ್ಟ್ವಾ ಜ್ಞಾನಂ ಮೇ ಸಮುಪಸ್ಥಿತಂ ॥ ೧೬ ॥

ಬ್ರಾಹ್ಮಣಾ ಊಚುಃ :—

ಕಥಯಸ್ವ ಮಹಾಭಾಗ ಕಥಂ ತೇ ಗುರವಃ ಸ್ಥಿತಾಃ ।
ಕೀದೃಶಂ ಚ ತ್ವಯಾ ದೃಷ್ಟಂ ತೇಷಾಂ ಚೈವ ವಿಚೇಷ್ಟಿತಂ ॥ ೧೭ ॥
ಕಸ್ಮಿನ್ ದೇಶೇ ತ್ವಮುತ್ಪನ್ನಃ ಕಸ್ಮಿನ್ ಸ್ಥಾನೇ ವದಸ್ವ ನಃ ।
ಕಿಂ ನಾಮಾ ಕಿಂ ನು ಗೋತ್ರಶ್ಚ ಸರ್ವಂ ವಿಸ್ತರತೋ ವದ ॥ ೧೮ ॥

ಅತಿಥಿರುವಾಚ :—

ಆಸನ್ನತ್ರ ಪುರೇ ವಿಪ್ರಾಶ್ಚತ್ವಾರೋ ಯೇ ವಿವಾಸಿತಾಃ ।
ಶುನಃಶೇಪೋಽಥ ಶಾಕ್ರೇಯೋ ಬೌದ್ಧೋ ದಾಂತಶ್ಚತುರ್ಥಕಃ ॥ ೧೯ ॥
ತೇಷಾಂ ಮಧ್ಯೇ ತು ಯೋ ಬೌದ್ಧಃ ಶಾಂತೋದಾಂತ ಇತಿಸ್ಮೃತಃ ।
ಛಂದೋಗಗೋತ್ರವಿಖ್ಯಾತೋ ವೇದವೇದಾಂಗಪಾರಗಃ ॥ ೨೦ ॥
ನಾಗರೇಷು ಸಮುತ್ಪನ್ನಃ ಪಶ್ಚಿಮೇ ವಯಸಿ ಸ್ಥಿತಃ ।
ತಸ್ಯಾಽಹಂ ಪ್ರಥಮಃ ಪುತ್ರಃ ಪ್ರಾಣೇಭ್ಯೋಽಪಿ ಸುಹೃತ್ಪ್ರಿಯಃ ॥ ೨೧ ॥
ತತೋಽಹಂ ಯೌವನಂ ಪ್ರಾಪ್ತೋ ಯದಾ ದ್ವಿಜವರೋತ್ತಮಾಃ ।
ತದಾ ಮೇ ದಯಿತಸ್ತಾತಃ ಪಂಚತ್ವಂ ಸಮುಪಾಗತಃ ॥ ೨೨ ॥

---

೧೫. ಅತಿಥಿಯು ಹೇಳುತ್ತಾನೆ:—ನನಗೆ ಪಿಂಗಲಾ, ಕುರರ, ಸರ್ಪ, ದುಂಬಿ, ಬಾಣನಿರ್ಮಾಪಕ, ಕುಮಾರಿ ಈ ಆರು ಮಂದಿಯೂ ಗುರುಗಳು.

೧೬. ಇವರ ಕಾರ್ಯವನ್ನು ನೋಡಿ ನನಗೆ ಜ್ಞಾನವುಂಟಾಯಿತು.

೧೭. ಬ್ರಾಹ್ಮಣರು ಹೇಳುತ್ತಾರೆ:—ಅಯ್ಯಾ ಭಾಗ್ಯವಂತನೆ! ಅವರು ನಿನಗೆ ಹೇಗೆ ಗುರುಗಳಾದರು? ಅವರ ಎಂತಹ ಕಾರ್ಯವನ್ನು ನೀನು ನೋಡಿದೆ?

೧೮. ನೀನು ಯಾವ ದೇಶದಲ್ಲಿ ಯಾವ ಸ್ಥಳದಲ್ಲಿ ಹುಟ್ಟಿದೆ? ನಿನ್ನ ಹೆಸರೇನು? ಗೋತ್ರವಾವುದು? ಎಲ್ಲವನ್ನೂ ವಿಸ್ತಾರವಾಗಿ ನಮಗೆ ಹೇಳು.

೧೯—೨೧. ಅತಿಥಿಯು ಹೇಳುತ್ತಾನೆ:—ಈ ಪಟ್ಟಣದಿಂದ ಹೊರಡಿಸಲ್ಪಟ್ಟ ಶುನಶ್ಶೇಪ, ಶಾಕ್ರೇಯ, ಬೌದ್ಧ, ದಾಂತ ಎಂಬ ನಾಲ್ಕು ಮಂದಿಗಳಲ್ಲಿ ನಾನು ಶಾಂತನೂ, ಛಂದೋಗವೆಂಬ ಗೋತ್ರದಿಂದ ಪ್ರಸಿದ್ಧನೂ, ವೇದವೇದಾಂಗ ಪಾರಂಗತನೂ, ನಾಗರರಲ್ಲಿ ಮುದುಕನೂ ಆದ ಬೌದ್ಧನ ಅತ್ಯಂತ ಪ್ರಿಯನಾದ ಹಿರಿಯ ಮಗನು.

೨೨. ದ್ವಿಜವರ್ಯರೆ! ನಾನು ಯುವಕನಾಗಲು ನನ್ನ ಮೆಚ್ಚಿನ ತಂದೆಯು ಮಡಿದನು.

ಏತಸ್ಮಿನ್ನಂತರೇ ರಾಜಾ ಹ್ಯಾನರ್ತಾಧಿಪತಿರ್ದ್ವಿಜಾಃ ।
ಸುತಪಾಸ್ತೇನ ನಿರ್ದಿಷ್ಟೋಽಹಂ ತು ಕಂಚುಕಿಕರ್ಮಣಿ ॥ ೨೩ ॥
ಶಾಂತಂ ದಾಂತಂ ಸಮಾಲೋಕ್ಯ ವಿಶ್ವಸ್ತೇನ ಮಹಾತ್ಮನಾ ।
ತಸ್ಯ ಚಾಂತಃಪುರೇ ಹ್ಯಾಸೀತ್ಪಿಂಗಲಾ ನಾಮ ನಾಯಿಕಾ ॥ ೨೪ ॥
ಸೌಭಾಗ್ಯೇಣ ಸಮೋಪೇತಾ ರೂಪೇಣಾಽಪಿ ಸಮನ್ವಿತಾ ।
ಅಥಾಽನ್ಯಾಃ ಶತಶಸ್ತಸ್ಯ ಭಾರ್ಯಾಶ್ಚಾಂತಃಪುರೇ ಸ್ಥಿತಾಃ ॥ ೨೫ ॥
ತಾಃ ಸರ್ವಾ ರಜನೀವಕ್ತ್ರೇ ವ್ಯಾಕುಲತ್ವಂ ಪ್ರಯಾಂತಿ ಚ ।
ಆಹರಂತಿ ಪರಾನ್ ಗಂಧಾನ್ ಧೂಪಾಂಶ್ಚ ಕುಸುಮಾನಿ ಚ ॥ ೨೬ ॥
ವಿಲೇಪನಾನಿ ಮುಖ್ಯಾನಿ ಸುರಭೀಣಿ ತಥಾ ಪುರಃ ।
ಪುಷ್ಪಾಣಿ ಚ ವಿಚಿತ್ರಾಣಿ ಹ್ಯನ್ಯಾಃ ಸೂಕ್ಷ್ಮಾಂಬರಾಣಿ ಚ ॥ ೨೭ ॥
ತಾವದ್ಯಾವತ್ಸ್ಥಿತಃ ಕಾಲಃ ಶಯನೀಯ ಸಮುದ್ಭವಃ ।
ಮನ್ಮಥೋತ್ಸಾಹಸಂಯುಕ್ತಾಃ ಪುಲಕೇನ ಸಮನ್ವಿತಾಃ ॥ ೨೮ ॥
ಏಕಾ ಜಾನಾತಿ ಮಾಂ ಸುಪ್ತಾಂ ನೂನಮಾಕಾರಯಿಷ್ಯತಿ ।
ಅನ್ಯಾ ಜಾನಾತಿ ಮಾಂ ಚೈವ ಪರಸ್ಪರಮಮರ್ಷತಃ ॥ ೨೯ ॥
ಸ್ಪರ್ಧಯಂತಿ ಪ್ರಯುಧ್ಯಂತಿ ವಿರೂಪಾಣಿ ವದಂತಿ ಚ ।
ತಾಸಾಂ ಮಧ್ಯಾತ್ತತಶ್ಚೈಕಾ ಪ್ರಯಾತಿ ನೃಪಸನ್ನಿಧೌ ॥ ೩೦ ॥

---

೨೩–೨೫. ಇಷ್ಟರಲ್ಲಿ ಆನರ್ತದೇಶದ ದೊರೆಯಾದ ಸುತಪನೆಂಬ ಮಹಾತ್ಮನು ಶಾಂತನೂ, ಇಂದ್ರಿಯನಿಗ್ರಹವುಳ್ಳವನೂ ಆದ ನನ್ನನ್ನು ನೋಡಿ ವಿಶ್ವಾಸಗೊಂಡು ಕಂಚುಕಿಯ ಕೆಲಸದಲ್ಲಿ ನೇಮಿಸಿದನು. ಆ ಸುತಪನ ಅಂತಃಪುರದಲ್ಲಿ ಸೌಭಾಗ್ಯದಿಂದ ಕೂಡಿದವಳೂ, ಸುಂದರಿಯೂ ಆದ ಪಿಂಗಳೆಯೆಂಬ ಓರ್ವ ನಾಯಿಕೆಯಿದ್ದಳು. ಹೀಗೆಯೇ ಅಂತಃಪುರದಲ್ಲಿ ನೂರಾರು ಮಂದಿ ರಾಣಿಯರಿದ್ದರು.

೨೬–೨೮. ಅವರೆಲ್ಲ ರಾತ್ರಿಯ ಆರಂಭದಲ್ಲಿ ವ್ಯಾಕುಲಚಿತ್ತರಾಗುತ್ತಿದ್ದರು. ಅವರಲ್ಲಿ ಕೆಲವರು ಧೂಪ, ವಿಚಿತ್ರವಾದ ಪುಷ್ಪ, ಸುವಾಸನೆಯಾದ ಗಂಧ ಇವುಗಳನ್ನು ತರುತ್ತಿದ್ದರು. ಇನ್ನು ಕೆಲವರು ತೆಳ್ಳಗಿರುವ ಬಟ್ಟೆಗಳನ್ನು ತರುತ್ತಿದ್ದರು. ಮಲಗುವ ಸಮಯವೊದಗಿದಾಗ ಅವರು ಕಾಮೋದ್ರಿಕ್ತರಾಗಿ ರೋಮಾಂಚಗೊಳ್ಳುತ್ತಿದ್ದರು.

೨೯–೩೧. ಅವರಲ್ಲೊಬ್ಬಳು ಮಲಗಿರುವ ತನ್ನನ್ನು ರಾಜನು ಕರೆಯುವನೆಂದು ತಿಳಿಯುವಳು. ಇನ್ನೊಬ್ಬಳು ತನ್ನನ್ನು ಕರೆಯುವನೆಂದು ತಿಳಿಯುವಳು. ಹೀಗೆ ಅವರು ಪರಸ್ಪರ ಕೋಪದಿಂದ ಸ್ಪರ್ಧಿಸುತ್ತಲೂ, ಜಗಳವಾಡುತ್ತಲೂ, ಅನುಚಿತವಾಗಿ ಮಾತಾಡುತ್ತಲೂ ಇದ್ದರು. ಅವರಲ್ಲೊಬ್ಬಳು ಮಾತ್ರ ರಾಜನ

ಶೇಷಾ ವೈಲಕ್ಷ್ಯಮಾಸಾದ್ಯ ನಿಃಶ್ವಸ್ಯ ಪ್ರಸ್ವಪಂತಿ ಚ ।
ದುಃಖಾರ್ತಾ ನ ಲಭಂತಿ ಸ್ಮ ತಾಶ್ಚ ನಿದ್ರಾಂ ಪರಾಭವಾತ್ ॥ ३೧ ॥
ಕಾಮೇನ ಪೀಡಿತಾಂಗಾಶ್ಚ ಬಾಷ್ಪಪೂರ್ಣೇಕ್ಷಣಾಃ ಸ್ಥಿತಾಃ ॥ ೩೨ ॥
ಆಶಾ ಹಿ ಪರಮಂ ದುಃಖಂ ನಿರಾಶಾ ಪರಮಂ ಸುಖಂ ।
ಆಶಾಂ ನಿರಾಶಾಂ ಕೃತ್ವಾ ಚ ಸುಖಂ ಸ್ವಪಿತಿ ಪಿಂಗಲಾ ॥ ೩೩ ॥
ನ ಕರೋತಿ ಚ ಶೃಂಗಾರಂ ನ ಸ್ಪರ್ಧಾಂ ಚ ಕದಾಚನ ।
ನ ವ್ಯಾಕುಲತ್ವಮಾಪೇದೇ ಸುಖಂ ಸ್ವಪಿತಿ ಪಿಂಗಲಾ ॥ ೩೪ ॥
ತತೋ ಮಯಾಽಪಿ ತದ್ದೃಷ್ಟ್ವಾ ತಸ್ಯಾಶ್ಚೇಷ್ಟಿತಮುತ್ತಮಂ ।
ಆಶಾಃ ಸರ್ವಾಃ ಪರಿತ್ಯಕ್ತಾಃ ಸ್ವಪಿಮೀಹ ತತಃ ಸುಖೀ ॥ ೩೫ ॥
ಯೇ ಸ್ವಪಂತಿ ಸುಖಂ ರಾತ್ರೌ ತೇಷಾಂ ಕಾಯಾಗ್ನಿರಿಧ್ಯತೇ ।
ಆಹಾರಂ ಪ್ರತಿಗೃಹ್ಣಾತಿ ತತಃ ಪುಷ್ಟಿಕರಂ ಪರಂ ॥ ೩೬ ॥
ತದೇತತ್ಕಾರಣಂ ಜಾತಂ ಮಮ ತೇಜೋಽಭಿವೃದ್ಧಯೇ ।
ಗುರುತ್ವೇ ಪಿಂಗಲಾ ಜಾತಾ ತೇನ ಸಾಮ್ನೇ ದ್ವಿಜೋತ್ತಮಾಃ ॥ ೩೭ ॥
ಆಶಾಪಾಶೈಃ ಪರೀತಾಂಗಾ ಯೇ ಭವಂತಿ ನರೋರ್ದಿತಾಃ ।
ತೇ ರಾತ್ರೌ ಶೇರತೇ ನೈವ ತದಪ್ರಾಪ್ತಿ ವಿಚಿಂತಯಾ ॥ ೩೮ ॥

---

ಸಮೀಪಕ್ಕೆ ಹೋಗುವಳು. ಉಳಿದವರು ಲಜ್ಜಿತರಾಗಿ ನಿಟ್ಟುಸಿರುಬಿಡುತ್ತ ಮಲಗಿ ದುಃಖದಿಂದ ನಿದ್ರೆಯನ್ನು ಹೊಂದಲಿಲ್ಲ.

೩೨. ಕಾಮಪೀಡಿತರಾಗಿ ಕಣ್ಣೀರನ್ನು ಸುರಿಸುತ್ತಿದ್ದರು.

೩೩. ಆಶೆಯು ಅತ್ಯಂತ ದುಃಖವನ್ನುಂಟುಮಾಡುವುದು. ನಿರಾಶೆಯು ಅತಿಶಯ ಸುಖವನ್ನುಂಟುಮಾಡುವುದು. ಪಿಂಗಳೆಯು ಆಶೆಯನ್ನು ತ್ಯಜಿಸಿ ಸುಖವಾಗಿ ನಿದ್ರಿಸಿದಳು.

೩೪. ಅವಳು ತನ್ನನ್ನು ಸಿಂಗರಿಸಿಕೊಳ್ಳದೆ, ಸ್ಪರ್ಧಿಸದೆ, ವ್ಯಾಕುಲಳಾಗದೆ ಸುಖವಾಗಿ ನಿದ್ರಿಸಿದಳು.

೩೫. ನಾನು ಅವಳ ಉತ್ತಮವಾದ ನಡತೆಯನ್ನು ನೋಡಿ ಸಮಸ್ತವಾದ ಆಶೆಗಳನ್ನು ತ್ಯಜಿಸಿ ಸುಖದಿಂದ ಮಲಗುತ್ತಿದ್ದೆನು.

೩೬. ರಾತ್ರಿಯಲ್ಲಿ ಸುಖವಾಗಿ ಮಲಗುವವರ ಶರೀರದಲ್ಲಿ ಅಗ್ನಿಯು ಹೆಚ್ಚುವುದು. ಅದರಿಂದವರು ಪುಷ್ಟಿಕರವಾದ ಆಹಾರವನ್ನು ತೆಗೆದುಕೊಳ್ಳುವರು.

೩೭. ಇದೇ ನನ್ನ ತೇಜೋವೃದ್ಧಿಗೆ ಕಾರಣವಾಯಿತು. ಆದುದರಿಂದ ನನಗೆ ಪಿಂಗಳೆಯು ಗುರುವಾದಳು.

೩೮. ಆಶೆಯೆಂಬ ಹಗ್ಗದಿಂದ ಕಟ್ಟಲ್ಪಟ್ಟ ಮಾನವರು ಪೀಡಿತರಾಗಿ ತಮ್ಮ ಇಷ್ಟಾರ್ಥವು ಈಡೇರದಿರುವುದರಿಂದ ಚಿಂತಾಗ್ರಸ್ತರಾಗಿ ರಾತ್ರಿಯಲ್ಲಿ ನಿದ್ರಿಸುವುದಿಲ್ಲ.

ನೈವಾಗ್ನಿರ್ದೀಪ್ಯತೇ ತೇಷಾಂ ಜಾಠರಶ್ಚ ತತಃ ಪರಂ ।
ಆಹಾರಂ ವಾಂಛತೇ ನೈವ ತನ್ನ ತೇಜೋಽಭಿವರ್ಧನಂ ॥ ೩೯ ॥
ಸರ್ವಸ್ಯ ವಿದ್ಯತೇ ಪ್ರಾಂತೋ ನ ವಾಂಛಾಯಾಃ ಕಥಂಚನ ॥ ೪೦ ॥
ಯಥಾ ಯಥಾ ಭವೇಲ್ಲಾಭೋ ವಾಂಛಿತಸ್ಯ ನೃಣಾಮಿಹ ।
ಹವಿಷಾ ಕೃಷ್ಣವರ್ತ್ಮೇವ ವೃದ್ಧಿಂ ಯಾತಿ ತಥಾ ತಥಾ ॥ ೪೧ ॥
ಯಥಾ ಶೃಂಗಂ ರುರೋಃ ಕಾಯೇ ವರ್ಧಮಾನಸ್ಯ ವರ್ಧತೇ ।
ಏವಂ ತೃಷ್ಣಾಽಪಿ ಯತ್ನೇನ ವರ್ಧಮಾನೇನ ವರ್ಧತೇ ॥ ೪೨ ॥
ಏವಂ ಜ್ಞಾತ್ವಾ ಮಹಾಭಾಗಾಃ ಪುರುಷೇಣ ವಿಜಾನತಾ ।
ದಿವಾ ತತ್ಕರ್ಮ ಕರ್ತವ್ಯಂ ಯೇನ ರಾತ್ರೌ ಸುಖಂ ಸ್ವಪೇತ್ ॥ ೪೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಿಂಗಲೋಪಾಖ್ಯಾನವರ್ಣನಂ" ನಾಮ
ಚತುರಶೀತ್ಯುತ್ತರಶತತಮೋಽಧ್ಯಾಯಃ

---

೩೯. ಅವರ ಜಠರಾಗ್ನಿಯು ಉದ್ದೀಪಿತವಾಗುವುದಿಲ್ಲ. ಅವರು ಆಹಾರವನ್ನು ಇಚ್ಛಿಸುವುದೇ ಇಲ್ಲವಾದುದರಿಂದ ತೇಜಸ್ಸು ಹೆಚ್ಚುವುದಿಲ್ಲ.

೪೦. ಎಲ್ಲ ವಿಷಯುಗಳಿಗೂ ಒಂದು ಎಲ್ಲೆಯಿದೆ. ಆಶೆಗೆ ಎಲ್ಲೆಯಿಲ್ಲ.

೪೧. ಈ ಪ್ರಪಂಚದಲ್ಲಿ ಮನುಷ್ಯರಿಗೆ ಇಷ್ಟಾರ್ಥವು ದೊರೆತ ಹಾಗೆಲ್ಲ ಆ ಆಶೆಯು ಹವಿಸ್ಸಿನಿಂದ ಅಗ್ನಿಯು ಹೆಚ್ಚುವಂತೆ ಹೆಚ್ಚುವುದು.

೪೨. ಜಿಂಕೆಯ ಶರೀರವು ಬೆಳೆದ ಹಾಗೆಲ್ಲ ಕೊಂಬು ಬೆಳೆಯುವಂತೆ ಇಷ್ಟಾರ್ಥವು ಹೆಚ್ಚಿದಂತೆಲ್ಲ ಆಶೆಯು ಹೆಚ್ಚಾಗುವುದು.

೪೩. ಆದುದರಿಂದ ಬುದ್ಧಿವಂತನಾದ ನರನು ಇದನ್ನರಿತು ರಾತ್ರಿಯಲ್ಲಿ ಸುಖವಾಗಿ ನಿದ್ರಿಸುವಂತೆ ಕಾರ್ಯವನ್ನೆಸಗಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಿಂಗಲೋಪಾಖ್ಯಾನವರ್ಣನ"ವೆಂಬ
ನೂರೆಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಾಶೀತ್ಯುತ್ತರಶತತಮೋಽಧ್ಯಾಯಃ

## ಶೀರ್ಘೋತ್ಪತ್ತಿಮಾಹಾತ್ಮ್ಯವರ್ಣನಂ

ಅತಿಥಿರುವಾಚ :—

ಏತದ್ವಃ ಸರ್ವಮಾಖ್ಯಾತಂ ಯಥಾ ಮೇ ಪಿಂಗಲಾ ಗುರುಃ ।
ಸಂಜಾತಾ ಕುರರೋ ಜಾತೋ ಯಥಾ ತತ್ಪ್ರವದಾಮ್ಯಹಂ ॥ ೧ ॥
ಮಮಾಸೀದ್ದ್ರವಿಣಂ ಭೂರಿ ಪಿತೃಪೈತಾಮಹಂ ಮಹತ್ ॥ ೨ ॥
ಯೇಽಥ ಪುತ್ರಾಶ್ಚ ಪೌತ್ರಾಶ್ಚ ದಾಯಾದಾ ಬಾಂಧವಾ ಅಪಿ ।
ತೇ ಮಾಂ ಸರ್ವೇ ಪ್ರಬಾಧಂತೇ ದ್ರವ್ಯಸ್ಯಾಸ್ಯ ಕೃತೇ ಸದಾ ॥ ೩ ॥
ಯಸ್ಯಾಽಹಂ ನ ಪ್ರಯಚ್ಛಾಮಿ ಸ ಮಾಂ ಚೈವ ಪ್ರಬಾಧತೇ ।
ಸೀದಮಾನಸ್ತು ಸುಭೃಶಂ ದರ್ಶಯನ್ ಪ್ರಾಣಸಂಕ್ಷಯಂ ॥ ೪ ॥
ಏಕೇ ಸಾಮ್ನಾ ಪ್ರಯಾಚಂತೇ ವಿತ್ತಂ ಭೇದೇನ ಚಾಪರೇ ।
ಭಯದಾನೇನ ಚಾನ್ಯೇಽಪಿ ಕೇಚಿದ್ದಂಡೇನ ಚ ದ್ವಿಜಾಃ ॥ ೫ ॥
ಏವಂ ನಾಽಹಂ ಕ್ವಚಿತ್ಸೌಖ್ಯಂ ತೇಷಾಂ ಪಾರ್ಶ್ವಾಲ್ಲಭಾಮಿ ಭೋಃ ।
ಚಿಂತಯಾನೋ ದಿವಾನಕ್ತಂ ಕ್ಲೇಶಸ್ಯ ಪರಿಸಂಕ್ಷಯಂ ।
ಉಪಾಯಂ ನ ಚ ಪಶ್ಯಾಮಿ ಯೇನ ಶಾಂತಿಃ ಪ್ರಜಾಯತೇ ॥ ೬ ॥

---

### ಕನ್ನಡದ ಅನುವಾದ

#### ಶೀರ್ಘೋತ್ಪತ್ತಿಮಾಹಾತ್ಮ್ಯವರ್ಣನ

೧. ಅತಿಥಿಯು ಹೇಳುತ್ತಾನೆ:—ಪಿಂಗಳೆಯು ನನಗೆ ಗುರುವಾದ ಬಗೆಯನ್ನು ನಿಮಗೆ ಹೇಳಿದೆನು. ಈಗ ಕುರರವು ಗುರುವಾದ ರೀತಿಯನ್ನು ಹೇಳುತ್ತೇನೆ.

೨. ನನ್ನಲ್ಲಿ ತಂದೆ ಅಜ್ಜಂದಿರಿಂದ ಬಂದ ಬಹಳ ದ್ರವ್ಯವಿದ್ದಿತು.

೩. ನನ್ನ ಮಕ್ಕಳೂ, ಮೊಮ್ಮಕ್ಕಳೂ, ದಾಯಾದರೂ, ಬಾಂಧವರೂ ಈ ನನ್ನ ದ್ರವ್ಯಕ್ಕಾಗಿ ನನ್ನನ್ನು ಪೀಡಿಸುತ್ತಿದ್ದರು.

೪. ನಾನು ಯಾವನಿಗೆ ದ್ರವ್ಯವನ್ನು ಕೊಡಲಿಲ್ಲವೋ ಅವನು ಅತ್ಯಂತ ವ್ಯಥೆಯಿಂದ ನನ್ನನ್ನು ಕೊಲ್ಲುವವನಂತೆ ತೋರಿಸಿಕೊಳ್ಳುತ್ತ ಪೀಡಿಸುತ್ತಿದ್ದನು.

೫. ಕೆಲವರು ಸಮಾಧಾನದಿಂದಲೂ, ಇನ್ನು ಕೆಲವರು ಭೇದೋಪಾಯದಿಂದಲೂ, ಮತ್ತೆ ಕೆಲವರು ಭಯಪ್ರದರ್ಶನದಿಂದಲೂ, ಇನ್ನು ಕೆಲವರು ದಂಡೋಪಾಯದಿಂದಲೂ ದ್ರವ್ಯವನ್ನು ಯಾಚಿಸುತ್ತಿದ್ದರು.

೬. ನಾನು ಹೀಗೆ ಅವರ ಸಹವಾಸದಿಂದ ಸ್ವಲ್ಪವೂ ಸೌಖ್ಯವನ್ನು ಪಡೆಯಲಿಲ್ಲ. ಹಗಲು ರಾತ್ರಿ ದುಃಖಪರಿಹಾರೋಪಾಯವನ್ನು ಆಲೋಚಿಸುತ್ತ ದುಃಖಶಾಂತಿಯನ್ನುಂಟುಮಾಡುವ ಉಪಾಯವನ್ನು ಕಾಣಲಿಲ್ಲ.

ಅನ್ಯಸ್ಮಿನ್ ದಿವಸೇ ದೃಷ್ಟಃ ಕೃತಮಾಂಸಪರಿಗ್ರಹಃ ।
ಕುರರಶ್ಚಂಚುನಾ ವ್ಯೋಮ್ನಿ ಗಚ್ಛಮಾನಸ್ತ್ವರಾನ್ವಿತಃ ॥ ೭ ॥
ಹನ್ಯಮಾನಃ ಸಮಂತಾಚ್ಚ ಮಾಂಸಾರ್ಥೇ ವಿವಿಧೈಃ ಖಗೈಃ ।
ಅಥ ತೇನ ಪರಿಕ್ಷಿಪ್ತಂ ತನ್ಮಾಂಸಂ ಪಕ್ಷಿಜಾದ್ಭಯಾತ್ ॥ ೮ ॥
ಯಾವತ್ತಾವತ್ಸುಖೀ ಜಾತಸ್ತೇಽಪಿ ಸರ್ವೇ ಸಮುಜ್ಝಿತಾಃ ।
ಮಯಾಽಪಿ ಕ್ಲಿಶ್ಯಮಾನೇನ ತದ್ವಚ್ಚ ನಿಜಬಾಂಧವೈಃ ॥ ೯ ॥
ಸಾಮಿಷಂ ಕುರರಂ ದೃಷ್ಟ್ವಾ ವಧ್ಯಮಾನಂ ನಿರಾಮಿಷೈಃ ।
ಆಮಿಷಸ್ಯ ಪರಿತ್ಯಾಗಾತ್ಕುರರಃ ಸುಖಮೇಧತೇ ॥ ೧೦ ॥
ಏವಂ ನಿಶ್ಚಿತ್ಯ ಮನಸಾ ಸರ್ವಾನಾನೀಯ ಬಾಂಧವಾನ್ ।
ಪುತ್ರಾನ್ ಪೌತ್ರಾಂಸ್ತತಃ ಸರ್ವಾನ್ ಪುರಸ್ತೇಷಾಂ ನಿವೇದಿತಂ ॥ ೧೧ ॥
ತ್ರಿಃ ಸತ್ಯಂ ಶಪಥಂ ಕೃತ್ವಾ ನಾನ್ಯದಸ್ತೀತಿ ಮೇ ಗೃಹೇ ।
ವಿಭಜ್ಯಾರ್ಥಂ ಯಥಾನ್ಯಾಯಂ ಯೂಯಂ ಗೃಹ್ಣೀತ ಬಾಂಧವಾಃ ॥೧೨॥
ತತಃ ಪ್ರಭೃತಿ ತೈರ್ಮುಕ್ತಃ ಸುಖಂ ತಿಷ್ಠಾಮ್ಯಹಂ ದ್ವಿಜಾಃ ।
ಏತಸ್ಮಾತ್ಕಾರಣಾಜ್ಜಾತೋ ಮಮಾಽಸೌ ಕುರರೋ ಗುರುಃ ॥ ೧೩ ॥

---

೭–೯. ಮತ್ತೊಂದು ದಿನ ಒಂದು ಉತ್ಕ್ರೋಶ ಪಕ್ಷಿಯು ಮಾಂಸವನ್ನು ಕಚ್ಚಿಕೊಂಡು ಆಕಾಶದಲ್ಲಿ ತ್ವರೆಯಿಂದ ಹಾರುತ್ತಿದ್ದಿತು. ಆಗ ಅದರ ಕೊಕ್ಕಿನಲ್ಲಿರುವ ಮಾಂಸಕ್ಕಾಗಿ ಬಗೆಬಗೆಯ ಪಕ್ಷಿಗಳು ಆ ಪಕ್ಷಿಯನ್ನು ಸುತ್ತಲೂ ಕುಕ್ಕಿದುವು. ಆಗ ಆ ಹಕ್ಕಿಯು ಇತರ ಪಕ್ಷಿಗಳ ಭಯದಿಂದ ಆ ಮಾಂಸವನ್ನು ಕೆಳಗೆ ಎಸೆಯಿತು. ಆಗ ಆ ಇತರ ಪಕ್ಷಿಗಳೆಲ್ಲ ಆ ಉತ್ಕ್ರೋಶ ಪಕ್ಷಿಯನ್ನು ಬಿಟ್ಟದ್ದರಿಂದ ಅದು ಸುಖಗೊಂಡಿತು. ಅದನ್ನು ಆ ಹಕ್ಕಿಯಂತೆ ಬಾಂಧವರಿಂದ ಪೀಡಿತನಾದ ನಾನು ಕಂಡೆನು.

೧೦–೧೧. ಆಗ ನಾನು ಈ ಉತ್ಕ್ರೋಶ ಪಕ್ಷಿಯು ಮಾಂಸವನ್ನು ಕಚ್ಚಿಕೊಂಡಿರುವಾಗ ಮಾಂಸವಿಲ್ಲದ ಇತರ ಪಕ್ಷಿಗಳು ಅದನ್ನು ಕುಕ್ಕಿದುವು. ಮಾಂಸವನ್ನು ತ್ಯಜಿಸಿದಾಗ ಅದು ಸುಖಗೊಂಡಿತು ಎಂಬುದನ್ನು ನೋಡಿ ಮನಸ್ಸಿನಲ್ಲಿ ನಿಶ್ಚಯಿಸಿ ಎಲ್ಲ ಬಾಂಧವರು, ಪುತ್ರರು, ಪೌತ್ರರು ಇವರನ್ನು ಕರೆಯಿಸಿ ಅವರಿಗೆ ಹೀಗೆ ತಿಳಿಸಿದೆನು.

೧೨. "ಬಾಂಧವರೆ! ಮೂರು ಸಾರಿ ಶಪಥಮಾಡಿ ನನ್ನ ಮನೆಯಲ್ಲಿ ಬೇರೆ ಏನೂ ಇಲ್ಲವೆಂದು ಹೇಳುತ್ತೇನೆ. ನೀವು ದ್ರವ್ಯವನ್ನು ನ್ಯಾಯರೀತಿಯಿಂದ ಪಾಲುಮಾಡಿ ತೆಗೆದುಕೊಳ್ಳಿರಿ."

೧೩. ದ್ವಿಜರೆ! ಅದು ಮೊದಲ್ಗೊಂಡು ಅವರು ನನ್ನನ್ನು ಬಿಟ್ಟದ್ದರಿಂದ ಸುಖವಾಗಿದ್ದೇನೆ. ಇದರಿಂದ ಕುರರ ಪಕ್ಷಿಯು ನನಗೆ ಗುರುವಾಯಿತು.

ಅರ್ಥಸಂಪದ್ವಿಮೋಹಾಯ ವಿಮೋಹೋ ನರಕಾಯ ಚ ।
ತಸ್ಮಾದರ್ಥಮನರ್ಥಂ ತಂ ಮೋಕ್ಷಾರ್ಥೀ ದೂರತಸ್ತ್ಯಜೇತ್ ॥ ೧೪ ॥
ಯಥಾಮಿಷಂ ಜಲೇ ಮತ್ಸ್ಯೈರ್ಭಕ್ಷ್ಯತೇ ಶ್ವಾಪದೈರ್ಭುವಿ ।
ಆಕಾಶೇ ಪಕ್ಷಿಭಿಶ್ಚೈವ ತಥಾ ಸರ್ವತ್ರ ವಿತ್ತವಾನ್ ॥ ೧೫ ॥
ದೋಷಹೀನೋಽಪಿ ಧನವಾನ್ ಭೂಪಾದ್ಯೈಃ ಪರಿತಾಪ್ಯತೇ ।
ದರಿದ್ರಃ ಕೃತದೋಷೋಽಪಿ ಸರ್ವತ್ರ ನಿರುಪದ್ರವಃ ॥ ೧೬ ॥
ಆಲಂಬಿತಾಃ ಪರ್ಯೈರ್ಯಾಂತಿ ಪ್ರಸ್ಖಲಂತಿ ಪದೇ ಪದೇ ।
ಗದ್ಗದಾನಿ ಚ ಜಲ್ಪಂತೇ ಧನಿನೋ ಮದ್ಯಪಾ ಇವ ॥ ೧೭ ॥
ಭಕ್ತೇ ದ್ವೇಷೋ ಬಹಿಃ ಪ್ರೀತೀ ರುಚಿತಂ ಗುರುಲಘ್ವಪಿ ।
ಮುಖೇ ಚ ಕಟುತಾ ನಿತ್ಯಂ ಧನಿನಾಂ ಜ್ವರಿಣಾಮಿವ ॥ ೧೮ ॥
ಅರ್ಥಾನಾಮರ್ಜನೇ ದುಃಖಮರ್ಜಿತಾನಾಂ ಚ ರಕ್ಷಣೇ ।
ನಾಶೇ ದುಃಖಂ ವ್ಯಯೇ ದುಃಖಂ ಧಿಗರ್ಥೋ ದುಃಖಭಾಜನಂ ॥ ೧೯ ॥

---

೧೪. ಅರ್ಥಸಮೃದ್ಧಿಯು ಮೋಹಕ್ಕೆ ಕಾರಣವಾದುದು. ಮೋಹದಿಂದ ನರಕವುಂಟಾಗುವುದು. ಆದುದರಿಂದ ಮೋಕ್ಷವನ್ನಪೇಕ್ಷಿಸುವವನು ಅನರ್ಥಕ್ಕೆ ಕಾರಣವಾದ ದ್ರವ್ಯವನ್ನು ದೂರದಿಂದಲೇ ತ್ಯಜಿಸಬೇಕು.

೧೫. ನೀರಿನಲ್ಲಿರುವ ಮಾಂಸವನ್ನು ಮೀನುಗಳೂ, ನೆಲದ ಮೇಲಿರುವ ಮಾಂಸವನ್ನು ಹಿಂಸ್ರಜಂತುಗಳೂ, ಆಕಾಶದಲ್ಲಿರುವ ಮಾಂಸವನ್ನು ಪಕ್ಷಿಗಳೂ ತಿನ್ನುವಂತೆ ಹಣಗಾರನನ್ನು ಎಲ್ಲರೂ ಪೀಡಿಸುವರು.

೧೬. ದೋಷವಿಲ್ಲದಿದ್ದರೂ ಹಣಗಾರನನ್ನು ರಾಜರೇ ಮೊದಲಾದವರು ಪೀಡಿಸುತ್ತಾರೆ. ಬಡವನು ತಪ್ಪನ್ನು ಮಾಡಿದ್ದರೂ ತೊಂದರೆಯಿಲ್ಲದವನಾಗುವನು.

೧೭. ಧನಿಕರು ಹೆಂಡ ಕುಡಿದವರಂತೆ ಪರರ ಆಶ್ರಯದಿಂದ ನಡೆಯುತ್ತಾರೆ. ಪ್ರತಿ ಹೆಜ್ಜೆಯಲ್ಲಿಯೂ ಜಾರುತ್ತಾರೆ. ಗದ್ಗದ ಧ್ವನಿಯಿಂದ ಮಾತನಾಡುತ್ತಾರೆ.

೧೮. ಧನಿಕರಿಗೆ ರೋಗಿಗಳಂತೆ ಭಕ್ತನಲ್ಲಿ (ಅನ್ನದಲ್ಲಿ) ದ್ವೇಷವೂ, ಹೊರಗಡೆ ಪ್ರೀತಿಯೂ, ಗುರುಲಘು ವಸ್ತುಗಳಲ್ಲಿ ಅಪೇಕ್ಷೆಯೂ, ಬಾಯಿಯಲ್ಲಿ ಕಠಿನಮಾತುಗಳೂ (ಕಹಿಯೂ) ಉಂಟಾಗುವುವು.

೧೯. ದ್ರವ್ಯಗಳನ್ನು ಸಂಪಾದಿಸುವುದರಲ್ಲಿಯೂ, ಸಂಪಾದಿಸಿದ ದ್ರವ್ಯಗಳನ್ನು ಕಾಪಾಡುವುದರಲ್ಲಿಯೂ, ಅದು ಹಾಳಾದಾಗಲೂ, ವ್ಯಯವಾದಾಗಲೂ ದುಃಖವುಂಟಾಗುವುದು. ಹೀಗೆ ದುಃಖಕ್ಕೆ ಆಶ್ರಯವಾದ ದ್ರವ್ಯವು ನಿಂದ್ಯವಾದುದು.

**ಅರ್ಥಾರ್ಥೀ ಜೀವಲೋಕೋಽಯಂ ಸ್ಮಶಾನಮಪಿ ಸೇವತೇ ।**
**ಜನಿತಾರಮಪಿ ತ್ಯಕ್ತ್ವಾ ನಿಃಸ್ವಂ ಯಾಂತಿ ಸುತಾ ಅಪಿ ॥ ೨೦ ॥**
**ಸುತಸ್ಯ ವಲ್ಲಭಸ್ತಾವತ್ಪಿತಾ ಪುತ್ರೋಽಪಿ ವೈ ಪಿತುಃ ।**
**ಯಾವನ್ನಾರ್ಥಸ್ಯ ಸಂಬಂಧಸ್ತಾಭ್ಯಾಂ ಭಾವೀ ಪರಸ್ಪರಂ ।**
**ಸಂಬಂಧೇ ವಿತ್ತಜೇ ಜಾತೇ ವೈರಂ ಸಂಜಾಯತೇ ಮಿಥಃ ॥ ೨೧ ॥**
**ಏತಸ್ಮಾತ್ಕಾರಣಾದ್ವಿತ್ತಂ ಮಯಾ ತ್ಯಕ್ತಂ ತಪೋಧನಾಃ ।**
**ತೇನ ಸೌಖ್ಯೇನ ತಿಷ್ಠಾಮಿ ಕುರರಸ್ಯೋಪದೇಶತಃ ॥ ೨೨ ॥**
**ಶೃಣುಧ್ವಂ ಚ ಮಹಾಭಾಗಾ ಯಥಾ ಮೇಽಹಿರ್ಗುರುಃ ಸ್ಥಿತಃ ॥ ೨೩ ॥**
**ಯಥಾ ಮಯಾ ಗೃಹಂ ತ್ಯಕ್ತಂ ದೃಷ್ಟ್ವಾ ಸರ್ಪವಿಚೇಷ್ಟಿತಂ ।**
**ಗೃಹಾರಂಭಃ ಸುದುಃಖಾಯ ಸುಖಾಯ ನ ಕದಾಚನ ॥ ೨೪ ॥**
**ಸರ್ಪಃ ಪರಕೃತಂ ವೇಶ್ಮ ಪ್ರವಿಶ್ಯ ಸುಖಮೇಧತೇ ।**
**ಉಷಿತ್ವಾ ತತ್ರ ಸೌಖ್ಯೇನ ಭೂಯೋಽನ್ಯತ್ರಾದೃಶಂ ವ್ರಜೇತ್ ॥ ೨೫ ॥**
**ಮಮತ್ವಂ ಕುರುತೇ ನೈವ ಮಮೇದಂ ಗೃಹಮಿತ್ಯಸೌ ।**
**ನ ಗೃಹಂ ಜಾಯತೇ ತಸ್ಯ ನ ಸ್ವಯಂ ಹಿ ಕೃತಂ ಯತಃ ॥ ೨೬ ॥**

---

೨೦. ದ್ರವ್ಯವನ್ನು ಬಯಸುವ ಮನುಷ್ಯರು ಸ್ಮಶಾನವನ್ನು ಕೂಡ ಸೇವಿಸುತ್ತಾರೆ. ದ್ರವ್ಯವಿಲ್ಲದ ತಂದೆಯನ್ನು ಮಕ್ಕಳೂ ತ್ಯಜಿಸಿ ಹೊರಟುಹೋಗುತ್ತಾರೆ.

೨೧. ದ್ರವ್ಯದ ಸಂಬಂಧವಾಗುವವರೆಗೆ ಮಗನಿಗೆ ತಂದೆಯೂ, ತಂದೆಗೆ ಮಗನೂ ಪ್ರಿಯನಾಗಿರುವನು. ದ್ರವ್ಯದ ಸಂಬಂಧವಾದ ಕೂಡಲೆ ಅವರಿಬ್ಬರಿಗೆ ಪರಸ್ಪರ ದ್ವೇಷವುಂಟಾಗುವುದು.

೨೨. ಮುನಿಗಳೇ! ಈ ಕಾರಣದಿಂದ ನಾನು ದ್ರವ್ಯವನ್ನು ತ್ಯಜಿಸಿದ್ದೇನೆ. ಆ ಕುರರ ಪಕ್ಷಿಯ ಉಪದೇಶದಿಂದ ಸೌಖ್ಯವಾಗಿದ್ದೇನೆ.

೨೩. ಮಹಾತ್ಮರೆ! ಸರ್ಪವು ನನಗೆ ಹೇಗೆ ಗುರುವಾಯಿತೆಂಬುದನ್ನು ಕೇಳಿರಿ.

೨೪. ನಾನು ಸರ್ಪದ ನಡತೆಯನ್ನು ನೋಡಿ ಮನೆಯನ್ನು ಬಿಟ್ಟೆನು. ಮನೆಯನ್ನು ಮಾಡಿಕೊಳ್ಳುವುದರಿಂದ ದುಃಖವುಂಟಾಗುವುದೇ ಹೊರತು ಸುಖವುಂಟಾಗುವುದಿಲ್ಲ.

೨೫. ಸರ್ಪವು ಇನ್ನೊಂದು ಪ್ರಾಣಿಯು ರಚಿಸಿದ ಮನೆಯನ್ನು ಹೊಕ್ಕು ಸುಖವಾಗಿರುವುದು. ಅಲ್ಲಿ ಸುಖದಿಂದ ವಾಸಿಸಿ ಅಂತಹ ಮತ್ತೊಂದು ಮನೆಗೆ ಹೋಗುವುದು.

೨೬. ಆ ಸರ್ಪವು ಇದು ನನ್ನ ಮನೆಯೆಂದು ಮಮತೆಯನ್ನಿಡುವುದಿಲ್ಲ. ತಾನು ರಚಿಸಿದ್ದಲ್ಲವಾದ್ದರಿಂದ ಅದು ಅದಕ್ಕೆ ಸ್ವಂತ ಮನೆಯಾಗುವುದಿಲ್ಲ.

ಯಃ ಪುನಃ ಕುರುತೇ ಹರ್ಮ್ಯಂ ಸ್ವಯಂ ಕ್ಲೇಶೈಃ ಪೃಥಗ್ವಿಧೈಃ ।
ನ ತಸ್ಯ ಯಾತಿ ತತ್ಸಶ್ಚಾನ್ಮೃತ್ಯುಕಾಲೇಽಪಿ ಸಂಸ್ಥಿತೇ ॥ ೨೭ ॥
ಗೃಹಾತ್ಸಂಜಾಯತೇ ಭಾರ್ಯಾ ತತಃ ಪುತ್ರಶ್ಚ ಕನ್ಯಕಾ ।
ತೇಷಾಮರ್ಥೇ ಕರೋತಿಸ್ಮ ಕೃತ್ಯಾಕೃತ್ಯಂ ತತಃ ಪರಂ ॥ ೨೮ ॥
ಕೋಶಕಾರಮಿವಾತ್ಮಾನಂ ವೇಷ್ಟಯನ್ನಾವಬುಧ್ಯತೇ ॥ ೨೯ ॥
ಪುತ್ರದಾರಗೃಹಕ್ಷೇತ್ರಸಕ್ತಾಃ ಸೀದಂತಿ ಜಂತವಃ ।
ಲೋಭಪಂಕಾರ್ಣವೇ ಮಗ್ನಾ ಜೀರ್ಣಾ ವನಗಜಾ ಇವ ॥ ೩೦ ॥
ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಃ ।
ಭೋಕ್ತಾರೋ ವಿಪ್ರಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥ ೩೧ ॥
ಏತಸ್ಮಾತ್ಕಾರಣಾದ್ಧರ್ಮ್ಯಂ ಮಯಾ ತ್ಯಕ್ತಂ ದ್ವಿಜೋತ್ತಮಾಃ ।
ಮೋಕ್ಷಮಾರ್ಗಾರ್ಗಲಾಭೂತಂ ದೃಷ್ಟ್ವಾ ಸರ್ಪವಿಚೇಷ್ಟಿತಂ ॥ ೩೨ ॥
ಏಕರಾತ್ರಂ ವಸೇದ್ಗ್ರಾಮೇ ತ್ರಿರಾತ್ರಂ ಪತ್ತನೇ ವಸೇತ್ ।
ಯೋ ಯಾತಿ ಸ ಯತಿಃ ಪ್ರೋಕ್ತೋ ಯೋಽನ್ಯೋ ಯೋಗಿವಿಡಂಬಕಃ ॥

---

೨೭. ಅನೇಕ ವಿಧಗಳಾದ ಕ್ಲೇಶಗಳಿಂದ ಸ್ವಂತವಾಗಿ ಮನೆಯನ್ನು ರಚಿಸಿದವನಿಗೆ ಮರಣಕಾಲವೊದಗಿದರೂ ಮನೆಯ ಮಮತೆಯು ಹೋಗುವುದಿಲ್ಲ.

೨೮. ಮನೆಯಿಂದ ಗೃಹಿಣಿಯೂ, ಅವಳಿಂದ ಮಗನೂ, ಮಗಳೂ ಆಗುವರು. ಅನಂತರ ಅವರಿಗಾಗಿ ಗೃಹಸ್ಥನು ಕಾರ್ಯಾಕಾರ್ಯಗಳನ್ನು ಮಾಡುವನು.

೨೯. ಜೇಡವನ್ನು ಮಾಡುವವನಂತೆ ತನ್ನನ್ನು ಅವರೆಲ್ಲ ಸುತ್ತಿಕೊಂಡಿರುವುದನ್ನು ಅವನು ತಿಳಿಯುವುದಿಲ್ಲ.

೩೦. ಮಕ್ಕಳು, ಹೆಂಡತಿ, ಮನೆ, ಹೊಲ, ಗದ್ದೆ ಇವುಗಳಲ್ಲಿ ಆಸಕ್ತರಾದ ಮಾನವರು ಆಶೆಯೆಂಬ ಕೆಸರಿನ ಕಡಲಲ್ಲಿ ಮುಳುಗಿ ಮುದಿಯಾದ ಕಾಡಾನೆಗಳಂತೆ ದುಃಖಗೊಳ್ಳುವರು.

೩೧. ಒಬ್ಬನು ಪಾಪಗಳನ್ನು ಮಾಡುತ್ತಾನೆ. ಅದರ ಫಲವನ್ನು ಅನೇಕ ಜನರು ಅನುಭವಿಸುತ್ತಾರೆ. ಅನುಭವಿಸುವವರು ದೋಷವಿಲ್ಲದವರಾಗುವರು. ಪಾಪವನ್ನು ಮಾಡಿದವನು ದೋಷಗ್ರಸ್ತನಾಗುವನು.

೩೨. ದ್ವಿಜವರ್ಯರೆ! ಈ ಕಾರಣದಿಂದ ನಾನು ಸರ್ಪದ ನಡತೆಯನ್ನು ಕಂಡು ಮೋಕ್ಷಮಾರ್ಗಕ್ಕೆ ಅಗ್ಗಣಿಯಂತಿರುವ ನನ್ನ ಮನೆಯನ್ನು ತ್ಯಜಿಸಿದೆನು.

೩೩. ಗ್ರಾಮದಲ್ಲಿ ಒಂದು ರಾತ್ರಿಯೂ, ಪಟ್ಟಣದಲ್ಲಿ ಮೂರು ರಾತ್ರಿಗಳೂ ವಾಸಮಾಡುತ್ತಿರುವವನು (ಸಂಚರಿಸುತ್ತಿರುವವನು) ಯತಿಯೆನ್ನಿಸಿಕೊಳ್ಳುವನು. ಇತರನು ಯೋಗವನ್ನು ಅನುಕರಿಸುವವನು.

**ವಿಧೂಮೇ ಚ ಪ್ರಶಾಂತಾಗ್ನೌ ಯಸ್ತು ಮಾಧುಕರೀಂ ಚರೇತ್ ।**
**ಗೃಹೇ ಚ ವಿಪ್ರಮುಖ್ಯಾನಾಂ ಯತಿಃ ಸ ನೇತರಃ ಸ್ಮೃತಃ ॥ ೩೪ ॥**
**ದಂಡೀ ಭಿಕ್ಷಾಂ ಚ ವಾ ಕುರ್ಯಾತ್ತದೇವ ವ್ಯಸನಂ ವಿನಾ ।**
**ಯಸ್ತಿಷ್ಠತಿ ನ ವೈರಾಗ್ಯಂ ಯಾತಿ ನೈವ ಯತಿರ್ಹಿ ಸಃ ॥ ೩೫ ॥**
**ದಿವಾ ಸ್ವಪ್ನಂ ವೃಥಾನ್ನಂ ಚ ಸ್ತ್ರೀಕಥಾಽಲೋಕ್ಯಮೇವ ಚ ।**
**ಶ್ವೇತವಸ್ತ್ರಂ ಹಿರಣ್ಯಂ ಚ ಯತೀನಾಂ ಪತನಾನಿ ಷಟ್ ॥ ೩೬ ॥**
**ಸಮಃ ಶತ್ರೌ ಚ ಮಿತ್ರೇ ಚ ಸಮಲೋಷ್ಟಾಶ್ಮಕಾಂಚನಃ ।**
**ಸುಹೃತ್ಪುತ್ರ ಉದಾಸೀನಃ ಸ ಯತಿರ್ನೇತರಃ ಸ್ಮೃತಃ ॥ ೩೭ ॥**
**ಸಮೌ ಮಾನಾಽಪಮಾನೌ ಚ ಸ್ವದೇಶೇ ಪರಕೇಽಪಿ ವಾ ।**
**ಯೋ ನ ಹೃಷ್ಯತಿ ನ ದ್ವೇಷ್ಟಿ ಸಯತಿರ್ನೇತರಃ ಸ್ಮೃತಃ ॥ ೩೮ ॥**
**ಯಸ್ಮಿನ್ಗೃಹೇ ವಿಶೇಷೇಣ ಲಭೇದ್ಭಿಕ್ಷಾ ಚ ವಾಽಶನಂ ।**
**ತತ್ರ ನೋ ಯಾತಿ ಯೋ ಭೂಯಃ ಸಯತಿರ್ನೇತರಃ ಸ್ಮೃತಃ ॥ ೩೯ ॥**
**ಏವಂ ಜ್ಞಾತ್ವಾ ಮಯಾ ವಿಪ್ರ ದೃಷ್ಟ್ವಾ ಸರ್ಪವಿಚೇಷ್ಟಿತಂ ।**
**ಸರ್ವಸಂಗಪರಿತ್ಯಾಗೋ ಮೋಕ್ಷಾರ್ಥಂ ಪರಿಕಲ್ಪಿತಃ ॥ ೪೦ ॥**

---

೩೪. ಅಗ್ನಿಯು ಶಾಂತವಾಗಿ ಹೊಗೆಯಿಲ್ಲದ ವಿಪ್ರೋತ್ತಮರ ಮನೆಯಲ್ಲಿ ಭಿಕ್ಷಾಟನೆ ಮಾಡುವವನು ಯತಿಯು. ಇತರನು ಯತಿಯಲ್ಲ.

೩೫. ಸನ್ಯಾಸಿಯು ಭಿಕ್ಷಾಟನೆ ಮಾಡಬೇಕು. ಭಿಕ್ಷಾಟನೆಯಲ್ಲಿ ಆಸಕ್ತನಲ್ಲದವನೂ, ವೈರಾಗ್ಯವಿಲ್ಲದವನೂ ಯತಿಯೇ ಅಲ್ಲ.

೩೬. ಹಗಲು ನಿದ್ರೆ, ವ್ಯರ್ಥವಾದ ಅನ್ನ, ಸ್ತ್ರೀ ಕಥೆ, ಸ್ತ್ರೀಯರ ದರ್ಶನ, ಒಳ್ಳೆಯ ಬಟ್ಟೆ, ಸುವರ್ಣ ಈ ಆರು ಯತಿತ್ವವನ್ನು ಕೆಡಿಸುವುವು.

೩೭. ಶತ್ರು ಮಿತ್ರರಲ್ಲಿಯೂ, ಕಲ್ಲು ಚಿನ್ನಗಳಲ್ಲಿಯೂ ಸಮವಾದ ಭಾವನೆಯುಳ್ಳವನೂ, ಸ್ನೇಹಿತರು ಮತ್ತು ಮಕ್ಕಳಲ್ಲಿ ಉದಾಸೀನನಾದವನೂ ಯತಿಯು. ಇತರನಲ್ಲ.

೩೮. ಮಾನಾಪಮಾನಗಳಲ್ಲಿಯೂ, ಸ್ವದೇಶಪರದೇಶಗಳಲ್ಲಿಯೂ ಸಮವಾದ ಭಾವನೆಯುಳ್ಳವನೂ, ಹರ್ಷಗೊಳ್ಳದವನೂ, ದ್ವೇಷಮಾಡದವನೂ ಯತಿಯು. ಇತರನಲ್ಲ.

೩೯. ವಿಶೇಷವಾಗಿ ಭಿಕ್ಷೆ, ಭೋಜನಗಳು ದೊರೆತ ಮನೆಗೆ ಮರಳಿ ಹೋಗದಿರುವವನು ಯತಿಯು. ಇತರನು ಯತಿಯಲ್ಲ.

೪೦. ಹೀಗೆ ನಾನು ಸರ್ಪದ ನಡತೆಯನ್ನು ನೋಡಿ ಮೋಕ್ಷಕ್ಕಾಗಿ ಸಕಲ ಸಂಗಗಳನ್ನು ತ್ಯಜಿಸಿದೆನು.

ಏವಂ ಮಮಾಹಿಃ ಸಂಜಾತೋ ಗುರುರ್ಬ್ರಾಹ್ಮಣಸತ್ತಮಾಃ ।
ತತ್ಪ್ರಭಾವಾನ್ಮಹತ್ತೇಜಃ ಸಂಜಾತಂ ವಿಗ್ರಹೇ ಮಮ ॥ ४೧ ॥
ಯಥಾ ಮೇ ಭ್ರಮರೋ ಜಾತೋ ಗುರುಸ್ತದ್ವದ್ವದಾಮಿ ಚ ।
ಕಸ್ಮಿನ್‌ವೃಕ್ಷೇ ಮಯಾ ದೃಷ್ಟೋ ಭ್ರಮರಃ ಕೋಽಪಿ ಸಂಗತಃ ॥ ४೨ ॥
ಶಾಖಾಗ್ರಂ ತು ಸಮಾಶ್ರಿತ್ಯ ಕೃತಪೂರ್ವನಿಬಂಧನಂ ।
ವಸಂತ ಸಮಯೇ ಪ್ರಾಪ್ತೇ ಪುಷ್ಪವಂತಶ್ಚ ಯೇದ್ರುಮಾಃ ॥ ४೩ ॥
ಸುಗಂಧಫಲಪುಷ್ಪಾಶ್ಚ ಸುಗಂಧದಲಸಂಯುತಾಃ ।
ತೇಷಾಮಮುಂ ಸಮಾದಾಯ ಶ್ರೇಷ್ಠ ಶ್ರೇಷ್ಠತಮಂ ರಸಂ ॥ ४४ ॥
ನಿಯೋಜಯತಿ ಶಾಖಾಗ್ರೇ ತರೋರಸ್ಯ ಸದೈವ ಹಿ ।
ಅನಿರ್ವಿಣ್ಣತಯಾ ಹೃಷ್ಟಸ್ತದಾ ಸಮ್ಯಙ್ನಿರೀಕ್ಷಿತಃ ॥ ४೫ ॥
ಮಧುಜಾಲಂ ತತೋ ಜಾತಂ ಕಾಲೇನ ಮಹತಾ ಮಹತ್ ।
ಯೇನಾನ್ಯೇ ಮಧುನಾ ತೃಪ್ತಿಂ ಪ್ರಾಪ್ತಾಃ ಶತಸಹಸ್ರಶಃ ॥ ४೬ ॥
ತಚ್ಚೇಷ್ಟಿತಂ ಮಯಾ ವೀಕ್ಷ್ಯ ಶಾಸ್ತ್ರಾಣ್ಯನ್ಯಾನಿ ಭೂರಿಶಃ ।
ತತಸ್ತೇಷಾಂ ಸಮಾದಾಯ ಸಾರಭೂತಂ ಪೃಥಕ್ ಪೃಥಕ್ ।
ಕೃತಾನಿ ಭೂರಿ ಶಾಸ್ತ್ರಾಣಿ ವೇದಾಂತಾನಿ ಚ ಕೃತ್ಸ್ನಶಃ ॥ ४೭ ॥
ಉಪಜೀವಂತಿ ಯಾನ್ಯನ್ಯೇ ಯಥಾ ಭೃಂಗಾಸ್ತಥಾ ದ್ವಿಜಾಃ ॥ ४೮ ॥

---

४೧. ಬ್ರಾಹ್ಮಣವರ್ಯರೆ! ಹೀಗೆ ನನಗೆ ಸರ್ಪವು ಗುರುವಾಯಿತು. ಅದರ ಪ್ರಭಾವದಿಂದ ನನ್ನ ಶರೀರದಲ್ಲಿ ಅಧಿಕ ತೇಜಸ್ಸುಂಟಾಯಿತು.

४೨–४೫. ಭ್ರಮರವು ನನಗೆ ಹೇಗೆ ಗುರುವಾಯಿತೆಂಬುದನ್ನು ಹೇಳುತ್ತೇನೆ. ಒಂದು ದುಂಬಿಯು ಒಂದಾನೊಂದು ಮರದ ಕೊಂಬೆಯನ್ನು ಆಶ್ರಯಿಸಿಕೊಂಡಿತ್ತು. ವಸಂತಕಾಲದಲ್ಲಿ ಮರಗಳೆಲ್ಲ ಸುಗಂಧವಾದ ಫಲ, ಪುಷ್ಪ, ದಳಗಳುಳ್ಳವಾದುವು. ಆ ದುಂಬಿಯು ಆ ಹೂವುಗಳ ಶ್ರೇಷ್ಠವಾದ ಮಕರಂದ ಭಾಗವನ್ನು ತೆಗೆದು ಕೊಂಡು ಬಂದು ಈ ಮರದ ಕೊಂಬೆಯಲ್ಲಿ ಸೇರಿಸಿತು. ಆಗ ಅದು ವ್ಯಸನವಿಲ್ಲದೆ ಸಂತೋಷಗೊಂಡಿರುವುದಾಗಿ ಕಾಣಿಸಿತು.

४೬. ಹೀಗೆ ಬಹುಕಾಲದ ಮೇಲೆ ಆ ಕೊಂಬೆಯಲ್ಲಿ ದೊಡ್ಡ ಜೇನುಗೂಡಾ ಯಿತು. ಜೇನಿನಿಂದ ಇತರ ಸಾವಿರಾರು ದುಂಬಿಗಳು ತೃಪ್ತಿಗೊಂಡುವು.

४೭. ಹೀಗೆ ನಾನು ಆ ದುಂಬಿಯ ಕೆಲಸವನ್ನು ನೋಡಿ ಇತರ ಬಹು ಶಾಸ್ತ್ರಗಳನ್ನು ಕಂಡು ಅವುಗಳಲ್ಲಿರುವ ಶ್ರೇಷ್ಠಭಾಗವನ್ನು ಪ್ರತ್ಯೇಕವಾಗಿ ತೆಗೆದು ಕೊಂಡು ಅನೇಕ ಶಾಸ್ತ್ರಗಳನ್ನೂ, ವೇದಾಂತಗಳನ್ನೂ ರಚಿಸಿದೆನು.

४೮. ಇವುಗಳನ್ನು ಇತರ ಬ್ರಾಹ್ಮಣರು ದುಂಬಿಯಂತೆ ಆಶ್ರಯಿಸಿ ಜೀವಿಸು ತ್ತಿದ್ದಾರೆ.

ಏವಂ ಮೇ ಮಧುಪೋ ಜಾತೋ ಗುರುತ್ವೇ ಚ ದ್ವಿಜೋತ್ತಮಾಃ ।
ತೇನಾಽಹಂ ತೇಜಸಾ ಯುಕ್ತೋ ನಾನ್ಯದಸ್ತೀಹ ಕಾರಣಂ ॥ ೪೯ ॥
ವೇದಾಂತವಾದಿನೋ ಯೇಽತ್ರ ಪ್ರಭವಂತಿ ವ್ರತಾನ್ವಿತಾಃ ।
ನಿರ್ಲೋಭಾ ಗತತೃಷ್ಣಾಶ್ಚ ತೇ ಭವಂತಿ ಸುತೇಜಸಃ ॥ ೫೦ ॥
ಏಕೇನಾಽಪಿ ವಿಹೀನಾ ಯೇ ಪ್ರಭವಂತಿ ಕುಬುದ್ಧಯಃ ।
ಲೋಭಮೋಹಾನ್ವಿತಾಃ ಪಾಪಾ ಜಾಯಂತೇ ತೇ ವಿಚೇತಸಃ ॥ ೫೧ ॥
ವೇದಾಂತಾನಿ ಸುಭೂರೀಣಿ ಮಯಾ ದೃಷ್ಟ್ವಾ ವಿಚಾರ್ಯ ಚ ।
ಸಮರೂಪಾಃ ಕೃತಾ ಗ್ರಂಥಾ ಮರ್ತ್ಯಲೋಕಹಿತಾರ್ಥಿನಾ ॥ ೫೨ ॥
ಏವಂ ಮೇ ಗುರುತಾಂ ಪ್ರಾಪ್ತೋ ಮಧುಪೋ ದ್ವಿಜಸತ್ತಮಾಃ ।
ಇಷುಕಾರೋ ಯಥಾ ಜಾತಸ್ತಥಾ ಚೈವ ಬ್ರವೀಮಿ ವಃ ॥ ೫೩ ॥
ಆತ್ಮಾವಲೋಕನಾರ್ಥಾಯ ಮಯಾ ದೃಷ್ಟಾಃ ಸಹಸ್ರಶಃ ।
ಯೋಗಿನೋ ಜ್ಞಾನಸಂಪನ್ನಾಸ್ತೈಃ ಪ್ರೋಕ್ತಂ ಚ ಸ್ವಶಕ್ತಿತಃ ॥ ೫೪ ॥
ಆತ್ಮಾವಲೋಕನಂ ಭಾವಿ ಸುಶಿಷ್ಯಾಯ ಯಥಾ ತಥಾ ।
ಸ ಸಮಾಧಿಜದ್ವಾರೇಣ ಚತುರಾಶೀತಿ ಕೇನ ಚ ॥ ೫೫ ॥

---

೪೯. ದ್ವಿಜವರ್ಯರೆ! ಹೀಗೆ ನನಗೆ ದುಂಬಿಯು ಗುರುವಾಯಿತು. ಅದರಿಂದ ನಾನು ತೇಜಸ್ವಿಯಾದೆನು. ಬೇರೆ ಏನೂ ಕಾರಣವಿಲ್ಲ.

೫೦. ವೇದಾಂತವಾದಿಗಳೂ, ವ್ರತವನ್ನಾಚರಿಸುವವರೂ, ಆಶೆಯಿಲ್ಲದವರೂ, ತೇಜಸ್ವಿಗಳಾಗುವರು.

೫೧. ಇವುಗಳಲ್ಲಿ ಒಂದಿಲ್ಲದಿದ್ದರೂ ಮನುಷ್ಯರು ಕುಬುದ್ಧಿಗಳೂ, ಲೋಭಮೋಹವುಳ್ಳವರೂ, ಮೂಢರೂ ಆಗುವರು.

೫೨. ನಾನು ಅನೇಕ ವೇದಾಂತಗ್ರಂಥಗಳನ್ನು ಅವಲೋಕಿಸಿ, ವಿಮರ್ಶಿಸಿ ಮನುಷ್ಯಲೋಕದ ಹಿತಕ್ಕಾಗಿ ಸಮವಾಗಿ ಮಾಡಿರುವೆನು.

೫೩. ದ್ವಿಜವರ್ಯರೆ! ಹೀಗೆ ನನಗೆ ದುಂಬಿಯು ಗುರುವಾಯಿತು. ಇಷುಕಾರನು ಹೇಗೆ ಗುರುವಾದನೆಂಬುದನ್ನು ನಿಮಗೆ ಹೇಳುತ್ತೇನೆ.

೫೪–೫೬. ನಾನು ಪರಮಾತ್ಮನ ಪ್ರತ್ಯಕ್ಷಕ್ಕಾಗಿ ಸಾವಿರಾರು ಮಂದಿ ಜ್ಞಾನಿಗಳಾದ ಯೋಗಿಗಳನ್ನು ನೋಡಿದೆನು. ಅವರು ತಮ್ಮ ಶಕ್ತ್ಯನುಸಾರ ಸುಶಿಷ್ಯನಿಗೆ ಹೇಳುವಂತೆ ನನಗೆ ಪರಮಾತ್ಮನು ಪ್ರತ್ಯಕ್ಷನಾಗುವ ಬಗೆಯನ್ನು ಹೇಳಿದರು. ಆ ಪರಮಾತ್ಮನು ಎಂಬತ್ತನಾಲ್ಕು ವಿಧವಾದ ಸಮಾಧಿ ದ್ವಾರದಿಂದಲೂ, ಪದ್ಮಾಸನ ಮೊದಲಾದ ಆಸನಗಳಿಂದಲೂ, ಅವುಗಳ ಪ್ರಮಾಣ

ಆಸನೈಸ್ತತ್ರ್ರವಾಣ್ಯೈಶ್ಚ ಪದ್ಮಾಸನ ಪ್ರಪೂರ್ವಕೈಃ ।
ಅಸಂಖ್ಯೈಃ ಕಾರಣೈಶ್ಚೈವ ಹ್ಯಧ್ಯಾತ್ಮಪಠನೈಸ್ತಥಾ ।
ತತೋಽಪಿ ಲಕ್ಷಿತೋ ನೈವ ಮಯಾಽಽತ್ಮಾ ಚ ಕಥಂಚನ ॥ ೫೬ ॥
ತತೋ ವೈರಾಗ್ಯಮಾಪನ್ನಃ ಪ್ರಭ್ರಮಾಮಿ ಧರಾತಲೇ ।
ಗುರ್ವರ್ಥೇ ನ ಚ ಲೇಭೇಽಹಂ ಗುರುಮಾತ್ಮಾವಲೋಕನೇ ॥ ೫೭ ॥
ಅನ್ಯಸ್ಮಿನ್ನಹನಿ ಪ್ರಾಪ್ತೇ ರಾಜಮಾರ್ಗೇಣ ಗಚ್ಛತಾ ।
ಮಯಾ ದೃಷ್ಟೋ ಮಹೀಪಾಲಃ ಸೈನ್ಯೇನ ಮಹತಾವೃತಃ ॥ ೫೮ ॥
ತತೋಽಹಂ ಮಾರ್ಗಮುತ್ಸೃಜ್ಯ ಸಮ್ಮುಖಸ್ಯ ಮಹೀಪತೇಃ ।
ಉಟಜದ್ವಾರಮಾಶ್ರಿತ್ಯ ಕಿಂಚಿದೂರ್ಧ್ವೋಽಪಿ ಸಂಸ್ಥಿತಃ ॥ ೫೯ ॥
ತತ್ರಾಪಿ ಚ ಸ್ಥಿತಃ ಕಶ್ಚಿತ್ಪುರುಷಃ ಕಾಂಡಕಾರಕಃ ।
ಋಜುಕರ್ಮಣಿ ಸಂಯುಕ್ತಃ ಶರಾಣಾಂ ನತಪರ್ವಣಾಂ ॥ ೬೦ ॥
ತಸ್ಮಿನ್ ದೂರಗತೇ ಭೂಪೇ ತಥಾಽನ್ಯಃ ಸೇವಕೋಽಭ್ಯಗಾತ್ ॥ ೬೧ ॥
ತಂ ಪಪ್ರಚ್ಛ ತ್ವರಾಯುಕ್ತಃ ಶೃಣ್ವತೋಽಪಿ ಮಮ ದ್ವಿಜಾಃ ।
ಕಾಂಡಕರ್ಮಣಿ ಸಂಸಕ್ತಮೃಜುತ್ವೇನ ಸ್ಥಿತಂ ತದಾ ॥ ೬೨ ॥
ಕಿಯತೀ ವರ್ತತೇ ವೇಲಾ ಗತಸ್ಯ ಪೃಥಿವೀಪತೇಃ ।
ಮಾರ್ಗೇಣಾನೇನ ಮೇ ಬ್ರೂಹಿ ಯೇನ ಗಚ್ಛಾಮಿ ಪೃಷ್ಠತಃ ॥ ೬೩ ॥

---

ಗಳಿಂದಲೂ, ಮಿತಿಯಿಲ್ಲದ ಕಾರಣಗಳಿಂದಲೂ, ವೇದಾಂತ ಪಠನಗಳಿಂದಲೂ ನನಗೆ ಪ್ರತ್ಯಕ್ಷನಾಗಲಿಲ್ಲ.

೫೭. ಅನಂತರ ನಾನು ವೈರಾಗ್ಯಗೊಂಡು ಭೂಮಿಯಲ್ಲಿ ಪರಮಾತ್ಮ ಪ್ರತ್ಯಕ್ಷಕ್ಕಾಗಿ ಗುರುವನ್ನು ಪಡೆಯಲು ಸಂಚರಿಸಿದರೂ ಗುರುವು ದೊರೆಯಲಿಲ್ಲ.

೫೮. ಇನ್ನೊಂದು ದಿನ ನಾನು ಹೆದ್ದಾರಿಯಿಂದ ಸಂಚರಿಸುತ್ತ ದೊಡ್ಡ ಸೈನ್ಯದಿಂದ ಸಹಿತನಾದ ದೊರೆಯೊಬ್ಬನನ್ನು ಕಂಡೆನು.

೫೯. ನಾನು ಸಮ್ಮುಖನಾದ ಅವನಿಗೆ ದಾರಿಯನ್ನು ಬಿಟ್ಟು ಗುಡಿಸಲಿನ ಬಾಗಿಲನ್ನು ಆಶ್ರಯಿಸಿ ಸ್ವಲ್ಪ ಮೇಲೆ ನಿಂತೆನು.

೬೦. ಅಲ್ಲಿ ಒಬ್ಬ ಬಾಣವನ್ನು ಮಾಡುವವನು ಬಗ್ಗಿದ ಗಂಟುಗಳುಳ್ಳ ಬಾಣಗಳನ್ನು ಸರಿಮಾಡುತ್ತಿದ್ದನು.

೬೧-೬೨. ಆ ದೊರೆಯು ದೂರ ಹೋಗಲು ಮತ್ತೊಬ್ಬ ಸೇವಕನು ಅಲ್ಲಿಗೆ ಬಂದನು. ಅವನು ಬಾಣವನ್ನು ಮಾಡುತ್ತಿರುವವಪನನ್ನು ಕುರಿತು ನಾನು ಕೇಳುತ್ತಿರುವಾಗಲೇ ಬೇಗನೆ ಹೀಗೆ ಪ್ರಶ್ನೆಮಾಡಿದನು.

೬೩. "ಅರಸನು ಈ ದಾರಿಯಿಂದ ಹೋಗಿ ಎಷ್ಟು ಹೊತ್ತಾಯಿತು?" ಹೇಳು. ನಾನು ಅವನನ್ನು ಹಿಂಬಾಲಿಸುವೆನು.

ಸೋಽಬ್ರವೀತ್ತಂ ತದಾ ವಿಪ್ರಾ ಅಧೋವಕ್ತ್ರಃ ಸ್ಥಿತೋ ನರಃ ।
ಅನೇನ ರಾಜಮಾರ್ಗೇಣ ಗಚ್ಛಮಾನೋ ಮಹೀಪತಿಃ ॥ ೬೪ ॥
ನ ಮಯಾ ವೀಕ್ಷಿತಃ ಕಶ್ಚಿದಿದಾನೀಂ ರಾಜಸೇವಕ ।
ತದನ್ಯಂ ಪೃಚ್ಛ ಚೇತ್ಕಾರ್ಯಂ ತವಾನೇನ ಬ್ರವೀತು ಸಃ ॥ ೬೫ ॥
ಶರಕರ್ಮಣಿ ಸಂಸಕ್ತಸ್ತ್ವಹಮತ್ರ ವ್ಯವಸ್ಥಿತಃ ।
ತಚ್ಛ್ರುತ್ವಾ ವಚನಂ ತಸ್ಯ ಸ್ವಚಿತ್ತೇ ಚಿಂತಿತಂ ಮಯಾ ॥ ೬೬ ॥
ಏಕ ಚಿತ್ತತಯಾ ಯೋಗೋ ಬ್ರಹ್ಮಜ್ಞಾನಸಮುದ್ಭವಃ ।
ನಾಽನ್ಯಥಾ ಭವಿತಾ ಮೇ ಸ ತತಶ್ಚಿತ್ತನಿರೋಧನಂ ।
ಕರೋಮಿ ಬ್ರಹ್ಮ ಸಂಸಿದ್ಧ್ಯೈ ತತೋ ಮೇಽಸೌ ಭವಿಷ್ಯತಿ ॥ ೬೭ ॥
ತತಃ ಪ್ರಭೃತಿ ಚಿತ್ತೇ ಸ್ವೇ ಧಾರಯಾಮಿ ಸದೈವ ತು ।
ವಿಶ್ವರೂಪಂ ತಥಾ ಸೂರ್ಯಂ ಹೃತ್ಪಂಕಜನಿವಾಸಿನಂ ॥ ೬೮ ॥
ತತೋ ದಿಕ್ಷು ದಿಗಂತೇಷು ಗಗನೇ ಧರಣೀತಲೇ ।
ತಮೇಕಂ ಚೈವ ಪಶ್ಯಾಮಿ ನಾಽನ್ಯತ್ಕಿಂಚಿದ್ದ್ವಿಜೋತ್ತಮಾಃ ॥ ೬೯ ॥
ಅಹಂ ಚ ತೇಜಸಾ ಯುಕ್ತಸ್ತತ್ಪ್ರಭಾವೇಣ ಸಂಸ್ಥಿತಃ ॥ ೭೦ ॥
ಏವಂ ಮೇ ಸ ಗುರುರ್ಜಾತಃ ಶರಕಾರೋ ದ್ವಿಜೋತ್ತಮಾಃ ।
ಶೃಣುಧ್ವಂ ಕನ್ಯಕಾ ಜಾತಾ ಗುರುತ್ವೇ ಮೇ ಯಥಾ ಪುರಾ ॥ ೭೧ ॥

---

೬೪–೬೬. ತಲೆ ತಗ್ಗಿಸಿಕೊಂಡಿರುವ ಆ ಇಷುಕಾರನು, "ರಾಜಸೇವಕ! ಈ ದಾರಿಯಲ್ಲಿ ಹೋದ ಯಾವ ರಾಜನನ್ನೂ ನಾನು ನೋಡಲಿಲ್ಲ. ಆದುದರಿಂದ ನಿನಗೆ ರಾಜನಿಂದೇನಾದರೂ ಆಗಬೇಕಾದರೆ ಬೇರೆಯವನನ್ನು ಕೇಳು. ನಾನು ಬಾಣವನ್ನು ಸರಿಮಾಡುತ್ತಿದ್ದೆನು" ಎಂದನು. ನಾನು ಅವನ ಮಾತನ್ನು ಕೇಳಿ ನನ್ನ ಮನಸ್ಸಿನಲ್ಲಿ ಆಲೋಚಿಸಿದೆನು.

೬೭–೬೮. ಒಮ್ಮನಸ್ಸಿನಿಂದ ಮಾಡುವ ಯೋಗವು ಬ್ರಹ್ಮಜ್ಞಾನವನ್ನುಂಟು ಮಾಡುವುದು. ಬೇರೆ ಮಾರ್ಗದಿಂದುಂಟಾಗುವುದಿಲ್ಲ. ಆದುದರಿಂದ ನಾನು ಬ್ರಹ್ಮಪ್ರತ್ಯಕ್ಷಕ್ಕಾಗಿ ಮನಸ್ಸನ್ನು ತಡೆಯುವೆನು. ಅದರಿಂದ ಬ್ರಹ್ಮಪ್ರತ್ಯಕ್ಷ ವಾಗುವುದು. ಅದು ಮೊದಲ್ಗೊಂಡು ನಾನು ವಿಶ್ವರೂಪನೂ, ಹೃದಯಕಮಲ ವಾಸಿಯೂ ಆದ ಸೂರ್ಯನನ್ನು ಧ್ಯಾನಿಸುವೆನು.

೬೯–೭೦. ದ್ವಿಜವರ್ಯರೆ! ಅನಂತರ ನಾನು ದಶದಿಕ್ಕುಗಳಲ್ಲಿಯೂ, ಆಕಾಶ ದಲ್ಲಿಯೂ, ಭೂಮಿಯಲ್ಲಿಯೂ ಆ ಬ್ರಹ್ಮನೊಬ್ಬನನ್ನೇ ನೋಡುವೆನು. ಬೇರೆ ಏನನ್ನೂ ನೋಡುವುದಿಲ್ಲ. ನಾನು ಅದರ ಪ್ರಭಾವದಿಂದ ತೇಜಸ್ವಿಯಾಗಿದ್ದೇನೆ.

೭೧. ಹೀಗೆ ನನಗೆ ಇಷುಕಾರನು ಗುರುವಾದನು. ಕನ್ಯೆಯು ಹೇಗೆ ಗುರು ವಾದಳೆಂಬುದನ್ನು ಕೇಳಿರಿ.

**ಸರ್ವಸಂಗ ಪರಿತ್ಯಾಗೀ ಯದಾಽಹಂ ನಿರ್ಗತೋ ಗೃಹಾತ್ ।**
**ಮಮಾನುಪೃಷ್ಠತಶ್ಚೈವ ತತೋ ಭಾರ್ಯಾ ವಿನಿರ್ಗತಾ ॥ ೭೨ ॥**
**ಶಿಶುಂ ಪುತ್ರಂ ಸಮಾದಾಯ ಕನ್ಯಾಮೇಕಾಂ ಚ ಶೋಭನಾಂ ।**
**ತತೋಽಹಂ ಭಾರ್ಯಯಾ ಪ್ರೋಕ್ತೋ ವಾನಪ್ರಸ್ಥಾಶ್ರಮೇ ಸ್ಥಿತಃ ॥ ೭೩ ॥**
**ಕುರು ಮೇ ವಚನಂ ಮುಕ್ತಿರತ್ರೈವ ಹಿ ಭವಿಷ್ಯತಿ ।**
**ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥವಾ ಯತಿಃ ।**
**ಯದಿ ಸ್ಯಾತ್ಸಂಯತಾತ್ಮಾ ಸ ನೂನಂ ಮುಕ್ತಿಮವಾಪ್ನುಯಾತ್ ॥ ೭೪ ॥**
**ಅಥವಾ ಮಾಂ ಪರಿತ್ಯಜ್ಯ ಯದಿ ಯಾಸ್ಯಸಿ ಚಾನ್ಯತಃ ।**
**ತದಹಂ ಚ ಮರಿಷ್ಯಾಮಿ ಸತ್ಯಮೇತದಸಂಶಯಂ ॥ ೭೫ ॥**
**ಮೃತಾಯಾಂ ಮಯಿ ತೇ ಬಾಲಾವೇತಾವನುಮರಿಷ್ಯತಃ ।**
**ಕುಮಾರೀ ಚ ಕುಮಾರಶ್ಚ ತಸ್ಮಾನ್ನಾಥ ದಯಾಂ ಕುರು ॥ ೭೬ ॥**
**ಮಾ ವ್ರಜಸ್ವ ಪರಂ ತೀರ್ಥಂ ಪರಿಜಾನನ್ನಪಿ ಸ್ವಯಂ ।**
**ಹಾಟಕೇಶ್ವರಜಂ ಕ್ಷೇತ್ರಮೇತತ್ಪುಣ್ಯತರಂ ಸ್ಮೃತಂ ॥ ೭೭ ॥**
**ಸರ್ವೇಷಾಮೇವ ತೀರ್ಥಾನಾಂ ಶ್ರುತಮೇತನ್ಮಯಾ ವಿಭೋ ।**
**ವದತಾಂ ಬ್ರಾಹ್ಮಣೇಂದ್ರಾಣಾಂ ತಥಾನ್ಯೇಷಾಂ ತಪಸ್ವಿನಾಂ ॥ ೭೮ ॥**

---

೭೨–೭೪. ನಾನು ಸರ್ವಸಂಗವನ್ನು ತ್ಯಜಿಸಿ ಮನೆಯಿಂದ ಹೊರಟಕೂಡಲೆ ನನ್ನ ಪತ್ನಿಯೂ ಸಹ ಒಬ್ಬ ಬಾಲಕನನ್ನೂ, ಕನ್ಯೆಯನ್ನೂ ಕರೆದುಕೊಂಡು ನನ್ನನ್ನು ಹಿಂಬಾಲಿಸಿದಳು. ಅವಳು ನನ್ನನ್ನು ಕುರಿತು ನೀನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸು. ಇದರಲ್ಲಿಯೇ ಮುಕ್ತಿಯು ಲಭಿಸುವುದು. ನನ್ನ ಮಾತನ್ನು ನಡೆಸು. ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಸನ್ಯಾಸಿಯಾಗಲಿ ಜಿತೇಂದ್ರಿಯನಾಗಿದ್ದರೆ ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯುವನು.

೭೫. ಅಥವಾ ನೀನು ನನ್ನನ್ನು ಬಿಟ್ಟು ಬೇರೆ ಕಡೆಗೆ ಹೋದರೆ ನಾನು ನಿಶ್ಚಯವಾಗಿಯೂ ಸಾಯುವೆನು.

೭೬. ನಾನು ಸತ್ತರೆ ನನ್ನೀ ಬಾಲಕ ಬಾಲಿಕೆಯರು ನನ್ನೊಡನೆ ಸಾಯುವರು. ನಾಥ! ಆದುದರಿಂದ ನನ್ನಲ್ಲಿ ದಯೆಯಿಡು.

೭೭–೭೮. ಈ ಹಾಟಕೇಶ್ವರಜ ಕ್ಷೇತ್ರವು ಸಮಸ್ತ ತೀರ್ಥಗಳಲ್ಲಿ ಅತಿ ಪುಣ್ಯಕರವಾದುದು. ಹೀಗೆಂದು ನಾನು ಬ್ರಾಹ್ಮಣೋತ್ತಮರೂ, ಇತರ ಮುನಿಗಳೂ ಹೇಳುತ್ತಿದ್ದುದನ್ನು ಕೇಳಿದ್ದೇನೆ. ಇದನ್ನರಿತ ನೀನು ಬೇರೆ ತೀರ್ಥಕ್ಕೆ ಹೋಗಬೇಡ.

**ಶ್ಲೋಕೋಽಯಂ ಬಹುಧಾ ನಾಥ ಕೀರ್ತ್ಯಮಾನೋ ಮಯಾ ವಿಭೋ ।**
**ವಿಶ್ವಾಮಿತ್ರಸ್ಯ ವಕ್ತ್ರೇಣ ಸನ್ಮುನೇಃ ಸತ್ಯವಾದಿನಃ ॥ ೭೯ ॥**
**ಪುನಂತಿ ಸರ್ವತೀರ್ಥಾನಿ ಸ್ನಾನದಾನಾದಸಂಶಯಂ ।**
**ಹಾಟಕೇಶ್ವರಜಂ ಕ್ಷೇತ್ರಂ ಸ್ಮರಣಾದಪಿ ಪಾವಯೇತ್ ॥ ೮೦ ॥**
**ತತಃ ಕೃಚ್ಛ್ರಾತ್ಪ್ರತಿಜ್ಞಾತಂ ಮಯಾಶ್ರಮನಿಷೇವಣಂ ।**
**ವಾನಪ್ರಸ್ಥೋದ್ಭವಂ ವಾ ಸ್ಯಾತ್ತತೋಽಹಂ ತತ್ರ ಸಂಸ್ಥಿತಃ ॥ ೮೧ ॥**
**ತತ್ರಸ್ಥಸ್ಯ ಹಿ ಮೇ ಕನ್ಯಾ ಕ್ರೀಡತೇ ಪುರತಃ ಸ್ಥಿತಾ ।**
**ವಲಯಾಪೂರಿತಾಭ್ಯಾಂ ಚ ಪ್ರಕೋಷ್ಠಾಭ್ಯಾಂ ತತಸ್ತತಃ ॥ ೮೨ ॥**
**ಯಥಾ ಯಥಾ ಸಾ ಕುರುತೇ ಕಂದಮೂಲಫಲಾಶನಂ ।**
**ತನುತ್ವಂ ಯಾತಿ ಕಾಯೇನ ತಥಾ ಚೈವ ದಿನೇ ದಿನೇ ॥ ೮೩ ॥**
**ತತೋ ಮೇ ಜಾಯತೇ ದುಃಖಂ ತೇಷಾಂ ಪತನಸಂಭವಂ ।**
**ಕಸ್ಯಚಿತ್ತ್ವಥ ಕಾಲಸ್ಯ ಸಂಜಾತಂ ವಲಯತ್ರಯಂ ।**
**ತಸ್ಯಾ ಹಸ್ತೇ ತತಸ್ತಾಭ್ಯಾಂ ತಬ್ದಃ ಸಂಜಾಯತೇ ಮಿಥಃ ॥ ೮೪ ॥**
**ತತಃ ಕಾಲೇನ ಮಹತಾ ತಾಭ್ಯಾಮೇಕಂ ವ್ಯವಸ್ಥಿತಂ ।**
**ನ ಸಂಘರ್ಷೋ ನ ಶಬ್ದಶ್ಚ ತತ್ರಸ್ಥಸ್ಯ ಚ ಜಾಯತೇ ॥ ೮೫ ॥**

---

೭೯. ಸತ್ಯವನ್ನೇ ನುಡಿಯುವ ವಿಶ್ವಾಮಿತ್ರ ಮುನಿಯು ಹೇಳುತ್ತಿದ್ದ ಈ ಶ್ಲೋಕವನ್ನು ನಾನು ಅನೇಕ ಬಾರಿ ಕೇಳಿದ್ದೇನೆ.

೮೦. "ಎಲ್ಲಾ ತೀರ್ಥಗಳು ಸ್ನಾನ ದಾನಗಳಿಂದ ಪವಿತ್ರಗೊಳಿಸುವುವು. ಈ ಹಾಟಕೇಶ್ವರಜ ಕ್ಷೇತ್ರವು ಸ್ಮರಣೆಯಿಂದಲೇ ಪವಿತ್ರಗೊಳಿಸುವುದು".

೮೧. ಅನಂತರ ನಾನು ಕಷ್ಟದಿಂದ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುವುದಕ್ಕೆ ಒಪ್ಪಿದೆನು. ಹಾಗೆಯೇ ಆ ತೀರ್ಥದಲ್ಲಿದ್ದೆನು.

೮೨. ನಾನು ಅಲ್ಲಿರಲು ನನ್ನ ಮಗಳು ಆಶ್ರಮದ ಮುಂಭಾಗದಲ್ಲಿ ಬಳೆಗಳಿಂದ ತುಂಬಿದ ಮೊಣಕೈಗಳಿಂದ ಆಡುತ್ತಿದ್ದಳು.

೮೩. ಅವಳು ಗಡ್ಡೆ, ಗೆಣಸು, ಹಣ್ಣುಗಳನ್ನು ತಿಂದ ಹಾಗೆಲ್ಲ ಪ್ರತಿದಿನವೂ ಕೃಶಳಾಗುತ್ತ ಬಂದಳು.

೮೪. ಅದರಿಂದ ನನಗೆ ಅವಳ ಬಳೆಗಳು ಬಿದ್ದುಹೋಗುವುವು ಎಂದು ದುಃಖವುಂಟಾಯಿತು. ಕೆಲವು ಕಾಲದ ಮೇಲೆ ಅವಳ ಕೈಯಲ್ಲಿ ಮೂರು ಬಳೆಗಳಿದ್ದುವು. ಅವುಗಳು ಪರಸ್ಪರ ಸ್ಪರ್ಶದಿಂದ ಶಬ್ದಮಾಡಿದುವು.

೮೫. ಬಹುಕಾಲದ ಮೇಲೆ ಆ ಬಳೆಗಳಲ್ಲಿ ಒಂದು ಮಾತ್ರ ಉಳಿಯಿತು. ಅದರಿಂದ ಘರ್ಷಣೆಯೂ ಆಗಲಿಲ್ಲ. ಶಬ್ದವೂ ಆಗಲಿಲ್ಲ.

ತದ್ವಿಚಿಂತ್ಯ ಮಯಾ ಸೋಽಪಿ ಹ್ಯಾಶ್ರಮಃ ಪರಿವರ್ಜಿತಃ ।
ಚಿಂತಿತಂ ಚ ಮಯಾ ಚಿತ್ತೇ ಕೃತ್ವಾಚೈವಂ ಸುನಿಶ್ಚಯಂ ॥ ೮೬ ॥
ಬಹುಭಿಃ ಕಲಹೋ ನಿತ್ಯಂ ದ್ವಾಭ್ಯಾಂ ಸಂಘರ್ಷಣಂ ತಥಾ ।
ಏಕಾಕೀ ವಿಚರಿಷ್ಯಾಮಿ ಕುಮಾರೀವಲಯಂ ಯಥಾ ॥ ೮೭ ॥
ತತಃ ಸುಪ್ತಾಂ ಪರಿತ್ಯಜ್ಯ ತಾಂ ಭಾರ್ಯಾಂ ಶಿಶುಸಂಯುತಾಂ ।
ಗತೋಽಹಂ ದೂರಮಧ್ವಾನಂ ಯತ್ರ ನೋ ವೇತ್ತಿ ಸಾ ಚ ಮಾಂ ॥ ೮೮ ॥
ಯತ್ರಾಸ್ತಮಿತಶಾಯೀ ಚ ಯಲ್ಲಬ್ಧಕೃತಭೋಜನಃ ।
ಭ್ರಮಾಮಿ ಮೇದಿನೀ ಪೃಷ್ಠೇ ತ್ಯಕ್ತ್ವಾ ಸಂಸಾರಬಂಧನಂ ॥ ೮೯ ॥
ತತೋ ಮೇ ಜ್ಞಾನಮಾಪನ್ನಮೇವಂ ವಿಪ್ರಾಃ ಶನೈಃ ಶನೈಃ ।
ಅತೀತಾನಾಗತಂ ಚೈವ ವರ್ತಮಾನಂ ವಿಶೇಷತಃ ॥ ೯೦ ॥
ಏವಂ ಮೇ ಕನ್ಯಕಾ ಜಾತಾ ಗುರುತ್ವೇ ದ್ವಿಜಸತ್ತಮಾಃ ॥ ೯೧ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ಗುರೋಃ ಕೃತೇ ।
ನ ಯುಷ್ಮಾಕಂ ಪುರೋ ಮಿಥ್ಯಾ ಕೀರ್ತಯಾಮಿ ಕಥಂಚನ ॥ ೯೨ ॥
ಏವಂ ಮೇ ಜ್ಞಾನಮುತ್ಪನ್ನಂ ಪ್ರಕಾರೈಃ ಷಡ್ಭಿರೇವ ಚ ।
ಏಭಿರ್ಲೋಕೋತ್ತರಂ ಜ್ಞಾನಂ ಯುಷ್ಮತ್ಪ್ರತ್ಯಯಕಾರಕಂ ॥ ೯೩ ॥

---

೮೬–೮೭. ಅದನ್ನಾಲೋಚಿಸಿ ನಾನೂ ಆ ಆಶ್ರಮವನ್ನು ತ್ಯಜಿಸಿದೆನು. ನಾನು ಮನಸ್ಸಿನಲ್ಲಿ ಹೀಗೆ ಆಲೋಚಿಸಿದೆನು. "ಕನ್ಯೆಯ ಬಳೆಯಂತೆ ಹೆಚ್ಚು ಜನರಿದ್ದರೆ ಜಗಳವೂ, ಇಬ್ಬರಿದ್ದರೆ ಸಂಘರ್ಷಣೆಯೂ ಉಂಟಾಗುವುದು. ಆದುದರಿಂದ ನಾನೊಬ್ಬನೇ ಸಂಚರಿಸುವೆನು."

೮೮. ಅನಂತರ ನಾನು ಮಕ್ಕಳೊಡನೆ ಮಲಗಿರುವ ಪತ್ನಿಯನ್ನು ತ್ಯಜಿಸಿ ಅವಳು ನನ್ನನ್ನು ಅರಿಯಲಾರದಷ್ಟು ದೂರ ಹೋದೆನು.

೮೯. ಅನಂತರ ನಾನು ಸಿಕ್ಕಿದಷ್ಟನ್ನು ತಿನ್ನುತ್ತ ಸಾಯಂಕಾಲವಾದ ಕೂಡಲೆ ಎಲ್ಲಿಯೋ ಮಲಗುತ್ತ, ಸಂಸಾರ ಬಂಧನರಹಿತನಾಗಿ ಭೂಮಿಯಲ್ಲೆಲ್ಲ ಸಂಚರಿಸಿದೆನು.

೯೦. ಬ್ರಾಹ್ಮಣರೆ! ಅನಂತರ ನನಗೆ ಭೂತ, ಭವಿಷ್ಯದ್ವರ್ತಮಾನ ಕಾಲದ ಜ್ಞಾನವು ಮೆಲ್ಲ ಮೆಲ್ಲನೆ ಉಂಟಾಯಿತು.

೯೧. ದ್ವಿಜವರ್ಯರೆ! ಹೀಗೆ ನನಗೆ ಕನ್ಯೆಯು ಗುರುವಾದಳು.

೯೨. ಗುರುವಿನ ವಿಷಯದಲ್ಲಿ ನೀವು ಕೇಳಿದ್ದನ್ನೆಲ್ಲ ಹೇಳಿದ್ದೇನೆ. ನಿಮ್ಮ ಮುಂದೆ ಸುಳ್ಳನ್ನು ಹೇಳುವುದಿಲ್ಲ.

೯೩. ಹೀಗೆ ನನಗೆ ಈ ಆರು ಪ್ರಕಾರಗಳಿಂದ ನಿಮಗೆ ನಂಬಿಕೆಯನ್ನುಂಟು ಮಾಡುವ ಲೋಕೋತ್ತರ ಜ್ಞಾನವುಂಟಾಯಿತು.

ಸೂತ ಉವಾಚ :—

ತತಸ್ತೇ ಬ್ರಾಹ್ಮಣಾಃ ಸರ್ವೇ ಪಪ್ರಚ್ಛುಸ್ತಂ ದ್ವಿಜೋತ್ತಮಾಃ ।
ವಾನಪ್ರಸ್ಥಾಶ್ರಮಂ ತ್ಯಕ್ತ್ವಾ ಭಾರ್ಯಾಂ ಶಿಶುಸಮನ್ವಿತಾಂ ।
ಕ್ವಗತಸ್ತ್ವಂ ಸಮಾಚಕ್ಷ್ವ ಕಿಯತ್ಕಾಲಂ ಚ ಸಂಸ್ಥಿತಃ ॥ ೯೪ ॥

ಅತಿಥಿರುವಾಚ :—

ಅಹಂ ಭೀತಃ ಸಹಸ್ರಾಣಿ ಗ್ರಾಮಾಣಾಂ ಚ ಶತಾನಿ ಚ ।
ಯತ್ರಾಸ್ತಮಿತಶಾಯಿಾ ಸನ್ನನೇಕಾನಿ ದ್ವಿಜೋತ್ತಮಾಃ ।
ಸಂಖ್ಯಯಾ ರಹಿತಾನ್ಯೇವ ವರ್ಷಾಣಾಂ ಚ ಶತಾನಿ ಚ ॥ ೯೫ ॥
ದೃಷ್ಟಾನಿ ಮುಖ್ಯತೀರ್ಥಾನಿ ತಥೈವಾಯತನಾನಿ ಚ ।
ದೃಷ್ಟಾಶ್ಚ ಪರ್ವತಾಃ ಶ್ರೇಷ್ಠಾ ನದ್ಯಶ್ಚ ವಿಮಲೋದಕಾಃ ॥ ೯೬ ॥
ಸ್ವಯಮೇವ ಮಯಾ ಜ್ಞಾತೋ ವಾರಾಣಸ್ಯಾಂ ಸ್ಥಿತೇನ ಚ ।
ಯಜ್ಞಃ ಪೈತಾಮಹೋ ಭಾವೀ ಸ್ಥಾನೇಽಸ್ಮಿನ್ ನಾಮಕೇ ಯತಃ ॥ ೯೭ ॥
ತತೋಽಹಂ ಸತ್ವರಂ ಪ್ರಾಪ್ತಃ ಕೌತುಕೇನ ದ್ವಿಜೋತ್ತಮಾಃ ।
ಕೀದೃಶಃ ಸ ಮಖೋ ಭಾವೀ ಯತ್ರ ಯಜ್ವಾ ಪಿತಾಮಹಃ ॥ ೯೮ ॥

ಸೂತ ಉವಾಚ :—

ಏತಸ್ಮಿನ್ನಂತರೇ ಪ್ರಾಪ್ತಾಃ ಸರ್ವೇ ದೇವಾಃ ಸವಾಸವಾಃ ।
ವಾಸುದೇವಂ ಪುರಸ್ಕೃತ್ಯ ತಥಾ ಚೈವ ಮಹೇಶ್ವರಂ ॥ ೯೯ ॥

---

೯೪. ಸೂತನು ಹೇಳುತ್ತಾನೆ :—ತರುವಾಯ ಆ ಬ್ರಾಹ್ಮಣರೆಲ್ಲ ಅವನನ್ನು ಕುರಿತು ನೀನು ವಾನಪ್ರಸ್ಥಾಶ್ರಮದಲ್ಲಿ ಮಕ್ಕಳೊಡನೆ ಪತ್ನಿಯನ್ನು ತ್ಯಜಿಸಿ ಎಲ್ಲಿಗೆ ಹೋದೆ? ಅಲ್ಲಿ ಎಷ್ಟುಕಾಲ ವಾಸಮಾಡಿದೆ? ಎಂದು ಪ್ರಶ್ನಿಸಿದರು.

೯೫–೯೬. ಅತಿಥಿಯು ಹೇಳುತ್ತಾನೆ:—ನಾನು ಭಯಗೊಂಡು ಅನೇಕ ವರ್ಷಕಾಲ ಸೂರ್ಯಾಸ್ತಮಯವಾದ ಕೂಡಲೆ ಮಲಗುತ್ತ ಸಾವಿರಾರು ಗ್ರಾಮಗಳನ್ನೂ, ಮುಖ್ಯವಾದ ತೀರ್ಥಗಳನ್ನೂ, ದೇವಾಲಯಗಳನ್ನೂ, ಉತ್ತಮ ಪರ್ವತಗಳನ್ನೂ, ಶುದ್ಧ ನೀರುಳ್ಳ ನದಿಗಳನ್ನೂ ನೋಡಿದೆನು.

೯೭. ಕಾಶಿಯಲ್ಲಿ ವಾಸಮಾಡುತ್ತ ನಾನೇ ಈ ನನ್ನ ಸ್ಥಳದಲ್ಲಿ ಬ್ರಹ್ಮನ ಯಜ್ಞವು ನಡೆಯುವದನ್ನರಿತೆನು.

೯೮. ದ್ವಿಜವರ್ಯರೆ! ಅನಂತರ ನಾನು ಕುತೂಹಲದಿಂದ ಬ್ರಹ್ಮನು ನಡೆಸತಕ್ಕ ಯಜ್ಞವು ಹೇಗಿರುವುದೆಂದು ತಿಳಿಯಲು ಶೀಘ್ರವಾಗಿ ಇಲ್ಲಿಗೆ ಬಂದೆನು.

೯೯. ಸೂತನು ಹೇಳುತ್ತಾನೆ:—ಇಷ್ಟರಲ್ಲಿ ಇಂದ್ರಾದಿ ದೇವತೆಗಳು ವಿಷ್ಣು ಮತ್ತು ಮಹೇಶ್ವರರನ್ನು ಮುಂದಿರಿಸಿಕೊಂಡು ಅಲ್ಲಿಗೆ ಬಂದರು.

ಕರ್ಮಾಂತರಂ ಸಮಾಸಾದ್ಯ ಪುಲಸ್ತ್ಯಾದ್ಯಾಸ್ತಥರ್ತ್ವಿಜಃ ।
ಬ್ರಹ್ಮಾಽಪಿ ಸ್ವಯಮಾಯಾತೋ ಮೃಗಚರ್ಮಧರಸ್ತಥಾ ॥ ೧೦೦ ॥
ತತಸ್ತೇ ತುಷ್ಟಿಮಾಪನ್ನಾಸ್ತಸ್ಯ ಜ್ಞಾನೇನ ತೇನ ಚ ।
ಪ್ರೋಚುಶ್ಚ ವರದಾಸ್ತುಭ್ಯಂ ಸರ್ವ ಏವ ದಿವೌಕಸಃ ॥ ೧೦೧ ॥
ತಸ್ಮಾದ್ವರಯ ಭದ್ರಂ ತೇ ಪ್ರಾರ್ಥಯಸ್ವ ಯಥೇಪ್ಸಿತಂ ।
ಅವಶ್ಯಂ ತವ ದಾಸ್ಯಾಮೋ ಯದ್ಯಪಿ ಸ್ಯಾತ್ಸುದುರ್ಲಭಂ ॥ ೧೦೨ ॥

ಅತಿಥಿರುವಾಚ :—

ಯದಿ ತುಷ್ಟಾಃ ಸುರಾ ಮಹ್ಯಂ ಪ್ರಯಚ್ಛಂತಿ ವರಂ ಮಮ ।
ಅನೇನೈವ ಶರೀರೇಣ ದೇವತ್ವಂ ಪ್ರಾರ್ಥಯಾಮ್ಯಹಂ ॥ ೧೦೩ ॥
ಯಜ್ಞಭಾಗಸಮೋಪೇತಂ ತಥಾಽನ್ಯೇಷಾಂ ದಿವೌಕಸಾಂ ।
ವಿಶೇಷೇಣ ಸುರಶ್ರೇಷ್ಠಾಃ ಸ್ಥಾನಂ ಚೋಪರಿ ಸಂಸ್ಥಿತಂ ॥ ೧೦೪ ॥

ದೇವಾ ಊಚುಃ :—

ನೂನಂ ತ್ವಂ ವಿಬುಧೋ ಭೂತ್ವಾ ದೇವಲೋಕೇ ನಿವತ್ಸ್ಯಸಿ ।
ಅನೇನೈವ ಶರೀರೇಣ ಯಜ್ಞಭಾಗವಿವರ್ಜಿತಃ ॥ ೧೦೫ ॥
ಯಚ್ಛಾಮೋ ಯದಿ ತೇ ವಿಪ್ರ ಯಜ್ಞಾಂಶಂ ಮಾನುಷಸ್ಯ ಭೋ ।
ಅಪ್ರಾಮಾಣ್ಯಂ ಶ್ರುತೇರ್ಭಾವಿ ತವ ದತ್ತೇನ ತೇನ ಚ ॥ ೧೦೬ ॥

---

೧೦೦. ಹಾಗೆಯೇ ಪುಲಸ್ತ್ಯನೇ ಮೊದಲಾದ ಋತ್ವಿಜರೂ, ಮೃಗಚರ್ಮಧಾರಿಯಾದ ಬ್ರಹ್ಮನೂ ಕರ್ಮದಲ್ಲಿ ಅವಕಾಶವನ್ನು ಪಡೆದು ಅಲ್ಲಿಗೆ ಬಂದರು.

೧೦೧–೧೦೨. ಅನಂತರ ಅವರೆಲ್ಲ ಅವನ ಜ್ಞಾನದಿಂದ ಸಂತೋಷಗೊಂಡು "ನಿನಗೆ ವರವನ್ನು ಕೊಡುತ್ತೇವೆ. ನಿನಗಿಷ್ಟವಾದ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ನಿಶ್ಚಯವಾಗಿಯೂ ಕೊಡುತ್ತೇವೆ" ಎಂದರು.

೧೦೩–೧೦೪. ಅತಿಥಿಯು ಹೇಳುತ್ತಾನೆ:—ದೇವತೆಗಳೆ! ನೀವು ಸಂತುಷ್ಟರಾಗಿ ನನಗೆ ವರವನ್ನು ಕೊಡುವುದಾದರೆ ನಾನು ಈ ಶರೀರದಿಂದಲೇ ದೇವತೆಯಾಗುವಿಕೆಯನ್ನೂ, ಇತರ ದೇವತೆಗಳೊಡನೆ ಸಮವಾದ ಯಜ್ಞಭಾಗವನ್ನೂ, ಉತ್ತಮ ಸ್ಥಾನವನ್ನೂ ಬೇಡುವೆನು.

೧೦೫. ದೇವತೆಗಳು ಹೇಳುತ್ತಾರೆ:—ನೀನು ನಿಶ್ಚಯವಾಗಿಯೂ ಈ ಶರೀರದಿಂದಲೇ ದೇವತೆಯಾಗಿ ಯಜ್ಞಭಾಗವಿಲ್ಲದೆ ದೇವಲೋಕದಲ್ಲಿ ವಾಸಮಾಡುವೆ.

೧೦೬. ಬ್ರಾಹ್ಮಣ! ಮನುಷ್ಯನಾದ ನಿನಗೆ ನಾವು ಯಜ್ಞಭಾಗವನ್ನಿತ್ತರೆ ವೇದವು ಅಪ್ರಮಾಣವಾಗುವುದು.

**ಅತಿಥಿರುವಾಚ :—**

**ದೇವತ್ವೇನ ನ ಮೇ ಕಾರ್ಯಂ ಯಜ್ಞಾಂಶರಹಿತೇನ ಚ ।**
**ತದಹಂ ಸಾಧಯಿಷ್ಯಾಮಿ ಯಥಾ ಮುಕ್ತಿರ್ಭವಿಷ್ಯತಿ ॥ ೧೦೭ ॥**
**ತಚ್ಛ್ರುತ್ವಾ ಪದ್ಮಜಃ ಪ್ರಾಹ ಸರ್ವಾನ್ ದೇವಾನ್ ಕೃತಾಂಜಲಿಃ ।**
**ಶೃಣ್ವಂತು ದೇವತಾಃ ಸರ್ವಾ ಯದ್ಬ್ರವೀಮಿ ಹಿತಂ ವಚಃ ॥ ೧೦೮ ॥**
**ಮಮಾಽಯಂ ಬ್ರಾಹ್ಮಣೋ ಯಜ್ಞೇ ದೂರಾದೇವ ಸಮಾಗತಃ ।**
**ನಾಗರಸ್ತು ವಿಶೇಷೇಣ ಪಾತ್ರಂ ಜ್ಞಾನಸಮುದ್ಭವಂ ॥ ೧೦೯ ॥**
**ಪ್ರತಿಜ್ಞಾತಸ್ತಥಾ ಸರ್ವೈರ್ವರೋಽಸ್ಯ ವಿಬುಧೈರ್ಯತಃ ।**
**ತಸ್ಮಾತ್ಪ್ರದೀಯತಾಮಸ್ಮೈ ಯದಭೀಷ್ಟಂ ಸುರೋತ್ತಮಾಃ ॥ ೧೧೦ ॥**

**ಮಹೇಶ್ವರ ಉವಾಚ :—**

**ಯಥಾಽಸ್ಯ ಜಾಯತೇ ತೃಪ್ತಿರ್ಯಜ್ಞಭಾಗಾಧಿಕಾ ಸದಾ ।**
**ತಥಾಽಹಂ ಕಥಯಿಷ್ಯಾಮಿ ಶೃಣ್ವಂತು ವಿಬುಧೋತ್ತಮಾಃ ॥ ೧೧೧ ॥**
**ಯ ಏಷ ಕ್ರಿಯತೇ ಯಜ್ಞಸ್ತಸ್ಯ ನಾಥೋ ಹರಿಃ ಸ್ಮೃತಃ ।**
**ಏತಸ್ಮಾತ್ಕಾರಣಾತ್ಪ್ರೋಕ್ತಃ ಸ ದೇವೋ ಯಜ್ಞಪೂರುಷಃ ॥ ೧೧೨ ॥**

---

೧೦೭. ಅತಿಥಿಯು ಹೇಳುತ್ತಾನೆ:— ಯಜ್ಞಭಾಗವಿಲ್ಲದ ದೇವತ್ವದಿಂದ ನನಗೆ ಪ್ರಯೋಜನವಿಲ್ಲ. ಆದುದರಿಂದ ನಾನು ಮುಕ್ತಿಯಾಗುವಂತೆ ಸಾಧಿಸುವೆನು.

೧೦೮. ಬ್ರಹ್ಮನು ಅದನ್ನು ಕೇಳಿ ಕೈಮುಗಿದುಕೊಂಡು ಸಮಸ್ತ ದೇವತೆಗಳನ್ನೂ ಕುರಿತು ಇಂತೆಂದನು. ''ದೇವತೆಗಳಿ! ನೀವೆಲ್ಲ ನಾನು ಹೇಳುವ ಹಿತವಚನವನ್ನು ಕೇಳಿರಿ.

೧೦೯. ಈ ಬ್ರಾಹ್ಮಣನು ದೂರದಿಂದ ನನ್ನ ಯಜ್ಞಕ್ಕೆ ಬಂದಿದ್ದಾನೆ. ಇವನು ನಾಗರನೂ, ವಿಶೇಷವಾಗಿ ಜ್ಞಾನಿಯಾಗಿ ಸತ್ಪಾತ್ರನೂ ಆಗಿದ್ದಾನೆ.

೧೧೦. ನೀವು ಇವನಿಗೆ ವರವನ್ನೀಯುವುದಾಗಿ ಪ್ರತಿಜ್ಞೆ ಮಾಡಿದ್ದೀರಿ. ಆದುದರಿಂದ ಇವನಿಗೆ ಯಾವುದು ಇಷ್ಟವೋ ಅದನ್ನು ಕೊಡಿರಿ.''

೧೧೧. ಮಹೇಶ್ವರನು ಹೇಳುತ್ತಾನೆ:— ದೇವೋತ್ತಮರೆ! ಇವನಿಗೆ ಯಜ್ಞಭಾಗಕ್ಕಿಂತ ಅಧಿಕ ತೃಪ್ತಿಯು ಹೇಗೆ ಆಗುವುದೋ ಅದನ್ನು ಹೇಳುತ್ತೇನೆ ಕೇಳಿರಿ.

೧೧೨. ಈಗ ಮಾಡುತ್ತಿರುವ ಯಜ್ಞಕ್ಕೆ ಹರಿಯು ಸ್ವಾಮಿಯಾಗಿರುವನು. ಆದುದರಿಂದಲೇ ಅವನು ಯಜ್ಞಪುರುಷನೆನ್ನಿಸಿಕೊಳ್ಳುವನು.

ಆದ್ಯ ಪ್ರಭೃತಿ ಯತ್ಕಿಂಚಿಚ್ಛ್ರಾದ್ಧಂ ಮರ್ತ್ಯೇ ಭವಿಷ್ಯತಿ ।
ದೈವಂ ವಾ ಪೈತೃಕಂ ವಾऽಪಿ ತಸ್ಯ ಚಾಂತೇ ವ್ಯವಸ್ಥಿತಃ ॥ ೧೧೩ ॥
ಏತಸ್ಯ ನಾಮ ಸಂಕೀರ್ತ್ಯ ಪಶ್ಚಾಚ್ಚ ಯಜ್ಞಪೂರುಷಂ ।
ಸಂಕೀರ್ತ್ಯ ಭೋಜನಂ ದೇಯಂ ಬ್ರಾಹ್ಮಣಸ್ಯ ದ್ವಿಜೋತ್ತಮಾಃ ॥ ೧೧೪ ॥
ತೇನಾऽಸ್ಯ ಭವಿತಾ ತೃಪ್ತಿರ್ಯಜ್ಞಾಂತಾಭ್ಯಧಿಕಾ ಸದಾ ।
ಅದತ್ವಾऽಸ್ಯ ಕೃತಂ ಶ್ರಾದ್ಧಂ ಯತ್ಕಿಂಚಿತ್ಪ್ರಭವಿಷ್ಯತಿ ॥ ೧೧೫ ॥
ತದ್ಯಾಸ್ಯತ್ಯಖಿಲಂ ವ್ಯರ್ಥಂ ತಥಾ ಭಸ್ಮಹುತಂ ಯಥಾ ।
ವೈಶ್ವದೇವಾಂತಮಾಸಾದ್ಯ ಯಶ್ಚೈನಂ ಪೂಜಯಿಷ್ಯತಿ ॥ ೧೧೬ ॥
ವಿಷ್ಣುನಾಮಸಮೋಪೇತಂ ಭವಿಷ್ಯತಿ ತದಕ್ಷಯಂ ।
ದತ್ತಂ ಸ್ವಲ್ಪಮಪಿ ಪ್ರಾಯಃ ಶ್ರದ್ಧಾಪೂತೇನ ಚೇತಸಾ ॥ ೧೧೭ ॥
ಶ್ರಾದ್ಧೇ ವಾ ವೈಶ್ವದೇವೇ ವಾ ಯಶ್ಚೈನಂ ನಾರ್ಚಯಿಷ್ಯತಿ ।
ಸಂಪ್ರಾಪ್ತಂ ವ್ಯರ್ಥತಾಂ ತಸ್ಯ ತಚ್ಚ ಸರ್ವಂ ಭವಿಷ್ಯತಿ ॥ ೧೧೮ ॥
ಅಸ್ಮಿಂಸ್ತುಷ್ಟಿಂ ಗತೇ ಸರ್ವೇ ಸುರಾ ಯಾಸ್ಯಂತಿ ಸಮ್ಮುದಂ ।
ಪಿತರಶ್ಚ ತಮಾಯಾಂತಿ ವಿಮುಖೇ ಸಮ್ಮುಖೇ ತಥಾ ॥ ೧೧೯ ॥
ತಚ್ಛ್ರುತ್ವಾ ವಿಬುಧಾಃ ಸರ್ವೇ ಮಹೇಶ್ವರವಚಸ್ತದಾ ।
ತಥೇತಿ ಮುದಿತಾಃ ಪ್ರೋಚುರ್ಬ್ರಹ್ಮವಿಷ್ಣುಪುರಸ್ಸರಾಃ ॥ ೧೨೦ ॥

---

೧೧೩–೧೧೪. ಇದು ಮೊದಲ್ಗೊಂಡು ಭೂಮಿಯಲ್ಲಿ ದೇವ ಪಿತೃ ಕರ್ಮಗಳನ್ನು ಶ್ರದ್ಧೆಯಿಂದ ಮಾಡುವವನು ಆ ಕರ್ಮದ ಕೊನೆಯಲ್ಲಿ ಇವನ ಹೆಸರನ್ನು ಹೇಳಿ ಅನಂತರ ವಿಷ್ಣುವನ್ನು ಸಂಕೀರ್ತಿಸಿ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು.

೧೧೫–೧೧೭. ಅದರಿಂದ ಇವನಿಗೆ ಯಜ್ಞಕ್ಕಿಂತಲೂ ಹೆಚ್ಚಾದ ತೃಪ್ತಿಯುಂಟಾಗುವುದು. ಇವನಿಗೆ ಅರ್ಪಿಸದೆ ಶ್ರಾದ್ಧವನ್ನು ನೆರವೇರಿಸಿದರೆ ಬೂದಿಯಲ್ಲಿ ಹೋಮಿಸಿದಂತೆ ವ್ಯರ್ಥವಾಗುವುದು. ವೈಶ್ವದೇವದ ಕೊನೆಯಲ್ಲಿ ಇವನನ್ನು ವಿಷ್ಣುನಾಮದೊಡನೆ ಪೂಜಿಸಿ ಸ್ವಲ್ಪವನ್ನೇ ಶ್ರದ್ಧೆಯಿಂದ ದಾನ ಮಾಡಿದರೂ ಅದು ಅಕ್ಷಯವಾಗುವುದು.

೧೧೮. ಶ್ರಾದ್ಧದಲ್ಲಾಗಲಿ, ವೈಶ್ವದೇವದಲ್ಲಾಗಲಿ ಬಂದಿರುವ ಇವನನ್ನು ಪೂಜಿಸದವನ ಕರ್ಮವೆಲ್ಲ ವ್ಯರ್ಥವಾಗುವುವು.

೧೧೯–೧೨೦. ಇವನು ಸಂತುಷ್ಟನಾದರೆ ಸಕಲ ದೇವತೆಗಳೂ ಹರ್ಷಗೊಳ್ಳುವರು. ಇವನು ಅಭಿಮುಖನಾಗಲಿ, ವಿಮುಖನಾಗಲಿ ಪಿತೃಗಳು ಇವನನ್ನೇ ಅನುಸರಿಸುವರು. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೆಲ್ಲ ಆ ಮಹೇಶ್ವರನ ಮಾತನ್ನು ಕೇಳಿ ಮುದಿತರಾಗಿ ಹಾಗೆಯೇ ಆಗಲೆಂದು ಹೇಳಿದರು.

ತತಃ ಪ್ರಭೃತಿ ಸಂಜಾತಾ ಪೂಜಾ ಚಾಽತಿಥಿಸಂಭವಾ ।
ತಸ್ಮಾತ್ಸರ್ವಪ್ರಯತ್ನೇನ ಪೂಜಾ ಕಾರ್ಯಾಽತಿಥೇಃ ಸದಾ ।
ಯಜ್ಞೇ ಪೂರುಷಯಜ್ಞಸ್ಯ ನ ಚೈಕಸ್ಯ ಕಥಂಚನ ॥ ೧೨೧ ॥

ಅತಿಥಿರುವಾಚ :—

ಅತ್ರಾಸ್ತಿ ಮಾಮಕಂ ತೀರ್ಥಂ ಮಯಾ ಯತ್ರ ತಪಃಕೃತಂ ।
ಹಾಟಕೇಶ್ವರಜೇ ಕ್ಷೇತ್ರೇ ಪುರುಕಾಲೇ ದ್ವಿಜೋತ್ತಮಾಃ ॥ ೧೨೨ ॥
ಅಂಗಾರಕೇಣ ಸಂಯುಕ್ತಾ ಚತುರ್ಥೀ ಸ್ಯಾದ್ಯದಾ ತಿಥಿಃ ।
ಸಾನ್ನಿಧ್ಯಂ ತತ್ರ ಕಾರ್ಯಂ ಚ ಸರ್ವೈರ್ದೇವೈಶ್ಚ ತದ್ದಿನೇ ॥ ೧೨೩ ॥
ಕುರ್ಯಾತ್ತತ್ರೈವ ಯಃ ಸ್ನಾನಂ ತಸ್ಮಿನ್ನಹನಿ ಸಂಸ್ಥಿತೇ ।
ಸರ್ವತೀರ್ಥಫಲಂ ತಸ್ಯ ಜಾಯತಾಂ ವಃ ಪ್ರಸಾದತಃ ॥ ೧೨೪ ॥
ತಥಾಽಸ್ತ್ವಿತಿ ತತಃ ಸರ್ವೇಽತಿಥಿಂ ಪ್ರೋಚುಃ ಸುರೋತ್ತಮಾಃ ।
ಏತಸ್ಮಿನ್ನಂತರೇ ಪ್ರಾಹ ಪುಲಸ್ತ್ಯರ್ಷಿಃ ಪಿತಾಮಹಂ ॥ ೧೨೫ ॥

ಪುಲಸ್ತ್ಯ ಉವಾಚ :—

ಋತ್ವಿಜಃ ಸಕಲಾ ದೇವಾಃ ಸಂಸ್ಥಿತಾಃ ಕೌತುಕಾನ್ವಿತಾಃ ।
ಉತ್ತಿಷ್ಠಂತು ಚ ತೇ ಶೀಘ್ರಂ ಯಜ್ಞಕರ್ಮಪ್ರಸಿದ್ಧಯೇ ॥ ೧೨೬ ॥

---

೧೨೧. ಅದು ಮೊದಲ್ಗೊಂಡು ಅತಿಥಿಪೂಜೆಯು ಆರಂಭವಾಯಿತು. ಆದುದರಿಂದ ಪ್ರಯತ್ನಿಸಿ ಯಜ್ಞಸಮಯದಲ್ಲಿ ಅತಿಥಿಯನ್ನು ಪೂಜಿಸಬೇಕು. ವಿಷ್ಣುವೊಬ್ಬನನ್ನೇ ಪೂಜಿಸಬಾರದು.

೧೨೨. ಅತಿಥಿಯು ಹೇಳುತ್ತಾನೆ :—ದ್ವಿಜವರ್ಯರೆ! ಈ ಹಾಟಕೇಶ್ವರಜ ಕ್ಷೇತ್ರದಲ್ಲಿ ನಾನು ಬಹುಕಾಲ ತಪಸ್ಸನ್ನು ಮಾಡಿದ ನನ್ನದೊಂದು ತೀರ್ಥವಿದೆ.

೧೨೩. ಚತುರ್ಥೀ ಮಂಗಳವಾರದ ದಿನ ಆ ತೀರ್ಥದಲ್ಲಿ ಸಕಲ ದೇವತೆಗಳೂ ಸನ್ನಿಹಿತರಾಗಬೇಕು.

೧೨೪. ಆ ದಿನ ಆ ತೀರ್ಥದಲ್ಲಿ ಸ್ನಾನ ಮಾಡಿದವನಿಗೆ ನಿಮ್ಮ ಅನುಗ್ರಹದಿಂದ ಸಕಲ ತೀರ್ಥಗಳ ಫಲವುಂಟಾಗಲಿ.

೧೨೫. ಆಗ ಸಮಸ್ತ ದೇವತೆಗಳೂ ಅತಿಥಿಯನ್ನು ಕುರಿತು ಹಾಗೆಯೇ ಆಗಲೆಂದರು. ಇಷ್ಟರಲ್ಲಿ ಪುಲಸ್ತ್ಯನು ಬ್ರಹ್ಮನನ್ನು ಕುರಿತು ಇಂತೆಂದನು.

೧೨೬. ಪುಲಸ್ತ್ಯನು ಹೇಳುತ್ತಾನೆ :—ಋತ್ವಿಜರೂ, ಸಮಸ್ತ ದೇವತೆಗಳೂ ಕುತೂಹಲದಿಂದ ಕುಳಿತಿದ್ದಾರೆ. ಅವರು ಶೀಘ್ರವಾಗಿ ಯಜ್ಞಕಾರ್ಯಸಿದ್ಧಿಗಾಗಿ ಮೇಲಕ್ಕೇಳಲಿ.

ಏತಸ್ಮಿನ್ನಂತರೇ ಸರ್ವೇ ತಸ್ಯ ವಾಕ್ಯಪ್ರಣೋದಿತಾಃ ।
ಉತ್ಥಿತಾ ಋತ್ವಿಜೋ ಯೇಽಚ ಸ್ವಾನಿ ಸ್ಥಾನಾನಿ ಭೇಜಿರೇ ।
ತತಃ ಪ್ರವವೃತೇ ಯಜ್ಞಃ ಸ ಪುನರ್ದ್ವಿಜಸತ್ತಮಾಃ ।
ಕುರ್ವತಾ ಯಜ್ಞಕರ್ಮಾಣಿ ಹೋಮಪೂರ್ವಾಣಿ ಯಾನಿ ಚ ॥ ೧೨೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ತೀರ್ಥೋತ್ಪತ್ತಿಮಾಹಾತ್ಮ್ಯವರ್ಣನಂ" ನಾಮ
ಪಂಚಾಶೀತ್ಯುತ್ತರಶತತಮೋಽಧ್ಯಾಯಃ

---

೧೨೭. ಅವನ ಮಾತಿನಂತೆ ಎಲ್ಲರೂ ಎದ್ದು ತಮ್ಮ ತಮ್ಮ ಸ್ಥಾನಗಳನ್ನು ಹೊಂದಿದರು. ಅನಂತರ ಹೋಮಪೂರ್ವಕವಾದ ಯಜ್ಞಕರ್ಮಗಳು ಮರಳಿ ಆರಂಭವಾದುವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ತೀರ್ಥೋತ್ಪತ್ತಿಮಾಹಾತ್ಮ್ಯವರ್ಣನ" ವೆಂಬ
ನೂರೆಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಡಶೀತ್ಯುತ್ತರಶತತಮೋಽಧ್ಯಾಯಃ

## ಅತಿಥಿಮಾಹಾತ್ಮ್ಯವರ್ಣನಂ

**ಋಷಯ ಊಚುಃ:—**

**ಭೂಯ ಏವ ಮಹಾಭಾಗ ವದ ಮಾಹಾತ್ಮ್ಯಮುತ್ತಮಂ ।**
**ಅತಿಥೇಃ ಕೃತ್ಸ್ನಮಸ್ಮಾಕಂ ವಿಸ್ತರೇಣ ಚ ಸೂತಜ ॥ ೧ ॥**

**ಸೂತ ಉವಾಚ:—**

**ಶೃಣ್ವಂತು ಮುನಯಃ ಸರ್ವೇ ಮಾಹಾತ್ಮ್ಯಮಿದಮುತ್ತಮಂ ।**
**ಯೇನ ಸಂಶ್ರುತಮಾತ್ರೇಣ ನಶ್ಯೇತ್ಪಾಪಂ ದಿನೋದ್ಭವಂ ॥ ೨ ॥**
**ಯನ್ಮಯಾ ಚ ಶ್ರುತಂ ಪೂರ್ವಂ ಸಕಾಶಾತ್ಸ್ವಪಿತುಃ ಶುಭಂ ॥ ೩ ॥**
**ಗೃಹಸ್ಥಾನಾಂ ಪರೋ ಧರ್ಮೋ ನಾಽನ್ಯೋಽಸ್ತ್ಯತಿಥಿಪೂಜನಾತ್ ।**
**ಅತಿಥೇರ್ನ ಚ ದೋಷೋಽಸ್ತಿ ತಸ್ಯಾತಿಕ್ರಮಣೇನ ಚ ॥ ೪ ॥**
**ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ಪ್ರತಿನಿವರ್ತತೇ ।**
**ಸ ದತ್ವಾ ದುಷ್ಕೃತಂ ತಸ್ಮೈ ಪುಣ್ಯಮಾದಾಯ ಗಚ್ಛತಿ ॥ ೫ ॥**

---

## ಕನ್ನಡದ ಅನುವಾದ

### ಅತಿಥಿಮಾಹಾತ್ಮ್ಯವರ್ಣನ

೧. ಋಷಿಗಳು ಹೇಳುತ್ತಾರೆ:— ಮಹಾತ್ಮನಾದ ಎಲೈ ಸೂತನೆ! ನೀನು ನಮಗೆ ಮರಳಿ ಅತಿಥಿಯ ಸಂಪೂರ್ಣ ಮಾಹಾತ್ಮ್ಯವನ್ನು ವಿಸ್ತಾರವಾಗಿ ಹೇಳು.

೨. ಸೂತನು ಹೇಳುತ್ತಾನೆ:—ಮುನಿಗಳೆ! ಈ ಉತ್ತಮ ಮಾಹಾತ್ಮ್ಯವನ್ನು ಕೇಳಿರಿ. ಇದನ್ನು ಕೇಳುವುದರಿಂದ ಒಂದು ದಿನದ ಪಾಪವು ನಾಶವಾಗುವುದು.

೩. ಇದನ್ನು ನಾನು ಹಿಂದೆ ನಮ್ಮ ತಂದೆಯಿಂದ ಕೇಳಿದೆನು.

೪. ಗೃಹಸ್ಥರಿಗೆ ಅತಿಥಿಪೂಜೆಗಿಂತ ಬೇರೆ ಉತ್ತಮ ಧರ್ಮವಿಲ್ಲ. ಅತಿಥಿಯನ್ನು ಮೀರಿ ನಡೆದುದರಿಂದ ಆ ಅತಿಥಿಗೆ ಕೆಡಕಾಗುವುದಿಲ್ಲ.

೫. ಅತಿಥಿಯು ಯಾವನ ಮನೆಯಿಂದ ತನ್ನ ಇಷ್ಟಾರ್ಥವನ್ನು ಪಡೆಯದೆ ಹಿಂದಿರುಗುವನೋ ಅವನು ಆ ಗೃಹಸ್ಥನಿಗೆ ತನ್ನ ಪಾಪವನ್ನಿತ್ತು ಅವನ ಪುಣ್ಯವನ್ನು ತೆಗೆದುಕೊಂಡು ಹೋಗುವನು.

**ಸತ್ಯಂ ಶೌಚಂ ತಪೋಽಧೀತಂ ದತ್ತಮಿಷ್ಟಂ ಶತಂ ಸಮಾಃ ।**
**ತಸ್ಯ ಸರ್ವಮಿದಂ ನಷ್ಟಮತಿಥಿಂ ಯೋ ನ ಪೂಜಯೇತ್ ॥ ೬ ॥**
**ದೂರಾದತಿಥಯೋ ಯಸ್ಯ ಗೃಹಮಾಯಾಂತಿ ನಿರ್ವೃತಾಃ ।**
**ಸ ಗೃಹಸ್ಥ ಇತಿ ಪ್ರೋಕ್ತಃ ಶೇಷಾಶ್ಚ ಗೃಹರಕ್ಷಿಣಃ ॥ ೭ ॥**
**ನ ಪುರಾಕೃತಪುಣ್ಯಾನಾಂ ನಾರಾಣಾಮಿಹ ಭೂತಲೇ ।**
**ತ್ರೀನೇತಾನ್ ಪ್ರತಿಹನ್ಯಂತೇ ಶ್ರಾದ್ಧಂ ದಾನಂ ಶುಭಾ ಗಿರಃ ॥ ೮ ॥**
**ತುಷ್ಟೇಽತಿಥೌ ಗೃಹಸ್ಥಸ್ಯ ತುಷ್ಟಾಃ ಸ್ಯುಃ ಸರ್ವದೇವತಾಃ ।**
**ವಿಮುಖೇ ವಿಮುಖಾಃ ಸರ್ವಾ ಭವಂತಿ ಚ ನ ಸಂಶಯಃ ॥ ೯ ॥**
**ತಸ್ಮಾತ್ತೋಷಯಿತವ್ಯಶ್ಚ ಗೃಹಸ್ಥೇನ ಸದಾಽತಿಥಿಃ ।**
**ಅಪ್ಯಾತ್ಮನಃ ಪ್ರದಾನೇನ ಯದೀಚ್ಛೇತ್ಪುಣ್ಯಮಾತ್ಮನಃ ॥ ೧೦ ॥**
**ತ್ರಿವಿಧಸ್ತ್ವತಿಥಿಃ ಪ್ರೋಕ್ತೋ ಗೃಹಸ್ಥಾನಾಂ ದ್ವಿಜೋತ್ತಮಾಃ ।**
**ತಸ್ಯಾಽಹಂ ವಚ್ಮಿ ವಃ ಕಾಲಂ ಶೃಣುಧ್ವಂ ಸುಸಮಾಹಿತಾಃ ॥ ೧೧ ॥**
**ಶ್ರಾದ್ಧೀಯೋ ವೈಶ್ವದೇವೀಯಃ ಸೂರ್ಯೋಢಶ್ಚ ತೃತೀಯಕಃ ।**
**ಯೇ ಚಾಽನ್ಯೇ ಭೋಜನಾರ್ಥೀಯಾಸ್ತೇ ಸಾಮಾನ್ಯಾಃ ಪ್ರಕೀರ್ತಿತಾಃ ॥೧೨॥**

---

೬. ಅತಿಥಿಯನ್ನು ಪೂಜಿಸದವನ ಸತ್ಯ, ಶೌಚ, ತಪಸ್ಸು, ಅಧ್ಯಯನ, ದಾನ, ನೂರು ವರ್ಷಕಾಲ ಮಾಡಿದ ಯಾಗ ಇವುಗಳೆಲ್ಲವೂ ನಷ್ಟವಾಗುವುವು.

೭. ದೂರದಿಂದ ಬಂದ ಅತಿಥಿಗಳು ಯಾರ ಮನೆಯಲ್ಲಿ ಸುಖಗೊಳ್ಳುವರೋ ಅವನು ಗೃಹಸ್ಥನೆನ್ನಿಸಿಕೊಳ್ಳುವನು. ಉಳಿದವರು ಮನೆಯನ್ನು ರಕ್ಷಿಸುವವರು.

೮. ಈ ಲೋಕದಲ್ಲಿ ಹಿಂದಿನ ಜನ್ಮದಲ್ಲಿ ಪುಣ್ಯಮಾಡಿದ ಮಾನವರ ಶ್ರಾದ್ಧ, ದಾನ, ಹಿತವಚನಗಳು ಹಾಳಾಗುವುದಿಲ್ಲ.

೯. ಅತಿಥಿಯು ಸಂತುಷ್ಟನಾದರೆ ಗೃಹಸ್ಥನಿಗೆ ಸಕಲ ದೇವತೆಗಳೂ ಸಂತುಷ್ಟರಾಗುವರು. ಅವನು ವಿಮುಖನಾದರೆ ಎಲ್ಲ ದೇವತೆಗಳೂ ವಿಮುಖರಾಗುವರು.

೧೦. ಆದುದರಿಂದ ಗೃಹಸ್ಥನು ತನಗೆ ಪುಣ್ಯವನ್ನು ಬಯಸುವುದಾದರೆ ತನ್ನನ್ನು ದಾನಮಾಡಿಯಾದರೂ ಅತಿಥಿಯನ್ನು ಸಂತೋಷಗೊಳಿಸಬೇಕು.

೧೧. ದ್ವಿಜವರ್ಯರೆ! ಗೃಹಸ್ಥರು ಪೂಜಿಸಲರ್ಹರಾದ ಅತಿಥಿಗಳು ಮೂರು ವಿಧರಾಗಿರುವರು. ಅತಿಥಿಯ ಕಾಲವನ್ನು ನಿಮಗೆ ಹೇಳುವೆನು. ಸಾವಧಾನದಿಂದ ಕೇಳಿರಿ.

೧೨. ಶ್ರಾದ್ಧೀಯ, ವೈಶ್ವದೇವೀಯ, ಸೂರ್ಯೋಢ ಎಂದು ಉತ್ತಮರಾದ ಅತಿಥಿಗಳು ಮೂರು ಬಗೆಯಾಗಿರುವರು. ಭೋಜನ ಕಾಲದಲ್ಲಿ ಬಂದ ಅತಿಥಿಗಳು ಸಾಮಾನ್ಯರು.

ಸಾಂಕಲ್ಪೇ ವಿಹಿತೇ ಶ್ರಾದ್ಧೇ ಪಿತೄಣಾಂ ಭೋಜನೋದ್ಭವೇ ।
ಸಮಾಗಚ್ಛತಿ ಯಃ ಕಾಲೇ ತಸ್ಮಿಂಚ್ಛ್ರಾದ್ಧೀಯ ಏವ ಸಃ ॥ ೧೩ ॥
ದೂರಾಧ್ವಾನಂ ಪಥಿ ಶ್ರಾಂತಂ ವೈಶ್ವದೇವಾಂತ ಆಗತಂ ।
ಅತಿಥಿಂ ತಂ ವಿಜಾನೀಯಾನ್ನಾಽತಿಥಿಃ ಪೂರ್ವಮಾಗತಃ ॥ ೧೪ ॥
ಪ್ರಿಯೋ ವಾ ಯದಿ ವಾ ದ್ವೇಷ್ಯೋ ಮೂರ್ಖಃ ಪಂಡಿತ ಏವ ವಾ ।
ವೈಶ್ವದೇವೇ ತು ಸಂಪ್ರಾಪ್ತಃ ಸೋಽತಿಥಿಃ ಸ್ವರ್ಗಸಂಕ್ರಮಃ ॥ ೧೫ ॥
ನ ಪೃಚ್ಛೇದ್ಗೋತ್ರಚರಣಂ ನ ಸ್ವಾಧ್ಯಾಯಂ ವೇದಮೇವ ಚ ।
ದೃಷ್ಟ್ವಾ ಯಜ್ಞೋಪವೀತಂ ಚ ಭೋಜಯೇತ್ತಂ ಪ್ರಭಕ್ತಿತಃ ॥ ೧೬ ॥
ಶ್ರಾದ್ಧೇ ವಾ ವೈಶ್ವದೇವೇ ವಾ ಯದ್ಯಾಗಚ್ಛತಿ ನಾಽತಿಥಿಃ ।
ಘೃತಾಹುತಿಂ ತತೋ ದದ್ಯಾತ್ತನ್ನಾಮ್ನಾ ಚ ಹವಿರ್ಭುಜಿ ॥ ೧೭ ॥
ಅಶಕ್ತ್ಯಾ ಭೋಜ್ಯದಾನಸ್ಯ ದೇಯಂ ಭಕ್ತ್ಯಾ ತತಃ ಪರಂ ।
ತಸ್ಯಾನ್ನಮಪಿ ತು ಸ್ತೋಕಂ ಯೇನ ತುಷ್ಟಿಂ ಪ್ರಗಚ್ಛತಿ ॥ ೧೮ ॥
ತಥಾಽನ್ಯಶ್ಚ ತೃತೀಯಸ್ತು ಸೂರ್ಯೋಢೋಽತಿಥಿರುಚ್ಯತೇ ।
ಕೃತೇ ತು ಭೋಜನೇ ಯಸ್ತು ರಾತ್ರೌ ವಾ ಚಾಽಧಿಗಚ್ಛತಿ ।
ತಸ್ಯ ಶಕ್ತ್ಯಾ ಪ್ರದಾತವ್ಯಂ ಸಸ್ಯಂ ಚ ಗೃಹಮೇಧಿನಾ ॥ ೧೯ ॥

---

೧೩. ಶ್ರಾದ್ಧದಲ್ಲಿ ಪಿತೃಭೋಜನದ ಸಂಕಲ್ಪವನ್ನು ಮಾಡಿದಾಗ ಬಂದ ಅತಿಥಿಯು ಶ್ರಾದ್ಧೀಯನೆನ್ನಿಸಿಕೊಳ್ಳುವನು.

೧೪. ಬಹಳ ದೂರ ದಾರಿ ನಡೆದು ವೈಶ್ವದೇವದ ಕೊನೆಯಲ್ಲಿ ಬಂದವನನ್ನು ವೈಶ್ವದೇವೀಯ ಅತಿಥಿಯೆಂದು ತಿಳಿಯಬೇಕು. ಮೊದಲು ಬಂದವನು ಅತಿಥಿಯಲ್ಲ.

೧೫. ಪ್ರಿಯನಾಗಲಿ, ಶತ್ರುವಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ ವೈಶ್ವದೇವದಲ್ಲಿ ಬಂದ ಅತಿಥಿಯು ಸ್ವರ್ಗಕ್ಕೆ ಸೇತುವು.

೧೬. ಅವನ ಗೋತ್ರ, ಪ್ರವರ, ವೇದಗಳನ್ನು ಕೇಳಬಾರದು, ಯಜ್ಞೋಪವೀತವನ್ನು ನೋಡಿದ ಕೂಡಲೆ ಅವನನ್ನು ಭಕ್ತಿಯಿಂದ ಭೋಜನ ಮಾಡಿಸಬೇಕು.

೧೭. ಶ್ರಾದ್ಧ ಅಥವಾ ವೈಶ್ವದೇವಗಳಲ್ಲಿ ಅತಿಥಿಯು ಬಾರದಿದ್ದರೆ ಅವನ ಹೆಸರಿನಿಂದ ಅಗ್ನಿಯಲ್ಲಿ ಘೃತಾಹುತಿಯನ್ನು ಕೊಡಬೇಕು.

೧೮. ಭೋಜ್ಯಗಳನ್ನು ಕೊಡಲು ಶಕ್ತಿಯಿಲ್ಲದಿದ್ದರೆ ಅತಿಥಿಗೆ ಸಂತೋಷವಾಗುವಂತೆ ಭಕ್ತಿಯಿಂದ ಸ್ವಲ್ಪ ಅನ್ನವನ್ನು ಕೊಡಬೇಕು.

೧೯. ಭೋಜನ ಮಾಡಿದಮೇಲೆ ರಾತ್ರಿಯಲ್ಲಿ ಬಂದ ಅತಿಥಿಯು ಸೂರ್ಯೋಢನೆನ್ನಿಸಿಕೊಳ್ಳುವನು. ಅವನಿಗೆ ಶಕ್ತ್ಯನುಸಾರ ಗೃಹಸ್ಥನು ಸಸ್ಯವನ್ನು ಕೊಡಬೇಕು.

ಸೂರ್ಯೋಢೋ ಯಸ್ಯ ಸಂಪ್ರಾಪ್ತೋ ಗೃಹಾತ್ಪೂಜಾಂ ವಿನಾ ವ್ರಜೇತ್ ।
ನಿರಾಶಃ ಪಾತಕಂ ತಸ್ಯ ನಿಜಂ ದತ್ವಾ ಪ್ರಯಾತಿ ಸಃ ॥ ೨೦ ॥
ತೃಣಾನಿ ಭೂಮಿರುದಕಂ ವಾಕ್ಚತುರ್ಥೀ ಚ ಸೂನೃತಾ ।
ಏತಾನ್ಯಪಿ ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ ॥ ೨೧ ॥
ಸ್ವಾಗತೇನಾಗ್ನಯಸ್ತೃಪ್ತಿಂ ಗೃಹಸ್ಥಸ್ಯ ಪ್ರಯಾಂತಿ ಚ ।
ಆಸನೇನ ವ್ರಜೇತ್ತುಷ್ಟಿಂ ಸ್ವಯಂಭೂಃ ಪ್ರಪಿತಾಮಹಃ ॥ ೨೨ ॥
ಅರ್ಘೇಣ ಶಂಭುಃ ಪಾದ್ಯೇನ ಸರ್ವೇ ದೇವಾಃ ಸವಾಸವಾಃ ।
ಭೋಜ್ಯದಾನೇನ ವಿಷ್ಣುಃ ಸ್ಯಾತ್ಸರ್ವದೇವಮಯೋಽತಿಥಿಃ ॥ ೨೩ ॥
ತಸ್ಮಾತ್ಪೂಜ್ಯಃ ಸದಾ ವಿಪ್ರೋ ಭೋಜನೀಯೋ ವಿಶೇಷತಃ ।
ನಾಮಾಽಪ್ಯುಚ್ಚಾರ್ಯ ಭೋಜ್ಯೋಽನ್ಯೋ ಬ್ರಾಹ್ಮಣೋ ಗೃಹಮೇಧಿನಾ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಅತಿಥಿಮಾಹಾತ್ಮ್ಯವರ್ಣನಂ" ನಾಮ
ಷಡಶೀತ್ಯುತ್ತರಶತತಮೋಽಧ್ಯಾಯಃ

---

೨೦. ಸೂರ್ಯೋಢನೆಂಬ ಅತಿಥಿಯು ಯಾವನ ಮನೆಯಿಂದ ಪೂಜೆಯಿಲ್ಲದೆ ನಿರಾಶನಾಗಿ ಹೊರಟುಹೋಗುವನೋ ಅವನು ಆ ಗೃಹಸ್ಥನಿಗೆ ತನ್ನ ಪಾಪವನ್ನಿತ್ತು ಹೋಗುವನು.

೨೧. ಚಾಪೆ, ಭೂಮಿ, ನೀರು, ಹಿತವಾದ ಮಾತು ಈ ನಾಲ್ಕು ಸಜ್ಜನರ ಮನೆಯಲ್ಲಿ ಯಾವಾಗಲೂ ಇಲ್ಲದಿರುವುದಿಲ್ಲ.

೨೨–೨೪. ಗೃಹಸ್ಥನ ಸ್ವಾಗತದಿಂದ ಅಗ್ನಿಗಳೂ, ಆಸನದಿಂದ ಬ್ರಹ್ಮನೂ, ಪೂಜೆಯಿಂದ ಶಂಕರನೂ, ಪಾದ್ಯದಿಂದ ಸಮಸ್ತ ದೇವತೆಗಳೂ, ಭೋಜ್ಯದಿಂದ ವಿಷ್ಣುವೂ ತೃಪ್ತಿಗೊಳ್ಳುವರು. ಅತಿಥಿಯು ಸಮಸ್ತ ದೇವತಾರೂಪನಾಗಿರುವನು. ಆದುದರಿಂದ ಅವನನ್ನು ವಿಶೇಷವಾಗಿ ಭೋಜನ ಮಾಡಿಸಬೇಕು. ಗೃಹಸ್ಥನು ಇತರ ಬ್ರಾಹ್ಮಣನ ಹೆಸರನ್ನುಚ್ಚರಿಸಿ ಭೋಜನ ಮಾಡಿಸಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಅತಿಥಿಮಾಹಾತ್ಮ್ಯವರ್ಣನ"ವೆಂಬ
ನೂರೆಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಾಽಶೀತ್ಯುತ್ತರಶತತಮೋಽಧ್ಯಾಯಃ

## ರಾಕ್ಷಸಪ್ರಾಪ್ತಶ್ರಾದ್ಧವರ್ಣನಂ

**ಸೂತ ಉವಾಚ :—**

**ಚತುರ್ಥೇ ದಿವಸೇ ಪ್ರಾಪ್ತೇ ತತೋ ಯಜ್ಞಸಮುದ್ಭವೇ ।**
**ಋತ್ವಿಗ್ಭಿರ್ಯಾಜ್ಞಿಕಂ ಕರ್ಮ ಪ್ರಾರಬ್ಧಂ ತದನಂತರಂ ॥ ೧ ॥**
**ಸೋಮಪಾನಾದಿಕಂ ಸರ್ವಂ ಪಶೋರ್ಹಿಂಸಾದಿಕಂ ತಥಾ ।**
**ಪಶೋರ್ಗುದಂ ಸಮಾದಾಯ ಪ್ರಸ್ಥಾತಾ ಚ ವ್ಯಧಾರಯತ್ ॥ ೨ ॥**
**ಏಕಾಂತೇ ಸದಸೋ ಮಧ್ಯೇ ಹೋಮಾರ್ಥಂ ದ್ವಿಜಸತ್ತಮಾಃ ।**
**ತಸ್ಮಿನ್ ವ್ಯಾಕುಲತಾಂ ಯಾತೇ ಬ್ರಾಹ್ಮಣಃ ಕಶ್ಚಿದಾಗತಃ ॥ ೩ ॥**
**ಯುವಾ ತತ್ರ ಪ್ರವಿಷ್ಟಸ್ತು ಮಾಂಸಭಕ್ಷಣಲಾಲಸಃ ।**
**ತತೋ ಗುದಂ ಪಶೋರ್ದೃಷ್ಟ್ವಾ ಭಕ್ಷಯಾಮಾಸ ಚೋತ್ಸುಕಃ ॥ ೪ ॥**
**ಏತಸ್ಮಿನ್ನಂತರೇ ಪ್ರಾಪ್ತಃ ಪ್ರಸ್ಥಾತಾ ತಸ್ಯ ಸನ್ನಿಧೌ ।**
**ಭಕ್ಷಮಾಣಂ ಸಮಾಲೋಕ್ಯ ತಂ ಶಶಾಪ ತತಃ ಪರಂ ॥ ೫ ॥**
**ಧಿಗ್ಧಿಗ್ಪಾಪ ಸಮಾಚಾರ ಹೋಮಾರ್ಥಂ ಯದ್ಗುದಂ ಧೃತಂ ।**
**ತತ್ತ್ವಯಾ ದೂಷಿತಂ ಲೌಲ್ಯಾದ್ಯಜ್ಞವಿಘ್ನಕರಂ ಕೃತಂ ॥ ೬ ॥**

---

## ಕನ್ನಡದ ಅನುವಾದ

### ರಾಕ್ಷಸಪ್ರಾಪ್ತಶ್ರಾದ್ಧವರ್ಣನ

೧–೩. ಸೂತನು ಹೇಳುತ್ತಾನೆ :—ನಾಲ್ಕನೆಯ ದಿವಸ ಒದಗಲು ಋತ್ವಿಜರು ಯಜ್ಞದ ಸೋಮಪಾನ, ಪಶುಹಿಂಸೆ ಮೊದಲಾದ ಕಾರ್ಯಗಳನ್ನಾರಂಭಿಸಿದರು. ಪ್ರಸ್ಥಾತನು ಪಶುವಿನ ಗುದವನ್ನು ಸದಸ್ಸಿನ ಮಧ್ಯದಲ್ಲಿ ರಹಸ್ಯದಲ್ಲಿ ಸೀಳಿ ಮಾಂಸವನ್ನು ಹಿಡಿದುಕೊಂಡನು. ಆ ಪಶುವು ವ್ಯಥೆಗೊಳ್ಳಲು ಒಬ್ಬ ಬ್ರಾಹ್ಮಣನು ಅಲ್ಲಿಗೆ ಬಂದನು.

೪. ಮಾಂಸವನ್ನು ತಿನ್ನಲು ಆಶೆಯುಳ್ಳ ಅವನು ಪಶುವಿನ ಗುದವನ್ನು ಕಂಡು ಔತ್ಸುಕ್ಯದಿಂದ ಮಾಂಸವನ್ನು ತಿಂದನು.

೫. ಇಷ್ಟರಲ್ಲಿ ಅವನ ಹತ್ತಿರಕ್ಕೆ ಬಂದ ಪ್ರಸ್ಥಾತನು ಮಾಂಸವನ್ನು ತಿನ್ನುತ್ತಿರುವ ಆ ಬ್ರಾಹ್ಮಣನನ್ನು ನೋಡಿ ಹೀಗೆ ಶಪಿಸಿದನು.

೬. “ಛಿ! ಪಾಪಿ! ನೀನು ಅತ್ಯಾಶೆಯಿಂದ ಹೋಮಕ್ಕಾಗಿ ವಿಾಸಲಾಗಿರಿಸಿದ ಪಶುವಿನ ಗುದವನ್ನು ಕೆಡಿಸಿ ಯಜ್ಞಕ್ಕೆ ವಿಘ್ನವನ್ನುಂಟುಮಾಡಿರುವೆ.

ಉಚ್ಛಿಷ್ಟೇನ ಮಯಾ ಹೋಮಃ ಕರ್ತವ್ಯೋ ನೈವ ಸಾಂಪ್ರತಂ ।
ರಾಕ್ಷಸಾನಾಮಿದಂ ಕರ್ಮ ಯತ್ತ್ವಯಾ ಸಮನುಷ್ಠಿತಂ ॥ ೭ ॥
ತಸ್ಮಾತ್ತ್ವಂ ಮಮ ವಾಕ್ಯೇನ ರಾಕ್ಷಸೋ ಭವ ಮಾಚಿರಂ ॥ ೮ ॥
ಏತಸ್ಮಿನ್ನೇವ ಕಾಲೇತು ಹ್ಯೂರ್ಧ್ವಕೇಶೋಽಭವದ್ದ್ವಿಜಃ ।
ರಕ್ತಾಕ್ಷಃ ಶಂಕುಕರ್ಣಶ್ಚ ಕೃಷ್ಣದಂತೋಽತಿಭೈರವಃ ॥ ೯ ॥
ಲಂಬೋಷ್ಠೋ ವಿಕರಾಲಾಸ್ಯೋ ಮಾಂಸಮೇದೋವಿವರ್ಜಿತಃ ।
ತ್ವಗಸ್ಥಿಸ್ನಾಯುಶೇಷಶ್ಚ ಚಾಮುಂಡಾಕೃತಿರೇವ ಚ ॥ ೧೦ ॥
ಸ ಚ ವಿಶ್ವಾವಸುರ್ನಾಮ ಪುಲಸ್ತ್ಯಸ್ಯ ಸುತೋ ಮುನಿಃ ।
ಮಂತ್ರಪೂತಸ್ಯ ಮಾಂಸಸ್ಯ ಭಕ್ಷಣಾರ್ಥಂ ಸಮಾಗತಃ ॥ ೧೧ ॥
ವೇದವೇದಾಂಗತತ್ತ್ವಜ್ಞಃ ಪೌತ್ರಸ್ತು ಪರಮೇಷ್ಠಿನಃ ।
ತಂ ದೃಷ್ಟ್ವಾ ರಾಕ್ಷಸಾಕಾರಂ ವಿತ್ರೇಸುಃ ಸರ್ವತೋ ದ್ವಿಜಾಃ ॥ ೧೨ ॥
ರಾಕ್ಷೋಘ್ನಾನಿ ಚ ಸೂಕ್ತಾನಿ ಜಜಪುಶ್ಚಾಽಪರೇ ತಥಾ ।
ಕೇಚಿಚ್ಛರಣಮಾಪನ್ನಾ ವಿಷ್ಣೋ ರುದ್ರಸ್ಯ ಚಾಽಪರೇ ॥ ೧೩ ॥
ಪಿತಾಮಹಸ್ಯ ಚಾಽನ್ಯೇತು ಗಾಯತ್ರ್ಯಾಃ ಶರಣಂ ಗತಾಃ ।
ರಕ್ಷರಕ್ಷೇತಿ ಜಲ್ಪಂತೋ ಭಯಸಂತ್ರಸ್ತಮಾನಸಾಃ ॥ ೧೪ ॥

---

೭–೮. ಈಗ ನಾನು ನಿನ್ನ ಉಚ್ಛಿಷ್ಟದಿಂದ ಹೋಮವನ್ನು ಮಾಡಲಾರೆನು. ನೀನು ರಾಕ್ಷಸರ ಕೆಲಸವನ್ನು ಆಚರಿಸಿದ್ದರಿಂದ ನನ್ನ ಮಾತಿನಂತೆ ಶೀಘ್ರವಾಗಿ ರಾಕ್ಷಸನೇ ಆಗು.

೯–೧೦. ಈ ಮಾತನ್ನು ಹೇಳುತ್ತಿರುವಷ್ಟರಲ್ಲಿಯೇ ಅವನು ಊರ್ಧ್ವಕೇಶನೂ, ಕೆಂಗಣ್ಣುಗಳುಳ್ಳವನೂ, ಶಂಕುವಿನಂತೆ ಕಿವಿಯುಳ್ಳವನೂ, ಕೃಷ್ಣದಂತಗಳುಳ್ಳವನೂ, ಅತಿ ಭಯಂಕರನೂ, ಜೋಲಾಡುವ ತುಟಿಯುಳ್ಳವನೂ, ವಿಕಾರವಾದ ಮುಖವುಳ್ಳವನೂ, ಮಾಂಸ ಮೇದಸ್ಸುಗಳಿಲ್ಲದೆ ಚರ್ಮ, ಮೂಳೆ, ಸ್ನಾಯುಗಳು ಮಾತ್ರವುಳ್ಳವನೂ, ಚಾಮುಂಡೆಯಂತೆ ಆಕಾರವುಳ್ಳವನೂ ಆದನು.

೧೧–೧೨. ಅವನು ಮಂತ್ರದಿಂದ ಪವಿತ್ರವಾದ ಮಾಂಸವನ್ನು ಭಕ್ಷಿಸಲು ಬಂದ ಬ್ರಹ್ಮನ ಮೊಮ್ಮಗನು. ವೇದವೇದಾಂಗ ತತ್ವಗಳನ್ನರಿತವನಾದ ವಿಶ್ವಾವಸುವೆಂಬ ಪುಲಸ್ತ್ಯನ ಪುತ್ರನಾಗಿದ್ದನು. ರಾಕ್ಷಸನಂತೆ ಆಕಾರವುಳ್ಳ ಅವನನ್ನು ನೋಡಿ ಬ್ರಾಹ್ಮಣರೆಲ್ಲ ಭಯಗೊಂಡರು.

೧೩. ಕೆಲ ಬ್ರಾಹ್ಮಣರು ರಕ್ಷೋಘ್ನ ಸೂಕ್ತವನ್ನು ಜಪಿಸಿದರು. ಕೆಲವರು ವಿಷ್ಣು ಮತ್ತು ರುದ್ರರನ್ನು ಮರೆಹೊಕ್ಕರು.

೧೪. ಮತ್ತೆ ಕೆಲವರು ಭಯದಿಂದ 'ಕಾಪಾಡು, ಕಾಪಾಡು' ಎಂದು ಹೇಳುತ್ತ ಬ್ರಹ್ಮ ಮತ್ತು ಗಾಯತ್ರಿಯರನ್ನು ಮರೆಹೊಕ್ಕರು.

ಸೋಽಪಿ ದೃಷ್ಟ್ವಾ ತದಾತ್ಮಾನಂ ಗತಂ ರಾಕ್ಷಸತಾಂ ದ್ವಿಜಾಃ ।
ಬಾಷ್ಪಪೂರ್ಣೇಕ್ಷಣೋ ದೀನಃ ಪಿತಾಮಹಮುಪಾದ್ರವತ್ ॥ ೧೫ ॥
ಸ ಪ್ರಣಮ್ಯ ತತೋ ವಾಕ್ಯಂ ಕೃತಾಂಜಲಿರುವಾಚ ತಂ ॥ ೧೬ ॥
ಪೌತ್ರೋಽಹಂ ತವ ದೇವೇಶ ಪುಲಸ್ತ್ಯಸ್ಯ ಸುತೋ ದ್ವಿಜಃ ।
ನೀತೋ ರಾಕ್ಷಸತಾಮದ್ಯ ಪ್ರಸ್ಥಾತ್ರಾ ಕೋಪತೋ ವಿಭೋ ॥ ೧೭ ॥
ಜಿಹ್ವಾ ಲೌಲ್ಯೇನ ದೇವೇಶ ಪಶೋರ್ಗುದಮಜಾನತಾ ।
ಭಕ್ಷಿತಂ ತನ್ಮಯಾ ದೇವ ಹೋಮಾರ್ಥಂ ಯತ್ಪ್ರಕಲ್ಪಿತಂ ॥ ೧೮ ॥
ತಸ್ಮಾನ್ಮಾನುಷತಾಪ್ರಾಪ್ತ್ಯೈ ಮಮ ದೇಹೇ ದಯಾಂ ಕುರು ।
ರಾಕ್ಷಸತ್ವಂ ಯಥಾ ಯಾತಿ ತಥಾ ನೀತಿರ್ವಿಧೀಯತಾಂ ॥ ೧೯ ॥
ತಚ್ಛ್ರುತ್ವಾ ಜಲ್ಪಿತಂ ತಸ್ಯ ದಯಾಂ ಕೃತ್ವಾ ಪಿತಾಮಹಃ ।
ಪ್ರತಿಪ್ರಸ್ಥಾತರಂ ಸಾಮವಾಕ್ಯಮೇತದುವಾಚ ಹ ॥ ೨೦ ॥
ಬಾಲೋಽಯಂ ಮಮ ಪೌತ್ರಸ್ತು ಕೃತ್ಯಾಕೃತ್ಯಂ ನವೇತ್ತಿ ಚ ।
ತಸ್ಮಾತ್ತ್ವಂ ರಾಕ್ಷಸಂ ಭಾವಂ ಹರಸ್ವಾಸ್ಯ ದ್ವಿಜೋತ್ತಮ ॥ ೨೧ ॥
ತಚ್ಛ್ರುತ್ವಾ ಸ ಮುನಿಃ ಪ್ರಾಹ ಪ್ರಾಯಶ್ಚಿತ್ತಂ ಮಖೇ ತವ ।
ಅನೇನ ಜನಿತಂ ದೇವ ಗುದಂ ದೂಷಯತಾ ವಿಭೋ ॥ ೨೨ ॥

---

೧೫. ದ್ವಿಜರೆ! ಆ ವಿಶ್ವಾವಸುವೂ ರಾಕ್ಷಸತ್ವವನ್ನು ಪಡೆದ ತನ್ನನ್ನು ನೋಡಿ ದುಃಖದಿಂದ ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ಬ್ರಹ್ಮನೆಡೆಗೆ ಓಡಿಬಂದನು.

೧೬. ಅವನು ಬ್ರಹ್ಮನಿಗೆ ವಂದಿಸಿ ಕೈಮುಗಿದುಕೊಂಡು ಇಂತೆಂದನು.

೧೭. "ದೇವೇಶ! ನಾನು ನಿನ್ನ ಮೊಮ್ಮಗನು, ಪುಲಸ್ತ್ಯನ ಮಗನು. ಈ ಪ್ರಸ್ಥಾತನು ನನ್ನನ್ನು ಕೋಪದಿಂದ ರಾಕ್ಷಸನನ್ನಾಗಿ ಮಾಡಿದ್ದಾನೆ.

೧೮. ಸ್ವಾಮಿ! ನಾನು ನಾಲಿಗೆಯ ಚಾಪಲ್ಯದಿಂದ ಅರಿಯದೆ ಹೋಮಕ್ಕಾಗಿ ಕಲ್ಪಿಸಿರುವ ಪಶುವಿನ ಗುದವನ್ನು ಭಕ್ಷಿಸಿದೆನು.

೧೯. ಆದುದರಿಂದ ನೀನು ನನ್ನ ಶರೀರದಲ್ಲಿರುವ ರಾಕ್ಷಸತನವು ಹೋಗಿ ಮನುಷ್ಯತ್ವವು ಬರುವಂತೆ ಅನುಗ್ರಹವನ್ನು ಮಾಡು."

೨೦. ಪಿತಾಮಹನು ಅವನ ಆ ಮಾತನ್ನು ಕೇಳಿ ದಯೆಗೊಂಡು ಪ್ರತಿಪ್ರಸ್ಥಾತನನ್ನು ಕುರಿತು ಸಮಾಧಾನದಿಂದ ಇಂತೆಂದನು.

೨೧. "ದ್ವಿಜವರ್ಯನೆ! ಬಾಲಕನಾದ ನನ್ನೀ ಮೊಮ್ಮಗನು ಕಾರ್ಯಾಕಾರ್ಯವನ್ನು ತಿಳಿದಿರುವುದಿಲ್ಲ. ಆದುದರಿಂದ ನೀನು ಇವನ ರಾಕ್ಷಸತ್ವವನ್ನು ನಿವಾರಿಸು."

೨೨. ಅದನ್ನು ಕೇಳಿ ಆ ಮುನಿಯು ಇಂತೆಂದನು. "ಇವನು ಪಶುವಿನ ಗುದಮಾಂಸವನ್ನು ಕೆಡಿಸಿ ನಿನ್ನ ಈ ಯಜ್ಞದಲ್ಲಿ ಪ್ರಾಯಶ್ಚಿತ್ತವನ್ನುಂಟುಮಾಡಿದ್ದಾನೆ.

ತಸ್ಮಾದೇಷ ಮಯಾ ಶಪ್ತೋ ಯಜ್ಞವಿಘ್ನಕರೋ ಮಮ ।
ನಾಽಹಮಸ್ಯ ಹರಿಷ್ಯಾಮಿ ರಾಕ್ಷಸತ್ವಂ ಕಥಂಚನ ॥ ೨೩ ॥
ನರ್ಮಣಾಪಿ ಮಯಾ ಪ್ರೋಕ್ತಂ ಕದಾಚಿನ್ನಾಽನೃತಂ ವಚಃ ॥ ೨೪ ॥

ಬ್ರಹ್ಮೋವಾಚ:—

ಪ್ರಾಯಶ್ಚಿತ್ತಂ ಕರಿಷ್ಯೇಽಹಂ ಯಜ್ಞಸ್ಯಾಽಸ್ಯ ಪ್ರಸಿದ್ಧಯೇ ।
ದಕ್ಷಿಣಾ ಗೌರ್ಯಥೋಕ್ತಾ ಚ ಕೃತ್ವಾ ಹೋಮಂ ವಿಧಾನತಃ ।
ತ್ವಮಸ್ಯ ರಾಕ್ಷಸಂ ಭಾವಂ ಹರಸ್ವ ಮಮ ವಾಕ್ಯತಃ ॥ ೨೫ ॥
ಸೋಽಬ್ರವೀಚ್ಛೀತಲೋ ವಹ್ನಿರ್ಯದಿಸ್ಯಾದುಷ್ಣಗುಃ ಶಶೀ ।
ತನ್ಮೇ ಸ್ಯಾದನ್ಯಥಾ ವಾಕ್ಯಂ ವ್ಯಾಹೃತಂ ಪ್ರಪಿತಾಮಹ ॥ ೨೬ ॥
ತಸ್ಯ ತದ್ವಚನಂ ಶ್ರುತ್ವಾ ಜ್ಞಾತ್ವಾ ಚೈವ ತು ನಿಶ್ಚಿತಂ ।
ವಿಶ್ವಾವಸುಂ ವಿಧಿಃ ಪ್ರಾಹ ತತೋ ರಾಕ್ಷಸರೂಪಿಣಂ ॥ ೨೭ ॥
ತ್ವಂ ವತ್ಸಾಽನೇನ ರೂಪೇಣ ತಿಷ್ಠ ತಾವದ್ವಚೋ ಮಮ ।
ಕುರುಷ್ವ ತೇ ಪ್ರಯಚ್ಛಾಮಿ ಯೇನ ಸ್ಥಾನಮನುತ್ತಮಂ ॥ ೨೮ ॥
ಚಮತ್ಕಾರಪುರಸ್ಯಾಸ್ಯ ಪಶ್ಚಿಮಸ್ಥಾನಮಾಶ್ರಿತಾಃ ।
ಸಂತ್ಯನ್ಯೇ ರಾಕ್ಷಸಾಸ್ತತ್ರ ಮರ್ಯಾದಾಯಾಂ ವ್ಯವಸ್ಥಿತಾಃ ॥ ೨೯ ॥

---

೨೩. ಆದುದರಿಂದ ಯಜ್ಞಕ್ಕೆ ವಿಘ್ನವನ್ನುಂಟುಮಾಡಿದ ಇವನನ್ನು ನಾನು ಶಪಿಸಿರುತ್ತೇನೆ. ಇವನ ರಾಕ್ಷಸತ್ವವನ್ನು ಪರಿಹರಿಸಲಾರೆನು.

೨೪. ನಾನು ಹಾಸ್ಯಾರ್ಥವಾಗಿ ಹೇಳಿದ ಮಾತೂ ಒಂದು ಸಾರಿಯೂ ಸುಳ್ಳಾಗುವುದಿಲ್ಲ."

೨೫. ಬ್ರಹ್ಮನು ಹೇಳುತ್ತಾನೆ:—ನಾನು ಈ ಯಜ್ಞದ ಸಿದ್ಧಿಗಾಗಿ ವಿಧಿಯಂತೆ ಗೋವನ್ನು ದಕ್ಷಿಣೆಯಾಗಿ ಕೊಟ್ಟು ಹೋಮವನ್ನು ಮಾಡಿ ಪ್ರಾಯಶ್ಚಿತ್ತವನ್ನು ಆಚರಿಸುವೆನು. ನೀನು ನನ್ನ ಮಾತಿನಿಂದ ಇವನ ರಾಕ್ಷಸತ್ವವನ್ನು ನಿವಾರಿಸು."

೨೬. "ಪಿತಾಮಹ! ಬೆಂಕಿಯು ತಣ್ಣಗಾದರೆ, ಚಂದ್ರನು ಉಷ್ಣಕಿರಣಗಳುಳ್ಳವನಾದರೆ ಮಾತ್ರ ನಾನು ಹೇಳಿದ ಮಾತು ವ್ಯತ್ಯಾಸವಾದೀತು" ಎಂದು ಅವನು ಹೇಳಿದನು.

೨೭. ಬ್ರಹ್ಮನು ಆ ಪ್ರಸ್ತಾತನ ಮಾತನ್ನು ಕೇಳಿ ನಿರ್ಣಯವನ್ನು ತಿಳಿದು ರಾಕ್ಷಸರೂಪಿಯಾದ ವಿಶ್ವಾವಸುವನ್ನು ಕುರಿತು ಹೀಗೆಂದನು.

೨೮. "ಮಗು! ನೀನು ಈ ರೂಪದಿಂದಲೇ ಇರು. ನನ್ನ ಮಾತನ್ನು ನಡೆಸು. ನಿನಗೆ ಉತ್ತಮ ಸ್ಥಾನವನ್ನು ಕೊಡುವೆನು.

೨೯. ಈ ಚಮತ್ಕಾರಪುರದ ಪಶ್ಚಿಮದ ಎಲ್ಲೆಯಲ್ಲಿ ಇತರ ರಾಕ್ಷಸರು ನೆಲೆಸಿರುವರು.

**ಲಂಕಾಯಾಂ ರಾಕ್ಷಸಾಶ್ಚೈವ ಪ್ರಾರ್ಥಯಂತೋಽತ್ರ ಸದ್ಗತಿಂ ।**
**ತೇ ಚಾಽಽಗತ್ಯ ತಮುದ್ದೇಶಂ ತಪಃ ಕುರ್ವಂತಿ ಸುವ್ರತಾಃ ॥ ೩೦ ॥**
**ತತ್ರ ಪ್ರಭುತ್ವಮಾತಿಷ್ಠ ನಾಗರಾಣಾಂ ಹಿತೇ ಸ್ಥಿತಃ ।**
**ರಾಕ್ಷಸಾ ಬಹವಃ ಸಂತಿ ಕೂಷ್ಮಾಂಡಾಶ್ಚ ಪಿಶಾಚಕಾಃ ॥ ೩೧ ॥**
**ಯೇ ಚಾಽನ್ಯೇ ರಾಕ್ಷಸಾಃ ಕೇಚಿದ್ದುಷ್ಟಭಾವಸಮಾಶ್ರಿತಾಃ ।**
**ತತ್ರ ಗಚ್ಛಂತಿ ಯೇ ಸರ್ವೇ ನಿಗೃಹ್ಣಂತಿ ಚ ತತ್ಕ್ಷಣಾತ್ ॥ ೩೨ ॥**
**ಭೂತಾಃ ಪ್ರೇತಾಃ ಪಿಶಾಚಾಶ್ಚ ಕೂಷ್ಮಾಂಡಾಶ್ಚ ವಿಶೇಷತಃ ।**
**ನಾಗರಂ ತು ಪುರೋ ದೃಷ್ಟ್ವಾ ತದ್ಭಯಾದ್ಯಾಂತಿ ದೂರತಃ ॥ ೩೩ ॥**
**ತದ್ಗಚ್ಛ ಪುತ್ರ ತತ್ರ ತ್ವಂ ಸರ್ವೇಷಾಮಧಿಪೋ ಭವ ।**
**ರಾಕ್ಷಸಾನಾಂ ಮಯಾ ದತ್ತಂ ತವ ರಾಜ್ಯಂ ಚ ಸಾಂಪ್ರತಂ ॥ ೩೪ ॥**

ರಾಕ್ಷಸ ಉವಾಚ :—

**ಆಧಿಪತ್ಯೇ ಸ್ಥಿತಸ್ಯೈವಂ ರಾಕ್ಷಸಾನಾಂ ಪಿತಾಮಹ ।**
**ಕಿಂ ಮಯಾ ತತ್ರ ಭೋಕ್ತವ್ಯಂ ತೇಭ್ಯೋ ದೇಯಂ ಚ ಕಿಂ ವದ ॥ ೩೫ ॥**
**ರಾಜ್ಞಾ ಚೈವ ಯತೋ ದೇಯಂ ಭೃತ್ಯಾನಾಂ ಭೋಜನಂ ವಿಭೋ ।**
**ತನ್ಮಮಾಚಕ್ಷ್ವ ದೇವೇಶ ದಯಾಂ ಕೃತ್ವಾ ಮಮೋಪರಿ ॥ ೩೬ ॥**
**ನ ಕರೋತಿ ಚ ಯೋ ರಾಜಾ ಭೃತ್ಯವರ್ಗಸ್ಯ ಪೋಷಣಂ ।**
**ರೌರವಂ ನರಕಂ ಯಾತಿ ಸ ಏವಂ ಹಿ ಶ್ರುತಂ ಮಯಾ ॥ ೩೭ ॥**

---

೩೦. ಲಂಕೆಯ ರಾಕ್ಷಸರೂ ಇಲ್ಲಿಗೆ ಬಂದು ಸದ್ಗತಿಯನ್ನಪೇಕ್ಷಿಸುತ್ತ ನಿಯಮದಿಂದ ತಪಸ್ಸನ್ನು ಮಾಡುತ್ತಾರೆ.

೩೧. ಅಲ್ಲಿ ನೀನು ನಾಗರರಿಗೆ ಹಿತವನ್ನುಂಟುಮಾಡುತ್ತ ಕೂಷ್ಮಾಂಡ ಪಿಶಾಚಕಾದಿ ರಾಕ್ಷಸರಿಗೆ ಪ್ರಭುವಾಗು.

೩೨. ಕೆಲ ರಾಕ್ಷಸರು ದುಷ್ಟತನವನ್ನು ಆಶ್ರಯಿಸಿ ಆ ನಾಗರರ ಸ್ಥಳಕ್ಕೆ ಹೋಗಿ ಕೂಡಲೆ ಹಿಂಸೆಮಾಡುತ್ತಾರೆ.

೩೩. ಭೂತ, ಪ್ರೇತ, ಪಿಶಾಚ, ಕೂಷ್ಮಾಂಡಗಳು ಮುಂದಿರುವ ನಾಗರನನ್ನು ನೋಡಿ ಭಯದಿಂದ ದೂರಕ್ಕೆ ಹೋಗುತ್ತವೆ.

೩೪. ಆದುದರಿಂದ ಮಗು! ನೀನು ಅಲ್ಲಿಗೆ ಹೋಗಿ ಸಕಲ ರಾಕ್ಷಸರಿಗೆ ರಾಜನಾಗು. ನಿನಗೆ ಈಗ ರಾಕ್ಷಸ ರಾಜ್ಯವನ್ನಿತ್ತಿರುವೆನು.''

೩೫. ರಾಕ್ಷಸನು ಹೇಳುತ್ತಾನೆ:—ಪಿತಾಮಹ! ರಾಕ್ಷಸ ರಾಜನಾದ ನಾನು ಅಲ್ಲಿ ಏನನ್ನು ತಿನ್ನಲಿ. ಆ ರಾಕ್ಷಸರಿಗೆ ಏನನ್ನು ಕೊಡಲಿ.

೩೬–೩೭. ರಾಜನು ಭೃತ್ಯರಿಗೆ ಭೋಜನವನ್ನು ಕೊಡಬೇಕು. ಆದುದರಿಂದ ದೇವೇಶ! ನನ್ನಲ್ಲಿ ದಯೆಮಾಡಿ ಅದನ್ನು ಹೇಳು. ಭೃತ್ಯರನ್ನು ಪೋಷಣೆ ಮಾಡದ ರಾಜನು ರೌರವ ನರಕಕ್ಕೆ ಹೋಗುವನೆಂದು ನಾನು ಕೇಳಿದ್ದೇನೆ.

ಬ್ರಹ್ಮೋವಾಚ :—
ಯಚ್ಛ್ರಾದ್ಧಂ ದಕ್ಷಿಣಾಹೀನಂ ತಿಲೈರ್ದರ್ಭೈರ್ವಿವರ್ಜಿತಂ ।
ತತ್ಸರ್ವಂ ತೇ ಮಯಾ ದತ್ತಂ ಯದ್ಯಪಿ ಸ್ಯಾತ್ಸುತೀರ್ಥಗಂ ॥ ೩೮ ॥
ಯಚ್ಛ್ರಾದ್ಧಂ ಸೂಕರಃ ಪಶ್ಯೇನ್ನಾರೀ ವಾಽಥ ರಜಸ್ವಲಾ ।
ಕೌಲೇಯಕೋಽಥ ಬಾಲೇಯಸ್ತತ್ಸರ್ವಂ ತೇ ಭವಿಷ್ಯತಿ ॥ ೩೯ ॥
ವಿಧಿಹೀನಂ ತು ಯಚ್ಛ್ರಾದ್ಧಂ ದರ್ಭೈರ್ವಾ ಮೂಲವರ್ಜಿತೈಃ ।
ವಿತಸ್ತೇರಧಿಕೈರ್ವಾಽಪಿ ತತ್ಸರ್ವಂ ತೇ ಭವಿಷ್ಯತಿ ॥ ೪೦ ॥
ತಿಲಂ ವಾ ತೈಲಪಕ್ವಂ ವಾ ಶೂಕಧಾನ್ಯಮಥಾಪಿ ವಾ ।
ನ ಯತ್ರ ದೀಯತೇ ಶ್ರಾದ್ಧೇ ತತ್ತೇ ಶ್ರಾದ್ಧಂ ಭವಿಷ್ಯತಿ ॥ ೪೧ ॥
ಅಸ್ನಾತಂ ಯತ್ಕೃತಂ ಶ್ರಾದ್ಧಂ ಯಚ್ಚಾಧೌತಾಂಬರೈಃ ಕೃತಂ ।
ತೈಲಾಭ್ಯಂಗಯುತೈಶ್ಚೈವ ತತ್ತೇ ಸರ್ವಂ ಭವಿಷ್ಯತಿ ॥ ೪೨ ॥
ಯದ್ವಾ ಮಾಹಿಷಿಕೋ ಭುಂಕ್ತೇ ಶ್ವಿತ್ರೀ ವಾ ಕುನಖೋಽಪಿ ವಾ ।
ಕುಷ್ಠೀ ವಾಽಥ ದ್ವಿಜೋ ಭುಂಕ್ತೇ ತತ್ತೇ ಶ್ರಾದ್ಧಂ ಭವಿಷ್ಯತಿ ॥ ೪೩ ॥
ಹೀನಾಂಗೋ ವಾಽಥ ಯದ್ಭುಂಕ್ತೇಽಧಿಕಾಂಗೋ ವಾಽಥ ನಿಂದಿತಃ ।
ಮಹಾವ್ಯಾಧಿಗೃಹೀತೋ ವಾ ಚೌರೋ ವಾರ್ಧುಷಿಕೋಽಪಿ ವಾ ।
ಯತ್ರ ಭುಂಕ್ತೇಽಥವಾ ಶ್ರಾದ್ಧೇ ತತ್ತೇ ಶ್ರಾದ್ಧಂ ಭವಿಷ್ಯತಿ ॥ ೪೪ ॥

---

೩೮. ಬ್ರಹ್ಮನು ಹೇಳುತ್ತಾನೆ:—ದಕ್ಷಿಣೆ, ಎಳ್ಳು, ದರ್ಭೆಗಳಿಲ್ಲದೆ ಮಾಡಿದ ಶ್ರಾದ್ಧವು ತೀರ್ಥದಲ್ಲಿ ಮಾಡಿದ್ದಾದರೂ ಅದನ್ನು ನಿನಗೆ ಕೊಟ್ಟಿದ್ದೇನೆ.

೩೯–೪೦. ಹಂದಿ, ರಜಸ್ವಲೆಯಾದ ಹೆಂಗಸು, ನಾಯಿ, ಕತ್ತೆ ಇವುಗಳು ನೋಡಿದ ಶ್ರಾದ್ಧವು ನಿನ್ನದಾಗುತ್ತದೆ. ಬುಡವಿಲ್ಲದಿರುವುದೂ, ಹನ್ನೆರಡು ಅಂಗುಲಗಳಿಗಿಂತ ಹೆಚ್ಚು ಉದ್ದವಾದುದೂ ಆದ ದರ್ಭೆಗಳಿಂದ ವಿಧಿಹೀನವಾಗಿ ಮಾಡಿದ ಶ್ರಾದ್ಧವೂ ನಿನಗೆ ಸಲ್ಲುವುದು.

೪೧. ಯಾವ ಶ್ರಾದ್ಧದಲ್ಲಿ ಎಳ್ಳು, ತೈಲಪಕ್ವವಾದ ಭಕ್ಷ್ಯ, ಯವಧಾನ್ಯಗಳನ್ನು ಕೊಡುವುದಿಲ್ಲವೊ, ಆ ಶ್ರಾದ್ಧವು ನಿನಗೆ ಸೇರುವುದು.

೪೨. ಸ್ನಾನಮಾಡದವರೂ, ಒಗೆಯದ ಬಟ್ಟೆಯನ್ನುಟ್ಟವರೂ, ತೈಲಾಭ್ಯಂಗವನ್ನು ಮಾಡಿಕೊಂಡವರೂ ಮಾಡಿದ ಶ್ರಾದ್ಧವು ನಿನಗೆ ಸಲ್ಲುವುದು.

೪೩. ವ್ಯಭಿಚಾರಿಣಿಯ ಪತಿಯಾಗಲಿ, ಕುಷ್ಠರೋಗಿಯಾಗಲಿ, ಕೆಟ್ಟುಹೋದ ಉಗುರುಳ್ಳವನಾಗಲಿ ಆದ ಬ್ರಾಹ್ಮಣನು ಭುಂಜಿಸಿದ ಶ್ರಾದ್ಧವು ನಿನಗೆ ಸೇರುವುದು.

೪೪. ಹೀನಾಂಗನಾಗಲಿ, ಅಧಿಕಾಂಗನಾಗಲಿ, ನಿಂದಿತನಾಗಲಿ, ಮಹಾವ್ಯಾಧಿಗ್ರಸ್ತನಾಗಲಿ, ಕಳ್ಳನಾಗಲಿ, ಬಡ್ಡಿಯಿಂದ ಜೀವಿಸುವವನಾಗಲಿ ಭುಂಜಿಸಿದ ಶ್ರಾದ್ಧವು ನಿನಗೆ ಸೇರುವುದು.

ಶ್ಯಾವದಂತಸ್ತು ಯದ್ಭುಂಕ್ತೇ ಯದ್ಭುಂಕ್ತೇ ವೃಷಲೀಪತಿಃ ।
ವಿನಗ್ನೋ ವಾಽಥ ಯದ್ಭುಂಕ್ತೇ ತತ್ತೇ ಶ್ರಾದ್ಧಂ ಭವಿಷ್ಯತಿ ॥ ೪೫ ॥
ಯೋ ಯಜ್ಞೋ ದಕ್ಷಿಣಾಹೀನೋ ಯಶ್ಚಾಶೌಚಯುತೈಃ ಕೃತಃ ।
ಬ್ರಹ್ಮಚರ್ಯವಿಹೀನಸ್ತು ತತ್ಫಲಂ ತೇ ಭವಿಷ್ಯತಿ ॥ ೪೬ ॥
ಯಸ್ಮಿನ್ನೈವಾಽತಿಥಿಃ ಪೂಜ್ಯಃ ಶ್ರಾದ್ಧೇ ವಾ ಯಜ್ಞಕರ್ಮಣಿ ।
ಸಂಪ್ರಾಪ್ತೇ ವೈಶ್ವದೇವಾಂತೇ ತತ್ತೇ ಸರ್ವಂ ಭವಿಷ್ಯತಿ ॥ ೪೭ ॥
ಆವಾಹನಾತ್ಪರಂ ಯತ್ರ ಮೌನಂ ನ ಶ್ರಾದ್ಧದಶ್ಚರೇತ್ ।
ಬ್ರಾಹ್ಮಣೋ ವಾಽಥ ಭೋಕ್ತಾ ಚ ತತ್ತೇ ಶ್ರಾದ್ಧಂ ಭವಿಷ್ಯತಿ ॥ ೪೮ ॥
ಮೃಣ್ಮಯೇಷು ಚ ಪಾತ್ರೇಷು ಯಃ ಶ್ರಾದ್ಧಂ ಕುರುತೇ ನರಃ ।
ಭಿನ್ನಪಾತ್ರೇಷು ವಾ ಯಚ್ಚ ತತ್ತೇ ಸರ್ವಂ ಭವಿಷ್ಯತಿ ॥ ೪೯ ॥
ಪ್ರತ್ಯಕ್ಷಂ ಲವಣಂ ಯತ್ರ ತಕ್ರಂ ವಾ ವಿಕೃತಂ ಭವೇತ್ ।
ಜಾತೀಪುಷ್ಪಪ್ರದಾನಂ ಚ ತತ್ತೇ ಸರ್ವಂ ಭವಿಷ್ಯತಿ ॥ ೫೦ ॥
ಯಜಮಾನೋ ದ್ವಿಜೋ ವಾಽಥ ಬ್ರಹ್ಮಚರ್ಯವಿವರ್ಜಿತಃ ।
ತಚ್ಛ್ರಾದ್ಧಂ ತೇ ಮಯಾ ದತ್ತಂ ತ್ರಿಪಾತ್ರೇಣ ವಿವರ್ಜಿತಂ ॥ ೫೧ ॥

---

೪೫. ಹಳದಿ ಹಲ್ಲುಳ್ಳವನೂ, ಶೂದ್ರಳ ಪತಿಯೂ, ದಿಗಂಬರನೂ ಆದ ಬ್ರಾಹ್ಮಣನು ಭುಂಜಿಸಿದ ಶ್ರಾದ್ಧವು ನಿನಗೆ ಸಲ್ಲುವುದು.

೪೬. ದಕ್ಷಿಣೆಯಿಲ್ಲದಿರುವುದೂ, ಆಶೌಚವುಳ್ಳವರು ಮಾಡಿರುವುದೂ, ಬ್ರಹ್ಮಚರ್ಯವಿಲ್ಲದಿರುವುದೂ ಆದ ಪಿತೃಯಜ್ಞದ ಫಲವು ನಿನಗೆ ಸೇರುವುದು.

೪೭. ಶ್ರಾದ್ಧ ಅಥವಾ ಯಜ್ಞಕರ್ಮದಲ್ಲಿ ವೈಶ್ವದೇವದ ಕೊನೆಯಲ್ಲಿ ಬಂದ ಅತಿಥಿಯನ್ನು ಪೂಜಿಸದಿದ್ದರೆ ಅವು ನಿನಗೆ ಸೇರುವುವು.

೪೮. ಆವಾಹನೆಯಾದಮೇಲೆ ಶ್ರಾದ್ಧ ಮಾಡುವವನೂ, ಭೋಜನ ಮಾಡುವ ಬ್ರಾಹ್ಮಣನೂ ಮೌನವನ್ನಾಚರಿಸದಿದ್ದರೆ ಆ ಶ್ರಾದ್ಧವು ನಿನಗೆ ಸಲ್ಲುವುದು.

೪೯. ಮಣ್ಣಿನ ಪಾತ್ರೆಗಳಲ್ಲಾಗಲಿ, ಒಡೆದ ಪಾತ್ರೆಗಳಲ್ಲಾಗಲಿ ಶ್ರಾದ್ಧ ಮಾಡಿದರೆ ಅದರ ಫಲವು ನಿನಗೆ ಸೇರುವುದು.

೫೦. ಶ್ರಾದ್ಧದಲ್ಲಿ ಪ್ರತ್ಯಕ್ಷವಾದ ಉಪ್ಪು, ವಿಕಾರಗೊಂಡ ಮಜ್ಜಿಗೆಯನ್ನು ಬಡಿಸಿದರೂ, ಜಾಜಿ ಹೂವನ್ನು ಕೊಟ್ಟರೂ ಆ ಶ್ರಾದ್ಧವು ನಿನಗೇ ಆಗುವುದು.

೫೧. ಶ್ರಾದ್ಧಮಾಡುವ ಯಜಮಾನನಾಗಲಿ, ಬ್ರಾಹ್ಮಣನಾಗಲಿ ಬ್ರಹ್ಮಚರ್ಯರಹಿತರಾದರೆ, ಮೂರು (ದೇವ, ವಿಶ್ವೇದೇವ, ಪಿತೃ) ಪಾತ್ರೆಗಳಿಲ್ಲದಿದ್ದರೆ ಆ ಶ್ರಾದ್ಧವು ನಿನಗೆ ಸಂಬಂಧಿಸುವುದು.

ಅಯಸೇನ ತು ಪಾತ್ರೇಣ ಯತ್ರಾಽನ್ನಂ ತು ಪ್ರದೀಯತೇ ।
ತಚ್ಛ್ರಾದ್ಧಂ ತೇ ಮಯಾ ದತ್ತಂ ತಥಾಽನ್ಯದಪಿ ಹೀಯತೇ ॥ ೫೨ ॥
ಮಂತ್ರಕ್ರಿಯಾಭ್ಯಾಂ ಯತ್ಕಿಂಚಿದ್ರಾತ್ರೌ ದತ್ತಂ ಹುತಂ ತಥಾ ।
ಸಂಕ್ರಾಂತಿಸೋಮಪರ್ವಭ್ಯಾಂ ವ್ಯತಿರಿಕ್ತಂ ತು ಕುತ್ಸಿತಂ ॥ ೫೩ ॥
ಇತ್ಯುಕ್ತ್ವಾ ವಿರರಾಮಾಽಽಶು ಬ್ರಹ್ಮಾ ಲೋಕಪಿತಾಮಹಃ ।
ರಾಕ್ಷಸಃ ಸೋಽಪಿ ತತ್ರಾಽಪಿ ಲೇಭೇ ಸ್ಥಾನಂ ತು ರಾಕ್ಷಸಂ ॥ ೫೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ರಾಕ್ಷಸಪ್ರಾಪ್ತ್ಯಶ್ರಾದ್ಧವರ್ಣನಂ" ನಾಮ
ಸಪ್ತಾಽಶೀತ್ಯುತ್ತರಶತತಮೋಽಧ್ಯಾಯಃ

---

೫೨–೫೩. ಕಬ್ಬಿಣದ ಪಾತ್ರೆಯಿಂದ ಅನ್ನವನ್ನು ಬಡಿಸಿರುವುದೂ, ಮಂತ್ರ ಮತ್ತು ಕ್ರಿಯೆಗಳಿಲ್ಲದಿರುವುದೂ, ಸಂಕ್ರಾಂತಿ ಮತ್ತು ಪರ್ವಕಾಲಗಳನ್ನು ಬಿಟ್ಟು ಮಾಡಿದ ರಾತ್ರಿಯ ಶ್ರಾದ್ಧ ಮತ್ತು ಯಾಗಗಳು ನಿನಗೆ ಸೇರುವುವು.

೫೪. ಪಿತಾಮಹನು ಹೀಗೆ ಹೇಳಿ ಕೂಡಲೆ ಸುಮ್ಮನಾದನು. ಆ ರಾಕ್ಷಸನೂ ಅಲ್ಲಿ ರಾಕ್ಷಸ ಸ್ಥಾನವನ್ನು ಪಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ರಾಕ್ಷಸಪ್ರಾಪ್ತ್ಯಶ್ರಾದ್ಧವರ್ಣನ"ವೆಂಬ
ನೂರೆಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟಾಽಶೀತ್ಯುತ್ತರಶತತಮೋಽಧ್ಯಾಯಃ

## ಸಾವಿತ್ರೀದತ್ತಮಾತೃಗಣಶಾಪವರ್ಣನಂ

**ಸೂತ ಉವಾಚ :—**

**ತತಸ್ತು ಪಂಚಮೇ ಚಾಽಹ್ನಿ ಸಂಜಾತೇ ತೇ ದ್ವಿಜೋತ್ತಮಾಃ ।**
**ಶ್ವೇತಧೌತಾಂಬರಾಃ ಸರ್ವೇ ಸುಸ್ನಾತಾಃ ಶುಚಯಃ ಸ್ಥಿತಾಃ ॥ ೧ ॥**
**ಚಕ್ರುಃ ಸರ್ವಾಣಿ ಕರ್ಮಾಣಿ ಪುಲಸ್ತ್ಯೇನ ಪ್ರಬೋಧಿತಾಃ ।**
**ಸದೋಮಧ್ಯೇ ಗತಾಶ್ಚೈವ ಋತ್ವಿಗ್ವರಣಪೂರ್ವಕಾಃ ॥ ೨ ॥**
**ಅಧ್ವರ್ಯುಣಾ ಸಮಾದಿಷ್ಟಾನ್ ಪ್ರೈಷಾನ್ ಪ್ರೋಚುರ್ಯಥಾಕ್ರಮಂ ।**
**ಹೋಮಾರ್ಥಂ ದೀಪ್ತವಹ್ನೌ ಚ ಋತ್ವಿಗ್ಭಿಃ ಸುಸಮಾಹಿತೈಃ ॥ ೩ ॥**
**ಏತಸ್ಮಿನ್ನೇವ ಕಾಲೇ ತು ಹ್ಯುದ್ಗಾತ್ರಾ ಕರ್ಮಯೋಜಿತಂ ।**
**ಶಂಕುಭಿಃ ಕ್ರಿಯತೇ ಯಚ್ಚ ಸಾಮಗೀತಪ್ರಸೂಚಿತಂ ॥ ೪ ॥**
**ಸಪ್ತಾವರ್ತಂ ದ್ವಿಜಶ್ರೇಷ್ಠಾಃ ಸದೋಮಧ್ಯಗತೇ ನ ಚ ।**
**ಯತ್ರಾಗಚ್ಛಂತಿ ತೇ ಸರ್ವೇ ದೇವಾ ಯಜ್ಞಾಂಶಲಾಲಸಾಃ ॥ ೫ ॥**
**ಸೋಮಪಾನಕೃತೇ ಚೈವ ವಿಶೇಷೇಣ ಮುದಾನ್ವಿತಾಃ ।**
**ಪ್ರಾರಬ್ಧೇ ಸೋಮಭಕ್ಷ್ಯೇಽಥ ಗೀತೇ ಚೋದ್ಗಾತೃನಿರ್ಮಿತೇ ॥ ೬ ॥**

---

## ಕನ್ನಡದ ಅನುವಾದ

### ಸಾವಿತ್ರೀದತ್ತಮಾತೃಗಣಶಾಪವರ್ಣನ

೧–೨. ಸೂತನು ಹೇಳುತ್ತಾನೆ:—ಅನಂತರ ಐದನೆಯ ದಿನವು ಪ್ರಾಪ್ತವಾಗಲು ಆ ಬ್ರಾಹ್ಮಣರೆಲ್ಲರೂ ಮಿಂದವರೂ, ಶುದ್ಧರೂ ಶ್ವೇತವಸ್ತ್ರವನ್ನುಟ್ಟವರೂ, ಆಗಿ ಋತ್ವಿಗ್ವರಣಪೂರ್ವಕವಾಗಿ ಸದಸ್ಸಿನ ಮಧ್ಯವನ್ನು ಪ್ರವೇಶಿಸಿ ಪುಲಸ್ತ್ಯನು ಹೇಳಿದಂತೆ ಸಕಲ ಕರ್ಮಗಳನ್ನೂ ಆಚರಿಸಿದರು.

೩. ಅವರು ಸಾವಧಾನಚಿತ್ತರಾದ ಋತ್ವಿಜರೊಡನೆ ಪ್ರಜ್ವಲಿಸುತ್ತಿರುವ ಅಗ್ನಿಯಲ್ಲಿ ಹೋಮಮಾಡಲೋಸುಗ ಅಧ್ವರ್ಯುವು ಹೇಳಿದ ಪ್ರೈಷಗಳನ್ನು ಕ್ರಮದಂತೆ ಉಚ್ಚರಿಸಿದರು.

೪–೮. ಈ ಸಮಯದಲ್ಲಿ ಸದಸ್ಸಿನ ಮಧ್ಯದಲ್ಲಿರುವ ಉದ್ಗಾತನು ಸಾಮಗಾನದಿಂದ ಸೂಚಿತವಾದ ಶಂಕುವಿನಿಂದ ಮಾಡುವ ಸಪ್ತಾವರ್ತವುಳ್ಳ ಕರ್ಮವನ್ನು ಯೋಜಿಸಲು ಯಜ್ಞಭಾಗದಲ್ಲಿ ಆಸಕ್ತಿಯುಳ್ಳ ಸಕಲ ದೇವತೆಗಳೂ

ಆಗತಾ ಕನ್ಯಕಾ ಚೈಕಾ ಸಾಮಗೀತಿಸಮುತ್ಸುಕಾ ।
ಶಂಕುಕರ್ಣಸಜಂ ಚಿತ್ರಂ ವಾಂಛಮಾನಾ ವಿಚಕ್ಷಣಾ ॥ ೭ ॥
ಛಂದೋಗಸ್ಯ ಸುತಾ ಶ್ರೇಷ್ಠಾ ದೇವಶರ್ಮಾಽಭಿಧಸ್ಯ ಚ ।
ಔದುಂಬರೀತಿ ನಾಮ್ನಾ ಸಾ ಸಾಮಶ್ರವಣಲಾಲಸಾ ॥ ೮ ॥
ಉದ್ಗಾತಾರಂ ಚ ಸದಸಿ ವಚನಂ ವ್ಯಾಜಹಾರ ಸಾ ।
ಯಥಾ ಯಥಾ ಪ್ರವರ್ತಂತೇ ಶಂಕವಃ ಸಾಮಸೂಚಿತಾಃ ॥ ೯ ॥
ದಕ್ಷಿಣಾಗ್ನೌ ದ್ರುತಂ ಗತ್ವಾ ಕುರು ಹೋಮಂ ಯಥೋದಿತಂ ।
ಯೇನ ತ್ವಂ ಮುಚ್ಯಸೇ ಪಾಪಾನ್ನಚೇದ್ವ್ಯರ್ಥೋ ಭವಿಷ್ಯತಿ ॥ ೧೦ ॥
ತಸ್ಯಾಸ್ತದ್ವಚನಂ ಶ್ರುತ್ವಾ ಸಾಭಿಪ್ರಾಯಂ ದ್ವಿಜೋತ್ತಮಾಃ ।
ತತಃ ಸ ಚಿಂತಯಾಮಾಸ ಯಾವತ್ತದ್ವ್ಯಾಹೃತಂ ವಚಃ ॥ ೧೧ ॥
ತತಃ ಪಪ್ರಚ್ಛ ತಾಂ ಕನ್ಯಾಮುದ್ಗಾತಾ ವಿಸ್ಮಯಾನ್ವಿತಃ ।
ಕುತಸ್ತ್ವಮಸಿ ಚಾಽಽಯಾತಾ ಸುತಾ ಕಸ್ಯ ವದಸ್ವ ಮೇ ॥ ೧೨ ॥

ಔದುಂಬರ್ಯುವಾಚ :—

ಪರ್ವತಸ್ಯ ಸುತಾಚಾಽಸ್ಮಿ ವಿಖ್ಯಾತಾ ದೇವಶರ್ಮಣಃ ।
ಜಾತಿಸ್ಮರಾ ಮಹಾಭಾಗಾ ಪ್ರಾಪ್ತಾ ಗಂಧರ್ವಲೋಕತಃ ॥ ೧೩ ॥

---

ಸೋಮಪಾನಕ್ಕಾಗಿ ಅತ್ಯಂತ ಸಂತೋಷದಿಂದ ಅಲ್ಲಿಗೆ ಬಂದರು. ಉದ್ಗಾತನು ನಿರ್ಮಿಸಿದ ಗೀತದಲ್ಲಿ ಸೋಮಪಾನವು ಆರಂಭವಾಗಲು ಸಾಮಗಾನದಲ್ಲಿ ಉತ್ಸುಕಳೂ, ಕುಶಲಳೂ, ದೇವಶರ್ಮನೆಂಬ ಋಕ್ಕಾಖಿಯ ಮಗಳೂ ಆದ ಔದುಂಬರಿಯೆಂಬುವಳು ಅಲ್ಲಿಗೆ ಬಂದಳು.

೯–೧೦. ಅವಳು ಸದಸ್ಸಿನಲ್ಲಿರುವ ಉದ್ಗಾತನನ್ನು ಕುರಿತು, "ಸಾಮ ಸೂಚಿತವಾದ ಶಂಕುಗಳು ಆರಂಭವಾದ ಹಾಗೆಲ್ಲ ನೀನು ಶೀಘ್ರವಾಗಿ ದಕ್ಷಿಣಾಗ್ನಿಗೆ ಹೋಗಿ ಹೋಮವನ್ನು ಮಾಡು. ಅದರಿಂದ ಪಾಪಮುಕ್ತನಾಗುವೆ. ಇಲ್ಲದಿದ್ದರೆ ಯಜ್ಞವು ವ್ಯರ್ಥವಾಗುವುದು" ಎಂದಳು.

೧೧. ದ್ವಿಜವರ್ಯರೆ! ಉದ್ಗಾತನು ಅಭಿಪ್ರಾಯಸಹಿತವಾದ ಅವಳ ಆ ಮಾತನ್ನು ಕೇಳಿ ಆ ಮಾತನ್ನೇ ಆಲೋಚಿಸಿದನು.

೧೨. ಅನಂತರ ಅವನು ಅವಳನ್ನು ಕುರಿತು ಆಶ್ಚರ್ಯದಿಂದ, "ನೀನು ಎಲ್ಲಿಂದ ಬಂದೆ? ಯಾರ ಮಗಳು? ಅದನ್ನು ನನಗೆ ಹೇಳು" ಎಂದನು.

೧೩. ಔದುಂಬರಿಯು ಹೇಳುತ್ತಾಳೆ:—ಮಹಾತ್ಮನೆ! ಪೂರ್ವಜಾತಿ ಸ್ಮರಣೆಯುಳ್ಳ ಪರ್ವತನ ಮಗಳಾದ ನಾನು ಗಂಧರ್ವಲೋಕದಿಂದ ಇಲ್ಲಿಗೆ ಬಂದಿದ್ದೇನೆ. ಈಗ ದೇವಶರ್ಮನ ಮಗಳಾಗಿರುವೆನು.

ಉದ್ಗಾತೋವಾಚ :–

ಗಂಧರ್ವಸ್ಯ ಸುತಾ ಕಸ್ಯ ಕೇನ ಶಪ್ತಾಽಸಿ ಪುತ್ರಿಕೇ ।
ಕದಾ ತೇ ಭವಿತಾ ಮೋಕ್ಷೋ ಮಾನುಷತ್ವಸ್ಯ ಕೀರ್ತಯ ॥ ೧೪ ॥

ಔದುಂಬರ್ಯುವಾಚ:–

ನಾರದಃ ಪರ್ವತಶ್ಚೈವ ಗಂಧರ್ವೌ ವಿದಿತೌ ಜನೈಃ ।
ಪರ್ವತಸ್ಯ ಸುತಾ ಚಾಽಸ್ಮಿ ಶಪ್ತಾಽಹಂ ನಾರದೇನ ಹಿ ॥ ೧೫ ॥
ವಿಪಂಚೀಂ ವಾದಯನ್ ಸ್ವೈರಂ ದೃಷ್ಟಃ ಸ ಮುನಿಸತ್ತಮಃ ।
ಅಜಾನಂತ್ಯಾ ಚ ತಾನಾನಾಂ ವಿಶೇಷಂ ಮೂರ್ಛನೋದ್ಭವಂ ।
ಮಯಾ ಸ ಹಸಿತೋಽತೀವ ತಾನಭಂಗತಯಾ ಗತಃ ॥ ೧೬ ॥
ತತಃ ಸ ಕುಪಿತೋ ಮಹ್ಯಂ ದದೌ ಶಾಪಂ ದ್ವಿಜೋತ್ತಮಃ ।
ಮಿಥ್ಯಾಽಪಹಸಿತೋ ಯಸ್ಮಾದಹಂ ಶಾಪಮತೋಽರ್ಹಸಿ ॥ ೧೭ ॥
ಮಾನುಷಾಣಾಮಯಂ ಧರ್ಮಸ್ತಸ್ಮಾತ್ತ್ವಂ ಮಾನುಷೀಭವ ।
ಮಯಾ ಪ್ರಸಾದಿತಃ ಸೋಽಥ ಪಿತ್ರಾ ಸಾರ್ಧಂ ಮುನೀಶ್ವರಃ ॥ ೧೮ ॥
ಶಾಪಾಂತಂ ಕುರು ಮೇ ನಾಥ ಬಾಲಿಶಾಯಾ ವಿಶೇಷತಃ ।
ಮಾನುಷತ್ವಂ ಚ ಮೇ ಭೂಯಾತ್ಸುಸ್ಥಾನೇ ಸುಕುಲೇ ವಿಭೋ ॥ ೧೯ ॥

---

೧೪. ಉದ್ಗಾತನು ಹೇಳುತ್ತಾನೆ:—ಕನ್ಯೆಯೆ! ನೀನು ಯಾವ ಗಂಧರ್ವನ ಮಗಳು? ನಿನಗೆ ಯಾರು ಶಾಪವನ್ನಿತ್ತರು? ನಿನ್ನ ಮನುಷ್ಯಜನ್ಮವು ಯಾವಾಗ ನಿವೃತ್ತಿಯಾಗುವುದು? ಹೇಳು.

೧೫. ಔದುಂಬರಿಯು ಹೇಳುತ್ತಾಳೆ:—ನಾರದ, ಪರ್ವತರೆಂಬ ಇಬ್ಬರು ಗಂಧರ್ವರನ್ನು ಜನರೆಲ್ಲ ತಿಳಿದಿರುವರಷ್ಟೆ. ಅವರಲ್ಲಿ ಪರ್ವತನ ಮಗಳಾದ ನನ್ನನ್ನು ನಾರದನು ಶಪಿಸಿರುವನು.

೧೬. ಒಂದು ದಿನ ಆ ನಾರದನು ವೀಣೆಯನ್ನು ನುಡಿಸುತ್ತಿರಲು ತಾನಗಳ ಆರೋಹಾವರೋಹಣ ವಿಶೇಷವನ್ನರಿಯದ ನಾನು ತಾನವು ಭಂಗವಾದ್ದರಿಂದ ಆ ಮುನಿಯನ್ನು ಹಾಸ್ಯಮಾಡಿದೆನು.

೧೭–೧೮. ಅನಂತರ ಕುಪಿತನಾದ ಆ ಬ್ರಾಹ್ಮಣೋತ್ತಮನು ನನ್ನನ್ನು ಕುರಿತು, "ನೀನು ನನ್ನನ್ನು ಸುಮ್ಮನೆ ಹಾಸ್ಯಮಾಡಿದ್ದರಿಂದ ಶಾಪಕ್ಕೆ ಅರ್ಹಳಾಗಿರುವೆ. ಇದು ಮನುಷ್ಯರ ಸ್ವಭಾವವಾದ್ದರಿಂದ ನೀನು ಮನುಷ್ಯಳಾಗು" ಎಂದನು. ಅನಂತರ ನಾನು ತಂದೆಯೊಡನೆ ಅವನನ್ನು ಹೀಗೆ ಸಮಾಧಾನಗೊಳಿಸಿದೆನು.

೧೯. "ಸ್ವಾಮಿ! ಮೂಢಳಾದ ನನ್ನ ಶಾಪವನ್ನು ಅವಸಾನಗೊಳಿಸು. ಒಳ್ಳೆಯ ಸ್ಥಳದಲ್ಲಿಯೂ, ಒಳ್ಳೆಯ ಕುಲದಲ್ಲಿಯೂ ಮನುಷ್ಯಳಾಗಿ ಹುಟ್ಟುವಂತೆ ಮಾಡು.

ಸುಸ್ಥಾನೇ ಚಾಂತಕಾಲಶ್ಚ ಬ್ರಾಹ್ಮಣಸ್ಯ ನಿವೇಶನೇ ।
ತತೋಽಹಂ ತೇನ ಸಂಪ್ರೋಕ್ತಾ ಚಮತ್ಕಾರಪುರೇ ಶುಭೇ ॥ ೨೦ ॥
ದೇವಶರ್ಮಾ ತು ವಿಪ್ರೇಂದ್ರಃ ಕುಲೀನಃ ಸರ್ವಶಾಸ್ತ್ರವಿತ್ ।
ತಸ್ಯ ತು ಬ್ರಾಹ್ಮಣೀ ನಾಮ್ನಾ ಸತ್ಯಭಾಮೇತಿ ವಿಶ್ರುತಾ ॥ ೨೧ ॥
ತಸ್ಯಾ ಗರ್ಭಂ ಸಮಾಸಾದ್ಯ ಮಾನುಷತ್ವಂ ಸಮಾಚರ ।
ಯದಾ ಪೈತಾಮಹೋ ಯಜ್ಞಸ್ತಸ್ಮಿನ್ ಕ್ಷೇತ್ರೇ ಭವಿಷ್ಯತಿ ॥ ೨೨ ॥
ಉದ್ಗಾತುಃ ಸಮಯೇ ತಸ್ಯ ಶಂಕೋಶ್ಚೈವ ವಿಪರ್ಯಯೇ ।
ತದಾ ತು ಸ ತ್ವಯಾ ವಾಚ್ಯೋ ಹ್ಯಸ್ಥಾನೇ ಶಂಕುರಾಹಿತಃ ।
ಸರ್ವದೇವಸಭಾಮಧ್ಯೇ ತದಾ ಮೋಕ್ಷೋ ಭವಿಷ್ಯತಿ ॥ ೨೩ ॥
ಇಮಾಂ ಮೇ ದೈವಿಕೀಂ ಕಾಂತಾಂ ತನುಂ ಪಶ್ಯ ದ್ವಿಜೋತ್ತಮ ।
ವಿಮಾನಂ ಪಶ್ಯ ಚಾಯಾತಂ ಪಿತ್ರಾ ಸಂಪ್ರೇಷಿತಂ ಮಮ ॥ ೨೪ ॥

ಉದ್ಗಾತೋವಾಚ :—

ತುಷ್ಟೋಽಹಂ ತೇ ವಿಶಾಲಾಕ್ಷಿ ಯಜ್ಞಸ್ಯಾವಿಘ್ನಕಾರಕೇ ।
ನ ವೃಥಾ ದರ್ಶನಂ ಮೇ ಸ್ಯಾದ್ವಿಶೇಷಾದ್ದೇವಸಂಭವೇ ।
ವರಂ ವರಯ ಮತ್ತಸ್ತ್ವಂ ತಸ್ಮಾದೌದುಂಬರೀಪ್ಸಿತಂ ॥ ೨೫ ॥

---

೨೦–೨೧. ಒಳ್ಳೆಯ ಸ್ಥಳದಲ್ಲಿ ಬ್ರಾಹ್ಮಣನ ಮನೆಯಲ್ಲಿ ಮರಣವಾಗುವಂತೆ ಮಾಡು.'' ನಾನು ಹೀಗೆ ಬೇಡಿಕೊಳ್ಳಲು ಮುನಿಯು, ''ಚಮತ್ಕಾರಪುರದಲ್ಲಿ ಕುಲೀನನೂ, ಸಕಲ ಶಾಸ್ತ್ರವನ್ನರಿತವನೂ ಆದ ದೇವಶರ್ಮನೆಂಬ ಬ್ರಾಹ್ಮಣ ನಿರುವನು. ಅವನಿಗೆ ಸತ್ಯಭಾಮೆಯೆಂಬ ಪತ್ನಿಯಿರುವಳು.

೨೨–೨೩. ನೀನು ಅವಳ ಗರ್ಭವನ್ನು ಸೇರಿ ಮನುಷ್ಯಳಾಗಿ ಹುಟ್ಟು. ಆ ಕ್ಷೇತ್ರದಲ್ಲಿ ಬ್ರಹ್ಮನ ಯಜ್ಞವು ನಡೆದಾಗ ಉದ್ಗಾತನ ಶಂಕುವು ವ್ಯತ್ಯಾಸ ವಾಗಲು ನೀನು, 'ಅಸ್ಥಾನದಲ್ಲಿ ಶಂಕುವನ್ನು ನಿಯೋಜಿಸಿರುವೆ' ಎಂದು ಸಕಲ ದೇವತೆಗಳ ಸಭೆಯ ನಡುವೆ ಉದ್ಗಾತನಿಗೆ ಹೇಳು. ಆಗ ನಿನಗೆ ಮೋಕ್ಷವಾಗು ವುದು'' ಎಂದನು.

೨೪. ದ್ವಿಜವರ್ಯನೆ! ನನ್ನೀ ಮನೋಹರವಾದ ದೇವಶರೀರವನ್ನು ನೋಡು. ನನ್ನ ತಂದೆಯು ಕಳುಹಿಸಿದ ವಿಮಾನವು ಬಂದಿರುವುದನ್ನೀಕ್ಷಿಸು.

೨೫. ಉದ್ಗಾತನು ಹೇಳುತ್ತಾನೆ:— ವಿಶಾಲನಯನಳೂ, ಯಜ್ಞವನ್ನು ನಿರ್ವಿಘ್ನಗೊಳಿಸಿದವಳೂ ಆದ ಔದುಂಬರಿಯೆ! ನಿನಗೆ ನಾನು ಒಲಿದಿರುವೆನು. ವಿಶೇಷವಾಗಿ ದೇವತೆಯಾದ ನಿನಗೆ ನನ್ನ ದರ್ಶನವು ನಿಷ್ಫಲವಾಗಲಾರದು. ಆದುದರಿಂದ ನೀನು ಇಷ್ಟವಾದ ವರವನ್ನು ಕೇಳಿಕೊ.

ಔದುಂಬರ್ಯುವಾಚ :—

ಯದಿ ಮೇ ಯಚ್ಛಸಿ ವರಂ ಸಂತುಷ್ಟೋ ಬ್ರಾಹ್ಮಣೋತ್ತಮ ।
ಸರ್ವೇಷಾಮೇವ ದೇವಾನಾಂ ಪುರತಶ್ಚ ದದಸ್ವ ತಂ ॥ ೨೬ ॥
ಅದ್ಯಪ್ರಭೃತಿ ಯಃ ಕಶ್ಚಿದ್ಯಜ್ಞಂ ಭೂಮೌ ಸಮಾಚರೇತ್ ।
ತಸ್ಮಿನ್ ಸದಸಿ ಮಧ್ಯಸ್ಥಾ ಮೂರ್ತಿಃ ಕಾರ್ಯಾ ಯಥಾ ಮಮ ॥ ೨೭ ॥
ತತೋ ಮತ್ಪುರತಶ್ಚೈವ ಕಾರ್ಯಂ ಶಂಕುಪ್ರಚಾರಣಂ ।
ಸ್ವರ್ಗಸ್ಥಾಯಾ ಭವೇತ್ತುಷ್ಟಿರ್ಮಮ ತೇನ ಕೃತೇನ ಚ ॥ ೨೮ ॥

ಸೂತ ಉವಾಚ :—

ತಸ್ಯಾಸ್ತದ್ವಚನಂ ಶ್ರುತ್ವಾ ಉದ್ಗಾತಾ ತಾಮಥಾಬ್ರವೀತ್ ।
ಅದ್ಯಪ್ರಭೃತಿ ಯಃ ಕಶ್ಚಿದ್ಯಜ್ಞಮತ್ರ ಕರಿಷ್ಯತಿ ॥ ೨೯ ॥
ಸದೋಮಧ್ಯೇತು ತಾಂ ಸ್ಥಾಪ್ಯ ಪೂಜಯಿತ್ವಾ ವಿಲೇಪನೈಃ ।
ವಸ್ತ್ರೈರಾಭರಣೈಶ್ಚೈವ ಗಂಧಪುಷ್ಪಾನುಲೇಪನೈಃ ॥ ೩೦ ॥
ತತಃ ಶಂಕುಪ್ರಚಾರಂತು ಕರಿಷ್ಯತಿ ತದಗ್ರತಃ ।
ಏತದ್ವಾಕ್ಯಂ ಮಯಾ ಪ್ರೋಕ್ತಂ ಸರ್ವದೇವಸಮಾಗಮೇ ॥ ೩೧ ॥
ನಾಽನ್ಯಥಾ ಭಾವಿ ಭದ್ರಂ ತೇ ತ್ವಂ ಸಂತೋಷಂ ಪರಮಂ ವ್ರಜ ।
ತ್ವಯಾ ವಿರಹಿತಂ ಭದ್ರೇ ಸದಃ ಕರ್ಮ ಕರಿಷ್ಯತಿ ॥ ೩೨ ॥
ವೃಥಾ ಭಾವಿ ಚ ತತ್ಸರ್ವಂ ಯಥಾ ಭಸ್ಮಹುತಂ ತಥಾ ।
ಯಾ ನಾರೀ ಸದಸೋ ಮಧ್ಯೇ ಫಲೈಸ್ತ್ವಾಂ ಪೂಜಯಿಷ್ಯತಿ ॥ ೩೩ ॥

---

೨೬. ಔದುಂಬರಿಯು ಹೇಳುತ್ತಾಳೆ:—ಬ್ರಾಹ್ಮಣವರ್ಯನೆ! ನೀನು ಸಂತುಷ್ಟನಾಗಿ ವರವನ್ನು ಕೊಡುವುದಾದರೆ ಆ ವರವನ್ನು ಸಮಸ್ತ ದೇವತೆಗಳ ಮುಂದೆ ನೀಡು.

೨೭. ಇದು ಮೊದಲ್ಗೊಂಡು ಭೂಮಿಯಲ್ಲಿ ಯಜ್ಞವನ್ನಾಚರಿಸುವವನು ಆ ಯಜ್ಞದಲ್ಲಿ ಸದಸ್ಸಿನ ನಡುವೆ ನನ್ನ ಮೂರ್ತಿಯನ್ನು ಸ್ಥಾಪಿಸಲಿ.

೨೮. ನನ್ನ ಮುಂದೆಯೇ ಶಂಕುಪ್ರಚಾರವನ್ನು ಮಾಡಲಿ. ಅದರಿಂದ ಸ್ವರ್ಗದಲ್ಲಿರುವ ನನಗೆ ಸಂತೋಷವಾಗುವುದು.

೨೯–೩೪. ಸೂತನು ಹೇಳುತ್ತಾನೆ:—ಉದ್ಗಾತನು ಅವಳ ಆ ಮಾತನ್ನು ಕೇಳಿ ಇಂತೆಂದನು. "ಇದು ಮೊದಲ್ಗೊಂಡು ಇಲ್ಲಿ ಯಜ್ಞಮಾಡುವವನು ಸಭೆಯ ಮಧ್ಯದಲ್ಲಿ ನಿನ್ನನ್ನು ಸ್ಥಾಪಿಸಿ ಒಡವೆ ವಸ್ತುಗಳಿಂದಲೂ, ಗಂಧ ಪುಷ್ಪಾದಿಗಳಿಂದಲೂ ಪೂಜಿಸಿ ಮುಂದೆ ಶಂಕುಪ್ರಚಾರವನ್ನು ಮಾಡುವನು. ಸಮಸ್ತ ದೇವತೆಗಳ ಸಭೆಯಲ್ಲಿ ನಾನು ಹೇಳಿದ ಮಾತು ವ್ಯತ್ಯಾಸವಾಗುವುದಿಲ್ಲ. ಆದುದರಿಂದ ನೀನು ಸಂತುಷ್ಟಳಾಗು. ನೀನಿಲ್ಲದೆ ಸದಃಕರ್ಮವನ್ನು ಮಾಡಿದರೆ ಭಸ್ಮದಲ್ಲಿ

ಫಲೇ ಫಲೇ ಕೋಟಿಗುಣಂ ತಸ್ಯಾಃ ಶ್ರೇಯೋ ಭವಿಷ್ಯತಿ ।
ಸಫಲಾಶ್ಚ ದಿಶಃ ಸರ್ವಾ ಭವಿಷ್ಯಂತಿ ನ ಸಂಶಯಃ ॥ ೩೪ ॥
ವಸ್ತ್ರಮಾಭರಣಂ ಯಾ ಚ ಪುಷ್ಪಧೂಪಾದಿಕಂ ತಥಾ ।
ತುಭ್ಯಂ ದಾಸ್ಯತಿ ತತ್ಸರ್ವಂ ತಸ್ಯಾಃ ಕೋಟಿಗುಣಂ ಫಲಂ ॥ ೩೫ ॥
ಪರಂ ತಾವತ್ಪ್ರತೀಕ್ಷಸ್ವ ಮಾ ವಿಮಾನಂ ಸಮಾರುಹ ।
ದೇವೀ ಕೇನಾಽಪಿ ಕಾರ್ಯೇಣ ತವ ಪೂಜಾಂ ಸಮಾಚರೇ ॥ ೩೬ ॥

**ದೇವಾ ಊಚುಃ :—**

ಯುಕ್ತಂ ತ್ವಯಾ ದ್ವಿಜಶ್ರೇಷ್ಠ ವಚನಂ ಸಮುದಾಹೃತಂ ।
ಅಸ್ಮಾಕಮಪಿ ವಾಕ್ಯೇನ ಸತ್ಯಮೇತದ್ಭವಿಷ್ಯತಿ ॥ ೩೭ ॥

**ಸೂತ ಉವಾಚ :—**

ಉದ್ಗಾತ್ರಾ ಸೈವಮುಕ್ತ್ವಾ ಚ ತಿಷ್ಠ ತಿಷ್ಠೇತ್ಯಥೋದಿತಾ ।
ದೇವೀ ವರವಿಮಾನೇನ ಗೃಹೀತಾ ಸಾಂಬರೇ ಸ್ಥಿತಾ ॥ ೩೮ ॥
ಏತಸ್ಮಿನ್ನೇವ ಕಾಲೇ ತು ದೇವಶರ್ಮಸುತಾಽಭವತ್ ।
ದೇವೀ ನಗರಮಧ್ಯಸ್ಥಾಂ ಸರ್ವಾ ನಾರ್ಯೋ ದ್ವಿಜೋತ್ತಮಾಃ ॥ ೩೯ ॥
ಕುತೂಹಲಾತ್ಸಮಾಯಾತಾಸ್ತಸ್ಯಾ ದರ್ಶನಲಾಲಸಾಃ ।
ಕಾಚಿತ್ಫಲಾನಿ ಚಾಽಽದಾಯ ಕಾಚಿದ್ವಸ್ತ್ರಾಣಿ ಭಕ್ತಿತಃ ।
ಯಥಾರ್ಹಂ ಪೂಜಿತಾ ತಾಭಿಃ ಸರ್ವಾಭಿಶ್ಚ ದ್ವಿಜೋತ್ತಮಾಃ ॥ ೪೦ ॥

---

ಹೋಮಮಾಡಿದಂತೆ ನಿಷ್ಫಲವಾಗುವುದು. ಸದಸ್ಸಿನ ಮಧ್ಯದಲ್ಲಿ ಫಲಗಳಿಂದ ನಿನ್ನನ್ನು ಪೂಜಿಸಿದವಳಿಗೆ ಪ್ರತಿಫಲಕ್ಕೂ ಕೋಟಿಯಷ್ಟು ಶ್ರೇಯಸ್ಸುಂಟಾಗುವುದು. ದಿಕ್ಕುಗಳೆಲ್ಲ ನಿಶ್ಚಯವಾಗಿಯೂ ಸಫಲವಾಗುವುವು.

೩೫. ನಿನಗೆ ವಸ್ತ್ರ, ಆಭರಣ, ಪುಷ್ಪ, ಧೂಪ ಮೊದಲಾದುವುಗಳನ್ನು ಸಮರ್ಪಿಸಿದವಳಿಗೆ ಅವುಗಳ ಕೋಟಿಯಷ್ಟು ಹೆಚ್ಚಾಗಿ ಫಲವುಂಟಾಗುವುದು.

೩೬. ಆದರೆ ಈಗಲೇ ವಿಮಾನವನ್ನೇರಬೇಡ. ದೇವಿ! ನಾನು ಯಾವುದಾದರೂ ಒಂದು ನಿಮಿತ್ತದಿಂದ ನಿನ್ನನ್ನು ಆರಾಧಿಸುವೆನು.

೩೭. ದೇವತೆಗಳು ಹೇಳುತ್ತಾರೆ:—ದ್ವಿಜೋತ್ತಮ! ನೀನು ಯುಕ್ತವಾಗಿ ಮಾತನಾಡಿರುವೆ. ನಮ್ಮ ಮಾತಿನಿಂದಲೂ ಇದು ನಿಜವಾಗುವುದು.

೩೮. ಸೂತನು ಹೇಳುತ್ತಾನೆ:—ಉದ್ಗಾತನು ಹೀಗೆ ಹೇಳಿ ನಿಲ್ಲು, ನಿಲ್ಲು ಎನ್ನಲು ಆ ದೇವಿಯು ಭೂಮಿಯಲ್ಲಿ ನಿಲ್ಲದೆ ವಿಮಾನಾರೂಢಳಾಗಿ ಆಕಾಶದಲ್ಲಿ ನಿಂತಳು.

೩೯—೪೦. ಹೀಗೆ ದೇವಶರ್ಮನ ಮಗಳು ನಗರ ಮಧ್ಯದಲ್ಲಿ ದೇವಿಯಾಗಲು ಅವಳನ್ನು ನೋಡಲು ಅನೇಕ ಮಂದಿ ಹೆಂಗಸರು ಕುತೂಹಲದಿಂದ ಅಲ್ಲಿಗೆ ಬಂದರು. ಅವರಲ್ಲಿ ಕೆಲವರು ಫಲಗಳನ್ನೂ, ಕೆಲವರು ವಸ್ತ್ರಗಳನ್ನೂ ತಂದು ಭಕ್ತಿಯಿಂದ ಎಲ್ಲರೂ ಅವಳನ್ನು ಪೂಜಿಸಿದರು.

ಶ್ರುತ್ವಾ ಸ್ವದುಹಿತುಃ ಸೋಽಪಿ ದೇವಶರ್ಮಾ ಸಮಾಯಯೌ ।
ಸಪತ್ನೀಕಃ ಪ್ರಹೃಷ್ಟಾತ್ಮಾ ವಿಸ್ಮಯೋತ್ಫುಲ್ಲಲೋಚನಃ ॥ ೪೧ ॥
ಸೋಽಪಿ ಯಾವತ್ಪ್ರಣಾಮಂ ಚ ತಸ್ಯಾಶ್ಚಕ್ರೇ ದ್ವಿಜೋತ್ತಮಾಃ ।
ಸಪತ್ನೀಕಸ್ತದಾ ಪ್ರೋಕ್ತ್ವಾ ನಿಷಿದ್ಧಸ್ತು ಯಥಾ ತಯಾ ॥ ೪೨ ॥
ತಾತ ತಾತ ನಮಸ್ಕಾರಂ ಮಾ ಮೇ ಕುರು ಸಹಾಂಬಯಾ ।
ಪ್ರಾಪ್ತಾ ಸ್ವರ್ಗಗತಿರ್ನಾಮ ಮಮ ನಾಶಂ ಪ್ರಯಾಸ್ಯತಿ ॥ ೪೩ ॥
ತಿಷ್ಠಾಽತ್ರೈವ ಸಪತ್ನೀಕೋ ಯಾವದದ್ಯ ದಿನಂ ವಿಭೋ ।
ತ್ವಾಮಾದಾಯ ಸಪತ್ನೀಕಂ ಯಾಸ್ಯಾಮಿ ತ್ರಿದಿವಾಲಯಂ ।
ಅನೇನೈವ ಶರೀರೇಣ ಯಾಚಯಿತ್ವಾ ಸುರೋತ್ತಮಾನ್ ॥ ೪೪ ॥
ತತಸ್ತೌ ಹರ್ಷಿತೌ ತತ್ರ ಪಿತರೌ ಹಿ ವ್ಯವಸ್ಥಿತೌ ।
ಪ್ರೇಕ್ಷಮಾಣೌ ಸುತಾಯಾಸ್ತಾಂ ಪೂಜಾಂ ಜನವಿನಿರ್ಮಿತಾಂ ।
ಮನ್ಯಮಾನೌ ತದಾತ್ಮಾನಮಧಿಕಂ ಸರ್ವದೇಹಿನಾಂ ॥ ೪೫ ॥
ತಸ್ಯ ಯೇ ಸ್ವಜನಾಃ ಕೇಚಿತ್ಸರ್ವೇ ತೇಽಪಿ ದ್ವಿಜೋತ್ತಮಾಃ ।
ಶಂಸಮಾನಾಃ ಸುತಾಂ ತಾಂ ತು ತತ್ಸಮೀಪಂ ವ್ಯವಸ್ಥಿತಾಃ ॥ ೪೬ ॥

---

೪೧. ದೇವಶರ್ಮನೂ ತನ್ನ ಮಗಳ ಸಮಾಚಾರವನ್ನು ಕೇಳಿ ಸಂತೋಷಗೊಂಡು ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಪತ್ನಿಯೊಡನೆ ಅಲ್ಲಿಗೆ ಬಂದನು.

೪೨. ಅವನು ಅವಳಿಗೆ ಪತ್ನಿಯೊಡನೆ ನಮಸ್ಕಾರ ಮಾಡುವಷ್ಟರಲ್ಲಿ ಆ ಕನ್ಯೆಯು ಅವನನ್ನು ತಡೆದಳು.

೪೩. “ಅಪ್ಪ! ನೀನು ತಾಯಿಯೊಡನೆ ನನಗೆ ನಮಸ್ಕಾರ ಮಾಡಬೇಡ. ಇದರಿಂದ ನನಗೆ ಲಭಿಸಿದ ಸ್ವರ್ಗಗತಿಯು ಹಾಳಾಗುವುದು.

೪೪. ನೀನು ಈ ದಿನ ಇಲ್ಲಿಯೇ ಪತ್ನೀಸಹಿತನಾಗಿರು. ನಾನು ದೇವತೆಗಳನ್ನು ಬೇಡಿಕೊಂಡು ಈ ಶರೀರದಿಂದಲೇ ಪತ್ನಿಯೊಡನೆ ನಿನ್ನನ್ನು ದೇವಲೋಕಕ್ಕೆ ಕರೆದುಕೊಂಡು ಹೋಗುವೆನು.”

೪೫. ಅನಂತರ ಆ ತಂದೆ ತಾಯಿಗಳು ತಮ್ಮ ಮಗಳಿಗೆ ಜನರು ಮಾಡಿದ ಪೂಜೆಯನ್ನು ನೋಡಿ ಸಂತೋಷಗೊಂಡು ತಮ್ಮನ್ನು ಸಕಲ ಪ್ರಾಣಿಗಳಲ್ಲಿಯೂ ಶ್ರೇಷ್ಠರನ್ನಾಗಿ ತಿಳಿಯುತ್ತ ಅಲ್ಲಿಯೇ ಇದ್ದರು.

೪೬. ದ್ವಿಜವರ್ಯರೆ! ಅವನ ಬಂಧುಗಳೂ ಆ ಕನ್ಯೆಯನ್ನು ಹೊಗಳುತ್ತ ಅವಳ ಬಳಿ ಇದ್ದರು.

ಏತಸ್ಮಿನ್ನಂತರೇ ಪ್ರಾಪ್ತೋ ಭೃಗುರ್ಯತ್ರ ಪಿತಾಮಹಃ ।
ನಿಷ್ಕ್ರಮ್ಯ ಸದಸಸ್ತಸ್ಮಾತ್ಕೃತಾಂಜಲಿರುವಾಚ ತಂ ॥ ೪೭ ॥
ಉದ್ಗಾತ್ರಾ ದೇವ ಚಾತ್ಮೀಯೋ ಮಾರ್ಗಃ ಶ್ರುತಿವಿವರ್ಜಿತಃ ।
ವಿಹಿತಃ ಕನ್ಯಕಾಂ ಧೃತ್ವಾ ಸದೋಮಧ್ಯೇ ಸುರೇಶ್ವರ ॥ ೪೮ ॥
ದೇವತ್ವಂ ಜಲ್ಪಿತಂ ತಸ್ಯಾ ನಾಗರ್ಯಾಃ ಸುರಸನ್ನಿಧೌ ।
ಸೋಮಪಾನಂ ತಥಾ ಕುರ್ಮೋ ವಯಂ ತತ್ರ ತಯಾ ಸಹ ॥ ೪೯ ॥
ತತೋ ವಿಧಿಸ್ತಮಾನೀಯ ಪಪ್ರಚ್ಛ ದ್ವಿಜಸತ್ತಮಾಃ ।
ಕಾಽಸೌ ಕನ್ಯಾ ಕಿಮರ್ಥಂ ಚ ಸದೋಮಧ್ಯೇ ಧೃತಾ ತ್ವಯಾ ॥ ೫೦ ॥
ಸೋಽಬ್ರವೀಚ್ಛಾಪಭ್ರಷ್ಟೇಯಂ ಗಂಧರ್ವೀ ಬ್ರಾಹ್ಮಣಾಲಯೇ ।
ಅವತೀರ್ಣಾ ವಿಧೇರ್ಯಜ್ಞೇ ಮುಕ್ತಿರಸ್ಯಾಃ ಪ್ರಕೀರ್ತಿತಾ ॥ ೫೧ ॥
ನಾರದೇನ ಪುರಾ ದೇವ ಕೋಪೇನ ಚ ತಥಾ ಮುದಾ ।
ತಸ್ಯಾ ದೇವ ವರೋ ದತ್ತೋ ಮಯಾ ತುಷ್ಟೇನ ಸಾಂಪ್ರತಂ ॥ ೫೨ ॥
ಶಂಕುಪ್ರಚಾರಂ ನೋ ಬಾಹ್ಯಂ ತವ ಸಂಪತ್ಸ್ಯತೇ ಕ್ವಚಿತ್ ।
ದೇವೈಃ ಸರ್ವೈಃ ಸಮಾನೀತಾ ಪ್ರತಿಷ್ಠಾಂ ಪ್ರಪಿತಾಮಹ ॥ ೫೩ ॥
ಏತಸ್ಮಿನ್ನಂತರೇ ಪ್ರಾಪ್ತಾಃ ಕೈಲಾಸಾಚ್ಚ ದ್ವಿಜೋತ್ತಮಾಃ ।
ಶ್ರುತ್ವಾ ಚೌದುಂಬರೀ ಜಾತಂ ಮಾಹಾತ್ಮ್ಯಂ ಧರಣೀತಲೇ ॥ ೫೪ ॥

---

೪೭. ಇಷ್ಟರಲ್ಲಿ ಭೃಗುವು ಸದಸ್ಸಿನ ಮಧ್ಯದಿಂದ ಪಿತಾಮಹನೆಡೆಗೆ ಬಂದು ಅವನನ್ನು ಕುರಿತು ಕೈಮುಗಿದುಕೊಂಡು ಇಂತೆಂದನು.

೪೮. "ಪಿತಾಮಹ! ಈ ಉದ್ಗಾತನು ಈ ಕನ್ಯೆಯನ್ನು ಸಭೆಯ ಮಧ್ಯದಲ್ಲಿ ಸ್ಥಾಪಿಸಿ ವೇದವಿರುದ್ಧವಾದ ದಾರಿಯಲ್ಲಿ ನಡೆದಿರುವನು.

೪೯. ಅವಳಿಗೆ ದೇವತೆಗಳ ಸನ್ನಿಧಿಯಲ್ಲಿ ದೇವತ್ವವನ್ನಿತ್ತಿರುವನು. ನಾವು ಅವಳೊಡನೆ ಸೋಮಪಾನವನ್ನು ಮಾಡುತ್ತಿರುವೆವಲ್ಲ!"

೫೦. ದ್ವಿಜವರ್ಯರೆ! ಅನಂತರ ಬ್ರಹ್ಮನು ಆ ಉದ್ಗಾತನನ್ನು ಕರೆಯಿಸಿ "ಈ ಕನ್ಯೆ ಯಾರು? ನೀನು ಸಭೆಯ ಮಧ್ಯದಲ್ಲಿ ಇವಳನ್ನು ಏಕೆ ಸ್ಥಾಪಿಸಿರುವೆ?" ಎಂದು ಪ್ರಶ್ನೆ ಮಾಡಿದನು.

೫೧—೫೪. ಅವನು ಇಂತೆಂದನು. "ಈ ಗಂಧರ್ವಕನ್ಯೆಯು ಶಾಪಭ್ರಷ್ಟಳಾಗಿ ಬ್ರಾಹ್ಮಣನ ಮನೆಯಲ್ಲಿ ಅವತರಿಸಿದ್ದಾಳೆ. ಹಿಂದೆ ಕುಪಿತನಾದ ನಾರದನು ಮೊದಲು ಶಾಪವನ್ನಿತ್ತು ಅನಂತರ ಪ್ರಸನ್ನನಾಗಿ ಬ್ರಹ್ಮನ ಯಜ್ಞದಲ್ಲಿ ಶಾಪ ಮೋಕ್ಷವಾಗುವುದೆಂದಿದ್ದಾನೆ. ಈಗ ಅವಳಲ್ಲಿ ಸಂತುಷ್ಟನಾದ ನಾನು ನಿನ್ನ ಮುಂದೆ ಶಂಕುಪ್ರಚಾರವಾಗುವುದೆಂದು ಹೇಳಿ ವರವನ್ನು ಕೊಟ್ಟಿದ್ದೇನೆ. ದೇವತೆಗಳೆಲ್ಲರೂ ಇವಳನ್ನು ಪ್ರತಿಷ್ಠೆಗೊಳಿಸಿದ್ದಾರೆ.

ಯಜ್ಞೇ ಪೈತಾಮಹೇ ಚೈವ ಹಾಟಕೇಶ್ವರಸಂಭವೇ ।
ಕ್ಷೇತ್ರೇ ಪುಣ್ಯತಮೇ ತತ್ರ ಪೂಜಾರ್ಥಂ ದ್ವಿಜಸತ್ತಮಾಃ ॥ ೫೫ ॥
ಹೃಷ್ಟಾ ಮಾತೃಗಣಾ ಯೇ ಚ ಅಷ್ಟಷಷ್ಟಿ ಪ್ರಮಾಣತಃ ।
ಪೂಜ್ಯಂತೇ ಯೇ ಚ ಗಂಧರ್ವೈಃ ಸಿದ್ಧೈಃ ಸಾಧ್ಯೈರ್ಮರುದ್ಗಣೈಃ ॥ ೫೬ ॥
ಪೃಥಕ್ ಪೃಥಗ್ವಿಧೈ ರೂಪೈರ್ಲೋಕವಿಸ್ಮಯಕಾರಕೈಃ ।
ನೃತ್ಯಂತ್ಯಶ್ಚ ಹಸಂತ್ಯಶ್ಚ ಗಾಯಂತ್ಯಶ್ಚ ತಥಾಪರಾಃ ॥ ೫೭ ॥
ತಾಸಾಂ ಕೋಲಾಹಲಂ ಶ್ರುತ್ವಾ ಬ್ರಹ್ಮವಿಷ್ಣು ಪುರಸ್ಸರಾಃ ।
ವಿಸ್ಮಯಂ ಪರಮಂ ಪ್ರಾಪ್ತಾಃ ಸರ್ವೇ ದೇವಾಃ ಸವಾಸವಾಃ ॥ ೫೮ ॥
ಕಿಮೇತದಿತಿ ಜಲ್ಪಂತಃ ಪ್ರೋತ್ಥಿತಾ ಯಜ್ಞಮಂಡಪಾತ್ ।
ಏತಸ್ಮಿನ್ನಂತರೇ ಪ್ರಾಪ್ತಾಃ ಸರ್ವಾಸ್ತಾ ಯತ್ರ ಪದ್ಮಜಃ ॥ ೫೯ ॥
ಪ್ರಣಮ್ಯ ಶಿರಸಾ ಹೃಷ್ಟಾಸ್ತತಃ ಪ್ರೋಚುಸ್ತು ಸಾದರಂ ।
ವಯಮೇವಂ ಸಮಾಯಾತಾಃ ಶ್ರುತ್ವಾ ತೇ ಯಜ್ಞಮುತ್ತಮಂ ॥ ೬೦ ॥
ಆಮಂತ್ರಿತಾಶ್ಚ ದೇವೇಶ ವಾಯುನಾ ಜಗದಾಯುನಾ ।
ಯಜ್ಞಭಾಗಾ ನ ಚಾಸ್ಮಾಕಂ ವಿದ್ಯಂತೇ ಯಜ್ಞಕರ್ಮಣಿ ॥ ೬೧ ॥
ಏತಾನ್ಯೇವ ನಾನೀಹ ದಿನಾಯಾತಾಸ್ತೇನ ಪದ್ಮಜ ।
ಔದುಂಬರೀಂ ವಯಂ ಶ್ರುತ್ವಾ ಹ್ಯಪೂರ್ವಾಂ ತೇನ ಸಂಗತಾಃ ॥ ೬೨ ॥

---

೫೫–೫೭. ಇಷ್ಟರಲ್ಲಿ ಭೂಮಿಯಲ್ಲಿ ಪ್ರಸಿದ್ಧವಾದ ಔದುಂಬರಿಯ ಮಾಹಾತ್ಮ್ಯವನ್ನು ಕೇಳಿ ಕೈಲಾಸದಿಂದ ಗಂಧರ್ವ, ಸಿದ್ಧ, ಸಾಧ್ಯ, ಮರುದ್ಗಣಗಳಿಂದ ಪೂಜಿತರಾದ ಅರುವತ್ತೆಂಟು ಮಾತೃಗಣಗಳು ಪುಣ್ಯಕರವಾದ ಹಾಟಕೇಶ್ವರಜಕ್ಷೇತ್ರದಲ್ಲಿ ನಡೆಯುತ್ತಿರುವ ಬ್ರಹ್ಮನ ಯಜ್ಞಕ್ಕೆ ಪೂಜೆಗಾಗಿ ಕುಣಿಯುತ್ತ, ನಗುತ್ತ, ಹಾಡುತ್ತ ಲೋಕಕ್ಕೆ ಆಶ್ಚರ್ಯವನ್ನುಂಟುಮಾಡುವ ಬೇರೆ ಬೇರೆ ರೂಪಗಳಿಂದ ಬಂದರು.

೫೮. ಅವರ ಕೋಲಾಹಲವನ್ನು ಕೇಳಿ ಬ್ರಹ್ಮ ವಿಷ್ಣುಗಳೂ ಇಂದ್ರಾದಿ ದೇವತೆಗಳೂ ಆಶ್ಚರ್ಯಗೊಂಡರು.

೫೯–೬೨. ಅವರು ಇದೇನೆಂದು ಹೇಳುತ್ತ ಯಜ್ಞಮಂಟಪದಿಂದ ಎದ್ದರು. ಇಷ್ಟರಲ್ಲಿ ಆ ಮಾತೃಗಳೆಲ್ಲ ಬ್ರಹ್ಮನೆಡೆಗೆ ಬಂದು ತಲೆಬಾಗಿ ನಮಸ್ಕರಿಸಿ ಸಂತೋಷದಿಂದ ಇಂತೆಂದರು. "ವಾಯುವಿನಿಂದ ಆಮಂತ್ರಿತರಾದ ನಾವು ನಿನ್ನ ಉತ್ತಮ ಯಜ್ಞವನ್ನು ಕೇಳಿ ಇಲ್ಲಿಗೆ ಬಂದೆವು. ಯಜ್ಞದಲ್ಲಿ ನಮಗೆ ಭಾಗಗಳಿಲ್ಲದಿರುವುದರಿಂದ ಇಷ್ಟು ದಿವಸಗಳವರೆಗೆ ಇಲ್ಲಿಗೆ ಬರಲಿಲ್ಲ. ಈಗ ಹೊಸದಾಗಿ ಔದುಂಬರಿಯ ವೃತ್ತಾಂತವನ್ನು ಕೇಳಿ ಇಲ್ಲಿ ಮಿಳಿತರಾದೆವು.

ಸಾ ದೃಷ್ಟ್ವಾ ಪೂಜಿತಾಸ್ಮಾಭಿಃ ಪ್ರಣಿಪಾತಪುರಸ್ಸರಂ ।
ಪರ್ವತಸ್ಯ ಸುತಾ ಯಸ್ಮಾದ್ಗಂಧರ್ವಸ್ಯ ಮಹಾತ್ಮನಃ ॥ ೬೩ ॥
ಸರ್ವಕಾಮಪ್ರದಾ ಸ್ತ್ರೀಣಾಂ ಸರ್ವದೇವೈಃ ಪ್ರತಿಷ್ಠಿತಾ ।
ಸ್ಥಾನಂ ದರ್ಶಯ ಚಾಸ್ಮಾಕಂ ತ್ವಂ ದೇವ ಪ್ರಪಿತಾಮಹ ॥ ೬೪ ॥
ಅಷ್ಟಷಷ್ಟಿಪ್ರಮಾಣಶ್ಚ ಗಣೋಽಸ್ಮಾಕಂ ವ್ಯವಸ್ಥಿತಃ ।
ತಚ್ಛ್ರುತ್ವಾ ಪದ್ಮಜೋ ಜ್ಞಾತ್ವಾ ಸಂಕೀರ್ಣಂ ಯಜ್ಞಮಂಡಪಂ ।
ವ್ಯಾಪ್ತಂ ದೇವಗಣೈಃ ಸರ್ವೈಸ್ತ್ರಯಸ್ತ್ರಿಂಶತ್ಪ್ರಮಾಣಕೈಃ ॥ ೬೫ ॥
ತತೋ ಮಧ್ಯಗಮಾಹೂಯ ಸ ತದಾ ನಗರೋದ್ಭವಂ ।
ಶ್ರುತಾಧ್ಯಯನಸಂಪನ್ನಂ ಬೃಹಸ್ಪತಿಮಿವಾಪರಂ ।
ಅಬ್ರವೀಚ್ಛ್ಲಕ್ಷ್ಣಯಾ ವಾಚಾ ತ್ಯಕ್ತ್ವಾ ಮೌನಂ ಪಿತಾಮಹಃ ॥ ೬೬ ॥
ತ್ವಂ ಗತ್ವಾ ಮಮ ವಾಕ್ಯೇನ ವಿಪ್ರಾನ್ನಾಗರಸಂಭವಾನ್ ।
ಪ್ರಬ್ರೂಹಿ ಗೋತ್ರಮುಖ್ಯಾಂಶ್ಚ ಹ್ಯಷ್ಟಷಷ್ಟಿಪ್ರಮಾಣತಃ ॥ ೬೭ ॥
ಏತೇ ಮಾತೃಗಣಾಃ ಪ್ರಾಪ್ತಾ ಅಷ್ಟಷಷ್ಟಿ ಪ್ರಮಾಣಕಾಃ ।
ಏಕೈಕ ಗೋತ್ರ ಮುಖ್ಯಾಶ್ಚ ಏಕೈಕಸ್ಯ ಪ್ರಮಾಣತಃ ॥ ೬೮ ॥
ಸ್ವೇ ಸ್ವೇ ಭೂಮಿ ವಿಭಾಗೇ ಚ ಸ್ಥಾನಂ ಯಚ್ಛಂತು ಸಾಂಪ್ರತಂ ।
ಏತತ್ಸಾಹಾಯ್ಯಕಂ ಕಾರ್ಯಂ ಭವದ್ಭಿರ್ಮಮ ನಾಗರಾಃ ।
ಪ್ರಸಾದಂ ಪ್ರಚುರಂ ಕೃತ್ವಾ ಯೇನ ತುಷ್ಟಿಂ ಪ್ರಯಾಂತಿ ಚ ॥ ೬೯ ॥

---

೬೩–೬೬. ಪರ್ವತಗಂಧರ್ವನ ಮಗಳೂ, ಸ್ತ್ರೀಯರಿಗೆ ಸಕಲೇಷ್ಟಾರ್ಥಗಳ ನ್ನೀಯುವವಳೂ, ಸಮಸ್ತ ದೇವತೆಗಳಿಂದ ಪ್ರತಿಷ್ಠಿತಳೂ ಆದ ಆ ಔದುಂಬರಿ ಯನ್ನು ನೋಡಿ ನಮಸ್ಕರಿಸಿ ಪೂಜಿಸಿದ್ದೇವೆ. ನೀನು ನಮಗೆ ಸ್ಥಳವನ್ನು ತೋರಿಸು. ನಾವು ಅರುವತ್ತೆಂಟು ಗುಂಪುಗಳಾಗಿದ್ದೇವೆ" ಎಂದರು. ಬ್ರಹ್ಮನು ಅದನ್ನು ಕೇಳಿ ಮೂವತ್ತಮೂರು ಕೋಟಿ ದೇವತೆಗಳಿಂದ ಯಜ್ಞಮಂಟಪವು ವ್ಯಾಪ್ತ ವಾಗಿದೆಯೆಂದರಿತು ಮೌನವನ್ನು ತ್ಯಜಿಸಿ ವೇದಾಧ್ಯಯನಸಂಪನ್ನನೂ, ಮತ್ತೊಬ್ಬ ಬೃಹಸ್ಪತಿಯಂತಿರುವವನೂ ಆದ ನಗರದ ಮಧ್ಯಗನನ್ನು ಕರೆದು ಮೃದುವಾದ ಮಾತಿನಿಂದ ಇಂತೆಂದನು.

೬೭. "ನೀನು ನನ್ನ ಮಾತಿನಂತೆ ನಗರದ ಅರುವತ್ತೆಂಟು ಮಂದಿ ಗೋತ್ರ ಮುಖ್ಯರ ಬಳಿಗೆ ಹೋಗಿ ಹೀಗೆ ಹೇಳು.

೬೮–೬೯. ಈ ಅರುವತ್ತೆಂಟು ಮಾತೃಗಣಗಳು ಬಂದಿದ್ದಾರೆ. ನಿಮ್ಮಲ್ಲಿ ಮುಖ್ಯರಾದವರು ಪ್ರತಿಯೊಬ್ಬರೂ ಒಬ್ಬೊಬ್ಬರಿಗೆ ನಿಮ್ಮ ಭೂಮಿಯಲ್ಲಿ ಸ್ಥಳವನ್ನು ಕೊಡಿರಿ. ನಾಗರರೆ! ನೀವು ನನಗೆ ಈ ಸಹಾಯವನ್ನು ಮಾಡಬೇಕು. ಅದರಿಂದ ಈ ಮಾತೃಗಳು ಅನುಗ್ರಹಿಸಿ ಸಂತುಷ್ಟರಾಗುವರು."

ತತಃ ಸ ಸತ್ವರಂ ಗತ್ವಾ ತಾನ್ ಸಮಾಹೂಯ ನಾಗರಾನ್ ।
ಪ್ರೋವಾಚ ವಿನಯೋಪೇತಃ ಪ್ರಣಿಪತ್ಯ ತತಃ ಪರಂ ॥ ೭೦ ॥
ತಚ್ಛ್ರುತ್ವಾ ನಾಗರಾಃ ಸರ್ವೇ ಸಂತೋಷಂ ಪರಮಂ ಗತಾಃ ।
ಏಕೈಕಸ್ಯ ಗಣಸ್ಯೈವ ದದುಃ ಸ್ಥಾನಂ ನಿಜಂ ತದಾ ॥ ೭೧ ॥
ತತಸ್ತಾ ಮಾತರಃ ಸರ್ವಾಃ ಪ್ರಣಿಪತ್ಯ ಪಿತಾಮಹಂ ।
ತದನಂತರಮೇವಾಥ ಗಾಯತ್ರೀಂ ಭಕ್ತಿಪೂರ್ವಕಂ ॥ ೭೨ ॥
ವಿಪ್ರಸಂಸೂಚಿತೇ ಸ್ಥಾನೇ ಸರ್ವಾಶ್ಚೈವ ವ್ಯವಸ್ಥಿತಾಃ ।
ಪೂಜಿತಾಸ್ತರ್ಪಿತಾಶ್ಚೈವ ಬಲಿಭಿರ್ವಿವಿಧೈರಪಿ ॥ ೭೩ ॥
ತತೋ ಗಾಯಂತಿ ತಾ ಹೃಷ್ಟಾ ನೃತ್ಯಂತಿ ಚ ಹಸಂತಿ ಚ ।
ತರ್ಪಿತಾ ಬ್ರಾಹ್ಮಣೇಂದ್ರೈಶ್ಚ ಪ್ರೋಚುಶ್ಚ ತದನಂತರಂ ॥ ೭೪ ॥
ನ ಯಾಸ್ಯಾಮೋಽಪರಂ ಸ್ಥಾನಂ ಸ್ಥಾಸ್ಯಾಮೋಽತ್ರೈವ ಸರ್ವದಾ ।
ಈದೃಶಾ ಯತ್ರ ವಿಪ್ರೇಂದ್ರಾಃ ಸರ್ವೇ ಭಕ್ತಿಸಮನ್ವಿತಾಃ ॥ ೭೫ ॥
ಈದೃಶಂ ಚ ಮಹಾಕ್ಷೇತ್ರಂ ಹಾಟಕೇಶ್ವರಸಂಭವಂ ।
ಏತಸ್ಮಿನ್ನೇವ ಕಾಲೇತು ಸಾವಿತ್ರೀ ತತ್ರ ಸಂಸ್ಥಿತಾ ॥ ೭೬ ॥
ಪ್ರಣಿಪತ್ಯ ದ್ವಿಜೈಃ ಸರ್ವೈರ್ಗಚ್ಛಮಾನಾ ನಿವಾರಿತಾ ।
ಮಾ ದೇವಯಜನಂ ಗಚ್ಛ ಸಾವಿತ್ರೀ ಪತಿವಲ್ಲಭೇ ॥ ೭೭ ॥
ಬ್ರಹ್ಮಣಾ ಪರಿಣೀತಾಸ್ತಿ ಗಾಯತ್ರೀತಿ ವರಾಂಗನಾ ॥ ೭೮ ॥

---

೭೦. ಅನಂತರ ಆ ಮಧ್ಯಗನು ಶೀಘ್ರವಾಗಿ ಹೋಗಿ ಆ ನಾಗರರನ್ನು ಕರೆದು ವಿನಯದಿಂದ ನಮಸ್ಕರಿಸಿ ಇಂತೆಂದನು.

೭೧. ಆ ನಾಗರರೆಲ್ಲ ಅದನ್ನು ಕೇಳಿ ಅತ್ಯಂತ ಸಂತೋಷಗೊಂಡವರಾಗಿ ಒಂದೊಂದು ಗಣಕ್ಕೆ ತಮ್ಮ ಒಂದೊಂದು ಸ್ಥಾನವನ್ನಿತ್ತರು.

೭೨-೭೩. ಅನಂತರ ಆ ಮಾತೆಯರೆಲ್ಲ ಬ್ರಹ್ಮನನ್ನೂ, ಗಾಯತ್ರಿಯನ್ನೂ ಭಕ್ತಿಯಿಂದ ವಂದಿಸಿ ಬ್ರಾಹ್ಮಣರು ಸೂಚಿಸಿದ ಸ್ಥಳದಲ್ಲಿ ನೆಲೆಸಿ ವಿವಿಧ ಬಲಿಗಳಿಂದ ಪೂಜಿತರಾಗಿ ತೃಪ್ತರಾದರು.

೭೪. ಬ್ರಾಹ್ಮಣರು ತೃಪ್ತಿಗೊಳಿಸಲು ಆ ಮಾತೆಯರು ಹಾಡುತ್ತ, ಕುಣಿಯುತ್ತ, ನಗುತ್ತ ಹೀಗೆಂದರು.

೭೫-೭೮. "ಭಕ್ತಿಯುಳ್ಳ ಇಂತಹ ಬ್ರಾಹ್ಮಣರಿರುವ ಸ್ಥಳವನ್ನು ಬಿಟ್ಟು ನಾವು ಬೇರೆಯ ಸ್ಥಳಕ್ಕೆ ಹೋಗುವುದಿಲ್ಲ. ಈ ಹಾಟಕೇಶ್ವರ ಮಹಾಕ್ಷೇತ್ರದಲ್ಲಿಯೇ ಯಾವಾಗಲೂ ಇರುವೆವು." ಈ ಸಮಯದಲ್ಲಿ ಬ್ರಾಹ್ಮಣರು ಅಲ್ಲಿ ಹೋಗುತ್ತಿರುವ ಸಾವಿತ್ರಿಯನ್ನು ನಮಸ್ಕರಿಸಿ ತಡೆದು, "ಪತಿಪ್ರಿಯಳಾದ ಸಾವಿತ್ರಿಯೆ! ನೀನು ದೇವತೆಗಳ ಯಜ್ಞಕ್ಕೆ ಹೋಗಬೇಡ. ಬ್ರಹ್ಮನು ಗಾಯತ್ರಿಯೆಂಬ ಓರ್ವ ಹೆಂಗಸನ್ನು ಮದುವೆ ಮಾಡಿಕೊಂಡಿದ್ದಾನೆ" ಎಂದರು.

ತಚ್ಛ್ರುತ್ವಾ ವಚನಂ ತೇಷಾಂ ಸಾವಿತ್ರೀ ಭ್ರಾಂತಲೋಚನಾ ।
ದುಃಖಶೋಕಸಮೋಪೇತಾ ಬಾಷ್ಪವ್ಯಾಕುಲಲೋಚನಾ ॥ ೭೯ ॥
ದೃಷ್ಟ್ವಾ ತಾ ನೃತ್ಯಮಾನಾಶ್ಚ ಗಾಯಮಾನಾಸ್ತಥೈವ ಚ ।
ಉತ್ಕೃರ್ದಂತೀರ್ಧರಾಪೃಷ್ಠೇ ಸಂತೋಷಂ ಪರಮಂಗತಾಃ ॥ ೮೦ ॥
ಶಶಾಪಾಽಥ ಚ ಸಾವಿತ್ರೀ ಬಾಷ್ಪಗದ್ಗದಯಾ ಗಿರಾ ।
ಸಪತ್ನ್ಯಾ ಮಮ ಯತ್ಪೂಜಾಂ ಕೃತ್ವಾ ವಃ ಸುಸಮಾಗತಾಃ ॥ ೮೧ ॥
ನ ಪ್ರಣಾಮಃ ಕೃತೋಽಸ್ಮಾಕಂ ಮಮ ದುಃಖೇನ ದುಃಖಿತಾಃ ।
ತಸ್ಮಾನ್ನೈವಾಽಪರಂ ಸ್ಥಾನಂ ಗಮಿಷ್ಯಥ ಕಥಂಚನ ॥ ೮೨ ॥
ನಾಗರಾಣಾಂ ಚ ನೋ ಪೂಜಾ ಕದಾಚಿತ್ಪ್ರಭವಿಷ್ಯತಿ ।
ನ ಪ್ರಸಾದೋಽಥ ಯುಷ್ಮಾಕಂ ಕದಾಚಿತ್ಸಂಭವಿಷ್ಯತಿ ॥ ೮೩ ॥
ಶೀತಕಾಲೇತು ಶೀತೇನ ಹ್ಯುಷ್ಣಕಾಲೇ ಚ ರಶ್ಮಿಭಿಃ ।
ವರ್ಷಾಕಾಲೇತು ತೋಯೇನ ಕ್ಲೇಶಂ ಯಾಸ್ಯಥ ಭೂರಿಶಃ ॥ ೮೪ ॥
ಏವಮುಕ್ತ್ವಾ ತತೋ ದೇವೀ ಸಾ ತತ್ರೈವ ವ್ಯವಸ್ಥಿತಾ ।
ನಾಗರಾಣಾಂ ವರಸ್ತ್ರೀಭಿಃ ಸರ್ವಾಭಿಃ ಪರಿವಾರಿತಾ ॥ ೮೫ ॥
ಸಂಬೋಧ್ಯಮಾನಾ ಸತತಂ ಸುಸ್ತ್ರೀಣಾಂ ಚೇಷ್ಟಿತೇನ ಚ ।
ಏತಸ್ಮಿನ್ನೇವ ಕಾಲೇತು ಭಗವಾಂಸ್ತೀಕ್ಷ್ಣದೀಧಿತಿಃ ॥ ೮೬ ॥

---

೭೯–೮೨. ಆ ಬ್ರಾಹ್ಮಣರ ಆ ಮಾತನ್ನು ಕೇಳಿ ಸಾವಿತ್ರಿಯು ಭ್ರಾಂತಳೂ, ದುಃಖಗೊಂಡವಳೂ, ಕಣ್ಣೀರನ್ನು ಸುರಿಸುವವಳೂ ಆಗಿ ಅತ್ಯಂತ ಸಂತೋಷದಿಂದ ಕುಣಿಯುವವರೂ, ಹಾಡುವವರೂ, ಕೂಗುವವರೂ ಆದ ಆ ಮಾತೆಯರನ್ನು ಬಾಷ್ಪಗದ್ಗದವಾದ ಮಾತಿನಿಂದ ಹೀಗೆ ಶಪಿಸಿದಳು. "ನನ್ನ ಸವತಿಯ ಪೂಜೆಯನ್ನು ಮಾಡಿ ಬಂದ ನೀವು ನನಗೆ ನಮಸ್ಕಾರ ಮಾಡಲಿಲ್ಲ. ನನ್ನ ದುಃಖದಿಂದ ದುಃಖಗೊಳ್ಳಲಿಲ್ಲ. ಆದುದರಿಂದ ನೀವು ಬೇರೆ ಸ್ಥಳಕ್ಕೆ ಹೋಗದಿರಿ.

೮೩. ನಿಮಗೆ ಒಂದಾವೃತ್ತಿಯೂ ನಾಗರರ ಪೂಜೆಯೂ, ಅನುಗ್ರಹವೂ ಆಗುವುದಿಲ್ಲ.

೮೪. ನೀವು ಚಳಿಗಾಲದಲ್ಲಿ ಶೀತದಿಂದಲೂ, ಉಷ್ಣಕಾಲದಲ್ಲಿ ಸೂರ್ಯಕಾಂತಿಗಳಿಂದಲೂ, ಮಳೆಗಾಲದಲ್ಲಿ ನೀರಿನಿಂದಲೂ ಬಹುವಾಗಿ ಕ್ಲೇಶಗೊಳ್ಳುವಿರಿ."

೮೫–೮೬. ಆ ದೇವಿಯು ಹೀಗೆ ಹೇಳಿ ನಾಗರರ ಉತ್ತಮ ಸ್ತ್ರೀಯರಿಂದ ಯಾವಾಗಲೂ ಶ್ರೇಷ್ಠರಾದ ಹೆಂಗಸರ ನಡತೆಯನ್ನು ಬೋಧಿಸಲ್ಪಡುತ್ತ ಅವರೊಡನೆ ಅಲ್ಲಿಯೇ ನೆಲೆಸಿದಳು. ಇಷ್ಟರಲ್ಲಿ ಪೂಜ್ಯನಾದ ಸೂರ್ಯನು ಅಸ್ತಂಗತ

**ಅಸ್ತಂಗತೋ ಮಹಾಂಛಬ್ದಃ ಪ್ರಸ್ಥಿತೋ ಯಜ್ಞಮಂಡಪೇ ।**
**ಯಾಜ್ಞಿಕಾನಾಂ ತು ವಿಪ್ರಾಣಾಂ ಸುಮಹಾಂಛಾಸ್ತ್ರಸಂಭವಃ ॥ ೮೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಸಾವಿತ್ರೀದತ್ತಮಾತೃಗಣಶಾಪವರ್ಣನಂ" ನಾಮ**
**ಅಷ್ಟಾಽಶೀತ್ಯುತ್ತರಶತತಮೋಽಧ್ಯಾಯಃ**

---

ನಾದನು. ಯಜ್ಞಮಂಟಪದಲ್ಲಿ ಋತ್ವಿಜರ ಶಾಸ್ತ್ರವಿಷಯಕವಾದ ಮಹಾಶಬ್ದವೂ ನಿಂತುಹೋಯಿತು.

ಎಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಸಾವಿತ್ರೀದತ್ತಮಾತೃಗಣಶಾಪವರ್ಣನ"ವೆಂಬ
ನೂರೆಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥೈಕೋನನವತ್ಯುತ್ತರಶತತಮೋಽಧ್ಯಾಯಃ

### ಔದುಂಬರೀಪ್ರಾಗ್ಜನ್ಮವೃತ್ತಾಂತವರ್ಣನಂ

**ಸೂತ ಉವಾಚ :—**

**ಅಥ ಯಾವಚ್ಚ ತಾಃ ಶಪ್ತಾ ಮಾತರೋ ದ್ವಿಜಸತ್ತಮಾಃ ।**
**ಸಾವಿತ್ರ್ಯಾ ತಾಸ್ತು ಗಂಧರ್ವ್ಯಃ ಪ್ರಾಪ್ತಾಃ ಸಾ ಯತ್ರ ತಿಷ್ಠತಿ ॥ ೧ ॥**
**ತತಃ ಪ್ರಣಮ್ಯ ತಾ ಊಚುಃ ಸರ್ವಾ ದೀನತರಂ ವಚಃ ।**
**ವಯಂ ಸಮಾಗತಾ ದೇವಿ ಸರ್ವಾಸ್ತವ ಮುಖೇ ಯತಃ ॥ ೨ ॥**
**ಯಜ್ಞಭಾಗಂ ಲಭಿಷ್ಯಾಮ ಔದುಂಬರ್ಯಾಃ ಪ್ರಸಾದತಃ ।**
**ನ ಚಾಽಸ್ಮಾಭಿಃ ಪರಿಜ್ಞಾತಾ ಸಾವಿತ್ರೀ ಚಾಽತ್ರ ತಿಷ್ಠತಿ ॥ ೩ ॥**
**ದೌರ್ಭಾಗ್ಯದೋಷಸಂಪನ್ನಾ ನಾಗರೀಭಿಃ ಸಮಾವೃತಾ ।**
**ಅಸ್ಮಾಕಂ ಸುಖಮಾರ್ಗೋಽಯಂ ನೃತ್ಯಗೀತಸಮುದ್ಭವಃ ॥ ೪ ॥**
**ತತ್ಕುರ್ವಾಣಾಸ್ತತೋ ರಾತ್ರೌ ಶಪ್ತಾ ಗಾಂಧರ್ವಸತ್ತಮೇ ।**
**ಸ್ತ್ರೀಣಾಂ ದುಃಖೇನ ದುಃಖಾರ್ತಾ ಜಾಯಂತೇ ಸರ್ವಯೋಷಿತಃ ॥ ೫ ॥**

---

## ಕನ್ನಡದ ಅನುವಾದ

### ಔದುಂಬರೀಪ್ರಾಗ್ಜನ್ಮವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ :— ದ್ವಿಜವರ್ಯರೆ! ಆ ಮಾತೆಯರನ್ನು ಸಾವಿತ್ರಿಯು ಶಪಿಸಲು ಅವರು ಔದುಂಬರಿಯ ಬಳಿಗೈದಿದರು.

೨–೫. ಅನಂತರ ಅವರೆಲ್ಲರೂ ನಮಸ್ಕಾರ ಮಾಡಿ ದೈನ್ಯದಿಂದ ಇಂತೆಂದರು. "ದೇವಿ! ನಾವು ನಿನ್ನ ಅನುಗ್ರಹದಿಂದ ಯಜ್ಞಭಾಗವನ್ನು ಹೊಂದಬೇಕೆಂದು ಯಜ್ಞಕ್ಕೆ ಬಂದೆವು. ದೌರ್ಭಾಗ್ಯದೋಷವುಳ್ಳ ಸಾವಿತ್ರಿಯು ನಾಗರಸ್ತ್ರೀಯರೊಡನೆ ಇಲ್ಲಿರುವಳೆಂಬುದನ್ನರಿಯಲಿಲ್ಲ. ನಮಗೆ ನೃತ್ಯಗೀತಗಳು ಸುಖವನ್ನುಂಟು ಮಾಡುವುದರಿಂದ ರಾತ್ರಿಯಲ್ಲಿ ಅದನ್ನು ಮಾಡುತ್ತಿದ್ದೆವು. ಆಗ ಸಾವಿತ್ರಿಯು ಹೀಗೆ ಶಪಿಸಿದಳು. "ಕೆಲವು ಸ್ತ್ರೀಯರಿಗೆ ದುಃಖವುಂಟಾದರೆ ಎಲ್ಲ ಹೆಂಗಸರೂ ದುಃಖಗೊಳ್ಳುವರು.

ಯೂಯಮಾನಂದಿತಾಃ ಸರ್ವಾಃ ಸಪತ್ನ್ಯಾ ಮಮ ಚೋತ್ಸವೇ ।
ತಾಂ ಪ್ರಣಮ್ಯ ಪ್ರಪೂಜ್ಯಾಽದ್ಯ ನಾಽಹಂ ಸಂಭಾಷಿತಾಽಪಿ ಚ ॥ ೬ ॥
ವಿಶೇಷಾನ್ನೃತ್ಯಗೀತಂ ಚ ಪ್ರಾರಬ್ಧಂ ಮಮ ಚಾಗ್ರತಃ ।
ತಸ್ಮಾದ್ವ್ಯೋಮಗತಿರ್ನೈವ ಭವತೀನಾಂ ಭವಿಷ್ಯತಿ ॥ ೭ ॥
ಅಸ್ಮಿನ್ ಸ್ಥಾನೇ ಸದಾ ದೀನಾಸ್ತಥಾಶ್ರಯವಿವರ್ಜಿತಾಃ ।
ಸಂತಿಷ್ಠಧ್ವಂ ನ ವಃ ಪೂಜಾಂ ಕರಿಷ್ಯಂತಿ ಚ ಮಾನವಾಃ ॥ ೮ ॥
ದೀನಾನಾಮಸಮರ್ಥಾನಾಂ ಯಾತ್ರಾ ಕೃತ್ಯೇಷು ಸರ್ವದಾ ।
ತಸ್ಯಾಸ್ತದ್ವಚನಂ ದೇವಿ ನಾಽನ್ಯಥಾ ಸಂಭವಿಷ್ಯತಿ ॥ ೯ ॥
ಔದುಂಬರ್ಯಾಃ ಪೂಜನಾಯ ಗತ್ವಾ ತಸ್ಯೈ ನಿವೇದ್ಯತಾಂ ।
ಸಾ ಹಿ ವ್ಯಪನಯೇದ್ದುಃಖಂ ಧ್ರುವಂ ಸಾ ಹಿ ಪ್ರಕಾಮದಾ ॥ ೧೦ ॥
ತೇನಾಽತ್ರ ಸಹಸಾ ಪ್ರಾಪ್ತಾ ಯಾವನ್ನಷ್ಟಮನೋರಥಾಃ ॥ ೧೧ ॥
ತಸ್ಮಾತ್ಕುರುಷ್ವ ಕಲ್ಯಾಣಿ ಯಥಾಽಸ್ಮಾಕಂ ಗತಿರ್ಭವೇತ್ ।
ಮಾಹಾತ್ಮ್ಯಂ ತವ ವರ್ಧೇತ ತ್ರೈಲೋಕ್ಯೇಽಪಿ ಚರಾಚರೇ ॥ ೧೨ ॥

ಔದುಂಬರ್ಯುವಾಚ :—

ಕಾ ಶಕ್ತಿರ್ವಿದ್ಯತೇಽಸ್ಮಾಕಂ ಕೃತಂ ಸಾವಿತ್ರಿಸಂಭವಂ ।
ಅನ್ಯಥಾ ಕರ್ತುಮೇವಾಽದ್ಯ ಸರ್ವೈರಪಿ ಸುರಾಸುರೈಃ ॥ ೧೩ ॥

---

೬. ನೀವು ನನ್ನ ಸವತಿಯ ಉತ್ಸವದಲ್ಲಿ ಸಂತೋಷಗೊಂಡು ಅವಳನ್ನು ವಂದಿಸಿ, ಪೂಜಿಸಿ ನನ್ನನ್ನು ಮಾತ್ರ ಮಾತನಾಡಿಸಲಿಲ್ಲ.

೭. ನನ್ನ ಮುಂದೆ ವಿಶೇಷವಾಗಿ ನೃತ್ಯಗೀತಗಳನ್ನಾರಂಭಿಸಿದ್ದೀರಿ. ಆದುದರಿಂದ ನಿಮ್ಮ ಆಕಾಶಗಮನವು ನಷ್ಟವಾಗುವುದು.

೮–೯. ಈ ಸ್ಥಳದಲ್ಲಿ ಯಾವಾಗಲೂ ದೀನರೂ, ಆಶ್ರಯವಿಲ್ಲದವರೂ ಆಗಿರುವಿರಿ. ಮನುಷ್ಯರು ಯಾತ್ರೆಗಳಲ್ಲಿ ದೀನರೂ, ಅಸಮರ್ಥರೂ ಆದ ನಿಮಗೆ ಪೂಜೆಯನ್ನು ಮಾಡುವುದಿಲ್ಲ.'' ಅವಳ ಆ ಮಾತು ವ್ಯತ್ಯಾಸವಾಗುವುದಿಲ್ಲ.

೧೦. ಔದುಂಬರಿಯ ಪೂಜೆಗಾಗಿ ಹೋಗಿ ಅವಳಿಗೆ ಇದನ್ನು ತಿಳಿಸಿರಿ. ಇಷ್ಟಾರ್ಥವನ್ನು ನೀಡುವ ಅವಳು ನಿಶ್ಚಯವಾಗಿಯೂ ನಿಮ್ಮ ದುಃಖವನ್ನು ನಿವಾರಿಸುವಳು.

೧೧–೧೨. ಆದುದರಿಂದ ಭಗ್ನಮನೋರಥರಾದ ನಾವು ಕೂಡಲೆ ಇಲ್ಲಿಗೆ ಬಂದಿದ್ದೇವೆ. ಮಂಗಳಕರಳೆ! ಆದುದರಿಂದ ನಮಗೆ ಉತ್ತಮಗತಿಯಾಗುವ ಮೂಲಕ ನಿನ್ನ ಮಾಹಾತ್ಮ್ಯವು ಮೂರು ಲೋಕಗಳಲ್ಲಿಯೂ ವೃದ್ಧಿಯಾಗುವಂತೆ ಮಾಡು.''

೧೩. ಔದುಂಬರಿಯು ಹೇಳುತ್ತಾಳೆ:— ಸಾವಿತ್ರಿಯು ಮಾಡಿದ್ದನ್ನು ವ್ಯತ್ಯಾಸಗೊಳಿಸಲು ನಮಗೂ, ಸಮಸ್ತ ಸುರಾಸುರರಿಗೂ ಶಕ್ತಿಯಿಲ್ಲ.

**ತಥಾಽಪಿ ಶಕ್ತಿತೋ ದೇವ್ಯೋ ಯತಿಷ್ಯಾಮಿ ಹಿತಾಯ ವಃ ।**
**ಅಷ್ಟಷಷ್ಟಿಷು ಗೋತ್ರೇಷು ಭವತ್ಯಃ ಸನ್ನಿಯೋಜಿತಾಃ ॥ ೧೪ ॥**
**ಪಿತಾಮಹೇನ ತುಷ್ಟೇನ ತತ್ರ ಪೂಜಾಮವಾಪ್ಸ್ಯಥ ।**
**ಯೂಯಂ ರಾತ್ರೌ ಚ ಸಂಜ್ಞಾಭಿರ್ಹಾಸ್ಯಪೂರ್ವಾಭಿರೇವ ಚ ॥ ೧೫ ॥**
**ಅದ್ಯಪ್ರಭೃತಿ ಯುಸ್ಮ್ಯಾಽತ್ರ ನಾಗರಸ್ಯತು ಮಂದಿರೇ ।**
**ವೃದ್ಧಿಃ ಸಂಪತ್ಸ್ಯತೇ ಕಾಚಿದ್ವಿಶೇಷಾನ್ಮಂಡಪೋದ್ಭವಾ ॥ ೧೬ ॥**
**ತಥಾ ಯಾ ಯೋಷಿತಃ ಕಾಶ್ಚಿತ್ಪುರದ್ವಾರಂ ಸಮೇತ್ಯ ಚ ।**
**ಅದೃಷ್ಟಹಾಸ್ಯಮಾಧ್ಯಾಯ ಕ್ಷಿಪಿಷ್ಯಂತಿ ಬಲಿಂ ತತಃ ॥ ೧೭ ॥**
**ತೇನ ವೋ ಭವಿತಾ ತೃಪ್ತಿರ್ದೇವಾನಾಂ ಚ ಯಥಾ ಮಖೈಃ ।**
**ಯಾಃ ಪುನರ್ನ ಕರಿಷ್ಯಂತಿ ಪೂಜಾಮೇತಾಂ ಮಯೋದಿತಾಂ ॥ ೧೮ ॥**
**ಯುಷ್ಮಾಕಂ ನಗರೇ ತಾಸಾಂ ಸುಪುತ್ರೋ ನಾಶಮಾಪ್ಸ್ಯತಿ ।**
**ಯುಷ್ಮಾಕಮಪಮಾನೇನ ಸದಾ ರೋಗೀ ಭವಿಷ್ಯತಿ ॥ ೧೯ ॥**
**ತಸ್ಮಾತ್ತಿಷ್ಠಧ್ವಮತ್ರೈವ ರಕ್ಷಾರ್ಥಂ ನಗರಸ್ಯ ಚ ।**
**ಶಾಪವ್ಯಾಜೇನ ಯುಷ್ಮಾಕಂ ವರೋಽಯಂ ಸಮುಪಸ್ಥಿತಃ ॥ ೨೦ ॥**
**ಏತಸ್ಮಿನ್ನಂತರೇ ಪ್ರಾಪ್ತೋ ದೇವಶರ್ಮಾ ದ್ವಿಜೋತ್ತಮಾಃ ।**
**ಗಂಧರ್ವಃ ಪರ್ವತೋ ಜಾತಃ ಸ್ವಪತ್ನ್ಯಾ ಸಹಿತಸ್ತದಾ ॥ ೨೧ ॥**

---

೧೪–೧೫. ದೇವಿಯರೆ! ಹಾಗಾದಾಗ್ಗೂ ನಾವು ನಿಮ್ಮ ಹಿತಕ್ಕಾಗಿ ಶಕ್ತ್ಯನು ಸಾರ ಪ್ರಯತ್ನಿಸುತ್ತೇವೆ. ಪಿತಾಮಹನು ಸಂತುಷ್ಟನಾಗಿ ನಿಮ್ಮನ್ನು ಅರುವ ತ್ತೆಂಟು ನಾಗರರ ಗೋತ್ರಗಳಲ್ಲಿ ಸೇರಿಸಿರುತ್ತಾನೆ. ನೀವು ರಾತ್ರಿಯವೇಳೆ ಹಾಸ್ಯ ಪೂರ್ವಕವಾದ ಸಂಜ್ಞೆಗಳಿಂದ ಅಲ್ಲಿ ಪೂಜೆಯನ್ನು ಹೊಂದುವಿರಿ.

೧೬–೧೭. ಇದು ಮೊದಲ್ಗೊಂಡು ನಾಗರನ ಮನೆಯಲ್ಲಿ ವಿಶೇಷವಾಗಿ ಉಪನಯನ ಮೊದಲಾದ ಉತ್ಸವಗಳು ನಡೆದಾಗ ಕೆಲವು ಹೆಂಗಸರು ಪಟ್ಟಣದ ಬಾಗಿಲಿಗೆ ಬಂದು ವಿಲಕ್ಷಣವಾಗಿ ನಕ್ಕು ಬಲಿಯನ್ನು ಹಾಕುವರು.

೧೮–೧೯. ಅದರಿಂದ ದೇವತೆಗಳಿಗೆ ಯಜ್ಞಗಳಿಂದ ತೃಪ್ತಿಯಾದಂತೆ ನಿಮಗೆ ತೃಪ್ತಿಯಾಗುವುದು. ನಿಮ್ಮ ಪಟ್ಟಣದಲ್ಲಿ ನಾನು ಹೇಳಿದ ಈ ಪೂಜೆ ಯನ್ನು ಮಾಡದ ಹೆಂಗಸರ ಸುಪುತ್ರನು ಮಡಿಯುವನು. ನಿಮ್ಮನ್ನು ಅಪಮಾನ ಮಾಡಿದ್ದರಿಂದ ಯಾವಾಗಲೂ ರೋಗಿಗಳಾಗುವರು.

೨೦. ಆದುದರಿಂದ ನೀವು ನಗರದ ರಕ್ಷಣೆಗಾಗಿ ಇಲ್ಲಿಯೇ ನೆಲೆಸಿರಿ. ನಿಮಗೆ ಇದು ಶಾಪದ ನೆಪದಿಂದ ವರವಾಯಿತು.

೨೧. ಇಷ್ಟರಲ್ಲಿ ದೇವಶರ್ಮನಾಗಿ ಹುಟ್ಟಿದ ಪರ್ವತಗಂಧರ್ವನು ಪತ್ನಿ ಯೊಡನೆ ಅಲ್ಲಿಗೆ ಬಂದನು.

ಯದಾ ಚೌದುಂಬರೀ ಶಪ್ತಾ ನಾರದೇನ ಸುರರ್ಷಿಣಾ ।
ಮಾನುಷೀ ಭವ ಕ್ರುದ್ಧೇನ ತದಾ ಸಂಪ್ರಾರ್ಥಿತಸ್ತ್ವಯಾ ॥ ೨೨ ॥
ಮದರ್ಥಂ ಮಾನುಷೋ ಭೂತ್ವಾ ತಾತ ತ್ವಂ ಚಾನಯಾ ಸಹ ।
ಸೃಜ ಮಾಂ ಮಾನುಷೀಂ ಚೈವ ಯೇನ ಗಚ್ಛಾಮಿ ನೋ ಭುವಿ ॥ ೨೩ ॥
ವಿಣ್ಮೂತ್ರಸಂಯುತೇ ಗರ್ಭೇ ಸರ್ವದೋಷಸಮನ್ವಿತೇ ।
ತತಃ ಸಾ ಕೃಪಯಾ ತಸ್ಯಾಃ ಸತ್ಪತ್ನ್ಯಾ ದೇವಶರ್ಮಣಃ ॥ ೨೪ ॥
ಅವತೀರ್ಣಾ ಧರಾಪೃಷ್ಠೇ ವಾನಪ್ರಸ್ಥಾಶ್ರಮೇ ತತಃ ।
ಏವಂ ಸಾ ಪಂಚಮೀ ರಾತ್ರಿಸ್ತಸ್ಯ ಯಜ್ಞಸ್ಯ ಸತ್ತಮಾಃ ॥ ೨೫ ॥
ಉತ್ಸವೇನ ಮನೋಜ್ಞೇನ ಚೌದುಂಬರ್ಯಾವ್ಯತಿಕ್ರಮಾತ್ ।
ಪ್ರತ್ಯೂಷೇ ಚ ತತೋ ಜಾತೇ ಯದಾ ತೇನ ವಿಸರ್ಜಿತಾ ॥ ೨೬ ॥
ಔದುಂಬರೀ ತದಾ ಪ್ರಾಹ ಪರ್ವತಂ ಜನಕಂ ನಿಜಂ ।
ಕಲ್ಯೇಽತ್ರಾವಭೃಥೋ ಭಾವೀ ವಿಧಿಯಜ್ಞಸಮುದ್ಭವಃ ॥ ೨೭ ॥
ಸರ್ವತೀರ್ಥಮಯಸ್ತಸ್ಮಿನ್ ಸ್ನಾನಂ ನ ಸ್ಯಾತ್ತತಃ ಪರಂ ।
ಯಾಸ್ಯಾಮಃ ಸ್ವಗೃಹಾನ್ ಭೂಯಃ ಸರ್ವೈರ್ದೇವೈಃ ಸಮನ್ವಿತಾಃ ॥ ೨೮ ॥
ಅನೇನೈವ ವಿಮಾನೇನ ತ್ರಯೋ ವಾಽಪಿ ಯಥಾ ಸುಖಂ ।
ಮಮಾಽಪಿ ಚ ವರೋ ಜಾತೋ ಯಃ ಶಾಪಾನ್ನಾರದೋದ್ಭವಾತ್ ॥ ೨೯ ॥

---

೨೨. ಸುರರ್ಷಿಯಾದ ನಾರದನು ಕೋಪದಿಂದ ಔದುಂಬರಿಯನ್ನು ಮನುಷ್ಯಳಾಗೆಂದು ಶಪಿಸಲು ಅವಳು ಹೀಗೆ ತಂದೆಯನ್ನು ಪ್ರಾರ್ಥಿಸಿದಳು.

೨೩–೨೬. "ಅಪ್ಪ! ನೀನು ನನಗಾಗಿ ಈ ತಾಯಿಯೊಡನೆ ಮನುಷ್ಯನಾಗಿ ಅವತರಿಸಿ ನನ್ನನ್ನು ಮಗಳನ್ನಾಗಿ ಪಡೆ. ನಾನು ಭೂಮಿಯಲ್ಲಿ ಅಮೇಧ್ಯ, ಮೂತ್ರ ಮೊದಲಾದ ಸಕಲ ದೋಷಗಳಿಂದ ಕೂಡಿದ ಮನುಷ್ಯಗರ್ಭವನ್ನು ಸೇರಲಾರೆನು." ಅನಂತರ ಆ ಔದುಂಬರಿಯು ತಂದೆಯ ದಯೆಯಿಂದ ವಾನಪ್ರಸ್ಥಾಶ್ರಮದಲ್ಲಿರುವ ಆ ದೇವಶರ್ಮನ ಪತ್ನಿಯಲ್ಲಿ ಅವತರಿಸಿದಳು. ಹೀಗೆ ಆ ಯಜ್ಞದ ಐದನೆಯ ರಾತ್ರಿಯು ಔದುಂಬರಿಯ ಮನೋಹರ ಉತ್ಸವದಿಂದ ಕಳೆದು ಬೆಳಗಾಗಲು ಋತ್ವಿಜರು ಔದುಂಬರಿಯನ್ನು ವಿಸರ್ಜನೆ ಮಾಡಿದರು.

೨೭–೨೯. ಆಗ ಔದುಂಬರಿಯು ತನ್ನ ತಂದೆಯಾದ ಪರ್ವತನನ್ನು ಕುರಿತು ಹೀಗೆಂದಳು. "ಈ ದಿನ ಬೆಳಗ್ಗೆ ಬ್ರಹ್ಮಯಜ್ಞದ ಸಕಲ ತೀರ್ಥರೂಪವಾದ ಅವಭೃತಸ್ನಾನವು ಆಗುವುದು. ಅನಂತರ ಸ್ನಾನವಿಲ್ಲ. ನಾವು ಮೂವರೂ ಸಕಲ ದೇವತೆಗಳೊಡನೆ ಇದೇ ವಿಮಾನದಿಂದ ಸುಖವಾಗಿ ನಮ್ಮ ಮನೆಗೆ ತೆರಳೋಣ. ನನಗೂ ನಾರದನ ಶಾಪವು ವರವಾಯಿತು.

**ಯಜ್ಞಭಾಗೋ ಮಯಾ ಪ್ರಾಪ್ತೋ ದೇವಾನಾಮಪಿ ದುರ್ಲಭಃ ।**
**ಪೌರ್ಣಮಾಸೀ ದಿನೇ ಪ್ರಾಪ್ತೇ ವಿಶೇಷಾತ್ಸ್ತ್ರೀಜನೈಃ ಕೃತಃ ॥ ೩೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಔದುಂಬರೀಪ್ರಾಗ್ಜನ್ಮವೃತ್ತಾಂತವರ್ಣನಂ" ನಾಮೈಕೋನನವತ್ಯುತ್ತರಶತತಮೋಽಧ್ಯಾಯಃ**

---

೩೦. ಹುಣ್ಣಿಮೆಯ ದಿನ ದೇವತೆಗಳಿಗೂ ದುರ್ಲಭವಾದ ಸ್ತ್ರೀಯರು ಕೊಡುವ ಯಜ್ಞಭಾಗವು ನನಗೆ ಲಭಿಸಿದೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಔದುಂಬರೀಪ್ರಾಗ್ಜನ್ಮವೃತ್ತಾಂತವರ್ಣನ"ವೆಂಬ ನೂರೆಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವತ್ಯುತ್ತರಶತತಮೋಽಧ್ಯಾಯಃ

### ಯಜ್ಞತೀರ್ಥೋತ್ಪತ್ತಿವರ್ಣನಂ

ಸೂತ ಉವಾಚ:—

ಏವಂ ಕ್ರತುಃ ಸ ಸಂಜಾತಃ ಪಂಚರಾತ್ರಂ ದ್ವಿಜೋತ್ತಮಾಃ ।
ಹಾಟಕೇಶ್ವರಜೇ ಕ್ಷೇತ್ರೇ ಸರ್ವಕಾಮಸಮೃದ್ಧಿಮಾನ್ ॥ ೧ ॥
ವಿಪ್ರಾಂಶ್ಚ ಭಿಕ್ಷುಕಾಂಶ್ಚೈವ ದೀನಾಂಧಾಂಶ್ಚ ವಿಶೇಷತಃ ।
ಸಮಾಪ್ತೌ ತಸ್ಯ ಯಜ್ಞಸ್ಯ ಸಂತರ್ಪ್ಯ ಸಕಲಾಂಸ್ತತಃ ।
ಋತ್ವಿಜೋ ದಕ್ಷಿಣಾಭಿಸ್ತಾನ್ ಯಥೋಕ್ತಾನ್ ದ್ವಿಜಸತ್ತಮಾನ್ ॥ ೨ ॥
ತತಃ ಸ ಚಾಽಽನಯಾಮಾಸ ನಾಗರಾನ್ ಬ್ರಾಹ್ಮಣೋತ್ತಮಾನ್ ।
ಚಾತುಶ್ಚರಣಸಂಪನ್ನಾಂಛ್ರುತಿ ಸ್ಮೃತಿ ಸಮನ್ವಿತಾನ್ ॥ ೩ ॥
ಕೃತಾಂಜಲಿಪುಟೋ ಭೂತ್ವಾ ತತಸ್ತಾನ್ ಪ್ರಾಹ ಸಾದರಂ ।
ಯದ್ಭೂಮೌ ತು ಮಯಾ ತೀರ್ಥಂ ಪುಷ್ಕರಂ ಸನ್ನಿವೇಶಿತಂ ॥ ೪ ॥
ಕಲಿಕಾಲಸ್ಯ ಭೀತೇನ ದ್ವಿತೀಯಂ ಬ್ರಾಹ್ಮಣೋತ್ತಮಾಃ ।
ಯೇನ ನೋ ನಾಶಮಭ್ಯೇತಿ ಮ್ಲೇಚ್ಛೈರಪಿ ಸಮಾಶ್ರಿತಂ ॥ ೫ ॥
ಹಾಟಕೇಶ್ವರ ದೇವಸ್ಯ ಪ್ರಭಾವೇನ ಮಹಾತ್ಮನಃ ।
ಕಲಿಕಾಲೇ ಚ ಸಂಪ್ರಾಪ್ತೇ ತೀರ್ಥಾನ್ಯಾಯತನಾನಿ ಚ ॥ ೬ ॥

---

## ಕನ್ನಡದ ಅನುವಾದ

### ಯಜ್ಞತೀರ್ಥೋತ್ಪತ್ತಿವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಹೀಗೆ ಐದು ರಾತ್ರಿಗಳು ಹಾಟಕೇಶ್ವರಜ ಕ್ಷೇತ್ರದಲ್ಲಿ ಸಕಲೇಷ್ಟಾರ್ಥಗಳನ್ನು ಕೊಡುವ ಯಜ್ಞವು ನಡೆಯಿತು.

೨–೩. ಬ್ರಹ್ಮನು ಯಜ್ಞದ ಅವಸಾನದಲ್ಲಿ ಬ್ರಾಹ್ಮಣರನ್ನೂ, ಭಿಕ್ಷುಗಳನ್ನೂ, ದೀನಾಂಧರನ್ನೂ ತೃಪ್ತಿಗೊಳಿಸಿ, ಋತ್ವಿಜರನ್ನು ದಕ್ಷಿಣೆಗಳಿಂದ ಸಂತೋಷಗೊಳಿಸಿ ಶ್ರುತಿ ಸ್ಮೃತಿಗಳಲ್ಲಿ ನಿಪುಣರಾದ ಚಾತುಶ್ಚರಣ ನಾಗರ ಬ್ರಾಹ್ಮಣರನ್ನು ಕರೆಯಿಸಿದನು.

೪–೭. ತರುವಾಯ ಅವನು ಕೈಮುಗಿದುಕೊಂಡು ಆ ಬ್ರಾಹ್ಮಣರನ್ನು ಕುರಿತು ಪ್ರೀತಿಯಿಂದ, "ನಾನು ಕಲಿಕಾಲದ ಭಯದಿಂದ ಭೂಮಿಯಲ್ಲಿ ಎರಡನೆಯ ಪುಷ್ಕರತೀರ್ಥವನ್ನು ನಿರ್ಮಿಸಿದ್ದೇನೆ. ಇದು ಹಾಟಕೇಶ್ವರನ ಪ್ರಭಾವದಿಂದ

ಮ್ಲೇಚ್ಛೈಃ ಸ್ಪೃಷ್ಟಾನ್ಯಸಂದಿಗ್ಧಂ ಪ್ರಯಾಗಾದೀನಿ ಕೃತ್ಸ್ನಶಃ ।
ಯಜ್ಞಸ್ತು ವಿಹಿತಸ್ತೇನ ಮಯಾಽಯಂ ತತ್ಕೃತೇನ ಚ ॥ ೭ ॥
ತಸ್ಮಾದ್ವದಥ ಕಿಂ ದಾನಂ ಯುಷ್ಮದ್ಭೂಮೇಶ್ಚ ನಿಷ್ಕ್ರಯೇ ।
ಪ್ರಯಚ್ಛಾಮಿ ಚ ಯಜ್ಞಸ್ಯ ಯೇನ ಮೇ ಸ್ಯಾತ್ಫಲಂ ದ್ವಿಜಾಃ ॥ ೮ ॥
ಬ್ರಾಹ್ಮಣಾ ಊಚುಃ :—
ಯದಿ ಯಚ್ಛಸಿ ಚಾಸ್ಮಾಕಂ ದಕ್ಷಿಣಾಂ ಯಜ್ಞಸಂಭವಾಂ ।
ತದಸ್ಮಾಕಂ ಸ್ವ ವಾಸೇನ ಸ್ಥಾನಂ ನಯ ಪವಿತ್ರತಾಂ ॥ ೯ ॥
ಯದೇತದ್ಭವತಾ ಚಾಽತ್ರ ಪುಷ್ಕರಂ ತೀರ್ಥಮುತ್ತಮಂ ।
ಸ್ಥಾಪಿತಂ ತಸ್ಯ ನೋ ಬ್ರೂಹಿ ಮಾಹಾತ್ಮ್ಯಂ ಸುರಸತ್ತಮ ।
ಯೇನ ಸ್ನಾನಾದಿಕಾಃ ಸರ್ವಾಃ ಕ್ರಿಯಾಃ ಕುರ್ಮಃ ಪಿತಾಮಹ ॥ ೧೦ ॥
ಬ್ರಹ್ಮೋವಾಚ :—
ಏತತ್ತೀರ್ಥಂ ಮಯಾ ಸೃಷ್ಟಮಂತರಿಕ್ಷಸ್ಥಿತಂ ಸದಾ ।
ಕಿಂ ನ ಶ್ರುತಂ ಪುರಾಣೇಷು ಭವದ್ಭಿರ್ದ್ವಿಜಸತ್ತಮಾಃ ॥ ೧೧ ॥
ಪೃಥಿವ್ಯಾಂ ನೈಮಿಷಂ ತೀರ್ಥಮಂತರಿಕ್ಷೇ ಚ ಪುಷ್ಕರಂ ।
ತ್ರೈಲೋಕ್ಯೇ ತು ಕುರುಕ್ಷೇತ್ರಂ ವಿಶೇಷೇಣ ವ್ಯವಸ್ಥಿತಂ ॥ ೧೨ ॥

---

ಮ್ಲೇಚ್ಛರ ಸ್ಪರ್ಶದಿಂದಲೂ ನಾಶವಾಗುವುದಿಲ್ಲ. ಕಲಿಕಾಲವು ಬರಲು ಮ್ಲೇಚ್ಛರು ಪ್ರಯಾಗಾದಿ ತೀರ್ಥಗಳನ್ನೂ, ದೇವಾಲಯಗಳನ್ನೂ ಸ್ಪರ್ಶಮಾಡುವರು. ಆದುದರಿಂದ ನಾನು ಅದಕ್ಕಾಗಿ ಈ ಯಜ್ಞವನ್ನು ಮಾಡಿದ್ದೇನೆ.

೮. ಆದುದರಿಂದ ನನ್ನೀ ಯಜ್ಞವು ಸಫಲವಾಗುವುದಕ್ಕಾಗಿ ನಿಮ್ಮ ಭೂಮಿಗೆ ಏನು ವರವನ್ನು ಕೊಡಲಿ, ಹೇಳಿರಿ'' ಎಂದು ಪ್ರಶ್ನಿಸಿದನು.

೯. ಬ್ರಾಹ್ಮಣರು ಹೇಳುತ್ತಾರೆ:—ನಮಗೆ ಯಜ್ಞದ ದಕ್ಷಿಣೆಯನ್ನು ಕೊಡುವುದಾದರೆ ಈ ಸ್ಥಳದಲ್ಲಿ ನೀನು ವಾಸಿಸಿ ಇದನ್ನು ಪವಿತ್ರಗೊಳಿಸು.

೧೦. ನೀನು ಇಲ್ಲಿ ಸ್ಥಾಪಿಸಿದ ಪುಷ್ಕರತೀರ್ಥದ ಮಾಹಾತ್ಮ್ಯವನ್ನು ನಮಗೆ ಹೇಳು. ಅದನ್ನು ಕೇಳಿ ನಾವಿಲ್ಲಿ ಸ್ನಾನ ಮೊದಲಾದ ಸಕಲ ಕಾರ್ಯಗಳನ್ನು ಮಾಡುತ್ತೇವೆ.

೧೧. ಬ್ರಹ್ಮನು ಹೇಳುತ್ತಾನೆ:—ದ್ವಿಜವರ್ಯರೆ! ನಾನು ಈ ಪುಷ್ಕರ ತೀರ್ಥವನ್ನು ಆಕಾಶದಲ್ಲಿ ನಿರ್ಮಿಸಿರುವುದನ್ನು ನೀವು ಪುರಾಣಗಳಲ್ಲಿ ಕೇಳಿಲ್ಲವೆ?

೧೨. ಭೂಮಿಯಲ್ಲಿ ನೈಮಿಷತೀರ್ಥವೂ, ಆಕಾಶದಲ್ಲಿ ಪುಷ್ಕರತೀರ್ಥವೂ, ತ್ರಿಭುವನದಲ್ಲಿ ಕುರುಕ್ಷೇತ್ರವೂ ಉತ್ಕೃಷ್ಟವಾಗಿವೆ.

ತದ್ಯುಷ್ಮಾಕಂ ಹಿತಾರ್ಥಾಯ ಪಂಚರಾತ್ರಂ ಧರಾತಲೇ ।
ಆಗಮಿಷ್ಯತ್ಯಸಂದಿಗ್ಧಂ ಮಮ ವಾಕ್ಯಪ್ರಣೋದಿತಂ ॥ ೧೩ ॥
ಕಾರ್ತಿಕ್ಯಾಂ ಶುಕ್ಲಪಕ್ಷೇ ತು ಹ್ಯೇಕಾದಶ್ಯಾಂ ದಿನೇ ಸ್ಥಿತೇ ।
ಯಾವತ್ಪಂಚದಶೀ ತಾವತ್ತಿಥಿಃ ಪಾಪಪ್ರಣಾಶಿನೀ ॥ ೧೪ ॥
ಪಂಚರಾತ್ರಸ್ಯ ಮಧ್ಯೇತು ಯಃ ಸ್ನಾನಂ ಚ ಕರಿಷ್ಯತಿ ।
ಶ್ರಾದ್ಧಂ ವಾ ಶ್ರದ್ಧಯಾ ಯುಕ್ತಸ್ತಸ್ಯ ಸ್ಯಾದಕ್ಷಯಂ ಹಿ ತತ್ ॥ ೧೫ ॥
ಅಹಂ ತು ಪಂಚರಾತ್ರಂ ತದ್ಬ್ರಹ್ಮಲೋಕಾದುಪೇತ್ಯ ಚ ।
ಸಂಶ್ರಯಂ ತು ಕರಿಷ್ಯಾಮಿ ತೀರ್ಥೇಽತ್ರೈವ ದ್ವಿಜೋತ್ತಮಾಃ ॥ ೧೬ ॥

ಬ್ರಾಹ್ಮಣಾ ಊಚುಃ:—

ತವ ಮೂರ್ತಿಂ ಕರಿಷ್ಯಾಮಃ ಸ್ಥಾನೇಽತ್ರ ಪ್ರಪಿತಾಮಹ ।
ತಸ್ಯಾಂ ಸಂಕ್ರಮಣಂ ನಿತ್ಯಂ ತಸ್ಮಾತ್ಕಾರ್ಯಂ ತ್ವಯಾ ವಿಭೋ ॥ ೧೭ ॥
ತೀರ್ಥಂ ಚೈವ ಸದಾಽಪ್ಯತ್ರ ಸಮಾಗಚ್ಛತು ಚಾಂಬರಾತ್ ।
ಲೋಕಾನಾಂ ಪಾಪನಾಶಾಯ ತಥಾ ತ್ವಂ ಕರ್ತುಮರ್ಹಸಿ ॥ ೧೮ ॥
ಏಷಾ ನೋ ದಕ್ಷಿಣಾ ದೇವ ಯಜ್ಞಸ್ಯೈವ ಸಮುದ್ಭವಾ ॥ ೧೯ ॥
ಏವಂ ಕೃತೇ ಸುರಶ್ರೇಷ್ಠ ಸಫಲಃ ಸ್ಯಾತ್ಕ್ರತುಸ್ತವ ।
ಪ್ರತಿಜ್ಞಾ ಚ ತಥಾ ಸತ್ಯಾ ತಸ್ಮಾದ್ದಾನಾಯ ನಿರ್ಮಿತಾ ॥ ೨೦ ॥

---

೧೩. ಈ ಮೂರು ತೀರ್ಥಗಳೂ ನಿಮ್ಮ ಹಿತಕ್ಕಾಗಿ ನನ್ನ ಮಾತಿನಂತೆ ಭೂಮಿಗೆ ಐದು ದಿನಗಳು ಬರುವುವು.

೧೪. ಕಾರ್ತಿಕ ಶುಕ್ಲಪಕ್ಷದ ಏಕಾದಶಿಯಿಂದ ಹುಣ್ಣಿಮೆಯವರೆಗೆ ಐದು ದಿನಗಳು ಪಾಪಗಳನ್ನು ಪರಿಹರಿಸುವುವು.

೧೫. ಈ ಐದು ದಿನಗಳಲ್ಲಿ ಇಲ್ಲಿ ಸ್ನಾನವನ್ನಾಗಲಿ, ಶ್ರಾದ್ಧವನ್ನಾಗಲಿ ಶ್ರದ್ಧೆಯಿಂದ ಮಾಡಿದರೆ ಅವು ಅಕ್ಷಯವಾಗುವುವು.

೧೬. ದ್ವಿಜವರ್ಯರೆ! ನಾನು ಈ ಐದು ರಾತ್ರಿಗಳಲ್ಲಿ ಬ್ರಹ್ಮಲೋಕದಿಂದ ಈ ತೀರ್ಥಕ್ಕೆ ಬಂದು ನೆಲೆಸುವೆನು.

೧೭. ಬ್ರಾಹ್ಮಣರು ಹೇಳುತ್ತಾರೆ:—ಪಿತಾಮಹ! ನಾವು ಈ ಸ್ಥಳದಲ್ಲಿ ನಿನ್ನ ಮೂರ್ತಿಯನ್ನು ರಚಿಸುವೆವು. ಅದರಲ್ಲಿ ನೀನು ಯಾವಾಗಲೂ ಸನ್ನಿಹಿತನಾಗಿರು.

೧೮. ಜನರ ಪಾಪಪರಿಹಾರಕ್ಕಾಗಿ ತೀರ್ಥವೂ ಯಾವಾಗಲೂ ಆಕಾಶದಿಂದ ಇಲ್ಲಿಗೆ ಬರಲಿ. ನೀನು ಹಾಗೆ ಮಾಡಲರ್ಹನಾಗಿರುವೆ.

೧೯. ಸ್ವಾಮಿ! ಇದೇ ನಮಗೆ ಯಜ್ಞದ ದಕ್ಷಿಣೆಯು.

೨೦. ಹೀಗೆ ಮಾಡಿದರೆ ನಿನ್ನ ಯಜ್ಞವು ಸಫಲವಾಗುವುದು. ಹಾಗೆಯೇ ದಾನದ ವಿಷಯದಲ್ಲಿ ಮಾಡಿದ ಪ್ರತಿಜ್ಞೆಯೂ ಸತ್ಯವಾಗುವುದು.

ಶ್ರೀ ಬ್ರಹ್ಮೋವಾಚ :—

ಮಂತ್ರಾಹೂತಂ ತತಃ ಶ್ರೇಷ್ಠಂ ನಭೋಮಾರ್ಗಾದ್ದ್ವಿಜೋತ್ತಮಾಃ ।
ಹಾಟಕೇಶ್ವರಜೇ ಕ್ಷೇತ್ರೇ ಪುಷ್ಕರಂ ಚಾಗಮಿಷ್ಯತಿ ॥ ೨೧ ॥
ಅಘಮರ್ಷಣಂ ಜಪಂಶ್ಚೈವ ಯಃ ಕರಿಷ್ಯತಿ ತೋಯಗಃ ।
ಮಮ ಮೂರ್ತೇಃ ಪುರಃ ಸ್ಥಿತ್ವಾ ಪೈಲಮಂತ್ರಪುರಃಸರಂ ॥ ೨೨ ॥
ಜಪಿಷ್ಯತಿ ದ್ವಿಜಶ್ರೇಷ್ಠಾಃ ಸವನಾನಾಂ ಚತುಷ್ಟಯಂ ।
ಬ್ರಹ್ಮಲೋಕಾತ್ಸಮಾಗತ್ಯ ಪ್ರಶ್ರೋಷ್ಯಾಮಿ ಚ ತದ್ದ್ವಿಜಾಃ ॥ ೨೩ ॥

ಸೂತ ಉವಾಚ :—

ಅಥ ತೇ ನಾಗರಾಃ ಸರ್ವೇ ಪುಷ್ಪದಾನಪ್ರಪೂರ್ವಕಂ ।
ಅನುಜ್ಞಾಂ ಪ್ರದದುಸ್ತುಷ್ಟಾ ಯಜ್ಞಫಲಸಮಾಪ್ತಯೇ ॥ ೨೪ ॥
ಏತಸ್ಮಿನ್ನಂತರೇ ಪ್ರಾಪ್ತಃ ಪುಲಸ್ತ್ಯೋಽಧ್ವರ್ಯುಸತ್ತಮಃ ।
ಯತ್ರ ಸ್ಥಾನೇ ಸ್ಥಿತೋ ಬ್ರಹ್ಮಾ ನಾಗರೈಃ ಪರಿವಾರಿತಃ ॥ ೨೫ ॥
ಅಬ್ರವೀಚ್ಚ ಸಮಾಪ್ತಸ್ತೇ ಯಜ್ಞಃ ಸಂಪೂರ್ಣ ದಕ್ಷಿಣಃ ।
ಪ್ರಾಯಶ್ಚಿತ್ತೈರ್ವಿರಹಿತೋ ಯಥಾ ನಾಽನ್ಯಸ್ಯ ಕಸ್ಯಚಿತ್ ॥ ೨೬ ॥
ಅತಃ ಪರಂ ಕರ್ಮಶೇಷಂ ಕಿಂಚಿದಸ್ತಿ ಪಿತಾಮಹ ।
ವಾರುಣೇಷ್ಟಿರ್ಜಪಶ್ಚೈವ ತತ್ಕರಿಷ್ಯಾಮಿ ಸಾಂಪ್ರತಂ ॥ ೨೭ ॥

---

೨೧. ಶ್ರೀ ಬ್ರಹ್ಮನು ಹೇಳುತ್ತಾನೆ:—ದ್ವಿಜೋತ್ತಮರೆ! ಹಾಟಕೇಶ್ವರಜ ಕ್ಷೇತ್ರದಲ್ಲಿ ಮಂತ್ರದಿಂದ ಆವಾಹನೆ ಮಾಡಿದರೆ ಆಕಾಶದಿಂದ ಪುಷ್ಕರವು ಬರುವುದು.

೨೨—೨೩. ನನ್ನ ಮೂರ್ತಿಯ ಮುಂದೆ ನಾಲ್ಕು ಸವನಗಳಲ್ಲಿಯೂ ಅಘಮರ್ಷಣ ಮಂತ್ರವನ್ನು ಪೈಲಮಂತ್ರಪೂರ್ವಕವಾಗಿ ಜಪಿಸಿದರೆ ನಾನು ಬ್ರಹ್ಮಲೋಕದಿಂದ ಬಂದು ಅದನ್ನು ಕೇಳುವೆನು.

೨೪. ಸೂತನು ಹೇಳುತ್ತಾನೆ:—ಬಳಿಕ ಆ ನಾಗರರೆಲ್ಲ ಸಂತುಷ್ಟರಾಗಿ ಪುಷ್ಪದಾನಪೂರ್ವಕವಾಗಿ ಯಜ್ಞಫಲವನ್ನು ಪಡೆಯುವುದಕ್ಕಾಗಿ ಅನುಜ್ಞೆಯನ್ನಿತ್ತರು.

೨೫. ಈ ಸಮಯದಲ್ಲಿ ಅಧ್ವರ್ಯುವಾದ ಪುಲಸ್ತ್ಯನು ನಾಗರ ಬ್ರಾಹ್ಮಣರೊಡನೆ ಬ್ರಹ್ಮನೆಡೆಗೆ ಬಂದು ಹೀಗೆಂದನು.

೨೬. "ನಿನ್ನ ಯಜ್ಞವು ಇತರರಾರಿಗೂ ಆಗದಿರುವಂತೆ ಪ್ರಾಯಶ್ಚಿತ್ತವಿಲ್ಲದೆ ಸಂಪೂರ್ಣ ದಕ್ಷಿಣೆಯುಳ್ಳುದಾಗಿ ಪೂರ್ತಿಯಾಗಿದೆ.

೨೭. ಇನ್ನು ಮುಂದೆ ವಾರುಣೇಷ್ಟಿ, ಜಪಗಳೆಂಬ ಸ್ವಲ್ಪಕರ್ಮವು ಉಳಿದಿದೆ. ಅದನ್ನೀಗ ಮಾಡುವೆನು.

ತಥಾ ಚಾಽವಭೃಥ ಸ್ನಾನಂ ಪ್ರಕರ್ತವ್ಯಂ ತ್ವಯಾ ಸಹ ।
ತಸ್ಮಾದುತ್ತಿಷ್ಠ ಗಚ್ಛಾವೋ ಯತ್ರ ತೋಯಂ ವ್ಯವಸ್ಥಿತಂ ॥ ೨೮ ॥
ಯೇನೇಷ್ಟಿಂ ವಾರುಣೀಂ ತತ್ರ ಕುರ್ವೇ ವಿಪ್ರೈರ್ಯಥೋಚಿತೈಃ ।
ಚತುರ್ಭಿರ್ಬ್ರಹ್ಮ ಪೂರ್ವೈಶ್ಚ ಮಯಾ ಚಾಗ್ನೀಧ್ರಹೋತೃಭಿಃ ॥ ೨೯ ॥
ಯಥಾ ವಹ್ನೌ ತಥಾ ತೋಯೇ ಮಂತ್ರವತ್ತದ್ಭವಂ ಶುಭಂ ।
ಹೂಯತೇ ಸಂವಿಧಾನೇನ ಯಜ್ಞಪಾತ್ರೈಃ ಸಮನ್ವಿತಂ ॥ ೩೦ ॥
ವರುಣಸ್ಯ ಪ್ರತುಷ್ಟ್ಯರ್ಥಂ ಸ್ನಾನಂ ಕಾರ್ಯಂ ತ್ವಯೈವ ಚ ।
ಋತ್ವಿಗ್ಭಿಃ ಸಹಿತೇನೈವ ಸರ್ವಾರಿಷ್ಟಪ್ರಶಾಂತಯೇ ॥ ೩೧ ॥
ಯಸ್ತತ್ರ ಸಮಯೇ ಸ್ನಾನಂ ಕರಿಷ್ಯತಿ ತ್ವಯಾ ಸಹ ।
ಅನ್ಯೋಽಪಿ ಮಾನವಃ ಕಶ್ಚಿದ್ವಿಪಾಪ್ಮಾ ಸ ಭವಿಷ್ಯತಿ ॥ ೩೨ ॥
ಯಾನೀಹ ಸಂತಿ ತೀರ್ಥಾನಿ ತ್ರೈಲೋಕ್ಯೇ ಸಚರಾಚರೇ ।
ವಾರುಣೀಮಿಷ್ಟಿಮಾಸಾದ್ಯ ತಾನಿ ಯಾಂತಿ ಚ ಸನ್ನಿಧೌ ॥ ೩೩ ॥
ತಸ್ಮಾತ್ಸರ್ವಪ್ರಯತ್ನೇನ ದೀಕ್ಷಿತೇನ ಸಮನ್ವಿತಂ ।
ತತ್ರ ಸ್ನಾನಂ ಪ್ರಕರ್ತವ್ಯಂ ಜಲಮಧ್ಯೇ ತು ಸಾರ್ಥಿಭಿಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಸರ್ವೈರವಭೃಥೋತ್ಸವೇ ॥ ೩೪ ॥
ತಸ್ಮಾದ್ವಿಸರ್ಜಯಾಽದ್ಯೈತಾನ್ ಬ್ರಾಹ್ಮಣಾಂಸ್ತಾವದೇವ ಚ ।
ಏತೇಽಪಿ ಚ ಕರಿಷ್ಯಂತಿ ಸ್ನಾನಂ ತತ್ರ ತ್ವಯಾ ಸಹ ॥ ೩೫ ॥

---

೨೮. ಹಾಗೆಯೇ ನಿನ್ನೊಡನೆ ಅವಭೃಥಸ್ನಾನ ಮಾಡಬೇಕು. ಆದುದರಿಂದ ಏಳು. ನೀರಿನ ಬಳಿಗೆ ಹೋಗೋಣ.

೨೯. ಅಲ್ಲಿ ಅಗ್ನೀಧ್ರ, ಬ್ರಹ್ಮ ಮೊದಲಾದ ನಾಲ್ಕು ಮಂದಿ ಉತ್ತಮ ಬ್ರಾಹ್ಮಣರೊಡನೆ ನಾನು ವಾರುಣೇಷ್ಟಿಯನ್ನು ಮಾಡಬೇಕು.

೩೦–೩೧. ವರುಣನ ತೃಪ್ತಿಗಾಗಿ ಅಗ್ನಿಯಲ್ಲಿ ಹೋಮಿಸಿದಂತೆಯೇ ನೀರಿನಲ್ಲಿಯೂ ಯಜ್ಞಪಾತ್ರೆಗಳೊಡನೆ ಹೋಮಿಸಬೇಕು. ನೀನೂ ಋತ್ವಿಜರೊಡನೆ ಸಕಲಾರಿಷ್ಟನಾಶಕ್ಕಾಗಿ ಸ್ನಾನ ಮಾಡಬೇಕು.

೩೨–೩೩. ಅಲ್ಲಿ ನಿನ್ನೊಡನೆ ಮಿಂದ ಮಾನವನು ಪಾಪರಹಿತನಾಗುವನು. ಚರಾಚರಾತ್ಮಕವಾದ ಮೂರು ಲೋಕಗಳಲ್ಲಿ ಇರುವ ತೀರ್ಥಗಳೆಲ್ಲ ವಾರುಣೇಷ್ಟಿಗಾಗಿ ಸನ್ನಿಹಿತವಾಗುವುವು.

೩೪. ಆದುದರಿಂದ ಫಲಾಪೇಕ್ಷಿಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಆ ನೀರಿನಲ್ಲಿ ದೀಕ್ಷಿತನೊಡನೆ ಅವಭೃಥೋತ್ಸವದಲ್ಲಿ ಸ್ನಾನ ಮಾಡಬೇಕು.

೩೫. ಆದುದರಿಂದ ಈ ಬ್ರಾಹ್ಮಣರನ್ನು ವಿಸರ್ಜಿಸು. ಇವರೂ ಅಲ್ಲಿ ನಿನ್ನೊಡನೆ ಸ್ನಾನ ಮಾಡುವರು."

**ಸೂತ ಉವಾಚ:—**

ತಚ್ಛ್ರುತ್ವಾ ಪ್ರಸ್ಥಿತೋ ಬ್ರಹ್ಮಾ ಜ್ಯೇಷ್ಠ ಕುಂಡ ತಟಂ ಶುಭಂ ।
ಗಾಯತ್ರ್ಯಾ ಸಹಿತೋ ಹೃಷ್ಟಃ ಕೃತಕೃತ್ಯತ್ವಮಾಗತಃ ॥ ೩೬ ॥
ಅಥ ತದ್ವಚನಂ ಶ್ರುತ್ವಾ ಸುರಾಃ ಸರ್ವೇ ತಥಾ ದ್ವಿಜಾಃ ।
ಪುಲಸ್ತ್ಯಶ್ಚ ಶುಭಾರ್ಥಾಯ ಸ್ನಾನಾರ್ಥಂ ಪ್ರಸ್ಥಿತಾ ಸ್ತದಾ ।
ಬ್ರಹ್ಮಣಾ ಸಹಿತಾ ಹೃಷ್ಟಾಃ ಪುತ್ರದಾರ ಸಮನ್ವಿತಾಃ ॥ ೩೭ ॥
ಅಥ ಸಂಕೀರ್ಣತಾ ಜಾತಾ ಸಮಂತಾಜ್ಜ್ಯೇಷ್ಠ ಪುಷ್ಕರೇ ।
ಸ್ನಾನಾರ್ಥಮಾಗತೈರ್ಲೋಕೈರೂರ್ಧ್ವಬಾಹುಭಿರೇವ ಚ ॥ ೩೮ ॥
ನ ತತ್ರ ಲಕ್ಷ್ಯತೇ ಬ್ರಹ್ಮಾ ನ ತತ್ಕರ್ಮ ಚ ವಾರುಣಂ ।
ಕ್ರಿಯಮಾಣೈರ್ದ್ವಿಜೈಸ್ತತ್ರ ವ್ಯಾಪ್ತೇ ಭೂಮಿತಲೇಽಖಿಲೇ ॥ ೩೯ ॥
ಅಥಾಂತೇ ಕರ್ಮಣಸ್ತಸ್ಯ ಬ್ರಹ್ಮಾ ಪ್ರಾಹ ಶತಕ್ರತುಂ ।
ಹಿತಾರ್ಥಂ ಸರ್ವಲೋಕಸ್ಯ ವಿನಯಾವನತಂ ಸ್ಥಿತಂ ॥ ೪೦ ॥
ನ ಮಾಂ ಜ್ಞಾಸ್ಯಂತಿ ದೂರಸ್ಥಾ ಜನಾಃ ಸ್ನಾನಾರ್ಥಮಾಗತಾಃ ।
ಮಜ್ಜಮಾನಂ ಜಲೇ ಪುಣ್ಯೇ ಸಮ್ಮರ್ದೇಽಸ್ಮಿಂಜಲೋದ್ಭವೇ ॥ ೪೧ ॥
ತಸ್ಮಾನ್ನಾಗಂ ಸಮಾರುಹ್ಯ ನಿಜಂ ವೃತ್ರನಿಷೂದನ ।
ಏಣಸ್ಯ ಕೃಷ್ಣಸಾರಸ್ಯ ವಂಶಾಂತೇ ಚರ್ಮನ್ಯಸ್ಯ ಚ ॥ ೪೨ ॥

---

೩೬. ಸೂತನು ಹೇಳುತ್ತಾನೆ:—ಬ್ರಹ್ಮನು ಅದನ್ನು ಕೇಳಿ ಗಾಯತ್ರಿಯೊಡನೆ ಸಂತೋಷದಿಂದ ಜ್ಯೇಷ್ಠ ಕುಂಡತಟಕ್ಕೆ ಹೋಗಿ ಕೃತಕೃತ್ಯನಾದನು.

೩೭. ತರುವಾಯ ಆ ಪುಲಸ್ತ್ಯನ ಮಾತನ್ನು ಕೇಳಿ ಸಮಸ್ತ ದೇವತೆಗಳೂ, ಬ್ರಾಹ್ಮಣರೂ ಪತ್ನೀಪುತ್ರರೊಡನೆ ಬ್ರಹ್ಮನಿಂದ ಸಹಿತರಾಗಿ ಸ್ನಾನಕ್ಕೋಸ್ಕರ ಹೊರಟರು.

೩೮. ಅನಂತರ ಜ್ಯೇಷ್ಠಪುಷ್ಕರವು ಸ್ನಾನಕ್ಕೋಸ್ಕರ ಬಂದ ತೋಳುಗಳನ್ನು ಎತ್ತಿಕೊಂಡಿರುವ ಜನರಿಂದ ವ್ಯಾಪ್ತವಾಯಿತು.

೩೯–೪೦. ಅದರಿಂದ ಅಲ್ಲಿ ಬ್ರಹ್ಮನೂ, ವಾರುಣಕರ್ಮವೂ ಕಾಣಿಸಲಿಲ್ಲ. ತರುವಾಯ ಆ ಕರ್ಮದ ಅವಸಾನದಲ್ಲಿ ಬ್ರಹ್ಮನು ಸಮಸ್ತ ಜನರ ಹಿತಕ್ಕಾಗಿ ವಿನಯದಿಂದ ಬಗ್ಗಿರುವ ಇಂದ್ರನನ್ನು ಕುರಿತು ಇಂತೆಂದನು.

೪೧. ಈ ಗದ್ದಲದಲ್ಲಿ ಪವಿತ್ರಜಲದಲ್ಲಿ ಸ್ನಾನ ಮಾಡುತ್ತಿರುವ ನನ್ನನ್ನು ದೂರದಲ್ಲಿರುವ ಜನರು ತಿಳಿಯುವುದಿಲ್ಲ.

೪೨–೪೩. ಎಲೈ ಇಂದ್ರನೆ! ಆದುದರಿಂದ ನೀನು ನಿನ್ನ ಆನೆಯನ್ನೇರಿ ಕೃಷ್ಣಾಜಿನವನ್ನು ಬಿದಿರಿನ ಕೊನೆಯಿಂದ ಎತ್ತಿಕೊಂಡು ನಾನು ಸ್ನಾನ ಮಾಡುವ

ತತಸ್ತತ್ಸ್ನಾನವೇಲಾಯಾಂ ಕ್ಷೇಪ್ತವ್ಯಂ ಸಲಿಲೇ ತ್ವಯಾ ।
ಯೇನ ಲೋಕಃ ಸಮಸ್ತೋಽಯಂ ವೇತ್ತಿ ಕಾಲಂ ತು ಸ್ನಾನಜಂ ॥ ೪೩ ॥
ಸ್ನಾನಂ ಚ ಕುರುತೇ ಶ್ರೇಯಃ ಸಂಪ್ರಾಪ್ನೋತಿ ಯಥೋದಿತಂ ।
ದೂರಸ್ಥೋಽಪಿ ಸುವೃದ್ಧೋಽಪಿ ಬಾಲೋಽಪಿ ಚ ಸಮಾಗತಃ ।
ಸ್ನಾನಜಂ ಲಭತೇ ಶ್ರೇಯಃ ಸಂಹೃಷ್ಟೋಽಪಿ ಯಥೋದಿತಂ ॥ ೪೪ ॥

ಸೂತ ಉವಾಚ:—

ಬಾಢಮಿತ್ಯೇವ ಸಂಪ್ರೋಚ್ಯ ಸತ್ವರಂ ಪ್ರಯಯೌ ಹರಿಃ ॥ ೪೫ ॥
ತತೋ ನಾಗಂ ಸಮಾರುಹ್ಯ ಧೃತ್ವಾ ವಂಶಂ ಕರೇ ನಿಜೇ ।
ಮೃಗಚರ್ಮಾಗ್ರಸಂಯುಕ್ತಂ ತೋಯಮಧ್ಯೇ ವ್ಯವಸ್ಥಿತಃ ॥ ೪೬ ॥
ಏತತ್ಕರ್ಮಾಽವಸಾನೇಸ ಸ್ನಾತುಕಾಮೇ ಪಿತಾಮಹೇ ।
ತಚ್ಚರ್ಮ ಪ್ರಾಕ್ಷಿಪತ್ತೋಯೇ ಸ್ವಯಮೇವ ಶತಕ್ರತುಃ ॥ ೪೭ ॥
ಏತಸ್ಮಿನ್ನಂತರೇ ದೇವಾಃ ಸರ್ವೇ ಗಂಧರ್ವಗುಹ್ಯಕಾಃ ।
ಮಾನುಷಾಶ್ಚ ವಿಶೇಷೇಣ ಸ್ನಾತಾಸ್ತತ್ರ ಸಮಾಹಿತಾಃ ॥ ೪೮ ॥
ಏತಸ್ಮಿನ್ನಂತರೇ ಬ್ರಹ್ಮಾ ಶಕ್ರಂ ಪ್ರೋವಾಚ ಸಾದರಂ ।
ಕೃತಸ್ನಾನಂ ಸುರೈಃ ಸಾರ್ಧಂ ವಿನಯಾವನತಂ ಸ್ಥಿತಂ ॥ ೪೯ ॥

---

ಸಮಯದಲ್ಲಿ ನೀರಿನಲ್ಲಿ ಎಸೆ. ಆದರಿಂದ ಸಕಲ ಜನರೂ ಸ್ನಾನದ ವೇಳೆಯನ್ನು ತಿಳಿಯುವರು.

೪೪. ಮತ್ತು ಅವರೆಲ್ಲರೂ ಸ್ನಾನವನ್ನು ಮಾಡಿ ಶ್ರೇಯಸ್ಸನ್ನು ಪಡೆಯುವರು. ದೂರದಲ್ಲಿರುವ ವೃದ್ಧನೂ, ಬಾಲಕನೂ ದರ್ಶನಮಾತ್ರದಿಂದ ಸ್ನಾನದ ಫಲವನ್ನು ಪಡೆಯುವನು.

೪೫. ಸೂತನು ಹೇಳುತ್ತಾನೆ:—ಇಂದ್ರನು ಹಾಗೆಯೇ ಆಗಲೆಂದು ಹೇಳಿ ಶೀಘ್ರವಾಗಿ ಹೊರಟುಹೋದನು.

೪೬. ಅವನು ಐರಾವತವನ್ನು ಏರಿ ಕೈಯಲ್ಲಿ ಕೃಷ್ಣಾಜಿನದಿಂದ ಸಹಿತವಾದ ಬಿದಿರನ್ನು ಹಿಡಿದುಕೊಂಡು ನೀರಿನ ನಡುವೆ ನಿಂತನು.

೪೭. ಈ ಕರ್ಮದ ಕೊನೆಯಲ್ಲಿ ಬ್ರಹ್ಮನು ಸ್ನಾನ ಮಾಡಬಯಸಲು ಇಂದ್ರನು ಆ ಚರ್ಮವನ್ನು ತಾನೇ ನೀರಿನಲ್ಲಿ ಎಸೆದನು.

೪೮. ಈ ಸಮಯದಲ್ಲಿ ಎಲ್ಲ ದೇವತೆಗಳೂ, ಗಂಧರ್ವರೂ, ಗುಹ್ಯಕರೂ, ಮನುಷ್ಯರೂ ಅಲ್ಲಿ ಮಿಂದರು.

೪೯. ಇಷ್ಟರಲ್ಲಿ ಬ್ರಹ್ಮನು ದೇವತೆಗಳೊಡನೆ ಮಿಂದು ವಿನಯದಿಂದ ತಲೆಯನ್ನು ತಗ್ಗಿಸಿಕೊಂಡಿರುವ ಇಂದ್ರನನ್ನು ಕುರಿತು ಹೀಗೆಂದನು.

ಸಹಸ್ರಾಕ್ಷಂ ತ್ವಯಾ ಕಷ್ಟಂ ಮನ್ಮಖೇ ವಿಪುಲಂ ಕೃತಂ ।
ಆನೀತಾ ಚ ತಥಾ ಪತ್ನೀ ಗಾಯತ್ರೀ ಚ ಸುಮಧ್ಯಮಾ ॥ ೫೦ ॥
ತಸ್ಮಾದ್ವರಯ ಭದ್ರಂತೇ ಯಂ ವರಂ ಮನಸಿ ಸ್ಥಿತಂ ।
ಸರ್ವಂ ತೇಽಹಂ ಪ್ರದಾಸ್ಯಾಮಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೫೧ ॥

ಇಂದ್ರ ಉವಾಚ:—

ಯದಿ ತುಷ್ಟೋಽಸಿ ಮೇ ದೇವ ಯದಿ ದೇಯೋ ವರೋ ಮಮ ।
ಯದಿ ತ್ವಾಂ ಪ್ರಾರ್ಥಯಾಮ್ಯದ್ಯ ಭೂಯಾತ್ತು ತಾದೃಶಂ ವಿಭೋ ॥೫೨॥
ವರ್ಷೇ ವರ್ಷೇ ಯಃ ಕುರ್ಯಾತ್ಸಂಪ್ರಾಪ್ತೇಽಸ್ಮಿನ್ದಿನೇ ಶುಭೇ ।
ಮೃಗಚರ್ಮ ಸಮಾದಾಯ ವಂಶಾಗ್ರೇ ಯೋ ಮಹೀಪತಿಃ ॥ ೫೩ ॥
ನಾಗಪ್ರವರಮಾರುಹ್ಯ ಸ್ವಯಮೇವ ಪಿತಾಮಹ ।
ಯಥಾಽಹಂ ಪ್ರಕ್ಷಿಪೇತ್ತೋಯೇ ಸ ಸ್ಯಾತ್ಪಾಪ ವಿವರ್ಜಿತಃ ॥ ೫೪ ॥
ಅಜೇಯಃ ಸರ್ವಶತ್ರೂಣಾಂ ಸರ್ವವ್ಯಸನವರ್ಜಿತಃ ।
ಯೇ ಕರಿಷ್ಯಂತಿ ಚ ಸ್ನಾನಮನೇನ ಮೃಗಚರ್ಮಣಾ ॥ ೫೫ ॥
ಸಾರ್ಧಮನ್ಯೇಽಪಿ ಯೇ ಲೋಕಾ ಅಪಿ ಪಾಪಸಮನ್ವಿತಾಃ ।
ತೇಷಾಂ ವರ್ಷಕೃತಂ ಪಾಪಂ ತ್ವತ್ಪ್ರಸಾದಾತ್ಪ್ರಣಶ್ಯತು ॥ ೫೬ ॥

---

೫೦. ಅಯ್ಯಾ ಇಂದ್ರನೆ! ನೀನು ನನ್ನ ಈ ಯಜ್ಞದಲ್ಲಿ ಬಹಳ ಕಷ್ಟ ಪಟ್ಟಿರುವೆ. ನನ್ನ ಪತ್ನಿಯಾದ ಗಾಯತ್ರೀ ಸುಂದರಿಯನ್ನು ಕರೆತಂದಿರುವೆ.

೫೧. ಆದುದರಿಂದ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಅದು ದುರ್ಲಭವಾಗಿದ್ದರೂ ಕೊಡುವೆನು.

೫೨. ಇಂದ್ರನು ಹೇಳುತ್ತಾನೆ:—ಸ್ವಾಮಿ! ನೀನು ಸಂತುಷ್ಟನಾಗಿದ್ದರೆ, ನನಗೆ ವರವನ್ನು ಕೊಡುವುದಾದರೆ ನಾನು ಈಗ ಏನು ಬೇಡಿದರೂ ಅದು ಹಾಗೆಯೇ ನೆರವೇರಲಿ.

೫೩-೫೪. ಪ್ರತಿವರ್ಷವೂ ಈ ಶುಭ ದಿನದಲ್ಲಿ ನನ್ನಂತೆಯೇ ಆನೆಯನ್ನೇರಿ ಕೃಷ್ಣಾಜಿನವನ್ನು ಬಿದಿರಿನಿಂದ ಎತ್ತಿಕೊಂಡು ನೀರಿನಲ್ಲಿ ಎಸೆಯುವ ರಾಜನು ಪಾಪರಹಿತನಾಗಲಿ.

೫೫-೫೬. ಅಲ್ಲದೆ, ಆತನು ಸಮಸ್ತ ಶತ್ರುಗಳಿಗೆ ಜಯಿಸಲಶಕ್ಯನೂ, ಸಮಸ್ತ ವ್ಯಸನವಿಮುಕ್ತನೂ ಆಗಲಿ. ಈ ಕೃಷ್ಣಾಜಿನದೊಡನೆ ಸ್ನಾನಮಾಡಿದ ಮಾನವರು ಪಾಪಿಗಳಾಗಿದ್ದರೂ ಅವರ ಒಂದು ವರ್ಷದ ಪಾಪವು ನಿನ್ನ ಅನುಗ್ರಹದಿಂದ ಪರಿಹಾರವಾಗಲಿ.

ಬ್ರಹ್ಮೋವಾಚ :—

ಏತತ್ಸರ್ವಂ ಸಹಸ್ರಾಕ್ಷ ತವ ವಾಕ್ಯಮಸಂಶಯಂ ।
ಭವಿಷ್ಯತಿ ನ ಸಂದೇಹಃ ಸರ್ವಮೇತನ್ಮಯೋದಿತಂ ॥ ೫೭ ॥
ಯೋ ರಾಜಾ ಶ್ರದ್ಧಯಾ ಯುಕ್ತೋ ದೇಶಸ್ಯಾಽಸ್ಯ ಸಮುದ್ಭವಃ ।
ಆನರ್ತಸ್ಯ ಗಜಾರೂಢೋ ಮೃಗಚರ್ಮ ಕ್ಷಿಪಿಷ್ಯತಿ ॥ ೫೮ ॥
ಅತ್ರ ಕುಂಡೇ ಮದೀಯೇತು ಮಾಂ ಸಂಪೂಜ್ಯ ತಟಸ್ಥಿತಂ ।
ಸರ್ವಲೋಕ ಹಿತಾರ್ಥಾಯ ಸಂಪ್ರಾಪ್ತೇ ಪ್ರತಿಪದ್ದಿನೇ ॥ ೫೯ ॥
ಸಮಾಪ್ತೇ ಕುತಪೇ ಕಾಲೇ ವಿಜಯೀ ಸ ಭವಿಷ್ಯತಿ ।
ಕಾರ್ತಿಕ್ಯಾಂ ಚ ವ್ಯತೀತಾಯಾಂ ದ್ವಿತೀಯೇಽಹ್ನಿ ವ್ಯವಸ್ಥಿತೇ ॥ ೬೦ ॥
ತಥಾ ತತ್ಕಾಲಮಾಸಾದ್ಯ ಯೇ ಕರಿಷ್ಯಂತಿ ಮಾನವಾಃ ।
ಸ್ನಾನಂ ತಚ್ಚ ದಿನೇಽತ್ರೈವ ವರ್ಷಪಾಪವಿವರ್ಜಿತಾಃ ।
ಆಧಿವ್ಯಾಧಿವಿಮುಕ್ತಾಶ್ಚ ತೇ ಭವಿಷ್ಯಂತ್ಯಸಂಶಯಂ ॥ ೬೧ ॥

ಸೂತ ಉವಾಚ :—

ಏತಸ್ಮಿನ್ನಂತರೇ ಪ್ರಾಪ್ತೋ ಯಕ್ಷ್ಮಾಖ್ಯೋ ದಾರುಣೋ ಗದಃ ।
ಅಚಿಕಿತ್ಸ್ಯೋಽಪಿ ದೇವಾನಾಂ ತಥಾ ಧನ್ವಂತರೇರಪಿ ॥ ೬೨ ॥
ನೀಲಾಂಬರಧರಃ ಕ್ಷಾಮೋ ದೀನೋ ದಂಡಸಮಾಶ್ರಿತಃ ।
ಕ್ಷುತ್ಕುರ್ವಂಶ್ಲೇಷ್ಮಣಾ ತಾವತ್ಕೃಚ್ಛ್ರಾತ್ಸಂಧಾರಯನ್ ಪದಂ ॥ ೬೩ ॥
ತತಶ್ಚ ಪ್ರಣತೋ ಭೂತ್ವಾ ವಾಕ್ಯಮೇತದುವಾಚ ಸಃ ॥ ೬೪ ॥

---

೫೭. ಬ್ರಹ್ಮನು ಹೇಳುತ್ತಾನೆ:—ಎಲೈ ಮಹೇಂದ್ರನೆ! ನೀನು ಕೇಳಿದ್ದೆಲ್ಲ ನನ್ನ ಮಾತಿನಿಂದ ನಿಶ್ಚಯವಾಗಿಯೂ ಆಗುವುದು.

೫೮–೬೦. ಈ ಆನರ್ತದೇಶದ ರಾಜನು ಪಾಡ್ಯದ ದಿನ ಶ್ರದ್ಧೆಯಿಂದ ಗಜಾರೂಢನಾಗಿ ಮೃಗಚರ್ಮವನ್ನು ಈ ನನ್ನ ಕುಂಡದಲ್ಲೆಸೆದು ಸಕಲ ಜನರ ಹಿತಕ್ಕಾಗಿ ದಡದಲ್ಲಿರುವ ನನ್ನನ್ನು ಪೂಜಿಸಿದರೆ ಕಾರ್ತಿಕ ಬಹುಳ ದ್ವಿತೀಯಾ ದಿನ ಕುತಪ ಕಾಲದಲ್ಲಿ ಜಯಶಾಲಿಯಾಗುವನು.

೬೧. ಹಾಗೆಯೇ ಆ ದಿನ ಆ ಸಮಯದಲ್ಲಿ ಮಿಂದ ಮಾನವರು ನಿಶ್ಚಯವಾಗಿಯೂ ಒಂದು ವರ್ಷ ಪಾಪವಿಲ್ಲದವರೂ, ಆಧಿವ್ಯಾಧಿಮುಕ್ತರೂ ಆಗುವರು.

೬೨–೬೪. ಸೂತನು ಹೇಳುತ್ತಾನೆ:—ಈ ಸಮಯದಲ್ಲಿ ದೇವತೆಗಳಿಗೂ, ಧನ್ವಂತರಿಗೂ ಚಿಕಿತ್ಸೆ ಮಾಡಲಾಗದಿರುವುದೂ, ಕರಿಯ ಬಟ್ಟೆಯನ್ನುಟ್ಟಿರುವುದೂ, ಕೃಶವೂ, ದೈನ್ಯವುಳ್ಳುದೂ ಆದ ಕ್ಷಯರೋಗವು ದಂಡಧಾರಿಯಾಗಿ, ಕಫದಿಂ ಸೀನುತ್ತ, ಕಷ್ಟದಿಂದ ಹೆಜ್ಜೆಯನ್ನಿಡುತ್ತ ನಮಸ್ಕರಿಸಿ ಇಂತೆಂದಿತು.

ಯಕ್ಷ್ಮೋವಾಚ:—

ತವ ಯಜ್ಞಮಹಂ ಶ್ರುತ್ವಾ ದೂರಾದೇವ ಪಿತಾಮಹ ।
ಕ್ಷುತ್ಕ್ಷಾಮಕಂಠಶ್ಚಾಯಾತಃ ಸಮಾಪ್ತಾವದ್ಯ ಕೃಚ್ಛ್ರತಃ ॥ ೬೫ ॥
ದಕ್ಷೇಣಾಹಂ ಪುರಾ ಸೃಷ್ಟಶ್ಚಂದ್ರಾರ್ಥಂ ಕುಪಿತೇನ ಚ ।
ರೋಹಿಣೀಂ ಸೇವಮಾನಸ್ಯ ಸಂತ್ಯಕ್ತಾನ್ಯಾಸುತಸ್ಯ ಚ ॥ ೬೬ ॥
ತತೋ ಮಾಹೇಶ್ವರಾದೇಶಾತ್ತೇನ ತುಷ್ಟೇನ ತಸ್ಯ ಚ ।
ಪಕ್ಷಮೇಕಂ ಕೃತಂ ಮಹ್ಯಂ ತಸ್ಯಾಸ್ವಾದನಕರ್ಮಣಿ ॥ ೬೭ ॥
ಅನ್ಯಪಕ್ಷೇ ನ ಕಿಂಚಿಚ್ಚ ಯೇನ ತೃಪ್ತಿಃ ಪ್ರಜಾಯತೇ ।
ಯಜ್ಞಸ್ಯೈವ ತು ಸರ್ವಸ್ಯ ತರ್ಪಯಿತ್ವಾ ದ್ವಿಜೋತ್ತಮಂ ॥ ೬೮ ॥
ತತಸ್ತದ್ವಚನಂ ಗ್ರಾಹ್ಯಂ ತರ್ಪಿತೋಽಹಮಸಂಶಯಂ ।
ಪೌರ್ಣಮಾಸ್ಯಾಂ ತತೋ ದೇವ ಯಸ್ಯ ಯಜ್ಞಸ್ಯ ಕೃತ್ಸ್ನಶಃ ॥ ೬೯ ॥
ಯಸ್ಯ ನೋ ಬ್ರಾಹ್ಮಣೋ ಬ್ರೂತೇ ಯಜ್ಞಸ್ಯಾಂತೇ ಪ್ರತರ್ಪಿತಃ ।
ತರ್ಪಿತೋಽಸ್ಮೀತಿ ತತ್ತಸ್ಯ ವೃಥಾಸ್ಯಾದ್ಯಜ್ಞಜಂ ಫಲಂ ।
ಯದಿ ಕೋಟಿಗುಣಂ ದತ್ತಮಪಿ ಶ್ರದ್ಧಾಸಮನ್ವಿತಂ ॥ ೭೦ ॥

---

೬೫. ಕ್ಷಯರೋಗವು ಹೇಳುತ್ತದೆ:—ಪಿತಾಮಹ! ನಾನು ನಿನ್ನ ಯಜ್ಞವನ್ನು ದೂರದಿಂದಲೇ ಕೇಳಿ ಹಸಿವಿನಿಂದ ಒಣಗಿದ ಕುತ್ತಿಗೆಯುಳ್ಳವನಾಗಿ ಸಮಾಪ್ತಿ ಕಾಲದಲ್ಲಿ ಕಷ್ಟದಿಂದ ಬಂದಿದ್ದೇನೆ.

೬೬. ಹಿಂದೆ ದಕ್ಷನು ಇತರ ಸ್ತ್ರೀಯರನ್ನು ತ್ಯಜಿಸಿ ರೋಹಿಣಿಯನ್ನು ಮಾತ್ರ ಸೇವಿಸುತ್ತಿರುವ ಚಂದ್ರನ ಮೇಲೆ ಕುಪಿತನಾಗಿ ನನ್ನನ್ನು ಸೃಷ್ಟಿಸಿದನು.

೬೭. ಅನಂತರ ಮಹೇಶ್ವರನ ಅಪ್ಪಣೆಯಂತೆ ಸಂತುಷ್ಟನಾದ ಆ ದಕ್ಷನು ಒಂದು ಪಕ್ಷಕಾಲ ಚಂದ್ರನ ಕಲೆಗಳನ್ನು ಆಸ್ವಾದನ ಮಾಡಲು ನನಗೆ ಅವಕಾಶವನ್ನು ಕಲ್ಪಿಸಿಕೊಟ್ಟನು.

೬೮—೬೯. ಕೃಷ್ಣಪಕ್ಷದಲ್ಲಿ ನನಗೆ ತೃಪ್ತಿಯನ್ನುಂಟುಮಾಡುವುದು ಯಾವುದೂ ಇಲ್ಲ. ಯಜ್ಞಪೂರ್ತಿಮಾಡಿದವನು ಹುಣ್ಣಿಮೆಯ ದಿನ ಬ್ರಾಹ್ಮಣನನ್ನು ತೃಪ್ತಿಗೊಳಿಸಿದ ತರುವಾಯ ಅವನು "ನಾನು ತೃಪ್ತನಾಗಿರುವೆನು" ಎಂದು ಹೇಳುವ ಮಾತನ್ನು ಗ್ರಹಿಸಬೇಕು.

೭೦. ಶ್ರದ್ಧೆಯಿಂದ ಕೋಟಿಮಡಿಯಾಗಿ ದಾನ ಮಾಡಿದ್ದರೂ ಯಜ್ಞದ ಕೊನೆಯಲ್ಲಿ ಬ್ರಾಹ್ಮಣನು ನಾನು ತೃಪ್ತನಾಗಲಿಲ್ಲವೆಂದು ಹೇಳಿದರೆ ಅವನ ಯಜ್ಞವು ನಿಷ್ಫಲವಾಗುವುದು.

ಏತಚ್ಛ್ರುತ್ವಾ ತ್ವಯಾ ದೇವ ಪತ್ಯವಾನಂ ಶ್ರುತಾವಿಹ ।
ತಸ್ಮಾತ್ಸಮ್ಯಕ್ ಸ್ಥಿತೇ ಯಜ್ಞೇ ಬ್ರಾಹ್ಮಣಂ ತರ್ಪಯೇತ ವೈ ॥ ೭೧ ॥
ಪ್ರತ್ಯಕ್ಷಂ ಮೇ ಯಥಾ ತೃಪ್ತಿರನ್ನೇನೈವ ಪ್ರಜಾಯತೇ ।
ತ್ವತ್ಪ್ರಸಾದಾತ್ಸುರಶ್ರೇಷ್ಠ ತಥಾ ನೀತಿರ್ವಿಧೀಯತಾಂ ॥ ೭೨ ॥

ಸೂತ ಉವಾಚ :—

ತಚ್ಛ್ರುತ್ವಾ ಪದ್ಮಜಸ್ತಸ್ಯ ಪಥ್ಯಂ ಪಥ್ಯಂ ವಚೋಽಖಿಲಂ ।
ಶ್ರುತಿಂ ಪ್ರಮಾಣತಾಂ ನೀತ್ವಾ ತತೋ ವಚನಮಬ್ರವೀತ್ ॥ ೭೩ ॥
ಅದ್ಯ ಪ್ರಭೃತಿ ಯೇ ವಿಪ್ರಾಃ ಸಾಗ್ನಯಃ ಸ್ಯುರ್ಧರಾತಲೇ ।
ತೈಃ ಸರ್ವೈರ್ವೈಶ್ವದೇವಾಂತೇ ಬಲಿರ್ದೇಯಸ್ತಥಾಽಖಿಲೈಃ ॥ ೭೪ ॥
ದತ್ವಾಽನ್ಯೇಭ್ಯೋಽಥ ದೇವೇಭ್ಯಸ್ತವ ತೃಪ್ತಿರ್ಭವಿಷ್ಯತಿ ।
ತವ ಪಕ್ಷೇ ದ್ವಿತೀಯೇ ತು ಸತ್ಯಮೇತನ್ಮಯೋದಿತಂ ॥ ೭೫ ॥
ಯೇ ವಿಪ್ರಾಸ್ತು ಬಲಿಂ ದದ್ಯುರ್ವೈಶ್ವದೇವಾಂತ ಆಗತೇ ।
ನ ತೇಷಾಮನ್ವಯೇ ಚಾಽಪಿ ತ್ವಯಾ ಸೇವ್ಯೋಽತ್ರ ಕಶ್ಚನ ॥ ೭೬ ॥

ಯಕ್ಷ್ಮೋವಾಚ :—

ತೀರ್ಥೇಽಸ್ಮಿಂಸ್ತಾವಕೇ ದೇವ ಸದಾಽಹಂ ತಪಸಿ ಸ್ಥಿತಃ ।
ತಿಷ್ಠಾಮಿ ಯದಿ ವಾಽದೇಶಸ್ತಾವಕೋ ಜಾಯತೇ ಮಮ ॥ ೭೭ ॥

---

೭೧. ದೇವ ! ನೀನು ಪ್ರತ್ಯಕ್ಷವಾದ ಇದನ್ನು ಕೇಳಿ ಸರಿಯಾಗಿ ನೆರವೇರಿಸಿದ ಯಜ್ಞದಲ್ಲಿ ಬ್ರಾಹ್ಮಣನನ್ನು ತೃಪ್ತಿಗೊಳಿಸು.

೭೨. ಸುರೋತ್ತಮ ! ನನಗೆ ಅನ್ನದಿಂದಲೇ ತೃಪ್ತಿಯಾಗುವುದು. ಆದುದರಿಂದ ನೀನು ಅನುಗ್ರಹಿಸಿ ಹಾಗೆಯೇ ಮಾಡು.

೭೩. ಸೂತನು ಹೇಳುತ್ತಾನೆ :—ಅವನು ವೇದಪ್ರಮಾಣವನ್ನು ತೋರಿಸಿ ಹೇಳಿದ ಅತ್ಯಂತ ಹಿತವಾದ ಸಮಸ್ತ ಮಾತುಗಳನ್ನು ಕೇಳಿ ಬ್ರಹ್ಮನು ಇಂತೆಂದನು.

೭೪-೭೫. ಇದು ಮೊದಲ್ಗೊಂಡು ಭೂಮಿಯಲ್ಲಿ ಅಗ್ನಿಹೋತ್ರಿಗಳಾದ ಬ್ರಾಹ್ಮಣರು ಕೃಷ್ಣಪಕ್ಷದಲ್ಲಿ ವೈಶ್ವದೇವದ ಕೊನೆಯಲ್ಲಿ ಇತರ ದೇವತೆಗಳಿಗೆ ಬಲಿಯನ್ನು ಕೊಟ್ಟ ತರುವಾಯ ನಿನಗೆ ಬಲಿಯನ್ನು ಕೊಟ್ಟರೆ ತೃಪ್ತಿಗೊಳ್ಳುವೆ. ನಾನು ಹೇಳಿದ ಈ ಮಾತು ನಿಜವಾದುದು.

೭೬. ವೈಶ್ವದೇವದ ಕೊನೆಯಲ್ಲಿ ಬಲಿಯನ್ನಿತ್ತ ಬ್ರಾಹ್ಮಣರ ಸಂಶದಲ್ಲಿ ಜನಿಸಿದ ಯಾರನ್ನೂ ನೀನು ಸೇವಿಸಬಾರದು.

೭೭. ಕ್ಷಯರೋಗವು ಹೇಳುತ್ತದೆ :—ಸ್ವಾಮಿ ! ನಿನ್ನೀ ತೀರ್ಥದಲ್ಲಿ ನಾನು ಯಾವಾಗಲೂ ತಪಸ್ಸನ್ನು ಮಾಡುತ್ತಿರುವೆನು. ನಿನ್ನ ಅಪ್ಪಣೆಯಾದ ಕೂಡಲೆ ಅದನ್ನು ನಡೆಸುವೆನು.

ಬ್ರಹ್ಮೋವಾಚ :—
ಯದ್ಯೇವಂ ಕುರು ಚಾಽನ್ಯತ್ರ ತ್ವಮಾಶ್ರಮುಪದಂ ನಿಜಂ ।
ಸಂಪ್ರಾಪ್ಯ ಭೂಮಿದೇಶಂ ಚ ಕಂಚಿದ್ಯರಭಿರೋಚತೇ ।
ಅರ್ಥಯಿತ್ವಾ ದ್ವಿಜಾನೇತಾ ನ್ಯಥಾ ಯಜ್ಞಕೃತೇ ಮಯಾ ॥ ೭೮ ॥
ಸೂತ ಉವಾಚ :—
ತಚ್ಛ್ರುತ್ವಾ ಪ್ರಾರ್ಥಯಾಮಾಸ ಚಮತ್ಕಾರಪುರೋದ್ಭವಾನ್ ।
ತೇಭ್ಯಃ ಪ್ರಾಪ್ಯ ತತೋ ಭೂಮಿಂ ಚಕಾರಾಥಾಶ್ರಮಂ ನಿಜಂ ॥ ೭೯ ॥
ತತ್ರ ಯಃ ಕುರುತೇ ಸ್ನಾನಂ ಪ್ರತಿಪದ್ದಿವಸೇ ಸ್ಥಿತೇ ।
ಸೂರ್ಯವಾರೇಣ ಮುಚ್ಯೇತ ಯಕ್ಷ್ಮಣಾ ಸೇವಿತೋಽಪಿ ವಾ ॥ ೮೦ ॥
ಅದ್ಯಾಽಪಿ ದೃಶ್ಯತೇ ಚಾಽತ್ರ ಪ್ರತ್ಯಯಸ್ತಸ್ಯ ಸಂಭವೇ ।
ಸರ್ವೇಷಾಮಾಹಿತಾಗ್ನೀನಾಂ ನಾಗರಾಣಾಂ ವಿಶೇಷತಃ ।
ಕಲಿಕಾಲೇಽಪಿ ಸಂಪ್ರಾಪ್ತೇ ನ ಯಕ್ಷ್ಮಾ ಸಂಪ್ರಜಾಯತೇ ॥ ೮೧ ॥
ತಥಾ ಚತುಷ್ಪದಾನಾಂ ಚ ತೇಷಾಂ ಗೃಹನಿವಾಸಿನಾಂ ।
ನ ತಸ್ಯ ಭೇಷಜಾನಿ ಸ್ಯುರ್ನಮಂತ್ರಾ ನ ಚಿಕಿತ್ಸಕಾಃ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಯಕ್ಷ್ಮತೀರ್ಥೋತ್ಪತ್ತಿ ವರ್ಣನಂ" ನಾಮ
ನವತ್ಯುತ್ತರಶತತಮೋಽಧ್ಯಾಯಃ

---

೭೮. ಬ್ರಹ್ಮನು ಹೇಳುತ್ತಾನೆ:—ಹೀಗಾದರೆ ನಾನು ಯಜ್ಞಮಾಡುವುದಕ್ಕಾಗಿ ಬೇಡಿದಂತೆ ನೀನು ಈ ಬ್ರಾಹ್ಮಣರನ್ನು ಯಾಚಿಸಿ ಇಷ್ಟಬಂದ ಸ್ಥಳವನ್ನು ಪಡೆದು ಆಶ್ರಮವನ್ನು ರಚಿಸಿಕೊ.

೭೯–೮೦. ಸೂತನು ಹೇಳುತ್ತಾನೆ:— ಅದನ್ನು ಕೇಳಿ ಕ್ಷಯರೋಗವು ಚಮತ್ಕಾರಪುರದ ಬ್ರಾಹ್ಮಣರನ್ನು ಯಾಚಿಸಿ ಅವರಿಂದ ಸ್ಥಳವನ್ನು ಪಡೆದು ತನ್ನ ಆಶ್ರಮವನ್ನು ನಿರ್ಮಿಸಿಕೊಂಡಿತು. ಅಲ್ಲಿ ಭಾನುವಾರ ಪಾಡ್ಯದ ದಿನ ಸ್ನಾನಮಾಡಿದವನು ಕ್ಷಯರೋಗದಿಂದ ಮುಕ್ತನಾಗುವನು.

೮೧–೮೨. ಇಲ್ಲಿ ಈಗಲೂ ಅದರ ವಿಷಯದಲ್ಲಿ ನಂಬಿಕೆಯು ಕಾಣುತ್ತಿದೆ. ಆಹಿತಾಗ್ನಿಗಳಾದ ಸಮಸ್ತ ನಾಗರಬ್ರಾಹ್ಮಣರಿಗೆ ಕಲಿಕಾಲದಲ್ಲಿಯೂ ಕ್ಷಯರೋಗವುಂಟಾಗುವುದಿಲ್ಲ. ಆ ಅಗ್ನಿಹೋತ್ರಿಗಳ ಮನೆಯಲ್ಲಿ ವಾಸಮಾಡುವ ನಾಲ್ಕು ಕಾಲಿನ ಪ್ರಾಣಿಗಳಿಗೂ ಔಷಧ, ಮಂತ್ರ, ವೈದ್ಯರ ಆವಶ್ಯಕತೆಯಿರುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಯಕ್ಷ್ಮತೀರ್ಥೋತ್ಪತ್ತಿವರ್ಣನ"ವೆಂಬ
ನೂರತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕನವತ್ಯುತ್ತರಶತತಮೋಽಧ್ಯಾಯಃ

**ಉತ್ಪಾತಾದ್ಯಪಶಕುನೋದ್ಭವವರ್ಣನಂ**

**ಋಷಯ ಊಚುಃ :—**

**ಸೂತಪುತ್ರ ತ್ವಯಾ ಪ್ರೋಕ್ತಂ ಸಾವಿತ್ರೀ ನಾಗತಾ ಚ ಯತ್ ।**
**ಕೌಟಿಲ್ಯೇನ ಸಮಾಯುಕ್ತೈರಾಹೂತಾ ವಚನೈಸ್ತಥಾ ।**
**ಪುಲಸ್ತ್ಯೇನ ಪುನಶ್ಚೈವ ಪ್ರಸಕ್ತಾ ಗೃಹಕರ್ಮಣಿ ॥ ೧ ॥**
**ತತಸ್ತು ಬ್ರಹ್ಮಣಾ ಕೋಪಾದ್ಗಾಯತ್ರೀ ಚ ಸಮಾಹೃತಾ ।**
**ದೇವೈರ್ವಿಪ್ರೈಶ್ಚ ಸಾಽತೀವ ಶಂಸಿತಾ ಭಾರ್ಯತಾಂ ಗತಾ ॥ ೨ ॥**
**ಸಾವಿತ್ರೀ ಚ ಕಥಂ ಜಾತಾ ತಾಂ ಜ್ಞಾತ್ವಾ ಯಜ್ಞಮಂಡಪೇ ।**
**ಪತ್ನೀಶಾಲಾಂ ಪ್ರವಿಷ್ಟಾಂ ಚ ಸರ್ವಂ ನೋ ವಿಸ್ತರಾದ್ವದ ॥ ೩ ॥**

**ಸೂತ ಉವಾಚ :—**

**ಸಾವಿತ್ರೀ ವಶಗಂ ಕಾಂತಂ ಜ್ಞಾತ್ವಾ ವಿಶ್ವಾಸಮಾಗತಾ ।**
**ಸ್ಥಿರಾ ಭೂತ್ವಾ ತದಾ ಸರ್ವಾ ದೇವಪತ್ನೀಃ ಸಮಾನಯತ್ ॥ ೪ ॥**

---

**ಕನ್ನಡದ ಅನುವಾದ**

**ಉತ್ಪಾತಾದ್ಯಪಶಕುನೋದ್ಭವವರ್ಣನ**

೧–೨. ಋಷಿಗಳು ಹೇಳುತ್ತಾರೆ:—ಸೂತ! ನೀನು ಪುಲಸ್ತ್ಯನ ಕುಟಿಲ ವಾಕ್ಯಗಳಿಂದ ಆಹೂತಳಾದ ಸಾವಿತ್ರಿಯು ಗೃಹಕರ್ಮದಲ್ಲಿ ನಿರತಳಾಗಿ ಬರಲಿಲ್ಲ. ಅನಂತರ ಬ್ರಹ್ಮನು ಕೋಪದಿಂದ ಗಾಯತ್ರಿಯನ್ನು ಕರೆಯಿಸಿದನು. ದೇವಬ್ರಾಹ್ಮಣರಿಂದ ಶ್ಲಾಘನೆಗೊಂಡ ಅವಳು ಬ್ರಹ್ಮನಿಗೆ ಪತ್ನಿಯಾದಳು ಎಂದು ಹೇಳಿರುವೆ.

೩. ಸಾವಿತ್ರಿಯು ಯಜ್ಞಮಂಟಪದಲ್ಲಿ ಗಾಯತ್ರಿಯು ಪತ್ನೀಶಾಲೆಯನ್ನು ಪ್ರವೇಶಿಸಿದ್ದನ್ನು ತಿಳಿದು ಏನನ್ನು ಮಾಡಿದಳು? ಎಲ್ಲವನ್ನೂ ವಿಸ್ತಾರವಾಗಿ ಹೇಳು.

೪. ಸೂತನು ಹೇಳುತ್ತಾನೆ:—ಸಾವಿತ್ರಿಯು ಪತಿಯು ತನ್ನ ವಶದಲ್ಲಿರುವನೆಂದು ನಂಬಿ ಸ್ಥಿರಚಿತ್ತಳಾಗಿ ಸಮಸ್ತ ದೇವಪತ್ನಿಯರನ್ನು ಕರೆಯಿಸಿದಳು.

**ಗೌರೀ ಲಕ್ಷ್ಮೀಃ ಶಚೀ ಮೇಧಾ ತಥಾ ಚೈವಾಽಪ್ಯರುಂಧತೀ ।**
**ಸ್ವಧಾ ಸ್ವಾಹಾ ತಥಾ ಕೀರ್ತಿರ್ಬುದ್ಧಿಃ ಪುಷ್ಟಿಃ ಕ್ಷಮಾ ಧೃತಿಃ ।**
**ತಥಾ ಚಾಽನ್ಯಾಶ್ಚ ಬಹವೋ ಹ್ಯಪ್ಸರೋಭಿಃ ಸಮನ್ವಿತಾಃ ॥ ೫ ॥**
**ಘೃತಾಚೀ ಮೇನಕಾ ರಂಭಾ ಉರ್ವಶೀ ಚ ತಿಲೋತ್ತಮಾ ।**
**ಅಪ್ಸರಾಣಾಂ ಗಣಾಃ ಸರ್ವೇ ಸಮಾಜಗ್ಮುರ್ದ್ವಿಜೋತ್ತಮಾಃ ॥ ೬ ॥**
**ಸಾ ತಾಭಿಃ ಸಹಿತಾ ದೇವೀ ಪೂರ್ಣಹಸ್ತಾಭಿರೇವ ಚ ।**
**ಸಂಪ್ರಹೃಷ್ಟಮನೋಭಿಶ್ಚ ಪ್ರಸ್ಥಿತಾ ಮಂಡಪಂ ಪ್ರತಿ ॥ ೭ ॥**
**ವಾದ್ಯಮಾನೇಷು ವಾದ್ಯೇಷು ಗೀತಧ್ವನಿಯುತೇಷು ಚ ।**
**ಗಂಧರ್ವಾಣಾಂ ಪ್ರಮುಖ್ಯಾನಾಂ ಕಿನ್ನರಾಣಾಂ ವಿಶೇಷತಃ ॥ ೮ ॥**
**ಪ್ರಸ್ಥಿತಾ ಸಾ ಮಹಾಭಾಗಾ ಯಾವತ್ತದ್ಯಜ್ಞಮಂಡಪಂ ।**
**ತಾವತ್ತಸ್ಯಾಸ್ತದಾ ಚಕ್ಷುಃ ಪ್ರಾಸ್ಫುರದ್ದಕ್ಷಿಣಂ ಮುಹುಃ ॥ ೯ ॥**
**ಅಪಸವ್ಯಂ ಮೃಗಾಶ್ಚಕ್ರುಸ್ತಥಾಽನ್ಯೇಽಪಿ ಖಗಾದಯಃ ।**
**ವಿಪರ್ಯಸ್ತೇನ ಸಂಯಾಂತಿ ಶಬ್ದಾನ್ ಕುರ್ವಂತಿ ಚಾಽಸಕೃತ್ ॥ ೧೦ ॥**
**ದಕ್ಷಿಣಾನಿ ತಥಾಂಗಾನಿ ಸ್ಫುರಮಾಣಾನಿ ವೈ ಮುಹುಃ ।**
**ತಸ್ಯಾ ಮನಸಿ ಸಂಕ್ಷೋಭಂ ಜನಯಂತಿ ನಿರರ್ಗಲಂ ॥ ೧೧ ॥**
**ತಾಶ್ಚ ದೇವಸ್ತ್ರಿಯಃ ಸರ್ವಾ ನೃತ್ಯಂತಿ ಚ ಹಸಂತಿ ಚ ।**
**ಗಾಯಂತಿ ಚ ಯಥೋತ್ಸಾಹಂ ತಸ್ಯಾಃ ಪಾರ್ಶ್ವೇ ವ್ಯವಸ್ಥಿತಾಃ ॥ ೧೨ ॥**

---

೫–೬. ಆಗ ಗೌರಿ, ಲಕ್ಷ್ಮಿ, ಶಚಿ, ಮೇಧಾ, ಅರುಂಧತಿ, ಸ್ವಧಾ, ಸ್ವಾಹಾ, ಕೀರ್ತಿ, ಬುದ್ಧಿ, ಪುಷ್ಟಿ, ಕ್ಷಮಾ, ಧೃತಿ ಮೊದಲಾದ ದೇವಪತ್ನಿಯರೂ, ಘೃತಾಚಿ, ಮೇನಕೆ, ರಂಭೆ, ಉರ್ವಶಿ, ತಿಲೋತ್ತಮೆ ಮೊದಲಾದ ಅಪ್ಸರೆಯರೂ ಬಂದರು.

೭. ಸಾವಿತ್ರೀದೇವಿಯು ಪೂರ್ಣಕುಂಭವನ್ನು ಕೈಯಲ್ಲಿ ಹಿಡಿದು ಹರ್ಷಚಿತ್ತರಾದ ಆ ಅಂಗನೆಯರೊಡನೆ ಯಜ್ಞಮಂಟಪವನ್ನು ಕುರಿತು ಹೊರಟಳು.

೮–೯. ಗಂಧರ್ವಶ್ರೇಷ್ಠರೂ, ಕಿನ್ನರರೂ ವಾದ್ಯಗಳನ್ನು ನುಡಿಸುತ್ತ ಸಂಗೀತವನ್ನು ಹಾಡುತ್ತಿರಲು ಮಹಾತ್ಮಳಾದ ಸಾವಿತ್ರಿಯು ಯಜ್ಞಮಂಟಪಕ್ಕೆ ಹೊರಟಳು. ಆಗ ಅವಳ ಬಲಗಣ್ಣು ಬಹಳವಾಗಿ ಅದುರಿತು.

೧೦. ಮೃಗಗಳು ಅಪಸವ್ಯವಾಗಿ ಹಾದುಹೋದುವು. ಪಕ್ಷಿಗಳು ವ್ಯತ್ಯಾಸವಾಗಿ ಸಂಚರಿಸುತ್ತ ಬಹುವಾಗಿ ಶಬ್ದಮಾಡಿದುವು.

೧೧. ಬಲಭಾಗದ ಅವಯವಗಳು ಬಹಳವಾಗಿ ಚಲಿಸಿ ಅವಳ ಮನಸ್ಸಿಗೆ ಬಹುವಾಗಿ ಚಾಂಚಲ್ಯವನ್ನುಂಟುಮಾಡಿದುವು.

೧೨. ಅವಳ ಬಳಿಯಲ್ಲಿರುವ ಸಕಲ ದೇವತಾಸ್ತ್ರೀಯರೂ ಉತ್ಸಾಹದಿಂದ ಕುಣಿದು, ನಕ್ಕು, ಹಾಡಿದರು.

**ನ ಜಾನಂತಿ ಚ ಸಂಕ್ಷೋಭಂ ತಥಾ ಶಕುನಜಂ ಹೃದಿ ।**
**ಅನ್ಯೋನ್ಯಸ್ಪರ್ಧಯಾ ಸರ್ವಾ ಗೀತನೃತ್ಯಪರಾಯಣಾಃ ॥ ೧೩ ॥**
**ಅಹಂ ಪೂರ್ವಮಹಂ ಪೂರ್ವಂ ಪ್ರವಿಶಾಮಿ ಮಹಾಮಖೇ ।**
**ಇತ್ಯೌತ್ಸುಕ್ಯ ಸಮೋಪೇತಾಸ್ತಾ ಗಚ್ಛಂತಿ ತದಾ ಪಥಿ ॥ ೧೪ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ಉತ್ಪಾತಾದ್ಯಪಶಕುನೋದ್ಭವವರ್ಣನಂ" ನಾಮೈಕನವತ್ಯುತ್ತರಶತತಮೋಽಧ್ಯಾಯಃ**

---

೧೩–೧೪. ಅವರು ಆ ಅಪಶಕುನದಿಂದುಂಟಾದ ಕ್ಷೋಭೆಯನ್ನರಿಯದೆ ಪರಸ್ಪರ ಸ್ಪರ್ಧೆಯಿಂದ ಗೀತ ನೃತ್ಯಾಸಕ್ತರಾಗಿ ಯಜ್ಞಮಂಟಪವನ್ನು ನಾನು ಮೊದಲು, ನಾನು ಮೊದಲು ಪ್ರವೇಶಿಸುತ್ತೇನೆ ಎಂದು ಔತ್ಸುಕ್ಯದಿಂದ ದಾರಿಯಲ್ಲಿ ನಡೆದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಉತ್ಪಾತಾದ್ಯಪಶಕುನೋದ್ಭವವರ್ಣನ" ವೆಂಬ
ನೂರತೊಂಬತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿನವತ್ಯುತ್ತರಶತತಮೋಽಧ್ಯಾಯಃ

## ಸಾವಿತ್ರೀಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಅಥ ಶ್ರುತ್ವಾ ಮಹಾನಾದಂ ವಾದ್ಯಾನಾಂ ಸಮುಪಸ್ಥಿತಂ ।**
**ನಾರದಃ ಸಮ್ಮುಖಃ ಪ್ರಾಯಾಜ್ಜ್ಞಾತ್ವಾ ಚ ಜನನೀಂ ನಿಜಾಂ ॥ ೧ ॥**
**ಪ್ರಣಿಪತ್ಯ ಸ ದೀನಾತ್ಮಾ ಭೂತ್ವಾ ಚಾಶ್ರುಪರಿಪ್ಲುತಃ ।**
**ಪ್ರಾಹ ಗದ್ಗದಯಾ ವಾಚಾ ಕಂಠೇ ಬಾಷ್ಪಸಮಾವೃತಃ ॥ ೨ ॥**
**ಆತ್ಮನಃ ಶಾಪರಕ್ಷಾರ್ಥಂ ತಸ್ಯಾಃ ಕೋಪವಿವೃದ್ಧಯೇ ।**
**ಕಲಿಪ್ರಿಯಸ್ತದಾ ವಿಪ್ರೋ ದೇವಸ್ತ್ರೀಣಾಂ ಪುರಃ ಸ್ಥಿತಃ ॥ ೩ ॥**
**ಮೇಘಗಂಭೀರಯಾ ವಾಚಾ ಪ್ರಸ್ಖಲಂತ್ಯಾ ಪದೇ ಪದೇ ।**
**ಮಯಾ ತ್ವಂ ದೇವಿ ಚಾಽಽಹೂತಾ ಪುಲಸ್ತ್ಯೇನ ತತಃ ಪರಂ ॥ ೪ ॥**
**ಸ್ತ್ರೀಸ್ವಭಾವಂ ಸಮಾಶ್ರಿತ್ಯ ದೀಕ್ಷಾಕಾಲೇಽಪಿ ನಾಗತಾ ॥ ೫ ॥**
**ತತೋ ವಿಧೇಃ ಸಮಾದೇಶಾಚ್ಛಕ್ರೇಣಾನ್ಯಾ ಸಮಾಹೃತಾ ।**
**ಕಾಚಿದ್ಗೋಪಸಮುದ್ಭೂತಾ ಕುಮಾರೀ ದೈವರೂಪಿಣೀ ॥ ೬ ॥**

---

## ಕನ್ನಡದ ಅನುವಾದ

### ಸಾವಿತ್ರೀಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಬಳಿಕ ನಾರದನು ವಾದ್ಯಗಳ ಮಹಾ ಧ್ವನಿಯನ್ನು ಕೇಳಿ ತನ್ನ ತಾಯಿಯು ಬಂದಿರುವಳೆಂದು ತಿಳಿದು ಆಕೆಯನ್ನು ಎದುರುಗೊಂಡನು.

೨–೪. ಜಗಳದಲ್ಲಿ ಆಶೆಯುಳ್ಳ ಅವನು ದೇವಾಂಗನೆಯರ ಮುಂದೆ ಆಕೆಗೆ ನಮಸ್ಕರಿಸಿ, ಕಣ್ಣೀರನ್ನು ಸುರಿಸುತ್ತ ತನ್ನನ್ನು ಶಪಿಸದಿರುವಂತೆಯೂ, ಅವಳ ಕೋಪವು ವೃದ್ಧಿಯಾಗುವಂತೆಯೂ ಗದ್ಗದಧ್ವನಿಯಿಂದ ಸಹಿತನಾಗಿ ಪ್ರತಿ ಶಬ್ದದಲ್ಲಿಯೂ ತೊದಲುತ್ತ ಮೇಘದಂತೆ ಗಂಭೀರವಾದ ಮಾತಿನಿಂದ ಇಂತೆಂದನು. "ಅಮ್ಮ! ನಾನೂ ಪುಲಸ್ತ್ಯನೂ ನಿನ್ನನ್ನು ಕರೆದೆವು.

೫. ಆದರೆ ನೀನು ಸ್ತ್ರೀಸ್ವಭಾವವನ್ನಾಶ್ರಯಿಸಿ ದೀಕ್ಷಾಕಾಲದಲ್ಲಿಯೂ ಬರಲಿಲ್ಲ.

೬–೭. ಅನಂತರ ಬ್ರಹ್ಮನ ಆಣತಿಯಂತೆ ಇಂದ್ರನು ದೇವತೆಗಳಂತೆ ರೂಪವುಳ್ಳ ಓರ್ವ ಗೋಪಕುವರಿಯನ್ನು ಕರೆತಂದು ಅವಳನ್ನು ಗೋವಿನ

ಗೋವಕ್ತ್ರೇಣ ಪ್ರವೇಶ್ಯಾಽಥ ಗುಹ್ಯಮಾರ್ಗೇಣ ತತ್ಕ್ಷಣಾತ್ ।
ಆಕರ್ಷಿತಾ ಮಹಾಭಾಗೇ ಸಮಾನೀತಾಽಥ ತತ್ಕ್ಷಣಾತ್ ॥ ೭ ॥
ಸಾ ವಿಷ್ಣುನಾ ವಿವಾಹಾರ್ಥಂ ತತಶ್ಚೈವಾಽನುಮೋದಿತಾ ।
ಈಶ್ವರೇಣ ಕೃತಂ ನಾಮ ಗಾಯತ್ರೀ ಚ ತವಾಽನುಗಂ ॥ ೮ ॥
ಬ್ರಾಹ್ಮಣ್ಯೈಃ ಸಕಲೈಃ ಪ್ರೋಕ್ತಂ ಬ್ರಾಹ್ಮಣೀತಿ ಭವತ್ವಿಯಂ ।
ಅಸ್ಮಾಕಂ ವಚನಾದ್ಬ್ರಹ್ಮನ್ ಕುರು ಹಸ್ತಗ್ರಹಂ ವಿಭೋ ॥ ೯ ॥
ದೇವೈಃ ಸರ್ವೈಃ ಸ ಸಂಪ್ರೋಕ್ತಸ್ತತಸ್ತಾಂ ಚ ವರಾನನಾಂ ।
ತತಃ ಪತ್ನ್ಯರ್ಥ ಧರ್ಮೇಣ ಯೋಜಯಾಮಾಸ ಸತ್ವರಂ ॥ ೧೦ ॥
ಕಿಂ ವಾ ತೇ ಬಹುನೋಕ್ತೇನ ಪತ್ನೀಶಾಲಾಂ ಸಮಾಗತಾ ।
ರಶನಾ ಯೋಜಿತಾ ತಸ್ಯಾ ಗೋಪ್ಯಾಃ ಕಟ್ಯಾಂ ಸುರೇಶ್ವರಿ ॥ ೧೧ ॥
ತದ್ದೃಷ್ಟ್ವಾ ಗರ್ಹಿತಂ ಕರ್ಮ ನಿಷ್ಕ್ರಾಂತೋ ಯಜ್ಞಮಂಡಪಾತ್ ।
ಅಮರ್ಷವಶಮಾಪನ್ನೋ ನ ಶಕ್ತೋ ವೀಕ್ಷಿತುಂ ಚ ತಾಂ ॥ ೧೨ ॥
ಏತಜ್ಜ್ಞಾತ್ವಾ ಮಹಾಭಾಗೇ ಯತ್ಕ್ಷಮಂ ತತ್ಸಮಾಚರ ।
ಗಚ್ಛ ವಾ ತಿಷ್ಠ ವಾ ತತ್ರ ಮಂಡಪೇ ಧರ್ಮವರ್ಜಿತೇ ॥ ೧೩ ॥
ತಚ್ಛ್ರುತ್ವಾ ಸಾ ತದಾ ದೇವೀ ಸಾವಿತ್ರೀ ದ್ವಿಜಸತ್ತಮಾಃ ।
ಪ್ರಮ್ಲಾನವದನಾ ಜಾತಾ ಪದ್ಮಿನೀವ ಹಿಮಾಗಮೇ ॥ ೧೪ ॥

---

ಬಾಯಿಯಲ್ಲಿ ತೂರಿಸಿ ಗುದದ್ವಾರದಿಂದ ಎಳೆದು ಶುದ್ಧಿಗೊಳಿಸಿ ಬ್ರಹ್ಮನೆಡೆಗೆ ಕರೆದುಕೊಂಡು ಬಂದನು.

೮. ವಿಷ್ಣುವು ಅವಳನ್ನು ಮದುವೆ ಮಾಡಿಕೊಳ್ಳಬಹುದೆಂದನು. ಈಶ್ವರನು ಅವಳಿಗೆ ಗಾಯತ್ರಿಯೆಂದು ಹೆಸರನ್ನಿಟ್ಟನು.

೯–೧೦. "ಎಲೈ ಬ್ರಹ್ಮನೆ! ಇವಳು ನಮ್ಮ ಮಾತಿನಿಂದ ಬ್ರಾಹ್ಮಣಿಯೆಂದಾಗಲಿ" ಎಂದರು. ಇವಳನ್ನು ಪಾಣಿಗ್ರಹಣ ಮಾಡಿಕೊ ಎಂದು ದೇವತೆಗಳು ನುಡಿದರು. ಬ್ರಹ್ಮನು ತರುವಾಯ ಅವಳನ್ನು ಪತ್ನೀಧರ್ಮದಲ್ಲಿ ನಿಯೋಜಿಸಿದನು.

೧೧. ಬಹಳವಾಗಿ ಮಾತನಾಡಿ ಪ್ರಯೋಜನವೇನು? ಪತ್ನೀಶಾಲೆಗೆ ಬಂದ ಅವಳ ಸೊಂಟಕ್ಕೆ ದರ್ಭೆಯ ಮೇಖಲೆಯನ್ನು ಕಟ್ಟಿದನು.

೧೨. ನಿಂದ್ಯವಾದ ಆ ಕಾರ್ಯವನ್ನು ನೋಡಿ ಯಜ್ಞಮಂಟಪದಿಂದ ಹೊರಟ ನಾನು ಕುಪಿತನಾಗಿ ಅವಳನ್ನು ನೋಡಲೂ ಸಮರ್ಥನಾಗಲಿಲ್ಲ.

೧೩. ಮಹಾತ್ಮಳೆ! ಇದನ್ನರಿತು ಯಾವುದು ಉಚಿತವಾದದ್ದೋ ಅದನ್ನು ಮಾಡು. ಧರ್ಮಬಾಹ್ಯವಾದ ಆ ಮಂಟಪಕ್ಕೆ ಹೋಗು ಅಥವಾ ಹೋಗದಿರು."

೧೪–೧೭. ದ್ವಿಜವರ್ಯರೆ! ಅದನ್ನು ಕೇಳಿ ಸಾವಿತ್ರೀ ದೇವಿಯು ಹೇಮಂತ ಋತುವಿನಲ್ಲಿ ಕಮಲಿನಿಯಂತೆಯೂ, ಬುಡ ಕತ್ತರಿಸಿದ ಲತೆಯಂತೆಯೂ,

ಲತೇವ ಛಿನ್ನಮೂಲಾ ಸಾ ಚಕ್ರೀವ ಪ್ರಿಯವಿಚ್ಯುತಾ ।
ಶುಚಿಶುಕ್ಲಾಗಮೇ ಕಾಲೇ ಸರಸೀವ ಗತೋದಕಾ ॥ ೧೫ ॥
ಪ್ರಕ್ಷೀಣಚಂದ್ರಲೇಖೇವ ಮೃಗೀವ ಮೃಗವರ್ಜಿತಾ ।
ಸೇನೇವ ಹತಭೂಪಾಲಾ ಸತೀವ ಗತಭರ್ತೃಕಾ ॥ ೧೬ ॥
ಸಂಶುಷ್ಕಾ ಪುಷ್ಪಮಾಲೇವ ಮೃತವತ್ಸೇವ ಸೌರಭೀ ।
ವೈಮನಸ್ಯಂ ಪರಂ ಗತ್ವಾ ನಿಶ್ಚಲತ್ವಮುಪಸ್ಥಿತಾಂ ।
ತಾಂ ದೃಷ್ಟ್ವಾ ದೇವಪತ್ನ್ಯಸ್ತಾ ಜಗದುರ್ನಾರದಂ ತದಾ ॥ ೧೭ ॥
ಧಿಗ್ಧಿಕ್ಕಲಿಪ್ರಿಯ ತ್ವಾಂ ಚ ರಾಗೇ ವೈರಾಗ್ಯಕಾರಕಂ ।
ತ್ವಯಾ ಕೃತಂ ಸರ್ವಮೇತದ್ವಿಧೇಸ್ತತ್ರ ಥಾಂತರಂ ॥ ೧೮ ॥

ಗೌರ್ಯುವಾಚ :—

ಅಯಂ ಕಲಿಪ್ರಿಯೋ ದೇವಿ ಬ್ರೂತೇ ಸತ್ಯಾನೃತಂ ವಚಃ ।
ಅನೇನ ಕರ್ಮಣಾ ಪ್ರಾಣಾನ್ ಬಿಭರ್ತ್ಯೇಷ ಸದಾ ಮುನಿಃ ॥ ೧೯ ॥
ಅಹಂ ತ್ರ್ಯಕ್ಷೇಣ ಸಾವಿತ್ರಿ ಪುರಾ ಪ್ರೋಕ್ತಾ ಮುಹುರ್ಮುಹುಃ ।
ನಾರದಸ್ಯ ಮುನೇರ್ವಾಕ್ಯಂ ನ ಶ್ರದ್ಧೇಯಂ ತ್ವಯಾ ಪ್ರಿಯೇ ।
ಯದಿ ವಾಂಛಸಿ ಸೌಖ್ಯಾನಿ ಮಮ ಜಾತಾನಿ ಪಾರ್ವತಿ ॥ ೨೦ ॥

---

ಪ್ರಿಯನಿಂದಗಲಿದ ಹೆಣ್ಣು ಚಕ್ರವಾಕ ಪಕ್ಷಿಯಂತೆಯೂ, ಗ್ರೀಷ್ಮಕಾಲದಲ್ಲಿ ನೀರಿಲ್ಲದ ಸರೋವರದಂತೆಯೂ, ಕ್ಷೀಣವಾದ ಚಂದ್ರನ ರೇಖೆಯಂತೆಯೂ, ಪತಿಯನ್ನಗಲಿದ ಹೆಣ್ಣು ಜಿಂಕೆಯಂತೆಯೂ, ಮೃತರಾಜನುಳ್ಳ ಸೇನೆಯಂತೆಯೂ, ಪತಿಯಿಲ್ಲದ ಸತಿಯಂತೆಯೂ, ಬಾಡಿದ ಹೂವಿನ ಮಾಲೆಯಂತೆಯೂ, ಕರುವು ಸತ್ತ ತುರುವಿನಂತೆಯೂ ಬಾಡಿದ ಮುಖವುಳ್ಳವಳಾದಳು. ಅತಿ ವೈಮನಸ್ಯ ವನ್ನು ಹೊಂದಿ ಸ್ತಬ್ಧಳಾದ ಆ ಸಾವಿತ್ರಿಯನ್ನು ದೇವಪತ್ನಿಯರೀಕ್ಷಿಸಿ ನಾರದ ನನ್ನು ಕುರಿತು ಇಂತೆಂದರು.

೧೮. "ಕಲಹಪ್ರಿಯನಾದ ನಾರದನೆ! ಪ್ರೀತಿಯಲ್ಲಿ ವೈರಾಗ್ಯವನ್ನುಂಟು ಮಾಡುವ ನಿನಗೆ ಧಿಕ್ಕಾರವಾಗಲಿ. ಬ್ರಹ್ಮನ ವಿಷಯದಲ್ಲಿ ನೀನೇ ಇದನ್ನೆಲ್ಲ ಮಾಡಿರುವೆ."

೧೯. ಗೌರಿಯು ಹೇಳುತ್ತಾಳೆ:—ದೇವಿ! ಜಗಳದಲ್ಲಿ ಪ್ರೀತಿಯುಳ್ಳ ಇವನು ಸುಳ್ಳನ್ನು ಸೇರಿಸಿ ಸತ್ಯವನ್ನು ಆಡುತ್ತಾನೆ. ಇದರಿಂದಲೇ ಇವನು ಜೀವಿಸಿ ಕೊಂಡಿದ್ದಾನೆ.

೨೦. ಸಾವಿತ್ರಿ! ಹಿಂದೆ ಮಹೇಶ್ವರನು ನನ್ನನ್ನು ಕುರಿತು ಹೀಗೆಂದಿರುವನು. "ಪಾರ್ವತಿ! ನೀನು ನನ್ನಿಂದ ಸೌಖ್ಯವನ್ನು ಬಯಸುವುದಾದರೆ ನಾರದನ ಮಾತನ್ನು ನಂಬಬೇಡ."

ತತಃ ಪ್ರಭೃತಿ ನೈವಾಽಹಂ ಶ್ರದ್ಧಧೇಽಸ್ಯ ವಚಃ ಕ್ವಚಿತ್ ।
ತಸ್ಮಾದ್ಗಚ್ಛಾಮಹೇ ತತ್ರ ಯತ್ರ ತಿಷ್ಠತಿ ತೇ ಪತಿಃ ॥ ೨೧ ॥
ಸ್ವಯಂ ದೃಷ್ಟ್ವೈವ ವೃತ್ತಾಂತಂ ಕರ್ತವ್ಯಂ ಯತ್ಕ್ಷಮಂ ತತಃ ।
ನಾಽತ್ರಾಽಸ್ಯ ವಚನಾದದ್ಯ ಸ್ಥಾತವ್ಯಂ ತತ್ರ ಗಮ್ಯತಾಂ ॥ ೨೨ ॥

ಸೂತ ಉವಾಚ:—

ಗೌರ್ಯಾಸ್ತದ್ವಚನಂ ಶ್ರುತ್ವಾ ಸಾವಿತ್ರೀ ಹರ್ಷವರ್ಜಿತಾ ।
ಮಖಮಂಡಪಮುದ್ದಿಶ್ಯ ಪ್ರಸ್ಖಲಂತೀ ಪದೇ ಪದೇ ॥ ೨೩ ॥
ಪ್ರಜಗಾಮ ದ್ವಿಜಶ್ರೇಷ್ಠಾಃ ಶೂನ್ಯೇನ ಮನಸಾ ತದಾ ।
ಪ್ರತಿಭಾತಿ ತದಾ ಗೀತಂ ತಸ್ಯಾ ಮಧುರಮಪ್ಯಹೋ ॥ ೨೪ ॥
ಕರ್ಣಶೂಲಂ ಯಥಾಽಽಯಾತಮಸಕೃದ್ದ್ವಿಜಸತ್ತಮಾಃ ।
ವಂಧ್ಯವಾದ್ಯಂ ಯಥಾ ವಾದ್ಯಂ ಮೃದಂಗಾನಕಪೂರ್ವಕಂ ॥ ೨೫ ॥
ಪ್ರೇತಸಂದರ್ಶನಂ ಯದ್ವನ್ಮರ್ತ್ಯಂ ತತ್ರಾಸ ಮಹಾಸತೀ ।
ವೀಕ್ಷಿತುಂ ನ ಚ ಶಕ್ನೋತಿ ಗಚ್ಛಮಾನಾ ತದಾಮಖೇ ॥ ೨೬ ॥
ಶೃಂಗಾರಂ ಚ ತಥಾಂಗಾರಂ ಮನ್ಯತೇ ಸಾ ತನುಸ್ಥಿತಂ ।
ಬಾಷ್ಪಪೂರ್ಣೇಕ್ಷಣಾ ದೀನಾ ಪ್ರಜಗಾಮ ಮಹಾಸತೀ ॥ ೨೭ ॥
ತತಃ ಕೃಚ್ಛ್ರಾತ್ಸಮಾಸಾದ್ಯ ಸೈವಂ ತಂ ಯಜ್ಞಮಂಡಪಂ ।
ಕೃಚ್ಛ್ರಾತ್ಕಾರಾಗೃಹಂ ತದ್ವದ್ದುಷ್ಪ್ರೇಕ್ಷ್ಯಂ ದೃಕ್ಪಥಂ ಗತಂ ॥ ೨೮ ॥

---

೨೧. ಅದು ಮೊದಲ್ಗೊಂಡು ನಾನು ಒಂದು ವಿಷಯದಲ್ಲಿಯೂ ಇವನ ಮಾತನ್ನು ನಂಬುವುದಿಲ್ಲ. ಆದುದರಿಂದ ನಿನ್ನ ಪತಿಯೆಡೆಗೆ ಹೋಗೋಣ.

೨೨. ನೀನೇ ಅಲ್ಲಿಯ ಸಮಾಚಾರವನ್ನು ನೋಡಿ ಉಚಿತವಾದುದನ್ನು ಆಚರಿಸು. ಇವನ ಮಾತಿನಂತೆ ನೀನು ಇಲ್ಲಿರಬೇಡ, ಅಲ್ಲಿಗೆ ಹೋಗು.

೨೩–೨೫. ಸೂತನು ಹೇಳುತ್ತಾನೆ:—ಸಾವಿತ್ರಿಯು ಗೌರಿಯ ಆ ಮಾತನ್ನು ಕೇಳಿ ಹರ್ಷವಿಲ್ಲದವಳಾಗಿ ಪ್ರತಿ ಹೆಜ್ಜೆಯಲ್ಲಿಯೂ ಜಾರುತ್ತ ಶೂನ್ಯಮನಸ್ಸಿನಿಂದ ಯಜ್ಞಮಂಟಪಕ್ಕೆ ಹೋದಳು. ಆಗ ಅವಳಿಗೆ ಇಂಪಾದ ಸಂಗೀತವೂ ಕಿವಿಗೆ ಶೂಲದಂತಾಯಿತು. ಮೃದಂಗ ನಗಾರಿಯೇ ಮೊದಲಾದ ವಾದ್ಯಗಳು ಕಾರಾಗೃಹದ ವಾದ್ಯಗಳಂತಾದುವು.

೨೬. ಮಹಾ ಪತಿವ್ರತೆಯಾದ ಅವಳು ಯಜ್ಞಮಂಟಪಕ್ಕೆ ಹೋಗುತ್ತ ಮನುಷ್ಯನನ್ನು ಪ್ರೇತದಂತೆ ನೋಡಲು ಶಕ್ತಳಾಗಲಿಲ್ಲ.

೨೭–೨೮. ಶರೀರದಲ್ಲಿರುವ ಶೃಂಗಾರದ ಆಭರಣವನ್ನು ಬೆಂಕಿಯ ಕೆಂಡವೆಂದರಿತಳು. ಕಣ್ಣೀರನ್ನು ಸುರಿಸುತ್ತ ದೈನ್ಯದಿಂದ ಹೋದಳು. ಅವಳು ಹೀಗೆ ಕಷ್ಟದಿಂದ ಸೆರೆಮನೆಯಂತೆ ನೋಡಲಾಗದ ಯಜ್ಞಮಂಟಪವನ್ನು ಹೊಂದಿದಳು.

ಅಥ ದೃಷ್ಟ್ವಾ ತು ಸಂಪ್ರಾಪ್ತಾಂ ಸಾವಿತ್ರೀಂ ಯಜ್ಞಮಂಡಪಂ ।
ತತ್ಕ್ಷಣಾಚ್ಚ ಚತುರ್ವಕ್ತ್ರಃ ಸಂಸ್ಥಿತೋಽಧೋಮುಖೋ ಹ್ರಿಯಾ ॥೨೯॥
ತಥಾ ಶಂಭುಶ್ಚ ಶಕ್ರಶ್ಚ ವಾಸುದೇವಸ್ತಥೈವ ಚ ।
ಯೇ ಚಾಽನ್ಯೇ ವಿಬುಧಾಸ್ತತ್ರ ಸಂಸ್ಥಿತಾ ಯಜ್ಞಮಂಡಪೇ ॥ ೩೦ ॥
ತೇ ಚ ಬ್ರಾಹ್ಮಣಶಾರ್ದೂಲಾಸ್ತ್ಯಕ್ತ್ವಾ ವೇದಧ್ವನಿಂ ತತಃ ।
ಮೂಕೀಭಾವಂ ಗತಾಃ ಸರ್ವೇ ಭಯಸಂತ್ರಸ್ತಮಾನಸಾಃ ॥ ೩೧ ॥
ಅಥ ಸಂವೀಕ್ಷ್ಯ ಸಾವಿತ್ರೀ ಸಪತ್ನ್ಯಾ ಸಹಿತಂ ಪತಿಂ ।
ಕೋಪಸಂರಕ್ತನಯನಾ ಪರುಷಂ ವಾಕ್ಯಮಬ್ರವೀತ್ ॥ ೩೨ ॥

ಸಾವಿತ್ರ್ಯುವಾಚ :—

ಕಿಮೇತದ್ಯುಜ್ಯತೇ ಕರ್ತುಂ ತವ ವೃದ್ಧತಮಾಕೃತೇ ।
ಊಢವಾನಸಿ ಯತ್ಪತ್ನೀಮೇತಾಂ ಗೋಪಸಮುದ್ಭವಾಂ ॥ ೩೩ ॥
ಉಭಯೋಃ ಪಕ್ಷಯೋರ್ಯಸ್ಯಾಃ ಸ್ತ್ರೀಣಾಂ ಕಾಂತಾ ಯಥೇಪ್ಸಿತಾಃ ।
ಶೌಚಾಚಾರಪರಿತ್ಯಕ್ತಾ ಧರ್ಮಕೃತ್ಯ ಪರಾಙ್ಮುಖಾಃ ॥ ೩೪ ॥
ಯದನ್ವಯೇ ಜನಾಃ ಸರ್ವೇ ಪಶುಧರ್ಮರತೋತ್ಸವಾಃ ।
ಸೋದರ್ಯಾಂ ಭಗಿನೀಂ ತ್ಯಕ್ತ್ವಾ ಜನನೀಂ ಚ ತಥಾ ಪರಾಂ ॥ ೩೫ ॥
ತಸ್ಯಾಃ ಕುಲೇ ಪ್ರಸೇವಂತೇ ಸರ್ವಾಂ ನಾರೀಂ ಜನಾಃ ಪರಾಂ ।
ಯಥಾ ಹಿ ಪಶವೋಽಶ್ನಂತಿ ತೃಣಾನಿ ಜಲಪಾನಗಾಃ ॥ ೩೬ ॥

---

೨೯. ಬಳಿಕ ಬ್ರಹ್ಮನು ಯಜ್ಞಮಂಟಪಕ್ಕೆ ಬಂದ ಸಾವಿತ್ರಿಯನ್ನು ನೋಡಿ ಕೂಡಲೆ ಲಜ್ಜೆಯಿಂದ ತಲೆ ತಗ್ಗಿಸಿಕೊಂಡನು.

೩೦. ಹಾಗೆಯೇ ಆ ಯಜ್ಞಮಂಟಪದಲ್ಲಿದ್ದ ಮಹೇಶ್ವರ, ಇಂದ್ರ, ವಿಷ್ಣು ಮೊದಲಾದ ದೇವತೆಗಳೂ ಅಧೋಮುಖರಾದರು.

೩೧. ಆ ಬ್ರಾಹ್ಮಣೋತ್ತಮರು ಭಯಗೊಂಡ ಮನಸ್ಸುಳ್ಳವರಾಗಿ ವೇದ ಧ್ವನಿಯನ್ನು ತ್ಯಜಿಸಿ ಮೂಕರಾದರು.

೩೨. ಸಾವಿತ್ರಿಯು ಸವತಿಯಿಂದ ಸಹಿತನಾದ ಪತಿಯನ್ನು ನೋಡಿ ಕೋಪದಿಂದ ಕೆಂಪಾದ ಕಣ್ಣುಗಳುಳ್ಳವಳಾಗಿ ಹೀಗೆ ಕಠಿನವಾದ ಮಾತನ್ನಾಡಿದಳು.

೩೩. ಸಾವಿತ್ರಿಯು ಹೇಳುತ್ತಾಳೆ:—ಅತಿ ವೃದ್ಧನಾದ ಬ್ರಹ್ಮನೆ! ನೀನು ಗೋಪಕನ್ಯೆಯನ್ನು ಮದುವೆ ಮಾಡಿಕೊಂಡಿರುವುದುಚಿತವೆ?

೩೪. ಇವಳ ತಂದೆ ತಾಯಿಗಳ ಕಡೆಯ ಸ್ತ್ರೀಯರ ಪ್ರಿಯರು ಶೌಚಾಚಾರ ಭ್ರಷ್ಟರೂ, ಧರ್ಮಕಾರ್ಯದಲ್ಲಿ ಪರಾಙ್ಮುಖರೂ ಆಗಿದ್ದಾರೆ.

೩೫–೩೬. ಇವಳ ವಂಶದ ಜನರೆಲ್ಲ ಪಶುಗಳಂತೆ ರತಿಯಲ್ಲಿ ನಿರತರಾಗಿ ಸಹೋದರಿಯರು, ತಾಯಿಯರನ್ನುಳಿದು ಇತರ ಎಲ್ಲ ಸ್ತ್ರೀಯರನ್ನೂ

ವಿಣ್ಮೂತ್ರಂ ಕೇವಲಂ ಚಕ್ರುರ್ಭಾರೋದ್ವಹನಮೇವ ಚ ।
ತದ್ವದಸ್ಯಾಃ ಕುಲಂ ಸರ್ವಂ ತಕ್ರಮಶ್ನಾತಿ ಕೇವಲಂ ॥ ೩೭ ॥
ಕೃತ್ವಾ ಮೂತ್ರಪುರೀಷಂ ಚ ಜನ್ಮಭೋಗವಿವರ್ಜಿತಂ ।
ನಾಽನ್ಯಜ್ಜಾನಾತಿ ಕರ್ತವ್ಯಂ ಧರ್ಮಂ ಸ್ವೋದರಸಂಶ್ರಯಾತ್ ॥ ೩೮ ॥
ಅಂತ್ಯಜಾ ಅಪಿ ನೋ ಕರ್ಮ ಯತ್ಕುರ್ವಂತಿ ವಿಗರ್ಹಿತಂ ।
ಆಭೀರಾಸ್ತತ್ರ ಕುರ್ವಂತಿ ತತ್ಕಿಮೇತತ್ತ್ವಯಾ ಕೃತಂ ॥ ೩೯ ॥
ಅವಶ್ಯಂ ಯದಿ ತೇ ಕಾರ್ಯಂ ಭಾರ್ಯಯಾ ಪರಯಾ ಮಖೇ ।
ತ್ವಯಾ ವಾ ಬ್ರಾಹ್ಮಣೀ ಕಾಽಪಿ ಪ್ರಖ್ಯಾತಾ ಭುವನತ್ರಯೇ ॥ ೪೦ ॥
ನೋಢಾ ವಿಧೇ ವೃಥಾ ಮುಂಡ ನೂನಂ ಧೂರ್ತೋಽಸಿ ಮೇ ಮತಃ ।
ಯತ್ತ್ವಯಾ ಶೌಚಸಂತ್ಯಕ್ತಾ ಕನ್ಯಾಭಾವಪ್ರದೂಷಿತಾ ॥ ೪೧ ॥
ಪ್ರಭುಕ್ತಾ ಬಹುಭಿಃ ಪೂರ್ವಂ ತಥಾ ಗೋಪಕುಮಾರಿಕಾ ।
ಏಷಾ ಪ್ರಾಪ್ತಾ ಸುಪಾಪಾಢ್ಯಾ ವೇಶ್ಯಾಜನಶತಾಧಿಕಾ ॥ ೪೨ ॥
ಅಂತ್ಯಜಾತಾ ತಥಾ ಕನ್ಯಾ ಕ್ಷತಯೋನಿಃ ಪ್ರಜಾಯತೇ ।
ತಥಾ ಗೋಪಕುಮಾರೀ ಚ ಕಾಚಿತ್ತಾದೃಕ್ಪ್ರಜಾಯತೇ ॥ ೪೩ ॥

---

ಉಪಭೋಗಿಸುವರು. ಪಶುಗಳು ಹುಲ್ಲನ್ನು ತಿಂದು ನೀರನ್ನು ಕುಡಿದು ಮಲ ಮೂತ್ರಗಳನ್ನು ವಿಸರ್ಜಿಸುತ್ತ ಭಾರವನ್ನು ಹೊರುವಂತೆ ಇವಳ ವಂಶದವರೆಲ್ಲ ಮಜ್ಜಿಗೆಯನ್ನು ಮಾತ್ರ ಕುಡಿಯುತ್ತಾ ಮನುಷ್ಯಜನ್ಮದ ಭೋಗವಿಲ್ಲದೆ ಮಲ ಮೂತ್ರವಿಸರ್ಜನೆಯಲ್ಲಿಯೇ ಆಸಕ್ತರಾಗಿರುತ್ತಾರೆ. ತಮ್ಮ ಹೊಟ್ಟೆಯನ್ನು ತುಂಬಿ ಕೊಳ್ಳುವುದನ್ನು ಬಿಟ್ಟು ಬೇರೆ ಯಾವ ಧರ್ಮವನ್ನೂ ತಿಳಿಯುವುದಿಲ್ಲ.

೩೯. ಈ ಗೊಲ್ಲರು ಚಂಡಾಲರೂ ಮಾಡದ ನಿಂದ್ಯವಾದ ಕಾರ್ಯಗಳನ್ನು ಮಾಡುತ್ತಾರೆ. ನೀನು ಎಂತಹ ಕೆಲಸವನ್ನು ಮಾಡಿದೆ?

೪೦–೪೨. ಮುಂಡನವನ್ನು ಮಾಡಿಸಿಕೊಂಡು ದೀಕ್ಷಾಬದ್ಧನಾಗಿರುವ ಬ್ರಹ್ಮನೆ! ನಿನಗೆ ಯಜ್ಞದಲ್ಲಿ ಉತ್ತಮಳಾದ ಪತ್ನಿಯು ಬೇಕಾಗಿದ್ದಿದ್ದರೆ ಮೂರು ಲೋಕಗಳಲ್ಲಿ ವಿಖ್ಯಾತಳಾದ ಯಾವಳಾದರೂ ಒಬ್ಬ ಬ್ರಾಹ್ಮಣ ಸ್ತ್ರೀಯನ್ನು ಏಕೆ ಮದುವೆ ಮಾಡಿಕೊಳ್ಳಲಿಲ್ಲ. ನೀನು ನಿಶ್ಚಯವಾಗಿಯೂ ವಂಚಕನೆಂದು ತಿಳಿಯುತ್ತೇನೆ. ಶೌಚವಿಲ್ಲದವಳೂ, ಕನ್ಯಾತ್ವದಲ್ಲಿ ದುಷ್ಟಳೂ, ಮೊದಲೇ ಅನೇಕರಿಂದ ಅನುಭುಕ್ತಳೂ, ಪಾಪಿಷ್ಠಳೂ, ನೂರು ಮಂದಿ ವೇಶ್ಯೆಯರಿಗಿಂತ ಅಧಿಕಳೂ ಆದ ಗೋಪಕನ್ಯೆಯನ್ನು ಮದುವೆ ಮಾಡಿಕೊಂಡಿರುವೆಯಲ್ಲ.

೪೩. ಚಂಡಾಲಕನ್ಯೆಯಂತೆ ಗೋಪಕನ್ಯೆಯೂ ಮೊದಲೇ ಇತರರಿಂದ ಉಪಭುಕ್ತಳಾಗುವಳು.

ಮಾತೃಕಂ ಪೈತೃಕಂ ವಂಶಂ ಶ್ವಾಶುರಂ ಚ ಪ್ರಪಾತಯೇತ್ ।
ತಸ್ಮಾದೇತೇನ ಕೃತ್ಯೇನ ಗರ್ಹಿತೇನ ಧರಾತಲೇ ॥ ೪೪ ॥
ನ ತ್ವಂ ಪ್ರಾಪ್ಸ್ಯಸಿ ತಾಂ ಪೂಜಾಂ ತಥಾಽನ್ಯೇ ವಿಬುಧೋತ್ತಮಾಃ ।
ಅನೇನ ಕರ್ಮಣಾಚೈವ ಯದಿ ಮೇಽಸ್ತಿ ಋತಂ ಕ್ವಚಿತ್ ॥ ೪೫ ॥
ಪೂಜಾಂ ಯೇ ಚ ಕರಿಷ್ಯಂತಿ ಭವಿಷ್ಯಂತಿ ಚ ನಿರ್ಧನಾಃ ।
ಕಥಂ ನ ಲಜ್ಜಿತೋಽಸಿ ತ್ವಮೇತತ್ಕುರ್ವನ್ವಿಗರ್ಹಿತಂ ॥ ೪೬ ॥
ಪುತ್ರಾಣಾಮಥ ಪೌತ್ರಾಣಾಮನ್ಯೇಷಾಂ ಚ ದಿವೌಕಸಾಂ ।
ಅಯೋಗ್ಯಂ ಚೈವ ವಿಪ್ರಾಣಾಂ ಯದೇತತ್ಕೃತವಾನಸಿ ॥ ೪೭ ॥
ಅಥವಾ ನೈಷ ದೋಷಸ್ತೇ ನ ಕಾಮವಶಗಾ ನರಾಃ ।
ಲಜ್ಜಂತಿ ಚ ವಿಜಾನಂತಿ ಕೃತ್ಯಾಽಕೃತ್ಯಂ ಶುಭಾಽಶುಭಂ ॥ ೪೮ ॥
ಅಕೃತ್ಯಂ ಮನ್ಯತೇ ಕೃತ್ಯಂ ಮಿತ್ರಂ ಶತ್ರುಂ ಚ ಮನ್ಯತೇ ।
ಶತ್ರುಂ ಚ ಮನ್ಯತೇ ಮಿತ್ರಂ ಜನಃ ಕಾಮವಶಂ ಗತಃ ॥ ೪೯ ॥
ದ್ಯೂತಕಾರೇ ಯಥಾ ಸತ್ಯಂ ಯಥಾ ಚೌರೇ ಚ ಸೌಹೃದಂ ।
ಯಥಾ ನೃಪಸ್ಯ ನೋ ಮಿತ್ರಂ ತಥಾ ಲಜ್ಜಾ ನ ಕಾಮಿನಾಂ ॥ ೫೦ ॥

---

೪೪. ಭೂಮಿಯಲ್ಲಿ ಇಂತಹ ನೀಚಕೃತ್ಯದಿಂದ ತಾಯಿ, ತಂದೆ, ಮಾವಂದಿರ ವಂಶವು ಪತಿತವಾಗುವುದು.

೪೫. ನನ್ನಲ್ಲಿ ಸ್ವಲ್ಪವಾದರೂ ಸತ್ಯವಿದ್ದರೆ ನೀನೂ ಇತರ ದೇವತೆಗಳೂ ಈ ನೀಚಕಾರ್ಯವನ್ನು ಮಾಡಿದ್ದರಿಂದ ಪೂಜೆಯನ್ನು ಹೊಂದುವುದಿಲ್ಲ.

೪೬. ನಿನ್ನನ್ನು ಪೂಜಿಸಿದವರು ನಿರ್ಧನರಾಗುವರು. ನೀನು ಈ ನೀಚ ಕಾರ್ಯವನ್ನು ಮಾಡಿ ಏಕೆ ಲಜ್ಜೆಗೊಳ್ಳಲಿಲ್ಲ?

೪೭. ಪುತ್ರರು, ಪೌತ್ರರು, ಇತರ ದೇವತೆಗಳು, ಬ್ರಾಹ್ಮಣರು ಇವರಿಗೆ ಅನುಚಿತವಾದ ಈ ಕಾರ್ಯವನ್ನು ಏಕೆ ಮಾಡಿರುವೆ?

೪೮. ಅಥವಾ ಇದು ನಿನ್ನ ತಪ್ಪಲ್ಲ. ಕಾಮಾಧೀನರಾದ ನರರಿಗೆ ನಾಚಿಕೆಯಿರುವುದಿಲ್ಲ. ಅವರು ಕೃತ್ಯಾಕೃತ್ಯಗಳನ್ನೂ, ಶುಭಾಶುಭಗಳನ್ನೂ ತಿಳಿಯುವುದಿಲ್ಲ.

೪೯. ಕಾಮಪರವಶರು ಅಕಾರ್ಯವನ್ನು ಕಾರ್ಯವನ್ನಾಗಿಯೂ, ಮಿತ್ರನನ್ನು ಶತ್ರುವನ್ನಾಗಿಯೂ, ಶತ್ರುವನ್ನು ಮಿತ್ರನನ್ನಾಗಿಯೂ ತಿಳಿಯುತ್ತಾರೆ.

೫೦. ಜೂಜಾಡುವವನಲ್ಲಿ ಸತ್ಯವೂ, ಕಳ್ಳನಲ್ಲಿ ಸ್ನೇಹವೂ, ರಾಜನಿಗೆ ಮಿತ್ರನೂ ಇಲ್ಲದಿರುವಂತೆ ಕಾಮಿಗಳಿಗೆ ನಾಚಿಕೆಯಿರುವುದಿಲ್ಲ.

ಅಪಿ ಸ್ಯಾಚ್ಛೀತಲೋ ವಹ್ನಿಶ್ಚಂದ್ರಮಾ ದಹನಾತ್ಮಕಃ ।
ಕ್ಷಾರಾಬ್ಧಿರಪಿ ಮಿಷ್ಟಃ ಸ್ಯಾನ್ನ ಕಾಮೀ ಲಜ್ಜತೇ ಧ್ರುವಂ ॥ ೫೧ ॥
ನ ಮೇ ಸ್ಯಾದ್ದುಃಖಮೇತದ್ಧಿ ಯತ್ಸಾಪತ್ನ್ಯಮುಪಸ್ಥಿತಂ ।
ಸಹಸ್ರಮಪಿ ನಾರೀಣಾಂ ಪುರುಷಾಣಾಂ ಯಥಾ ಭವೇತ್ ॥ ೫೨ ॥
ಕುಲೀನಾನಾಂ ಚ ಶುದ್ಧಾನಾಂ ಸ್ವಜಾತ್ಯಾನಾಂ ವಿಶೇಷತಃ ।
ತ್ವಂ ಕುರುಷ್ವ ಪರಾಣಾಂ ಚ ಯದಿ ಕಾಮವಶಂ ಗತಃ ॥ ೫೩ ॥
ಏತತ್ಪುನರ್ಮಹದ್ದುಃಖಂ ಯದಾಭೀರೀವಿಗರ್ಹಿತಾ ।
ವೇಶ್ಯೇವ ನಷ್ಟಚಾರಿತ್ರಾ ತ್ವಯೋಢಾ ಬಹುಭರ್ತೃಕಾ ॥ ೫೪ ॥
ತಸ್ಮಾದಹಂ ಪ್ರಯಾಸ್ಯಾಮಿ ಯತ್ರ ನಾಮ ನ ತೇ ವಿಧೇ ।
ಶ್ರೂಯತೇ ಕಾಮಲುಬ್ಧಸ್ಯ ಹ್ರಿಯಾ ಪರಿಹೃತಸ್ಯ ಚ ॥ ೫೫ ॥
ಅಹಂ ವಿಡಂಬಿತಾ ಯಸ್ಮಾದತ್ರಾನೀಯ ತ್ವಯಾ ವಿಧೇ ।
ಪುರತೋ ದೇವ ಪತ್ನೀನಾಂ ದೇವಾನಾಂ ಚ ದ್ವಿಜನ್ಮನಾಂ ।
ತಸ್ಮಾತ್ಪೂಜಾಂ ನ ತೇ ಕಶ್ಚಿತ್ಸಾಂಪ್ರತಂ ಪ್ರಕರಿಷ್ಯತಿ ॥ ೫೬ ॥
ಅದ್ಯ ಪ್ರಭೃತಿ ಯಃ ಪೂಜಾಂ ಮಂತ್ರಪೂಜಾಂ ಕರಿಷ್ಯತಿ ।
ತವ ಮರ್ತ್ಯೋ ಧರಾಪೃಷ್ಠೇ ಯಥಾಽನ್ಯೇಷಾಂ ದಿವೌಕಸಾಂ ॥ ೫೭ ॥

---

೫೧. ಬೆಂಕಿಯು ತಣ್ಣಗೂ, ಚಂದ್ರನು ಬೆಂಕಿಯಂತೆಯೂ, ಲವಣ ಸಾಗರವು ಮಧುರವೂ ಆದೀತು. ಆದರೆ ಕಾಮಿಯು ನಿಶ್ಚಯವಾಗಿಯೂ ನಾಚಿಕೆಗೊಳ್ಳುವುದಿಲ್ಲ.

೫೨–೫೩. ನನಗೆ ಸವತಿಯೊಬ್ಬಳಾದಳೆಂದು ದುಃಖವಿಲ್ಲ. ಪುರುಷರಿಗೆ ಕುಲೀನರೂ, ಶುದ್ಧರೂ, ತನ್ನ ಜಾತಿಯವರೂ ಆದ ಸಾವಿರ ಮಂದಿ ಪತ್ನಿಯರಾಗಬಹುದು. ನೀನು ಕಾಮಾಧೀನನಾಗಿದ್ದರೆ ಇತರ ಅನೇಕ ಮಂದಿಯನ್ನು ಪತ್ನಿಯರನ್ನಾಗಿ ಮಾಡಿಕೊ.

೫೪. ನೀನು ವೇಶ್ಯೆಯಂತೆ ನಿಂದ್ಯಳೂ, ಚಾರಿತ್ರಬಾಹ್ಯಳೂ, ಅನೇಕ ಮಂದಿ ಗಂಡಂದಿರುಳ್ಳವಳೂ ಆದ ಗೊಲ್ಲರ ಕನ್ಯೆಯನ್ನು ವಿವಾಹ ಮಾಡಿಕೊಂಡದ್ದರಿಂದ ಬಹಳ ದುಃಖವುಂಟಾಗಿದೆ.

೫೫. ವಿಧಿಯೆ! ಆದುದರಿಂದ ನಾನು ಕಾಮಾಂಧನೂ, ಲಜ್ಜೆಯಿಲ್ಲದವನೂ ಆದ ನಿನ್ನ ನಾಮವು ಕೇಳದಿರುವ ಸ್ಥಳಕ್ಕೆ ಹೋಗುವೆನು.

೫೬. ವಿಧಿಯೆ! ನೀನು ನನ್ನನ್ನು ಇಲ್ಲಿಗೆ ಕರೆಯಿಸಿ ದೇವತೆಗಳು, ದೇವ ಪತ್ನಿಯರು, ಬ್ರಾಹ್ಮಣರು ಇವರ ಮುಂದೆ ಹಾಸ್ಯಾಸ್ಪದಳನ್ನಾಗಿ ಮಾಡಿದ್ದರಿಂದ ಈಗ ಒಬ್ಬನೂ ನಿನ್ನನ್ನು ಪೂಜಿಸುವುದಿಲ್ಲ.

೫೭–೫೮. ಇದು ಮೊದಲ್ಗೊಂಡು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರಲ್ಲಿ ಯಾರಾದರೂ ಮನೆಯಲ್ಲಿ ನಿನಗೆ ಇತರ ದೇವತೆಗಳಿಗೆಂತೋ ಅಂತು

ಭವಿಷ್ಯತಿ ಚ ತದ್ವಂಶೋ ದರಿದ್ರೋ ದುಃಖಸಂಯುತಃ ।
ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ವೈಶ್ಯಃ ಶೂದ್ರೋಽಪಿ ಚಾಲಯೇ ॥ ೫೮ ॥
ಏಷಾಭೀರಸುತಾ ಯಸ್ಮಾನ್ಮಮ ಸ್ಥಾನೇ ವಿಗರ್ಹಿತಾ ।
ಭವಿಷ್ಯತಿ ನ ಸಂತಾನಸ್ತಸ್ಮಾದ್ವಾಕ್ಯಾನ್ಮಮೈವ ಹಿ ॥ ೫೯ ॥
ನ ಪೂಜಾಂ ಲಪ್ಸ್ಯತೇ ಲೋಕೇ ಯಥಾಽನ್ಯಾ ದೇವಯೋಷಿತಃ ॥ ೬೦ ॥
ಕರಿಷ್ಯತಿ ಚ ಯಾ ನಾರೀ ಪೂಜಾ ಯಸ್ಯಾ ಅಪಿ ಕ್ವಚಿತ್ ।
ಸಾ ಭವಿಷ್ಯತಿ ದುಃಖಾಢ್ಯಾ ವಂಧ್ಯಾ ದೌರ್ಭಾಗ್ಯಸಂಯುತಾ ॥ ೬೧ ॥
ಪಾಪಿಷ್ಠಾ ನಷ್ಟಚಾರಿತ್ರಾ ಯಥೈಷಾ ಪಂಚಭರ್ತೃಕಾ ।
ವಿಖ್ಯಾತಿಂ ಯಾಸ್ಯತೇ ಲೋಕೇ ಯಥಾ ಚಾಽಸೌ ತಥೈವ ಸಾ ॥ ೬೨ ॥
ಏತಸ್ಯಾ ಅನ್ವಯಃ ಪಾಪೋ ಭವಿಷ್ಯತಿ ನಿಶಾಚರ ।
ಸತ್ಯಶೌಚಪರಿತ್ಯಕ್ತಾಃ ಶಿಷ್ಟಸಂಗ ವಿವರ್ಜಿತಾಃ ॥ ೬೩ ॥
ಅನಿಕೇತಾ ಭವಿಷ್ಯಂತಿ ವಂಶೇಽಸ್ಯಾ ಗೋಪ್ರಜೀವಿನಃ ।
ಏವಂ ಶಪ್ತ್ವಾ ವಿಧಿಂ ಸಾಧ್ವೀ ಗಾಯತ್ರೀಂ ಚ ತತಃ ಪರಂ ॥ ೬೪ ॥
ತತೋ ದೇವಗಣಾನ್ ಸರ್ವಾಂಛಶಾಪ ಚ ತದಾ ಸತೀ ।
ಭೋ ಭೋಃ ಶಕ್ರ ತ್ವಯಾಽಽನೀತಾ ಯದೇಷಾ ಪಂಚಭರ್ತೃಕಾ ॥ ೬೫ ॥
ತದಾಪ್ನುಹಿ ಫಲಂ ಸಮ್ಯಕ್ಶುಭಂ ಕೃತ್ವಾ ಗುರೋರಿದಂ ।
ತ್ವಂ ಶತ್ರುಭಿರ್ಜಿತೋ ಯುದ್ಧೇ ಬಂಧನಂ ಸಮವಾಪ್ಸ್ಯಸಿ ॥ ೬೬ ॥

---

ಮಂತ್ರಪೂರ್ವಕ ಪೂಜೆಯನ್ನೆಸಗಿದರೆ ಅವನ ವಂಶವು ದರಿದ್ರವೂ, ದುಃಖವುಳ್ಳುದೂ ಆಗುವುದು.

೫೯. ನಿಂದ್ಯಳಾದ ಈ ಗೊಲ್ಲರ ಹುಡುಗಿಯು ನನ್ನ ಸ್ಥಾನದಲ್ಲಿ ಸ್ಥಾಪಿತಳಾದ್ದರಿಂದ ಇವಳಿಗೆ ನನ್ನ ಮಾತಿನಿಂದ ಸಂತತಿಯಾಗುವುದಿಲ್ಲ.

೬೦. ಇತರ ದೇವಾಂಗನೆಯರಂತೆ ಲೋಕದಲ್ಲಿ ಪೂಜೆಯನ್ನು ಹೊಂದುವುದಿಲ್ಲ.

೬೧–೬೨. ಇವಳನ್ನು ಪೂಜಿಸಿದ ನಾರಿಯು ಇವಳಂತೆಯೇ ಲೋಕದಲ್ಲಿ ದುಃಖಯುಕ್ತಳೂ, ಬಂಜೆಯೂ, ದೌರ್ಭಾಗ್ಯದಿಂದ ಕೂಡಿದವಳೂ, ಪಾಪಿಷ್ಠಳೂ, ಚಾರಿತ್ರಹೀನಳೂ ಆಗಿ ಪಂಚಪತಿಗಳುಳ್ಳವಳೆಂದು ವಿಖ್ಯಾತಳಾಗುವಳು.

೬೩–೬೮. ಇವಳ ವಂಶವು ಪಾಪವುಳ್ಳ ರಾಕ್ಷಸವಂಶವಾಗುವುದು. ಇವಳ ವಂಶದ ಗೊಲ್ಲರು ಸತ್ಯ, ಶೌಚವಿಲ್ಲದವರೂ, ಶಿಷ್ಟಸಹವಾಸರಹಿತರೂ, ಮನೆಯಿಲ್ಲದವರೂ ಆಗುವರು. ಸಾವಿತ್ರಿಯು ಹೀಗೆ ಬ್ರಹ್ಮನನ್ನೂ, ಪತಿವ್ರತೆಯಾದ ಗಾಯತ್ರಿಯನ್ನೂ ಶಪಿಸಿ ಸಮಸ್ತ ದೇವತೆಗಳನ್ನೂ ಶಪಿಸಿದಳು. ಎಲೈ ಮಹೇಂದ್ರನೇ! ನೀನು ಈ ಪಂಚಪತಿಯುಳ್ಳ ಗೊಲ್ಲರ ಕನ್ಯೆಯನ್ನು ಕರೆತಂದು ಗುರುವಿಗೆ ಈ ಶುಭ

ಕಾರಾಗಾರೇ ಚಿರಂ ಕಾಲಂ ಸಂಗಮಿಷ್ಯತ್ಯಸಂಶಯಂ ।
ವಾಸುದೇವ ತ್ವಯಾ ಯಸ್ಮಾದೇಷಾ ವೈ ಪಂಚಭರ್ತೃಕಾ ॥ ೬೭ ॥
ಅನುಮೋದಿತಾ ವಿಧೇಃ ಪೂರ್ವಂ ತಸ್ಮಾಚ್ಛಾಪ್ಸ್ಯಸ್ಯಸಂಶಯಂ ।
ತ್ವಂ ಚಾಽಪಿ ಪರಭೃತ್ಯತ್ವಂ ಸಂಪ್ರಾಪ್ಸ್ಯಸಿ ಸುದುರ್ಮತೇ ॥ ೬೮ ॥
ಸಮೀಪಸ್ಥೋಽಪಿ ರುದ್ರತ್ವಂ ಕರ್ಮೈತದ್ಯದುಪೇಕ್ಷಸೇ ।
ನಿಷೇಧಯಸಿ ನೋ ಮೂಢ ತಸ್ಮಾಚ್ಛೃಣು ವಚೋ ಮಮ ॥ ೬೯ ॥
ಜೀವಮಾನಸ್ಯ ಕಾಂತಸ್ಯ ಮಯಾ ತದ್ವಿರಹೋದ್ಭವಂ ।
ಸಂಸೇವಿತಂ ಮೃತಾಯಾಂ ತೇ ದಯಿತಾಯಾಂ ಭವಿಷ್ಯತಿ ॥ ೭೦ ॥
ಯತ್ರ ಯಜ್ಞೇ ಪ್ರವಿಷ್ಟೇಯಂ ಗರ್ಹಿತಾ ಪಂಚಭರ್ತೃಕಾ ।
ಭವಾನಪಿ ಹವಿರ್ವಹ್ನೇ ಯತ್ತ್ವಂ ಗೃಹ್ಣಾಸಿ ಲೌಲ್ಯತಃ ॥ ೭೧ ॥
ತಥಾಽನ್ಯೇಷು ಚ ಯಜ್ಞೇಷು ಸಮ್ಯಕ್ಛಂಕಾವಿವರ್ಜಿತಃ ।
ತಸ್ಮಾದ್ದುಷ್ಟಸಮಾಚಾರ ಸರ್ವಭಕ್ಷೋ ಭವಿಷ್ಯಸಿ ॥ ೭೨ ॥
ಸ್ವಧಯಾ ಸ್ವಾಹಯಾ ಸಾರ್ಧಂ ಸದಾ ದುಃಖಸಮನ್ವಿತಃ ।
ನೈವಾಪ್ಸ್ಯಸಿ ಪರಂ ಸೌಖ್ಯಂ ಸರ್ವಕಾಲಂ ಯಥಾ ಪುರಾ ॥ ೭೩ ॥
ಏತೇ ಚ ಬ್ರಾಹ್ಮಣಾಃ ಸರ್ವೇ ಲೋಭೋಪಹತಚೇತಸಃ ।
ಹೋಮಂ ಪ್ರಕುರ್ವತೇ ಯೇ ಚ ಮಖೇ ಚಾಽಪಿ ವಿಗರ್ಹಿತೇ ॥ ೭೪ ॥

---

ಸೇವೆಯನ್ನು ಮಾಡಿದ್ದರಿಂದ ಶತ್ರುಗಳಿಂದ ಪರಾಜಿತನಾಗಿ ಬಹುಕಾಲ ಸೆರೆಮನೆಯಲ್ಲಿ ಬಂಧನವನ್ನು ಹೊಂದುವೆ. ನಾರಾಯಣ! ನೀನು ಗೊಲ್ಲರ ಕನ್ಯೆಯನ್ನು ಮದುವೆ ಮಾಡಿಕೊಳ್ಳಲು ಅನುಮೋದಿಸಿದ ಕಾರಣ ನಿನಗೆ ಶಾಪವನ್ನೀಯುವೆನು. ದುರುಳ! ನೀನೂ ಪರರ ಸೇವಕನಾಗುವೆ.

೬೯–೭೦. ರುದ್ರ! ಮೂಢನಾದ ನೀನು ಹತ್ತಿರದಲ್ಲಿದ್ದರೂ ಈ ಕಾರ್ಯವನ್ನು ಉಪೇಕ್ಷಿಸಿ ತಡೆಯದೆ ಇರುವುದರಿಂದ ನನ್ನ ಮಾತನ್ನು ಕೇಳು. ಪತಿಯು ಬದುಕಿರುವಾಗಲೇ ನಾನು ಅವನ ವಿರಹದಿಂದುಂಟಾದ ದುಃಖವನ್ನನುಭವಿಸಿದೆನು. ನೀನು ಹೀಗೆಯೇ ನಿನ್ನ ಪತ್ನಿಯು ಮೃತಳಾದಮೇಲೆ ದುಃಖಪಡು.

೭೧–೭೨. ಅಗ್ನಿಯೆ! ನಿಂದ್ಯಳಾದ ಗೊಲ್ಲತಿಯು ಯಜ್ಞವನ್ನು ಪ್ರವೇಶ ಮಾಡಿದರೂ ನೀನು ಆಶೆಯಿಂದ ಇತರ ಯಜ್ಞಗಳಲ್ಲಿಯೂ ಶಂಕೆಯಿಲ್ಲದೆ ಹವಿಸ್ಸನ್ನು ಸ್ವೀಕರಿಸುತ್ತಿರುವುದರಿಂದ ಎಲೈ ದುಷ್ಟನೆ! ನೀನು ಸರ್ವಭಕ್ಷನಾಗುವೆ.

೭೩. ಮತ್ತು ಸ್ವಧಾ ಸ್ವಾಹೆಯರೊಡನೆ ಯಾವಾಗಲೂ ದುಃಖವುಳ್ಳವನಾಗಿ ಮೊದಲಿನಂತೆ ಸೌಖ್ಯವನ್ನು ಪಡೆಯದೆ ಹೋಗು.

೭೪–೭೬. ಈ ಬ್ರಾಹ್ಮಣರೆಲ್ಲ ಆಶೆಯುಳ್ಳವರಾಗಿ ನಿಂದ್ಯವಾದ ಯಜ್ಞದಲ್ಲಿ ಹೋಮವನ್ನು ಮಾಡುತ್ತಿರುವುದರಿಂದಲೂ, ಇಲ್ಲಿ ಪ್ರವೇಶಿಸಿದ ಗೊಲ್ಲತಿಯನ್ನು

ವಿತ್ತಲೋಭೇನ ಯತ್ತ್ವೈಷಾ ನಿವಿಷ್ಟಾ ಪಂಚಭರ್ತೃಕಾ ।
ತಥಾ ಚ ವಚನಂ ಪ್ರೋಕ್ತಂ ಬ್ರಾಹ್ಮಣೀಯಂ ಭವಿಷ್ಯತಿ ॥ ೭೫ ॥
ದರಿದ್ರೋಪಹತಾಸ್ತಸ್ಮಾ ದ್ವೃಷಲೀಪತಯಸ್ತಥಾ ।
ವೇದ ವಿಕ್ರಯಕರ್ತಾರೋ ಭವಿಷ್ಯಥ ನ ಸಂಶಯಃ ॥ ೭೬ ॥
ಭೋ ಭೋಃ ವಿತ್ತಪತೇ ವಿತ್ತಂ ದದಾಸಿ ಮಖವಿಪ್ಲವೇ ।
ತಸ್ಮಾದ್ಯತ್ತೇಽಖಿಲಂ ವಿತ್ತಮಭೋಗ್ಯಂ ಸಂಭವಿಷ್ಯತಿ ॥ ೭೭ ॥
ತಥಾ ದೇವಗಣಾಃ ಸರ್ವೇ ಸಾಹಾಯ್ಯಂ ಯೇ ಸಮಾಶ್ರಿತಾಃ ।
ಅತ್ರ ಕುರ್ವಂತಿ ದೋಷಾಢ್ಯೇ ಯಜ್ಞೇ ಸ್ವೈ ಪಾಂಚಭರ್ತೃಕೇ ॥ ೭೮ ॥
ಸಂತಾನೇನ ಪರಿತ್ಯಕ್ತಾಸ್ತೇ ಭವಿಷ್ಯಂತಿ ಸಾಂಪ್ರತಂ ।
ದಾನವೈಶ್ಚ ಪರಾಭೂತಾ ದುಃಖಂ ಪ್ರಾಪ್ಸ್ಯಂತಿ ಕೇವಲಂ ॥ ೭೯ ॥
ಏತಸ್ಯಾಃ ಪಾರ್ಶ್ವತಶ್ಚಾಽನ್ಯಾಶ್ಚತಸ್ರೋ ಯಾ ವ್ಯವಸ್ಥಿತಾಃ ।
ಆಭೀರೀತಿ ಸಪತ್ನೀತಿ ಪ್ರೋಕ್ತಾ ಧ್ಯಾನಪ್ರಹರ್ಷಿತಾಃ ॥ ೮೦ ॥
ಮಮ ದ್ವೇಷಪರಾ ನಿತ್ಯಂ ಶಿವದೂತೀ ಪುರಸ್ಸರಾಃ ।
ತಾಸಾಂ ಪರಸ್ಪರಂ ಸಂಗಃ ಕದಾಚಿನ್ನ ಭವಿಷ್ಯತಿ ॥ ೮೧ ॥
ನಾಽನ್ಯೇನಾಽತ್ರ ನರೇಣಾಽಪಿ ದೃಷ್ಟಿಮಾತ್ರಮಪಿ ಕ್ಷಿತೌ ।
ಪರ್ವತಾಗ್ರೇಷು ದುರ್ಗೇಷು ಚಾಗಮ್ಯೇಷು ಚ ದೇಹಿನಾಂ ।
ವಾಸಃ ಸಂಪತ್ಸ್ಯತೇ ನಿತ್ಯಂ ಸರ್ವಭೋಗವಿವರ್ಜಿತಃ ॥ ೮೨ ॥

---

ಬ್ರಾಹ್ಮಣಿಯೆಂದು ದ್ರವ್ಯಾಶೆಯಿಂದ ಹೇಳಿದ್ದರಿಂದಲೂ, ಬಡವರೂ, ಶೂದ್ರ ಸ್ತ್ರೀಯರ ಗಂಡಂದಿರೂ, ವೇದವನ್ನು ಮಾರುವವರೂ ಆಗುವರು.

೭೭. ಕುಬೇರ! ನೀನು ಈ ದುಷ್ಟಯಜ್ಞಕ್ಕೆ ವಿತ್ತವನ್ನಿತ್ತುದರಿಂದ ನಿನ್ನ ಎಲ್ಲ ದ್ರವ್ಯವೂ ಅಭೋಗ್ಯವಾಗಲಿ.

೭೮–೭೯. ಈ ಗೊಲ್ಲತಿಯ ಪತಿಯ ದುಷ್ಟ ಯಜ್ಞದಲ್ಲಿ ಸಹಾಯ ಮಾಡಿದ ದೇವತೆಗಳು ಸಂತತಿಯಿಲ್ಲದವರೂ, ದಾನವರಿಂದ ಪರಾಜಿತರೂ ಆಗಿ ದುಃಖ ಗೊಳ್ಳುವರು.

೮೦–೮೧. ಇವಳ ಪಾರ್ಶ್ವದಲ್ಲಿ ಆಭೀರಿಯು ನಮಗೆ ಸವತಿಯೆಂದು ಚಿಂತಿಸುತ್ತ ಸಂತೋಷದಿಂದ ನನ್ನನ್ನು ದ್ವೇಷಮಾಡುತ್ತ ಇರುವ ನಾಲ್ಕು ಮಂದಿ ಶಿವದೂತಿ ಮೊದಲಾದವರು ಒಂದು ವೇಳೆಯೂ ಪರಸ್ಪರವಾಗಿ ಸೇರದಿರಲಿ.

೮೨. ಇವರಿಗೆ ಇತರ ಮನುಷ್ಯರು ನೋಡದ ಪ್ರಾಣಿಗಳಿಗೆ ಅಗಮ್ಯವಾದ ಪರ್ವತದ ಶಿಖರಗಳಲ್ಲಿ ಸರ್ವ ಭೋಗವಿಲ್ಲದ ವಾಸವುಂಟಾಗಲಿ.

**ಸೂತ ಉವಾಚ :—**

**ಏವಮುಕ್ತ್ವಾಽಥ ಸಾವಿತ್ರೀ ಕೋಪೋಪಹತ ಚೇತಸಾ ।**
**ವಿಸೃಜ್ಯ ದೇವಪತ್ನೀಸ್ತಾಃ ಸರ್ವಾ ಯಾಃ ಪಾರ್ಶ್ವತಃ ಸ್ಥಿತಾಃ ॥ ೮೩ ॥**
**ಉದಙ್ಮುಖೀ ಪ್ರತಸ್ಥೇ ಚ ವಾರ್ಯಮಾಣಾಽಪಿ ಸರ್ವತಃ ।**
**ಸರ್ವಾಭಿರ್ದೇವಪತ್ನೀಭಿರ್ಲಕ್ಷ್ಮೀಪೂರ್ವಾಭಿರೇವ ಚ ॥ ೮೪ ॥**
**ತತ್ರ ಯಾಸ್ಯಾಮಿ ನೋ ಯತ್ರ ನಾಮಾಽಪಿ ಕಿಲ ವೈ ಯತಃ ।**
**ಶ್ರೂಯತೇ ಕಾಮುಕಸ್ಯಾಽಸ್ಯ ತತ್ರ ಯಾಸ್ಯಾಮ್ಯಹಂ ದ್ರುತಂ ॥ ೮೫ ॥**
**ಏಕಶ್ಚರಣಯೋರ್ನ್ಯಸ್ತೋ ವಾಮಃ ಪರ್ವತರೋಧಸಿ ।**
**ದ್ವಿತೀಯೇನ ಸಮಾರೂಢಾ ತಸ್ಯಾಗಸ್ಯ ತಥೋಪರಿ ॥ ೮೬ ॥**
**ಅದ್ಯಾಽಪಿ ತತ್ಪದಂ ವಾಮಂ ತಸ್ಯಾಸ್ತತ್ರ ಪ್ರದೃಶ್ಯತೇ ।**
**ಸರ್ವಪಾಪಹರಂ ಪುಣ್ಯಂ ಸ್ಥಿತಂ ಪರ್ವತರೋಧಸಿ ॥ ೮೭ ॥**
**ಅಪಿ ಪಾಪಸಮಾಚಾರೋ ಯಸ್ತಂ ಪೂಜಯತೇ ನರಃ ।**
**ಸರ್ವಪಾತಕನಿರ್ಮುಕ್ತಃ ಸ ಯಾತಿ ಪರಮಂ ಪದಂ ॥ ೮೮ ॥**
**ಯೋ ಯಂ ಕಾಮಮಭಿಧ್ಯಾಯ ತಮರ್ಚಯತಿ ಮಾನವಃ ।**
**ಅವಶ್ಯಂ ಸಮವಾಪ್ನೋತಿ ಯದ್ಯಪಿ ಸ್ಯಾತ್ಸುದುರ್ಲಭಂ ॥ ೮೯ ॥**

---

೮೩–೮೪. ಸೂತನು ಹೇಳುತ್ತಾನೆ:—ಕೋಪಗೊಂಡ ಸಾವಿತ್ರಿಯು ಹೀಗೆ ಶಪಿಸಿ ಪಕ್ಕದಲ್ಲಿರುವ ಸಮಸ್ತ ದೇವಪತ್ನಿಯರನ್ನೂ ಬಿಟ್ಟು ಲಕ್ಷ್ಮೀ ಮೊದಲಾದ ದೇವಾಂಗನೆಯರು ತಡೆದರೂ ಉತ್ತರಮುಖವಾಗಿ ಪ್ರಯಾಣ ಮಾಡಿದಳು.

೮೫. ಕಾಮುಕನಾದ ಈ ವಿಧಿಯ ನಾಮಮಾತ್ರವೂ ಎಲ್ಲಿ ಕೇಳುವುದಿಲ್ಲವೋ ಅಲ್ಲಿಗೆ ಶೀಘ್ರವಾಗಿ ಹೋಗುವೆನೆಂದಳು.

೮೬. ಅವಳು ಒಂದು ಹೆಜ್ಜೆಯನ್ನು ಪರ್ವತದ ತಪ್ಪಲಲ್ಲಿಟ್ಟು ಎರಡನೆಯ ಹೆಜ್ಜೆಯಿಂದ ಆ ಪರ್ವತದ ಮೇಲೆ ಏರಿದಳು.

೮೭. ಈಗಲೂ ಸಮಸ್ತ ಪಾಪಗಳನ್ನು ಪರಿಹರಿಸುವುದೂ, ಪುಣ್ಯಕರವೂ ಆದ ಆ ಸಾವಿತ್ರಿಯ ವಾಮಪಾದವು ಅಲ್ಲಿ ಕಾಣಿಸುತ್ತಿದೆ.

೮೮. ಪಾಪಶೀಲನಾದರೂ ಮಾನವನು ಆ ಪಾದವನ್ನು ಪೂಜಿಸಿದರೆ ಸಕಲ ಪಾಪಮುಕ್ತನಾಗಿ ಉತ್ತಮ ಸ್ಥಾನವನ್ನು ಪಡೆಯುವನು.

೮೯. ಮಾನವನು ಯಾವ ಯಾವ ಇಷ್ಟಾರ್ಥವನ್ನು ಚಿಂತಿಸಿ ಆ ಪಾದ ವನ್ನು ಅರ್ಚಿಸುವನೊ, ಅದು ದುರ್ಲಭವಾಗಿದ್ದರೂ ಅದನ್ನು ಹೊಂದು ವನು.

**ಸೂತ ಉವಾಚ:—**

**ಏವಂ ತತ್ರ ಸ್ಥಿತಾ ದೇವೀ ಸಾವಿತ್ರೀ ಪರ್ವತಾಶ್ರಯಾ ।**
**ಅಪಮಾನಂ ಮಹತ್ಪ್ರಾಪ್ಯ ಸಕಾಶಾತ್ಸ್ವಪತೇಸ್ತದಾ ॥ ೯೦ ॥**
**ಯಸ್ತಾಮರ್ಚಯತೇ ಸಮ್ಯಕ್ಪೌರ್ಣಮಾಸ್ಯಾಂ ವಿಶೇಷತಃ ।**
**ಸರ್ವಾನ್ ಕಾಮಾನವಾಪ್ನೋತಿ ಸ ಮನೋವಾಂಛಿತಾಂಸ್ತದಾ ॥ ೯೧ ॥**
**ಯಾ ನಾರೀ ಕುರುತೇ ಭಕ್ತ್ಯಾ ದೀಪದಾನಂ ತದಗ್ರತಃ ।**
**ರಕ್ತತಂತುಭಿರಾಜ್ಯೇನ ಶ್ರೂಯತಾಂ ತಸ್ಯ ಯತ್ಫಲಂ ॥ ೯೨ ॥**
**ಯಾವಂತಸ್ತಂತವಸ್ತಸ್ಯ ದಹ್ಯಂತೇ ದೀಪಸಂಭವಾಃ ।**
**ಮುಹೂರ್ತಾನಿ ಚ ಯಾವಂತಿ ಘೃತದೀಪಶ್ಚ ತಿಷ್ಠತಿ ।**
**ತಾವಜ್ಜನ್ಮಸಹಸ್ರಾಣಿ ಸಾ ಸ್ಯಾತ್ಸೌಭಾಗ್ಯಭಾಗಿನೀ ॥ ೯೩ ॥**
**ಪುತ್ರಪೌತ್ರಸಮೋಪೇತಾ ಧನಿನೀ ಶೀಲಮಂಡನಾ ।**
**ನ ದುರ್ಭಗಾ ನ ವಂಧ್ಯಾ ಚ ನ ಚ ಕಾಣಾ ವಿರೂಪಿಕಾ ॥ ೯೪ ॥**
**ಯಾ ನೃತ್ಯಂ ಕುರುತೇ ನಾರೀ ವಿಧವಾಽಪಿ ತದಗ್ರತಃ ।**
**ಗೀತಂ ವಾ ಕುರುತೇ ತತ್ರ ತಸ್ಯಾಃ ಶೃಣುತ ಯತ್ಫಲಂ ॥ ೯೫ ॥**
**ಯಥಾ ಯಥಾ ನೃತ್ಯಮಾನಾ ಸ್ವಗಾತ್ರಂ ವಿಧುನೋತಿ ಚ ।**
**ತಥಾ ತಥಾ ಧುನೋತ್ಯೇವ ಯತ್ಪಾಪಂ ಪ್ರಕೃತಂ ಪುರಾ ॥ ೯೬ ॥**

---

೯೦. ಸೂತನು ಹೇಳುತ್ತಾನೆ:—ಹೀಗೆ ತನ್ನ ಪತಿಯಿಂದ ಅತ್ಯಂತ ಅವಮಾನವನ್ನು ಹೊಂದಿದ ಸಾವಿತ್ರಿಯು ಆ ಪರ್ವತದ ಶಿಖರದಲ್ಲಿ ನೆಲೆಸಿದಳು.

೯೧. ಅವಳನ್ನು ಹುಣ್ಣಿಮೆಯ ದಿನ ಪೂಜಿಸಿದವನು ತನ್ನ ಸಕಲೇಷ್ಟಾರ್ಥಗಳನ್ನು ಪಡೆಯುವನು.

೯೨. ಅವಳ ಮುಂದೆ ಕೆಂಪುನೂಲಿನ ಬತ್ತಿಯಿಂದ ತುಪ್ಪದ ದೀಪವನ್ನು ಹೊತ್ತಿಸಿ ದಾನ ಮಾಡುವ ಹೆಂಗಸಿಗೆ ಲಭಿಸುವ ಫಲವನ್ನು ಕೇಳು.

೯೩–೯೪. ಆ ದೀಪದ ಎಷ್ಟು ನೂಲುಗಳು ಸುಡುವುವೊ, ಆ ತುಪ್ಪದ ದೀಪವು ಎಷ್ಟು ಮುಹೂರ್ತಕಾಲ ಉರಿಯುವುದೊ, ಅವಳು ಅಷ್ಟು ಜನ್ಮಗಳ ಕಾಲ ಸೌಭಾಗ್ಯವುಳ್ಳವಳೂ, ಪುತ್ರಪೌತ್ರರಿಂದ ಕೂಡಿದವಳೂ, ಧನಿಕಳೂ, ಶೀಲಸಂಪನ್ನಳೂ ಆಗುವಳು. ಎಂದಿಗೂ ದೌರ್ಭಾಗ್ಯವುಳ್ಳವಳೂ, ಬಂಜೆಯೂ, ಕುರುಡಳೂ, ಕುರೂಪಿಣಿಯೂ ಆಗುವುದಿಲ್ಲ.

೯೫. ಅವಳ ಮುಂದೆ ವಿಧವೆಯು ನೃತ್ಯ ಅಥವಾ ಗಾನ ಮಾಡಿದರೂ ಅವಳಿಗುಂಟಾಗುವ ಫಲವನ್ನು ಕೇಳಿರಿ.

೯೬. ಅವಳು ಕುಣಿಯುತ್ತ ತನ್ನ ಶರೀರವನ್ನು ಅಲ್ಲಾಡಿಸಿದ ಹಾಗೆಲ್ಲ ಹಿಂದೆ ಮಾಡಿದ ಪಾಪವನ್ನು ಕೊಡಹುವಳು.

ಯಾವಂತೋ ಜಂತವೋ ಗೀತಂ ತಸ್ಯಾಃ ಶೃಣ್ವಂತಿ ತತ್ರ ಚ ।
ತಾವಂತಿ ದಿವಿ ವರ್ಷಾಣಿ ಸಹಸ್ರಾಣಿ ವಸೇಚ್ಚ ಸಾ ॥ ೯೭ ॥
ಸಾವಿತ್ರೀಂ ಯಾ ಸಮುದ್ದಿಶ್ಯ ಫಲದಾನಂ ಕರೋತಿ ಸಾ ।
ಫಲಸಂಖ್ಯಾ ಪ್ರಮಾಣಾನಿ ಯುಗಾನಿ ದಿವಿ ಮೋದತೇ ॥ ೯೮ ॥
ಮಿಷ್ಟಾನ್ನಂ ಯಚ್ಛತೇ ಯಶ್ಚ ನಾರೀಣಾಂ ಚ ವಿಶೇಷತಃ ।
ತಸ್ಯಾ ದಕ್ಷಿಣಮೂರ್ತೌ ಚ ಭರ್ತ್ರಾರ್ಥ್ಯಾನಾಂ ದ್ವಿಜೋತ್ತಮಾಃ ।
ಸ ಚ ಸಿಕ್ಥಪ್ರಮಾಣಾನಿ ಯುಗಾನಿ ದಿವಿ ಮೋದತೇ ॥ ೯೯ ॥
ಯಃ ಶ್ರಾದ್ಧಂ ಕುರುತೇ ತತ್ರ ಸಮ್ಯಕ್ಛ್ರದ್ಧಾಸಮನ್ವಿತಃ ।
ರಸೇನೈಕೇನ ಸಸ್ಯೇನ ತಥೈಕೇನ ದ್ವಿಜೋತ್ತಮಾಃ ।
ತಸ್ಯಾಽಪಿ ಜಾಯತೇ ಪುಣ್ಯಂ ಗಯಾಶ್ರಾದ್ಧೇನ ಯದ್ಭವೇತ್ ॥ ೧೦೦ ॥
ಯಃ ಕರೋತಿ ದ್ವಿಜಸ್ತಸ್ಯಾ ದಕ್ಷಿಣಾಂ ದಿಶಮಾಶ್ರಿತಃ ।
ಸಂಧ್ಯೋಪಾಸನಮೇಕಂ ತು ಸ್ವಪತ್ನ್ಯಾ ಕ್ಷಿಪ್ತೈರ್ಜಲೈಃ ॥ ೧೦೧ ॥
ಸಾಯಂತನೇ ಚ ಸಂಪ್ರಾಪ್ತೇ ಕಾಲೇ ಬ್ರಾಹ್ಮಣಸತ್ತಮಾಃ ।
ತೇನ ಸ್ಯಾದ್ವಂದಿತಾ ಸಂಧ್ಯಾ ಸಮ್ಯಗ್ದ್ವಾದಶ ವಾರ್ಷಿಕೀ ॥ ೧೦೨ ॥
ಯೋ ಜಪೇದ್ಬ್ರಾಹ್ಮಣಸ್ತಸ್ಯಾಃ ಸಾವಿತ್ರೀಂ ಪುರತಃ ಸ್ಥಿತಃ ।
ತಸ್ಯ ಯತ್ ಸ್ಯಾತ್ಫಲಂ ವಿಪ್ರಾಃ ಶ್ರೂಯತಾಂ ತದ್ವದಾಮಿ ವಃ ॥ ೧೦೩ ॥

---

೯೭. ಅವಳ ಸಂಗೀತವನ್ನು ಎಷ್ಟು ಪ್ರಾಣಿಗಳು ಕೇಳುವುವೊ, ಅಷ್ಟು ಸಾವಿರ ವರ್ಷಗಳ ಕಾಲ ದೇವಲೋಕದಲ್ಲಿ ವಾಸಿಸುವಳು.

೯೮. ಸಾವಿತ್ರಿಯನ್ನುದ್ದೇಶಿಸಿ ಫಲಗಳನ್ನು ದಾನ ಮಾಡಿದವಳು ಆ ಫಲಗಳ ಸಂಖ್ಯೆಯಷ್ಟು ಯುಗಗಳ ಕಾಲ ದೇವಲೋಕದಲ್ಲಿ ಆನಂದಿಸುವಳು.

೯೯. ದ್ವಿಜವರ್ಯರೆ! ಅವಳ ದಕ್ಷಿಣಭಾಗದಲ್ಲಿ ಸುವಾಸಿನಿಯರಿಗೆ ಮಿಷ್ಟಾನ್ನವನ್ನು ನೀಡುವವನು ಅನ್ನದ ಅಗಳುಗಳ ಸಂಖ್ಯೆಯಷ್ಟು ಯುಗಗಳ ಕಾಲ ದೇವಲೋಕದಲ್ಲಿ ಆನಂದಪಡುವನು.

೧೦೦. ಅಲ್ಲಿ ಶ್ರದ್ಧೆಯಿಂದ ಒಂದು ಸಸ್ಯಶ್ರಾದ್ಧ ಮಾಡಿದವನಿಗೆ ಗಯಾಶ್ರಾದ್ಧದ ಪುಣ್ಯವು ದೊರೆಯುವುದು.

೧೦೧–೧೦೨. ಅವಳ ದಕ್ಷಿಣಭಾಗದಲ್ಲಿ ತನ್ನ ಪತ್ನಿಯು ಕೊಟ್ಟ ನೀರಿನಿಂದ ಸಾಯಂಕಾಲದಲ್ಲಿ ಒಂದು ಸಾರಿ ಸಂಧ್ಯಾವಂದನೆಯನ್ನು ಮಾಡಿದವನು ಹನ್ನೆರಡು ವರ್ಷಕಾಲ ಸಂಧ್ಯಾವಂದನೆ ಮಾಡಿದವನಂತಾಗುವನು.

೧೦೩. ಆ ಸಾವಿತ್ರಿಯ ಮುಂದೆ ಗಾಯತ್ರಿಯನ್ನು ಜಪಿಸಿದವನಿಗೆ ಉಂಟಾಗುವ ಫಲವನ್ನು ಹೇಳುತ್ತೇನೆ ಕೇಳಿರಿ.

ದಶಭಿರ್ಜನ್ಮಜನಿತಂ ಶತೇನ ಚ ಪುರಾ ಕೃತಂ ।
ತ್ರಿಯುಗೇತು ಸಹಸ್ರೇಣ ತಸ್ಯ ನಶ್ಯತಿ ಪಾತಕಂ ॥ ೧೦೪ ॥
ತಸ್ಮಾತ್ಸರ್ವಪ್ರಯತ್ನೇನ ಚಮತ್ಕಾರಪುರಂ ಪ್ರತಿ ।
ಗತ್ವಾ ತಾಂ ಪೂಜಯೇದ್ದೇವೀಂ ಸ್ತೋತವ್ಯಾ ಚ ವಿಶೇಷತಃ ॥ ೧೦೫ ॥
ಸಾವಿತ್ರ್ಯಾ ಇದಮಾಖ್ಯಾನಂ ಯಃ ಪಠೇಚ್ಛೃಣುಯಾಚ್ಚ ವಾ ।
ಸರ್ವಪಾಪವಿನಿರ್ಮುಕ್ತಃ ಸುಖಭಾಗತ್ರ ಜಾಯತೇ ॥ ೧೦೬ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಹಂ ದ್ವಿಜೋತ್ತಮಾಃ ।
ಸಾವಿತ್ರ್ಯಾಃ ಕೃತ್ಸ್ನಂ ಮಾಹಾತ್ಮ್ಯಂ ಕಿಂ ಭೂಯಃ ಪ್ರವದಾಮ್ಯಹಂ॥೧೦೭॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಸಾವಿತ್ರೀಮಾಹಾತ್ಮ್ಯವರ್ಣನಂ" ನಾಮ ದ್ವಿನವತ್ಯುತ್ತರಶತತಮೋಽಧ್ಯಾಯಃ**

---

೧೦೪. ಅವನು ಹಿಂದೆ ಮೂರುಸಾವಿರ ಯುಗಗಳಲ್ಲಿ ಸಾವಿರ ಜನ್ಮಗಳಲ್ಲಿ ಮಾಡಿದ ಪಾಪವು ಪರಿಹಾರವಾಗುವುದು.

೧೦೫. ಆದುದರಿಂದ ಚಮತ್ಕಾರಪುರಕ್ಕೆ ಹೋಗಿ ಆ ದೇವಿಯನ್ನು ಪೂಜಿಸಿ ಸ್ತುತಿಸಬೇಕು.

೧೦೬. ಸಾವಿತ್ರಿಯ ಈ ಆಖ್ಯಾನವನ್ನು ಪಠಿಸಿದವನು ಅಥವಾ ಕೇಳಿದವನು ಸಮಸ್ತ ಪಾಪಮುಕ್ತನಾಗಿ ಈ ಲೋಕದಲ್ಲಿ ಸುಖಿಯಾಗುವನು.

೧೦೭. ದ್ವಿಜವರ್ಯರೆ! ನೀವು ಕೇಳಿದ ಸಾವಿತ್ರಿಯ ಮಾಹಾತ್ಮ್ಯವನ್ನೆಲ್ಲ ಹೇಳಿದ್ದೇನೆ. ಮರಳಿ ಏನನ್ನು ಹೇಳಲಿ.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಸಾವಿತ್ರೀಮಾಹಾತ್ಮ್ಯವರ್ಣನ" ವೆಂಬ ನೂರತೊಂಬತ್ತೆರಡನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

# ಅಥ ತ್ರಿನವತ್ಯುತ್ತರಶತತಮೋಽಧ್ಯಾಯಃ

## ಗಾಯತ್ರೀವರಪ್ರದಾನವರ್ಣನಂ

**ಋಷಯ ಊಚುಃ :—**

**ಏವಂ ಗತಾಯಾಂ ಸಾವಿತ್ರ್ಯಾಂ ಸಕೋಪಾಯಾಂ ಚ ಸೂತಜ ।**
**ಕಿಂ ಕೃತಂ ತತ್ರ ಗಾಯತ್ರ್ಯಾ ಬ್ರಹ್ಮಾದ್ಯೈಶ್ಚಾಪಿ ಕಿಂ ಸುರೈಃ ॥ ೧ ॥**
**ಏತತ್ಸರ್ವಂ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ।**
**ಕಥಂ ಶಾಪಾನ್ವಿತಾ ದೇವಾಃ ಸಂಸ್ಥಿತಾಸ್ತತ್ರ ಮಂಡಪೇ ॥ ೨ ॥**

**ಸೂತ ಉವಾಚ :—**

**ಗತಾಯಾಮಥ ಸಾವಿತ್ರ್ಯಾಂ ಶಾಪಂ ದತ್ವಾ ದ್ವಿಜೋತ್ತಮಾಃ ।**
**ಗಾಯತ್ರೀ ಸಹಸೋತ್ಥಾಯ ವಾಕ್ಯಮೇತದುದೈರಯತ್ ॥ ೩ ॥**
**ಸಾವಿತ್ರ್ಯಾ ಯದ್ವಚಃ ಪ್ರೋಕ್ತಂ ತನ್ನ ಶಕ್ಯಂ ಕಥಂಚನ ।**
**ಅನ್ಯಥಾ ಕರ್ತುಮೇವಾಥ ಸರ್ವೈರಪಿ ಸುರಾಸುರೈಃ ॥ ೪ ॥**
**ಮಹಾಸತೀ ಮಹಾಭಾಗಾ ಸಾವಿತ್ರೀ ಸಾ ಪತಿವ್ರತಾ ।**
**ಪೂಜ್ಯಾ ಚ ಸರ್ವದೇವಾನಾಂ ಜ್ಯೇಷ್ಠಾ ಶ್ರೇಷ್ಠಾ ಚ ಸದ್ಗುಣೈಃ ॥ ೫ ॥**

---

## ಕನ್ನಡದ ಅನುವಾದ

### ಗಾಯತ್ರೀವರಪ್ರದಾನವರ್ಣನ

೧. ಋಷಿಗಳು ಹೇಳುತ್ತಾರೆ:—ಸೂತ! ಹೀಗೆ ಕುಪಿತಳಾದ ಸಾವಿತ್ರಿಯು ಹೊರಟುಹೋಗಲು ಅಲ್ಲಿರುವ ಗಾಯತ್ರಿಯೂ, ಬ್ರಹ್ಮಾದಿ ದೇವತೆಗಳೂ ಏನನ್ನು ಮಾಡಿದರು ?

೨. ಶಾಪಗ್ರಸ್ತರಾದ ದಿವಿಜರು ಆ ಯಜ್ಞಮಂಟಪದಲ್ಲಿ ಹೇಗಿದ್ದರು ? ಇದನ್ನೆಲ್ಲ ನಮಗೆ ಹೇಳು. ನಮಗೆ ಅತ್ಯಂತ ಕುತೂಹಲವುಂಟಾಗಿದೆ.

೩. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಸಾವಿತ್ರಿಯು ಶಾಪವನ್ನಿತ್ತು ಹೊರಟುಹೋಗಲು ಗಾಯತ್ರಿಯು ಕೂಡಲೆ ಎದ್ದು ಈ ಮಾತನ್ನು ನುಡಿದಳು.

೪. ಸಾವಿತ್ರಿಯು ಹೇಳಿದ ಮಾತನ್ನು ವ್ಯತ್ಯಾಸಗೊಳಿಸಲು ಸಕಲ ದೇವಾಸುರರಿಗೂ ಶಕ್ಯವಲ್ಲ.

೫. ಅವಳು ಅತ್ಯಂತ ಪತಿವ್ರತೆಯೂ, ಮಹಾತ್ಮಳೂ, ಸಮಸ್ತ ದೇವತೆಗಳಿಗೆ ಪೂಜ್ಯಳೂ, ಜ್ಯೇಷ್ಠಳೂ, ಗುಣಗಳಿಂದ ಶ್ರೇಷ್ಠಳೂ ಆಗಿರುವಳು.

ಪರಂ ಸ್ತ್ರೀಣಾಂ ಸ್ವಭಾವೋಽಯಂ ಸರ್ವಾಸಾಂ ಸುರಸತ್ತಮಾಃ ।
ಅಪಿ ಸಹ್ಯೋ ವಜ್ರಪಾತಃ ಸಪತ್ನ್ಯಾ ನ ಪುನಃ ಕಥಾ ॥ ೬ ॥
ಮತ್ಕೃತೇ ಯೇಽತ್ರ ಶಪಿತಾಃ ಸಾವಿತ್ರ್ಯಾ ಬ್ರಾಹ್ಮಣಾಃ ಸುರಾಃ ।
ತೇಷಾಮಹಂ ಕರಿಷ್ಯಾಮಿ ಶಕ್ತ್ಯಾ ಸಾಧಾರಣಾಂ ಸ್ವಯಂ ॥ ೭ ॥
ಅಪೂಜ್ಯೋಽಯಂ ವಿಧಿಃ ಪ್ರೋಕ್ತಸ್ತಯಾ ಮಂತ್ರಪುರಸ್ಸರಃ ।
ಸರ್ವೇಷಾಮೇವ ವರ್ಣಾನಾಂ ವಿಪ್ರಾದೀನಾಂ ಸುರೋತ್ತಮಾಃ ॥ ೮ ॥
ಬ್ರಹ್ಮಸ್ಥಾನೇಷು ಸರ್ವೇಷು ಸಮಗ್ರೇ ಧರಣೀತಲೇ ।
ನ ಬ್ರಹ್ಮಣಾ ವಿನಾ ಕಿಂಚಿತ್ಕೃತ್ಯಂ ಸಿದ್ಧಿಮುಪೈಷ್ಯತಿ ॥ ೯ ॥
ಕೃಷ್ಣಾರ್ಚನೇ ಚ ಯತ್ಪುಣ್ಯಂ ಯತ್ಪುಣ್ಯಂ ಲಿಂಗಪೂಜನೇ ।
ತತ್ಫಲಂ ಕೋಟಿಗುಣಿತಂ ಸದಾ ವೈ ಬ್ರಹ್ಮದರ್ಶನಾತ್ ।
ಭವಿಷ್ಯತಿ ನ ಸಂದೇಹೋ ವಿಶೇಷಾತ್ಸರ್ವಪರ್ವಸು ॥ ೧೦ ॥
ತ್ವಂ ಚ ವಿಷ್ಣೋ ತಯಾ ಪ್ರೋಕ್ತೋ ಮರ್ತ್ಯಜನ್ಮ ಯದಾಪ್ಸ್ಯಸಿ ।
ತತ್ರಾಪಿ ಪರಭೃತ್ಯತ್ವಂ ಪರೇಷಾಂ ತೇ ಭವಿಷ್ಯತಿ ॥ ೧೧ ॥
ತತ್ಕೃತ್ವಾ ರೂಪ ದ್ವಿತಯಂ ತತ್ರ ಜನ್ಮ ತ್ವಮಾಪ್ಸ್ಯಸಿ ।
ಯತ್ತಯಾ ಕಥಿತೋ ವಂಶೋ ಮಮಾಽಯಂ ಗೋಪ ಸಂಜ್ಞಿತಃ ।
ತತ್ರ ತ್ವಂ ಪಾವನಾರ್ಥಾಯ ಚಿರಂ ವೃದ್ಧಿಮವಾಪ್ಸ್ಯಸಿ ॥ ೧೨ ॥

---

೬. ಸುರವರ್ಯರೆ! ಇದು ಸಮಸ್ತ ಸ್ತ್ರೀಯರ ಸ್ವಭಾವವು. ಅವರು ವಜ್ರಪಾತವನ್ನಾದರೂ ಸಹಿಸಿಯಾರು. ಸವತಿಯನ್ನು ಸಹಿಸುವುದಿಲ್ಲ.

೭. ನನಗಾಗಿ ಸಾವಿತ್ರಿಯಿಂದ ಶಾಪವನ್ನು ಹೊಂದಿರುವ ಬ್ರಹ್ಮನಿಗೂ ಸುರರಿಗೂ ಆ ಶಾಪವನ್ನು ನನ್ನ ಶಕ್ತಿಯಿಂದ ಸಾಧಾರಣವನ್ನಾಗಿ ಮಾಡುವೆನು.

೮. ಆ ಸಾವಿತ್ರಿಯು ಬ್ರಹ್ಮನು ವಿಪ್ರಾದಿ ಸಮಸ್ತ ಜಾತಿಯವರಿಗೆ ಮಂತ್ರ ಪೂರ್ವಕವಾಗಿ ಅಪೂಜ್ಯನಾಗುವನೆಂದು ಹೇಳಿರುವಳು.

೯. ಭೂಮಿಯಲ್ಲಿರುವ ಸಕಲ ಬ್ರಹ್ಮಸ್ಥಾನಗಳಲ್ಲಿಯೂ ಬ್ರಹ್ಮನನ್ನು ಬಿಟ್ಟರೆ ಯಾವ ಕಾರ್ಯವೂ ಸಿದ್ಧಿಸುವುದಿಲ್ಲ.

೧೦. ಸಕಲ ಪರ್ವಕಾಲಗಳಲ್ಲಿ ಕೃಷ್ಣನನ್ನೂ, ಈಶ್ವರ ಲಿಂಗವನ್ನೂ ಪೂಜಿಸಿದರೆ ಉಂಟಾಗುವ ಫಲಕ್ಕಿಂತ ಕೋಟಿಯಷ್ಟು ಹೆಚ್ಚು ಫಲವು ಬ್ರಹ್ಮದರ್ಶನದಿಂದಾಗುವುದು.

೧೧. ವಿಷ್ಣುವೆ! ನಿನ್ನನ್ನು ಆ ಸಾವಿತ್ರಿಯು ಮನುಷ್ಯ ಜನ್ಮವನ್ನು ಪಡೆದು ಪರರ ಸೇವಕನಾಗುವೆ ಎಂದು ಶಪಿಸಿರುವಳು.

೧೨. ಆದುದರಿಂದ ಅವಳು ಹೇಳಿದ ನನ್ನ ಗೋಪವಂಶದಲ್ಲಿ ಪವಿತ್ರಗೊಳಿಸುವುದಕ್ಕಾಗಿ ಎರಡು ರೂಪಗಳನ್ನು ಧರಿಸಿ ಜನ್ಮತಾಳಿ ಬಹುಕಾಲ ಬೆಳೆಯುವೆ.

ಏಕಃ ಕೃಷ್ಣಾಭಿಧಾನಸ್ತು ದ್ವಿತೀಯೋಽರ್ಜುನ ಸಂಜ್ಞಿತಃ ।
ತಸ್ಯಾತ್ಮನೋಽರ್ಜುನಾಖ್ಯಸ್ಯ ಸಾರಥ್ಯಂ ತ್ವಂ ಕರಿಷ್ಯಸಿ ॥ ೧೩ ॥
ತೇನಾಕೃತ್ಯೇಽಪಿ ರಕ್ತಾಸ್ತೇ ಗೋಪಾ ಯಾಸ್ಯಂತಿ ಶ್ಲಾಘ್ಯತಾಂ ।
ಸರ್ವೇಷಾಮೇವ ಲೋಕಾನಾಂ ದೇವಾನಾಂ ಚ ವಿಶೇಷತಃ ॥ ೧೪ ॥
ಯತ್ರ ಯತ್ರ ಚ ವತ್ಸ್ಯಂತಿ ಮದ್ವಂಶಪ್ರಭವಾ ನರಾಃ ।
ತತ್ರ ತತ್ರ ಶ್ರಿಯೋ ವಾಸೋ ವನೇಽಪಿ ಪ್ರಭವಿಷ್ಯತಿ ॥ ೧೫ ॥
ಭೋ ಭೋಃ ಶಕ್ರ ಭವಾನುಕ್ತೋ ಯತ್ತಯಾ ಕೋಪಯುಕ್ತಯಾ ।
ಪರಾಜಯಂ ರಿಪೋಃ ಪ್ರಾಪ್ಯ ಕಾರಾಗಾರೇ ಪತಿಷ್ಯತಿ ॥ ೧೬ ॥
ತನ್ಮುಕ್ತಿಂ ತೇ ಸ್ವಯಂ ಬ್ರಹ್ಮಾ ಮದ್ವಾಕ್ಯೇನ ಕರಿಷ್ಯತಿ ॥ ೧೭ ॥
ತತಃ ಪ್ರವಿಷ್ಟಃ ಸಂಗ್ರಾಮೇ ನ ಪರಾಜಯಮಾಪ್ಸ್ಯಸಿ ।
ತ್ವಂ ವಹ್ನೇ ಸರ್ವಭಕ್ಷಶ್ಚ ಯತ್ಪ್ರೋಕ್ತೋ ರುಷ್ಟಯಾ ತಯಾ ॥ ೧೮ ॥
ತದಮೇಧ್ಯಮಪಿ ಪ್ರಾಯಃ ಸ್ಪೃಷ್ಟಂ ತೇಽರ್ಚಿಭಿರಗ್ರತಃ ।
ಮೇಧ್ಯತಾಂ ಯಾಸ್ಯತಿ ಕ್ಷಿಪ್ರಂ ತತಃ ಪೂಜಾಮವಾಪ್ಸ್ಯಸಿ ॥ ೧೯ ॥
ಸ್ವಾಹಾ ನಾಮ ಚ ಭಾರ್ಯಾ ಯಾ ದೇವಾನ್ ಸಂತರ್ಪಯಿಷ್ಯತಿ ।
ಸ್ವಧಾ ಚಾಽಪಿ ಪಿತೄನ್ ಸರ್ವಾನ್ ಮಮ ವಾಕ್ಯಾದಸಂಶಯಂ ॥ ೨೦ ॥

---

೧೩–೧೪. ಆ ರೂಪಗಳಲ್ಲೊಂದು ಕೃಷ್ಣನೆಂದೂ, ಎರಡನೆಯದು ಅರ್ಜುನನೆಂದೂ ಹೆಸರನ್ನು ಪಡೆಯುವುದು. ಆ ಅರ್ಜುನರೂಪಿಯಾದ ನಿನಗೆ ನೀನೇ ಸಾರಥಿಯಾಗುವೆ. ಆದರಿಂದ ಅಕಾರ್ಯಾಸಕ್ತರಾದ ಗೋಪಾಲಕರು ಸಮಸ್ತ ಜನರಿಗೂ, ವಿಶೇಷವಾಗಿ ದೇವತೆಗಳಿಗೂ ಶ್ಲಾಘ್ಯರಾಗುವರು.

೧೫. ನನ್ನ ವಂಶದವರು ವಾಸಮಾಡಿದ ಸ್ಥಳಗಳೆಲ್ಲ ಅರಣ್ಯವಾದರೂ ಅಲ್ಲಿ ಸಂಪತ್ತು ನೆಲೆಸುವುದು.

೧೬. ಎಲೈ ಇಂದ್ರನೆ! ಸಾವಿತ್ರಿಯು ನಿನಗೆ ಕೋಪದಿಂದ ಶತ್ರುವಿನಿಂದ ಸೋತು ಸೆರೆಮನೆಯಲ್ಲಿ ಬೀಳುವೆ ಎಂದು ಶಾಪಕೊಟ್ಟಿದ್ದಾಳೆ.

೧೭. ನನ್ನ ಮಾತಿನಿಂದ ಬ್ರಹ್ಮನೇ ನಿನ್ನನ್ನು ಆದರಿಂದ ಬಿಡಿಸುವನು.

೧೮. ಅನಂತರ ಸಮರದಲ್ಲಿ ನೀನು ಸೋಲುವುದಿಲ್ಲ. ಅಗ್ನಿಯೆ! ಕುಪಿತಳಾದ ಆ ಸಾವಿತ್ರಿಯು ನಿನಗೆ ಸರ್ವಭಕ್ಷನಾಗೆಂದು ಶಪಿಸಿದ್ದಾಳೆ.

೧೯. ಆದುದರಿಂದ ನೀನು ಭಕ್ಷಿಸುವ ವಸ್ತುವು ಅಪವಿತ್ರವಾಗಿದ್ದರೂ ನಿನ್ನ ಜ್ವಾಲೆಯ ಸ್ಪರ್ಶದಿಂದ ಕೂಡಲೆ ಪವಿತ್ರವಾಗುವುದು. ಅನಂತರ ನೀನು ಪೂಜೆಯನ್ನು ಹೊಂದುವೆ.

೨೦. ನನ್ನ ಮಾತಿನಿಂದ ನಿನ್ನ ಸ್ವಾಹೆಯೆಂಬ ಭಾರ್ಯೆಯು ದೇವತೆಗಳನ್ನೂ, ಸ್ವಧೆಯೆಂಬುವಳು ಸಕಲ ಪಿತೃಗಳನ್ನೂ ತೃಪ್ತಿಗೊಳಿಸುವಳು.

**ಯದ್ರುದ್ರ ಪ್ರಿಯಯಾ ಸಾರ್ಧಂ ವಿಯೋಗಃ ಕಥಿತಸ್ತಯಾ ।**
**ತಸ್ಯಾಃ ಶ್ರೇಷ್ಠತರಾ ಚಾಽನ್ಯಾ ತವ ಭಾರ್ಯಾ ಭವಿಷ್ಯತಿ ।**
**ಗೌರೀನಾಮೇತಿ ವಿಖ್ಯಾತಾ ಹಿಮಾಚಲಸುತಾ ಶುಭಾ ॥ ೨೧ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಗಾಯತ್ರೀವರಪ್ರದಾನವರ್ಣನಂ" ನಾಮ ತ್ರಿನವತ್ಯುತ್ತರಶತತಮೋಽಧ್ಯಾಯಃ**

---

೨೧. ಮಹೇಶ್ವರ! ನಿನಗೆ ಅವಳು ಸತೀವಿಯೋಗವಾಗುವುದೆಂದು ಹೇಳಿದ್ದಾಳೆ. ನಿನಗೆ ಅವಳಿಗಿಂತ ಉತ್ತಮಳಾದ ಗೌರಿಯೆಂಬ ಹಿಮವತ್ಪುತ್ರಿಯು ಮತ್ತೊಬ್ಬ ಭಾರ್ಯೆಯಾಗುವಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಗಾಯತ್ರೀವರಪ್ರದಾನವರ್ಣನ"ವೆಂಬ ನೂರತೊಂಬತ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರ್ಣವತ್ಯುತ್ತರಶತತಮೋಽಧ್ಯಾಯಃ

## ಪಾದುಕಾಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

**ಏವಂ ಸಾ ತಾನ್ ವರಾನ್ ದತ್ವಾ ಸರ್ವೇಷಾಂ ಶಾಪಭಾಗಿನಾಂ ।**
**ಮೌನವ್ರತಧರಾ ಭೂತ್ವಾ ನಿವಿಷ್ಟಾಽಥ ಧರಾತಲೇ ॥ ೧ ॥**
**ತತೋ ದೇವಗಣಾಃ ಸರ್ವೇ ತಾಪಸಾಶ್ಚ ಮಹರ್ಷಯಃ ।**
**ಸಾಧು ಸಾಧ್ವಿತಿ ತಾಂ ಪ್ರೋಚ್ಯ ತತಃ ಪ್ರೋಚುರಿದಂ ವಚಃ ॥ ೨ ॥**
**ಏತಾಂ ದೇವೀಂ ಪ್ರಸಾದೇನ ಬ್ರಾಹ್ಮಣಾನಾಂ ವಿಶೇಷತಃ ।**
**ಪೂಜಯಿಷ್ಯಂತಿ ಮರ್ತ್ಯೇಽತ್ರ ಸರ್ವೇ ಲೋಕಾಃ ಸಮಾಹಿತಾಃ ॥ ೩ ॥**
**ಬ್ರಹ್ಮಾಣಂ ಪೂಜಯಿತ್ವಾ ತು ಪಶ್ಚಾದೇನಾಂ ಸುರೇಶ್ವರೀಂ ।**
**ಪೂಜಯಿಷ್ಯಂತಿ ಯೇ ಮರ್ತ್ಯಾಸ್ತೇ ತು ಯಾಂತಿ ಪರಾಂ ಗತಿಂ ॥ ೪ ॥**
**ಯಾ ಕನ್ಯಾ ಪತಿಸಂಯೋಗಂ ಸಂಪ್ರಾಪ್ಯಾಽತ್ರ ಸಮಾಹಿತಾ ।**
**ತತಃ ಪಾದಪ್ರಣಾಮಂ ಚ ಗಾಯತ್ರ್ಯಾಶ್ಚ ಕರಿಷ್ಯತಿ ।**
**ಪತಿಂ ಪ್ರಜಾಪತಿಂ ಪ್ರಾಪ್ಯ ಸಾ ಭವಿಷ್ಯತ್ಯಸಂಶಯಂ ॥ ೫ ॥**

---

## ಕನ್ನಡದ ಅನುವಾದ

### ಪಾದುಕಾಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಗಾಯತ್ರಿಯು ಹೀಗೆ ಶಾಪಗ್ರಸ್ತರಾದವರಿಗೆಲ್ಲ ವರಗಳನ್ನಿತ್ತು ಮೌನವ್ರತವನ್ನು ತಾಳಿ ಭೂಮಿಯಲ್ಲಿ ನಿಂತಳು.

೨. ಅನಂತರ ದೇವತೆಗಳೂ ಮಹರ್ಷಿಗಳೂ ಒಳ್ಳೆಯದು ಒಳ್ಳೆಯದು ಎಂದು ಆ ಗಾಯತ್ರಿಯನ್ನು ಸ್ತುತಿಸಿ ಆಕೆಯನ್ನು ಕುರಿತು ಇಂತೆಂದರು.

೩. ಈ ಗಾಯತ್ರೀ ದೇವಿಯನ್ನು ಬ್ರಾಹ್ಮಣರ ಅನುಗ್ರಹದಿಂದ ಭೂಲೋಕದಲ್ಲಿ ಎಲ್ಲರೂ ಪೂಜಿಸುವರು.

೪. ಮೊದಲು ಬ್ರಹ್ಮನನ್ನು ಪೂಜಿಸಿ ಅನಂತರ ಈ ಗಾಯತ್ರೀ ದೇವಿಯನ್ನು ಪೂಜಿಸಿದ ಮಾನವರು ಉತ್ತಮಗತಿಯನ್ನು ಪಡೆಯುವರು.

೫–೬. ಇಲ್ಲಿ ಪತಿಸಂಯೋಗವನ್ನು ಪಡೆದು ಗಾಯತ್ರಿಯ ಪಾದಗಳಿಗೆರಗುವ ಕನ್ಯೆಯು ಬ್ರಹ್ಮನನ್ನು ಪತಿಯನ್ನಾಗಿ ಪಡೆದು ಸಕಲೇಷ್ಟಾರ್ಥಗಳಿಂದ ಕೂಡಿ

ಸರ್ವಕಾಮ ಸುಖೋಪೇತಾ ಧನಧಾನ್ಯಸಮನ್ವಿತಾ ।
ಯಾ ನಾರೀ ದುರ್ಭಗಾ ವಂಧ್ಯಾ ಭವಿಷ್ಯತಿ ಚ ಶೋಭನಾ ॥ ೬ ॥

ಋಷಯ ಊಚುಃ:—

ಯದೇತದ್ಭವತಾ ಪ್ರೋಕ್ತಂ ಗತೇ ಪಂಚೋತ್ತರೇ ಶತೇ ।
ಪದ್ಮಜಾನಾಂ ಹರಃ ಪ್ರಾದಾದೇತತ್ಕಥಮನುತ್ತಮಂ ॥ ೭ ॥
ಬ್ರಾಹ್ಮಣೇಭ್ಯಃ ಸ ಸಂತುಷ್ಟಃ ಕಿಂ ವಾಽನ್ಯೋಽಸ್ತಿ ಮಹೇಶ್ವರಃ ।
ಏತಂ ನಃ ಸಂಶಯಂ ಭೂಯೋ ಯಥಾವದ್ವಕ್ತುಮರ್ಹಸಿ ॥ ೮ ॥
ಆಯುಷ್ಯಂ ಶಂಕರಸ್ಯಾಽಪಿ ಯತ್ಪ್ರಮಾಣಂ ತಥಾ ಹರೇಃ ।
ಬ್ರಹ್ಮಣೋಽಪಿ ಸಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೯ ॥

ಸೂತ ಉವಾಚ:—

ಅಹಂ ವಃ ಕೀರ್ತಯಿಷ್ಯಾಮಿ ವಿಸ್ತರೇಣ ದ್ವಿಜೋತ್ತಮಾಃ ।
ತ್ರಯಾಣಾಮಪಿ ಚಾಽಽಯುಷ್ಯಂ ಯತ್ಪ್ರಮಾಣಂ ವ್ಯವಸ್ಥಿತಂ ॥ ೧೦ ॥
ನಿಮೇಷಸ್ಯ ಚತುರ್ಭಾಗಸ್ತ್ರುಟಿಃ ಸ್ಯಾತ್ತದ್ದ್ವಯಂ ಲವಃ ।
ಲವದ್ವಯಂ ಕಲಾ ಪ್ರೋಕ್ತಾ ಕಾಷ್ಠಾ ತು ದಶಪಂಚಭಿಃ ॥ ೧೧ ॥
ತ್ರಿಂಶತ್ಕಾಷ್ಠಾಂ ಕಲಾಮಾಹುಃ ಕ್ಷಣಸ್ತ್ರಿಂಶತ್ಕಲೋ ಮತಃ ।
ಮುಹೂರ್ತಮಾನಂ ಮೌಹೂರ್ತಾ ವದಂತಿ ದ್ವಾದಶ ಕ್ಷಣಂ ॥ ೧೨ ॥

---

ದವಳೂ, ಧನಧಾನ್ಯಸಮೃದ್ಧಳೂ ಆಗುವಳು. ದುರ್ಭಗಳೂ, ಬಂಜೆಯೂ ಆದ ನಾರಿಯೂ ಸುಂದರಿಯಾಗುವಳು.

೭–೮. ಋಷಿಗಳು ಹೇಳುತ್ತಾರೆ:—ನೀನು ನೂರೈದು ಮಂದಿ ಬ್ರಹ್ಮರು ಅಳಿದ ಮೇಲೆ ಮಹೇಶ್ವರನು ಬ್ರಾಹ್ಮಣರಲ್ಲಿ ಸಂತುಷ್ಟನಾಗಿ ಉತ್ತಮನಾದ ಬ್ರಹ್ಮನನ್ನು ಕೊಟ್ಟನೆಂದು ಹೇಳಿದೆ. ಇವನು ಅದೇ ಮಹೇಶ್ವರನೆ? ಅಥವಾ ಮತ್ತೊಬ್ಬ ಮಹೇಶ್ವರನಿದ್ದಾನೆಯೆ? ನಮಗೆ ಮರಳಿ ಹೀಗೆ ಸಂದೇಹವುಂಟಾಗಿದೆ. ನೀನು ಯಥಾಸ್ಥಿತಿಯನ್ನು ನಮಗೆ ತಿಳಿಸು.

೯. ಶಂಕರ, ವಿಷ್ಣು, ಬ್ರಹ್ಮ ಇವರ ಆಯುಷ್ಯದ ಪ್ರಮಾಣವೆಷ್ಟು? ನಮಗೆ ತಿಳಿಯಲು ಕುತೂಹಲವುಂಟಾಗಿದೆ.

೧೦. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ನಾನು ನಿಮಗೆ ಈ ಮೂರು ಮಂದಿಯ ಆಯುಷ್ಯದ ಪ್ರಮಾಣವನ್ನು ವಿಸ್ತಾರವಾಗಿ ಹೇಳುವೆನು.

೧೧–೧೨. ನಿಮೇಷದ ನಾಲ್ಕು ಭಾಗಗಳು ತ್ರುಟಿಯೂ, ಎರಡು ತ್ರುಟಿಗಳಿಂದ ಲವವೂ, ಎರಡು ಲವಗಳಿಂದ ಕಲೆಯೂ, ಹದಿನೈದು ಕಲೆಗಳಿಂದ ಕಾಷ್ಠವೂ, ಮೂವತ್ತು ಕಾಷ್ಠಗಳಿಂದ ಕಲೆಯೂ, ಮೂವತ್ತು ಕಲೆಗಳಿಂದ ಕ್ಷಣವೂ, ಹನ್ನೆರಡು ಕ್ಷಣಗಳಿಂದ ಮುಹೂರ್ತವೂ ಆಗುವುದು.

ತ್ರಿಂಶನ್ಮುಹೂರ್ತಮುದ್ದಿಷ್ಟಮಹೋ ರಾತ್ರಂ ಮುನೀಷಿಭಿಃ ।
ಮಾಸಸ್ತ್ರಿಂಶದಹೋರಾತ್ರೈರ್ದ್ವೌ ಮಾಸಾವೃತುಸಂಜ್ಞಿತಃ ॥ ೧೩ ॥
ಋತುತ್ರಯಂ ಚಾಽಯನಂ ಚ ಅಯನೇ ದ್ವೇತು ವತ್ಸರಂ ।
ದೈವಿಕಂ ಚ ಭವೇತ್ತಚ್ಚ ಹ್ಯಹೋರಾತ್ರಂ ದ್ವಿಜೋತ್ತಮಾಃ ॥ ೧೪ ॥
ಉತ್ತರಂ ಚಾಽಯನಂ ತತ್ರ ದಿನಂ ರಾತ್ರಿಸ್ತಥಾಽಪರಂ ।
ಲಕ್ಷೈಃಸಪ್ತದಶಾಖ್ಯೈಸ್ತು ಮನುಷ್ಯಾಣಾಂ ಚ ವತ್ಸರೈಃ ॥ ೧೫ ॥
ಅಷ್ಟಾವಿಂಶತಿಭಿಶ್ಚೈವ ಸಹಸ್ರೈಸ್ತು ತಥಾ ಪರೈಃ ।
ಆದ್ಯಂ ಕೃತಯುಗಂ ಚೈವ ತದ್ಭವಿಷ್ಯತಿ ಸದ್ದ್ವಿಜಾಃ ॥ ೧೬ ॥
ತತೋ ದ್ವಾದಶಭಿರ್ಲಕ್ಷೈಃ ಷೋಡಶಾನಾಂ ಸಹಸ್ರಕೈಃ ।
ತ್ರೇತಾಯುಗಂ ಸಮಾದಿಷ್ಟಂ ದ್ವಿತೀಯಂ ದ್ವಿಜಸತ್ತಮಾಃ ॥ ೧೭ ॥
ದ್ವಾಪರಂ ಚಾಷ್ಟಭಿರ್ಲಕ್ಷೈಸ್ತೃತೀಯಂ ಪರಿಕೀರ್ತಿತಂ ।
ಚತುಃ ಷಷ್ಟಿಸಹಸ್ರೈಸ್ತು ಯಥಾವತ್ಪರಿಸಂಖ್ಯಯಾ ॥ ೧೮ ॥
ಚತುರ್ಲಕ್ಷಂ ಸಮಾದಿಷ್ಟಂ ಯುಗಂ ಕಲಿಸಮುದ್ಭವಂ ।
ದ್ವಾತ್ರಿಂಶತಾ ಸಹಸ್ರೈಸ್ತು ಚತುರ್ಥಂ ತದ್ವಿದುರ್ಬುಧಾಃ ॥ ೧೯ ॥
ಚತುರ್ಯುಗಸಹಸ್ರೇಣ ದಿನಂ ಪೈತಾಮಹಂ ಭವೇತ್ ।
ಮಾಸ ಸ್ತ್ರಿಂಶದ್ದಿನೈರ್ವರ್ಷೋ ಮಾಸೈರ್ದ್ವಾದಶಭಿರ್ಭವೇತ್ ॥ ೨೦ ॥

---

೧೩–೧೪. ಹಾಗೆಯೇ ಮೂವತ್ತು ಮುಹೂರ್ತಗಳಿಂದ ಒಂದು ದಿವಸವೂ, ಮೂವತ್ತು ದಿವಸಗಳಿಂದ ಒಂದು ತಿಂಗಳೂ, ಎರಡು ತಿಂಗಳುಗಳಿಂದ ಋತುವೂ, ಮೂರು ಋತುಗಳಿಂದ ಅಯನವೂ, ಎರಡು ಅಯನಗಳಿಂದ ಸಂವತ್ಸರವೂ ಆಗುವುದು. ಇದು ದೇವತೆಗಳಿಗೆ ಒಂದು ದಿವಸವೆನ್ನಿಸುವುದು.

೧೫–೧೬. ಆ ವರ್ಷದಲ್ಲಿ ಉತ್ತರಾಯಣವು ದೇವತೆಗಳಿಗೆ ಹಗಲೂ, ದಕ್ಷಿಣಾಯನವು ರಾತ್ರಿಯೂ ಆಗಿರುವುದು. ಮನುಷ್ಯರ ಹದಿನೇಳು ಲಕ್ಷದ ಇಪ್ಪತ್ತೆಂಟುಸಾವಿರ ವರ್ಷಗಳಿಂದ ಮೊದಲನೆ ಕೃತಯುಗವಾಗುವುದು.

೧೭. ದ್ವಿಜವರ್ಯರೆ! ಮನುಷ್ಯರ ಹನ್ನೆರಡು ಲಕ್ಷದ ಹದಿನಾರು ಸಾವಿರ ವರ್ಷಗಳಿಂದ ಎರಡನೆಯ ತ್ರೇತಾಯುಗವಾಗುವುದು.

೧೮. ಎಂಟು ಲಕ್ಷದ ಅರುವತ್ತನಾಲ್ಕುಸಾವಿರ ಮನುಷ್ಯ ವರ್ಷಗಳಿಂದ ಮೂರನೆಯ ದ್ವಾಪರಯುಗವಾಗುವುದು.

೧೯. ನಾಲ್ಕು ಲಕ್ಷದ ಮೂವತ್ತೆರಡು ಸಾವಿರ ವರ್ಷಗಳಿಂದ ನಾಲ್ಕನೆಯ ಕಲಿಯುಗವಾಗುವುದು.

೨೦. ಈ ನಾಲ್ಕು ಯುಗಗಳ ಸಾವಿರಗಳಿಂದ ಬ್ರಹ್ಮನ ದಿನವಾಗುವುದು. ಆ ಮೂವತ್ತು ದಿನಗಳಿಂದ ತಿಂಗಳೂ, ಹನ್ನೆರಡು ತಿಂಗಳುಗಳಿಂದ ವರ್ಷವೂ ಆಗುವುದು.

ಬ್ರಹ್ಮಾ ತೇಷಾಂ ಶತಂ ಯಾವತ್ಸ ಜೀವತಿ ಪಿತಾಮಹಃ ।
ಸಾಂಪ್ರತಂ ಚಾಷ್ಟವರ್ಷೀಯಃ ಷಣ್ಮಾಸಶ್ಚೈವ ಸಂಸ್ಥಿತಃ ॥ ೨೧ ॥
ಪ್ರತಿಪದ್ದಿವಸಸ್ಯಾಸ್ಯ ಪ್ರಥಮಸ್ಯ ತಥಾಗತಂ ।
ಯಾಮದ್ವಯಂ ಶುಕ್ರವಾರೇ ವರ್ತಮಾನೇ ಮಹಾತ್ಮನಃ ॥ ೨೨ ॥
ಬ್ರಹ್ಮಣೋ ವರ್ಷಮಾತ್ರೇಣ ದಿನಂ ವೈಷ್ಣವಮುಚ್ಯತೇ ॥ ೨೩ ॥
ಸೋಽಪಿ ವರ್ಷಶತಂ ಯಾವದಾತ್ಮಮಾನೇನ ಜೀವತಿ ।
ಪಂಚಪಂಚಾಶದಾದಿಷ್ಟಾಸ್ತಸ್ಯ ಜಾತಸ್ಯ ವತ್ಸರಾಃ ॥ ೨೪ ॥
ತಿಥಯಃ ಪಂಚ ಯಾಮಾರ್ಧಂ ಸೋಮವಾರೇಣ ಸಂಗತಂ ।
ವೈಷ್ಣವೇನ ತು ವರ್ಷೇಣ ದಿನಂ ಮಾಹೇಶ್ವರಂ ಭವೇತ್ ॥ ೨೫ ॥
ಶಿವೋ ವರ್ಷಶತಂ ಯಾವತ್ತೇನ ರೂಪೇಣ ಚ ಸ್ಥಿತಃ ।
ಯಾವದುಚ್ಛ್ವಸಿತಂ ವಕ್ತ್ರಂ ಸದಾಶಿವ ಸಮುದ್ಭವಂ ॥ ೨೬ ॥
ಪಶ್ಚಾಚ್ಛಕ್ತಿಂ ಸಮಭ್ಯೇತಿ ಯಾವನ್ನಿಃಶ್ವಸಿತಂ ಭವೇತ್ ।
ನಿಃಶ್ವಾಸೋಚ್ಛ್ವಸಿತಾನಾಂ ಚ ಸರ್ವೇಷಾಮೇವ ದೇಹಿನಾಂ ॥ ೨೭ ॥
ಬ್ರಹ್ಮವಿಷ್ಣುಶಿವಾನಾಂ ಚ ಗಂಧರ್ವೋರಗರಕ್ಷಸಾಂ ।
ಏಕವಿಂಶತ್ಸಹಸ್ರಾಣಿ ಶತೈಃ ಷಡ್ಭಿಃ ಶತಾನಿ ಚ ॥ ೨೮ ॥
ಅಹೋ ರಾತ್ರೇಣ ಚೋಚ್ಛ್ವಾನಿ ಪ್ರಮಾಣೇ ದ್ವಿಜಸತ್ತಮಾಃ ।
ಷಡ್ಭಿರುಚ್ಛ್ವಾಸ ನಿಃಶ್ವಾಸೈಃ ಪಲಮೇಕಂ ಪ್ರವರ್ತತೇ ॥ ೨೯ ॥

---

೨೧. ಬ್ರಹ್ಮನು ಇಂತಹ ನೂರು ವರ್ಷಗಳ ಕಾಲ ಜೀವಿಸುವನು. ಈಗ ಅವನು ಎಂಟೂವರೆ ವರ್ಷ ವಯಸ್ಸುಳ್ಳವನಾಗಿದ್ದಾನೆ.

೨೨. ಆ ಬ್ರಹ್ಮನಿಗೆ ಈಗ ಶುಕ್ರವಾರ ಪಾಡ್ಯದ ದಿವಸದಲ್ಲಿ ಎರಡು ಜಾಮಗಳು ಕಳೆದಿರುವುವು.

೨೩–೨೪. ಬ್ರಹ್ಮನ ಒಂದು ವರ್ಷವು ವಿಷ್ಣುವಿನ ಒಂದು ದಿನವಾಗುವುದು. ಅವನೂ, ನೂರು ವರ್ಷಗಳ ಕಾಲ ಜೀವಿಸುತ್ತಾನೆ. ಈಗ ಹುಟ್ಟಿರುವ ಆ ವಿಷ್ಣುವಿಗೆ ಐವತ್ತೈದು ವರ್ಷಗಳಾಗಿರುವುವು.

೨೫–೨೯. ಪಂಚಮಿ ಸೋಮವಾರದಲ್ಲಿ ಅರ್ಧ ಯಾಮವು ಕಳೆದಿರುವುದು. ವಿಷ್ಣುವಿನ ಒಂದು ವರ್ಷದಿಂದ ಮಹೇಶ್ವರನಿಗೆ ಒಂದು ದಿನವಾಗುವುದು. ಶಿವನೂ ಆ ರೂಪದಿಂದ ಒಂದುನೂರು ವರ್ಷಕಾಲ ಇರುವನು. ಸದಾಶಿವನು ನಿಶ್ವಾಸೋಚ್ಛ್ವಾಸಗಳನ್ನು ಮಾಡುವಾಗ ಶಿವನು ಶಕ್ತಿಯನ್ನು ಹೊಂದುವನು. ದ್ವಿಜವರ್ಯರೆ! ಸಕಲ ಪ್ರಾಣಿಗಳೂ, ಬ್ರಹ್ಮ, ವಿಷ್ಣು, ಶಿವರೂ, ಗಂಧರ್ವ, ಉರಗ, ರಾಕ್ಷಸರೂ ಒಂದು ದಿನದಲ್ಲಿ ಇಪ್ಪತ್ತೊಂದು ಸಾವಿರದ ಏಳುನೂರು ಸಾರಿ ಉಸಿರಾಡುವರು. ಆರು ಉಚ್ಛ್ವಾಸ ನಿಶ್ವಾಸಗಳಿಂದ ಒಂದು ಪಲವಾಗುವುದು.

ನಾಡೀ ಷಷ್ಟಿಪಲಾ ಪ್ರೋಕ್ತಾ ತಾಸಾಂ ಷಷ್ಟ್ಯಾ ದಿನಂ ನಿಶಾ ।
ನಿಃಶ್ವಾಸೋಚ್ಛ್ವಸಿತಾನಾಂ ಚ ಪರಿಸಂಖ್ಯಾ ನ ವಿದ್ಯತೇ ।
ಸದಾಶಿವಸಮುತ್ಥಾನಾಮೇತಸ್ಮಾತ್ಸೋಽಕ್ಷಯಃ ಸ್ಮೃತಃ ॥ ೩೦ ॥
ಅನ್ಯೇಽಪಿ ಯೇ ಪ್ರಗಚ್ಛಂತಿ ಬ್ರಹ್ಮಜ್ಞಾನಸಮನ್ವಿತಾಃ ।
ಅಕ್ಷಯಾಸ್ತೇಽಪಿ ಜಾಯಂತೇ ಸತ್ಯಮೇತನ್ಮಯೋದಿತಂ ॥ ೩೧ ॥

ಋಷಯ ಊಚುಃ :—

ಯದ್ಯೇವಂ ಸೂತಪುತ್ರಾತ್ರ ಬ್ರಹ್ಮವಿಷ್ಣುಮಹೇಶ್ವರಾಃ ।
ಆತ್ಮವರ್ಷಶತೇ ಪೂರ್ಣೇ ಯಾಂತಿ ನಾಶಮಸಂಶಯಂ ॥ ೩೨ ॥
ತತ್ಕಥಂ ಮಾನುಷಾಣಾಂ ಚ ಮರ್ತ್ಯಲೋಕೇಽಲ್ಪಜೀವಿನಾ ।
ಕಥಯಂತಿ ಚ ಯೇ ಮುಕ್ತಿಂ ವಿದ್ವಾಂಸಶ್ಚೈವ ಸೂತಜ ॥ ೩೩ ॥
ನೂನಂ ತೇಷಾಂ ಮೃಷಾವಾದೋ ಮೋಕ್ಷಮಾರ್ಗಸಮುದ್ಭವಃ ॥ ೩೪ ॥

ಸೂತ ಉವಾಚ :—

ಅನಾದಿನಿಧನಃ ಕಾಲಃ ಸಂಖ್ಯಯಾ ಪರಿವರ್ಜಿತಃ ।
ಅಸಂಖ್ಯಾತಾ ಗತಾ ಮೋಕ್ಷಂ ಬ್ರಹ್ಮವಿಷ್ಣುಮಹೇಶ್ವರಾಃ ॥ ೩೫ ॥
ನಿಜೇ ವರ್ಷಶತೇ ಪೂರ್ಣೇ ವಾಲುಕಾ ರೇಣವೋ ಯಥಾ ।
ನಿಜಮಾನೇನ ಯಾ ಶ್ರದ್ಧಾ ಬ್ರಹ್ಮಜ್ಞಾನಸಮುದ್ಭವಾ ।
ತೇಷಾಂ ಚೇನ್ಮಾನುಷಾಣಾಂ ಚ ತನ್ಮುಕ್ತಿಃ ಸ್ಯಾದಸಂಶಯಂ ॥ ೩೬ ॥

---

೩೦. ಅರುವತ್ತು ಪಲಗಳಿಂದ ಒಂದು ಗಳಿಗೆಯಾಗುವುದು. ಈ ಅರುವತ್ತು ಗಳಿಗೆಗಳಿಂದ ಹಗಲು ರಾತ್ರಿಗಳಾಗುವುವು. ಸದಾಶಿವನ ಉಚ್ಛ್ವಾಸ ನಿಶ್ವಾಸಗಳಿಗೆ ಸಂಖ್ಯಾಮಿತಿಯಿಲ್ಲ. ಆದುದರಿಂದವನು ಅಕ್ಷಯನಾಗಿರುವನು.

೩೧. ಬ್ರಹ್ಮಜ್ಞಾನಿಗಳಾದ ಇತರರೂ ಅಕ್ಷಯರಾಗುವರು. ನಾನು ಹೇಳಿರುವುದು ನಿಜ.

೩೨. ಋಷಿಗಳು ಹೇಳುತ್ತಾರೆ :—ಸೂತ! ಹೀಗಾದರೆ ಬ್ರಹ್ಮವಿಷ್ಣು ಮಹೇಶ್ವರರು ತಮ್ಮ ನೂರು ವರ್ಷಗಳ ಆಯುಸ್ಸು ಕಳೆದ ಕೂಡಲೆ ಮಡಿಯುವರು.

೩೩. ಮನುಷ್ಯಲೋಕದಲ್ಲಿರುವ ಅಲ್ಪ ಜೀವಿಗಳಾದ ಮನುಷ್ಯರಿಗೆ ವಿದ್ವಾಂಸರು ಮೋಕ್ಷವಾಗುವುದೆಂದು ಹೇಳುತ್ತಾರಷ್ಟೆ. ಅದು ಹೇಗೆ?

೩೪. ಅವರಿಗೆ ಮೋಕ್ಷವಾಗುವುದೆಂಬ ಮಾತು ಸುಳ್ಳು.

೩೫–೩೬. ಸೂತನು ಹೇಳುತ್ತಾನೆ :—ಕಾಲವು ಆದ್ಯಂತವಿಲ್ಲದೆ ಅಸಂಖ್ಯಾತವಾಗಿರುವುದು. ತಮ್ಮ ನೂರು ವರ್ಷಕಾಲ ಆಯುಸ್ಸು ಮುಗಿದ ಕೂಡಲೆ ಬ್ರಹ್ಮವಿಷ್ಣು ಮಹೇಶ್ವರರು ಮರಳು ಧೂಳಿಗಳಂತೆ ಮೋಕ್ಷವನ್ನು ಪಡೆಯುವರು. ಮನುಷ್ಯರಿಗೂ ಬ್ರಹ್ಮಜ್ಞಾನದಿಂದುಂಟಾದ ಶ್ರದ್ಧೆಯು ಉದಯಿಸಿದ ಕೂಡಲೆ ಆ ಮೋಕ್ಷವು ಲಭಿಸುವುದು.

ಯಥೈತೇ ದಂಶಮಶಕಾ ಮಾನುಷಾಣಾಂ ಚ ಕೀಟಕಾಃ ।
ಜಾಯಂತೇ ಚ ಮ್ರಿಯಂತೇ ಚ ಗಣ್ಯಂತೇ ನೈವ ಕುತ್ರಚಿತ್ ।
ಇಂದ್ರಾದೀನಾಂ ತಥಾ ಮರ್ತ್ಯಾಃ ಸಂಭಾವ್ಯಾ ಜಗತೀ ತಲೇ ॥ ೩೭ ॥
ದೇವಾನಾಂ ಚ ಯಥಾ ಮರ್ತ್ಯಾಃ ಕೀಟಸ್ಥಾನೇ ಚ ಸಂಸ್ಥಿತಾಃ ।
ತಥಾ ದೇವಾ ಅಪಿ ಜ್ಞೇಯಾ ಬ್ರಹ್ಮಣೋಽವ್ಯಕ್ತಜನ್ಮನಃ ॥ ೩೮ ॥
ಬ್ರಹ್ಮಣಸ್ತು ಯಥಾ ದೇವಾಃ ಕೀಟಸ್ಥಾನೇ ವ್ಯವಸ್ಥಿತಾಃ ।
ತಥಾ ಬ್ರಹ್ಮಾಽಪಿ ವಿಷ್ಣೋಶ್ಚ ಕೀಟಸ್ಥಾನೇ ವ್ಯವಸ್ಥಿತಃ ॥ ೩೯ ॥
ಪಿತಾಮಹೋ ಯಥಾ ವಿಷ್ಣೋಃ ಕೀಟಸ್ಥಾನೇ ವ್ಯವಸ್ಥಿತಃ ।
ತಥಾ ಸ ಶಿವಶಕ್ತಿಭ್ಯಾಂ ಪರಿಜ್ಞೇಯೋ ದ್ವಿಜೋತ್ತಮಾಃ ॥ ೪೦ ॥
ಯಥಾ ವಿಷ್ಣುಃ ಕೃಮಿರ್ಜ್ಞೇಯಸ್ತಾಭ್ಯಾಮೇವ ದ್ವಿಜೋತ್ತಮಾಃ ।
ಸದಾಶಿವಸ್ಯ ವಿಜ್ಞೇಯೌ ತಥಾ ತೌ ಕೃಮಿರೂಪಕೌ ॥ ೪೧ ॥
ಏವಂ ಚ ವಿವಿಧೈರ್ಯಜ್ಞೈಃ ಶ್ರದ್ಧಾಪೂತೇನ ಚೇತಸಾ ।
ಬ್ರಹ್ಮಜ್ಞಾನಾತ್ಪರಂ ಯಾಂತಿ ಸದಾಶಿವಸಮುದ್ಭವಂ ॥ ೪೨ ॥
ಅಗ್ನಿಷ್ಟೋಮಾದಿಭಿರ್ಯಜ್ಞೈಃ ಕೃತ್ಯೈಃ ಸಂಪೂರ್ಣದಕ್ಷಿಣೈಃ ।
ತದರ್ಥಂ ತೇ ದಿವಂ ಯಾಂತಿ ಭುಕ್ತ್ವಾ ಭೋಗಾನ್ ಪೃಥಗ್ವಿಧಾನ್ ॥೪೩॥

---

೩೭. ಮನುಷ್ಯರ ವಿಷಯದಲ್ಲಿ ಕೀಟಗಳಾದ ನೊಣ ಸೊಳ್ಳೆಗಳು ಹೇಗೆ ಹುಟ್ಟುವುವೋ ಮತ್ತು ಸಾಯುವುವೋ, ಅವುಗಳ ಗಣನೆಯೇ ಹೇಗೆ ಇರುವುದಿಲ್ಲವೋ ಹಾಗೆಯೇ ಇಂದ್ರಾದಿ ದೇವತೆಗಳಿಗೂ ಜಗತ್ತಿನಲ್ಲಿರುವ ಮನುಷ್ಯರು ಗಣ್ಯರಲ್ಲವೆಂದು ತಿಳಿಯಬೇಕು.

೩೮. ದೇವತೆಗಳಿಗೆ ಮನುಷ್ಯರು ಹೇಗೋ ಬ್ರಹ್ಮನಿಗೆ ಆ ದೇವತೆಗಳೂ ಹಾಗೆಯೇ.

೩೯. ಅವ್ಯಕ್ತಜನ್ಮನಾದ ಬ್ರಹ್ಮನಿಗೆ ದೇವತೆಗಳು ಹೇಗೋ ಹಾಗೆ ಬ್ರಹ್ಮನು ವಿಷ್ಣುವಿಗೆ ಕೀಟದಂತಿರುವನು.

೪೦. ಬ್ರಹ್ಮನು ವಿಷ್ಣುವಿಗೆ ಕೀಟದಂತಿರುವಂತೆ ಆ ವಿಷ್ಣುವು ಶಿವಶಕ್ತಿಗಳಿಗೆ ಕೀಟವಾಗಿರುವನು.

೪೧. ಶಿವ ಮತ್ತು ಶಕ್ತಿಯರಿಗೆ ವಿಷ್ಣುವು ಕೀಟದಂತಿರುವಂತೆ ಅವರು ಸದಾಶಿವನಿಗೆ ಕೀಟರೂಪರಾಗಿರುವರು.

೪೨. ಹೀಗೆ ನರನು ಅನೇಕ ಯಜ್ಞಗಳನ್ನು ಮಾಡಿ ಶ್ರದ್ಧೆಗೊಂಡ ಮನಸ್ಸಿನಿಂದ ಬ್ರಹ್ಮಜ್ಞಾನವನ್ನು ಪಡೆದು ಸದಾಶಿವನಾಗುತ್ತಾನೆ.

೪೩–೪೪. ಮಾನವನು ಸಂಪೂರ್ಣ ದಕ್ಷಿಣೆಯುಳ್ಳ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡಿ ದೇವಲೋಕವನ್ನು ಸೇರಿ ಅಲ್ಲಿ ಬಹು ವಿಧ ಭೋಗಗಳನ್ನು

ಕ್ಷಯೇ ಚ ಪುನರಾಯಾಂತಿ ಸುಕೃತಸ್ಯ ಮಹೀತಲೇ ।
ಬ್ರಹ್ಮಜ್ಞಾನಾತ್ಪರಂ ಪ್ರಾಪ್ಯ ಪುನರ್ಜನ್ಮ ನ ವಿದ್ಯತೇ ॥ ೪೪ ॥
ತಸ್ಮಾತ್ಸರ್ವಪ್ರಯತ್ನೇನ ತತ್ರಾಽಭ್ಯಾಸಂ ಸಮಾಚರೇತ್ ।
ಜನ್ಮಭಿರ್ಬಹುಭಿಃ ಪಶ್ಚಾಚ್ಛನೈರ್ಮುಕ್ತಿಮವಾಪ್ನುಯಾತ್ ॥ ೪೫ ॥
ಏಕಜನ್ಮನಿ ಸಂಪ್ರಾಪ್ತೋ ಲೇಶೋ ಜ್ಞಾನಸ್ಯ ತಸ್ಯ ಚ ।
ದ್ವಿತೀಯೇ ದ್ವಿಗುಣಸ್ತಸ್ಯ ತೃತೀಯೇ ತ್ರಿಗುಣೋ ಭವೇತ್ ॥ ೪೬ ॥
ಏಕೋತ್ತರೋ ಭವೇದೇವಂ ಸದಾ ಜನ್ಮನಿ ಜನ್ಮನಿ ॥ ೪೭ ॥

ಋಷಯ ಊಚುಃ :—

ಬ್ರಹ್ಮಜ್ಞಾನಸ್ಯ ಸಂಪ್ರಾಪ್ತಿರ್ಮರ್ತ್ಯಾನಾಂ ಜಾಯತೇ ಕಥಂ ।
ಏತನ್ನಃ ಸರ್ವಮಾಚಕ್ಷ್ವ ಯದಿ ತ್ವಂ ವೇತ್ಸಿ ಸೂತಜ ॥ ೪೮ ॥

ಸೂತ ಉವಾಚ :—

ಕಾ ಶಕ್ತಿರ್ಮಮ ವಕ್ತವ್ಯೇ ಜ್ಞಾನೇ ಮರ್ತ್ಯಸಮುದ್ಭವೇ ।
ಸ್ವಯಮೇವ ನ ಯೋ ವೇತ್ತಿ ಸ ಪರಸ್ಯ ವದೇತ್ಕಥಂ ॥ ೪೯ ॥
ಉಪದೇಶಃ ಪರಂ ಯೋ ಮೇ ಪಿತ್ರಾ ದತ್ತೋ ದ್ವಿಜೋತ್ತಮಾಃ ।
ತಮಹಂ ವಃ ಪ್ರವಕ್ಷ್ಯಾಮಿ ಬ್ರಹ್ಮಜ್ಞಾನಸಮುದ್ಭವಂ ॥ ೫೦ ॥

---

ಅನುಭವಿಸಿ ಪುಣ್ಯವು ಮುಗಿದ ಕೂಡಲೆ ಮರಳಿ ಭೂಮಿಗೆ ಬರುವನು. ಬ್ರಹ್ಮಜ್ಞಾನದಿಂದ ಸದಾಶಿವನಾದರೆ ತಿರುಗಿ ಹುಟ್ಟುವುದಿಲ್ಲ.

೪೫. ಆದುದರಿಂದ ಪ್ರಯತ್ನಪೂರ್ವಕವಾಗಿ ಬಹುಜನ್ಮಗಳಲ್ಲಿ ಬ್ರಹ್ಮಜ್ಞಾನವನ್ನು ಅಭ್ಯಾಸ ಮಾಡಿದರೆ ಕ್ರಮವಾಗಿ ಮುಕ್ತಿಯನ್ನು ಹೊಂದುವನು.

೪೬–೪೭. ಒಂದು ಜನ್ಮದಲ್ಲಿ ಸ್ವಲ್ಪ ಜ್ಞಾನವುಂಟಾದರೆ ಎರಡನೆಯ ಜನ್ಮದಲ್ಲಿ ಅದರ ಇಮ್ಮಡಿಯೂ, ಮೂರನೆಯ ಜನ್ಮದಲ್ಲಿ ಮುಮ್ಮಡಿಯೂ ಆಗುವುದು. ಹೀಗೆ ಯಾವಾಗಲೂ ಪ್ರತಿ ಜನ್ಮದಲ್ಲಿಯೂ ಒಂದೊಂದು ಭಾಗದಷ್ಟು ಜ್ಞಾನವು ಹೆಚ್ಚುವುದು.

೪೮. ಋಷಿಗಳು ಹೇಳುತ್ತಾರೆ:—ಸೂತ! ಮನುಷ್ಯರಿಗೆ ಬ್ರಹ್ಮಜ್ಞಾನವು ಹೇಗುಂಟಾಗುವುದು? ನೀನು ಅದನ್ನು ತಿಳಿದಿದ್ದರೆ ನಮಗೆ ಹೇಳು.

೪೯. ಸೂತನು ಹೇಳುತ್ತಾನೆ:—ಮನುಷ್ಯರಿಗುಂಟಾಗುವ ಜ್ಞಾನವನ್ನು ಹೇಳಲು ನನಗೆ ಶಕ್ತಿಯೆಲ್ಲಿ? ತಾನೇ ತಿಳಿಯದಿದ್ದವನು ಪರರಿಗೆ ಹೇಗೆ ಹೇಳುವನು?

೫೦. ದ್ವಿಜವರ್ಯರೆ! ನನ್ನ ತಂದೆಯು ಬ್ರಹ್ಮಜ್ಞಾನದ ವಿಷಯದಲ್ಲಿ ಉಪದೇಶ ಮಾಡಿದ್ದನ್ನು ನಾನು ನಿಮಗೆ ಹೇಳುವೆನು.

ಹಾಟಕೇಶ್ವರಜೇ ಕ್ಷೇತ್ರೇ ಹ್ಯಸ್ತಿ ತೀರ್ಥದ್ವಯಂ ಶುಭಂ ।
ಕುಮಾರಿಕಾಭ್ಯಾಂ ವಿಹಿತಂ ಬ್ರಹ್ಮಜ್ಞಾನಪ್ರದಂ ನೃಣಾಂ ॥ ೫೧ ॥
ಬ್ರಾಹ್ಮಣ್ಯಾ ಚೈವ ಶೂದ್ರ್ಯಾ ಚ ಕುಮಾರೀಭ್ಯಾಂ ವಿನಿರ್ಮಿತಂ ।
ಅಷ್ಟಮ್ಯಾಂ ಚ ಚತುರ್ದಶ್ಯಾಂ ಯಸ್ತಾಭ್ಯಾಂ ಸ್ನಾನಮಾಚರೇತ್ ॥ ೫೨ ॥
ಪಶ್ಚಾತ್ಪೂಜಯತೇ ಭಕ್ತ್ಯಾ ಪ್ರಸಿದ್ಧೇ ಸಿದ್ಧಿಪಾದುಕೇ ।
ಸುಗುಪ್ತೇ ಗರ್ತಮಧ್ಯಸ್ಥೇ ಕುಮಾರ್ಯಾ ಪರಿಪೂಜಿತೇ ॥ ೫೩ ॥
ತಸ್ಯ ಸಂವತ್ಸರಸ್ಯಾಂತೇ ಬ್ರಹ್ಮಜ್ಞಾನಂ ಪ್ರಜಾಯತೇ ।
ಶಕ್ತ್ಯಾ ವಿನಿಹಿತೇ ತೇ ಚ ಸ್ವದರ್ಶನವಿವೃದ್ಧಯೇ ॥ ೫೪ ॥
ಲೋಕಾನಾಂ ಮುಕ್ತಿಕಾಮಾನಾಂ ಬ್ರಹ್ಮಜ್ಞಾನಸುಖಾವಹೇ ।
ಮಮ ತಾತೋ ಗತಸ್ತತ್ರ ತತಶ್ಚ ಜ್ಞಾನವಾನ್ ಸ್ಥಿತಃ ॥ ೫೫ ॥
ತಸ್ಯಾದೇಶಾದಹಂ ತತ್ರ ಗತಃ ಸಂವತ್ಸರಂ ಸ್ಥಿತಃ ।
ಪಾದುಕೇ ಪೂಜಯಾಮಾಸ ತತೋ ಜ್ಞಾನಂ ಚ ಸಂಸ್ಥಿತಂ ॥ ೫೬ ॥
ಯತ್ಕಿಂಚಿದ್ವಾ ಶ್ರುತಂ ಲೋಕೇ ಪುರಾಣಾಗ್ರ್ಯಂ ವ್ಯವಸ್ಥಿತಂ ।
ವರ್ತಮಾನಂ ಭವಿಷ್ಯಚ್ಚ ತದಹಂ ವೇದ್ಮಿ ಭೋ ದ್ವಿಜಾಃ ॥ ೫೭ ॥
ತತ್ಪ್ರಸಾದಾದಸಂದಿಗ್ಧಂ ಪ್ರಮಾಣಂ ಚಾಽತ್ರ ಸಂಸ್ಥಿತಂ ।
ಮುಕ್ತ್ವೈಕಂ ವೇದಪಠನಂ ಸೂತತ್ವಂ ಚ ಯತೋ ಮಯಿ ॥ ೫೮ ॥

---

೫೧–೫೫. ಹಾಟಕೇಶ್ವರಜಕ್ಷೇತ್ರದಲ್ಲಿ ಬ್ರಾಹ್ಮಣ ಮತ್ತು ಶೂದ್ರಕನ್ಯೆಯರು ನಿರ್ಮಿಸಿದ ಬ್ರಹ್ಮಜ್ಞಾನವನ್ನೀಯುವ ಎರಡು ತೀರ್ಥಗಳಿರುವುವು. ಅಷ್ಟಮಿ ಚತುರ್ದಶೀ ದಿನಗಳಲ್ಲಿ ಅವುಗಳಲ್ಲಿ ಮಿಂದು ಕುಣಿಯೊಳಗೆ ಕುಮಾರಿಯರು ಪೂಜಿಸಿರುವ ಗುಪ್ತವಾದ ಎರಡು ಸಿದ್ಧಿ ಪಾದುಕೆಗಳನ್ನು ಭಕ್ತಿಯಿಂದ ಪೂಜಿಸುವವನಿಗೆ ಒಂದು ವರ್ಷವಾದ ಮೇಲೆ ಬ್ರಹ್ಮಜ್ಞಾನವುಂಟಾಗುವುದು. ಶಕ್ತಿಯು ತನ್ನ ದರ್ಶನವೃದ್ಧಿಗಾಗಿ ಮುಕ್ತಿಕಾಮರಾದ ಜನರಿಗೆ ಬ್ರಹ್ಮಜ್ಞಾನವನ್ನುಂಟುಮಾಡುವ ಆ ಪಾದುಕೆಗಳನ್ನು ಅಲ್ಲಿರಿಸಿರುವಳು. ನನ್ನ ತಂದೆಯು ಅಲ್ಲಿಗೆ ಹೋಗಿ ಬ್ರಹ್ಮಜ್ಞಾನಿಯಾದನು.

೫೬. ಅವನ ಅಪ್ಪಣೆಯಿಂದ ನಾನು ಅಲ್ಲಿಗೆ ಹೋಗಿ ಒಂದು ವರ್ಷಕಾಲ ಇದ್ದು ಪಾದುಕೆಗಳನ್ನು ಪೂಜಿಸಿ ಜ್ಞಾನವನ್ನು ಪಡೆದೆನು.

೫೭. ದ್ವಿಜರೆ! ಲೋಕದಲ್ಲಿರುವ ಶ್ರೇಷ್ಠವಾದ ಪುರಾಣಗಳನ್ನೂ, ವರ್ತಮಾನ ಭವಿಷ್ಯದ್ವಿಷಯಗಳನ್ನೂ ತಿಳಿಯುತ್ತೇನೆ.

೫೮. ನಾನು ಸೂತನಾದ ಕಾರಣ ವೇದಪಠನವನ್ನು ಬಿಟ್ಟು ಆ ಪಾದುಕೆಯ ಅನುಗ್ರಹದಿಂದಲೇ ಪ್ರಮಾಣ ಗ್ರಂಥಗಳನ್ನೂ ಸಂದೇಹವಿಲ್ಲದೆ ಅರಿತಿದ್ದೇನೆ.

ತಸ್ಯಾಽಪಿ ವೇದ್ಮಿ ಸರ್ವಾರ್ಥಂ ಭರ್ತೃಯಜ್ಞೋ ಯಥಾ ಮುನಿಃ ।
ಅಸ್ಮಾದತ್ರೈವ ಗಚ್ಛಧ್ವಂ ಯದಿ ಮುಕ್ತೇಃ ಪ್ರಯೋಜನಂ ॥ ೫೯ ॥
ಕಿಮೇತೈಃ ಸ್ವರ್ಗದೈಃ ಸತ್ರೈಃ ಪುನರಾವೃತ್ತಿಕಾರಕೈಃ ।
ಆರಾಧಯಧ್ವಂ ತೇ ಗತ್ವಾ ಪಾದುಕೇ ಸಿದ್ಧಿದೇ ನೃಣಾಂ ।
ಯೇನ ಸಂವತ್ಸರಸ್ಯಾಂತೇ ಬ್ರಹ್ಮಜ್ಞಾನಂ ಪ್ರಜಾಯತೇ ॥ ೬೦ ॥

ಋಷಯ ಊಚುಃ:—

ಸಾಧು ಸಾಧು ಮಹಾಭಾಗ ಹ್ಯುಪದೇಶಃ ಕೃತೋ ಮಹಾನ್ ।
ತೇನ ಸಂತಾರಿತಾಃ ಸರ್ವೇ ವಯಂ ಸಂಸಾರಸಾಗರಾತ್ ॥ ೬೧ ॥
ಯಾಸ್ಯಾಮೋಽಪಿ ವಯಂ ತತ್ರ ಸತ್ರೇ ದ್ವಾದಶವಾರ್ಷಿಕೇ ।
ಸಮಾಪ್ತೇಽಸ್ಮಿನ್ನ ಸಂದೇಹಃ ಸರ್ವೇ ಚ ಕೃತನಿಶ್ಚಯಾಃ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪಾದುಕಾಮಾಹಾತ್ಮ್ಯವರ್ಣನಂ" ನಾಮ
ಚತುರ್ನವತ್ಯುತ್ತರಶತತಮೋಽಧ್ಯಾಯಃ

---

೫೯. ಭರ್ತೃಯಜ್ಞನೆಂಬ ಮುನಿಯಂತೆ ಆ ವೇದದ ಅರ್ಥವನ್ನೂ ತಿಳಿದಿದ್ದೇನೆ. ಆದುದರಿಂದ ನೀವು ಮುಕ್ತಿರೂಪವಾದ ಪ್ರಯೋಜನವು ಬೇಕಾದರೆ ಈ ಪಾದುಕೆಯೆಡೆಗೆ ಹೋಗಿರಿ.

೬೦. ಪುನರಾವೃತ್ತಿಯನ್ನುಂಟುಮಾಡುವ ಸ್ವರ್ಗದಾಯಕವಾದ ಸತ್ರಗಳಿಂದೇನು ಪ್ರಯೋಜನ? ಮಾನವರಿಗೆ ಸಿದ್ಧಿಯನ್ನುಂಟುಮಾಡುವ ಆ ಪಾದುಕೆಯೆಡೆಗೆ ಹೋಗಿ ಅವುಗಳನ್ನು ಆರಾಧಿಸಿರಿ. ಅದರಿಂದ ನಿಮಗೆ ಒಂದು ವರ್ಷದ ಕೊನೆಯಲ್ಲಿ ಬ್ರಹ್ಮಜ್ಞಾನವುಂಟಾಗುವುದು.

೬೧. ಋಷಿಗಳು ಹೇಳುತ್ತಾರೆ:—ಮಹಾತ್ಮನೆ! ಒಳ್ಳೆಯದು, ಒಳ್ಳೆಯದು. ದೊಡ್ಡ ಉಪದೇಶವನ್ನು ಮಾಡಿದೆ. ಅದರಿಂದ ನಾವು ಸಂಸಾರಸಮುದ್ರದಿಂದ ಉತ್ತೀರ್ಣರಾದೆವು.

೬೨. ನಾವೂ ಈ ಹನ್ನೆರಡು ವರ್ಷದ ಯಜ್ಞವು ಮುಗಿದ ಕೂಡಲೆ ಅಲ್ಲಿಗೆ ಹೋಗುವೆವು ನಿಜ. ನಾವೆಲ್ಲ ನಿರ್ಣಯಿಸಿಕೊಂಡಿದ್ದೇವೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪಾದುಕಾಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚನವತ್ಯುತ್ತರಶತತಮೋಽಧ್ಯಾಯಃ

## ಛಾಂದೋಗ್ಯಬ್ರಾಹ್ಮಣ ಕನ್ಯಕಾವೃತ್ತಾಂತವರ್ಣನಂ

ಋಷಯ ಊಚುಃ :—

**ಶೂದ್ರೀ ಚ ಬ್ರಾಹ್ಮಣೀ ಚಾಽಪಿ ಯೇ ತ್ವಯಾ ಪರಿಕೀರ್ತಿತೇ ।**
**ಹಾಟಕೇಶ್ವರಜೇ ಕ್ಷೇತ್ರೇ ತೀರ್ಥದ್ವಯಮನುತ್ತಮಂ ॥ ೧ ॥**
**ತತ್ಕಥಂ ತತ್ರ ಸಂಜಾತಂ ಕೇನ ವಾ ತದ್ವಿನಿರ್ಮಿತಂ ।**
**ಏತಚ್ಚ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮತೇ ॥ ೨ ॥**
**ಪಾದುಕಾಭ್ಯಾಂ ಸಮುತ್ಪತ್ತಿಃ ಶ್ರುತಾಽಸ್ಮಾಭಿಃ ಪುರಾ ತವ ।**
**ವದ ತಚ್ಚಾಽಪಿ ಮಾಹಾತ್ಮ್ಯಂ ತಾಭ್ಯಾಂ ಚೈವ ಸಮುದ್ಭವಂ ॥ ೩ ॥**

ಸೂತ ಉವಾಚ :—

**ಪುರಾಽಽಸೀನ್ನಾಗರೋ ವಿಪ್ರಶ್ಛಾಂದೋಗ್ಯ ಇತಿ ವಿಶ್ರುತಃ ।**
**ಯಸ್ಯಾನ್ವಯೇಽಪಿ ವಿಪ್ರೇಂದ್ರಾಶ್ಛಾಂದೋಗ್ಯಾ ಇತಿ ವಿಶ್ರುತಾಃ ॥ ೪ ॥**
**ಸಾಮವೇದವಿದಸ್ತಸ್ಯ ಗೃಹಸ್ಥಾಶ್ರಮಧರ್ಮಿಣಃ ।**
**ಪಶ್ಚಿಮೇ ವಯಸಿ ಪ್ರಾಪ್ತೇ ಕನ್ಯಾ ಜಾತಾ ಸುಶೋಭನಾ ॥ ೫ ॥**

---

## ಕನ್ನಡದ ಅನುವಾದ

### ಛಾಂದೋಗ್ಯಬ್ರಾಹ್ಮಣ ಕನ್ಯಕಾವೃತ್ತಾಂತವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ! ನೀನು ಹಾಟಕೇಶ್ವರಜಕ್ಷೇತ್ರದಲ್ಲಿ ಶೂದ್ರ ಮತ್ತು ಬ್ರಾಹ್ಮಣ ಕನ್ಯೆಯರು ಎರಡು ತೀರ್ಥಗಳನ್ನು ರಚಿಸಿರುವರೆಂದು ಹೇಳಿರುವೆ.

೨. ಆ ತೀರ್ಥಗಳು ಹೇಗುಂಟಾದುವು? ಏತಕ್ಕಾಗಿ ಅವರು ಅವುಗಳನ್ನು ನಿರ್ಮಿಸಿದರು? ಪ್ರಾಜ್ಞನೆ! ಇದನ್ನೆಲ್ಲ ನಮಗೆ ವಿಸ್ತಾರವಾಗಿ ಹೇಳು.

೩. ನಿನ್ನಿಂದ ನಾವು ಹಿಂದೆ ಪಾದುಕೆಗಳು ಹುಟ್ಟಿರುವುದನ್ನು ಕೇಳಿದ್ದೇವೆ. ಅವುಗಳ ಮಾಹಾತ್ಮ್ಯವನ್ನೂ, ಅವುಗಳು ಹುಟ್ಟಿದ ಕ್ರಮವನ್ನೂ ತಿಳಿಸು.

೪. ಸೂತನು ಹೇಳುತ್ತಾನೆ:—ಹಿಂದೆ ಛಾಂದೋಗ್ಯನೆಂಬ ನಾಗರ ಬ್ರಾಹ್ಮಣ ನಿದ್ದನು. ಈಗ ಅವನ ವಂಶದ ಬ್ರಾಹ್ಮಣರೆಲ್ಲ ಛಾಂದೋಗ್ಯರೆಂದು ವಿಖ್ಯಾತ ರಾಗಿರುವರು.

೫. ಸಾಮವೇದವನ್ನರಿತವನೂ, ಗೃಹಸ್ಥಾಶ್ರಮಿಯೂ ಆದ ಅವನಿಗೆ ಮುಪ್ಪಿನಲ್ಲಿ ಒಬ್ಬ ಸುಂದರಿಯಾದ ಕನ್ಯೆಯು ಜನಿಸಿದಳು.

ಸರ್ವೈರಪಿ ಗುಣೈರ್ಯುಕ್ತಾ ಸರ್ವಲಕ್ಷಣಲಕ್ಷಿತಾ ।
ಸಪ್ತರಕ್ತಾ ತ್ರಿಗಂಭೀರಾ ಪಂಚಸೂಕ್ಷ್ಮಾಽಬೃಹತ್ಕಟಿಃ ॥ ೬ ॥
ಪದ್ಮಪತ್ರವಿಶಾಲಾಕ್ಷೀ ಲಂಬಕೇಶೀ ಸುಶೋಭನಾ ।
ಬಿಂಬೋಷ್ಠೀ ಹ್ರಸ್ವಲೋಮಾ ಚ ಪೂರ್ಣಚಂದ್ರಸಮಪ್ರಭಾ ॥ ೭ ॥
ತಸ್ಯಾ ನಾಮ ಪಿತಾ ಚಕ್ರೇ ಬ್ರಾಹ್ಮಣೇತಿ ದ್ವಿಜೋತ್ತಮಾಃ ।
ಯಸ್ಮಾತ್ಸಾ ಬ್ರಾಹ್ಮಣೈರ್ದತ್ತಾ ಮಂಡಪಾಂತೇ ಸುಪೂಜಿತೈಃ ॥ ೮ ॥
ಪಶ್ಚಿಮೇ ವಯಸಿ ಪ್ರಾಪ್ತೇ ಅಪತ್ಯರಹಿತಸ್ಯ ಚ ।
ವವೃಧೇ ಸಾ ಚ ತನ್ವಂಗೀ ಚಂದ್ರಲೇಖಾ ಯಥಾ ತಥಾ ॥ ೯ ॥
ಶುಕ್ಲಪಕ್ಷೇ ತು ಸಂಪ್ರಾಪ್ತೇ ಜನಲೋಚನತುಷ್ಟಿದಾ ।
ಯಸ್ಮಿನ್ನಹನಿ ಸಂಜಾತಾ ಛಾಂದೋಗ್ಯಸ್ಯ ಮಹಾತ್ಮನಃ ।
ಆನರ್ತಾಧಿಪತೇಸ್ತಸ್ಮಿಂಸ್ತಾದೃಗ್ರೂಪಾ ಸುತಾಽಭವತ್ ॥ ೧೦ ॥
ಯಸ್ಯಾಃ ಕಾಯಪ್ರಭೌಘೇಣ ಸರ್ವಂ ತತ್ಸೂತಿಕಾಗೃಹಂ ।
ನಿಶಾಗಮೇಽಪಿ ಸಂಜಾತಂ ರತ್ನೌಘೈರಿವ ಸುಪ್ರಭಂ ।
ತತಸ್ತಸ್ಯಾಃ ಪಿತಾ ನಾಮ ಚಕ್ರೇ ರತ್ನವತೀತಿ ಚ ॥ ೧೧ ॥

---

೬–೭. ಅವಳು ಸಮಸ್ತ ಲಕ್ಷಣಗಳಿಂದಲೂ, ಗುಣಗಳಿಂದ ಸಹಿತಳೂ, ಸಪ್ತಾವಯವಗಳಲ್ಲಿ ಕೆಂಪು ಬಣ್ಣವುಳ್ಳವಳೂ, ಮೂರು ಸ್ಥಳಗಳಲ್ಲಿ ಗಂಭೀರಳೂ, ಪಂಚಾವಯವಗಳಲ್ಲಿ ಸೂಕ್ಷ್ಮಳೂ, ಸೂಕ್ಷ್ಮವಾದ ಸೊಂಟವುಳ್ಳವಳೂ, ತಾವರೆದಳದಂತೆ ವಿಶಾಲವಾದ ಕಣ್ಣುಗಳುಳ್ಳವಳೂ, ಜೋಲಾಡುವ ತಲೆಗೂದಲುಳ್ಳವಳೂ, ತೊಂಡೆಹಣ್ಣಿನಂತೆ ತುಟಿಗಳುಳ್ಳವಳೂ, ಸಣ್ಣ ರೋಮಗಳುಳ್ಳವಳೂ, ಪೂರ್ಣಚಂದ್ರನಂತೆ ಕಾಂತಿಯುಳ್ಳವಳೂ ಆಗಿದ್ದಳು.

೮–೧೦. ಮಕ್ಕಳಿಲ್ಲದ ಅವನಿಗೆ ಮುಪ್ಪಿನಲ್ಲಿ ಪೂಜಿತರಾದ ಬ್ರಾಹ್ಮಣರು ಮಂಡಪದಲ್ಲಿ ಅವಳನ್ನು ಕೊಟ್ಟಿರುವುದರಿಂದ ಅವಳಿಗೆ ಬ್ರಾಹ್ಮಣಿಯೆಂದು ಹೆಸರನ್ನಿಟ್ಟನು. ಅವಳು ಶುಕ್ಲಪಕ್ಷದಲ್ಲಿ ಚಂದ್ರನ ಕಲೆಯು ವೃದ್ಧಿಯಾಗುವಂತೆ ಜನರಿಗೆ ಸಂತೋಷವನ್ನುಂಟುಮಾಡುತ್ತ ಬೆಳೆದಳು. ಆ ಛಾಂದೋಗ್ಯ ಬ್ರಾಹ್ಮಣನಿಗೆ ಆ ಕನ್ಯೆಯು ಹುಟ್ಟಿದ ದಿನವೇ ಆನರ್ತರಾಜನಿಗೂ ಅಂತಹ ಮಗಳು ಜನಿಸಿದಳು.

೧೧. ಆ ರಾಜಕನ್ಯೆಯ ದೇಹಕಾಂತಿಯ ಸಮೂಹದಿಂದ ಸೂತಿಕಾಗೃಹವೆಲ್ಲ ರಾತ್ರಿಯಲ್ಲಿಯೂ ರತ್ನಗಳ ಸಮೂಹಗಳಿಂದ ಹೇಗೋ ಹಾಗೆ ಪ್ರಕಾಶಗೊಂಡದ್ದರಿಂದ ತಂದೆಯು ಅವಳಿಗೆ ರತ್ನವತಿಯೆಂದು ನಾಮಕರಣ ಮಾಡಿದನು.

ಅಥ ಸಖ್ಯಂ ಸಮಾಪನ್ನಾ ಬ್ರಾಹ್ಮಣ್ಯಾ ಸಹ ಸಾ ಶುಭಾ ।
ನೈರಂತರ್ಯೇಣ ತಾಭ್ಯಾಂ ಚ ವಿಯೋಗೋ ನೈವ ಜಾಯತೇ ॥ ೧೨ ॥
ಏಕಾಽಶನಂ ತಥಾ ಶಯ್ಯಾ ಏಕಾನ್ನೇನ ಚ ಭೋಜನಂ ।
ಅಷ್ಟಮೇಽಬ್ದೇ ಚ ಸಂಜಾತೇ ಪಿತಾ ತಸ್ಯ ದ್ವಿಜೋತ್ತಮಾಃ ॥ ೧೩ ॥
ವಿವಾಹಂ ಚಿಂತಯಾಮಾಸ ಪ್ರದಾನಾಯ ವರೇ ತಥಾ ।
ಸಾ ಜ್ಞಾತ್ವಾ ಚೇಷ್ಟಿತಂ ತಸ್ಯ ಪಿತುರ್ದುಃಖಸಮನ್ವಿತಾ ॥ ೧೪ ॥
ಸಖ್ಯಾ ವಿಯೋಗಭೀತಾ ಚ ಪ್ರೋಚೇ ರತ್ನವತೀ ತದಾ ।
ಅಶ್ರುಪೂರ್ಣೇಕ್ಷಣಾ ದೀನಾ ಬಾಷ್ಪಗದ್ಗದಯಾ ಗಿರಾ ॥ ೧೫ ॥
ಸಖಿ ತಾತೋ ವಿವಾಹಂ ಮೇ ಪ್ರಕರಿಷ್ಯತಿ ಸಾಂಪ್ರತಂ ।
ವಿವಾಹಿತಾಯಾಶ್ಚ ಸಖ್ಯಂ ನ ಭವಿಷ್ಯತಿ ಕರ್ಹಿಚಿತ್ ॥ ೧೬ ॥
ವಜ್ರಪಾತೋಪಮಂ ವಾಕ್ಯಂ ತಸ್ಯಾಃ ಶ್ರುತ್ವಾ ಸಖೀ ಚ ಸಾ ।
ರುರೋದ ಕಂಠಮಾಶ್ಲಿಷ್ಯ ಸ್ನೇಹವ್ಯಾಕುಲಿತೇಂದ್ರಿಯಾ ॥ ೧೭ ॥
ಅಥ ತದ್ರುದಿತಂ ಶ್ರುತ್ವಾ ಮಾತಾ ತಸ್ಯಾ ಮೃಗಾವತೀ ।
ಸಸಂಭ್ರಮಾ ಸಮಾಗತ್ಯ ವಾಕ್ಯಮೇತದುವಾಚ ಹ ॥ ೧೮ ॥

---

೧೨. ಬಳಿಕ ಆ ರತ್ನವತಿಯು ಬ್ರಾಹ್ಮಣಿಯೊಡನೆ ಸ್ನೇಹ ಬೆಳಸಿದಳು. ಅವರೀರ್ವರಿಗೆ ಯಾವಾಗಲೂ ವಿಯೋಗವುಂಟಾಗಲಿಲ್ಲ.

೧೩–೧೫. ಅವರಿಬ್ಬರೂ ಒಂದೇ ಕಡೆ ಊಟ, ಒಂದೇ ಹಾಸಿಗೆ, ಒಂದೇ ಅನ್ನದ ಭೋಜನಗಳಿಂದ ಬೆಳೆಯುತ್ತಿದ್ದರು. ಬ್ರಾಹ್ಮಣಿಗೆ ಎಂಟು ವರ್ಷ ವಯಸ್ಸಾಗಲು ಅವಳ ತಂದೆಯು ಅವಳನ್ನು ವರನಿಗಿತ್ತು ವಿವಾಹ ಮಾಡ ಬೇಕೆಂದು ಆಲೋಚಿಸಿದನು. ಆ ಕನ್ಯೆಯು ತಂದೆಯ ಉದ್ಯೋಗವನ್ನು ತಿಳಿದು ಅತಿ ದುಃಖಗೊಂಡು ಸಖಿಯ ವಿಯೋಗವಾಗುವುದೆಂದು ತ್ರಸ್ತಳಾಗಿ ರತ್ನವತಿಯನ್ನು ಕುರಿತು ಕಣ್ಣೀರನ್ನು ಸುರಿಸುತ್ತ ಗದ್ಗದ ಧ್ವನಿಯಿಂದ ಇಂತೆಂದಳು.

೧೬. "ಸಖಿ! ನನ್ನ ತಂದೆಯು ಈಗ ನನಗೆ ವಿವಾಹವನ್ನು ಮಾಡುವನು. ಮದುವೆಯಾದ ನನಗೆ ಎಲ್ಲಿಯೂ ಸಖ್ಯವುಂಟಾಗುವುದಿಲ್ಲ."

೧೭. ರತ್ನವತಿಯು ಸಿಡಿಲಿಗೆ ಸಮಾನವಾದ ಬ್ರಾಹ್ಮಣಿಯ ಮಾತನ್ನು ಕೇಳಿ ಸ್ನೇಹದಿಂದ ವ್ಯಾಕುಲಗೊಂಡ ಇಂದ್ರಿಯಗಳುಳ್ಳವಳಾಗಿ ಅವಳನ್ನು ತಬ್ಬಿಕೊಂಡು ಅತ್ತಳು.

೧೮. ಅವಳ ತಾಯಿಯಾದ ಮೃಗಾವತಿಯು ಈ ರೋದನವನ್ನು ಕೇಳಿ ವೇಗದಿಂದ ಬಂದು ಇಂತೆಂದಳು.

ಕಿಮರ್ಥಂ ರುದ್ಯತೇ ಪುತ್ರಿ ಕೇನ ತೇ ವಿಪ್ರಿಯಂ ಕೃತಂ ।
ಕರೋಮಿ ನಿಗ್ರಹಂ ಯೇನ ತಸ್ಯಾಽದ್ಯೈವ ದುರಾತ್ಮನಃ ॥ ೧೯ ॥

ರತ್ನವತ್ಯುವಾಚ :—

ಶೃಣು ಮೇ ಸುಪ್ರಿಯಾಽತೀವ ಬ್ರಾಹ್ಮಣೀ ಪ್ರಾಣಸಮ್ಮಿತಾ ।
ವಿವಾಹಂ ಪ್ರಾಪ್ಯ ಕಲ್ಯಾಣೀ ಪ್ರಯಾಸ್ಯತಿ ಪತೇರ್ಗೃಹಂ ॥ ೨೦ ॥
ಅನಯಾ ರಹಿತಾಽಹಂ ಚ ನ ಜೀವಾಮಿ ಕಥಂಚನ ।
ಏತಸ್ಮಾತ್ಕಾರಣಾದ್ದೇವಿ ಪ್ರರೋದಿಮಿ ಸುದುಃಖಿತಾ ॥ ೨೧ ॥

ಮೃಗಾವತ್ಯುವಾಚ :—

ಯದ್ಯೇವಂ ಪುತ್ರಿ ಯತ್ರ ತ್ವಂ ಪ್ರಯಾಸ್ಯಸಿ ಪತೇರ್ಗೃಹೇ ।
ತಸ್ಯ ರಾಜ್ಞಸ್ತು ಯೋ ವಿಪ್ರಃ ಪೌರೋಹಿತ್ಯೇ ವ್ಯವಸ್ಥಿತಃ ॥ ೨೨ ॥
ತಸ್ಯ ಪುತ್ರಾಯ ದಾಸ್ಯಾಮಿ ಸಖೀಮೇನಾಂ ತವ ಪ್ರಿಯಾಂ ।
ತತ್ರಾಽಪಿ ಯೇನ ತೇ ಸಂಗೋ ಭವಿಷ್ಯತ್ಯನಯಾ ಸಹ ॥ ೨೩ ॥
ಏವಮುಕ್ತ್ವಾ ತತೋ ರಾಜ್ಞೀ ಛಾಂದೋಗ್ಯಂ ದ್ವಿಜಸತ್ತಮಂ ।
ಸಮಾನೀಯಾಬ್ರವೀದೇನಂ ವಿನಯಾಽವನತಾ ಸ್ಥಿತಾ ॥ ೨೪ ॥
ಇಯಂ ತವ ಸುತಾ ಬ್ರಹ್ಮನ್ ಸುತಾಯಾ ಮಮ ಸುಪ್ರಿಯಾ ।
ನ ವಿಯೋಗಂ ಸಹತ್ಯಸ್ಯಾ ಮುಹೂರ್ತಮಪಿ ಭಾಮಿನೀ ॥ ೨೫ ॥

---

೧೯. ಮಗು! ನೀನು ಏತಕ್ಕೆ ಅಳುತ್ತೀಯೆ? ಯಾರು ನಿನಗೆ ಅಹಿತವನ್ನುಂಟುಮಾಡಿದರು? ಹೇಳು. ಅವನನ್ನು ಈಗಲೇ ನಿಗ್ರಹಿಸುವೆನು.

೨೦. ರತ್ನವತಿಯು ಹೇಳುತ್ತಾಳೆ:—ಅಮ್ಮ! ಕೇಳು. ನನ್ನ ಪ್ರಾಣಕ್ಕೆ ಸಮಾನಳೂ, ಪ್ರಿಯಳೂ ಆದ ಬ್ರಾಹ್ಮಣಿಯು ವಿವಾಹ ಮಾಡಿಕೊಂಡು ಪತಿಯ ಮನೆಗೆ ಹೋಗುವಳು.

೨೧. ಇವಳನ್ನಗಲಿದ ನಾನು ಬದುಕಲಾರೆ. ಆದುದರಿಂದ ದುಃಖದಿಂದ ಅಳುತ್ತಿದ್ದೇನೆ.

೨೨–೨೩. ಮೃಗಾವತಿಯು ಹೇಳುತ್ತಾಳೆ:—ಮಗು! ಹೀಗಾದರೆ ನೀನು ಎಲ್ಲಿ ಪತಿಯ ಗೃಹಕ್ಕೆ ಹೋಗುವಿಯೋ, ನಿನ್ನ ಪ್ರಿಯ ಸಖಿಯನ್ನೂ ಆ ರಾಜನ ಪುರೋಹಿತನ ಮಗನಿಗೆ ವಿವಾಹ ಮಾಡಿ ಕೊಡಿಸುವೆನು. ಅಲ್ಲಿಯೂ ನಿನಗೆ ಇವಳ ಸಹವಾಸವು ಆಗುವುದು.

೨೪. ರಾಣಿಯು ಹೀಗೆ ನುಡಿದು ಛಾಂದೋಗ್ಯ ಬ್ರಾಹ್ಮಣನನ್ನು ಕರೆಯಿಸಿ ವಿನಯದಿಂದ ಹೀಗೆ ಹೇಳಿದಳು.

೨೫. "ಬ್ರಾಹ್ಮಣ! ನನ್ನ ಮಗಳಿಗೆ ಪ್ರಿಯ ಸ್ನೇಹಿತಳಾದ ಈ ನಿನ್ನ ಮಗಳು ನನ್ನ ಮಗಳ ವಿರಹವನ್ನು ಮುಹೂರ್ತಕಾಲವೂ ಸಹಿಸುವುದಿಲ್ಲ.

ತಥಾ ತವ ಸುತಾಯಾಶ್ಚ ಸುತೇಯಂ ಮಮ ಸುಪ್ರಿಯಾ ।
ತಸ್ಮಾತ್ಕುರು ವಚೋ ಮಹ್ಯಂ ಯಚ್ಚ ವಕ್ಷ್ಯಾಮಿ ಸುವ್ರತ ॥ ೨೬ ॥
ಯಸ್ಯ ಮೇ ದೀಯತೇ ಕನ್ಯಾ ಕದಾಚಿನ್ನೃಪತೇರಿಯಂ ।
ಪುರೋಧಾಸ್ತಸ್ಯ ಯೋ ವಿಪ್ರಸ್ತಸ್ಮೈ ದೇಯಾ ನಿಜಾ ಸುತಾ ॥ ೨೭ ॥
ಯೇನ ನ ಸ್ಯಾನ್ಮಿಥೋ ಭೇದಸ್ತಾಭ್ಯಾಂ ದ್ವಿಜವರೋತ್ತಮ ।
ಏಕಸ್ಥಾನೇ ಸ್ಥಿತಾಭ್ಯಾಂ ಚ ಪ್ರಸಾದಾತ್ತವ ಸತ್ತಮ ॥ ೨೮ ॥

ಛಾಂದೋಗ್ಯ ಉವಾಚ :—

ನಾಗರೋ ನಾಗರಂ ಮುಕ್ತ್ವಾ ಯೋಽನ್ಯಸ್ಮೈ ಸಂಪ್ರಯಚ್ಛತಿ ।
ಕನ್ಯಕಾಂ ಯಃ ಪ್ರಗೃಹ್ಣಾತಿ ವಿವಾಹಾರ್ಥಂ ಕಥಂಚನ ॥ ೨೯ ॥
ಸ ಪಂಕ್ತಿದೂಷಕಃ ಪಾಪಾನ್ನಾಗರೋ ನ ಭವೇದಿಹ ।
ತಸ್ಮಾನ್ನಾಽಹಂ ಪ್ರದಾಸ್ಯಾಮಿ ಕಥಂಚಿನ್ನಿಜಕನ್ಯಕಾಂ ।
ಅನ್ಯಸ್ಮೈ ನಾಗರಂ ಮುಕ್ತ್ವಾ ನಿಶ್ಚಯೋಽಯಂ ಮಯಾ ಕೃತಃ ॥ ೩೦ ॥

ಬ್ರಾಹ್ಮಣ್ಯುವಾಚ :—

ನಾಽಹಂ ಪತಿಂ ಪ್ರಯಾಸ್ಯಾಮಿ ಕುಮಾರೀ ಬ್ರಹ್ಮಚಾರಿಣೀ ।
ದೇಯಾ ಪ್ರಿಯಾ ಸಖೀ ಯತ್ರ ತಾವದ್ಯಾಸ್ಯಾಮಿ ತತ್ರ ಚ ॥ ೩೧ ॥

---

೨೬. ಹಾಗೆಯೇ ನಿನ್ನ ಮಗಳಿಗೆ ಪ್ರಿಯ ಸ್ನೇಹಿತಳಾದ ನನ್ನ ಮಗಳೂ ವಿರಹವನ್ನು ಸಹಿಸುವುದಿಲ್ಲ. ಆದುದರಿಂದ ನಾನು ಹೇಳುವ ಮಾತನ್ನು ಕೇಳು.

೨೭. ನಮ್ಮ ಮಗಳನ್ನು ಯಾವ ರಾಜನಿಗೆ ಕೊಡುವೆವೊ, ಅವನ ಪುರೋಹಿತನಿಗೆ ನಿನ್ನ ಮಗಳನ್ನು ಕೊಡಬೇಕು.

೨೮. ಅದರಿಂದ ಒಂದೇ ಸ್ಥಳದಲ್ಲಿರುವ ಇವರೀರ್ವರಿಗೆ ನಿನ್ನ ಅನುಗ್ರಹದಿಂದ ವಿರಹವುಂಟಾಗುವುದಿಲ್ಲ.''

೨೯. ಛಾಂದೋಗ್ಯನು ಹೇಳುತ್ತಾನೆ:—ಯಾವ ನಾಗರ ಬ್ರಾಹ್ಮಣನು ನಾಗರ ಬ್ರಾಹ್ಮಣನನ್ನು ಬಿಟ್ಟು ಬೇರೆಯವರಿಗೆ ಕನ್ಯೆಯನ್ನು ಕೊಟ್ಟಾನು? ಯಾವನು ವಿವಾಹಕ್ಕಾಗಿ ಕನ್ಯೆಯನ್ನು ಪರಿಗ್ರಹಿಸಿಯಾನು?

೩೦. ಅವನು ಪಾಪದಿಂದ ಪಂಕ್ತಿದೂಷಕನಾಗಿ ನಾಗರನಾಗುವುದಿಲ್ಲ. ಆದುದರಿಂದ ನಾನು ನನ್ನ ಕನ್ಯೆಯನ್ನು ನಾಗರನನ್ನು ಬಿಟ್ಟು ಬೇರೆಯವನಿಗೆ ಕೊಡುವುದಿಲ್ಲ. ಹೀಗೆ ನಿಶ್ಚಯಿಸಿರುತ್ತೇನೆ.

೩೧. ಬ್ರಾಹ್ಮಣಿಯು ಹೇಳುತ್ತಾಳೆ:—ನಾನು ಪತಿಯನ್ನು ವರಿಸದೆ ಬ್ರಹ್ಮಚಾರಿಣಿಯಾಗಿದ್ದು ನನ್ನ ಪ್ರಿಯ ಸಖಿಯನ್ನು ಮದುವೆ ಮಾಡಿಕೊಟ್ಟ ಸ್ಥಳಕ್ಕೆ ಹೋಗುವೆನು.

ಯದಿ ತಾತ ಬಲಾನ್ಮಹ್ಯಂ ವಿವಾಹಂ ತ್ವಂ ಕರಿಷ್ಯಸಿ ।
ವಿಷಂ ವಾ ಭಕ್ಷಯಿಷ್ಯಾಮಿ ಸಾಧಯಿಷ್ಯಾಮಿ ಪಾವಕಂ ॥ ೩೨ ॥
ಶಸ್ತ್ರೇಣ ವಾ ಹನಿಷ್ಯಾಮಿ ಸ್ವದೇಹಂ ತಾತ ನಿಶ್ಚಯಂ ।
ಏವಂ ಜ್ಞಾತ್ವಾ ತು ತಾತ ತ್ವಂ ಯತ್ಕ್ಷಮಂ ತತ್ಸಮಾಚರ ॥ ೩೩ ॥

ಸೂತ ಉವಾಚ :—

ತಸ್ಯಾಸ್ತಂ ನಿಶ್ಚಯಂ ಜ್ಞಾತ್ವಾ ಸ ವಿಪ್ರೋ ದುಃಖಸಂಯುತಃ ।
ಸ್ತ್ರೀಹತ್ಯಾ ಪಾಪಭೀತಸ್ತು ತಾಂ ತ್ಯಕ್ತ್ವಾ ಸ್ವಗೃಹಂ ಯಯೌ ॥ ೩೪ ॥
ಸಾಽಪಿ ರೇಮೇ ತಯಾ ಸಾರ್ಧಂ ರತ್ನವತ್ಯಾ ದ್ವಿಜೋತ್ತಮಾಃ ।
ಸಂಹೃಷ್ಟಹೃದಯಾ ನಿತ್ಯಂ ಸಂತ್ಯಕ್ತಪಿತೃಸೌಹೃದಾ ॥ ೩೫ ॥
ಯೌವನಂ ಸಾ ತು ಸಂಪ್ರಾಪ್ತಾ ರೂಪೇಣಾಪ್ರತಿಮಾ ಭುವಿ ॥ ೩೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಛಾಂದೋಗ್ಯಬ್ರಾಹ್ಮಣ ಕನ್ಯಕಾವೃತ್ತಾಂತವರ್ಣನಂ"
ನಾಮ ಪಂಚನವತ್ಯುತ್ತರಶತತಮೋಽಧ್ಯಾಯಃ

---

೩೨. ಅಪ್ಪ! ನೀನು ಬಲಾತ್ಕಾರದಿಂದ ನನಗೆ ವಿವಾಹ ಮಾಡಿದರೆ ನಾನು ವಿಷವನ್ನಾಗಲಿ ಕುಡಿಯುವೆನು. ಅಗ್ನಿಯನ್ನಾಗಲಿ ಪ್ರವೇಶಿಸುವೆನು.

೩೩. ನನ್ನ ಶರೀರವನ್ನು ಆಯುಧದಿಂದಾಗಲಿ ನಾಶಗೊಳಿಸುವೆನು. ಅಪ್ಪ! ನನ್ನೀ ನಿಶ್ಚಯವನ್ನರಿತು ಉಚಿತವಾದುದನ್ನು ಮಾಡು.

೩೪. ಸೂತನು ಹೇಳುತ್ತಾನೆ:—ಆ ನಾಗರ ಛಾಂದೋಗ್ಯ ಬ್ರಾಹ್ಮಣನು ಅವಳ ಆ ನಿರ್ಣಯವನ್ನರಿತು ಸ್ತ್ರೀಹತ್ಯೆಯಿಂದುಂಟಾಗುವ ಪಾಪಕ್ಕೆ ಭಯಪಟ್ಟು ಅವಳನ್ನು ಅಲ್ಲಿಯೇ ಬಿಟ್ಟು ತನ್ನ ಮನೆಗೆ ಹೋದನು.

೩೫–೩೬. ಸುಂದರಿಯಾದ ಆ ಬ್ರಾಹ್ಮಣಿಯು ಯುವತಿಯಾಗಿ ತಂದೆಯ ಸ್ನೇಹವನ್ನು ತ್ಯಜಿಸಿ ರತ್ನವತಿಯೊಡನೆ ಸಂತೋಷದಿಂದ ವಿನೋದಗೊಳ್ಳುತ್ತಿದ್ದಳು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಛಾಂದೋಗ್ಯಬ್ರಾಹ್ಮಣ ಕನ್ಯಕಾವೃತ್ತಾಂತವರ್ಣನ" ವೆಂಬ
ನೂರತೊಂಬತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಣ್ಣವತ್ಯುತ್ತರಶತತಮೋಽಧ್ಯಾಯಃ

## ಬೃಹದ್ಬಲಪ್ರತ್ಯಾಗಮನವರ್ಣನಂ

**ಸೂತ ಉವಾಚ :—**

**ಅಥ ತಾಂ ಯೌವನೋಪೇತಾಂ ಸ್ವಸುತಾಂ ಪ್ರೇಕ್ಷ್ಯ ಪಾರ್ಥಿವಃ ।**
**ಅನೌಪಮ್ಯೇನ ರೂಪೇಣ ಸಂಯುಕ್ತಾಂ ವರವರ್ಣಿನೀಂ ।**
**ಆನರ್ತಶ್ಚಿಂತಯಾಮಾಸ ಕನ್ಯಕಾಂ ಪ್ರದದಾಮ್ಯಹಂ ॥ ೧ ॥**
**ಅನರ್ಹಾಯ ಚ ಯೋ ದದ್ಯಾದ್ವರಾಯ ನಿಜಕನ್ಯಕಾಂ ।**
**ಕಾರ್ಯಕಾರಣಲೋಭೇನ ನರಕಂ ಸ ಪ್ರಗಚ್ಛತಿ ॥ ೨ ॥**
**ಏವಂ ಚಿಂತಯತಸ್ತಸ್ಯ ಮಹಾನ್ ಕಾಲೋ ವ್ಯವಸ್ಥಿತಃ ।**
**ನ ಪಶ್ಯತಿ ಚ ತದ್ಯೋಗ್ಯಂ ಕಂಚಿದ್ವರಮನುತ್ತಮಂ ॥ ೩ ॥**
**ಅಥ ಸಂಪ್ರೇಷಯಾಮಾಸ ಸರ್ವಭೂತಾಶ್ರಯೇಷು ಯೇ ।**
**ಚಿತ್ರಕರ್ಮಣಿ ವಿಖ್ಯಾತಾನ್ನರಾಂಶ್ಚಿತ್ರಕರಾಂಸ್ತದಾ ॥ ೪ ॥**
**ಗಚ್ಛಧ್ವಂ ಮಮ ವಾಕ್ಯೇನ ಸರ್ವಾನ್ ಭೂಮಿತಲೇ ನೃಪಾನ್ ।**
**ಲಿಖಿತ್ವಾ ಪಟ್ಟಮಧ್ಯೇ ತು ದರ್ಶಯಧ್ವಂ ತತಃ ಪರಂ ॥ ೫ ॥**

---

## ಕನ್ನಡದ ಅನುವಾದ

### ಬೃಹದ್ಬಲಪ್ರತ್ಯಾಗಮನವರ್ಣನ

೧. ಸೂತನು ಹೇಳುತ್ತಾನೆ:—ಬಳಿಕ ಆನರ್ತರಾಜನು ಯುವತಿಯೂ, ಎಣೆಯಿಲ್ಲದ ಸೌಂದರ್ಯವುಳ್ಳವಳೂ ಆದ ಆ ತನ್ನ ಮಗಳನ್ನು ನೋಡಿ ವಿವಾಹ ಮಾಡುವೆನೆಂದಾಲೋಚಿಸಿದನು.

೨. ಕಾರ್ಯ, ಕಾರಣ, ಆಶೆಗಳಿಂದ ತನ್ನ ಕನ್ಯೆಯನ್ನು ಅನರ್ಹನಾದ ವರನಿಗೆ ದಾನ ಮಾಡಿದವನು ನರಕಭಾಗಿಯಾಗುವನು.

೩. ಅವನು ಹೀಗೆ ಆಲೋಚಿಸುತ್ತಿರಲು ಬಹಳ ಕಾಲವು ಕಳೆಯಿತು. ಆದರೂ ಅವಳಿಗರ್ಹನಾದ ವರನಾವನನ್ನೂ ನೋಡಲಿಲ್ಲ.

೪–೬. ಆಗ ಅವನು ಸಕಲ ಪ್ರಾಣಿಗಳ ಚಿತ್ರಗಳನ್ನು ಬರೆಯಲು ಪ್ರಸಿದ್ಧರಾದ ಚಿತ್ರಕಾರರನ್ನು ಕರೆಯಿಸಿ, "ನೀವು ನನ್ನ ಆದೇಶದಿಂದ ಭೂಮಂಡಲದಲ್ಲಿರುವ

ಸುತಾಯಾ ಮಮ ಯೇನಾಽಸೌ ದೃಷ್ಟ್ವಾಽಭೀಷ್ಟಂ ನರಾಧಿಪಂ ।
ಪತ್ಯರ್ಥಂ ವರಯೇತ್ಸಾಧ್ವೀ ಮಮ ದೋಷೋ ಭವೇನ್ನ ಹಿ ॥ ೬ ॥
ತಸ್ಯ ತದ್ವಚನಂ ಶ್ರುತ್ವಾ ಸರ್ವೇ ಚಿತ್ರಕರಾಸ್ತದಾ ।
ಪ್ರಸ್ಥಿತಾ ಧರಣೀ ಪೃಷ್ಠೇ ಪಾರ್ಥಿವಾನಾಂ ಗೃಹೇಷು ಚ ॥ ೭ ॥
ತೇ ಲಿಖಿತ್ವಾ ಮಹೀಪಾಲಾನ್ಯೌವನಸ್ಥಾನ್ ವಯೋನ್ವಿತಾನ್ ।
ರೂಪೌದಾರ್ಯಗುಣೋಪೇತಾನ್ ದರ್ಶಯಾಮಾಸುರಗ್ರತಃ ।
ರತ್ನವತ್ಯಾಃ ಕ್ರಮೇಣೈವ ತಸ್ಯ ಭೂಪಸ್ಯ ಶಾಸನಾತ್ ॥ ೮ ॥
ಅಥ ತೇಷಾಂ ತು ಸರ್ವೇಷಾಂ ಮಧ್ಯೇ ರಾಜಾ ಬೃಹದ್ಬಲಃ ।
ದಶಾರ್ಣಾಧಿಪತಿರ್ಭವ್ಯಃ ಪತ್ಯರ್ಥಂ ಚ ವೃತಸ್ತಯಾ ॥ ೯ ॥
ತದಾಽಽನರ್ತಾಧಿಪೋ ಹೃಷ್ಟಃ ಪ್ರೇಷಯಾಮಾಸ ತಂ ಪ್ರತಿ ।
ವಿವಾಹಾರ್ಥಂ ಸುವಿಜ್ಞಾಯ ವಾಕ್ಯಮೇತದುವಾಚ ಹ ॥ ೧೦ ॥
ಗಚ್ಛಧ್ವಂ ಮಮ ವಾಕ್ಯೇನ ದಶಾರ್ಣಾಧಿಪತಿಂ ಪ್ರತಿ ।
ವಾಚ್ಯಃ ಸ ವಿನಯಾದ್ಗತ್ವಾ ವಿವಾಹಾರ್ಥಂ ಮಮಾಂತಿಕಂ ॥ ೧೧ ॥
ಸಮಾಗಚ್ಛ ನಿಜಾಂ ಕನ್ಯಾಂ ಯೇನ ಯಚ್ಛಾಮ್ಯಹಂ ತವ ।
ನಾಮ್ನಾ ರತ್ನವತೀಂ ಖ್ಯಾತಾಂ ತ್ರೈಲೋಕ್ಯಸ್ಯಾಽಪಿ ಸುಂದರೀಂ ॥ ೧೨ ॥

---

ರಾಜರನ್ನೆಲ್ಲ ಚಿತ್ರಪಟದಲ್ಲಿ ಬರೆದು ನನ್ನ ಮಗಳಿಗೆ ತೋರಿಸಿರಿ. ಆದರಿಂದವಳು ಇಷ್ಟನಾದ ಅರಸನನ್ನು ಪತಿಯನ್ನಾಗಿ ವರಿಸಿಯಾಳು. ಆಗ ನನ್ನ ತಪ್ಪೇನೂ ಇರುವುದಿಲ್ಲ.'' ಎಂದು ಹೇಳಿ ಕಳುಹಿಸಿದನು.

೭. ಆಗ ಚಿತ್ರಕಾರರೆಲ್ಲ ಅವನ ಆ ಮಾತನ್ನು ಕೇಳಿ ಭೂಮಂಡಲ ದಲ್ಲಿರುವ ರಾಜರ ಅರಮನೆಗಳಿಗೆ ಹೋದರು.

೮. ಅವರು ಯುವಕರೂ, ರೂಪ, ಔದಾರ್ಯ, ಗುಣಗಳಿಂದ ಕೂಡಿ ದವರೂ ಆದ ನರಪಾಲರನ್ನು ಚಿತ್ರಿಸಿ ರಾಜನ ಅಪ್ಪಣೆಯಂತೆ ಕ್ರಮವಾಗಿ ರತ್ನ ವತಿಯ ಮುಂದಿರಿಸಿ ತೋರಿಸಿದರು.

೯. ಬಳಿಕ ರತ್ನವತಿಯು ಆ ಎಲ್ಲ ರಾಜರಲ್ಲಿ ದಶಾರ್ಣದೇಶದ ದೊರೆಯಾದ ಬೃಹದ್ಬಲನನ್ನು ಪತಿಯನ್ನಾಗಿ ವರಿಸಿದಳು.

೧೦–೧೨. ಆಗ ಆನರ್ತರಾಜನು ಹೃಷ್ಟನಾಗಿ ಚೆನ್ನಾಗಿ ಆಲೋಚಿಸಿ ದೂತನನ್ನು ಕುರಿತು, ''ವಿವಾಹಕಾರ್ಯಕ್ಕಾಗಿ ದಶಾರ್ಣರಾಜನೆಡೆಗೆ ಹೋಗಿ ನನ್ನ [illegible]ತಿನಿಂದ ಅವನನ್ನು ಕುರಿತು ವಿನಯದಿಂದ ತ್ರಿಲೋಕಸುಂದರಿಯೂ, ನನ್ನ ಕನ್ಯೆಯೂ ಆದ ರತ್ನವತಿಯನ್ನು ನಿನಗೆ ವಿವಾಹ ಮಾಡಿಕೊಡುವೆನು ಬಾ'' ಎಂದು ಹೇಳು ಎಂದು ಕಳುಹಿಸಿಕೊಟ್ಟನು.

ಗತ್ವಾ ಸ ಸತ್ವರಂ ತತ್ರ ಯತ್ರ ರಾಜಾ ಬೃಹದ್ಬಲಃ ।
ಪ್ರೋವಾಚ ಸಕಲಂ ವಾಕ್ಯಮಾನರ್ತಾಧಿಪತೇಃ ಸ್ಫುಟಂ ॥ ೧೩ ॥
ಸೋಽಪಿ ತತ್ಸಹಸಾ ಶ್ರುತ್ವಾ ತೇಷಾಂ ವಾಕ್ಯಮನುತ್ತಮಂ ।
ಪರಮಾಂ ತುಷ್ಟಿಮಾಸಾದ್ಯ ಪ್ರಸ್ಥಿತಸ್ತತ್ಪುರಂ ಪ್ರತಿ ।
ಸೈನ್ಯೇನ ಮಹತಾ ಯುಕ್ತಶ್ಚತುರಂಗೇಣ ಪಾರ್ಥಿವಃ ॥ ೧೪ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ "ಬೃಹದ್ಬಲಪ್ರತ್ಯಾಗಮನವರ್ಣನಂ" ನಾಮ ಷಣ್ಣವತ್ಯುತ್ತರಶತತಮೋಽಧ್ಯಾಯಃ**

---

೧೩. ಆ ದೂತನು ಶೀಘ್ರವಾಗಿ ಬೃಹದ್ಬಲನೆಡೆಗೆ ಹೋಗಿ ಆನರ್ತರಾಜನ ಎಲ್ಲ ಮಾತುಗಳನ್ನು ಸ್ಪಷ್ಟವಾಗಿ ಹೇಳಿದನು.

೧೪. ಆ ಬೃಹದ್ಬಲನು ಆ ಉತ್ತಮ ಮಾತನ್ನು ಕೇಳಿ ಅತ್ಯಂತ ಸಂತೋಷಗೊಂಡು ಚತುರಂಗ ಸೈನ್ಯದೊಡನೆ ಆನರ್ತನ ಪಟ್ಟಣಕ್ಕೆ ಹೊರಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ ಮಾಹಾತ್ಮ್ಯದಲ್ಲಿ "ಬೃಹದ್ಬಲಪ್ರತ್ಯಾಗಮನವರ್ಣನ"ವೆಂಬ ನೂರತೊಂಬತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತನವತ್ಯುತ್ತರಶತತಮೋಽಧ್ಯಾಯಃ

### ಪರಾವಸುಪ್ರಾಯಶ್ಚಿತ್ತವಿಧಾನವೃತ್ತಾಂತವರ್ಣನಂ

**ಸೂತ ಉವಾಚ :—**

**ಏತಸ್ಮಿನ್ನೇವ ಕಾಲೇ ತು ನಾಗರೋ ದ್ವಿಜಸತ್ತಮಾಃ ।**
**ವಿಶ್ವಾವಸುರಿತಿ ಖ್ಯಾತೋ ವೇದವೇದಾಂಗಪಾರಗಃ ॥ ೧ ॥**
**ಪಶ್ಚಿಮೇ ವಯಸಿ ಪ್ರಾಪ್ತೇ ತಸ್ಯ ಪುತ್ರೋ ಬಭೂವ ಹ ।**
**ಪರಾವಸುರಿತಿ ಖ್ಯಾತಸ್ತಸ್ಯ ಪ್ರಾಣಸಮಃ ಸದಾ ॥ ೨ ॥**
**ಸ ವೇದಾಧ್ಯಯನಂ ಚಕ್ರೇ ಯೌವನೇ ಸಮುಪಸ್ಥಿತೇ ।**
**ವಯಸ್ಯೈಃ ಸಂಮತೈಃ ಸಾರ್ಧಂ ಸದಾ ಹಾಸ್ಯಪರಾಯಣೈಃ ॥ ೩ ॥**
**ಕಸ್ಯಚಿತ್ತ್ವಥ ಕಾಲಸ್ಯ ಮಾಘಮಾಸ ಉಪಸ್ಥಿತೇ ।**
**ರಾತ್ರೌ ಸೋಽಧ್ಯಯನಂ ಚಕ್ರ ಉಪಾಧ್ಯಾಯಗೃಹಂ ಗತಃ ॥ ೪ ॥**
**ನಿಶೀಥೇ ಸ ಸಮುತ್ಥಾಯ ಸರ್ವೈರ್ಮಿತ್ರೈಶ್ಚ ರಕ್ಷಿತಃ ।**
**ವೇಶ್ಯಾಗೃಹಂ ಸಮಾಸಾದ್ಯ ಪ್ರಸುಪ್ತೋ ವೇಶ್ಯಯಾ ಸಹ ॥ ೫ ॥**

---

### ಕನ್ನಡದ ಅನುವಾದ

#### ಪರಾವಸುಪ್ರಾಯಶ್ಚಿತ್ತವಿಧಾನವೃತ್ತಾಂತವರ್ಣನ

೧. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಈ ಸಮಯದಲ್ಲಿ ವಿಶ್ವಾವಸುವೆಂಬ ವೇದವೇದಾಂಗಪಾರಂಗತನಾದ ಓರ್ವ ಬ್ರಾಹ್ಮಣನಿದ್ದನು.

೨. ಅವನಿಗೆ ಮುಪ್ಪಿನಲ್ಲಿ ಪರಾವಸುವೆಂಬ ಪ್ರಾಣಸಮನಾದ ತನಯನು ಜನಿಸಿದನು.

೩. ಅವನು ಯುವಕನಾಗಲು ಯಾವಾಗಲೂ ಹಾಸ್ಯನಿರತರಾದ ಸ್ನೇಹಿತರೊಡನೆ ವೇದಾಧ್ಯಯನ ಮಾಡುತ್ತಿದನು.

೪. ಒಂದಾನೊಂದು ಸಲ ಮಾಘ ಮಾಸದಲ್ಲಿ ಪರಾವಸುವು ರಾತ್ರಿಯ ವೇಳೆ ಉಪಾಧ್ಯಾಯನ ಮನೆಗೆ ಹೋಗಿ ವೇದಾಧ್ಯಯನ ಮಾಡುತ್ತಿದ್ದನು.

೫–೬. ಅವನು ಅರ್ಧರಾತ್ರಿಯ ವೇಳೆಯಲ್ಲಿ ಎದ್ದು ಸಮಸ್ತ ಸ್ನೇಹಿತರ ಕಾವಲಿನಿಂದ ವೇಶ್ಯಾಗೃಹವನ್ನು ಸೇರಿ ತನ್ನ ಆಚಮನಕ್ಕೂ, ಕುಡಿಯುವುದಕ್ಕೂ

ಜಲಪೂರ್ಣಂ ಸಮಾಧಾಯ ಜಲಪಾತ್ರಂ ಸಮೀಪಗಂ ।
ನಿಶಾಚಮನಯೋಗ್ಯಂ ಚ ಜಲಪಾನಾರ್ಥಮೇವ ಚ ॥ ೬ ॥
ನಿಶಾಶೇಷೇ ತು ಸಂಪ್ರಾಪ್ತೇ ಸ ಪಿಪಾಸಾ ಸಮಾಕುಲಃ ।
ನಿದ್ರಾಲಸ್ಯಸಮೋಪೇತಃ ಶಯ್ಯಾಂ ತ್ಯಕ್ತ್ವಾ ಸಮುತ್ಥಿತಃ ॥ ೭ ॥
ವೇಶ್ಯಾಯಾ ಮದ್ಯಪಾತ್ರಂ ತು ಪೃಥಕ್ಸ್ಥಾತ್ಸಂವ್ಯವಸ್ಥಿತಂ ।
ತದಾದಾಯ ಪಪೌ ಮದ್ಯಂ ಜಲಭ್ರಾಂತ್ಯಾ ಯದೈವ ಸಃ ॥ ೮ ॥
ತದಾ ಮದ್ಯಂ ಪರಿಜ್ಞಾಯ ಪಾತ್ರಂ ತ್ಯಕ್ತ್ವಾ ಸುದುಃಖಿತಃ ।
ವೈರಾಗ್ಯಂ ಪರಮಂ ಗತ್ವಾ ಪ್ರಲಾಪಾನಕರೋದ್ಬಹೂನ್ ॥ ೯ ॥
ಅಹೋ ನಿದ್ರಾನ್ವಿತೇನಾಽದ್ಯ ಕಿಂ ಮಯಾ ವಿಕೃತಂ ಕೃತಂ ।
ಯಂದದ್ಯ ಮದ್ಯಮಾಪೀತಂ ಜಲಭ್ರಾಂತ್ಯಾ ವಿಗರ್ಹಿತಂ ॥ ೧೦ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕಥಂ ಶುದ್ಧಿರ್ಭವೇನ್ಮಮ ।
ಪ್ರಾಯಶ್ಚಿತ್ತಂ ಕರಿಷ್ಯಾಮಿ ಯದ್ಯಪಿ ಸ್ಯಾತ್ಸುದುಷ್ಕರಂ ॥ ೧೧ ॥
ಏವಂ ನಿಶ್ಚಿತ್ಯ ಮನಸಾ ಪ್ರಭಾತೇ ಸಮುಪಸ್ಥಿತೇ ।
ಶಂಖತೀರ್ಥಂ ಸಮಾಸಾದ್ಯ ಕೃತ್ವಾ ಸ್ನಾನಂ ತಥಾ ಪರಂ ॥ ೧೨ ॥
ಸ ಶಿಖಂ ವಪನಂ ಪಶ್ಚಾತ್ಕಾರಯಿತ್ವಾ ತ್ವರಾನ್ವಿತಃ ।
ಗತಶ್ಚ ತಿಷ್ಠತೇ ಯತ್ರ ಬ್ರಹ್ಮಘೋಷಪರಾಯಣಃ ॥ ೧೩ ॥

---

ಉಚಿತವಾದ ನೀರಿನಿಂದ ತುಂಬಿದ ಜಲಪಾತ್ರೆಯನ್ನು ಸಮೀಪದಲ್ಲಿರಿಸಿಕೊಂಡು ವೇಶ್ಯೆಯೊಡನೆ ಮಲಗಿದನು.

೭–೮. ಅವನು ಬೆಳಗಿನ ಜಾವ ಬಾಯಾರಿಕೆಗೊಂಡವನಾಗಿ ಹಾಸಿಗೆಯಿಂದ ಎದ್ದು ನಿದ್ರಾಲಸ್ಯದಿಂದ ಕೂಡಿದವನಾಗಿ ಕೆಳಗಿಟ್ಟಿರುವ ವೇಶ್ಯೆಯ ಮದ್ಯಪಾತ್ರೆಯನ್ನು ತೆಗೆದುಕೊಂಡು ನೀರೆಂದು ತಿಳಿದು ಮದ್ಯವನ್ನು ಕುಡಿದನು.

೯. ಅನಂತರ ಅವನು ಅದು ಹೆಂಡವೆಂದರಿತು ಆ ಪಾತ್ರೆಯನ್ನು ಬಿಟ್ಟು ದುಃಖದಿಂದ ಅತ್ಯಂತ ವೈರಾಗ್ಯಗೊಂಡು ಬಹುವಾಗಿ ಗೋಳಾಡಿದನು.

೧೦. "ಇದೇನಾಶ್ಚರ್ಯ! ನಿದ್ರೆಯಿಂದ ಆಲಸ್ಯಗೊಂಡ ನಾನು ಎಂತಹ ಅಕಾರ್ಯವನ್ನು ಮಾಡಿರುವೆನು. ನೀರೆಂದು ತಿಳಿದು ನಿಂದ್ಯವಾದ ಮದ್ಯವನ್ನು ಕುಡಿದೆನಲ್ಲ.

೧೧. ಏನು ಮಾಡಲಿ? ಎಲ್ಲಿಗೆ ಹೋಗಲಿ? ನನಗೆ ಶುದ್ಧಿಯಾಗುವ ಬಗೆ ಹೇಗೆ? ಪ್ರಾಯಶ್ಚಿತ್ತವು ಅಸಾಧ್ಯವಾಗಿದ್ದರೂ ಅದನ್ನು ಆಚರಿಸುವೆನು."

೧೨–೧೩. ಅವನು ಹೀಗೆ ನಿಶ್ಚಯಿಸಿ ಬೆಳಗಾಗಲು ಶಂಖತೀರ್ಥಕ್ಕೆ ಹೋಗಿ ಶಿಖಾ ಸಹಿತವಾಗಿ ವಪನ ಮಾಡಿಸಿಕೊಂಡು ಮಿಂದು ತ್ವರೆಯಿಂದ ಬ್ರಹ್ಮಸ್ಥಾನದಲ್ಲಿ

ಉಪಾಧ್ಯಾಯಃ ಸ ಶಿಷ್ಯಶ್ಚ ಬ್ರಹ್ಮಸ್ಥಾನಂ ಸಮಾಶ್ರಿತಃ ।
ಸ ಗತ್ವಾ ದೂರತಃ ಸ್ಥಿತ್ವಾ ಸನ್ನಿವಿಷ್ಟೋ ಯಥಾಂತ್ಯಜಃ ॥ ೧೪ ॥
ಶ್ಮಶ್ರುಮೂರ್ಧಜ ಹೀನಸ್ತು ಯದಾ ಮಿತ್ರೈರ್ವಿಲೋಕಿತಃ ।
ತದಾ ಹಾಸ್ಯಾದ್ಧತೋ ಮೂರ್ಧ್ನಿ ಹಸ್ತಾಗ್ರೈಶ್ಚ ಮುಹುರ್ಮುಹುಃ ॥ ೧೫ ॥
ಉಪಾಧ್ಯಾಯಸ್ತು ತಂ ದೃಷ್ಟ್ವಾ ದೀನಂ ಬಾಷ್ಪಪರಿಪ್ಲುತಂ ।
ಶ್ಮಶ್ರುಮೂರ್ಧಜಸಂತ್ಯಕ್ತಂ ತತಃ ಪ್ರೋವಾಚ ಸಾದರಂ ॥ ೧೬ ॥
ಕಿಮದ್ಯ ವತ್ಸ ದೂರೇ ತ್ವಮುಪವಿಷ್ಟಸ್ತು ದೈನ್ಯಧೃಕ್ ।
ಏಹಿ ಮೇ ಸನ್ನಿಧೌ ಬ್ರೂಹಿ ಪರಾಭೂತೋಽಸಿ ಕೇನ ವಾ ॥ ೧೭ ॥

ಪರಾವಸುರುವಾಚ :—

ಅಯೋಗ್ಯೋಽಹಂ ಗುರೋ ಜಾತಃ ಸೇವಾಯಾಸ್ತವ ಸಾಂಪ್ರತಂ ।
ವೇಶ್ಯಾಯಾ ಮಂದಿರಸ್ಥೇನ ಜ್ಞಾತ್ವಾ ನಿಜಕಮಂಡಲುಂ ॥ ೧೮ ॥
ವೇಶ್ಯಾಯಾ ಮದ್ಯಪಾತ್ರಂ ತು ಮದ್ಯಪೂರ್ಣಂ ಪ್ರಗೃಹ್ಯ ಚ ।
ತಸ್ಮಾದ್ದೇಹಿ ವಿಭೋ ಮಹ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ೧೯ ॥
ಧರ್ಮದ್ರೋಣೇಷು ಯತ್ಪ್ರೋಕ್ತಂ ತತ್ಕರಿಷ್ಯಾಮ್ಯಸಂಶಯಂ ॥ ೨೦ ॥
ಅಥ ತಂ ವಟವಃ ಪ್ರೋಚುರ್ವಯಸ್ಯಾಸ್ತಸ್ಯ ಯೇ ಸ್ಥಿತಾಃ ।
ಹಾಸ್ಯಂ ಕೃತ್ವಾ ಪ್ರಕಾಮಾಶ್ಚ ವೇಶ್ಯಾಯಾ ಗುರುಸನ್ನಿಧೌ ॥ ೨೧ ॥

---

ಶಿಷ್ಯರೊಡನೆ ವೇದಘೋಷನಿರತನಾದ ಗುರುವಿನ ಹತ್ತಿರ ಹೋಗಿ ದೂರದಲ್ಲಿಯೇ ಚಂಡಾಲನಂತೆ ಕುಳಿತನು.

೧೫–೧೬. ಸ್ನೇಹಿತರು ಜುಟ್ಟು ಮೀಸೆಗಳನ್ನು ವಪನ ಮಾಡಿಸಿಕೊಂಡಿರುವ ಅವನನ್ನು ಕಂಡು ಹಾಸ್ಯಕ್ಕಾಗಿ ಅಂಗೈಯಿಂದ ತಲೆಯಮೇಲೆ ಹೊಡೆದರು. ಉಪಾಧ್ಯಾಯನು ದೀನನೂ, ಕಣ್ಣೀರನ್ನು ಸುರಿಸುತ್ತಿರುವವನೂ, ಶಿಖಾ ಶ್ಮಶ್ರುಗಳಿಲ್ಲದಿರುವವನೂ ಆದ ಆ ಪರಾವಸುವನ್ನು ಕಂಡು ಪ್ರೀತಿಯಿಂದ ಇಂತೆಂದನು.

೧೭. "ಮಗು! ನೀನು ಏತಕ್ಕೆ ದೈನ್ಯದಿಂದ ದೂರದಲ್ಲಿ ಕುಳಿತಿರುವೆ? ನನ್ನ ಹತ್ತಿರ ಬಾ. ಯಾರು ನಿನ್ನನ್ನು ಪರಾಭವಗೊಳಿಸಿದರು? ಹೇಳು."

೧೮–೨೦. ಪರಾವಸುವು ಹೇಳುತ್ತಾನೆ:—ಗುರುವೆ! ನಾನು ವೇಶ್ಯೆಯ ಮನೆಯಲ್ಲಿ ಮದ್ಯಪಾತ್ರೆಯನ್ನು ನನ್ನ ಕಮಂಡಲುವೆಂದರಿತು ಮದ್ಯವನ್ನು ಕುಡಿದಿರುವುದರಿಂದ ಈಗ ನಿನ್ನ ಸೇವೆಗೆ ಅನರ್ಹನಾಗಿರುವೆನು. ಆದುದರಿಂದ ನನಗೆ ಶುದ್ಧಿಗಾಗಿ ಧರ್ಮಶಾಸ್ತ್ರಗಳಲ್ಲಿ ಹೇಳಿರುವ ಪ್ರಾಯಶ್ಚಿತ್ತವನ್ನು ಹೇಳು. ಅದನ್ನು ಮಾಡುವೆನು.

೨೧. ತರುವಾಯ ಅವನ ಮಿತ್ರರಾದ-ಬಾಲಕರು ಅವನನ್ನು ಕುರಿತು ಗುರುವಿನ ಹತ್ತಿರ ವೇಶ್ಯೆಯನ್ನು ಹಾಸ್ಯಮಾಡಿ ಹೀಗೆಂದರು.

ಯಾ ಏಷಾ ನೃಪತೇಃ ಕನ್ಯಾ ಖ್ಯಾತಾ ರತ್ನಾವತೀ ಜನೇ ।
ಅಸ್ಯಾಃ ಸ್ತನೌ ಗೃಹೀತ್ವಾ ತ್ವಮಧರಂ ಪಿಬಸಿ ದ್ರುತಂ ।
ತತಸ್ತೇ ಸ್ಯಾದ್ವಿಶುದ್ಧಿಶ್ಚ ನಾಽನ್ಯಥಾ ಪ್ರಭವಿಷ್ಯತಿ ॥ ೨೨ ॥

ಪರಾವಸುರುವಾಚ :—

ನ ವಯಸ್ಯಾ ನರ್ಮಕಾಲೋ ವಿಷಮೋ ಮಮ ಸಂಸ್ಥಿತೇ ।
ಮಮೋಪರಿ ಯದಿ ಸ್ನೇಹೋ ಬಾಲಮಿತ್ರತ್ವಸಂಭವಃ ।
ತದಾನೀಯ ದ್ವಿಜಾನನ್ಯಾನ್ವದಧ್ವಂ ನಿಷ್ಕೃತಿಂ ಮಮ ॥ ೨೩ ॥
ಅಥ ತೇ ನರ್ಮಮುತ್ಸೃಜ್ಯ ತದ್ದುಃಖೇನ ಚ ದುಃಖಿತಾಃ ।
ವಿಶ್ವಾವಸುಂ ಸಮಾಸಾದ್ಯ ತದ್ವೃತ್ತಾಂತಮಥಾಽಬ್ರುವನ್ ॥ ೨೪ ॥
ಸೋಽಪಿ ತೇಷಾಂ ಸಮಾಕರ್ಣ್ಯ ತತ್ಕರ್ಣಕಟುಕಂ ವಚಃ ।
ಸ ಭಾರ್ಯಃ ಪ್ರಯಯೌ ತತ್ರ ಯತ್ರ ಪುತ್ರೋ ವ್ಯವಸ್ಥಿತಃ ॥ ೨೫ ॥
ದುಃಖೇನ ಮಹತಾಯುಕ್ತಃ ಸ್ಖಲಮಾನಃ ಪದೇಪದೇ ।
ವೃದ್ಧಭಾವಾತ್ತಥಾ ಶೋಕಾತ್ಪುತ್ರಾಽಕೃತ್ಯ ಸಮುದ್ಭವಾತ್ ॥ ೨೬ ॥
ತತಸ್ತೌ ಪ್ರೋಚತುಃ ಪುತ್ರಂ ಬಾಷ್ಪಗದ್ಗದಯಾ ಗಿರಾ ।
ದಂಪತೀ ಬಹು ಶೋಕಾರ್ತೌ ಹಾ ಪುತ್ರ ಕಿಮಿದಂ ಕೃತಂ ।
ಸೋಽಪಿ ಸರ್ವಂ ಸಮಾಚಖ್ಯೌ ತಾಭ್ಯಾಂ ವೃತ್ತಾಂತಮಾತ್ಮನಃ ॥ ೨೭ ॥

---

೨೨. ನೀನು ಈ ಆನರ್ತರಾಜನ ಕನ್ಯೆಯಾದ ರತ್ನವತಿಯ ಸ್ತನಗಳನ್ನು ಹಿಡಿದು ಶೀಘ್ರವಾಗಿ ಅಧರವನ್ನು ಚುಂಬಿಸಿದರೆ ನಿನಗೆ ಶುದ್ಧಿಯಾಗುವುದು. ಬೇರೆ ರೀತಿಯಿಂದ ಶುದ್ಧಿಯಾಗುವುದಿಲ್ಲ.

೨೩. ಪರಾವಸುವು ಹೇಳುತ್ತಾನೆ:—ಮಿತ್ರರೆ! ಕಷ್ಟ ಬಂದಿದೆ. ಹಾಸ್ಯ ಮಾಡುವ ಕಾಲವಲ್ಲ. ನನ್ನಲ್ಲಿ ನಿಮಗೆ ಬಾಲ್ಯಮಿತ್ರತ್ವಸಂಬಂಧವಾದ ಸ್ನೇಹ ವಿದ್ದರೆ ಇತರ ಬ್ರಾಹ್ಮಣರನ್ನು ಕರೆತಂದು ನನಗೆ ಪ್ರಾಯಶ್ಚಿತ್ತವನ್ನು ಹೇಳಿರಿ.

೨೪. ಬಳಿಕ ಮಿತ್ರರಾದ ಆ ಬಾಲಕರು ಹಾಸ್ಯವನ್ನು ತ್ಯಜಿಸಿ ಅವನ ದುಃಖದಿಂದ ದುಃಖಿತರಾಗಿ ವಿಶ್ವಾವಸುವಿನ ಹತ್ತಿರ ಹೋಗಿ ಅವನ ಸಮಾಚಾರವನ್ನು ಹೇಳಿದರು.

೨೫—೨೬. ಆ ವಿಶ್ವಾವಸುವೂ ಕರ್ಣಕಟುವಾದ ಅವರ ಆ ಮಾತನ್ನು ಕೇಳಿ, ಪತ್ನಿಯೊಡನೆ ಮುಪ್ಪಿನಿಂದಲೂ, ಮಗನ ಅಕೃತ್ಯದಿಂದುಂಟಾದ ಶೋಕದಿಂದಲೂ ಪ್ರತಿ ಹೆಜ್ಜೆಯಲ್ಲಿಯೂ ಜಾರುತ್ತ ಮಗನಿರುವ ಸ್ಥಳಕ್ಕೆ ಹೋದನು.

೨೭—೨೮. ಬಳಿಕ ಆ ತಂದೆ ತಾಯಿಗಳು ಬಾಷ್ಪದಿಂದ ಗದ್ಗದವಾದ ಮಾತಿನಿಂದ ಬಹು ದುಃಖದಿಂದ, "ಎಲೈ ಮಗನೆ! ಏಕೆ ಇಂತಹ ಕೆಲಸ ಮಾಡಿದೆ?"

**ಪ್ರಾಯಶ್ಚಿತ್ತಂ ಕರಿಷ್ಯಾಮಿ ತಸ್ಮಾದಾತ್ಮ ವಿಶುದ್ಧಯೇ ।**
**ತತೋ ವಿಶ್ವಾವಸುರ್ವಿಪ್ರಾನ್ ಸ್ಮಾರ್ತಾಂಚ್ಛ್ರುತಿಸಮನ್ವಿತಾನ್ ।**
**ತದರ್ಥಮಾನಯಾಮಾಸ ವೇದವಿದ್ಯಾವಿಚಕ್ಷಣಾನ್ ॥ ೨೮ ॥**
**ತತಃ ಪರಾವಸುಸ್ತೇಷಾಂ ಪುರಃ ಸ್ಥಿತ್ವಾ ಕೃತಾಂಜಲಿಃ ।**
**ಪ್ರೋವಾಚ ಸ್ವಾದಿತಂ ಮದ್ಯಂ ಮಯಾ ರಾತ್ರಾವಜಾನತಾ ।**
**ವೇಶ್ಯಾಭಾಂಡಂ ಸಮಾದಾಯ ಜ್ಞಾತ್ವಾ ನಿಜಕಮಂಡಲುಂ ॥ ೨೯ ॥**
**ಏವಂ ಜ್ಞಾತ್ವಾ ಯದರ್ಹಂ ಚ ಪ್ರಾಯಶ್ಚಿತ್ತಂ ಪ್ರದೀಯತಾಂ ।**
**ಯೇನ ಮೇ ಜಾಯತೇ ಶುದ್ಧಿಃ ಪ್ರಸಾದಾದ್ವೋ ದ್ವಿಜೋತ್ತಮಾಃ ॥ ೩೦ ॥**
**ಏವಮುಕ್ತಾಸ್ತತಸ್ತೇನ ವಿಪ್ರಾಸ್ತೇ ಸ್ಮೃತಿವಾದಿನಃ ।**
**ಧರ್ಮಶಾಸ್ತ್ರಂ ಸಮಾಲೋಕ್ಯ ತತಃ ಪ್ರೋಚುಶ್ಚ ತಂ ದ್ವಿಜಾಃ ॥ ೩೧ ॥**
**ಅತಿಮಾನಾದತಿಕ್ರೋಧಾತ್ಸ್ನೇಹಾದ್ವಾ ಯದಿ ವಾ ಭಯಾತ್ ।**
**ಪ್ರಾಯಶ್ಚಿತ್ತಮನರ್ಹಂ ತು ದದತ್ತತ್ಪಾಪಮಶ್ನುತೇ ॥ ೩೨ ॥**
**ಪ್ರಾಯಶ್ಚಿತ್ತಂ ಪ್ರದಾಸ್ಯಾಮಸ್ತಸ್ಮಾದ್ಯುಕ್ತಂ ವಯಂ ತವ ।**
**ಯದಿ ಶಕ್ನೋಷಿ ತತ್ಕರ್ತುಂ ತತ್ಕುರುಷ್ವ ಸಮಾಹಿತಃ ॥ ೩೩ ॥**

---

ಎಂದು ಕೇಳಿದರು. ಅವನೂ ಅವರಿಗೆ ತನ್ನ ವೃತ್ತಾಂತವನ್ನು ಹೇಳಿ ಆತ್ಮ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಮಾಡುವೆನೆಂದನು. ಅನಂತರ ವಿಶ್ವಾವಸುವು ಆ ಪ್ರಾಯಶ್ಚಿತ್ತಕ್ಕಾಗಿ ಸ್ಮೃತಿ, ಶ್ರುತಿ ನಿಪುಣರಾದ ಬ್ರಾಹ್ಮಣರನ್ನು ಕರೆಯಿಸಿದನು.

೨೯. ಬಳಿಕ ಪರಾವಸುವು ಅವರ ಮುಂದೆ ಕೈಮುಗಿದುಕೊಂಡು ನಿಂತು ಹೀಗೆಂದನು. "ನಾನು ರಾತ್ರಿಯವೇಳೆ ತಿಳಿಯದೆ ವೇಶ್ಯೆಯ ಮದ್ಯದ ಪಾತ್ರೆಯನ್ನು ನನ್ನ ಕಮಂಡಲುವೆಂದರಿತು ತೆಗೆದುಕೊಂಡು ಮದ್ಯವನ್ನು ಕುಡಿದಿರುವೆನು.

೩೦. ದ್ವಿಜವರ್ಯರೆ! ನೀವು ಇದನ್ನು ಕೇಳಿ ಅನುಗ್ರಹಿಸಿ ನನಗೆ ಶುದ್ಧಿಯನ್ನುಂಟುಮಾಡುವ ಪ್ರಾಯಶ್ಚಿತ್ತವನ್ನು ವಿಧಿಸಿರಿ."

೩೧. ಅವನು ಹೀಗೆ ಹೇಳಲು ಸ್ಮೃತಿಜ್ಞರಾದ ಆ ಬ್ರಾಹ್ಮಣರು ಧರ್ಮಶಾಸ್ತ್ರವನ್ನವಲೋಕಿಸಿ ಅವನನ್ನು ಕುರಿತು ಇಂತೆಂದರು.

೩೨. "ಅತ್ಯಂತ ಅಹಂಕಾರದಿಂದಾಗಲಿ, ಅಧಿಕ ಕೋಪದಿಂದಾಗಲಿ, ಸ್ನೇಹದಿಂದಾಗಲಿ, ಭಯದಿಂದಾಗಲಿ ಅನರ್ಹವಾದ ಪ್ರಾಯಶ್ಚಿತ್ತವನ್ನು ವಿಧಿಸುವವನು ಆ ಪಾಪವನ್ನೇ ಹೊಂದುವನು.

೩೩. ಆದುದರಿಂದ ನಾವು ನಿನಗೆ ಯುಕ್ತವಾದ ಪ್ರಾಯಶ್ಚಿತ್ತವನ್ನು ಹೇಳುತ್ತೇವೆ. ನೀನು ಅದನ್ನು ಮಾಡಲು ಶಕ್ತನಾದರೆ ಸಾವಧಾನ ಮನಸ್ಸಿನಿಂದ ಮಾಡು."

ಪರಾವಸುರುವಾಚ :—

ಕರೋಮಿ ವೋ ನ ಚೇದ್ವಾಕ್ಯಂ ತತ್ಪೃಚ್ಛಾಮಿ ಕುತೋ ದ್ವಿಜಾಃ ।
ನಾಽಹಂ ಕೇನಾಽಪಿ ಸಂದೃಷ್ಟೋ ಮದ್ಯಪಾನಂ ಸಮಾಚರನ್ ॥ ೩೪ ॥
ತಸ್ಮಾದ್ಬ್ರೂತ ಯಥಾರ್ಹಂ ಮೇ ಪ್ರಾಯಶ್ಚಿತ್ತಂ ವಿಶುದ್ಧಯೇ ।
ಅಪಿ ಪ್ರಾಣಹರಂ ರೌದ್ರಂ ನೋ ಚೇತ್ಪಾಪಮವಾಪ್ಸ್ಯಥ ॥ ೩೫ ॥

ಬ್ರಾಹ್ಮಣಾ ಊಚುಃ :—

ಬುಧ್ಯಮಾನೋ ದ್ವಿಜೋ ಯಸ್ತು ಮದ್ಯಪಾನಂ ಸಮಾಚರೇತ್ ।
ತಾವನ್ಮಾತ್ರಂ ಹಿರಣ್ಯಂ ಚ ತಪ್ತಂ ಪೀತ್ವಾ ವಿಶುಧ್ಯತಿ ॥ ೩೬ ॥
ಅಜ್ಞಾನತೋ ಯದಾ ಪೀತಂ ಮದ್ಯಂ ವಿಪ್ರೇಣ ಕರ್ಹಿಚಿತ್ ।
ಅಗ್ನಿತುಲ್ಯಂ ಘೃತಂ ಪೀತ್ವಾ ತಾವನ್ಮಾತ್ರಂ ವಿಶುಧ್ಯತಿ ॥ ೩೭ ॥
ಏವಂ ತೇ ಸರ್ವಮಾಖ್ಯಾತಂ ಪ್ರಾಯಶ್ಚಿತ್ತಂ ವಿಶುದ್ಧಯೇ ।
ಯದಿ ಶಕ್ನೋಷಿ ಚೇತ್ಕರ್ತುಂ ಕುರುಷ್ವ ತ್ವಂ ದ್ವಿಜೋತ್ತಮ ॥ ೩೮ ॥

ಪರಾವಸುರುವಾಚ :—

ಗಂಡೂಷಮೇಕಂ ಮದ್ಯಂ ತು ಮಯಾ ಪೀತಂ ದ್ವಿಜೋತ್ತಮಾಃ ।
ತಾವನ್ಮಾತ್ರಂ ಪಿಬಾಮ್ಯೇವ ಘೃತಂ ವಹ್ನಿಸಮಂ ಕೃತಂ ॥ ೩೯ ॥

---

೩೪. ಪರಾವಸುವು ಹೇಳುತ್ತಾನೆ:—ದ್ವಿಜರೆ! ನಾನು ನಿಮ್ಮ ಮಾತನ್ನು ನಡೆಸದವನಾದರೆ ಏತಕ್ಕೆ ನಿಮ್ಮನ್ನು ಕೇಳುತ್ತೇನೆ. ನಾನು ಮದ್ಯಪಾನ ಮಾಡಿರುವುದನ್ನು ಯಾರೂ ನೋಡಲಿಲ್ಲ.

೩೫. ಆದುದರಿಂದ ನನ್ನ ಶುದ್ಧಿಗಾಗಿ ಭಯಂಕರವೂ, ಪ್ರಾಣವನ್ನು ಅಪಹರಿಸುವುದೂ ಆಗಿದ್ದರೂ ಪ್ರಾಯಶ್ಚಿತ್ತವನ್ನು ಹೇಳಿರಿ. ಹಾಗೆ ಹೇಳದಿದ್ದರೆ ಪಾಪವನ್ನು ಹೊಂದುವಿರಿ.

೩೬. ಬ್ರಾಹ್ಮಣರು ಹೇಳುತ್ತಾರೆ:—ದ್ವಿಜನು ತಿಳಿದು ಮದ್ಯಪಾನವನ್ನು ಮಾಡಿದರೆ ಅಷ್ಟೇ ಕಾದ ಚಿನ್ನವನ್ನು ಕುಡಿದರೆ ಶುದ್ಧನಾಗುವನು.

೩೭. ಅಜ್ಞಾನದಿಂದ ಮಧ್ಯಪಾನ ಮಾಡಿದರೆ ಅಷ್ಟೇ ಬೆಂಕಿಯಂತೆ ಕಾದ ತುಪ್ಪವನ್ನು ಕುಡಿದು ಪರಿಶುದ್ಧನಾಗುವನು.

೩೮. ಹೀಗೆ ನಿನ್ನ ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಹೇಳಿದ್ದೇವೆ. ನೀನಿದನ್ನು ಮಾಡಲು ಶಕ್ತನಾದರೆ ಮಾಡು.

೩೯–೪೧. ಪರಾವಸುವು ಹೇಳುತ್ತಾನೆ:—ದ್ವಿಜವರ್ಯರೆ! ನಾನು ಒಂದು ಗಂಡೂಷದಷ್ಟು ಮದ್ಯವನ್ನು ಕುಡಿದಿರುತ್ತೇನೆ. ಅಷ್ಟೇ ತುಪ್ಪವನ್ನು ನಿಮ್ಮ ಅಪ್ಪಣೆಯಿಂದ ನನ್ನ ಶರೀರಶುದ್ಧಿಗಾಗಿ ಈಗಲೇ ಅಗ್ನಿಯಂತೆ ಬಿಸಿಮಾಡಿ

ಯುಷ್ಮದಾದೇಶತೋಽದ್ಯೈವ ಸ್ವಶರೀರವಿಶುದ್ಧಯೇ ।
ವಿಶ್ವಾವಸುಶ್ಚ ತಚ್ಛ್ರುತ್ವಾ ವಜ್ರಪಾತೋಪಮಂ ವಚಃ ॥ ೪೦ ॥
ವಿಪ್ರಾಣಾಂ ಚಾಽಥ ಪುತ್ರಸ್ಯ ತದೋವಾಚ ಸುದುಃಖಿತಃ ।
ಕೃತ್ವಾಶ್ರುಮೋಕ್ಷಣಂ ಭೂರಿ ಬಾಷ್ಪಗದ್ಗದಯಾ ಗಿರಾ ॥ ೪೧ ॥
ಸರ್ವಸ್ವಮಪಿ ದಾಸ್ಯಾಮಿ ಪುತ್ರಸ್ಯಾಸ್ಯ ವಿಶುದ್ಧಯೇ ।
ಪ್ರಾಯಶ್ಚಿತ್ತಂ ಸಮಾಚರ್ತುಂ ನ ದಾಸ್ಯಾಮಿ ಕಥಂಚನ ॥ ೪೨ ॥
ಅಶ್ರಾದ್ಧೇಯೋ ವಿಪಾಂಕ್ತೇಯಃ ಸ ಪುತ್ರೋ ವಾ ಭವಾಮ್ಯಹಂ ।
ಸ್ಥಾನಂ ವಾ ಸಂತ್ಯಜಾಮ್ಯೇತತ್ಪುತ್ರನ್ಯೈವಂ ಸಮಾಚರ ॥ ೪೩ ॥
ತಚ್ಛ್ರುತ್ವಾ ವಚನಂ ತಸ್ಯ ಪಿತುರ್ವಿಘ್ನಕರಂ ಪರಂ ।
ಪ್ರಾಯಶ್ಚಿತ್ತಸ್ಯ ಸಸ್ನೇಹಂ ಪುತ್ರೋ ವಚನಮಬ್ರವೀತ್ ॥ ೪೪ ॥
ತ್ಯಜ ತಾತ ಮಮ ಸ್ನೇಹಂ ಮಾ ವಿಘ್ನಂ ಮೇ ಸಮಾಚರ ।
ಪ್ರಾಯಶ್ಚಿತ್ತಂ ಕರಿಷ್ಯಾಮಿ ನಿಶ್ಚಯೋಽಯಂ ಮಯಾ ಕೃತಃ ॥ ೪೫ ॥

ಮಾತೋವಾಚ :—

ಯದಿ ಪುತ್ರ ತ್ವಯಾ ಕಾರ್ಯಂ ಪ್ರಾಯಶ್ಚಿತ್ತಂ ವಿಶುದ್ಧಯೇ ।
ತದಹಂ ಪತಿನಾ ಸಾರ್ಧಂ ಪ್ರವೇಕ್ಷ್ಯಾಮಿ ಪುರೋಽನಲಂ ॥ ೪೬ ॥

---

ಕುಡಿಯುತ್ತೇನೆ. ವಿಶ್ವಾವಸುವು ಸಿಡಿಲಿಗೆ ಸಮಾನವಾದ ಆ ವಿಪ್ರರ ಮತ್ತು ಮಗನ ಆ ಮಾತನ್ನು ಕೇಳಿ ಕಣ್ಣೀರನ್ನು ಸುರಿಸುತ್ತ ಅತ್ಯಂತ ದುಃಖದಿಂದ ಗದ್ಗದಿತನಾಗಿ ಇಂತೆಂದನು.

೪೨. "ನನ್ನೀ ಮಗನ ಶುದ್ಧಿಗಾಗಿ ಎಲ್ಲವನ್ನೂ ಕೊಡುವೆನು. ಪ್ರಾಯಶ್ಚಿತ್ತವನ್ನು ಮಾಡಿಸಲಾರೆನು.

೪೩. ನಾನು ಪುತ್ರನೊಡನೆ ಶ್ರಾದ್ಧಾನರ್ಹನಾಗಲಿ, ಪಂಕ್ತಿಬಾಹ್ಯನಾಗಲಿ ಆಗುವೆನು. ಈ ಸ್ಥಳವನ್ನಾದರೂ ತ್ಯಜಿಸುವೆನು. ಮಗು! ನೀನು ಹೀಗೆ ಪ್ರಾಯಶ್ಚಿತ್ತವನ್ನಾಚರಿಸಬೇಡ."

೪೪. ಪರಾವಸುವು ತಂದೆಯ ಪ್ರಾಯಶ್ಚಿತ್ತಕ್ಕೆ ವಿಘ್ನವನ್ನುಂಟುಮಾಡುವ ಮಾತನ್ನು ಕೇಳಿ ಪ್ರೀತಿಯಿಂದ ಇಂತೆಂದನು.

೪೫. "ಅಪ್ಪ! ನನ್ನ ಮೇಲಿನ ಮಮತೆಯನ್ನು ಬಿಡು. ನನಗೆ ಅಡ್ಡಿ ಮಾಡಬೇಡ. ನಾನು ಪ್ರಾಯಶ್ಚಿತ್ತವನ್ನು ಮಾಡುವೆನೆಂದು ನಿಶ್ಚಯಿಸಿದ್ದೇನೆ."

೪೬. ತಾಯಿಯು ಹೇಳುತ್ತಾಳೆ:—ಮಗು! ನೀನು ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನು ಮಾಡುವುದಾದರೆ ನಾನು ಪತಿಯೊಡನೆ ನಿನ್ನ ಮುಂದೆ ಅಗ್ನಿಯನ್ನು ಮೊದಲು ಪ್ರವೇಶಿಸುವೆನು.

ತ್ವಾಂ ದ್ರಷ್ಟುಂ ನೈವ ಶಕ್ನೋಮಿ ಪಿಬಂತಮಗ್ನಿವದ್ಘೃತಂ ।
ಪಶ್ಚಾತ್ಪ್ರಾಣಪರಿತ್ಯಕ್ತಂ ಸತ್ಯೇನಾತ್ಮಾನಮಾಲಭೇ ॥ ೪೭ ॥

ಪಿತೋವಾಚ :—

ಯುಕ್ತಂ ಪುತ್ರಾನಯಾ ಪ್ರೋಕ್ತಂ ಮಾತ್ರಾ ತವ ಹಿತಂ ತಥಾ ।
ಮಮಾಪಿ ಸಮ್ಮತಂ ಹ್ಯೇತತ್ಕರಿಷ್ಯಾಮಿ ನ ಸಂಶಯಃ ॥ ೪೮ ॥

ಸೂತ ಉವಾಚ :—

ಏತಸ್ಮಿನ್ನಂತರೇ ಸರ್ವೇ ಸುಹೃದಸ್ತಸ್ಯ ಯೇ ಸ್ಥಿತಾಃ ।
ತಚ್ಛ್ರುತ್ವಾ ತಂ ಸಮಾಯಾತಾ ವೃತ್ತಾಂತಂ ದುಃಖಸಂಯುತಾಃ ॥ ೪೯ ॥
ಪ್ರೋಚುಶ್ಚ ವಿವಿಧೈರ್ವಾಕ್ಯೈಃ ಸಪತ್ನೀಕಂ ವಿಭಾವಸುಂ ।
ಪುತ್ರಶೋಕೇನ ಸಂತಪ್ತಂ ಮರಣೇ ಕೃತನಿಶ್ಚಯಂ ॥ ೫೦ ॥
ಪುತ್ರಂ ಪ್ರಬೋಧಯಾಮಾಸುಃ ಪ್ರಾಯಶ್ಚಿತ್ತನಿವೃತ್ತಯೇ ।
ತದಾ ನ ಶಕ್ನುವಂತಿಸ್ಮ ನಿವರ್ತಯಿತುಮಂಜಸಾ ॥ ೫೧ ॥
ತಾವುಭೌ ಚ ಪಿತಾಪುತ್ರೌ ಪ್ರಾಣತ್ಯಾಗಕೃತಾದರೌ ॥ ೫೨ ॥
ತತೋ ವಾಸ್ತುಪದಂ ಜಗ್ಮುಃ ಸರ್ವಜ್ಞೋ ಯತ್ರ ತಿಷ್ಠತಿ ।
ಭರ್ತೃಯಜ್ಞೋ ಮಹಾಭಾಗಃ ಸರ್ವಸಂದೇಹವಾರಕಃ ॥ ೫೩ ॥

---

೪೭. ಅಗ್ನಿಯಂತಿರುವ ತುಪ್ಪವನ್ನು ಕುಡಿಯುತ್ತಿರುವವನೂ, ಅನಂತರ ಪ್ರಾಣವನ್ನು ತ್ಯಜಿಸುವವನೂ ಆದ ನಿನ್ನನ್ನು ನೋಡಲು ನಾನು ಸಮರ್ಥಳಲ್ಲ. ನನ್ನ ಆಣೆ ನಿಜ.

೪೮. ತಂದೆಯು ಹೇಳುತ್ತಾನೆ:—ಮಗು! ನಿನ್ನ ತಾಯಿಯು ಉಚಿತವೂ, ಹಿತವೂ ಆಗಿರುವ ಮಾತನ್ನಾಡಿರುವಳು. ನನಗೆ ಇದು ಸಮ್ಮತವಾಗಿದೆ. ನಾನು ನಿಶ್ಚಯವಾಗಿಯೂ ಮಾಡುವೆನು.

೪೯–೫೦. ಸೂತನು ಹೇಳುತ್ತಾನೆ:—ಇಷ್ಟರಲ್ಲಿ ವಿಶ್ವಾವಸುವಿನ ಮಿತ್ರರೆಲ್ಲ ಆ ವೃತ್ತಾಂತವನ್ನು ಕೇಳಿ ದುಃಖದಿಂದ ಅಲ್ಲಿಗೆ ಬಂದು ಪುತ್ರಶೋಕದಿಂದ ಸಂತಪ್ತನಾಗಿ ಮಡಿಯಲು ನಿಶ್ಚಯಿಸಿದ ಪತ್ನೀಸಹಿತನಾದ ವಿಶ್ವಾವಸುವನ್ನು ಕುರಿತು ಅನೇಕ ಸಮಾಧಾನದ ಮಾತುಗಳನ್ನು ಆಡಿದರು.

೫೧. ಅವರು ಪ್ರಾಯಶ್ಚಿತ್ತವನ್ನು ಮಾಡದಂತೆ ಪರಾವಸುವನ್ನು ಎಚ್ಚರಿಸಿದರೂ ತಡೆಯುವುದಕ್ಕೆ ಸಮರ್ಥರಾಗಲಿಲ್ಲ.

೫೨–೫೩. ಆ ತಂದೆ ತಾಯಿಗಳು ಪ್ರಾಣವನ್ನು ಬಿಡಲು ನಿಶ್ಚಯಿಸಿದರು. ಆ ಸಮಯದಲ್ಲಿ ವಿಶ್ವಾವಸುವಿನ ಮಿತ್ರರು ಸಕಲ ಸಂದೇಹಗಳನ್ನು ನಿವಾರಿಸುವ ಸರ್ವಜ್ಞನಾದ ಭರ್ತೃಯಜ್ಞನಿರುವ ವಾಸ್ತುಪದಕ್ಕೆ ಹೋದರು.

ತಸ್ಯ ಸರ್ವಂ ಸಮಾಚಖ್ಯುಃ ಪರಾವಸುಸಮುದ್ಭವಂ ।
ವೃತ್ತಾಂತಂ ಮದ್ಯಪಾನೋತ್ಥಂ ಯನ್ಮಿತ್ರೈಸ್ತಸ್ಯ ಕೀರ್ತಿತಂ ॥ ೫೪ ॥
ಪ್ರಾಯಶ್ಚಿತ್ತಂ ತು ಹಾಸ್ಯೇನ ಯಚ್ಚ ಸ್ಮಾರ್ತೈಃ ಪ್ರಕೀರ್ತಿತಂ ।
ವಿಶ್ವಾವಸೋಶ್ಚ ಸಂಕಲ್ಪಂ ವಹ್ನಿಸಾಧನಸಂಭವಂ ॥ ೫೫ ॥
ಸಪತ್ನೀಕಸ್ಯ ಮಿತ್ರಾಣಾಂ ಯಚ್ಚ ದುಃಖಮುಪಸ್ಥಿತಂ ।
ನಿವೇದ್ಯ ತತ್ತಥಾ ಪ್ರೋಚುರ್ಭೂರ್ಯೋಽಪಿ ವಿನಯಾನ್ವಿತಂ ॥ ೫೬ ॥
ಅತೀತಂ ವರ್ತಮಾನಂ ಚ ಭವಿಷ್ಯದ್ವಾಽಪಿ ಯದ್ಭವೇತ್ ।
ನ ತೇಽಸ್ತ್ಯವಿದಿತಂ ಕಿಂಚಿತ್ಸರ್ವಂ ಜಾನೀಮಹೇ ವಯಂ ॥ ೫೭ ॥
ಏತಚ್ಚ ನಗರಂ ಸರ್ವಂ ವಿಶ್ವಾವಸುಕೃತೇಽಧುನಾ ।
ಸಂಶಯಂ ಪರಮಂ ಪ್ರಾಪ್ತಂ ತೇನ ಪ್ರಾಪ್ತಾಸ್ತವಾಂತಿಕಂ ॥ ೫೮ ॥
ತಸ್ಮಾದ್ಬ್ರೂಹಿ ಮಹಾಭಾಗ ಯದ್ಯಸ್ತ್ಯಪರಮೇವ ಹಿ ।
ಪ್ರಾಯಶ್ಚಿತ್ತಂ ದ್ವಿಜಸ್ಯಾಸ್ಯ ಮದ್ಯಪಾನವಿಶುದ್ಧಯೇ ॥ ೫೯ ॥
ನ ತೇಹ್ಯವಿದಿತಂ ಕಿಂಚಿತ್ತವ ವೇದಸಮುದ್ಭವಂ ।
ಭರ್ತೃಯಜ್ಞೋ ವಿಹಸ್ಯೋಚ್ಚೈಸ್ತತೋ ವಚನಮಬ್ರವೀತ್ ॥ ೬೦ ॥
ಬ್ರಾಹ್ಮಣಸ್ಯಾಽಸ್ಯ ಶುಧ್ಯರ್ಥಮಸ್ತ್ಯುಪಾಯಃ ಸುಖಾವಹಃ ।
ವಿದ್ಯಮಾನೋಽಪಿ ನಾಽಸ್ತ್ಯೇವ ಮತಿರೇಷಾ ಸ್ಥಿತಾ ಮಮ ॥ ೬೧ ॥

---

೫೪. ಅವರು ಆ ಮುನಿಗೆ ಪರಾವಸುವಿನ ಮದ್ಯಪಾನ ಮೊದಲಾದ ವೃತ್ತಾಂತವನ್ನೆಲ್ಲ ಹೇಳಿದರು.

೫೫–೫೬. ಮತ್ತು ಅವರು ಸ್ಮಾರ್ತರು ಹಾಸ್ಯದಿಂದ ಹೇಳಿದ ಪ್ರಾಯಶ್ಚಿತ್ತವನ್ನೂ, ವಿಶ್ವಾವಸುವಿನ ಪತ್ನಿಯೊಡನೆ ಅಗ್ನಿಪ್ರವೇಶದ ಸಂಕಲ್ಪವನ್ನೂ, ಅವನ ಮಿತ್ರರಿಗೆ ಸಂಭವಿಸಿದ ದುಃಖವನ್ನೂ ತಿಳಿಸಿ ಮರಳಿ ವಿನಯದಿಂದ ಇಂತೆಂದರು.

೫೭. "ಭೂತಭವಿಷ್ಯದ್ವರ್ತಮಾನಗಳಲ್ಲಿ ನಿನಗೆ ತಿಳಿಯದಿರುವುದು ಯಾವುದೂ ಇಲ್ಲವೆಂಬುದನ್ನು ನಾವು ಅರಿತಿದ್ದೇವೆ.

೫೮. ಈ ಪಟ್ಟಣದ ಜನರೆಲ್ಲ ಈಗ ವಿಶ್ವಾವಸುವಿಗಾಗಿ ಮರಣ ಸಂಶಯವನ್ನು ಹೊಂದಿದ್ದಾರೆ. ಆದುದರಿಂದ ನಾವು ನಿನ್ನ ಹತ್ತಿರ ಬಂದಿದ್ದೇವೆ.

೫೯. ಮಹಾತ್ಮನೆ! ಆದುದರಿಂದ ಈ ಬ್ರಾಹ್ಮಣನ ಮದ್ಯಪಾನ ಶುದ್ಧಿಗೆ ಬೇರೆ ಪ್ರಾಯಶ್ಚಿತ್ತವಿದ್ದರೆ ಹೇಳು.

೬೦. ನಿನಗೆ ತಿಳಿಯದ ವೇದದ ವಿಷಯವೇ ಇಲ್ಲ." ಅದಕ್ಕೆ ಭರ್ತೃಯಜ್ಞನು ಗಟ್ಟಿಯಾಗಿ ನಕ್ಕು ಹೀಗೆ ಹೇಳಿದನು.

೬೧. ಈ ಬ್ರಾಹ್ಮಣನ ಶುದ್ಧಿಗೆ ಸುಖಕರವಾದ ಒಂದುಪಾಯವಿದೆ. ಆದರೆ ಅದು ಇದ್ದರೂ ಇಲ್ಲದಂತೆಯೇ ಎಂದು ನನಗೆ ತೋರುವುದು.

ಬ್ರಾಹ್ಮಣಾ ಊಚುಃ:—

ಪೂರ್ವಾಪರವಿರೋಧೇನ ವಾಕ್ಯಮೇತನ್ಮಹಾಮತೇ ।
ಕಥಮಸ್ತಿ ಕಥಂ ನಾಸ್ತಿ ತಸ್ಮಾತ್ತ್ವಂ ವಕ್ತುಮರ್ಹಸಿ ।
ವಿಸ್ಮಯೋಽಯಂ ಮಹಾಂಜಾತಃ ಸರ್ವೇಷಾಂ ಚ ದ್ವಿಜನ್ಮನಾಂ ॥ ೬೨ ॥

ಭರ್ತೃಯಜ್ಞ ಉವಾಚ:—

ಜಪಚ್ಛಿದ್ರಂ ತಪಶ್ಛಿದ್ರಂ ಯಚ್ಛಿದ್ರಂ ಯಜ್ಞಕರ್ಮಣಿ ।
ಸರ್ವಂ ಭವತಿ ನಿಶ್ಛಿದ್ರಂ ಯಸ್ಯ ಚೇಚ್ಛಂತಿ ಬ್ರಾಹ್ಮಣಾಃ ॥ ೬೩ ॥
ಅಚ್ಛಿದ್ರಮಿತಿ ಯದ್ವಾಕ್ಯಂ ವದಂತಿ ಕ್ಷಿತಿದೇವತಾಃ ।
ವಿಶೇಷಾನ್ನಾಗರೋದ್ಭೂತಾಸ್ತತ್ತಥೈವ ನ ಚಾಽನ್ಯಥಾ ॥ ೬೪ ॥
ತಥಾ ಚ ಬ್ರಹ್ಮಶಾಲಾಯಾಂ ಸಂಸ್ಥಿತೈರ್ಯದುದಾಹೃತಂ ।
ನಾಽನ್ಯಥಾ ತತ್ಪರಿಜ್ಞೇಯಂ ಹಾಸ್ಯೇನಾಽಪಿ ಸ್ಮೃತಿಂ ವಿನಾ ॥ ೬೫ ॥
ಸ ಏಷ ಹಾಸ್ಯಭಾವೇನ ಪ್ರೋಕ್ತೋ ಮಿತ್ರೈಃ ಪರಾವಸುಃ ॥ ೬೬ ॥
ರತ್ನವತ್ಯಾಃ ಸ್ತನೌ ಗೃಹ್ಯ ಯದ್ಯಾಸ್ವಾದಯತೇಽಧರಂ ।
ತದ್ಭವಿಷ್ಯತಿ ತೇ ಶುದ್ಧಿರ್ಮದ್ಯಪಾನಸಮುದ್ಭವಾ ॥ ೬೭ ॥
ತದುಪಾಯೋ ಮಯಾ ಪ್ರೋಕ್ತೋ ವಿಪ್ರಸ್ಯಾಽಸ್ಯ ಸುಖಾವಹಃ ।
ಪರಾಶರಮತೇನೈವ ಕರೋತಿ ಯದಿ ಶುಧ್ಯತಿ ॥ ೬೮ ॥

---

೬೨. ಬ್ರಾಹ್ಮಣರು ಹೇಳುತ್ತಾರೆ:—ಮಹಾ ಪ್ರಾಜ್ಞನೆ! ಈ ಮಾತು ಪೂರ್ವಾಪರ ವಿರೋಧವುಳ್ಳುದು. ಹೇಗೆ ಇದೆ? ಹೇಗೆ ಇಲ್ಲ? ಅದನ್ನು ನೀನು ಹೇಳಲರ್ಹನಾಗಿರುವೆ. ನಮ್ಮೆಲ್ಲ ಬ್ರಾಹ್ಮಣರಿಗೆ ಬಹಳ ಆಶ್ಚರ್ಯವುಂಟಾಗಿದೆ.

೬೩. ಭರ್ತೃಯಜ್ಞನು ಹೇಳುತ್ತಾನೆ:—ಬ್ರಾಹ್ಮಣರು ಒಲಿದರೆ ಜಪಚ್ಛಿದ್ರ, ತಪಶ್ಛಿದ್ರ, ಯಜ್ಞಚ್ಛಿದ್ರ ಇವುಗಳೆಲ್ಲ ನಿಶ್ಛಿದ್ರವಾಗುವುವು.

೬೪. ಬ್ರಾಹ್ಮಣರು ಅದರಲ್ಲಿಯೂ ವಿಶೇಷವಾಗಿ ನಾಗರ ಬ್ರಾಹ್ಮಣರು ನಿರ್ದುಷ್ಟವಾಗಿದೆಯೆಂದು ಹೇಳಿದರೆ ಅದು ಹಾಗೆಯೇ ಆಗುವುದು. ವ್ಯತ್ಯಾಸವಾಗುವುದಿಲ್ಲ.

೬೫. ಹಾಗೆಯೇ ಬ್ರಹ್ಮಶಾಲೆಯಲ್ಲಿರುವ ಬ್ರಾಹ್ಮಣರು ಸ್ಮೃತಿಯನ್ನು ಬಿಟ್ಟು ಹಾಸ್ಯದಿಂದ ಹೇಳಿದ್ದರೂ ಅದು ವ್ಯತ್ಯಾಸವಾಗುವುದಿಲ್ಲವೆಂದು ತಿಳಿಯಬೇಕು.

೬೬–೬೭. ಪರಾವಸುವನ್ನು ಕುರಿತು ಮಿತ್ರರು ಹಾಸ್ಯದಿಂದ ರತ್ನವತಿಯ ಸ್ತನಗಳನ್ನು ಹಿಡಿದುಕೊಂಡು ತುಟಿಯನ್ನು ಚುಂಬಿಸಿದರೆ ಮದ್ಯಪಾನ ಮಾಡಿದ ನಿನ್ನ ದೋಷವು ಪರಿಹಾರವಾಗುವುದೆಂದು ಹೇಳಿದ್ದಾರೆ.

೬೮. ನಾನು ಈ ಬ್ರಾಹ್ಮಣನಿಗೆ ಪರಾಶರರ ಅಭಿಪ್ರಾಯದಂತೆ ಆ ಸುಖಕರವಾದ ಉಪಾಯವನ್ನು ಹೇಳಿದ್ದೇನೆ. ಅದನ್ನು ಮಾಡಿದರೆ ಇವನು ಶುದ್ಧನಾಗುತ್ತಾನೆ.

ಬ್ರಾಹ್ಮಣಾ ಊಚುಃ:—

ಯದೇತಚ್ಛೃಣುತೇ ರಾಜಾ ವಾಕ್ಯಮಿಷ್ಯಾರ್ಪರಾಯಣಃ ।
ತತ್ಸರ್ವೇಷಾಂ ವಧಂ ಕುರ್ಯಾದ್ವಿಪ್ರಾಣಾಮನ್ಯಥಾ ಭವೇತ್ ॥ ೬೯ ॥
ತಸ್ಮಾತ್ಕರೋತು ಕಾಽಭೀಷ್ಟಮೇಷ ವಿಪ್ರಃ ಪರಾವಸುಃ ।
ಮಾತಾಪಿತೃಸಮೋಪೇತೋ ವಯಂ ಯಾಸ್ಯಾಮಹೇ ಗೃಹಂ ॥ ೭೦ ॥

ಭರ್ತೃಯಜ್ಞ ಉವಾಚ:—

ಸ ರಾಜಾ ನೀತಿಮಾನ್ ವಿಜ್ಞಃ ಸರ್ವಧರ್ಮಪರಾಯಣಃ ।
ಭಕ್ತೋ ದೇವದ್ವಿಜಾನಾಂ ಚ ಸರ್ವಶಾಸ್ತ್ರವಿಚಕ್ಷಣಃ ॥ ೭೧ ॥
ತಸ್ಮಾನ್ಮಯಾ ಸಮಂ ಸರ್ವೇ ನಾಗರಾಯಾಂ ತು ತದ್ಗೃಹೇ ॥ ೭೨ ॥
ಮಧ್ಯಗಂ ಪುರತಃ ಕೃತ್ವಾ ತದ್ವಕ್ತ್ರೇಣ ಚ ತತ್ಪುರಃ ।
ಕಥಯಂತು ಚ ವೃತ್ತಾಂತಂ ಮದ್ಯಪಾನಸಮುದ್ಭವಂ ॥ ೭೩ ॥
ಪರಾವಸೋಶ್ಚ ಯತ್ಪ್ರೋಕ್ತಂ ವಯಸ್ಯೈರ್ಹಾಸ್ಯಮಾಶ್ರಿತೈಃ ।
ಪರಾಶರಸಮುತ್ಥಂ ಚ ಯದ್ವಾಕ್ಯಂ ತತ್ಸ್ಮೃತೇಃ ಪರಂ ॥ ೭೪ ॥
ತಚ್ಛ್ರುತ್ವಾ ಯದಿ ಭೂಪಾಲ ಈರ್ಷ್ಯಾಲೋಭಸಮನ್ವಿತಃ ।
ಭವಿಷ್ಯತಿ ತತೋಽಹಂ ತಂ ಧಾರಯಿಷ್ಯಾಮಿ ಸತ್ಪಥೇ ॥ ೭೫ ॥

---

೬೯. ಬ್ರಾಹ್ಮಣರು ಹೇಳುತ್ತಾರೆ:—ಅಸೂಯೆಯುಳ್ಳ ದೊರೆಯು ಇದನ್ನು ಕೇಳಿದರೆ ಸಕಲ ಬ್ರಾಹ್ಮಣರನ್ನೂ ವಧಿಸಿಯಾನು. ಎಲ್ಲ ವ್ಯತ್ಯಾಸವಾದೀತು.

೭೦. ಆದುದರಿಂದ ಈ ಪರಾವಸುವು ತಾಯಿ ತಂದೆಗಳೊಡನೆ ತನಗಿಷ್ಟ ಬಂದಂತೆ ಮಾಡಲಿ ನಾವು ಮನೆಗೆ ಹೋಗುವೆವು.

೭೧. ಭರ್ತೃಯಜ್ಞನು ಹೇಳುತ್ತಾನೆ:—ಆ ದೊರೆಯು ನೀತಿವಂತನೂ, ಜ್ಞಾನಿಯೂ, ಸಕಲ ಧರ್ಮಗಳಲ್ಲಿ ಆಸಕ್ತಿಯುಳ್ಳವನೂ, ದೇವತೆಗಳು ಮತ್ತು ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ, ಸಮಸ್ತ ಶಾಸ್ತ್ರಗಳಲ್ಲಿ ಕುಶಲನೂ ಆಗಿರುವನು.

೭೨. ಆದುದರಿಂದ ನನ್ನೊಡನೆ ನಾಗರರೆಲ್ಲರೂ ಅವನ ಮನೆಗೆ ಬರಲಿ.

೭೩–೭೪. ನೀವು ಮಧ್ಯಗನನ್ನು ಮುಂದಿರಿಸಿಕೊಂಡು ಆ ರಾಜನ ಮುಂದೆ ಪರಾವಸುವಿನ ಮದ್ಯಪಾನದ ವೃತ್ತಾಂತವನ್ನೂ, ಅವನ ಮಿತ್ರರು ಹಾಸ್ಯದಿಂದ ನುಡಿದ ಪರಾಶರ ಸ್ಮೃತಿಯ ವಾಕ್ಯವನ್ನೂ ಹೇಳಿರಿ.

೭೫. ದೊರೆಯು ಅದನ್ನು ಕೇಳಿ ಈರ್ಷ್ಯೆ ಮತ್ತು ಲೋಭಗಳಿಂದ ಸಹಿತನಾದರೆ ನಾನು ಅವನನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡುವೆನು.

**ಸೂತ ಉವಾಚ :–**

**ತತಸ್ತೇ ನಾಗರಾಃ ಸರ್ವೇ ಸಂತೋಷಂ ಪರಮಂಗತಾಃ ।**
**ಸಾಧುವಾದೈಃ ಸಮಭ್ಯರ್ಚ್ಯ ಭರ್ತೃಯಜ್ಞಂ ಪೃಥಗ್ವಿಧೈಃ ॥ ೭೬ ॥**
**ತೇನೈವ ಸಹಿತಂ ತೂರ್ಣಂ ಮಧ್ಯೇ ಕೃತ್ವಾ ಚ ಮಧ್ಯಗಂ ।**
**ಗರ್ತಾತೀರ್ಥಸಮುದ್ಭೂತಂ ವೇದವೇದಾಂಗಪಾರಗಂ ॥ ೭೭ ॥**
**ಸ್ಮೃತಿಜ್ಞಂ ಲಕ್ಷಣಜ್ಞಂ ತಮಾಹಿತಾಗ್ನಿಂ ಯಶಸ್ವಿನಂ ।**
**ಯಷ್ಟಾರಂ ಬಹುಯಜ್ಞಾನಾಂ ಭರ್ತೃಯಜ್ಞಮತೇ ಸ್ಥಿತಂ ॥ ೭೮ ॥**
**ಆನರ್ತೇನಾಽಪಿ ಭೂಪೇನ ಸ್ವರ್ಗಭ್ರಷ್ಟೇನ ವೈ ಪುರಾ ।**
**ಕರ್ಣೋತ್ಪಲಾಜನಿತ್ರೇಣ ಯಶ್ಚ ಪೂರ್ವಂ ಚಿರಂತನಃ ॥ ೭೯ ॥**
**ಚಮತ್ಕಾರಪುರೇ ನ್ಯಸ್ತಃ ಸ್ಥಾನೇಽಸ್ಮಿನ್ವಿಪ್ರ ಗೌರವಾತ್ ।**
**ಯೇನ ಸಿಧ್ಯಂತಿ ಕಾರ್ಯಾಣಿ ಸರ್ವೇಷಾಂ ಚ ದ್ವಿಜನ್ಮನಾಂ ॥ ೮೦ ॥**
**ತಥಾಚೈವ ತು ಚಾಽನ್ಯಾನಿ ಚಮತ್ಕಾರಪುರಸ್ಯ ಚ ।**
**ಹರಿಭದ್ರಾಽಭಿಧಾನಂ ತಂ ಭರ್ತೃಯಜ್ಞಸಮನ್ವಿತಂ ॥ ೮೧ ॥**
**ಕೃತ್ವಾ ತೇ ನಾಗರಾಃ ಸರ್ವೇ ರಾಜದ್ವಾರಮುಪಾಗತಾಃ ।**
**ಪರಾವಸುಂ ಸಮಾದಾಯ ಮಾತಾಪಿತೃಸಮನ್ವಿತಂ ॥ ೮೨ ॥**
**ಅಥ ದ್ವಾಃಸ್ಥೋ ದ್ರುತಂ ಗತ್ವಾ ಭೂಪತೇಸ್ತಾನ್ನ್ಯವೇದಯತ್ ।**
**ಬ್ರಾಹ್ಮಣಾನ್ ಭರ್ತೃಯಜ್ಞೇನ ಹರಿಭದ್ರೇಣ ಸಂಯುತಾನ್ ॥ ೮೩ ॥**

---

೭೬–೮೨. ಸೂತನು ಹೇಳುತ್ತಾನೆ:—ಬಳಿಕ ನಾಗರರೆಲ್ಲರೂ ಅತ್ಯಂತ ಸಂತುಷ್ಟರಾಗಿ ನಾನಾ ವಿಧವಾದ ಸಾಧುವಾದಗಳಿಂದ ಭರ್ತೃಯಜ್ಞನನ್ನು ಪೂಜಿಸಿ ಅವನೊಡನೆ ಗರ್ತಾತೀರ್ಥದವನೂ, ವೇದವೇದಾಂಗಪಾರಂಗತನೂ, ಸ್ಮೃತಿ ಲಕ್ಷಣಗಳನ್ನರಿತವನೂ, ಆಹಿತಾಗ್ನಿಯೂ, ಯಶಸ್ವಿಯೂ, ಅನೇಕ ಯಜ್ಞಗಳನ್ನು ಮಾಡಿದವನೂ, ಭರ್ತೃಯಜ್ಞನ ಅಭಿಪ್ರಾಯದಂತೆ ನಡೆಯುವವನೂ, ಸ್ವರ್ಗಭ್ರಷ್ಟನಾದ ಕರ್ಣೋತ್ಪಲೆಯ ತಂದೆಯಾದ ಆನರ್ತದೊರೆಯಿಂದ ಹಿಂದೆ ಈ ಚಮತ್ಕಾರಪುರದಲ್ಲಿ ಬ್ರಾಹ್ಮಣರ ಗೌರವದಿಂದ ಸ್ಥಾಪಿಸಲ್ಪಟ್ಟವನೂ, ಬ್ರಾಹ್ಮಣರ ಕಾರ್ಯವನ್ನೂ, ಚಮತ್ಕಾರಪುರದ ಇತರ ಕಾರ್ಯಗಳನ್ನು ನೆರವೇರಿಸುವವನೂ ಆದ ಹರಿಭದ್ರನನ್ನು ಕರೆದುಕೊಂಡು ಪರಾವಸು, ಮತ್ತು ಅವನ ತಂದೆ ತಾಯಿಗಳು ಇವರಿಂದ ಸಹಿತರಾಗಿ ಅರಮನೆಯ ಬಾಗಿಲಿಗೆ ಹೋದರು.

೮೩. ತರುವಾಯ ಬಾಗಿಲು ಕಾಯುವವನು ಭರ್ತೃಯಜ್ಞ, ಹರಿಭದ್ರರೊಡನೆ ಬ್ರಾಹ್ಮಣರು ಬಂದಿರುವುದನ್ನು ಶೀಘ್ರವಾಗಿ ದೊರೆಗೆ ತಿಳಿಸಿದನು.

ಆನರ್ತೋಽಪಿ ಚ ತಾಂಚ್ಛ್ರುತ್ವಾ ರಾಜದ್ವಾರ ಸಮಾಗತಾನ್ ।
ಪುರೋಧಸಾ ಸಮಾಯುಕ್ತಃ ಸಮ್ಮುಖಂ ಪ್ರಯಯೌ ತದಾ ॥ ೮೪ ॥
ದತ್ವಾರ್ಘ್ಯಂ ಮಧುಪರ್ಕಂ ಚ ವಿಷ್ಟರಂ ಗಾಂ ತಥಾ ನೃಪಃ ।
ಪ್ರಥಮಂ ಭರ್ತೃಯಜ್ಞಾಯ ಹರಿಭದ್ರಾಯ ವೈ ತತಃ ॥ ೮೫ ॥
ಚತುರ್ಣಾಂ ಮುದ್ಗಹಸ್ತಾನಾಂ ತಥಾನ್ಯೇಷಾಂ ದ್ವಿಜನ್ಮನಾಂ ।
ಅದ್ಯ ಋಗ್ಯಜುಃ ಸಾಮ್ನಾಂ ಚ ಪ್ರಗೃಹ್ಯಾಶೀರ್ವಚಃ ಪರಂ ॥ ೮೬ ॥
ಸಭಾಮಂಡಪಮಾಸಾದ್ಯ ಸರ್ವಾನ್ ಸಮುಪವೇಶಯತ್ ।
ವರಾಸನೇಷು ಹೈಮೇಷು ಯಥಾವದನುಪೂರ್ವಶಃ ॥ ೮೭ ॥
ತಥಾ ತೇಷೂಪವಿಷ್ಟೇಷು ಸರ್ವೇಷು ಪೃಥಿವೀಪತಿಃ ।
ಉಪವಿಶ್ಯ ಧರಾಪೃಷ್ಠೇ ಕೃತಾಂಜಲಿರಭಾಷತ ॥ ೮೮ ॥
ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಯನ್ಮೇ ಗೃಹಮುಪಾಗತಃ ।
ಸರ್ವೋಽಯಂ ನಾಗರೋ ಲೋಕೋ ಭರ್ತೃಯಜ್ಞಸಮನ್ವಿತಃ ॥ ೮೯ ॥
ತದಾದಿಶತು ಮಾಂ ಲೋಕೋ ಯತ್ಕೃತ್ಯಂ ಪ್ರಕರೋಮಿ ವಃ ।
ಅದೇಯಮಪಿ ಯಚ್ಛಾಮಿ ಗೃಹಾಯಾ ತಸ್ಯ ಸಾಂಪ್ರತಂ ॥ ೯೦ ॥
ಅಗಮ್ಯಮಪಿ ಯಾಸ್ಯಾಮಿ ಕರಿಷ್ಯೇಽಕೃತ್ಯಮೇವ ಚ ।
ತಚ್ಛ್ರುತ್ವಾ ಹರಿಭದ್ರಃ ಸ ಸಮುತ್ಥಾಯ ತ್ವರಾನ್ವಿತಃ ॥ ೯೧ ॥

---

೮೪. ಆಗ ಆನರ್ತರಾಜನು ಬ್ರಾಹ್ಮಣರು ದ್ವಾರದಲ್ಲಿ ಬಂದಿರುವುದನ್ನು ಕೇಳಿ ಪುರೋಹಿತನೊಡನೆ ಅವರನ್ನು ಎದುರ್ಗೊಂಡನು.

೮೫–೮೭. ದೊರೆಯು ಮೊದಲು ಭರ್ತೃಯಜ್ಞನಿಗೂ, ಅನಂತರ ಹರಿಭದ್ರನಿಗೂ ಅರ್ಘ್ಯ, ಮಧುಪರ್ಕ, ಆಸನ, ಗೋವುಗಳನ್ನಿತ್ತು ಮುದ್ಗಹಸ್ತರಾಗಿ ಬಂದಿರುವ ನಾಲ್ಕು ಜನ ಬ್ರಾಹ್ಮಣರ ಮತ್ತು ಇತರ ಬ್ರಾಹ್ಮಣರ ಆದ್ಯಋಗ್ಯಜು ಸ್ಸಾಮವೇದಗಳ ಆಶೀರ್ವಾದಗಳನ್ನು ಸ್ವೀಕರಿಸಿ ಸಭಾಮಂಟಪಕ್ಕೆ ಹೋಗಿ ಎಲ್ಲರನ್ನೂ ಕ್ರಮವಾಗಿ ಉತ್ತಮವಾದ ಸುವರ್ಣಾಸನಗಳಲ್ಲಿ ಕುಳ್ಳಿರಿಸಿದನು.

೮೮. ಆ ಬ್ರಾಹ್ಮಣರೆಲ್ಲ ಕುಳಿತುಕೊಳ್ಳಲು ದೊರೆಯು ನೆಲದಮೇಲೆ ಕುಳಿತು ಕೈ ಮುಗಿದುಕೊಂಡು ಹೀಗೆಂದನು.

೮೯. "ಸಮಸ್ತ ನಾಗರರು ಭರ್ತೃಯಜ್ಞನೊಡನೆ ನನ್ನ ಮನೆಗೆ ಬಂದುದರಿಂದ ನಾನು ಧನ್ಯನೂ, ಅನುಗೃಹೀತನೂ ಆಗಿದ್ದೇನೆ.

೯೦. ಆದುದರಿಂದ ನೀವು, ಪ್ರಕೃತದಲ್ಲಿ ನಾನು ಮಾಡಬೇಕಾದುದನ್ನು ಆಜ್ಞೆಮಾಡಿರಿ. ಈಗ ಮನೆಗೆ ಬಂದ ನಿಮಗೆ ಕೊಡತಕ್ಕುದೆಲ್ಲವನ್ನೂ ಕೊಡುವೆನು.

೯೧–೯೪. ತಮ್ಮ ಸಂತೋಷಕ್ಕಾಗಿ ಅಗಮ್ಯಗಮನವನ್ನೂ ಅಕಾರ್ಯವನ್ನೂ ಸಹ ಮಾಡುವೆನು. ಆ ಹರಿಭದ್ರನು ಅದನ್ನು ಕೇಳಿ ಮೇಲಕ್ಕೆದ್ದು ತ್ವರೆಯಿಂದ

ಪಪ್ರಚ್ಛಾಧ್ವರ್ಯಾಂಸ್ತದರ್ಥಂ ಚ ಬಹ್ವೃಚಾಂಸ್ತದನಂತರಂ ।
ಅಧ್ವರ್ಯೂನ್ಛಂದೋಗಾನ್ಯಾನನುಜ್ಞಾತಶ್ಚ ತೈಸ್ತದಾ ॥ ೯೨ ॥
ಪ್ರಾಣರುದ್ರಾನ್ ವದಂತ್ವಾದ್ಯಾ ಜೀವಸೂಕ್ತಂ ಚ ಬಹ್ವೃಚಾಃ ।
ಏಷಾಂ ಚೈವ ಪೃಥಿವ್ಯಾದಿಸವನಂ ಯತ್ಪುರಾ ಕೃತಂ ॥ ೯೩ ॥
ಪಠಂತ್ವಧ್ವರ್ಯವಃ ಸರ್ವೇ ಛಾಂದೋಗ್ಯಾಶ್ಚ ಪೃಥಕ್ ಪೃಥಕ್ ।
ಮಧುಚ್ಯುತೇನ ಸಂಯುಕ್ತಂ ಪ್ರಪಠಂತು ಚ ಸಿದ್ಧಯೇ ॥ ೯೪ ॥
ಭರ್ತೃಯಜ್ಞಮತೇನೈವಂ ತೇನ ಪ್ರೋಕ್ತಾ ದ್ವಿಜೋತ್ತಮಾಃ ।
ಪಪ್ರಚ್ಛುಶ್ಚೈವ ತತ್ಸರ್ವಂ ಯತ್ಪ್ರೋಕ್ತಂ ತೇನ ಧೀಮತಾ ॥ ೯೫ ॥
ತತಃ ಪಾಠಾವಸಾನೇ ತು ಮಧ್ಯಗಃ ಪ್ರಾಹ ಸಾದರಂ ।
ಪರಾವಸುಸಮುದ್ಭೂತಂ ವೃತ್ತಾಂತಂ ತಸ್ಯ ಭೂಪತೇಃ ॥ ೯೬ ॥
ಯಥಾ ತೇನಾಽಸವಃ ಪೀತೋ ಯಥಾ ಮಿತ್ರೈಃ ಪ್ರಜಲ್ಪಿತಂ ।
ಪ್ರಾಯಶ್ಚಿತ್ತಂ ಸಮಾದಿಷ್ಟಂ ಯಥಾ ಸ್ಮಾರ್ತೈರ್ಘೃತೋದ್ಭವಂ ॥ ೯೭ ॥
ಭರ್ತೃಯಜ್ಞೇನ ಚಾನೀತಾ ಯಥಾ ಸರ್ವೇ ದ್ವಿಜಾತಯಃ ।
ತಚ್ಛ್ರುತ್ವಾ ಪಾರ್ಥಿವೋ ಹೃಷ್ಟಃ ಕೃತಾಂಜಲಿಪುಟೋಽಬ್ರವೀತ್ ॥ ೯೮ ॥
ಧನ್ಯೋಽಹಂ ಕೃತಪುಣ್ಯೋಽಸ್ಮಿ ಯಸ್ಯ ಮೇ ನಾಗರೈರ್ದ್ವಿಜೈಃ ।
ವಿಪ್ರತ್ರಯಪ್ರರಕ್ಷಾರ್ಥಂ ಪ್ರಸಾದೋಽಯಂ ಮಹಾನ್ ಕೃತಃ ॥ ೯೯ ॥

---

ಆದ್ಯರು, ಋಗ್ವೇದಿಗಳು, ಯಜುರ್ವೇದಿಗಳು, ಸಾಮವೇದಿಗಳು ಇವರನ್ನು ಕೇಳಿ ಅವರ ಅಪ್ಪಣೆಯನ್ನು ಪಡೆದು ಆದ್ಯರು ಪ್ರಾಣರುದ್ರಸೂಕ್ತಗಳನ್ನೂ, ಋಗ್ವೇದಿಗಳು ಜೀವಸೂಕ್ತವನ್ನೂ, ಯಜುರ್ವೇದಿಗಳು ಹಿಂದೆಮಾಡಿದ ಪೃಥಿವ್ಯಾದಿಸವನವನ್ನೂ, ಸಾಮವೇದಿಗಳು ಮಧುಚ್ಯುತಸೂಕ್ತವನ್ನೂ ಪಠಿಸಲಿ ಎಂದನು.

೯೫. ಆ ಬ್ರಾಹ್ಮಣರೆಲ್ಲ ಭರ್ತೃಯಜ್ಞನ ಅಭಿಪ್ರಾಯದಂತೆ ಅವನು ಹೇಳಿದ್ದನ್ನೆಲ್ಲ ಹೇಳಿದರು.

೯೬–೯೮. ಅನಂತರ ವೇದಪಠನವು ಮುಗಿಯಲು ಮಧ್ಯಗನು ಆ ರಾಜನಿಗೆ ಪರಾವಸುವು ಮದ್ಯಪಾನ ಮಾಡಿದ್ದು, ಅವನ ಸ್ನೇಹಿತರು ಹೇಳಿದ್ದು, ಸ್ಮೃತಿಜ್ಞರು ಹೇಳಿದ ಘೃತ ಪ್ರಾಯಶ್ಚಿತ್ತ, ಭರ್ತೃಯಜ್ಞನು ಬ್ರಾಹ್ಮಣರನ್ನು ಕರೆತಂದುದು ಇವೆಲ್ಲ ಸಮಾಚಾರವನ್ನೂ ಹೇಳಿದನು. ದೊರೆಯು ಅದನ್ನೆಲ್ಲ ಕೇಳಿ ಸಂತೋಷದಿಂದ ಕೈ ಮುಗಿದುಕೊಂಡು ಇಂತೆಂದನು.

೯೯. "ನಾಗರ ಬ್ರಾಹ್ಮಣರು ಮೂರು ಜನ ಬ್ರಾಹ್ಮಣರನ್ನು ರಕ್ಷಿಸಲೋಸುಗ ಈ ಮಹಾಪ್ರಸಾದವನ್ನು ಮಾಡಿದ್ದಕ್ಕಾಗಿ ನಾನು ಧನ್ಯನೂ, ಕೃತಪುಣ್ಯನೂ ಆಗಿದ್ದೇನೆ.

ಧನ್ಯಾ ಮೇ ಕನ್ಯಕಾ ಚೇಯಂ ರಕ್ಷ್ಯಯಿಷ್ಯತಿ ಚ ಸ್ವಯಂ ।
ಬ್ರಾಹ್ಮಣತ್ರಿತಯಂ ಹ್ಯೇತನ್ಮರಣೇ ಕೃತನಿಶ್ಚಯಂ ॥ ೧೦೦ ॥
ಅಥಾ ಸಾವಾನಯಾಮಾಸ ತಾಂ ಕನ್ಯಾಂ ತತ್ಕ್ಷಣಾದ್ದ್ವಿಜಾಃ ।
ಉಪವಿಷ್ಟಂ ಸಭಾಮಧ್ಯೇ ಬ್ರಾಹ್ಮಣೇಭ್ಯೋ ನ್ಯವೇದಯತ್ ॥ ೧೦೧ ॥
ಏಷಾ ಕನ್ಯಾ ಮಯಾನೀತಾ ಯುಷ್ಮದ್ವಾಕ್ಯಾದ್ದ್ವಿಜೋತ್ತಮಾಃ ।
ಭರ್ತೃಯಜ್ಞೇನ ಯತ್ಪ್ರೋಕ್ತಂ ತತ್ಕರೋತು ಚ ಸದ್ವಿಜಃ ॥ ೧೦೨ ॥
ತತಸ್ತತ್ರ ಸಮಾನೀಯ ಬ್ರಾಹ್ಮಣಂ ತಂ ಪರಾವಸುಂ ।
ಭರ್ತೃಯಜ್ಞ ಇದಂ ವಾಕ್ಯಂ ಕನ್ಯಾಯಾಃ ಪುರತೋಽಬ್ರವೀತ್ ॥ ೧೦೩ ॥
ಇಮಾಂ ತ್ವಂ ಕನ್ಯಕಾಂ ಚಿತ್ತೇ ಜನನೀಂ ಯದಿ ಮನ್ಯಸೇ ।
ಅಧರಾಸ್ವಾದನಂ ಕುರ್ವಂಸ್ತತಃ ಸಿದ್ಧಿಮವಾಪ್ಸ್ಯಸಿ ॥ ೧೦೪ ॥
ಅನುರಾಗಪರೋ ಭೂತ್ವಾ ಯದ್ಯಾಸ್ವಾದನ ತತ್ಪರಃ ।
ಭವಿಷ್ಯತಿ ತತೋ ರಕ್ತಂ ತವ ವಕ್ತ್ರೇ ಪರಾವಸೋ ॥ ೧೦೫ ॥
ಶುದ್ಧಸ್ಯ ತ್ವಥ ದುಗ್ಧಂ ಚ ಭವಿಷ್ಯತಿ ನ ಸಂಶಯಃ ॥ ೧೦೬ ॥
ಸ್ತನಾಭ್ಯಾಂ ತವ ಹಸ್ತಾಭ್ಯಾಂ ಸ್ಪರ್ಶಾತ್ಕ್ಷೀರಂ ಭವೇದ್ಯದಿ ।
ತತ್ತೇ ಶುದ್ಧಿಃ ಪರಿಜ್ಞೇಯಾ ರಕ್ತಂ ವಾ ನ ಭವಿಷ್ಯತಿ ॥ ೧೦೭ ॥

---

೧೦೦. ಸಾಯಲು ನಿಶ್ಚಯಿಸಿರುವ ಮೂರು ಮಂದಿ ಬ್ರಾಹ್ಮಣರನ್ನು ರಕ್ಷಿಸುವ ನನ್ನ ಈ ಕನ್ಯೆಯು ಧನ್ಯಳು.''

೧೦೧. ಬಳಿಕ ಆನರ್ತರಾಜನು ಕೂಡಲೆ ಆ ರತ್ನವತಿಯನ್ನು ಕರೆಯಿಸಿ ಸಭೆಯ ನಡುವೆ ಕುಳಿತಿರುವ ಬ್ರಾಹ್ಮಣರಿಗೆ ಒಪ್ಪಿಸಿದನು.

೧೦೨. ''ದ್ವಿಜವರ್ಯರೆ! ನಿಮ್ಮ ಮಾತಿನಂತೆ ನನ್ನೀ ಕನ್ಯೆಯನ್ನು ಕರೆಯಿಸಿದ್ದೇನೆ. ಆ ಪರಾವಸುವು ಭರ್ತೃಯಜ್ಞನು ಹೇಳಿದ್ದನ್ನು ಮಾಡಲಿ.''

೧೦೩. ಬಳಿಕ ಭರ್ತೃಯಜ್ಞನು ಆ ಪರಾವಸುವನ್ನು ಅಲ್ಲಿಗೆ ಕರೆಯಿಸಿ ಆ ಕನ್ಯೆಯ ಮುಂದೆ ಹೀಗೆಂದನು.

೧೦೪. ''ನೀನು ಅಧರಚುಂಬನವನ್ನು ಮಾಡುತ್ತ ಈ ಕನ್ಯೆಯನ್ನು ತಾಯಿಯೆಂದು ಭಾವಿಸಿದರೆ ಸಿದ್ಧಿಯನ್ನು ಹೊಂದುವೆ.

೧೦೫. ಅನುರಕ್ತನಾಗಿ ಆಸ್ವಾದನಾಸಕ್ತನಾದರೆ ನಿನ್ನ ಬಾಯಿಯಲ್ಲಿ ರಕ್ತವು ಸುರಿಯುವುದು.

೧೦೬. ಶುದ್ಧನಾದರೆ ಹಾಲು ಸುರಿಯುವುದು. ಇದು ನಿಶ್ಚಯ.

೧೦೭. ನೀನು ಮುಟ್ಟಿದ ಕೂಡಲೆ ಸ್ತನಗಳಿಂದ ಹಾಲು ಸುರಿದರೆ ನೀನು ಶುದ್ಧನಾಗಿರುವೆ ಎಂದು ತಿಳಿಯತಕ್ಕುದು. ರಕ್ತವು ಸುರಿದರೆ ಶುದ್ಧನಾಗಲಿಲ್ಲವೆಂದು ತಿಳಿಯಬೇಕು.''

ಏವಮುಕ್ತ್ವಾಽಥ ತಂ ಕನ್ಯಾಂ ತತಃ ಪ್ರೋವಾಚ ಸ ದ್ವಿಜಃ ।
ಏನಂ ತ್ವಂ ಪುತ್ರವತ್ಪಶ್ಯ ಪುತ್ರಿ ಬ್ರಾಹ್ಮಣಸತ್ತಮಂ ॥ ೧೦೮ ॥
ಯೇನ ಶುದ್ಧಿಮವಾಪ್ನೋತಿ ತ್ವದೋಷ್ಠಾಸ್ವಾದನೇ ಕೃತೇ ।
ಸ್ಪರ್ಶಿತಾಭ್ಯಾಂ ಸ್ತನಾಭ್ಯಾಂ ಚ ಪ್ರಾಯಶ್ಚಿತ್ತಂ ಯತಃ ಸ್ಮೃತಂ ॥ ೧೦೯ ॥
ಏತದಸ್ಯ ದ್ವಿಜೇಂದ್ರಸ್ಯ ವಯಸ್ಯೈರ್ಹಾಸ್ಯಸಂಯುತೈಃ ।
ಯೇನ ಶುದ್ಧಿಮವಾಪ್ನೋತಿ ನೋ ಚೇನ್ಮೃತ್ಯುಮವಾಪ್ಸ್ಯಸಿ ॥ ೧೧೦ ॥

ಸೂತ ಉವಾಚ :—

ಸಾ ತಥೇತಿ ಪ್ರತಿಜ್ಞಾಯ ಸವ್ರೀಡಂ ತಮುವಾಚ ಹ ।
ಏಹಿ ವತ್ಸ ಕುರುಷ್ವ ತ್ವಂ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ೧೧೧ ॥
ಮಾತೃಭಾವಂ ಸಮಾಧಾಯ ಮಯಾ ತ್ವಂ ಕಲ್ಪಿತಃ ಸುತಃ ।
ಸೋಽಪಿ ತಾಂ ಮಾತೃವನ್ಮತ್ವಾ ತಸ್ಯಾಃ ಸಾನ್ನಿಧ್ಯಮಾಗತಃ ॥ ೧೧೨ ॥
ಸ್ಪೃಷ್ಟವಾಂಶ್ಚ ಸ್ತನೌ ತಸ್ಯಾಃ ಸರ್ವಲೋಕಸ್ಯ ಪಶ್ಯತಃ ।
ಸ್ಪೃಷ್ಟಾಭ್ಯಾಂ ಚ ಸ್ತನಾಭ್ಯಾಂ ಚ ತತ್ಕ್ಷಣಾದ್ದ್ವಿಜಸತ್ತಮಾಃ ॥ ೧೧೩ ॥
ಕ್ಷೀರಧಾರೇ ವಿನಿಷ್ಕ್ರಾಂತೇ ಕುಂದೇಂದುಹಿಮಸನ್ನಿಭೇ ॥ ೧೧೪ ॥
ಅಥೌಷ್ಠಾಸ್ವಾದನಂ ಯಾವತ್ತಸ್ಯಾಃ ಸ ಕುರುತೇ ದ್ವಿಜಃ ।
ತಾವತ್ಕ್ಷೀರಂ ವಿನಿಷ್ಕ್ರಾಂತಂ ತಾದೃಗ್ರೂಪಂ ತದಾನನಾತ್ ॥ ೧೧೫ ॥

---

೧೦೮. ಆ ಭರ್ತೃಯಜ್ಞನು ಪರಾವಸುವಿಗೆ ಹೀಗೆ ಹೇಳಿ ಆ ಕನ್ಯೆಯನ್ನು ಕುರಿತು, "ಮಗಳೆ! ನೀನು ಈ ಬ್ರಾಹ್ಮಣೋತ್ತಮನನ್ನು ಮಗನಂತೆ ನೋಡು.

೧೦೯–೧೧೦. ಅದರಿಂದ ನಿನ್ನ ತುಟಿಯನ್ನು ಚುಂಬಿಸಿ ಸ್ತನಸ್ಪರ್ಶಮಾಡಿದ ಇವನು ಶುದ್ಧನಾಗುವನು. ಈ ಪ್ರಾಯಶ್ಚಿತ್ತವನ್ನು ಇವನ ಮಿತ್ರರು ಹಾಸ್ಯದಿಂದ ಹೇಳಿರುವರು. ಇದರಿಂದ ಇವನು ಶುದ್ಧನಾಗುವನು. ಇಲ್ಲದಿದ್ದರೆ ಮಡಿಯುವನು."

೧೧೧. ಸೂತನು ಹೇಳುತ್ತಾನೆ:— ಅವಳು ಹಾಗೆಯೇ ಒಪ್ಪಿ ನಾಚಿಕೆಯಿಂದ ಕೂಡಿ ಆ ಪರಾವಸುವನ್ನು ಕುರಿತು ಇಂತೆಂದಳು. "ಮಗು! ಇಲ್ಲಿ ಬಾ. ನೀನು ಶುದ್ಧಿಗಾಗಿ ಪ್ರಾಯಶ್ಚಿತ್ತವನ್ನಾಚರಿಸು.

೧೧೨–೧೧೪. ನಾನು ತಾಯಿಯಂತಾಗಿ ನಿನ್ನನ್ನು ಮಗನನ್ನಾಗಿ ಕಲ್ಪಿಸಿರುವೆನು." ಆ ಪರಾವಸುವೂ ಅವಳನ್ನು ತಾಯಿಯೆಂದು ಭಾವಿಸಿ ಅವಳ ಹತ್ತಿರ ಹೋಗಿ ಸಮಸ್ತ ಜನರು ನೋಡುವಾಗ ಸ್ತನಗಳನ್ನು ಮುಟ್ಟಿದನು. ಆಗ ಆ ಸ್ತನಗಳಿಂದ ಕೂಡಲೆ ಮಲ್ಲಿಗೆ ಹೂವು, ಚಂದ್ರ, ಹಿಮಗಳಂತಿರುವ ಹಾಲಿನ ಧಾರೆಯು ಹೊರಟಿತು.

೧೧೫. ಅವನು ಅವಳ ತುಟಿಯನ್ನು ಚುಂಬಿಸಲು ಅವನ ಬಾಯಿಯಿಂದ ಅಂತಹ ಹಾಲು ಹೊರಟಿತು.

ಏತಸ್ಮಿನ್ನಂತರೇ ಸರ್ವೈಸ್ತಾಲಾ ದತ್ತಾ ದ್ವಿಜಾತಿಭಿಃ ।
ರಾಜ್ಞಾಽಯಂ ಬ್ರಾಹ್ಮಣಃ ಶುದ್ಧೋ ವದಮಾನೈರ್ಮುಹುರ್ಮುಹುಃ ॥
ಸೋಽಪಿ ಪ್ರದಕ್ಷಿಣೀಕೃತ್ಯ ತಾಂ ಚ ಕನ್ಯಾಂ ಮುಹುರ್ಮುಹುಃ ।
ನಮಸ್ಕೃತ್ಯ ಕ್ಷಮಸ್ವೇತಿ ತ್ವಂ ಮಾತಃ ಪುತ್ರವತ್ಸಲೇ ॥ ೧೧೭ ॥
ತಂ ದೃಷ್ಟ್ವಾ ಮಹದಾಶ್ಚರ್ಯಮಾನರ್ತೋ ವಿಸ್ಮಯಾನ್ವಿತಃ ।
ಶಶಂಸ ಭರ್ತೃಯಜ್ಞಂ ತಂ ಪ್ರಾಯಶ್ಚಿತ್ತಪ್ರದಾಯಕಂ ॥ ೧೧೮ ॥
ಅಹೋಽತೀವ ಸುಭಾಗ್ಯೋಽಹಂ ಯಸ್ಯ ಮೇ ಗೃಹಮಾಗತಾಃ ।
ಈದೃಶಾ ಬ್ರಾಹ್ಮಣಾಃ ಸರ್ವೇ ಚಮತ್ಕಾರಪುರೋದ್ಭವಾಃ ॥ ೧೧೯ ॥
ತಥಾ ಚೈತಾದೃಶೀ ಕನ್ಯಾ ಹ್ಯಸಾಮಾನ್ಯಪ್ರವರ್ತಿನೀ ।
ರತ್ನಾವತೀ ಮಹಾಭಾಗಾ ಸತ್ಯಶೌಚಸಮನ್ವಿತಾ ॥ ೧೨೦ ॥
ತಥಾಽಯಂ ನೈವ ಸಾಮಾನ್ಯೋ ಬ್ರಾಹ್ಮಣಶ್ಚ ಪರಾವಸುಃ ।
ಯಶ್ಚೇದೃಶೀಂ ಸಮಾಸಾದ್ಯ ಕನ್ಯಾಂ ನೋ ವಿಕೃತಃ ಸ್ಥಿತಃ ॥ ೧೨೧ ॥
ಏವಮುಕ್ತ್ವಾ ವಿಸೃಜ್ಯಾಥ ತಾನ್ವಿಪ್ರಾನ್ ಪಾರ್ಥಿವೋತ್ತಮಾಃ ।
ತಾಂ ಚ ಕನ್ಯಾಂ ಸಮಾದಾಯ ತತಶ್ಚಾಂತಃಪುರಂ ಯಯೌ ॥ ೧೨೨ ॥
ಅಥ ತೇ ನಾಗರಾಃ ಸರ್ವೇ ಮರ್ಯಾದಾಂ ಚಕ್ರಿರೇ ತತಃ ।
ಅದ್ಯಪ್ರಭೃತಿ ಯಾ ವೇಶ್ಯಾ ಸ್ಥಾನೇಽಸ್ಮಿನ್ವಾಸಮೇಷ್ಯತಿ ॥ ೧೨೩ ॥

---

೧೧೬. ಈ ಸಮಯದಲ್ಲಿ ಬ್ರಾಹ್ಮಣರೆಲ್ಲ ರಾಜನೊಡನೆ ಈ ಪರಾವಸುವು ಶುದ್ಧನಾಗಿರುವನೆಂದು ಹೇಳುತ್ತ ಚಪ್ಪಾಳೆ ಹೊಡೆದರು.

೧೧೭. ಪರಾವಸುವು ಆ ಕನ್ಯೆಯನ್ನು ಬಲವಂದು ನಮಸ್ಕರಿಸಿ, "ಮಕ್ಕಳಲ್ಲಿ ಪ್ರೀತಿಯುಳ್ಳ ಅಮ್ಮ! ಕ್ಷಮಿಸು" ಎಂದನು.

೧೧೮. ಆ ಮಹಾಶ್ಚರ್ಯವನ್ನು ನೋಡಿ ಆನರ್ತರಾಜನು ವಿಸ್ಮಯದಿಂದ ಪ್ರಾಯಶ್ಚಿತ್ತವನ್ನಿತ್ತ ಭರ್ತೃಯಜ್ಞನನ್ನು ಹೊಗಳಿದನು.

೧೧೯–೧೨೧. "ಚಮತ್ಕಾರಪುರದ ಇಂತಹ ಬ್ರಾಹ್ಮಣರು ನನ್ನ ಮನೆಗೆ ಬಂದುದರಿಂದಲೂ, ಅದ್ಭುತ ಕಾರ್ಯವನ್ನೆಸಗಿದ ಸತ್ಯ, ಶೌಚವುಳ್ಳ, ಭಾಗ್ಯಶಾಲಿನಿಯಾದ ಈ ಕನ್ಯೆಯು ನನಗೆ ಜನಿಸಿದ್ದರಿಂದಲೂ ನಾನು ಅತ್ಯಂತ ಭಾಗ್ಯವುಳ್ಳವನು. ಇಂತಹ ಕನ್ಯೆಯನ್ನು ಹೊಂದಿ ಮನೋವಿಕಾರಗೊಳ್ಳದ ಈ ಪರಾವಸು ಬ್ರಾಹ್ಮಣನೂ ಸಾಮಾನ್ಯನಲ್ಲ."

೧೨೨. ಆನರ್ತರಾಜನು ಹೀಗೆ ಹೇಳಿ ಆ ಬ್ರಾಹ್ಮಣರನ್ನು ಕಳುಹಿಸಿ ಆ ಕನ್ಯೆಯನ್ನು ಕರೆದುಕೊಂಡು ಅಂತಃಪುರಕ್ಕೆ ಹೋದನು.

೧೨೩–೧೨೪. ಬಳಿಕ ನಾಗರರೆಲ್ಲ, "ಇದು ಮೊದಲ್ಗೊಂಡು ಇಲ್ಲಿ ವಾಸ ಮಾಡುವ ವೇಶ್ಯೆಯು ತನ್ನ ಮನೆಯಲ್ಲಿ ಮದ್ಯ ಮಾಂಸಗಳನ್ನಿಡಬಾರದು.

ತಯಾ ನೈವ ಗೃಹೇ ಧಾರ್ಯಂ ಸುರಾಮಾಂಸಂ ಕಥಂಚನ ।
ದೂಷಯಂತಿ ಸದಾ ದುಷ್ಟಾ ನಾಗರಾಣಾಂ ಸುತಾನಿಹ ॥ ೧೨೪ ॥
ಅಥ ವ್ಯವಸ್ಥಾಮುತ್ಕ್ರಮ್ಯ ಯಾಹಿ ತದ್ಧಾರಯಿಷ್ಯತಿ ।
ಸಾ ದಂಡ್ಯಾಸ್ಮಾಚ್ಚ ನಿರ್ವಾಸ್ಯಾ ಪ್ರೇತ್ಯ ಸ್ಯಾತ್ಪಾಪಭಾಗಿನೀ ॥ ೧೨೫ ॥
ಔದುಂಬರ್ಯಾ ಮಧ್ಯಗೇನ ದತ್ತಂ ತಾಲತ್ರಯಂ ತದಾ ॥ ೧೨೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪರಾವಸುಪ್ರಾಯಶ್ಚಿತ್ತವಿಧಾನವೃತ್ತಾಂತವರ್ಣನಂ"
ನಾಮ ಸಪ್ತನವತ್ಯುತ್ತರಶತತಮೋಽಧ್ಯಾಯಃ

---

ದುಷ್ಟರಾದ ಇವರು ಯಾವಾಗಲೂ ಇಲ್ಲಿ ನಾಗರರ ಮಕ್ಕಳನ್ನು ಕೆಡಿಸುತ್ತಾರೆ" ಎಂದು ಒಂದು ಕಟ್ಟಳೆ ಮಾಡಿದರು.

೧೨೫. "ಈ ನಿಯಮವನ್ನು ಮೀರಿ ಮದ್ಯಮಾಂಸಗಳನ್ನು ಮನೆಯಲ್ಲಿರಿಸಿದವಳು ದಂಡ್ಯಳಾಗುವಳು. ಮತ್ತು ಅವಳನ್ನು ಇಲ್ಲಿಂದ ಹೊರಡಿಸಬೇಕು. ಅವಳು ಮೃತಳಾಗಿ ಪಾಪಿಷ್ಠೆಯಾಗುವಳು" ಎಂದೂ ಹೇಳಿದರು.

೧೨೬. ಆಗ ಮಧ್ಯಗನು ಮೂರುಸಾರಿ ಚಪ್ಪಾಳೆ ಹೊಡೆದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪರಾವಸುಪ್ರಾಯಶ್ಚಿತ್ತವಿಧಾನವೃತ್ತಾಂತವರ್ಣನ"ವೆಂಬ
ನೂರತೊಂಬತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಷ್ಟನವತ್ಯುತ್ತರಶತತಮೋಽಧ್ಯಾಯಃ

## ಕೂದ್ರೀಬ್ರಾಹ್ಮಣೀತೀರ್ಥದ್ವಯ ಮಾಹಾತ್ಮ್ಯವರ್ಣನಂ

**ಸೂತ ಉವಾಚ :—**

ಏತಸ್ಮಿನ್ನೇವ ಕಾಲೇ ತು ದಶಾರ್ಣಾಧಿಪತಿಸ್ತದಾ ।
ರತ್ನವತ್ಯಾ ವಿವಾಹಾರ್ಥಂ ತತ್ರ ಸ್ಥಾನೇ ಸಮಾಗತಃ ॥ ೧ ॥
ಸ ಶ್ರುತ್ವಾ ತತ್ರ ವೃತ್ತಾಂತಂ ರತ್ನವತ್ಯಾಃ ಸಮುದ್ಭವಂ ।
ವಿರಕ್ತಿಂ ಪರಮಾಂ ಕೃತ್ವಾ ಪ್ರಸ್ಥಿತಃ ಸ್ವಪುರಂ ಪ್ರತಿ ॥ ೨ ॥
ತಂ ಶ್ರುತ್ವಾ ಪ್ರಸ್ಥಿತಂ ಭೂಪಮಾನರ್ತಃ ಸ್ವಪುರಂ ಪ್ರತಿ ।
ಪೃಷ್ಠತೋಽನುಯಯೌ ತಸ್ಯ ವ್ಯಾಘೋಟನಕೃತೇ ತದಾ ॥ ೩ ॥
ಅಥಾಽಬ್ರವೀಚ್ಚ ತಂ ಪ್ರಾಪ್ಯ ಕಸ್ಮಾತ್ತ್ವಂ ಪ್ರಸ್ಥಿತೋ ನೃಪ ।
ಪಾಣಿಗ್ರಹಮಕೃತ್ವಾ ತು ಮಮ ಕನ್ಯಾ ಸಮುದ್ಭವಂ ॥ ೪ ॥

**ದಶಾರ್ಣ ಉವಾಚ :—**

ದೂಷಿತೇಯಂ ತವ ಸುತಾ ಕನ್ಯಕಾತ್ವವಿವರ್ಜಿತಾ ।
ಯಸ್ಯಾಃ ಪೀತೋಽಧರೋಽನ್ಯೇನ ಮರ್ದಿತೌ ಚ ತಥಾಸ್ತನೌ ॥ ೫ ॥

---

## ಕನ್ನಡದ ಅನುವಾದ

### ಕೂದ್ರೀಬ್ರಾಹ್ಮಣೀತೀರ್ಥದ್ವಯ ಮಾಹಾತ್ಮ್ಯವರ್ಣನ

೧. ಸೂತನು ಹೇಳುತ್ತಾನೆ:—ಈ ಸಮಯದಲ್ಲಿ ದಶಾರ್ಣರಾಜನು ರತ್ನವತಿಯ ವಿವಾಹಕ್ಕಾಗಿ ಅಲ್ಲಿಗೆ ಬಂದನು.

೨. ಅವನು ಅಲ್ಲಿ ರತ್ನವತಿಯ ಸಮಾಚಾರವನ್ನು ಕೇಳಿ ಅಧಿಕವಾಗಿ ವೈರಾಗ್ಯಗೊಂಡು ತನ್ನ ಪಟ್ಟಣಕ್ಕೆ ಹೊರಟನು.

೩. ಆನರ್ತರಾಜನು ಅವನು ತನ್ನ ಪಟ್ಟಣಕ್ಕೆ ಮರಳಿದ್ದನ್ನು ಕೇಳಿ ಹಿಂದಿರುಗಿಸುವುದಕ್ಕಾಗಿ ಅವನನ್ನು ಹಿಂಬಾಲಿಸಿದನು.

೪. ಅವನು ದಶಾರ್ಣರಾಜನನ್ನು ಹೊಂದಿ, "ಅರಸ! ನೀನು ನನ್ನ ಕನ್ಯೆಯನ್ನು ವಿವಾಹ ಮಾಡಿಕೊಳ್ಳದೆ ಏತಕ್ಕೆ ಹಿಂದಿರುಗಿದೆ?" ಎಂದು ಕೇಳಿದನು.

೫. ದಶಾರ್ಣರಾಜನು ಹೇಳುತ್ತಾನೆ:—ಪರಪುರುಷನು ನಿನ್ನ ಕನ್ಯೆಯ ಅಧರವನ್ನು ಚುಂಬಿಸಿ ಸ್ತನವನ್ನು ಮರ್ದಿಸಿದ್ದರಿಂದ ಇವಳ ಕನ್ಯತ್ವವು ಹಾಳಾಗಿ ದೂಷಿತಳಾಗಿರುವಳು.

ಪುನರ್ಭೂರಿತಿ ಸಂಜ್ಞಾ ಸಾ ಸಂಜಾತಾ ದುಹಿತಾ ತವ ।
ಪುನರ್ಭೂರ್ಜನಯೇತ್ಪುತ್ರಂ ಯಂ ಕದಾಚಿತ್ಕಥಂಚನ ॥ ೬ ॥
ಸಾ ಪಾತಯತ್ಯಸಂದಿಗ್ಧಂ ದಶ ಪೂರ್ವಾನ್ ದಶಾಽಪರಾನ್ ।
ಏಕವಿಂಶತಿಮಂ ಚೈವ ತಥೈವಾತ್ಮಾನಮೇವ ಚ ॥ ೭ ॥
ನ ವರಿಷ್ಯಾಮ್ಯಹಂ ತೇನ ಸುತಾಂ ತೇಽಹಂ ನರಾಧಿಪ ।
ನಿರ್ದಾಕ್ಷಿಣ್ಯಮಿತಿ ಪ್ರೋಚ್ಯ ದಶಾರ್ಣಾಧಿಪತಿಸ್ತದಾ ॥ ೮ ॥
ಛಂದ್ಯಮಾನೋಽಪಿ ವಿವಿಧೈರ್ಹಸ್ತ್ಯಶ್ವರಥಪೂರ್ವಕೈಃ ।
ಅವಜ್ಞಾಯ ಮಹೀಪಾಲಂ ಪ್ರಸ್ಥಿತಃ ಸ್ವಪುರಂ ಪ್ರತಿ ॥ ೯ ॥
ಅಥಾನರ್ತೋ ಗೃಹಂ ಪ್ರಾಪ್ಯ ಮೃಗಾವತ್ಯಾಃ ಸಮಾಕುಲಃ ।
ತದ್ವೃತ್ತಂ ಕಥಯಾಮಾಸ ಯದುಕ್ತಂ ತೇನ ಭೂಭುಜಾ ।
ಸ್ವಭಾರ್ಯಾಯಾಃ ಸುತಾಯಾಶ್ಚ ಮಂತ್ರಿಣಾ ದುಃಖಸಂಯುತಃ ॥ ೧೦ ॥
ತೇ ಪ್ರೋಚುಃ ಸಂತಿ ಭೂಪಾಲಾಃ ಸಂಖ್ಯಾಹೀನಾ ಮಹೀತಲೇ ।
ರೂಪಾಢ್ಯಾ ಯೌವನೋಪೇತಾ ಹಸ್ತ್ಯಶ್ವರಥಸಂಯುತಾಃ ॥ ೧೧ ॥
ತೇಷಾಮೇಕತಮಸ್ಯ ತ್ವಂ ದೇಹಿ ಕನ್ಯಾಂ ನಿಜಾಂ ವಿಭೋ ।
ಮಾ ವಿಷಾದೇ ಮನಃ ಕೃತ್ವಾ ದುಃಖಸ್ಯ ವಶಗೋ ಭವ ॥ ೧೨ ॥

---

೬–೭. ನಿನ್ನೀ ಮಗಳಿಗೆ ಪುನರ್ಭೂ ಎಂದು ಹೆಸರುಂಟಾಯಿತು. ಇವಳಿಂದ ಜನಿಸಿದ ಪುತ್ರನು ಹತ್ತು ತಲೆಗಳ ಪೂರ್ವಾಪರ ಪಿತೃಗಳನ್ನೂ ತನ್ನನ್ನೂ ಹೀಗೆ ಇಪ್ಪತ್ತೊಂದು ತಲೆಯವರನ್ನು ಪತಿತರನ್ನಾಗಿ ಮಾಡುವನು.

೮–೯. ಅದರಿಂದ ನಾನು ನಿನ್ನ ಮಗಳನ್ನು ವರಿಸಲಾರೆನು.'' ಏನೂ ದಾಕ್ಷಿಣ್ಯವಿಲ್ಲದೆ, ದಶಾರ್ಣರಾಜನು ಹೀಗೆ ಹೇಳಿ ಹೊರಡಲು, ಆನರ್ತರಾಜನು ಬಗೆ ಬಗೆಯ ಆನೆ, ಕುದುರೆ, ರಥಗಳನ್ನು ಕೊಡುವೆನೆಂದು ಪ್ರಲೋಭನ ಮಾಡಿದನು. ಆದರೂ ದಶಾರ್ಣರಾಜನು ಅವನನ್ನು ತಿರಸ್ಕರಿಸಿ ತನ್ನ ಪಟ್ಟಣಕ್ಕೆ ಹೊರಟುಹೋದನು.

೧೦. ಬಳಿಕ ಆನರ್ತರಾಜನು ಮನೆಗೆ ಬಂದು ವ್ಯಾಕುಲಗೊಂಡು ಅವನು ಹೇಳಿದ ಮಾತನ್ನು ತನ್ನ ಪತ್ನಿಯಾದ ಮೃಗಾವತಿಗೂ, ಮಗಳಿಗೂ, ಮಂತ್ರಿಗಳಿಗೂ ದುಃಖದಿಂದ ಹೇಳಿದನು.

೧೧. ಮಂತ್ರಿಗಳು ಹೀಗೆಂದರು. "ಭೂಮಂಡಲದಲ್ಲಿ ಸುಂದರರೂ, ಯುವಕರೂ, ಆನೆ, ಕುದುರೆ, ರಥಗಳುಳ್ಳವರೂ ಆದ ಅನೇಕ ಮಂದಿ ರಾಜರಿರುವರು.

೧೨. ನಿನ್ನ ಕನ್ಯೆಯನ್ನು ಅವರಲ್ಲೊಬ್ಬನಿಗೆ ಕೊಡು. ವಿಷಾದಗೊಂಡು ದುಃಖಪರವಶನಾಗಬೇಡ.''

ಆನರ್ತೋಽಪಿ ಚ ತಚ್ಛ್ರುತ್ವಾ ತೇಷಾಂ ವಾಕ್ಯಂ ಸುದುಃಖಿತಃ ।
ತತಃ ಪ್ರಾಹ ಪ್ರಹೃಷ್ಟಾತ್ಮಾ ತಾನ್ ಸರ್ವಾನ್ ಮಂತ್ರಿಪೂರ್ವಕಾನ್ ॥೧೩॥
ತಾಂ ಚ ಕನ್ಯಾಂ ಸ್ಥಿತಾಂ ತತ್ರ ಸಾಮ್ನಾ ಪರಮವಲ್ಗುನಾ ।
ಪುತ್ರಿ ದೃಷ್ಟಾ ಮಹೀಪಾಲಾಃ ಸರ್ವೇ ಚಿತ್ರಗತಾಸ್ತ್ವಯಾ ॥ ೧೪ ॥
ತೇಷಾಂ ಮಧ್ಯಾನ್ನೃಪಂ ಚಾಽನ್ಯಂ ಕಂಚಿದ್ವರಯ ಶೋಭನೇ ।
ಯಸ್ತೇ ಚಿತ್ತಸ್ಯ ಸಂತೋಷಂ ಕುರುತೇ ದೃಕ್ಪಥಂ ಗತಃ ॥ ೧೫ ॥

ರತ್ನಾವತ್ಯುವಾಚ :—

ನ ಚಾಽಹಂ ವರಯಿಷ್ಯಾಮಿ ಪತಿಮನ್ಯಂ ಕಥಂಚನ ।
ದಶಾರ್ಣಾಧಿಪತಿಂ ಮುಕ್ತ್ವಾ ಶ್ರೂಯತಾಮತ್ರ ಕಾರಣಂ ॥ ೧೬ ॥
ಸಕೃಜ್ಜಲ್ಪಂತಿ ರಾಜಾನಃ ಸಕೃಜ್ಜಲ್ಪಂತಿ ಚ ದ್ವಿಜಾಃ ।
ಸಕೃತ್ಕನ್ಯಾಃ ಪ್ರದೀಯಂತೇ ತ್ರೀಣ್ಯೇತಾನಿ ಸಕೃತ್ಸಕೃತ್ ॥ ೧೭ ॥
ಏವಂ ಜ್ಞಾತ್ವಾ ನ ಮಾಂ ತಾತ ತ್ವಮನ್ಯಸ್ಮಿನ್ಮಹೀಪತೌ ।
ದಾತುಮರ್ಹಸಿ ಧರ್ಮೋಽಯಂ ನ ಭವೇಚ್ಛಾಶ್ವತೋ ಯತಃ ॥ ೧೮ ॥

ಆನರ್ತ ಉವಾಚ :—

ವಾಙ್ಮಾತ್ರೇಣ ಪ್ರದತ್ತಾ ತ್ವಂ ದಶಾರ್ಣಾಧಿಪತೇರ್ಮಯಾ ।
ನ ತೇ ಹಸ್ತಗ್ರಹಂ ಪ್ರಾಪ್ತೋ ವಿಪ್ರಾಗ್ನಿಗುರುಸನ್ನಿಧೌ ॥ ೧೯ ॥
ತತ್ಕಥಂ ಸ ಪತಿರ್ಜಾತಸ್ತವ ಪುತ್ರಿ ವದಸ್ವ ಮೇ ॥ ೨೦ ॥

---

೧೩–೧೪. ಆನರ್ತರಾಜನು ಅವರ ಮಾತನ್ನು ಕೇಳಿ ಸಂತೋಷದಿಂದ ಮಂತ್ರಿ ಮೊದಲಾದವರನ್ನೂ ಆ ಪುತ್ರಿಯನ್ನೂ ಕುರಿತು ಅತ್ಯಂತ ಸಮಾಧಾನದಿಂದ ಹೀಗೆಂದನು. "ಮಗು! ನೀನು ಚಿತ್ರದಲ್ಲಿರುವ ಸಕಲ ರಾಜರನ್ನು ನೋಡಿರುವೆ.

೧೫. ಅವರಲ್ಲಿ ಯಾವನನ್ನು ನೋಡಿದರೆ ನಿನ್ನ ಮನಸ್ಸಿಗೆ ಆನಂದವುಂಟಾಗುವುದೋ ಅವನನ್ನು ವಿವಾಹ ಮಾಡಿಕೊ.

೧೬. ರತ್ನವತಿಯು ಹೇಳುತ್ತಾಳೆ:—ನಾನು ದಶಾರ್ಣರಾಜನನ್ನು ಹೊರತು ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳುವುದಿಲ್ಲ. ಇದಕ್ಕೆ ಕಾರಣವನ್ನು ಕೇಳು.

೧೭. ದೊರೆಗಳೂ, ರಾಜರೂ ಒಂದೇ ಸಾರಿ ಮಾತಾಡುತ್ತಾರೆ. ಒಂದೇ ಸಾರಿ ಕನ್ಯೆಯನ್ನು ಕೊಡುತ್ತಾರೆ. ಈ ಮೂರೂ ಒಂದು ಸಾರಿಯೆ ಆಗತಕ್ಕುವು.

೧೮. ಅಪ್ಪ! ನೀನು ಇದನ್ನರಿತು ನನ್ನನ್ನು ಇತರ ರಾಜನಿಗೆ ದಾನ ಮಾಡಬೇಡ. ಇದು ಸನಾತನ ಧರ್ಮವಲ್ಲ.

೧೯–೨೦. ಆನರ್ತನು ಹೇಳುತ್ತಾನೆ:—ಮಗು! ನಾನು ಮಾತಿನಿಂದ ಮಾತ್ರ ನಿನ್ನನ್ನು ದಶಾರ್ಣರಾಜನಿಗೆ ಕೊಟ್ಟಿರುವೆನು. ಅವನು ನಿನ್ನನ್ನು ಬ್ರಾಹ್ಮಣ, ಅಗ್ನಿ, ಗುರುಗಳ ಸನ್ನಿಧಿಯಲ್ಲಿ ಪಾಣಿಗ್ರಹಣ ಮಾಡಿಕೊಳ್ಳಲಿಲ್ಲ. ಆದುದರಿಂದ ಮಗು! ಅವನು ನಿನಗೆ ಹೇಗೆ ಗಂಡನಾದನು? ಹೇಳು.

ರತ್ನಾವತ್ಯುವಾಚ :—
ಮನಸಾ ಚಿಂತ್ಯತೇ ಕಾರ್ಯಂ ಸಕೃತ್ತಾತ ಪುರಾ ಯತಃ ।
ವಾಚಯಾ ಪ್ರೋಚ್ಯತೇ ಪಶ್ಚಾತ್ಕರ್ಮಣಾ ಕ್ರಿಯತೇ ತತಃ ॥ ೨೧ ॥
ತನ್ಮಯಾ ಮನಸಾ ದತ್ತಸ್ತಸ್ಯಾತ್ಮಾಯಂ ಪುರಾ ಕಿಲ ।
ತ್ವಯಾ ಚ ವಚಸಾ ಚಾಸ್ಮೈ ಪ್ರದತ್ತಾಸ್ಮಿ ತಥಾ ವಿಭೋ ।
ತತ್ಕಥಂ ನ ಪತಿರ್ಮೇಽಸ್ಯಾದ್ಬ್ರೂಹಿ ವಾ ಯದಿ ಮನ್ಯಸೇ ॥ ೨೨ ॥
ಸಾಽಹಂ ತಪಶ್ಚರಿಷ್ಯಾಮಿ ಕೌಮಾರವ್ರತಧಾರಿಣೀ ।
ನಾಽನ್ಯಂ ಪತಿಂ ಕರಿಷ್ಯಾಮಿ ನಿಶ್ಚಯೋಽಯಂ ಮಯಾ ಕೃತಃ ॥ ೨೩ ॥
ತಚ್ಛ್ರುತ್ವಾ ವಚನಂ ರೌದ್ರಂ ಮಾತಾ ತಸ್ಯಾ ಮೃಗಾವತೀ ।
ಅಶ್ರುಪೂರ್ಣೇಕ್ಷಣಾ ದೀನಾ ವಾಕ್ಯಮೇತದುವಾಚ ಹ ॥ ೨೪ ॥
ಮಾ ಪುತ್ರಿ ಸಾಹಸಂ ಕಾರ್ಷೀಸ್ತಪೋಽರ್ಥಂ ತ್ವಂ ಕಥಂಚನ ।
ಬಾಲಾ ತ್ವಂ ಸುಕುಮಾರಾಂಗೀ ಸದೈವ ಸುಖಭಾಗಿನೀ ॥ ೨೫ ॥
ಕಥಂ ತಪಃಸಮರ್ಥಾಸಿ ವಿಧಾತುಂ ತ್ವಮನಿಂದಿತೇ ।
ಕಂದಮೂಲಫಲಾಹಾರಾ ಚೀರವಲ್ಕಲಧಾರಿಣೀ ॥ ೨೬ ॥
ತಸ್ಮಾನ್ಮುಖ್ಯಸ್ಯ ಭೂಪಸ್ಯ ಕಸ್ಯಚಿತ್ತ್ವಾಂ ದದಾಮ್ಯಹಂ ॥ ೨೭ ॥

---

೨೧. ರತ್ನವತಿಯು ಹೇಳುತ್ತಾಳೆ :—ಅಪ್ಪ! ಮನಸ್ಸಿನಿಂದ ಕಾರ್ಯವನ್ನು ಒಂದು ಸಾರಿ ಆಲೋಚಿಸುತ್ತಾರೆ. ಅನಂತರ ಮಾತಿನಿಂದ ಹೇಳುತ್ತಾರೆ. ಬಳಿಕ ಮಾಡುತ್ತಾರೆ.

೨೨. ಆದುದರಿಂದ ನಾನು ನನ್ನನ್ನು ಮೊದಲು ಆ ದಶಾರ್ಣರಾಜನಿಗೆ ಕೊಟ್ಟೆನು. ನೀನು ನನ್ನನ್ನು ಅನಂತರ ಮಾತಿನಿಂದ ಕೊಟ್ಟಿರುವೆ. ಆದುದರಿಂದ ಅವನು ನನಗೆ ಹೇಗೆ ಪತಿಯಲ್ಲ? ತಿಳಿದಿದ್ದರೆ ಹೇಳು.

೨೩. ನಾನು ಕುಮಾರಿಯಾಗಿ ತಪಸ್ಸನ್ನು ಮಾಡುವೆನು. ಬೇರೆ ಪತಿಯನ್ನು ವರಿಸುವುದಿಲ್ಲ ಎಂದು ನಿಶ್ಚಯಿಸಿರುವೆನು.

೨೪. ತಾಯಿಯಾದ ಮೃಗಾವತಿಯು ಮಗಳ ಭಯಂಕರವಾದ ಆ ಮಾತನ್ನು ಕೇಳಿ ಕಂಬನಿ ಸುರಿಸುತ್ತ ದೈನ್ಯದಿಂದ ಇಂತೆಂದಳು.

೨೫–೨೬. "ಮಗು! ನೀನು ತಪಸ್ಸಿಗಾಗಿ ಸಾಹಸ ಮಾಡಬೇಡ. ಬಾಲೆಯೂ, ಕೋಮಲಾಂಗಿಯೂ, ಸುಖದಿಂದಿರುವವಳೂ ಆದ ನೀನು ಗಡ್ಡೆಗೆಣಸುಗಳನ್ನು ತಿನ್ನುತ್ತ ನಾರುಡೆಯನ್ನುಟ್ಟು ತಪವನ್ನಾಚರಿಸಲು ಹೇಗೆ ಶಕ್ತಳಾಗುವೆ?

೨೭. ಆದುದರಿಂದ ನಿನ್ನನ್ನು ಶ್ರೇಷ್ಠನಾದ ಒಬ್ಬ ದೊರೆಗೆ ವಿವಾಹ ಮಾಡಿ ಕೊಡುವೆನು.

ಏಷಾ ತೇ ಬ್ರಾಹ್ಮಣೀನಾಮ ಸಖೀ ಪರಮಸಮ್ಮತಾ ।
ಪ್ರತೀಕ್ಷತೇ ವಿವಾಹಂ ತೇ ಕೌಮಾರಂ ಭಾವಮಾಶ್ರಿತಾ ॥ ೨೮ ॥
ಯಸ್ಯ ಭೂಪಸ್ಯ ತ್ವಂ ಹರ್ಮ್ಯೇ ಪ್ರಯಾಸ್ಯಸಿ ವಿವಾಹಿತಾ ।
ಪುರೋಧಾಸ್ತಸ್ಯ ಯೋ ರಾಜ್ಞೋ ಭಾರ್ಯೇಯಂ ತಸ್ಯ ಭಾವಿನೀ ॥ ೨೯ ॥

ರತ್ನಾವತ್ಯುವಾಚ :—

ನ ಚ ಭೂಯಸ್ತ್ವಯಾ ವಾಚ್ಯಂ ವಾಕ್ಯಮೇವಂ ವಿಧಂ ಕ್ವಚಿತ್ ।
ಮದರ್ಥೇ ಯದಿ ಮೇ ಪ್ರಾಣಾಂಸ್ತ್ವಂ ವಾಂಛಸಿ ಸುತೈಷಿಣೀ ॥ ೩೦ ॥
ಅಥವಾ ತ್ವಂ ಹಠಾರ್ಥೇ ಚ ತಪೋವಿಘ್ನಂ ಕರಿಷ್ಯಸಿ ॥ ೩೧ ॥
ತತಸ್ತ್ಯಕ್ಷ್ಯಾಮ್ಯಹಂ ದೇಹಂ ಭಕ್ಷಯಿತ್ವಾ ಮಹದ್ವಿಷಂ ।
ಖಂಡಯಿಷ್ಯಾಮ್ಯಹಂ ಜಿಹ್ವಾಂ ಪ್ರವೇಕ್ಷ್ಯಾಮಿ ಚ ವಾ ಜಲಂ ॥ ೩೨ ॥
ಏವಂ ಸಾ ನಿಶ್ಚಯಂ ಕೃತ್ವಾ ಪ್ರೋಚ್ಯತಾಂ ಜನನೀಂ ತದಾ ॥ ೩೩ ॥
ತತಃ ಪ್ರೋವಾಚ ತಾಂ ಕನ್ಯಾಂ ಬ್ರಾಹ್ಮಣೀಂ ಸಮ್ಮತಾಂ ಸಖೀಂ ।
ಕೃತಾಂಜಲಿಪುಟಾ ಭೂತ್ವಾ ಸಮಾಲಿಂಗ್ಯ ಚ ಸಾದರಂ ॥ ೩೪ ॥
ಗಚ್ಛ ತ್ವಂ ಸ್ವಪಿತುರ್ಹರ್ಮ್ಯಂ ಪ್ರೇಷಿತಾಽಸಿ ಮಯಾ ಶುಭೇ ।
ಯೇನ ತೇ ಯಚ್ಛತಿ ಪಿತಾ ನಾಗರಾಯ ಮಹಾತ್ಮನೇ ॥ ೩೫ ॥

---

೨೮. ನಿನಗೆ ಅತ್ಯಂತ ಪ್ರಿಯ ಸಖಿಯಾದ ಈ ಬ್ರಾಹ್ಮಣಿಯು ಕುಮಾರೀ ಭಾವದಲ್ಲಿದ್ದು ನಿನ್ನ ವಿವಾಹವನ್ನು ನಿರೀಕ್ಷಿಸುತ್ತಿರುವಳು.

೨೯. ನೀನು ಯಾವ ರಾಜನನ್ನು ವರಿಸಿ ಅರಮನೆಗೆ ಹೋಗುವೆಯೊ ಆ ರಾಜನ ಪುರೋಹಿತನಿಗೆ ಇವಳು ಪತ್ನಿಯಾಗುವಳು.''

೩೦. ರತ್ನವತಿಯು ಹೇಳುತ್ತಾಳೆ:—ಅಮ್ಮ! ಮಗಳಲ್ಲಿ ಪ್ರೀತಿಯುಳ್ಳ ನೀನು ನಾನು ಜೀವಿಸಿರುವುದನ್ನು ಬಯಸುವುದಾದರೆ ಇಂತಹ ಮಾತನ್ನು ಮರಳಿ ಆಡಬೇಡ.

೩೧–೩೨. ಅಥವಾ ನೀನು ಹಠದಿಂದ ನನ್ನ ತಪಸ್ಸಿಗೆ ಅಡ್ಡಿಯನ್ನುಂಟು ಮಾಡಿದರೆ ಆಗ ನಾನು ವಿಷವನ್ನು ಕುಡಿದು ದೇಹವನ್ನು ತ್ಯಜಿಸುವೆನು. ನಾಲಿಗೆಯನ್ನಾದರೂ ಕತ್ತರಿಸಿಕೊಳ್ಳುವೆನು. ಅಥವಾ ನೀರನ್ನಾದರೂ ಪ್ರವೇಶಿಸುವೆನು.

೩೩–೩೪. ಅವಳು ಹೀಗೆ ನಿಶ್ಚಯಿಸಿ ತಾಯಿಯನ್ನು ಕುರಿತು ಹೇಳಿ ಪ್ರಿಯ ಸಖಿಯಾದ ಬ್ರಾಹ್ಮಣಿಯನ್ನು ತಬ್ಬಿಕೊಂಡು ಅವಳನ್ನು ಕುರಿತು ಕೈಮುಗಿದು ಕೊಂಡು ಇಂತೆಂದಳು.

೩೫. ''ಮಂಗಳಕರಳೆ! ನೀನು ನಿನ್ನ ತಂದೆಯ ಮನೆಗೆ ಹೋಗು. ನಾನು ಕಳುಹಿಸಿದ್ದೇನೆ. ನಿನ್ನ ತಂದೆಯು ನಿನ್ನನ್ನು ಮಹಾತ್ಮನಾದ ನಾಗರಬ್ರಾಹ್ಮಣನಿಗೆ ವಿವಾಹ ಮಾಡಿಕೊಡುವನು.

ಕ್ಷಮಸ್ವ ಯನ್ಮಯಾ ಪ್ರೋಕ್ತಾ ಕದಾಚಿತ್ಪರುಷಂ ವಚಃ ।
ತ್ವಯಾಽಪಿ ಯನ್ಮಮ ಪ್ರೋಕ್ತಂ ಕ್ಷಾಂತಂ ಚೈತನ್ಮಯಾ ಧ್ರುವಂ ॥ ೩೬ ॥
ಬ್ರಾಹ್ಮಣ್ಯುವಾಚ :—
ಅಷ್ಟವರ್ಷಾ ಭವೇದ್ಗೌರೀ ನವವರ್ಷಾ ತು ರೋಹಿಣೀ ।
ದಶವರ್ಷಾ ಭವೇತ್ಕನ್ಯಾ ಅತ ಊರ್ಧ್ವಂ ರಜಸ್ವಲಾ ॥ ೩೭ ॥
ಕೌಮಾರ್ಯಂ ಚ ಪ್ರಣಷ್ಟಂ ಮೇ ತ್ವತ್ಸಂಪರ್ಕಾದ್ವರಾನನೇ ।
ಜಾತಂ ಷೋಡಶಕಂ ವರ್ಷಂ ಸ್ತ್ರೀಧರ್ಮೇಣ ಸಮನ್ವಿತಂ ॥ ೩೮ ॥
ನ ಮೇ ಪಾಣಿಗ್ರಹಂ ಕಶ್ಚಿನ್ನಾಗರೋಽತ್ರ ಕರಿಷ್ಯತಿ ।
ಬುಧ್ಯಮಾನಸ್ತು ಸ್ಮೃತ್ಯರ್ಥಂ ವಕ್ಷ್ಯಮಾಣಂ ವರಾನನೇ ॥ ೩೯ ॥
ರಜಸ್ವಲಾಂ ಚ ಯಃ ಕನ್ಯಾಮುದ್ವಾಹಯತಿ ನಿರ್ಘೃಣಃ ।
ತಸ್ಯಾಃ ಸಂತಾನಮಾಸಾದ್ಯ ಪಾತಯೇತ್ಪುರುಷಾನ್ ದಶ ॥ ೪೦ ॥
ರಜಸ್ವಲಾಂ ತು ಯಃ ಕನ್ಯಾಂ ಪಿತಾ ಯಚ್ಛತಿ ನಿರ್ಘೃಣಃ ।
ಸ ಪಾತಯೇದಸಂದಿಗ್ಧಂ ದಶಪೂರ್ವಾನ್ ದಶಾಽಪರಾನ್ ॥ ೪೧ ॥

---

೩೬. ಯಾವಾಗಲಾದರೂ ಒಂದು ಸಾರಿ ನಾನು ನಿನಗೆ ಬಿರುನುಡಿಯ ನ್ನಾಡಿದ್ದರೆ ಅದನ್ನು ಕ್ಷಮಿಸು. ನೀನು ಅಂತಹ ಮಾತನ್ನಾಡಿದ್ದರೆ ನಾನೂ ಕ್ಷಮಿಸಿದ್ದೇನೆ.''

೩೭. ಬ್ರಾಹ್ಮಣಿಯು ಹೇಳುತ್ತಾಳೆ:—ಎಂಟು ವರ್ಷದ ಹುಡುಗಿಯು ಗೌರಿಯೆಂದೂ, ಒಂಬತ್ತು ವರ್ಷದವಳು ರೋಹಿಣಿಯೆಂದೂ, ಹತ್ತು ವರ್ಷದವಳು ಕನ್ಯೆಯೆಂದೂ, ಮುಂದಿನ ವಯಸ್ಸಿನವಳು ರಜಸ್ವಲೆಯೆಂದೂ ಹೇಳಲ್ಪಡುವಳು.

೩೮. ಸುಂದರಿ! ''ನಿನ್ನ ಸಹವಾಸದಿಂದ ನನ್ನ ಕುಮಾರೀಭಾವವು ಕಳೆಯಿತು. ಈಗ ಪುಷ್ಪವತಿಯಾಗಿ ಹದಿನಾರು ವರ್ಷ ವಯಸ್ಸಿನವಳಾಗಿದ್ದೇನೆ.

೩೯. ಇಲ್ಲಿರುವ ಯಾವ ನಾಗರ ಬ್ರಾಹ್ಮಣನೂ ಮುಂದೆ ಹೇಳುವ ಸ್ಮೃತಿಯ ಅರ್ಥವನ್ನು ತಿಳಿದವನಾಗಿ ನನ್ನನ್ನು ಮದುವೆ ಮಾಡಿಕೊಳ್ಳುವುದಿಲ್ಲ.

೪೦. ಯಾವನು ನಿರ್ದಯನಾಗಿ ರಜಸ್ವಲೆಯಾದ ಕನ್ಯೆಯನ್ನು ವಿವಾಹ ಮಾಡಿಕೊಳ್ಳುವನೊ, ಅವನು ಅವಳಿಂದ ಸಂತತಿಯನ್ನು ಪಡೆದು ತನ್ನ ಹತ್ತು ತಲೆಯ ಪಿತೃಗಳನ್ನು ಪತಿತರನ್ನಾಗಿಸುವನು.

೪೧. ನಿರ್ಘೃಣನಾದ ಯಾವ ತಂದೆಯು ರಜಸ್ವಲೆಯಾದ ಕನ್ಯೆಯನ್ನು ದಾನಮಾಡುವನೊ, ಅವನು ನಿಶ್ಚಯವಾಗಿಯೂ ಹತ್ತು ತಲೆಮಾರಿನ ಪೂರ್ವಾಪರ ಪಿತೃಗಳನ್ನು ಪತಿತರನ್ನಾಗಿ ಮಾಡುವನು.

**ತಸ್ಮಾದಹಂ ಕರಿಷ್ಯಾಮಿ ತ್ವಯಾ ಸಾರ್ಧಂ ತಪಃ ಶುಭೇ ।**
**ಪಿತ್ರಾ ನೈವ ಹಿ ಮೇ ಕಾರ್ಯಂ ನ ಚ ಮಾತ್ರಾ ಕಥಂಚನ ॥ ೪೨ ॥**

**ಸೂತ ಉವಾಚ :—**

**ಏವಂ ತೇ ನಿಶ್ಚಯಂ ಕೃತ್ವಾ ಕನ್ಯಕೇ ದ್ವೇ ದ್ವಿಜೋತ್ತಮಾಃ ।**
**ಗತೇ ಯತ್ರ ಸ್ಥಿತಃ ಸಾಕ್ಷಾದ್ಭರ್ತೃಯಜ್ಞೋ ಮಹಾಮುನಿಃ ॥ ೪೩ ॥**
**ಸ್ಥಿತೋ ವಾಸ್ತುಪದೇ ರಮ್ಯೇ ಸರ್ವತೀರ್ಥಮಯೇ ಶುಭೇ ।**
**ತಸ್ಯ ತಪಃಪ್ರಭಾವೇನ ಜಾತು ಕೋಪೋ ನ ದೃಶ್ಯತೇ ॥ ೪೪ ॥**
**ಕಸ್ಯಚಿತ್ಕ್ವಾಽಪಿ ಮರ್ತ್ಯಸ್ಯ ತಿರ್ಯಗ್ಯೋನಿಗತಸ್ಯ ಚ ।**
**ಕ್ರೀಡಂತಿ ನಕುಲಾಃ ಸರ್ಪೈರ್ಮಾರ್ಜಾರಾಃ ಸಹ ಮೂಷಕೈಃ ॥ ೪೫ ॥**
**ಸಾರಂಗಾ ದ್ವೀಪಿಭಿಃ ಸಾರ್ಧಂ ಕಾಕಾಶ್ಚ ಸಹ ಕೌಶಿಕೈಃ ।**
**ಭರ್ತೃಯಜ್ಞಂ ಸುಖಾಸೀನಂ ತತ್ರ ಗತ್ವಾ ತು ತೇ ಶುಭೇ ।**
**ಪ್ರೋಚತುರ್ವಿನಯೋಪೇತೇ ಕೃತಾಂಜಲಿಪುಟೇ ಸ್ಥಿತೇ ॥ ೪೬ ॥**

**ಬ್ರಾಹ್ಮಣ್ಯುವಾಚ :—**

**ಅಹಂ ಸಖ್ಯಾಸಮಂ ಯಾತಾ ಹ್ಯನಯಾ ರಾಜಕನ್ಯಯಾ ।**
**ತಪೋಽರ್ಥೇ ತವ ಪಾದಾಂತೇ ತದ್ಬ್ರೂಹಿ ತಪಸೋ ವಿಧಿಂ ॥ ೪೭ ॥**
**ವದಸ್ವ ಯೇನ ತತ್ಕೃತ್ಸ್ನಂ ಪ್ರಕರೋಮಿ ಮಹಾಮತೇ ॥ ೪೮ ॥**

---

೪೨. ಆದುದರಿಂದ ನಾನು ನಿನ್ನೊಡನೆ ತಪಸ್ಸನ್ನು ಮಾಡುವೆನು. ನನಗೆ ತಂದೆಯಿಂದಾಗಲಿ, ತಾಯಿಯಿಂದಾಗಲಿ ಏನೂ ಕೆಲಸವಿಲ್ಲ.''

೪೩–೪೫. ಸೂತನು ಹೇಳುತ್ತಾನೆ:—ದ್ವಿಜವರ್ಯರೆ! ಆ ಇಬ್ಬರು ಕನ್ಯೆಯರೂ ಹೀಗೆ ನಿರ್ಣಯಿಸಿ ರಮ್ಯವೂ, ಸಕಲ ತೀರ್ಥಮಯವೂ ಆದ ವಾಸ್ತುಪದದಲ್ಲಿರುವ ಭರ್ತೃಯಜ್ಞ ಮಹಾಮುನಿಯೆಡೆಗೆ ಹೋದರು. ಆ ಮುನಿಯ ತಪಸ್ಸಿನ ಪ್ರಭಾವದಿಂದ ಅಲ್ಲಿ ಮನುಷ್ಯನಲ್ಲಾಗಲಿ, ಪಶುಪಕ್ಷಿಗಳಲ್ಲಾಗಲಿ ಕೋಪವೇ ಕಾಣಿಸುತ್ತಿರಲಿಲ್ಲ. ಮುಂಗಸಿಗಳು ಸರ್ಪಗಳೊಡನೆಯೂ, ಬೆಕ್ಕುಗಳು ಇಲಿಗಳೊಡನೆಯೂ, ಜಿಂಕೆಗಳು ಹುಲಿಗಳೊಡನೆಯೂ, ಕಾಗೆಗಳು ಗೂಬೆಗಳೊಡನೆಯೂ ಆಡುತ್ತಿದ್ದುವು.

೪೬. ಅವರೀರ್ವರು ಅಲ್ಲಿ ಸೌಖ್ಯದಿಂದ ಕುಳಿತಿರುವ ಭರ್ತೃಯಜ್ಞನೆಡೆಗೆ ಹೋಗಿ ವಿನಯದಿಂದ ಕೈಮುಗಿದುಕೊಂಡು ಹೀಗೆಂದರು.

೪೭. ಬ್ರಾಹ್ಮಣಿಯು ಹೇಳುತ್ತಾಳೆ:—ನಾನು ಸಖಿಯಾದ ಈ ರಾಜಕನ್ಯೆಯೊಡನೆ ತಪಸ್ಸಿಗಾಗಿ ನಿನ್ನ ಚರಣದೆಡೆಗೆ ಬಂದಿರುವೆನು. ಆದುದರಿಂದ ತಪಸ್ಸಿನ ವಿಧಿಯನ್ನು ನಮಗೆ ಹೇಳು.

೪೮. ಪ್ರಾಜ್ಞನೆ! ಅದನ್ನೆಲ್ಲ ನಾನು ಮಾಡುತ್ತೇನೆ.

ಭರ್ತೃಯಜ್ಞ ಉವಾಚ :—
ಅಹಂ ತೇ ಕಥಯಿಷ್ಯಾಮಿ ತಪಶ್ಚರ್ಯಾವಿಧಿಂ ಪೃಥಕ್ ।
ಯೇನ ಸಂಪ್ರಾಪ್ಯತೇ ಮೋಕ್ಷಃ ಕಿಂ ಪುನಸ್ತ್ರಿದಶಾಲಯಃ ॥ ೪೯ ॥
ಚಾಂದ್ರಾಯಣಾನಿ ಕೃಚ್ಛ್ರಾಣಿ ತಥಾ ಸಾಂತಪನಾನಿ ಚ ।
ಷಷ್ಠೇ ಕಾಲೇ ತಥಾ ಭೋಜ್ಯಂ ದಿನಾಂತರಿತಮೇವ ಚ ॥ ೫೦ ॥
ಬ್ರಹ್ಮಕೂರ್ಚಂ ತ್ರಿರಾತ್ರಂ ಚ ಏಕಭಕ್ತಮಯಾಚಿತಂ ।
ತಪೋ ದ್ವಾರಾಣಿ ಸರ್ವಾಣಿ ಕೃತಾನ್ಯೇತಾನಿ ವೇಧಸಾ ॥ ೫೧ ॥
ಸ್ವಶಕ್ತ್ಯಾಚೈವ ಕಾರ್ಯಾಣಿ ರಾಗದ್ವೇಷವಿವರ್ಜಿತೈಃ ।
ನಾಂಛಿತವ್ಯಂ ಫಲಂ ಚೈವ ಸರ್ವೇಷಾಮೇವ ಪುತ್ರಿಕೇ ।
ತತಃ ಸಿದ್ಧಿಮವಾಪ್ನೋತಿ ಯಾ ಸದಾ ಮನಸಿ ಸ್ಥಿತಾ ॥ ೫೨ ॥
ಸಮತ್ವಂ ಶತ್ರುಮಿತ್ರಾಭ್ಯಾಂ ತಥಾ ಪಾಷಾಣರತ್ನಯೋಃ ।
ಯದಾ ಸಂಜಾಯತೇ ಚಿತ್ತೇ ತದಾ ಮೋಕ್ಷಮವಾಪ್ನುಯಾತ್ ॥ ೫೩ ॥
ಯೋ ಲಿಂಗಗ್ರಹಣಂ ಕೃತ್ವಾ ತತಃ ಕೋಪಪರೋ ಭವೇತ್ ।
ವೃಥಾ ಹಿ ತಸ್ಯ ತತ್ಸರ್ವಂ ಯಥಾ ಭಸ್ಮಹುತಂ ತಥಾ ॥ ೫೪ ॥
ಸೂತ ಉವಾಚ :—
ಸಾ ತಥೇತಿ ಪ್ರತಿಜ್ಞಾಯ ಬ್ರಾಹ್ಮಣೀ ಸಹಿತಾ ತಯಾ ।
ರತ್ನಾವತ್ಯಾ ಜಗಾಮಾಽಥ ಕಿಂಚಿಚ್ಚೈವ ಜಲಾಶಯಂ ॥ ೫೫ ॥

---

೪೯. ಭರ್ತೃಯಜ್ಞನು ಹೇಳುತ್ತಾನೆ :—ನಾನು ನಿನಗೆ ತಪಸ್ಸನ್ನು ಮಾಡುವ ವಿಧಾನವನ್ನು ಪ್ರತ್ಯೇಕವಾಗಿ ಹೇಳುವೆನು. ಅದರಿಂದ ಮೋಕ್ಷವು ಲಭಿಸುವುದು. ದೇವಲೋಕದ ವಿಷಯವೇನು.

೫೦–೫೧. ಚಾಂದ್ರಾಯಣ, ಕೃಚ್ಛ್ರ, ಸಾಂತಪನ, ಷಷ್ಠಕಾಲ ಭೋಜನ, ದಿನಾಂತರಿತ, ಬ್ರಹ್ಮಕೂರ್ಚ, ತ್ರಿರಾತ್ರ, ಏಕಭಕ್ತ, ಅಯಾಚಿತ ಇವೇ ಮೊದಲಾದ ತಪಸ್ಸಿನ ದ್ವಾರಗಳನ್ನು ಬ್ರಹ್ಮನು ನಿರ್ಮಾಣಮಾಡಿರುವನು.

೫೨–೫೩. ಮಗಳೆ! ಇವುಗಳನ್ನು ತನ್ನ ಶಕ್ತ್ಯನುಸಾರ ರಾಗದ್ವೇಷಗಳನ್ನು ತ್ಯಜಿಸಿ ಆಚರಿಸಬೇಕು. ಇವುಗಳಿಂದ ದೊರಕುವ ಫಲವನ್ನು ಸರ್ವರಿಗಾಗಿಯೂ ಇಚ್ಛಿಸಬೇಕು. ಅನಂತರ ನರನು ಮನಸ್ಸಿನಲ್ಲಿರುವ ಸಿದ್ಧಿಯನ್ನು ಹೊಂದುವನು. ಶತ್ರು ಮಿತ್ರರಲ್ಲಿಯೂ, ಕಲ್ಲು ರತ್ನಗಳಲ್ಲಿಯೂ ಸಾಮ್ಯವು ಮನಸ್ಸಿನಲ್ಲುಂಟಾದಾಗ ಮೋಕ್ಷವನ್ನು ಹೊಂದುವನು.

೫೪. ಯಾವುದಾದರೊಂದು ಚಿಹ್ನೆಯನ್ನು ಧರಿಸಿ ಕೋಪಾಸಕ್ತನಾದವನ ತಪಸ್ಸೆಲ್ಲವೂ ಬೂದಿಯಲ್ಲಿ ಹೋಮಿಸಿದಂತೆ ನಿಷ್ಫಲವಾಗುವುದು.

೫೫–೫೬. ಸೂತನು ಹೇಳುತ್ತಾನೆ :—ಆ ಬ್ರಾಹ್ಮಣಿಯು ಹಾಗೆಯೇ ಆಗಲೆಂದು ಒಪ್ಪಿ ಆ ರತ್ನವತಿಯೊಡನೆ ಸ್ವಚ್ಛವಾದ ನೀರಿನಿಂದ ತುಂಬಿರುವ

ಸ್ವಚ್ಛೋದಕೇನ ಸಂಪೂರ್ಣಂ ಪದ್ಮಿನೀಷಂಡಮಂಡಿತಂ ।
ತತಶ್ಚಾಂದ್ರಾಯಣಂ ಚಕ್ರೇ ತಪಸಃ ಪ್ರಥಮಂ ವ್ರತಂ ॥ ೫೬ ॥
ತತಃ ಕೃಚ್ಛ್ರವ್ರತಂ ಚಕ್ರೇ ತತಃ ಸಾಂತಪನಂ ಚ ಸಾ ।
ಷಷ್ಠಾನ್ನಕಾಲಭೋಜ್ಯಾ ಚ ಸಾ ಚಾಽಭೂದ್ವತ್ಸರತ್ರಯಂ ॥ ೫೭ ॥
ತ್ರಿರಾತ್ರೋಪೋಷಣಂ ಪಶ್ಚಾದ್ಯಾವದ್ವರ್ಷತ್ರಯಂ ತಥಾ ।
ಏಕಾಂತರೋಪವಾಸೈಶ್ಚ ಸಾಽನಯದ್ವತ್ಸರತ್ರಯಂ ॥ ೫೮ ॥
ಹೇಮಂತೇ ಜಲಮಧ್ಯಸ್ಥಾ ಸಾ ಬಭೂವ ತಪಸ್ವಿನೀ ।
ಪಂಚಾಗ್ನಿಸಾಧಕಾ ಗ್ರೀಷ್ಮೇ ಸಾ ಬಭೂವ ಯಶಸ್ವಿನೀ ॥ ೫೯ ॥
ನಿರಾಶ್ರಯಾಽಭವತ್ಸಾಧ್ವೀ ವರ್ಷಾಕಾಲ ಉಪಸ್ಥಿತೇ ।
ಧ್ಯಾಯಮಾನಾ ದಿವಾನಕ್ತಂ ದೇವದೇವಂ ಜನಾರ್ದನಂ ॥ ೬೦ ॥
ಯದ್ಯದ್ವ್ರತಂ ಪುರಾ ಚಕ್ರೇ ಬ್ರಾಹ್ಮಣೀ ಸಾ ಚ ಸುವ್ರತಾ ।
ಅನ್ಯಂ ಜಲಾಶಯಂ ಪ್ರಾಪ್ಯ ಸಾ ತಚ್ಚಕ್ರೇ ನೃಪಾತ್ಮಜಾ ।
ಪ್ರೀತ್ಯಾ ಪರಮಯಾ ಯುಕ್ತಾ ತದಾ ಸಾ ದ್ವಿಜಸತ್ತಮಾಃ ॥ ೬೧ ॥
ತತೋ ವರ್ಷಶತಂ ಸಾರ್ಧಂ ಫಲಾಹಾರಾ ಬಭೂವ ಸಾ ।
ಶೀರ್ಣಪರ್ಣಾಽಶನಾ ಪಶ್ಚಾತ್ತಾವನ್ಮಾತ್ರಂ ವ್ಯವಸ್ಥಿತಾ ॥ ೬೨ ॥

---

ಕಮಲಸಮೂಹಗಳಿಂದ ವಿರಾಜಿಸುವ ಒಂದು ಕೆರೆಗೆ ಹೋದಳು. ಅನಂತರ ತಪಸ್ಸಿನ ಮೊದಲನೆಯ ವ್ರತವಾದ ಚಾಂದ್ರಾಯಣವನ್ನು ಆಚರಿಸಿದಳು.

೫೭. ತರುವಾಯ ಕೃಚ್ಛ್ರ, ಸಾಂತಪನ ವ್ರತಗಳನ್ನು ಮಾಡಿ ಮೂರು ವರ್ಷಕಾಲ ಷಷ್ಠಕಾಲ ಭೋಜನವುಳ್ಳವಳಾದಳು.

೫೮. ಅನಂತರ ಮೂರು ವರ್ಷಕಾಲ ತ್ರಿರಾತ್ರೋಪವಾಸವನ್ನೂ, ಮೂರು ವರ್ಷಕಾಲ ಏಕಾಂತರೋಪವಾಸವನ್ನೂ ಮಾಡಿದಳು.

೫೯–೬೦. ಅವಳು ಚಳಿಗಾಲದಲ್ಲಿ ಜಲಮಧ್ಯದಲ್ಲಿರುವವಳೂ, ಗ್ರೀಷ್ಮ ಋತುವಿನಲ್ಲಿ ಪಂಚಾಗ್ನಿ ಮಧ್ಯದಲ್ಲಿರುವವಳೂ, ಮಳೆಗಾಲದಲ್ಲಿ ಅನಾವರಣ ಪ್ರದೇಶದಲ್ಲಿರುವವಳೂ ಆಗಿ ಹಗಲು ರಾತ್ರಿ ಶ್ರೀ ಜನಾರ್ದನನನ್ನು ಧ್ಯಾನಿಸು ತ್ತಿದ್ದಳು.

೬೧. ಎಲೈ ದ್ವಿಜವರ್ಯರೆ! ಆ ಬ್ರಾಹ್ಮಣಿಯು ಯಾವ ಯಾವ ವ್ರತ ಗಳನ್ನು ಮಾಡಿದಳೊ, ಆ ರಾಜಕನ್ಯೆಯೂ ಇತರ ಜಲಾಶಯದಲ್ಲಿ ಅತ್ಯಂತ ಪ್ರೀತಿ ಯಿಂದ ಆ ವ್ರತವನ್ನಾಚರಿಸಿದಳು.

೬೨. ಅನಂತರ ನೂರು ವರ್ಷಕಾಲ ಆ ಬ್ರಾಹ್ಮಣಿಯು ರತ್ನವತಿಯೊಡನೆ ಫಲಾಹಾರಳೂ, ಅನಂತರ ಅಷ್ಟು ವರ್ಷಕಾಲ ಪರ್ಣಾಶನಳೂ ಆಗಿದ್ದಳು.

ತತಶ್ಚೈವ ಜಲಾಹಾರಾ ಯಾವದ್ವರ್ಷಶತಾನಿ ಷಟ್ ।
ವಾಯುಭಕ್ಷಾ ಬಭೂವಾಽಥ ಸಹಸ್ರಂ ಪರಿವತ್ಸರಾನ್ ॥ ೬೩ ॥
ಯಥಾ ಯಥಾ ತಪಶ್ಚಕ್ರೇ ಸಾ ಕುಮಾರೀ ದ್ವಿಜೋತ್ತಮಾಃ ।
ತಥಾ ತಥಾಽಭವತ್ತಸ್ಯಾಸ್ತೇಜೋವೃದ್ಧಿರನುತ್ತಮಾ ॥ ೬೪ ॥
ಏತಸ್ಮಿನ್ನೇವ ಕಾಲೇ ತು ಭಗವಾಂಛಶಿಶೇಖರಃ ॥ ೬೫ ॥
ಗೌರ್ಯಾ ಸಹ ಪ್ರಸನ್ನಾತ್ಮಾ ತಸ್ಯಾ ಗೋಚರಮಾಗತಃ ।
ಮೇಘಗಂಭೀರಯಾ ವಾಚಾ ತತೋ ವಚನಮಬ್ರವೀತ್ ॥ ೬೬ ॥
ವತ್ಸೇ ತಪೋನಿವೃತ್ತಿಂ ತ್ವಂ ಕುರುಷ್ವ ವಚನಾನ್ಮಮ ।
ಪ್ರಾರ್ಥಯಸ್ವ ಮನೋಽಭೀಷ್ಟಂ ಯೇನ ಸರ್ವಂ ದದಾಮಿ ತೇ ॥ ೬೭ ॥

ಬ್ರಾಹ್ಮಣ್ಯುವಾಚ :—

ಅಭೀಷ್ಟಮೇತದೇವಂ ಮೇ ಯತ್ತ್ವಂ ದೃಷ್ಟೋಽಸಿ ಶಂಕರ ।
ಸ್ವಪ್ನೇಽಪಿ ದರ್ಶನಂ ದೇವ ದುರ್ಲಭಂ ತೇ ನೃಣಾಂ ಯತಃ ॥ ೬೮ ॥

ಭಗವಾನುವಾಚ :—

ನ ಮೇ ಸ್ಯಾದ್ದರ್ಶನಂ ವ್ಯರ್ಥಂ ಕಥಂಚಿತ್ಸುತಪಸ್ವಿನಿ ।
ತಸ್ಮಾದ್ವರಯ ಭದ್ರಂ ತೇ ವರಂ ಯೇನ ದದಾಮ್ಯಹಂ ॥ ೬೯ ॥

---

೬೩. ಅನಂತರ ಆರುನೂರು ವರ್ಷಕಾಲ ಜಲಾಹಾರಳೂ, ತರುವಾಯ ಸಾವಿರ ವರ್ಷಕಾಲ ವಾಯುಭಕ್ಷಕಳೂ ಆಗಿದ್ದಳು.

೬೪. ದ್ವಿಜೋತ್ತಮರೆ! ಆ ಕುಮಾರಿಯು ಈರೀತಿ ತಪಸ್ಸನ್ನು ಬೆಳೆಸಿದಂತೆಲ್ಲ ಅವಳ ತೇಜಸ್ಸೂ ವೃದ್ಧಿಯಾಗುತ್ತಿತ್ತು.

೬೫–೬೬. ಈ ಸಮಯದಲ್ಲಿ ಪೂಜ್ಯನಾದ ಶಂಕರನು ಪ್ರಸನ್ನನಾಗಿ ಗೌರಿಯೊಡನೆ ಅವಳಿಗೆ ಪ್ರತ್ಯಕ್ಷನಾಗಿ ಮೇಘದಂತೆ ಗಂಭೀರವಾದ ವಾಣಿಯಿಂದ ಇಂತೆಂದನು.

೬೭. "ಮಗಳೆ! ನೀನು ನನ್ನ ಮಾತಿನಿಂದ ತಪಸ್ಸನ್ನು ತ್ಯಜಿಸು. ನಿನ್ನ ಮನೋಭೀಷ್ಟವನ್ನು ಬೇಡಿಕೊ. ಅದನ್ನು ನಿನಗೆ ಕೊಡುವೆನು."

೬೮. ಬ್ರಾಹ್ಮಣಿಯು ಹೇಳುತ್ತಾಳೆ:—ಶಂಕರ! ನಿನ್ನ ದರ್ಶನವೇ ನನಗೆ ಇಷ್ಟವಾದುದು. ಸ್ವಪ್ನದಲ್ಲಿಯೂ ನಿನ್ನ ದರ್ಶನವು ದುರ್ಲಭವಾದುದು.

೬೯. ಭಗವಂತನು ಹೇಳುತ್ತಾನೆ:—ತಪಸ್ವಿನಿಯೆ! ನನ್ನ ದರ್ಶನವು ವ್ಯರ್ಥವಾಗಲಾರದು. ಆದುದರಿಂದ ನೀನು ಮಂಗಳಕರವಾದ ವರವನ್ನು ಕೇಳಿಕೊ. ಅದನ್ನು ಕೊಡುತ್ತೇನೆ.

ಬ್ರಾಹ್ಮಣ್ಯುವಾಚ :—

ಏಷಾ ಮೇ ಸುಸಖೀ ಸಾಧ್ವೀ ರಾಜಪುತ್ರೀ ಯಶಸ್ವಿನೀ ।
ಖ್ಯಾತಾ ರತ್ನಾವತೀ ನಾಮ ಪ್ರಾಣೇಭ್ಯೋಽಪಿ ಗರೀಯಸೀ ॥ ೭೦ ॥
ಮಮ ತುಲ್ಯಂ ತಪಶ್ಚಕ್ರೇ ಶೂದ್ರಯೋನಾವಪಿ ಸ್ಥಿತಾ ।
ನಿವರ್ತತೇ ತು ಯದ್ಯೇಷಾ ತಪಸಸ್ತು ನಿವರ್ತನಂ ।
ಕರೋಮ್ಯದ್ಯ ಜಗನ್ನಾಥ ತದಹಂ ಸಂಶಯಂ ವಿನಾ ॥ ೭೧ ॥
ಅಸ್ಯಾಃ ಸ್ನೇಹೇನ ಸಂತ್ಯಕ್ತೋ ಮಯಾ ಭರ್ತಾ ಸುರೇಶ್ವರ ।
ತಸ್ಮಾದ್ದೇವ ವರಂ ದೇಹಿ ತ್ವಮಸ್ಯಾ ಮನಸಿ ಸ್ಥಿತಂ ॥ ೭೨ ॥

ಸೂತ ಉವಾಚ :—

ತಸ್ಯಾಸ್ತದ್ವಚನಂ ಶ್ರುತ್ವಾ ಭಗವಾಂಛಶಿಶೇಖರಃ ।
ಅಬ್ರವೀದ್ರಾಜಪುತ್ರೀಂ ತಾಂ ಮೇಘಗಂಭೀರಯಾ ಗಿರಾ ।
ವತ್ಸೇ ಮದ್ವಚನಾದದ್ಯ ತಪಸ್ತ್ವಂ ತ್ಯಕ್ತುಮರ್ಹಸಿ ॥ ೭೩ ॥
ವರಂ ವರಯ ಕಲ್ಯಾಣಿ ನಿತ್ಯಂ ಮನಸಿ ಸಂಸ್ಥಿತಂ ।
ಅದೇಯಮಪಿ ದಾಸ್ಯಾಮಿ ಸಾಂಪ್ರತಂ ತವ ಭಾಮಿನಿ ॥ ೭೪ ॥

ರತ್ನಾವತ್ಯುವಾಚ :—

ಏತಜ್ಜಲಾಶಯಂ ಪುಣ್ಯಂ ಪದ್ಮಿನೀಷಂಡಮಂಡಿತಂ ॥ ೭೫ ॥

---

೭೦. ಬ್ರಾಹ್ಮಣಿಯು ಹೇಳುತ್ತಾಳೆ:—ಇವಳು ನನ್ನ ಪ್ರಾಣಕ್ಕಿಂತಲೂ ಪ್ರಿಯ ಸಖಿಯಾದ ರತ್ನಾವತಿಯೆಂಬ ರಾಜಕುವರಿಯು.

೭೧. ಇವಳು ಶೂದ್ರಜಾತಿಯವಳಾದರೂ ನನ್ನ ಹಾಗೆಯೇ ತಪವನ್ನಾಚರಿಸಿದ್ದಾಳೆ. ಇವಳು ತಪಸ್ಸನ್ನು ನಿಲ್ಲಿಸಿದರೆ ನಿಶ್ಚಯವಾಗಿಯೂ ನಾನೂ ತಪಸ್ಸನ್ನು ನಿಲ್ಲಿಸುವೆನು.

೭೨. ನಾನು ಇವಳಲ್ಲಿರುವ ಪ್ರೀತಿಯಿಂದ ಮದುವೆ ಮಾಡಿಕೊಳ್ಳಲಿಲ್ಲ. ಆದುದರಿಂದ ಶಂಕರ! ಮೊದಲು ಇವಳ ಮನಸ್ಸಿನಲ್ಲಿರುವ ವರವನ್ನು ಕೊಡು.

೭೩. ಸೂತನು ಹೇಳುತ್ತಾನೆ:—ಪೂಜ್ಯನಾದ ಶಂಕರನು ಬ್ರಾಹ್ಮಣಿಯ ಆ ಮಾತನ್ನು ಕೇಳಿ ರಾಜಕುವರಿಯನ್ನು ಕುರಿತು ಮೇಘದಂತೆ ಗಂಭೀರವಾದ ವಾಣಿಯಿಂದ ಹೀಗೆಂದನು. ಮಗಳೆ! ನೀನು ಈಗ ನನ್ನ ಮಾತಿನಿಂದ ತಪಸ್ಸನ್ನು ತ್ಯಜಿಸಲರ್ಹಳಾಗಿರುವೆ.

೭೪. "ಮಂಗಳಕರಳೆ! ನೀನು ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಕೊಡಲನರ್ಹವಾದುದನ್ನೂ ನಿನಗೆ ಕೊಡುವೆನು."

೭೫–೭೬. ರತ್ನವತಿಯು ಹೇಳುತ್ತಾಳೆ:—"ಮಹೇಶ್ವರ! ಸಾಧ್ವಿಯಾದ ಈ ಬ್ರಾಹ್ಮಣಿಯು ನಿತ್ಯವೂ ತಪಸ್ಸನ್ನು ಮಾಡುತ್ತಿರುವ ಕಮಲಸಮೂಹಗಳಿಂದ

ಯತ್ರೈಷಾ ಬ್ರಾಹ್ಮಣೀ ಸಾಧ್ವೀ ನಿತ್ಯಂ ಚ ತಪಸಿ ಸ್ಥಿತಾ ।
ಅಸ್ಯಾ ನಾಮ್ನಾ ಚ ವಿಖ್ಯಾತಿರ ತೀರ್ಥಮೇತತ್ಪ್ರಪದ್ಯತಾಂ ॥ ೭೬ ॥
ಅತ್ರ ಯಃ ಕುರುತೇ ಸ್ನಾನಂ ಶ್ರದ್ಧಯಾ ಪರಯಾ ಯುತಃ ।
ತಸ್ಯ ಭೂಯಾತ್ಸದಾ ವಾಸೋ ದೇವದೇವ ತ್ರಿವಿಷ್ಟಪೇ ॥ ೭೭ ॥
ಮದೀಯಂ ಮಮ ನಾಮ್ನಾ ತು ಶೂದ್ರಾಸಂಜ್ಞಂ ತು ಜಾಯತಾಂ ।
ತಸ್ಯ ತುಲ್ಯಪ್ರಭಾವಂ ತು ತೀರ್ಥಸ್ಯ ಪ್ರತಿಪದ್ಯತಾಂ ॥ ೭೮ ॥
ಆವಾಭ್ಯಾಂ ನಿತ್ಯಶಃ ಕಾರ್ಯಂ ಕುಮಾರತ್ವೇ ಮಹತ್ತಪಃ ।
ಆರಾಧ್ಯಸ್ತ್ವಂ ಸುರಶ್ರೇಷ್ಠೋ ವಾಙ್ಮನಃ ಕರ್ಮಭಿಸ್ತಥಾ ॥ ೭೯ ॥
ಏತಸ್ಮಿನ್ನೇವ ಕಾಲೇ ತು ನಿರ್ಭಿದ್ಯ ಧರಣೀತಲಂ ।
ಲಿಂಗಂ ಮಾಹೇಶ್ವರಂ ವಿಪ್ರಾ ನಿಷ್ಕ್ರಾಂತಂ ಸೂರ್ಯಸನ್ನಿಭಂ ॥ ೮೦ ॥
ತತಃ ಪ್ರೋವಾಚ ತೇ ದೇವಃ ಸ್ವಯಮೇವ ಮಹೇಶ್ವರಃ ।
ತಾಭ್ಯಾಂ ಸುತಪಸಾ ತುಷ್ಟಃ ಸಾದರಂ ಭಕ್ತವತ್ಸಲಃ ॥ ೮೧ ॥
ಏತತ್ತೀರ್ಥದ್ವಯಂ ಖ್ಯಾತಂ ತ್ರೈಲೋಕ್ಯೇಽಪಿ ಭವಿಷ್ಯತಿ ।
ಶೂದ್ರೀನಾಮ ತ್ವದೀಯಂ ತು ಬ್ರಾಹ್ಮಣೀ ಚ ಸಖೀ ತವ ॥ ೮೨ ॥

---

ಅಲಂಕಾರಗೊಂಡ ಈ ಪವಿತ್ರ ಜಲಾಶಯವು ಇವಳ ಹೆಸರಿನಿಂದ ಪ್ರಸಿದ್ಧಿಗೊಳ್ಳಲಿ.

೭೭. ಇಲ್ಲಿ ಅತಿಶಯ ಶ್ರದ್ಧೆಯಿಂದ ಸ್ನಾನ ಮಾಡುವವನು ಯಾವಾಗಲೂ ಸ್ವರ್ಗದಲ್ಲಿ ವಾಸಿಸಲಿ.

೭೮. ಅದಕ್ಕೆ ಸಮಾನವಾದ ಮಾಹಾತ್ಮ್ಯವುಳ್ಳ ನನ್ನೀ ತೀರ್ಥವು ನನ್ನ ಶೂದ್ರೀನಾಮದಿಂದ ವಿಖ್ಯಾತವಾಗಲಿ.

೭೯. ಸುರೋತ್ತಮನಾದ ಓ ಮಹೇಶ್ವರ! ನಾವಿಬ್ಬರೂ ನಿತ್ಯವೂ ವಾಕ್, ಮನಸ್ಸು, ಕಾರ್ಯಗಳಿಂದ ನಿನ್ನನ್ನು ಆರಾಧಿಸುತ್ತ ಕುಮಾರೀಭಾವದಿಂದ ತಪಸ್ಸನ್ನು ಮಾಡುವಂತೆ ಮಾಡು.''

೮೦. ವಿಪ್ರರೆ! ಈ ಸಮಯದಲ್ಲಿ ಸೂರ್ಯನಂತೆ ಬೆಳಗುತ್ತಿರುವ ಮಾಹೇಶ್ವರ ಲಿಂಗವು ಭೂತಲವನ್ನು ಸೀಳಿ ಮೇಲಕ್ಕೆ ಬಂದಿತು.

೮೧. ಅನಂತರ ಭಕ್ತಪ್ರಿಯನಾದ ಮಹೇಶ್ವರನು ಅವರೀರ್ವರ ತಪಸ್ಸಿನಿಂದ ತುಷ್ಟನಾಗಿ ಪ್ರೀತಿಯಿಂದ ಅವರಿಬ್ಬರನ್ನು ಕುರಿತು ಇಂತೆಂದನು.

೮೨. '' ಈ ಎರಡು ತೀರ್ಥಗಳಲ್ಲಿ ನಿನ್ನ ತೀರ್ಥವು ನಿನ್ನ ಹೆಸರಿನಿಂದಲೂ, ನಿನ್ನ ಸಖಿಯ ತೀರ್ಥವು ಅವಳ ಹೆಸರಿನಿಂದಲೂ ಮೂರು ಲೋಕಗಳಲ್ಲಿಯೂ ವಿಖ್ಯಾತವಾಗುವುದು.

ತೀರ್ಥದ್ವಯೇऽಪಿ ಯಃ ಸ್ನಾತ್ವಾ ಏತಸ್ಮಿಂಛ್ರದ್ಧಯಾನ್ವಿತಃ ।
ತ್ವತ್ತಃ ಪದ್ಮಾನಿ ಸಂಗೃಹ್ಯ ಅಸ್ಯಾಸ್ತೋಯೇನ ಚ ನಿರ್ಮಲಂ ॥ ೮೩ ॥
ಏತಚ್ಚ ಮಾಮಕಂ ಲಿಂಗಂ ಸ್ನಾಪಯಿತ್ವಾऽರ್ಚಯಿಷ್ಯತಿ ।
ಪಶ್ಚಾತ್ಪಕ್ಷೇ ಚತುರ್ದಶ್ಯಾಂ ಶುಕ್ಲಾಯಾಂ ಸೋಮವಾಸರೇ ।
ಚೈತ್ರೇಮಾಸಿ ಚ ಸಂಪ್ರಾಪ್ತೇ ಚಿರಾಯುಃ ಸ ಭವಿಷ್ಯತಿ ॥ ೮೪ ॥
ಸರ್ವಪಾಪವಿನಿರ್ಮುಕ್ತೋ ಯದ್ಯಪಿ ಸ್ಯಾತ್ಸುಪಾಪಕೃತ್ ॥ ೮೫ ॥
ಏವಮುಕ್ತ್ವಾ ಸ ಭಗವಾಂಸ್ತತಶ್ಚಾದರ್ಶನಂ ಗತಃ ।
ತತ್ರ ನಿತ್ಯಂ ಚ ತಪಸಿ ಸ್ಥಿತೇ ಸಖ್ಯಾವುಭಾವಪಿ ॥ ೮೬ ॥
ಯಾವತ್ಕಲ್ಪಶತಂ ತಾವಜ್ಜರಾಮರಣವರ್ಜಿತೇ ।
ಅದ್ಯಾऽಪಿ ಗಗನೇ ತೇ ಚ ದೃಶ್ಯೇತೇ ತಾರಕಾತ್ಮಕೇ ॥ ೮೭ ॥
ತತಃ ಪ್ರಭೃತಿ ತತ್ಖ್ಯಾತಂ ತೀರ್ಥಯುಗ್ಮಂ ಧರಾತಲೇ ।
ಆಗತ್ಯಾऽಥ ನರೋ ದೂರಾತ್ತಾಭ್ಯಾಂ ಕೃತ್ವಾ ನಿಮಜ್ಜನಂ ॥ ೮೮ ॥
ಪೂಜಯಿತ್ವಾ ತು ತಲ್ಲಿಂಗಂ ತತೋ ಯಾತಿ ದಿವಾಲಯಂ ।
ಮಹಾಪಾತಕಯುಕ್ತೋऽಪಿ ತತ್ಪ್ರಭಾವಾದಸಂಶಯಂ ॥ ೮೯ ॥
ಏತಸ್ಮಿನ್ನಂತರೇ ಮರ್ತ್ಯೇ ನಷ್ಟಾ ಧರ್ಮಸ್ಯ ಚ ಕ್ರಿಯಾ ।
ಯಜ್ಞದಾನಕೃತಾ ಯಾ ಚ ದೇವಾರ್ಚನಸಮುದ್ಭವಾ ॥ ೯೦ ॥

---

೮೩–೮೪. ಮನುಷ್ಯನು ಚೈತ್ರಶುಕ್ಲ ಚತುರ್ದಶೀ ಸೋಮವಾರದ ದಿನ ಶ್ರದ್ಧೆಯಿಂದ ಈ ಎರಡು ತೀರ್ಥಗಳಲ್ಲಿಯೂ ಮಿಂದು ನಿನ್ನ ತೀರ್ಥದಿಂದ ಕಮಲಗಳನ್ನು ತೆಗೆದುಕೊಂಡು ಈ ಬ್ರಾಹ್ಮಣೀತೀರ್ಥದ ಜಲದಿಂದ ನನ್ನ ಲಿಂಗವನ್ನು ಅಭಿಷೇಕಮಾಡಿ ಪೂಜಿಸಿದರೆ ಚಿರಂಜೀವಿಯಾಗುವನು.

೮೫. ಅತ್ಯಂತ ಪಾಪಿಯಾಗಿದ್ದರೂ ಸಕಲ ಪಾಪಗಳಿಂದ ಮುಕ್ತನಾಗುವನು.''

೮೬–೮೭. ಆ ಶಂಕರನು ಹೀಗೆ ನುಡಿದು ಅದೃಶ್ಯನಾದನು. ಆ ಇಬ್ಬರು ಕುಮಾರಿಯರು ನೂರು ಕಲ್ಪಗಳವರೆಗೆ ಜರಾಮರಣವಿಲ್ಲದೆ ತಪಸ್ಸನ್ನು ಮಾಡಿದರು. ಈಗಲೂ ಅವರು ಆಕಾಶದಲ್ಲಿ ನಕ್ಷತ್ರ ರೂಪರಾಗಿ ಕಾಣುತ್ತಾರೆ.

೮೮–೮೯. ಅದು ಮೊದಲ್ಗೊಂಡು ಆ ಎರಡು ತೀರ್ಥಗಳೂ ಭೂಮಿಯಲ್ಲಿ ಪ್ರಸಿದ್ಧವಾದುವು. ಮಹಾ ಪಾಪಿಯಾದ ಮನುಷ್ಯನೂ ದೂರದಿಂದ ಅಲ್ಲಿಗೆ ಬಂದು ಅವುಗಳಲ್ಲಿ ಮಿಂದು ಆ ಲಿಂಗವನ್ನಾರಾಧಿಸಿ ಅದರ ಪ್ರಭಾವದಿಂದ ನಿಶ್ಚಯವಾಗಿಯೂ ಸ್ವರ್ಗಕ್ಕೆ ಹೋಗುವನು.

೯೦. ಈ ಸಮಯದಲ್ಲಿ ಮನುಷ್ಯಲೋಕದಲ್ಲಿ ಯಜ್ಞ, ದಾನ, ದೇವಪೂಜೆಗಳ ಸಂಬಂಧವಾದ ಧರ್ಮಕಾರ್ಯಗಳು ನಷ್ಟವಾದುವು.

ವ್ಯಾಪ್ತಸ್ತಥಾಽಖಿಲಃ ಸ್ವರ್ಗೋ ಮಾನವೈಃ ಸ್ಪರ್ಧಯಾನ್ವಿತೈಃ ।
ಸಾರ್ಧಂ ದೇವೈರ್ವಿಮಾನಸ್ಥೈರಪ್ಸರೋಗಣಸೇವಿತೈಃ ॥ ೯೧ ॥
ಏತಸ್ಮಿನ್ನೇವ ಕಾಲೇ ತು ಧರ್ಮರಾಜಃ ಸಮಾಯಯೌ ।
ಯತ್ರ ವೇದಧ್ವನಿರ್ಬೃಹ್ಮಾ ಬ್ರಹ್ಮಲೋಕಂ ಸಮಾಶ್ರಿತಃ ॥ ೯೨ ॥
ಅಬ್ರವೀದ್ದುಃಖಿತೋ ದೀನಃ ಕ್ಷಿಪ್ತ್ವಾಽಗ್ರೇ ಪತ್ರಕದ್ವಯಂ ।
ಏಕಂ ಪಾಪಸಮುದ್ಭೂತಮನ್ಯದ್ಧರ್ಮಸಮುದ್ಭವಂ ॥ ೯೩ ॥
ಚಿತ್ರೇಣ ಲಿಖಿತಂ ಯಚ್ಚ ವಿಚಿತ್ರೇಣ ತಥಾ ಪರಂ ।
ಹಾಟಕೇಶ್ವರಜೇ ಕ್ಷೇತ್ರೇ ದೇವತೀರ್ಥಯುಗಂ ಸ್ಥಿತಂ ॥ ೯೪ ॥
ಶೂದ್ರಾಖ್ಯಂ ಬ್ರಾಹ್ಮಣೀನಾಮ ತಥಾಽನ್ಯತ್ಪದ್ಮಮಂಡಿತಂ ।
ತಥಾ ತತ್ರಾಽಸ್ತಿ ಲಿಂಗಂ ಚ ಪುಣ್ಯಂ ಮಾಹೇಶ್ವರಂ ಮಹತ್ ॥ ೯೫ ॥
ತ್ರಯಾಣಾಮಥ ತೇಷಾಂ ಚ ಪ್ರಭಾವಾತ್ಸರ್ವಮಾನವಾಃ ।
ಅಪಿ ಪಾಪಸಮಾಯುಕ್ತಾಃ ಪ್ರಯಾಂತಿ ತ್ರಿದಶಾಲಯಂ ॥ ೯೬ ॥
ಶೂನ್ಯಾ ಮೇ ನರಕಾ ಜಾತಾಃ ಸರ್ವೇ ತೇ ರೌರವಾದಯಃ ॥ ೯೭ ॥
ನ ಕಶ್ಚಿದ್ಯಜನಂ ಚಕ್ರೇ ನ ದಾನಂ ನ ಚ ತರ್ಪಣಂ ।
ದೇವತಾನಾಂ ಪಿತೄಣಾಂ ಚ ಮನುಷ್ಯಾಣಾಂ ವಿಶೇಷತಃ ॥ ೯೮ ॥
ತಸ್ಮಾನ್ಮುಕ್ತೋ ಮಯಾ ಸರ್ವೋ ಯೋಽಧಿಕಾರಸ್ತ್ವಯೋದ್ಭವಃ ।
ನಿಯೋಜಯಸ್ವ ತತ್ರಾಽನ್ಯಂ ಕಂಚಿಚ್ಛಕ್ತತಮಂ ತತಃ ॥ ೯೯ ॥

---

೯೧. ವಿಮಾನಾರೂಢರಾಗಿ ಅಪ್ಸರೆಯರಿಂದ ಸೇವಿತರಾದ ದೇವತೆಗಳೊಡನೆ ಸ್ಪರ್ಧಿಸುತ್ತಿರುವ ಮಾನವರಿಂದ ಸ್ವರ್ಗಲೋಕವು ವ್ಯಾಪ್ತವಾಯಿತು.

೯೨. ಈ ಸಮಯದಲ್ಲಿ ಧರ್ಮರಾಜನು ವೇದಘೋಷದಿಂದ ತುಂಬಿರುವ ಬ್ರಹ್ಮಲೋಕಕ್ಕೆ ಬಂದನು.

೯೩–೯೫. ಅಲ್ಲಿ ಅವನು ದುಃಖಿತನಾಗಿ ದೈನ್ಯದಿಂದ ಬ್ರಹ್ಮನ ಮುಂದೆ ಚಿತ್ರ ವಿಚಿತ್ರರು ಬರೆದ ಪಾಪ ಮತ್ತು ಧರ್ಮಗಳ ಎರಡು ಕಾಗದಗಳನ್ನು ಎಸೆದು ಹೀಗೆಂದನು. ''ಹಾಟಕೇಶ್ವರಜ ಕ್ಷೇತ್ರದಲ್ಲಿ ತಾವರೆಗಳಿಂದ ಅಲಂಕಾರಗೊಂಡ ಶೂದ್ರೀ, ಬ್ರಾಹ್ಮಣೀ ಎಂಬ ಎರಡು ತೀರ್ಥಗಳೂ, ಒಂದು ಪುಣ್ಯಕರವಾದ ಮಾಹೇಶ್ವರಲಿಂಗವೂ ಇದೆ.

೯೬–೯೭. ಈ ಮೂರರ ಪ್ರಭಾವದಿಂದ ಪಾಪಿಗಳಾದ ಮಾನವರೂ ದೇವಲೋಕಕ್ಕೆ ಹೋಗುವರು. ನನ್ನ ರೌರವ ಮೊದಲಾದ ನರಕಗಳು ಶೂನ್ಯಗಳಾದುವು.

೯೮. ಒಬ್ಬ ಮಾನವನೂ ದೇವ, ಪಿತೃ, ಮನುಷ್ಯರಿಗೆ ಯಜ್ಞ, ದಾನ, ತರ್ಪಣಗಳನ್ನು ಮಾಡುವುದಿಲ್ಲ.

೯೯. ಆದುದರಿಂದ ನೀನು ಕೊಟ್ಟ ಅಧಿಕಾರವನ್ನು ನಾನು ತ್ಯಜಿಸಿದ್ದೇನೆ. ಆ ಅಧಿಕಾರದಲ್ಲಿ ಸಮರ್ಥನಾದ ಬೇರೆ ಒಬ್ಬನನ್ನು ನೇಮಿಸು.

ಅಪ್ರಮಾಣಂ ಸ್ಥಿತಂ ಸರ್ವಮೇತತ್ಪತ್ರದ್ವಯಂ ಮಮ ।
ತಚ್ಛ್ರುತ್ವಾ ಪದ್ಮಜಃ ಪ್ರಾಹ ಸಮಾನೀಯ ಶತಕ್ರತುಂ ॥ ೧೦೦ ॥
ಗತ್ವಾ ಶೀಘ್ರತಮಂ ಮರ್ತ್ಯೇ ತ್ವಂ ಶಕ್ರ ವಚನಾನ್ಮಮ ।
ಹಾಟಕೇಶ್ವರಜೇ ಕ್ಷೇತ್ರೇ ತೀರ್ಥದ್ವಯಮನುತ್ತಮಂ ॥ ೧೦೧ ॥
ಶೂದ್ರ್ಯಾಖ್ಯಂ ಬ್ರಾಹ್ಮಣೀತ್ಯೇವ ಯಚ್ಚ ಲಿಂಗಮನುತ್ತಮಂ ।
ತತ್ರಸ್ಥಂ ನಾಶಯ ಕ್ಷಿಪ್ರಂ ಕೃತ್ವಾ ಪಾಂಸುಪ್ರವರ್ಷಣಂ ॥ ೧೦೨ ॥

ಸೂತ ಉವಾಚ :—

ತಚ್ಛ್ರುತ್ವಾ ಸತ್ವರಂ ಶಕ್ರೋ ಗತ್ವಾ ಭೂಮಿತಲಂ ತತಃ ।
ಪಾಂಸುಭಿಃ ಪೂರಯಾಮಾಸ ತೇ ತೀರ್ಥೇ ಲಿಂಗಮೇವ ಚ ॥ ೧೦೩ ॥
ಅದ್ಯಾಽಪಿ ಕಲಿಕಾಲೇಽಸ್ಮಿನ್ ದ್ವಾಭ್ಯಾಂ ಗೃಹ್ಯ ಸುಮೃತ್ತಿಕಾಂ ।
ಸ್ನಾತ್ವಾ ಚ ತಿಲಕಂ ಕಾರ್ಯಂ ಸರ್ವಪಾಪವಿಶುದ್ಧಯೇ ॥ ೧೦೪ ॥
ಚತುರ್ದಶೀ ದಿನೇ ಪ್ರಾಪ್ತೇ ಸೋಮವಾರೇ ಚ ಸಂಸ್ಥಿತೇ ।
ದ್ವಾಭ್ಯಾಂ ಯಃ ಕುರುತೇ ಶ್ರಾದ್ಧಂ ಶ್ರದ್ಧಯಾ ಪರಯಾ ಯುತಃ ।
ಗಯಾಶ್ರಾದ್ಧೇನ ಕಿಂ ತಸ್ಯ ಮನುಃ ಸ್ವಾಯಂಭುವೋಽಬ್ರವೀತ್ ॥ ೧೦೫ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಯಥಾ ಸಾ ಬ್ರಾಹ್ಮಣೀ ಜಾತಾ ಶೂದ್ರೀ ಚಾಽಪಿ ತಥಾಽಪರಾ ॥ ೧೦೬ ॥

---

೧೦೦. ನನ್ನೀ ಎರಡು ಕಾಗದಗಳು ಅಪ್ರಮಾಣಗಳಾಗಿವೆ.'' ಬ್ರಹ್ಮನು ಆ ಮಾತನ್ನು ಕೇಳಿ ಇಂದ್ರನನ್ನು ಕರೆಯಿಸಿ ಇಂತೆಂದನು.

೧೦೧–೧೦೨. ''ಇಂದ್ರ! ನೀನು ನನ್ನ ಮಾತಿನಿಂದ ಶೀಘ್ರವಾಗಿ ಹಾಟಕೇಶ್ವರಜ ಕ್ಷೇತ್ರಕ್ಕೆ ಹೋಗಿ ದೂಳಿಯನ್ನು ಸುರಿದು ಅಲ್ಲಿರುವ ಶೂದ್ರಾ, ಬ್ರಾಹ್ಮಣೀತೀರ್ಥಗಳನ್ನೂ, ಮಾಹೇಶ್ವರಲಿಂಗವನ್ನೂ ಕಣ್ಣಿಗೆ ಕಾಣದಂತೆ ಮಾಡು.

೧೦೩. ಸೂತನು ಹೇಳುತ್ತಾನೆ:—ಮಹೇಂದ್ರನು ಅದನ್ನು ಕೇಳಿ ತ್ವರೆಯಿಂದ ಭೂಮಿಗೆ ಹೋಗಿ ಆ ತೀರ್ಥಗಳನ್ನೂ, ಲಿಂಗವನ್ನೂ ದೂಳಿನಿಂದ ತುಂಬಿದನು.

೧೦೪. ಈಗಲೂ ಕಲಿಕಾಲದಲ್ಲಿ ಆ ಎರಡು ತೀರ್ಥಗಳ ಮೃತ್ತಿಕೆಯನ್ನು ತೆಗೆದುಕೊಂಡು ಮಿಂದು ಸಕಲ ಪಾಪಶುದ್ಧಿಗಾಗಿ ತಿಲಕವನ್ನು ಇಟ್ಟುಕೊಳ್ಳಬೇಕು.

೧೦೫. ಚತುರ್ದಶೀ ಸೋಮವಾರದ ದಿನ ಆ ಎರಡು ತೀರ್ಥಗಳಲ್ಲಿ ಅತಿ ಶ್ರದ್ಧೆಯಿಂದ ಶ್ರಾದ್ಧ ಮಾಡಿದವನಿಗೆ ಗಯಾಶ್ರಾದ್ಧದಿಂದೇನು ಪ್ರಯೋಜನ? ಎಂದು ಸ್ವಾಯಂಭುವಮನುವು ಹೇಳಿರುವನು.

೧೦೬. ದ್ವಿಜವರ್ಯರೆ! ಬ್ರಾಹ್ಮಣೀ, ಶೂದ್ರೀ-ತೀರ್ಥಗಳು ಹೇಗಾದುವೆಂದು ನೀವು ಕೇಳಿದ್ದನ್ನು ಸಮಗ್ರವಾಗಿ ಹೇಳಿದ್ದೇನೆ.

ಯಶ್ಚೈತಚ್ಛೃಣುಯಾದ್ಭಕ್ತ್ಯಾ ಪಠೇದ್ವಾ ದ್ವಿಜಸತ್ತಮಾಃ ।
ಸೋಽಪಿ ತದ್ದಿನಜಾತ್ಪಾಪಾನ್ಮುಚ್ಯತೇ ನಾಽತ್ರ ಸಂಶಯಃ ॥ ೧೦೭ ॥
ಏವಂ ನರೋ ನ ಕಃ ಸಿದ್ಧಸ್ತಸ್ಯ ಲಿಂಗಸ್ಯ ಪೂಜನಾಂ ।
ಚಿರಾಯುಶ್ಚ ತಥಾ ಜಾತೋ ಯಥಾಽನ್ಯೋ ನಾಽತ್ರ ವಿದ್ಯತೇ ॥ ೧೦೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಶೂದ್ರೀಬ್ರಾಹ್ಮಣೀತೀರ್ಥದ್ವಯಮಾಹಾತ್ಮ್ಯವರ್ಣನಂ"
ನಾಮಾಷ್ಟನವತ್ಯುತ್ತರಶತತಮೋಽಧ್ಯಾಯಃ

---

೧೦೭. ಇದನ್ನು ಭಕ್ತಿಯಿಂದ ಕೇಳಿದವನಾಗಲಿ, ಪಠಿಸಿದವನಾಗಲಿ ಆ ದಿನ ಮಾಡಿದ ಪಾಪದಿಂದ ನಿಶ್ಚಯವಾಗಿಯೂ ಮುಕ್ತನಾಗುವನು.

೧೦೮. ಹೀಗೆ ಆ ಲಿಂಗವನ್ನು ಪೂಜಿಸಿದ ಮಾನವರಲ್ಲಿ ಸಿದ್ಧನಾಗದವನೂ, ಚಿರಂಜೀವಿಯಾಗದವನೂ ಯಾವನೂ ಇಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಶೂದ್ರೀಬ್ರಾಹ್ಮಣೀತೀರ್ಥದ್ವಯಮಾಹಾತ್ಮ್ಯವರ್ಣನ"ವೆಂಬ
ನೂರತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಷ್ಟೈಕೋನದ್ವಿಶತತಮೋಽಧ್ಯಾಯಃ

### ನಾಗರಾಷ್ಟಕುಲಶ್ರೈಷ್ಠ್ಯವರ್ಣನಂ

**ಋಷಯ ಊಚುಃ :—**

**ತಿಸ್ರಃ ಕೋಟ್ಯೋಽರ್ಧಕೋಟೀ ಚ ತೀರ್ಥಾನಾಮಿಹ ಭೂತಲೇ ।**
**ಶ್ರೂಯತೇ ಸೂತ ಕಾರ್ತ್ಸ್ನ್ಯೇನ ಕೀರ್ತ್ಯಮಾನಾ ಮುನೀಶ್ವರೈಃ ॥ ೧ ॥**
**ಕಥಂ ಲಭ್ಯೇತ ಸರ್ವೇಷಾಂ ತೀರ್ಥಾನಾಂ ಸ್ನಾನಜಂ ಫಲಂ ।**
**ಅಲ್ಪಾಯುಭಿರ್ಮಹಾಭಾಗ ಕಲಿಕಾಲ ಉಪಸ್ಥಿತೇ ॥ ೨ ॥**

**ಸೂತ ಉವಾಚ :—**

**ಕ್ಷೇತ್ರತ್ರಯಮಿಹಾಖ್ಯಾತಂ ತಥಾಽರಣ್ಯತ್ರಯಂ ಮಹತ್ ।**
**ಪುರೀತ್ರಯಂ ವನಾನ್ಯೇವ ತ್ರೀಣಿ ಗ್ರಾಮಾಸ್ತಥಾ ತ್ರಯಃ ॥ ೩ ॥**
**ತಥಾ ತೀರ್ಥತ್ರಯಂ ಚಾಽನ್ಯತ್ಪರ್ವತತ್ರಿತಯಾನ್ವಿತಂ ।**
**ಮಹಾನದೀತ್ರಯಂ ಚೈವ ಸರ್ವಪಾತಕನಾಶನಂ ॥ ೪ ॥**
**ಮರ್ತ್ಯಲೋಕೇ ಸ್ಥಿತಂ ವಿಪ್ರಾಃ ಸರ್ವತೀರ್ಥಫಲಪ್ರದಂ ।**
**ಸರ್ವೇಷ್ವೇತೇಷು ಯಃ ಸ್ನಾತಿ ಸ ಸರ್ವೇಷಾಂ ಫಲಂ ಭವೇತ್ ॥ ೫ ॥**

---

### ಕನ್ನಡದ ಅನುವಾದ

#### ನಾಗರಾಷ್ಟಕುಲಶ್ರೈಷ್ಠ್ಯವರ್ಣನ

೧. ಋಷಿಗಳು ಹೇಳುತ್ತಾರೆ :—ಸೂತ! ಮುನಿವರ್ಯರು ಈ ಭೂಮಂಡಲದಲ್ಲಿ ಮೂರುವರೆ ಕೋಟಿ ತೀರ್ಥಗಳಿರುವುವು ಎಂದು ಹೇಳಿದ್ದಾರೆ. ಅದನ್ನು ಕೇಳಿದ್ದೇವೆ.

೨. ಕಲಿಕಾಲವು ಬರಲು ಅಲ್ಪಾಯುವಾದ ಮಾನವನು ಸಕಲ ತೀರ್ಥಗಳಲ್ಲಿ ಮಿಂದ ಫಲವನ್ನು ಹೇಗೆ ಪಡೆಯುವನು?

೩-೫. ಸೂತನು ಹೇಳುತ್ತಾನೆ :—ಬ್ರಾಹ್ಮಣರೆ! ಭೂಲೋಕದಲ್ಲಿ ಸಮಸ್ತ ತೀರ್ಥಗಳ ಫಲವನ್ನೀಯುವ ಮೂರು ಕ್ಷೇತ್ರಗಳೂ, ಮೂರು ಅರಣ್ಯಗಳೂ, ಮೂರು ಪಟ್ಟಣಗಳೂ, ಮೂರು ವನಗಳೂ, ಮೂರು ಗ್ರಾಮಗಳೂ, ಮೂರು ತೀರ್ಥಗಳೂ, ಮೂರು ಪರ್ವತಗಳೂ, ಮೂರು ಮಹಾನದಿಗಳೂ ಇರುವುವು. ಇವುಗಳಲ್ಲಿ ಸ್ನಾನ ಮಾಡುವವರು ಅಖಿಲ ತೀರ್ಥಗಳ ಫಲವನ್ನು ಪಡೆಯುವರು.

ಚತುರ್ವಿಂಶತಿ ಸಂಖ್ಯಾನಾಮಿದಮಾಹ ಪ್ರಜಾಪತಿಃ ।
ಯ ಏಕಸ್ಮಿಂಸ್ತ್ರಿಕೇ ಸ್ನಾತಿ ಸಾರ್ವತ್ರಿಕ ಫಲಂ ಲಭೇತ್ ॥ ೬ ॥

ಋಷಯ ಊಚುಃ :—

ತ್ರೀಣಿ ಕ್ಷೇತ್ರಾಣಿ ಕಾನೀಹ ತಥಾರಣ್ಯಾನಿ ಕಾನಿ ಚ ।
ಪುರ್ಯಸ್ತಿಸ್ರೋ ಮಹಾಭಾಗ ಕಾಃ ಖ್ಯಾತಾಶ್ಚ ವನಾನಿ ಚ ॥ ೭ ॥
ಕೇ ಗ್ರಾಮಾಃ ಕಾನಿ ತೀರ್ಥಾನಿ ಕೇ ನಗಾಃ ಸರಿತಶ್ಚ ಕಾಃ ।
ನಾಮಭಿರ್ವದ ನಃ ಸೂತ ಸರ್ವಾಣ್ಯೇತಾನಿ ವಿಸ್ತರಾತ್ ॥ ೮ ॥

ಸೂತ ಉವಾಚ :—

ಕುರುಕ್ಷೇತ್ರಮಿತಿ ಖ್ಯಾತಂ ಪ್ರಥಮಂ ಕ್ಷೇತ್ರಮುತ್ತಮಂ ।
ಹಾಟಕೇಶ್ವರಜಂ ಕ್ಷೇತ್ರಂ ದ್ವಿತೀಯಂ ಪರಿಕೀರ್ತಿತಂ ॥ ೯ ॥
ಪ್ರಾಭಾಸಿಕಂ ತೃತೀಯಂ ತು ಕ್ಷೇತ್ರಂ ಹಿ ದ್ವಿಜಸತ್ತಮಾಃ ।
ಏತತ್ಕ್ಷೇತ್ರತ್ರಯಂ ಪುಣ್ಯಂ ಸರ್ವಪಾತಕನಾಶನಂ ॥ ೧೦ ॥
ಯಥೋಕ್ತವಿಧಿನಾ ದೃಷ್ಟ್ವಾ ನರಃ ಪಾಪಾತ್ಪ್ರಮುಚ್ಯತೇ ।
ಯೋ ಯಂ ಕಾಮಮಭಿಧ್ಯಾಯನ್ ಕ್ಷೇತ್ರೇಷ್ವೇತೇಷು ಭಕ್ತಿತಃ ॥ ೧೧ ॥
ಸ್ನಾನಂ ಕರೋತಿ ತಸ್ಯೇಷ್ಟಂ ಮನಸೋ ಜಾಯತೇ ಫಲಂ ।
ಚತುರ್ವಿಂಶತಿ ಮಾನೇಷು ಸ್ನಾತೋ ಭವತಿ ಸ ದ್ವಿಜಾಃ ॥ ೧೨ ॥

---

೬. ಬ್ರಹ್ಮನು ಈ ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಯಾವುದಾದರೂ ಮೂರರಲ್ಲಿ ಮಿಂದರೂ ಇಪ್ಪತ್ತನಾಲ್ಕು ತೀರ್ಥಗಳ ಫಲವೂ ದೊರೆಯುವುದೆಂದು ಹೇಳಿದ್ದಾನೆ.

೭–೮. ಋಷಿಗಳು ಹೇಳುತ್ತಾರೆ:—ಸೂತ! ಈ ಮೂರು ಕ್ಷೇತ್ರಗಳೂ, ಅರಣ್ಯಗಳೂ, ಪಟ್ಟಣಗಳೂ, ವನಗಳೂ, ಗ್ರಾಮಗಳೂ, ತೀರ್ಥಗಳೂ, ನದಿಗಳೂ ಯಾವುವು? ಇವುಗಳನ್ನು ಹೆಸರಿನಿಂದ ವಿಸ್ತಾರವಾಗಿ ಹೇಳು.

೯–೧೦. ಸೂತನು ಹೇಳುತ್ತಾನೆ:—ಕುರುಕ್ಷೇತ್ರ, ಹಾಟಕೇಶ್ವರಜ ಕ್ಷೇತ್ರ, ಪ್ರಾಭಾಸಿಕ ಕ್ಷೇತ್ರ ಎಂಬ ಮೂರು ಕ್ಷೇತ್ರಗಳು ಸಮಸ್ತ ಪಾಪಗಳನ್ನೂ ನಿವಾರಿಸುವುವು.

೧೧–೧೨. ದ್ವಿಜರೆ! ಇವುಗಳನ್ನು ಶಾಸ್ತ್ರೋಕ್ತ ವಿಧಿಯಂತೆ ದರ್ಶನ ಮಾಡಿದರೆ ಮನುಷ್ಯನು ಪಾಪಮುಕ್ತನಾಗುವನು. ಯಾವನು ಯಾವ ಇಷ್ಟಾರ್ಥವನ್ನು ಚಿಂತಿಸುತ್ತ ಈ ಕ್ಷೇತ್ರಗಳಲ್ಲಿ ಭಕ್ತಿಯಿಂದ ಸ್ನಾನಮಾಡುವನೊ, ಅವನ ಮನೋಭೀಷ್ಟವು ಫಲಿಸುವುದು. ಅವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿಯೂ ಮಿಂದವನಂತಾಗುವನು.

ಏಕಂ ತು ಪುಷ್ಕರಾರಣ್ಯಂ ನೈಮಿಷಾಽರಣ್ಯಮೇವ ಚ ।
ಧರ್ಮಾರಣ್ಯಂ ತೃತೀಯಂ ತು ತೇಷಾಂ ಸಂಕೀರ್ತ್ಯತೇ ದ್ವಿಜಾಃ ॥ ೧೩ ॥
ತ್ರಿಷ್ವೇತೇಷು ಚ ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೧೪ ॥
ವಾರಾಣಸೀ ಪುರೀತ್ಯೇಕಾ ದ್ವಿತೀಯಾ ದ್ವಾರಕಾಪುರೀ ।
ಅವಂತ್ಯಾಖ್ಯಾ ತೃತೀಯಾ ಚ ವಿಶ್ರುತಾ ಭುವನತ್ರಯೇ ॥ ೧೫ ॥
ಏತಾಸು ಯೋ ನರಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೧೬ ॥
ವೃಂದಾವನಂ ವನಂ ಚೈಕಂ ದ್ವಿತೀಯಂ ಖಾಂಡವಂ ವನಂ ।
ಖ್ಯಾತಂ ದ್ವೈತವನಂ ಚಾಽನ್ಯತ್ತೃತೀಯಂ ಧರಣೀತಲೇ ॥ ೧೭ ॥
ತ್ರಿಷ್ವೇತೇಷು ಚ ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೧೮ ॥
ಕಲ್ಪಗ್ರಾಮಃ ಸ್ಮೃತಶ್ಚೈಕಃ ಶಾಲಿಗ್ರಾಮೋ ದ್ವಿತೀಯಕಃ ।
ನಂದಿಗ್ರಾಮಸ್ತೃತೀಯಸ್ತು ವಿಶ್ರುತೋ ದ್ವಿಜಸತ್ತಮಾಃ ॥ ೧೯ ॥
ತ್ರಿಷ್ವೇತೇಷು ಚ ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೨೦ ॥
ಅಗ್ನಿತೀರ್ಥಂ ಸ್ಮೃತಂ ಚೈಕಂ ಶುಕ್ಲತೀರ್ಥಮಥಾಪರಂ ।
ತೃತೀಯಂ ಪಿತೃತೀರ್ಥಂ ತು ಪಿತೄಣಾಮತಿವಲ್ಲಭಂ ॥ ೨೧ ॥
ತ್ರಿಷ್ವೇತೇಷು ಚ ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೨೨ ॥

---

೧೩–೧೪. ಪುಷ್ಕರ, ನೈಮಿಷ, ಧರ್ಮ ಎಂದು ಮೂರು ಅರಣ್ಯಗಳು. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದವನಂತಾಗುವನು.

೧೫. ವಾರಾಣಸೀ, ದ್ವಾರಕಾ, ಅವಂತೀ ಎಂದು ಮೂರು ಪಟ್ಟಣಗಳು ಮೂರೂ ಲೋಕಗಳಲ್ಲಿ ಪ್ರಸಿದ್ಧವಾಗಿವೆ.

೧೬. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಸ್ನಾನಮಾಡಿದ ಪುಣ್ಯವನ್ನು ಪಡೆಯುವನು.

೧೭. ವೃಂದಾವನ, ಖಾಂಡವ, ದ್ವೈತ ಎಂದು ಮೂರು ವನಗಳು ಪ್ರಸಿದ್ಧವಾಗಿರುವುವು.

೧೮. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದ ಫಲವನ್ನು ಪಡೆಯುವನು.

೧೯–೨೦. ಕಲ್ಪಗ್ರಾಮ, ಶಾಲಿಗ್ರಾಮ, ನಂದಿಗ್ರಾಮ ಎಂದು ಮೂರು ಗ್ರಾಮಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದವನಂತಾಗುವನು.

೨೧–೨೨. ಅಗ್ನಿತೀರ್ಥ, ಶುಕ್ಲತೀರ್ಥ, ಪಿತೃಪ್ರಿಯವಾದ ಪಿತೃತೀರ್ಥ ಎಂದು ಮೂರು ತೀರ್ಥಗಳು. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಸ್ನಾನ ಮಾಡಿದವನಂತಾಗುವನು.

ಶ್ರೀಪರ್ವತಃ ಸ್ಮೃತಶ್ಚೈಕೋ ದ್ವಿತೀಯಶ್ಚಾರ್ಬುದಸ್ತಥಾ ।
ತೃತೀಯೋ ರೈವತಾಖ್ಯೋಽತ್ರ ವಿಖ್ಯಾತಃ ಪರ್ವತೋತ್ತಮಾಃ ॥ ೨೩ ॥
ತ್ರಿಷ್ವೇತೇಷು ಚ ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೨೪ ॥
ಗಂಗಾನದೀ ಸ್ಮೃತಾ ಪೂರ್ವಾ ನರ್ಮದಾಖ್ಯಾ ತಥಾ ಪರಾ ।
ಸರಸ್ವತೀ ತೃತೀಯಾ ತು ನದೀ ಪ್ಲಕ್ಷ ಸಮುದ್ಭವಾ ॥ ೨೫ ॥
ಆಸು ಸರ್ವಾಸು ಯಃ ಸ್ನಾತಿ ಚತುರ್ವಿಂಶತಿಭಾಗ್ಭವೇತ್ ॥ ೨೬ ॥
ಏತೇಷ್ವೇವ ಹಿ ಸರ್ವೇಷು ಯಃ ಸ್ನಾನಂ ಕುರುತೇ ನರಃ ।
ಸಾರ್ಧಕೋಟಿತ್ರಯಸ್ಯಾಽತ್ರ ಸ ಕೃತ್ಸ್ನಂ ಫಲಮಾಪ್ನುಯಾತ್ ॥ ೨೭ ॥
ಯಶ್ಚೈಕಸ್ಮಿನ್ನರಃ ಸ್ನಾತಿ ಸ ತ್ರಿಕಸ್ಯ ಫಲಂ ಲಭೇತ್ ॥ ೨೮ ॥
ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಸಂಕ್ಷೇಪಾತ್ತೀರ್ಥಜಂ ಪುಣ್ಯಂ ಲಭ್ಯತೇ ಯನ್ನರೈರ್ಭುವಿ ॥ ೨೯ ॥
ಸಾಂಪ್ರತಂ ಕಿಂ ನು ವೋ ವಚ್ಮಿ ಯತ್ತದ್ವದತ ಮಾಚಿರಂ ॥ ೩೦ ॥

ಋಷಯ ಊಚುಃ :—

ಹಾಟಕೇಶ್ವರಜೇ ಕ್ಷೇತ್ರೇ ಯಾನಿ ತೀರ್ಥಾನಿ ಸೂತಜ ।
ತಾನಿ ಪ್ರೋಕ್ತಾನಿ ಸರ್ವಾಣಿ ತ್ವಯಾಽಸ್ಮಾಕಂ ಸುವಿಸ್ತರಾತ್ ॥ ೩೧ ॥

---

೨೩. ಶ್ರೀಪರ್ವತ, ಅರ್ಬುದ ಪರ್ವತ, ರೈವತ ಪರ್ವತ ಎಂದು ಮೂರು ಪರ್ವತಗಳು ಪ್ರಖ್ಯಾತವಾಗಿವೆ.

೨೪. ಈ ಮೂರರಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದವನಂತಾಗುವನು.

೨೫–೨೬. ಗಂಗಾ, ನರ್ಮದಾ, ಪ್ಲಕ್ಷೋತ್ಪನ್ನವಾದ ಸರಸ್ವತೀ ಇವು ಮೂರೂ ಮಹಾ ನದಿಗಳು. ಇವುಗಳಲ್ಲಿ ಮಿಂದವನು ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದವನಂತಾಗುವನು.

೨೭. ಈ ಇಪ್ಪತ್ತನಾಲ್ಕು ತೀರ್ಥಗಳಲ್ಲಿ ಮಿಂದವನು ಮೂರೂವರೆ ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿದ ಸಂಪೂರ್ಣ ಫಲವನ್ನು ಪಡೆಯುವನು.

೨೮. ಇವುಗಳಲ್ಲೊಂದರಲ್ಲಿ ಮಿಂದವನಿಗೆ ಮೂರು ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ಲಭಿಸುವುದು.

೨೯. ದ್ವಿಜವರ್ಯರೆ! ಭೂಮಂಡಲದಲ್ಲಿ ಮಾನವರು ಸಂಕ್ಷೇಪವಾಗಿ ತೀರ್ಥದ ಪುಣ್ಯವನ್ನು ಪಡೆಯುವ ಕ್ರಮವನ್ನು ನೀವು ಕೇಳಿದಂತೆ ಹೇಳಿದ್ದೇನೆ.

೩೦. ಈಗ ನಿಮಗೆ ಏನನ್ನು ಹೇಳಲಿ. ಅದನ್ನು ಶೀಘ್ರವಾಗಿ ತಿಳಿಸಿರಿ.

೩೧. ಋಷಿಗಳು ಹೇಳುತ್ತಾರೆ:—ಸೂತ! ನೀನು ಹಾಟಕೇಶ್ವರಜ ಕ್ಷೇತ್ರದಲ್ಲಿರುವ ಎಲ್ಲ ತೀರ್ಥಗಳನ್ನೂ ವಿಸ್ತಾರವಾಗಿ ಹೇಳಿರುವೆ.

ತಥಾ ಚಾಯತನಾನ್ಯೇವ ಸಂಖ್ಯಯಾ ರಹಿತಾನಿ ಚ ।
ಅಪಿ ವರ್ಷಶತೇನಾಽತ್ರ ಸ್ನಾನಂ ಕರ್ತುಂ ನ ಶಕ್ಯತೇ ॥ ೩೨ ॥
ತೇಷು ಸರ್ವೇಷು ಮರ್ತ್ಯೇನ ಯಥೋಕ್ತವಿಧಿನಾ ಸ್ಫುಟಂ ।
ದೇವತಾಯತನಾನ್ಯೇವ ತಥಾ ದ್ರಷ್ಟುಂ ಮಹಾಮತೇ ॥ ೩೩ ॥
ಯಸ್ಮಿನ್ ಸ್ನಾತೋ ದಿನೇ ಚೈವ ತಸ್ಯ ವ್ಯುಷ್ಟಿಃ ಪ್ರಕೀರ್ತಿತಾಃ ।
ಅಲ್ಪಾಯುಷಸ್ತದಾ ಮರ್ತ್ಯಾಃ ಕೃತೇಽಪಿ ಪರಿಕೀರ್ತಿತಾಃ ॥ ೩೪ ॥
ತ್ರೇತಾಯಾಂ ದ್ವಾಪರೇ ಚಾಽಪಿ ಕಿಮು ಪ್ರಾಪ್ತೇ ಕಲೌಯುಗೇ ।
ಏವಮಲ್ಪಾಯುಷೋ ಜ್ಞಾತ್ವಾ ಮಾನವಾನ್ ಸೂತನಂದನ ॥ ೩೫ ॥
ಲಭೇರಂಶ್ಚ ಕಥಂ ಸರ್ವತೀರ್ಥಾನಾಂ ಸ್ನಾನಜಂ ಫಲಂ ।
ದೇವದರ್ಶನಜಂ ವಾಽಪಿ ವಿಶೇಷಾನ್ನಿರ್ಧನಾಶ್ಚ ಯೇ ॥ ೩೬ ॥
ಅಸ್ತಿ ಕಶ್ಚಿದುಪಾಯೋಽತ್ರ ದೈವೋ ವಾ ಮಾನುಷೋಽಪಿ ವಾ ।
ಯೇನ ಯೇಷಾಂ ಭವೇತ್ಪುಣ್ಯಂ ಸರ್ವೇಷಾಮೇವ ಹೇಲಯಾ ॥ ೩೭ ॥

ಸೂತ ಉವಾಚ :—

ಅಸ್ಮಿನ್ನರ್ಥೇ ಪುರಾ ಪೃಷ್ಟೋ ವಿಶ್ವಾಮಿತ್ರೋ ಮಹಾಮುನಿಃ ।
ಸಮುಪೇತ್ಯಾಶ್ರಮಂ ತಸ್ಯ ಆನರ್ತೇನ ಮಹೀಭುಜಾ ॥ ೩೮ ॥

---

೩೨–೩೩. ಹಾಗೆಯೇ ಮಿತಿಯಿಲ್ಲದ ದೇವಾಲಯಗಳನ್ನೂ ಹೇಳಿದ್ದೀಯೆ. ಅವುಗಳಲ್ಲೆಲ್ಲ ಮಾನವನು ವಿಧಿಯಂತೆ ನೂರು ವರ್ಷಗಳ ಕಾಲದಲ್ಲಿಯೂ ಸ್ನಾನ ಮಾಡುವುದಕ್ಕೂ, ಎಲ್ಲ ದೇವಾಲಯಗಳನ್ನು ನೋಡುವುದಕ್ಕೂ ಸಮರ್ಥನಲ್ಲವೆಂಬುದು ಸ್ಫುಟವಾಗಿಯೇ ಇದೆ.

೩೪–೩೬. ಯಾವ ದಿನದಲ್ಲಿ ಸ್ನಾನ ಮಾಡುವನೋ ಆ ದಿನ ಮಾತ್ರ ಫಲವು ದೊರೆಯುವುದು. ಕೃತಯುಗದಲ್ಲಿಯೇ ಮಾನವರು ಅಲ್ಪಾಯುಸ್ಯವುಳ್ಳವರು. ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಏನು ಹೇಳತಕ್ಕುದು. ಹೀಗೆ ಅಲ್ಪಾಯುಸ್ಯವುಳ್ಳ ಮಾನವರು ಸಮಸ್ತ ತೀರ್ಥಗಳಲ್ಲಿ ಮಿಂದ ಫಲವನ್ನೂ, ದೇವರನ್ನು ದರ್ಶನ ಮಾಡಿದ ಪುಣ್ಯವನ್ನೂ ಹೇಗೆ ಪಡಯುವರು? ವಿಶೇಷವಾಗಿ ನಿರ್ಧನರು ಹೇಗೆ ಫಲವನ್ನು ಹೊಂದುವರು?

೩೭. ಇಂತಹ ಮನುಷ್ಯರು ಸಮಸ್ತ ತೀರ್ಥಗಳ ಪುಣ್ಯವನ್ನು ಅನಾಯಾಸವಾಗಿ ಪಡೆಯುವುದಕ್ಕೆ ದೇವ ಅಥವಾ ಮನುಷ್ಯ ಸಂಬಂಧವಾದ ಯಾವುದಾದರೊಂದು ಉಪಾಯವಿದೆಯೆ?

೩೮. ಸೂತನು ಹೇಳುತ್ತಾನೆ:—ಈ ವಿಷಯದಲ್ಲಿ ಹಿಂದೆ ಆನರ್ತರಾಜನು ವಿಶ್ವಾಮಿತ್ರನ ಆಶ್ರಮಕ್ಕೆ ಬಂದು ಪ್ರಶ್ನೆ ಮಾಡಿದ್ದಾನೆ.

ರಾಜೋವಾಚ :—

ಭಗವನ್ನತ್ರ ತೀರ್ಥಾನಿ ಸಂಖ್ಯಯಾ ರಹಿತಾನಿ ಚ ।
ತೇಷು ಸ್ನಾನವಿಧಿಃ ಪ್ರೋಕ್ತಃ ಸರ್ವೇಷ್ವೇವ ಪೃಥಕ್ಪೃಥಕ್ ॥ ೩೯ ॥
ಮಾಸೇ ವಾರೇ ದಿನೇ ಚೈವ ಕುತ್ರಚಿನ್ಮುನಿಸತ್ತಮೈಃ ।
ದಾನಾನಿ ಚ ತಥೋಕ್ತಾನಿ ಯಥಾ ಸ್ನಾನವಿಧಿಸ್ತಥಾ ॥ ೪೦ ॥
ದೇವಾನಾಂ ದರ್ಶನಂ ಚಾಽಪಿ ಪೃಥಕ್ತ್ವೇನ ಪ್ರಕೀರ್ತಿತಂ ।
ನ ಶಕ್ಯತೇ ಫಲಂ ಪ್ರಾಪ್ತುಂ ಸರ್ವೇಷಾಂ ಕೇನಚಿನ್ಮುನೇ ॥ ೪೧ ॥
ಅಪಿ ವರ್ಷಶತೇನಾಽಪಿ ಕಿಂ ಪುನಃ ಸ್ತೋಕವಾಸರೈಃ ।
ತಸ್ಮಾದ್ವದ ಮಹಾಭಾಗ ಸುಖೋಪಾಯಂ ಚ ದೇಹಿನಾಂ ॥ ೪೨ ॥
ಏಕಸ್ಮಿನ್ನಪಿ ಚ ಸ್ನಾತಸ್ತೀರ್ಥೇ ಪ್ರಾಪ್ನೋತಿ ಮಾನವಃ ।
ಸರ್ವೇಷಾಮೇವ ತೀರ್ಥಾನಾಂ ಸ್ನಾನಜಂ ಸಕಲಂ ಫಲಂ ॥ ೪೩ ॥
ತಥೈಕಸ್ಮಿನ್ ಸುರೇ ದೃಷ್ಟೇ ಸರ್ವದೇವಸಮುದ್ಭವಂ ।
ಫಲಂ ದರ್ಶನಜಂ ಭಾವಿ ನರಾಣಾಂ ದ್ವಿಜಸತ್ತಮ ॥ ೪೪ ॥

ಸೂತ ಉವಾಚ :—

ತಚ್ಛ್ರುತ್ವಾ ಸುಚಿರಂ ಧ್ಯಾತ್ವಾ ವಿಶ್ವಾಮಿತ್ರೋ ಮಹಾಮುನಿಃ ।
ಅಬ್ರವೀಚ್ಛೃಣು ರಾಜೇಂದ್ರ ಸ ರಹಸ್ಯಂ ವದಾಮಿ ತೇ ॥ ೪೫ ॥

---

೩೯. ರಾಜನು ಹೇಳುತ್ತಾನೆ:—ಪೂಜ್ಯನೆ! ಭೂಮಿಯಲ್ಲಿ ಲೆಕ್ಕವಿಲ್ಲದಷ್ಟು ತೀರ್ಥಗಳಿವೆ. ಅವುಗಳಲ್ಲಿ ಪ್ರತ್ಯೇಕವಾಗಿ ಸ್ನಾನ ಮಾಡುವ ಕ್ರಮವು ವಿಹಿತವಾಗಿದೆ.

೪೦–೪೪. ಮುನಿವರ್ಯರು ಮಾಸ, ವಾರ, ದಿನ, ದಾನ, ಸ್ನಾನವಿಧಿ, ದೇವದರ್ಶನ ಇವುಗಳನ್ನು ಪ್ರತ್ಯೇಕವಾಗಿ ಹೇಳಿದ್ದಾರೆ. ಒಬ್ಬನಿಂದಲೂ ಎಲ್ಲ ಫಲವನ್ನು ನೂರು ವರ್ಷಗಳಿಂದಲೂ ಪಡೆಯಲು ಸಾಧ್ಯವಿಲ್ಲ. ಕೆಲವು ದಿನಗಳಲ್ಲಿ ಪಡೆಯಲು ಸಾಧ್ಯವಿಲ್ಲವೆಂದು ಏನು ಹೇಳಲಿ. ಮಹಾ ಭಾಗ್ಯವಂತನೆ! ಆದುದರಿಂದ ಪ್ರಾಣಿಗಳಿಗೆ ಒಂದು ತೀರ್ಥದಲ್ಲಿ ಮಿಂದರೆ ಸಕಲ ತೀರ್ಥಗಳಲ್ಲಿ ಮಿಂದ ಫಲವೂ, ಒಬ್ಬ ದೇವತೆಯನ್ನು ನೋಡಿದರೆ ಸಕಲ ದೇವತೆಗಳನ್ನು ನೋಡಿದ ಫಲವೂ ದೊರೆಯಲು ಸುಖವಾದ ಒಂದುಪಾಯವನ್ನು ಹೇಳು.

೪೫. ಸೂತನು ಹೇಳುತ್ತಾನೆ:—ವಿಶ್ವಾಮಿತ್ರ ಮಹಾಮುನಿಯು ಅದನ್ನು ಕೇಳಿ ಬಹಳ ಹೊತ್ತು ಚಿಂತಿಸಿ ಹೀಗೆಂದನು. ''ಅರಸ! ಕೇಳು. ನಿನಗೆ ರಹಸ್ಯ ಸಹಿತವಾಗಿ ಅದನ್ನು ಹೇಳುತ್ತೇನೆ.

ಚತ್ವಾರ್ಯತ್ರ ಪೃಕೃಷ್ಟಾನಿ ಮುಖ್ಯತೀರ್ಥಾನಿ ಪಾರ್ಥಿವ ।
ಯೇಷು ಸ್ನಾನೇ ಕೃತೇ ರಾಜಂಚ್ಛ್ರಾದ್ಧೇ ಚ ತದನಂತರಂ ।
ಸರ್ವೇಷಾಮೇವ ತೀರ್ಥಾನಾಂ ಸ್ನಾನಜಂ ಲಭ್ಯತೇ ಫಲಂ ॥ ೪೬ ॥
ಸಪ್ತವಿಂಶತಿ ಲಿಂಗಾನಿ ತಥಾऽತ್ರೈವ ಸ್ಥಿತಾನಿ ಚ ।
ಸಿದ್ಧೇಶ್ವರ ಪ್ರಪೂರ್ವಾಣಿ ಸರ್ವಪಾಪಹರಾಣಿ ಚ ॥ ೪೭ ॥
ತೇಷು ಸರ್ವೇಷು ದೃಷ್ಟೇಷು ಭಕ್ತ್ಯಾ ಪೂತೇನ ಚೇತಸಾ ।
ಸರ್ವೇಷಾಮೇವ ದೇವಾನಾಂ ಭವೇದ್ದರ್ಶನಜಂ ಫಲಂ ॥ ೪೮ ॥
ಏಕಸ್ಮಿನ್ನಪಿ ಸಂದೃಷ್ಟೇ ಪೂಜಿತೇ ವಾ ಸುರೋತ್ತಮೇ ।
ಸಪ್ತವಿಂಶತಿಲಿಂಗಾನಾಂ ಪೂಜಾ ತೇನ ಕೃತಾ ಭವೇತ್ ॥ ೪೯ ॥

ರಾಜೋವಾಚ :—

ಕಾನಿ ಚತ್ವಾರಿ ತೀರ್ಥಾನಿ ತತ್ರ ಮುಖ್ಯಾನಿ ಸನ್ಮುನೇ ।
ಯೇಷು ಸ್ನಾತೋ ನರಃ ಸಮ್ಯಕ್ಸರ್ವೇಷಾಂ ಲಭತೇ ಫಲಂ ॥ ೫೦ ॥

ವಿಶ್ವಾಮಿತ್ರ ಉವಾಚ :—

ಅತ್ರಾಸ್ತಿ ಕೂಪಿಕಾ ಪುಣ್ಯಾ ಯಸ್ಯಾಂ ಸಂಶ್ರಯತೇ ಗಯಾ ।
ಕೃಷ್ಣಪಕ್ಷೇ ಚತುರ್ದಶ್ಯಾಮಮಾವಾಸ್ಯಾದಿನೇ ತಥಾ ॥ ೫೧ ॥
ವಿಶೇಷೇಣ ಮಹಾಭಾಗ ಕನ್ಯಾಸಂಸ್ಥೇ ದಿವಾಕರೇ ।
ನಿರ್ವಿಣ್ಣಾ ಭೂಮಿಲೋಕಾನಾಂ ಕೃತೈಃ ಶ್ರಾದ್ಧೈರನೇಕಧಾ ॥ ೫೨ ॥

---

೪೬. ದೊರೆಯೆ! ಇಲ್ಲಿ ನಾಲ್ಕು ಮುಖ್ಯ ತೀರ್ಥಗಳಿರುವುವು. ಇವುಗಳಲ್ಲಿ ಮಿಂದು ಶ್ರಾದ್ಧಗೈದರೆ ಸಕಲ ತೀರ್ಥಗಳಲ್ಲಿ ಮಿಂದ ಫಲವು ಲಭಿಸುವುದು.

೪೭. ಮತ್ತು ಸಕಲ ಪಾಪಗಳನ್ನು ನಿವಾರಿಸುವ ಸಿದ್ಧೇಶ್ವರವೇ ಮೊದಲಾದ ಇಪ್ಪತ್ತೇಳು ಲಿಂಗಗಳು ಇಲ್ಲಿವೆ.

೪೮. ಇವುಗಳನ್ನೆಲ್ಲ ಪರಿಶುದ್ಧ ಮನಸ್ಸುಳ್ಳವನಾಗಿ ಭಕ್ತಿಯಿಂದ ದರ್ಶನಗೈದರೆ ಸಕಲ ದೇವತೆಗಳನ್ನು ನೋಡಿದ ಫಲವು ದೊರೆಯುವುದು.

೪೯. ಮನುಷ್ಯನು ಒಂದು ಮಹೇಶ್ವರ ಲಿಂಗವನ್ನು ನೋಡಿ ಪೂಜಿಸಿದರೂ ಇಪ್ಪತ್ತೇಳು ಲಿಂಗಗಳನ್ನು ಪೂಜೆ ಮಾಡಿದವನಂತಾಗುವನು.''

೫೦. ರಾಜನು ಹೇಳುತ್ತಾನೆ:—ಮುನಿಯೆ! ಮನುಷ್ಯನು ಯಾವುದರಲ್ಲಿ ಮಿಂದರೆ ಎಲ್ಲಾ ತೀರ್ಥಗಳ ಫಲವನ್ನು ಪಡೆಯುವನೊ, ಅಂತಹ ನಾಲ್ಕು ಮುಖ್ಯ ತೀರ್ಥಗಳಾವುವು ?

೫೧–೫೨. ವಿಶ್ವಾಮಿತ್ರನು ಹೇಳುತ್ತಾನೆ:—ಇಲ್ಲಿ ಪವಿತ್ರವಾದುದೊಂದು ಕೂಪವಿದೆ. ಇದರಲ್ಲಿ ಸೂರ್ಯನು ಕನ್ಯಾಗತನಾಗಲು ಕೃಷ್ಣಪಕ್ಷ ಚತುರ್ದಶೀ ಮತ್ತು ಅಮಾವಾಸ್ಯಾ ದಿನಗಳಲ್ಲಿ ಗಯೆಯು ಭೂಮಿಯಲ್ಲಿರುವ ಜನರು ಮಾಡಿದ ಶ್ರಾದ್ಧಗಳಿಂದ ನಿರ್ವೇದಗೊಂಡು ಸನ್ನಿಹಿತವಾಗುವುದು.

ಯಸ್ತಸ್ಯಾಂ ಕುರುತೇ ಶ್ರಾದ್ಧಂ ಸಮ್ಯಕ್ ಶ್ರದ್ಧಾ ಸಮನ್ವಿತಃ ॥ ೫೩ ॥
ತಸ್ಮಿನ್ನಹನಿ ರಾಜೇಂದ್ರ ಸ ಸಂತಾರಯತೇ ಪಿತೄನ್ ।
ತಥಾ ತೀರ್ಥಂ ದ್ವಿತೀಯಂ ತು ಶಂಖತೀರ್ಥಮಿತಿ ಸ್ಮೃತಂ ॥ ೫೪ ॥
ತತ್ರ ಸ್ನಾತ್ವಾ ನರೋ ಯಸ್ತು ಪಶ್ಯೇಚ್ಛಂಖೇಶ್ವರಂ ತತಃ ।
ಸರ್ವೇಷಾಂ ಫಲಮಾಪ್ನೋತಿ ಮಾಘಸ್ಯ ಪ್ರಥಮೇಽಹನಿ ॥ ೫೫ ॥
ತಥಾ ಮನ್ನಾಮಕಂ ತೀರ್ಥಂ ತೃತೀಯಂ ಮುಖ್ಯತಾಂ ಗತಂ ।
ಅತ್ರ ಸ್ನಾತ್ವಾ ತು ಯಃ ಪಶ್ಯೇನ್ಮಯಾ ಸಂಸ್ಥಾಪಿತಂ ಹರಂ ॥ ೫೬ ॥
ವಿಶ್ವಾಮಿತ್ರೇಶ್ವರಂ ನಾಮ ಸರ್ವೇಷಾಂ ಸ ಫಲಂ ಲಭೇತ್ ।
ನಭಸ್ಯಸ್ಯ ಸಿತಾಷ್ಟಮ್ಯಾಂ ಸರ್ವೇಷಾಂ ಲಭತೇ ಫಲಂ ॥ ೫೭ ॥
ಶಕ್ರತೀರ್ಥಮಿತಿ ಖ್ಯಾತಂ ಚತುರ್ಥಂ ಬಾಲಮಂಡನಂ ।
ತತ್ರ ಸ್ನಾತ್ವಾ ಚ ಪಂಚಾಽಹಂ ಶಕ್ರೇಶ್ವರಮವೇಕ್ಷ್ಯ ಚ ।
ಆಶ್ವಿನಸ್ಯ ಸಿತೇಽಷ್ಟಮ್ಯಾಂ ಸರ್ವೇಷಾಂ ಲಭತೇ ಫಲಂ ॥ ೫೮ ॥

ರಾಜೋವಾಚ :—

ವಿಧಾನಂ ವದ ಮೇ ವಿಪ್ರ ಗಯಾಕೂಪ್ಯಾಃ ಸಮುದ್ಭವಂ ।
ವಿಸ್ತರೇಣ ಮಹಾಭಾಗ ಶ್ರದ್ಧಾ ಮೇ ಮಹತೀ ಸ್ಥಿತಾ ॥ ೫೯ ॥

---

೫೩–೫೪. ಅರಸ! ಆ ದಿನ ಅತಿಶಯ ಶ್ರದ್ಧೆಯಿಂದ ಶ್ರಾದ್ಧಗೈದವನು ಪಿತೃಗಳನ್ನುದ್ಧರಿಸುವನು. ಹಾಗೆಯೇ ಅಲ್ಲಿ ಎರಡನೆಯ ಶಂಖತೀರ್ಥವಿರುವುದು.

೫೫. ಆ ತೀರ್ಥದಲ್ಲಿ ಮಾಘ ಮಾಸದ ಪಾಡ್ಯಮಿಯ ದಿನ ಮಿಂದು ಶಂಖೇಶ್ವರನನ್ನು ದರ್ಶನಗೈದ ಮಾನವನು ಸಕಲ ತೀರ್ಥಗಳ ಫಲವನ್ನು ಪಡೆಯುವನು.

೫೬–೫೭. ಹಾಗೆಯೇ ಅಲ್ಲಿ ಮುಖ್ಯವಾದ ನನ್ನ ಹೆಸರಿನ ಒಂದು ತೀರ್ಥವಿದೆ. ಅಲ್ಲಿ ಭಾದ್ರಪದ ಶುದ್ಧ ಅಷ್ಟಮಿಯ ದಿನ ಮಿಂದು ನಾನು ಪ್ರತಿಷ್ಠೆ ಮಾಡಿದ ವಿಶ್ವಾಮಿತ್ರೇಶ್ವರನನ್ನು ನೋಡಿದವನು ಸಕಲ ತೀರ್ಥಗಳ ಫಲವನ್ನು ಪಡೆಯುವನು.

೫೮. ಹಾಗೆಯೇ ಅಲ್ಲಿ ಬಾಲಕರಿಗೆ ಅಲಂಕಾರಪ್ರಾಯವಾದ ಶಕ್ರತೀರ್ಥವಿದೆ. ಅಲ್ಲಿ ಆಶ್ವಿನ ಶುಕ್ಲ ಅಷ್ಟಮಿಯ ದಿನದಿಂದ ಐದು ದಿನಗಳು ಮಿಂದು ಶಕ್ರೇಶ್ವರನನ್ನು ದರ್ಶನ ಮಾಡಿದರೆ ಸಮಸ್ತ ತೀರ್ಥಗಳ ಫಲವು ದೊರೆಯುವುದು.

೫೯. ರಾಜನು ಹೇಳುತ್ತಾನೆ:—ಮುನಿಯೆ! ಗಯಾಕೂಪವು ಹುಟ್ಟಿದ ಕ್ರಮವನ್ನು ವಿಸ್ತಾರವಾಗಿ ನನಗೆ ಹೇಳು. ನನಗೆ ಅತ್ಯಂತ ಶ್ರದ್ಧೆಯುಂಟಾಗಿದೆ.

ವಿಶ್ವಾಮಿತ್ರ ಉವಾಚ :—

ಅಮಾವಾಸ್ಯಾ ದಿನೇ ಪ್ರಾಪ್ತೇ ತತ್ರ ಕನ್ಯಾಗತೇ ರವೌ ।
ಯಃ ಶ್ರಾದ್ಧಂ ಕುರುತೇ ಭಕ್ತ್ಯಾ ಸ ಪಿತೄಂಸ್ತಾರಯೇನ್ನಿಜಾನ್ ॥ ೬೦ ॥
ಭರ್ತೃಯಜ್ಞವಿಧಾನೇನ ಶುದ್ಧೈಃ ಸ್ಥಾನೋದ್ಭವೈರ್ದ್ವಿಜೈಃ ।
ಭರ್ತೃಯಜ್ಞ ವಿಧಿಂ ತ್ಯಕ್ತ್ವಾ ಯೋಽನ್ಯೇನ ವಿಧಿನಾ ನರಃ ॥ ೬೧ ॥
ಶ್ರಾದ್ಧಂ ಕರೋತಿ ಮೂಢಾತ್ಮಾ ವಿಹೀನಂ ಸ್ಥಾನಜೈರ್ದ್ವಿಜೈಃ ।
ಸ್ಥಾನಜೈರಪಿ ವಾಽಶುದ್ಧೈಸ್ತಸ್ಯ ತದ್ವ್ಯರ್ಥತಾಂ ವ್ರಜೇತ್ ॥ ೬೨ ॥
ವೃಷ್ಟಿಃ ಸ್ಯಾದೂಷರೇ ಯದ್ವತ್ಸತ್ಯಮೇತನ್ಮಯೋದಿತಂ ।
ಅಂಧಸ್ಯಾಗ್ರೇ ಯಥಾ ನೃತ್ಯಂ ಪ್ರಗೀತಂ ಬಧಿರಸ್ಯ ಚ ।
ತಥಾ ಚ ವ್ಯರ್ಥತಾಂ ಯಾತಿ ಅನ್ಯಸ್ಥಾನೋದ್ಭವೈರ್ದ್ವಿಜೈಃ ॥ ೬೩ ॥
ಬ್ರಾಹ್ಮಣೈಃ ಕಾರಯೇಚ್ಛ್ರಾದ್ಧಂ ಮೂರ್ಖೈರಪಿ ದ್ವಿಜೋತ್ತಮಾಃ ।
ಚತುರ್ವೇದಾ ಅಪಿ ತ್ಯಾಜ್ಯಾ ಅನ್ಯಸ್ಥಾನಸಮುದ್ಭವಾಃ ॥ ೬೪ ॥
ದೇವೇ ಕರ್ಮಣಿ ಪಿತ್ರ್ಯೇ ವಾ ಸೋಮಪಾನೇ ವಿಶೇಷತಃ ।
ದೇಶಾಂತರಗತೋ ಯಸ್ತು ಶ್ರಾದ್ಧಂ ಚ ಕುರುತೇ ನರಃ ।
ವೈಶ್ವಾನರಪುರಸ್ತೇನ ಕಾರ್ಯಂ ನಾಽನ್ಯದ್ದ್ವಿಜಸ್ಯ ಚ ॥ ೬೫ ॥

---

೬೦–೬೨. ವಿಶ್ವಾಮಿತ್ರನು ಹೇಳುತ್ತಾನೆ:— ಅಲ್ಲಿ ಅಮಾವಾಸ್ಯೆ ದಿನ ಸೂರ್ಯನು ಕನ್ಯಾರಾಶಿಯನ್ನು ಹೊಂದಿರಲು ಭರ್ತೃಯಜ್ಞನು ಹೇಳಿದ ಕ್ರಮದಿಂದ ಬ್ರಹ್ಮಸ್ಥಾನದ ಬ್ರಾಹ್ಮಣರಿಂದ ಶ್ರಾದ್ಧಮಾಡಿದವನು ತನ್ನ ಪಿತೃಗಳನ್ನುದ್ಧರಿಸುವನು. ಭರ್ತೃಯಜ್ಞನು ಹೇಳಿದ ವಿಧಿಯನ್ನು ತ್ಯಜಿಸಿ ಬ್ರಹ್ಮಸ್ಥಾನದ ಬ್ರಾಹ್ಮಣರನ್ನು ಬಿಟ್ಟು, ಅಥವಾ ಅಶುದ್ಧರಾದ ಬ್ರಹ್ಮಸ್ಥಾನದ ಬ್ರಾಹ್ಮಣರಿಂದ ಮಾಡಿದ ಮೂಢನ ಶ್ರಾದ್ಧವು ನಿಷ್ಫಲವಾಗುವುದು.

೬೩. ಅನ್ಯದೇಶದ ಬ್ರಾಹ್ಮಣರಿಂದ ಮಾಡಿದ ಶ್ರಾದ್ಧವು ಮರುಭೂಮಿಯಲ್ಲಿ ಸುರಿದ ಮಳೆಯಂತೆಯೂ, ಕುರುಡನ ಮುಂದೆ ಕುಣಿದ ಕುಣಿತದಂತೆಯೂ, ಕಿವುಡನ ಮುಂದೆ ಹಾಡಿದ ಹಾಡಿನಂತೆಯೂ ವ್ಯರ್ಥವಾಗುವುದು.

೬೪. ದ್ವಿಜವರ್ಯರೆ! ಬ್ರಹ್ಮಸ್ಥಾನದ ಬ್ರಾಹ್ಮಣರು ಮೂರ್ಖರಾಗಿದ್ದರೂ ಅವರಿಂದಲೇ ಶ್ರಾದ್ಧಮಾಡಬೇಕು. ಬೇರೆ ದೇಶದವರು ನಾಲ್ಕು ವೇದಗಳನ್ನು ಅಧ್ಯಯನ ಮಾಡಿದ್ದರೂ ಅವರು ತ್ಯಾಜ್ಯರೇ.

೬೫. ದೇವ, ಪಿತೃಕರ್ಮಗಳನ್ನೂ, ಸೋಮಪಾನವನ್ನೂ ವಿಶೇಷವಾಗಿ ಆ ಕ್ಷೇತ್ರದ ಬ್ರಾಹ್ಮಣರಿಂದಲೇ ಮಾಡಬೇಕು. ಮಾನವನು ದೇಶಾಂತರದಲ್ಲಿ ಶ್ರಾದ್ಧವನ್ನು ಮಾಡುವಾಗ ಅಗ್ನಿಯನ್ನು ಬ್ರಾಹ್ಮಣಸ್ಥಾನದಲ್ಲಿರಿಸಿ ಮಾಡಬೇಕು. ಇತರ ದ್ವಿಜನಿಂದ ಮಾಡಬಾರದು.

ಸನ್ನಿವೇಶ್ಯ ದರ್ಭ ಬಟೂಂಛ್ರಾದ್ಧಂ ಕುರ್ಯಾದ್ದ್ವಿಜೋತ್ತಮಾಃ ।
ದಕ್ಷಿಣಾ ಭೋಜನಂ ದೇಯಂ ಸ್ಥಾನಿಕಾನಾಂ ಚಿರಾದಪಿ ॥ ೬೬ ॥
ಪಂಚಗವ್ಯಸ್ಯ ಸಂಪೂರ್ಣೋ ಯಥಾ ಕುಂಭಃ ಪ್ರದುಷ್ಯತಿ ।
ಬಂದುನೈಕೇನ ಮದ್ಯಸ್ಯ ಪತಿತೇನ ನೃಪೋತ್ತಮ ॥ ೬೭ ॥
ಏಕೇನಾಽಪಿ ಚ ಬಾಹ್ಯೇನ ಬಹೂನಾಮಪಿ ಭೂಪತೇ ।
ಮಧ್ಯೇ ಸಮುಪವಿಷ್ಟೇನ ತಚ್ಛ್ರಾದ್ಧಂ ದೋಷಮಾಪ್ನುಯಾತ್ ॥ ೬೮ ॥
ಸ್ಥಾನಜೋಽಪಿ ಚತುರ್ವೇದೋ ಯದ್ಯಪಿ ಸ್ಯಾನ್ನ ಶುದ್ಧಿಭಾಕ್ ।
ಬಹೂನಾಮಪಿ ಶುದ್ಧಾನಾಂ ಮಧ್ಯೇ ಶ್ರಾದ್ಧಂ ವಿನಾಶಯೇತ್ ॥ ೬೯ ॥
ತಸ್ಮಾತ್ಸರ್ವಪ್ರಯತ್ನೇನ ಶುದ್ಧಂ ಬ್ರಾಹ್ಮಣಮಾನಯೇತ್ ॥ ೭೦ ॥
ಸ್ಥಾನಿಕಂ ಮೂರ್ಖಮಪ್ಯೇವಮಲಾಭೇ ಗುಣಿನಾಮಪಿ ।
ಹೀನಾಂಗಮಧಿಕಾಂಗಂ ವಾ ದೂಷಿತಂ ನೋ ತಥಾ ಪರಂ ॥ ೭೧ ॥
ಕನ್ಯಾದಾನೇ ತಥಾ ಶ್ರಾದ್ಧೇ ಕುಲೀನೋ ಬ್ರಾಹ್ಮಣಃ ಸದಾ ।
ಆಹರ್ತವ್ಯಃ ಪ್ರಯತ್ನೇನ ಯ ಇಚ್ಛೇಚ್ಛುಭಮಾತ್ಮನಃ ।
ಸೋಽಪಿ ಶುದ್ಧಿಸಮಾಯುಕ್ತೋ ಯದಿ ಸ್ಯಾನ್ನೃಪಸತ್ತಮ ॥ ೭೨ ॥

---

೬೬. ಬ್ರಾಹ್ಮಣರು ಸಿಕ್ಕದಿರುವಾಗ ದರ್ಭೆಯಿಂದ ಬ್ರಾಹ್ಮಣರನ್ನು ಮಾಡಿ ಶ್ರಾದ್ಧಗೈದು ಆ ಸ್ಥಳದ ಬ್ರಾಹ್ಮಣರು ಸಿಕ್ಕಿದಾಗ ಅವರಿಗೆ ಭೋಜನ ಮತ್ತು ದಕ್ಷಿಣೆಗಳನ್ನು ಕೊಡಬೇಕು.

೬೭–೬೮. ಪಂಚಗವ್ಯದಿಂದ ತುಂಬಿದ ಕಲಶವು ಒಂದು ಹನಿ ಹೆಂಡವು ಸೇರುವುದರಿಂದ ಅಪವಿತ್ರವಾಗುವಂತೆ ಬಹುಮಂದಿ ಬ್ರಾಹ್ಮಣರ ನಡುವೆ ಹೊರ ದೇಶದ ಬ್ರಾಹ್ಮಣನು ಕುಳಿತರೂ ಆ ಶ್ರಾದ್ಧವು ಕೆಡುವುದು.

೬೯. ಅಶುದ್ಧನಾದ ಆ ಸ್ಥಾನದ ಬ್ರಾಹ್ಮಣನು ನಾಲ್ಕು ವೇದಗಳಲ್ಲಿ ಪಾರಂಗತನಾಗಿದ್ದರೂ ಶುದ್ಧರಾದ ಅನೇಕ ಬ್ರಾಹ್ಮಣರ ನಡುವೆ ಕುಳಿತರೆ ಶ್ರಾದ್ಧವು ಹಾಳಾಗುವುದು.

೭೦–೭೧. ಆದುದರಿಂದ ಗುಣವಂತರಾದ ಬ್ರಾಹ್ಮಣರು ಸಿಕ್ಕದಿರಲು ಆ ಸ್ಥಳದ ಮೂರ್ಖನಾದ ಶುದ್ಧ ಬ್ರಾಹ್ಮಣನನ್ನಾದರೂ ಕರೆಯಿಸಬೇಕು. ಅಂಗವಿಕಲನೂ, ಅಧಿಕಾಂಗವುಳ್ಳವನೂ, ದುಷ್ಟನೂ ಆದ ಬ್ರಾಹ್ಮಣನನ್ನು ಶ್ರಾದ್ಧಕ್ಕೆ ನಿಮಂತ್ರಣ ಮಾಡಬಾರದು.

೭೨. ನೃಪವರ್ಯನೆ! ತನಗೆ ಶುಭವನ್ನು ಬಯಸುವವನು ಕನ್ಯಾದಾನ, ಶ್ರಾದ್ಧಗಳಲ್ಲಿ ಶುದ್ಧನಾದ ಬ್ರಾಹ್ಮಣನನ್ನು ಕರೆತರಬೇಕು.

ವೃಕ್ಷಾಣಾಂ ಚ ಯಥಾಶ್ವತ್ಥೋ ದೇವತಾನಾಂ ಯಥಾ ಹರಿಃ ।
ಶ್ರೇಷ್ಠಸ್ಥಾನಜವಿಪ್ರಾಣಾಂ ತಥಾ ಚಾಽಷ್ಟಕುಲೋದ್ಭವಃ ॥ ೭೩ ॥
ಆಯುಧಾನಾಂ ಯಥಾ ವಜ್ರಂ ಸರಸಾಂ ಸಾಗರೋ ಯಥಾ ।
ಶ್ರೇಷ್ಠಸ್ಥಾನಜವಿಪ್ರಾಣಾಂ ತಥಾಷ್ಟಕುಲಸಂಭವಃ ॥ ೭೪ ॥
ಉಚ್ಚೈಃಶ್ರವಾ ಯಥಾಽಶ್ವಾನಾಂ ಗಜಾನಾಂ ಶಕ್ರವಾಹನಃ ।
ಶ್ರೇಷ್ಠ ಸ್ಥಾನಜವಿಪ್ರಾಣಾಂ ತಥಾಷ್ಟಕುಲಸಂಭವಃ ॥ ೭೫ ॥
ನದೀನಾಂ ಚ ಯಥಾ ಗಂಗಾ ಸತೀನಾಂ ಚಾಽಪ್ಯರುಂಧತೀ ।
ತದ್ವತ್ಸ್ಥಾನಜವಿಪ್ರಾಣಾಂ ಶ್ರೇಷ್ಠೋಽಷ್ಟಕುಲಿಕಃ ಸ್ಮೃತಃ ॥ ೭೬ ॥
ಗ್ರಹಾಣಾಂ ಭಾಸ್ಕರೋ ಯದ್ವನ್ನಕ್ಷತ್ರಾಣಾಂ ನಿಶಾಕರಃ ।
ತದ್ವತ್ಸ್ಥಾನಜವಿಪ್ರಾಣಾಂ ಶ್ರೇಷ್ಠೋಽಷ್ಟಕುಲಿಕಃ ಸ್ಮೃತಃ ॥ ೭೭ ॥
ಪರ್ವತಾನಾಂ ಯಥಾ ಮೇರುರ್ದ್ವಿಪದಾನಾಂ ದ್ವಿಜೋತ್ತಮಃ ।
ಸ್ಥಾನಜಾನಾಂ ತು ವಿಪ್ರಾಣಾಂ ಶ್ರೇಷ್ಠೋಽಷ್ಟಕುಲಿಕಸ್ತಥಾ ॥ ೭೮ ॥
ಪಕ್ಷಿಣಾಂ ಗರುಡೋ ಯದ್ವತ್ಸಿಂಹೋಽರಣ್ಯ ನಿವಾಸಿನಾಂ ।
ಸ್ಥಾನಜಾನಾಂ ತು ವಿಪ್ರಾಣಾಂ ಶ್ರೇಷ್ಠೋಽಷ್ಟಕುಲಿಕಸ್ತಥಾ ॥ ೭೯ ॥
ಏವಂ ಜ್ಞಾತ್ವಾ ಪ್ರಯತ್ನೇನ ಶ್ರಾದ್ಧೇ ಯಜ್ಞೇ ಚ ಪಾರ್ಥಿವ ।
ಕನ್ಯಾದಾನೇ ವಿಶೇಷೇಣ ಯೋಜ್ಯಶ್ಚಾಷ್ಟಕುಲೋದ್ಭವಃ ॥ ೮೦ ॥
ನೃತ್ಯಂತಿ ಪಿತರಸ್ತಸ್ಯ ಗರ್ಜಂತಿ ಚ ಪಿತಾಮಹಾಃ ।
ವೇದಿಮೂಲೇ ಸಮಾಲೋಕ್ಯ ಪ್ರಾಪ್ತಮಷ್ಟಕುಲಂ ನೃಪ ॥ ೮೧ ॥

---

೭೩–೭೯. ವೃಕ್ಷಗಳಲ್ಲಿ ಅಶ್ವತ್ಥವೃಕ್ಷದಂತೆಯೂ, ದೇವತೆಗಳಲ್ಲಿ ವಿಷ್ಣುವಿನಂತೆಯೂ, ಆಯುಧಗಳಲ್ಲಿ ವಜ್ರದಂತೆಯೂ, ಸರಸ್ಸುಗಳಲ್ಲಿ ಸಮುದ್ರದಂತೆಯೂ, ಅಶ್ವಗಳಲ್ಲಿ ಉಚ್ಚೈಶ್ರವಸ್ಸಿನಂತೆಯೂ, ಆನೆಗಳಲ್ಲಿ ಇಂದ್ರನ ವಾಹನವಾದ ಐರಾವತದಂತೆಯೂ, ನದಿಗಳಲ್ಲಿ ಗಂಗೆಯಂತೆಯೂ, ಪತಿವ್ರತೆಯರಲ್ಲಿ ಅರುಂಧತಿಯಂತೆಯೂ, ಗ್ರಹಗಳಲ್ಲಿ ಸೂರ್ಯನಂತೆಯೂ, ನಕ್ಷತ್ರಗಳಲ್ಲಿ ಚಂದ್ರನಂತೆಯೂ, ಪರ್ವತಗಳಲ್ಲಿ ಮೇರುಪರ್ವತದಂತೆಯೂ, ಮನುಷ್ಯರಲ್ಲಿ ಬ್ರಾಹ್ಮಣರಂತೆಯೂ, ಪಕ್ಷಿಗಳಲ್ಲಿ ಗರುಡನಂತೆಯೂ, ಅರಣ್ಯವಾಸಿ ಪ್ರಾಣಿಗಳಲ್ಲಿ ಸಿಂಹದಂತೆಯೂ ಬ್ರಹ್ಮಸ್ಥಾನದ ಬ್ರಾಹ್ಮಣರಲ್ಲಿ ಅಷ್ಟಕುಲೋದ್ಭವರು ಶ್ರೇಷ್ಠರು.

೮೦. ದೊರೆಯೆ! ಇದನ್ನರಿತು ಶ್ರಾದ್ಧ, ಯಜ್ಞ, ಕನ್ಯಾದಾನಗಳಲ್ಲಿ ಅಷ್ಟಕುಲದ ಬ್ರಾಹ್ಮಣರನ್ನು ನಿಯೋಜಿಸಬೇಕು.

೮೧. ಯಜ್ಞವೇದಿಯ ಬುಡದಲ್ಲಿ ಬಂದಿರುವ ಅಷ್ಟಕುಲದ ಬ್ರಾಹ್ಮಣನನ್ನು ನೋಡಿ ಪಿತೃಗಳು ನರ್ತಿಸುವರು. ಪಿತಾಮಹರು ಗರ್ವದಿಂದ ಗರ್ಜಿಸುವರು.

ಪುನರ್ವದಂತಿ ಸಂಹೃಷ್ಟಾಃ ಕಿಮಸ್ಮಾಕಂ ಪ್ರದಾಸ್ಯತಿ ।
ದೌಹಿತ್ರಶ್ಚಾಪಸವ್ಯೇನ ಜಲಂ ದರ್ಭತಿಲಾನ್ವಿತಂ ॥ ೮೨ ॥

ರಾಜೋವಾಚ :—

ಯದೇತದ್ಭವತಾ ಪ್ರೋಕ್ತಂ ಶ್ರೈಷ್ಠ್ಯಮಷ್ಟಕುಲೋದ್ಭವಂ ।
ಸರ್ವೇಷಾಂ ನಾಗರಾಣಾಂ ಚ ತತ್ಕಿಂ ವದ ಮಹಾಮತೇ ॥ ೮೩ ॥
ನಹ್ಯತ್ರ ಕಾರಣಂ ಸ್ವಲ್ಪಂ ಭವಿಷ್ಯತಿ ದ್ವಿಜೋತ್ತಮ ॥ ೮೪ ॥

ವಿಶ್ವಾಮಿತ್ರ ಉವಾಚ :—

ಸತ್ಯಮೇತನ್ಮಹಾರಾಜ ಯತ್ತ್ವಯಾ ವ್ಯಾಹೃತಂ ವಚಃ ।
ಅನ್ಯೇಽಪಿ ನಾಗರಾಃ ಸಂತಿ ವೇದವೇದಾಂಗಪಾರಗಾಃ ॥ ೮೫ ॥
ಶ್ರಾದ್ಧಾರ್ಹಾ ಯಜ್ಞಯೋಗ್ಯಾಶ್ಚ ಕನ್ಯಾ ಯೋಗ್ಯಾ ವಿಶೇಷತಃ ।
ಪರಂ ತೇ ಸ್ಥಾಪಿತಾ ರಾಜನ್ ಸ್ವಯಮಿಂದ್ರೇಣ ತತ್ರ ಚ ॥ ೮೬ ॥
ಪ್ರಧಾನತ್ವೇನ ಸರ್ವೇಷಾಂ ನಾಗರೈಶ್ಚಾಪಿ ಕೃತ್ಸ್ನಶಃ ।
ತೇನ ತೇ ಗೌರವಂ ಪ್ರಾಪ್ತಾಃ ಸ್ಥಾನೇಽತ್ರೈವ ವಿಶೇಷತಃ ॥ ೮೭ ॥
ತಸ್ಮಾಚ್ಛ್ರಾದ್ಧಂ ಪ್ರಕರ್ತವ್ಯಂ ವಿಪ್ರೈಶ್ಚಾಷ್ಟಕುಲೋದ್ಭವೈಃ ।
ಅಪ್ರಾಪ್ತೌ ಚೈವ ತೇಷಾಂ ತು ಕಾರ್ಯಂ ನಾಗರಸಂಭವೈಃ ॥ ೮೮ ॥
ನಾನ್ಯಸ್ಥಾನ ಸಮುದ್ಭೂತೈಶ್ಚತುರ್ವೇದೈರಪಿ ದ್ವಿಜೈಃ ।
ಭರ್ತೃಯಜ್ಞೇನ ಮರ್ಯಾದಾ ಕೃತಾ ಹ್ಯೇಷಾ ಮಹಾತ್ಮನಾ ॥ ೮೯ ॥

---

೮೨. ಮತ್ತು ನನ್ನ ದೌಹಿತ್ರನು ಅಪಸವ್ಯದಿಂದ ದರ್ಭೆ ಎಳ್ಳುಗಳಿಂದ ಸಹಿತವಾದ ನೀರನ್ನು ಕೊಡುವನೊ ! ಎಂದು ಹೇಳುವರು.

೮೩–೮೪. ರಾಜನು ಹೇಳುತ್ತಾನೆ :—ಮುನಿಯೆ ! ನೀನು ಸಕಲ ನಾಗರರಲ್ಲಿ ಅಷ್ಟಕುಲದ ಬ್ರಾಹ್ಮಣರಿಗೇ ಶ್ರೈಷ್ಠ್ಯವನ್ನು ಹೇಳಿರುವೆ. ಅದು ಹೇಗೆ ಹೇಳು. ಈ ವಿಷಯದಲ್ಲಿ ಸಣ್ಣ ಕಾರಣವಿರಲಾರದು.

೮೫–೮೭. ವಿಶ್ವಾಮಿತ್ರನು ಹೇಳುತ್ತಾನೆ :—ಮಹಾರಾಜ ! ನೀನು ಹೇಳಿದ ಮಾತು ನಿಜ. ವೇದವೇದಾಂಗಪಾರಂಗತರೂ, ಶ್ರಾದ್ಧಯೋಗ್ಯರೂ, ಯಜ್ಞ ಮಾಡಲರ್ಹರೂ, ಕನ್ಯೆಯನ್ನು ಕೊಡಲುಚಿತರೂ ಆದ ಇತರ ನಾಗರ ಜನ ರಿದ್ದಾರೆ. ಆದರೆ ಇಂದ್ರನು ತಾನೇ ಆ ಅಷ್ಟಕುಲದವರನ್ನು ಸಕಲ ನಾಗರರಿಗೆ ಪ್ರಧಾನರನ್ನಾಗಿಸಿ ಸ್ಥಾಪಿಸಿರುವನು. ಆದುದರಿಂದ ಇಲ್ಲಿ ಇವರು ಸಮಸ್ತ ನಾಗರ ರಿಂದ ಗೌರವವನ್ನು ಪಡೆದಿದ್ದಾರೆ.

೮೮. ಆದುದರಿಂದ ಅಷ್ಟಕುಲದ ಬ್ರಾಹ್ಮಣರಿಂದ ಶ್ರಾದ್ಧಮಾಡಬೇಕು. ಅವರು ದೊರೆಯದಿದ್ದಲ್ಲಿ ನಾಗರ ಬ್ರಾಹ್ಮಣರಿಂದ ಶ್ರಾದ್ಧಗೈಯ್ಯಬೇಕು.

೮೯–೯೦. ನಾಲ್ಕು ವೇದಗಳಲ್ಲಿ ಪಾರಂಗತರಾಗಿದ್ದರೂ ಇತರ ದೇಶದ ಬ್ರಾಹ್ಮಣರಿಂದ ಅಲ್ಲಿ ಶ್ರಾದ್ಧ ಮಾಡಬಾರದು. ಭರ್ತೃಯಜ್ಞನು ನಾಗರ

ಮುಕ್ತ್ವಾ ತು ನಾಗರಂ ವಿಪ್ರಂ ಯೋಽನ್ಯೇನಾಽತ್ರ ಕರಿಷ್ಯತಿ ।
ಶ್ರಾದ್ಧಂ ವಾ ಯದಿ ವಾ ಯಜ್ಞಂ ವ್ಯರ್ಥಂ ತಸ್ಯ ಭವಿಷ್ಯತಿ ॥ ೯೦ ॥
ರಾಜೋವಾಚ :—
ಸಂತ್ಯನ್ಯೇ ವಿವಿಧಾ ವಿಪ್ರಾ ವೇದವೇದಾಂಗಪಾರಗಾಃ ।
ಮಧ್ಯದೇಶೋದ್ಭವಾಃ ಶಾಂತಾಸ್ತಥಾಽನ್ಯೇ ತೀರ್ಥಸಂಭವಾಃ ॥ ೯೧ ॥
ಭರ್ತೃಯಜ್ಞೇನ ಯೇ ತ್ಯಕ್ತಾಃ ಶ್ರಾದ್ಧೇ ಯಜ್ಞೇ ವಿಶೇಷತಃ ।
ಹೀನಾಂಗಾಶ್ಚಾಽಧಿಕಾಂಗಾಶ್ಚ ದ್ವಿನಗ್ನಾಃ ಶ್ಯಾವದಂತಕಾಃ ॥ ೯೨ ॥
ಕುನಖಾಃ ಕುಷ್ಟಸಂಯುಕ್ತಾ ಮೂರ್ಖಾ ಅಪಿ ವಿಗರ್ಹಿತಾಃ ।
ಶ್ರಾದ್ಧಾರ್ಹಾಃ ಸೂಚಿತಾಸ್ತೇನ ಏತಂ ಮೇ ಸಂಶಯಂ ವದ ॥ ೯೩ ॥
ವಿಶ್ವಾಮಿತ್ರ ಉವಾಚ :—
ಕೀರ್ತಯಿಷ್ಯೇ ನರವ್ಯಾಘ್ರ ಕಾರಣಾನಿ ಬಹೂನಿ ಚ ।
ಚಮತ್ಕಾರಸ್ಯ ಪತ್ನ್ಯಾಶ್ಚ ದಾನೇನ ಪತಿತಾ ಯತಃ ॥ ೯೪ ॥
ಸ್ತ್ರೀಣಾಂ ಪ್ರತಿಗ್ರಹೇಣೈವ ವಿಪ್ರೇಷು ಪ್ರೋಷಿತೇಷು ಚ ।
ಪೃಥಕ್ತ್ವಂ ಚ ತತೋ ಜಾತಂ ಬಾಹ್ಯಾಭ್ಯಂತರಸಂಜ್ಞಕಂ ॥ ೯೫ ॥
ದುರ್ವಾಸಸಾ ತತಃ ಶಪ್ತಾ ರುಷ್ಟೇನೇವಾಽಹಿನಾ ಯಥಾ ।
ವಿದ್ಯಾಧನಾಭಿಮಾನೇನ ಶಾಪೇನ ಪತಿತಾಃ ಸದಾ ॥ ೯೬ ॥

---

ಬ್ರಾಹ್ಮಣರನ್ನು ಬಿಟ್ಟು ಇತರ ಬ್ರಾಹ್ಮಣರಿಂದ ಶ್ರಾದ್ಧ ಅಥವಾ ಯಜ್ಞವನ್ನು ಮಾಡಿದರೆ ಅದು ವ್ಯರ್ಥವಾಗುವುದೆಂದು ನಿಯಮವನ್ನು ಮಾಡಿದ್ದಾನೆ.

೯೧–೯೩. ರಾಜನು ಹೇಳುತ್ತಾನೆ:— ಭರ್ತೃಯಜ್ಞನು ವೇದವೇದಾಂಗ ಪಾರಂಗತರೂ, ಶಾಂತರೂ, ತೀರ್ಥಸಂಭೂತರೂ ಆದ ಮಧ್ಯದೇಶದ ಬ್ರಾಹ್ಮಣರನ್ನು ಶ್ರಾದ್ಧ ಯಜ್ಞಗಳಲ್ಲಿ ತ್ಯಜಿಸಿ ಹೀನಾಂಗರೂ, ಅಧಿಕಾಂಗರೂ, ನಗ್ನರೂ, ಹಳದಿಯ ಹಲ್ಲುಗಳುಳ್ಳವರೂ, ಕೆಟ್ಟುಹೋದ ಉಗುರುಗಳುಳ್ಳವರೂ, ಕುಷ್ಠರೋಗಿಗಳೂ, ಮೂರ್ಖರೂ, ನಿಂದ್ಯರೂ ಆದ ಅಷ್ಟಕುಲದ ಬ್ರಾಹ್ಮಣರನ್ನು ಶ್ರಾದ್ಧಾರ್ಹರೆಂದು ಹೇಳಿದ್ದಾನೆ. ಈ ವಿಷಯದಲ್ಲಿ ನನಗೆ ಬಹಳ ಸಂದೇಹ ವುಂಟಾಗಿದೆ. ಕಾರಣವನ್ನು ಹೇಳಿ ಅದನ್ನು ನಿವಾರಿಸು.

೯೪. ವಿಶ್ವಾಮಿತ್ರನು ಹೇಳುತ್ತಾನೆ:—ಅರಸ! ಚಮತ್ಕಾರಪುರದ ಬ್ರಾಹ್ಮಣರು ಕನ್ಯೆಯನ್ನು ದಾನ ಮಾಡಿದ್ದರಿಂದ ಪತಿತರಾಗಲು ಬಹಳ ಕಾರಣ ಗಳಿವೆ. ಅವುಗಳನ್ನು ಹೇಳುವೆನು ಕೇಳು.

೯೫. ಸ್ತ್ರೀಯರ ಪ್ರತಿಗ್ರಹದಿಂದಲೇ ಬ್ರಾಹ್ಮಣರು ಪ್ರವಾಸ ಮಾಡಲು ಅವರಲ್ಲಿ ಬಾಹ್ಯರು, ಆಭ್ಯಂತರರು ಎಂದು ಎರಡು ಭೇದಗಳುಂಟಾದುವು.

೯೬. ಅನಂತರ ವಿದ್ಯಾಧನದ ಅಭಿಮಾನವುಳ್ಳ ದುರ್ವಾಸನು ಕುಪಿತವಾದ ಸರ್ಪದಂತೆ ಶಾಪವನ್ನು ಕೊಡಲು ಆ ಬ್ರಾಹ್ಮಣರು ಯಾವಾಗಲೂ ಪತಿತರಾದರು.

ಕುಶೇ ರಾಜ್ಯಗತೇ ರಾಜನ್ರಾಕ್ಷಸಾನಾಂ ಮಹಾಭಯಂ ।
ಪ್ರಜಯಾವೇದಿತಂ ಸರ್ವಂ ತಸ್ಯ ರಾಜ್ಞೋ ಮಹಾತ್ಮನಃ ॥ ೯೭ ॥
ವಿಭೀಷಣಸ್ಯ ಲಂಕಾಯಾಂ ದೂತಶ್ಚ ಪ್ರೇಷಿತಸ್ತದಾ ।
ಸರ್ವಂ ನಿವೇದಯಾಮಾಸ ಪ್ರಜಾನಾಂ ಭಯಸಂಭವಂ ॥ ೯೮ ॥
ಅಭಿವಂದ್ಯ ಕುಶಾದೇಶಂ ರಾಮಸ್ಯ ಚರಿತಂ ಸ್ಮರನ್ ।
ಪುರ್ಯಾಂ ವಿಲೋಕಯಾಮಾಸ ಲಂಕಾಯಾಂ ರಾಮಶಾಸನಾತ್ ॥ ೯೯ ॥
ಉಪಪ್ಲವಸ್ಯ ಕರ್ತಾರೋ ನಷ್ಟಾಃ ಸರ್ವೇ ದಿಶೋದಶ ।
ಗಂಧರ್ವಾಣಾಂ ಚ ಲೋಕಂ ಹಿ ಭಯೇನ ಮಹತಾ ಗತಾಃ ॥ ೧೦೦ ॥
ಸ್ಥಾತುಂ ತತ್ರ ನ ಶಕ್ತಾಸ್ತೇ ವಿಭೀಷಣಭಯೇನ ಚ ।
ಪೃಥಿವ್ಯಾಂ ಸಮನುಪ್ರಾಪ್ತಾಃ ಸ್ಥಾನಾನ್ಯಪಿ ಬಹೂನಿ ಚ ॥ ೧೦೧ ॥
ಭಯೇನ ಮಹತಾ ತತ್ರ ಕುಶಸ್ಯೈವ ತು ಶಾಸನೇ ।
ಬ್ರಾಹ್ಮಣಾನಾಂ ಚ ರೂಪಾಣಿ ಕೃತ್ವಾ ತತ್ರ ಸಮಾಗತಾಃ ॥ ೧೦೨ ॥
ವಾಡವಾನಾಂ ಮಹಿಮ್ನಾ ಚ ಮಧ್ಯೇ ಸ್ಥಾತುಂ ನ ತೇಽಶಕನ್ ।
ಪತಿತಾನಾಂ ಚ ಸಂಸ್ಥಾನಂ ಚಮತ್ಕಾರಪುರಂ ಗತಾಃ ॥ ೧೦೩ ॥
ಮಾಯಾವಿಶಾರದೈಸ್ತೈಶ್ಚ ಧನೇನ ವಿದ್ಯಯಾ ತತಃ ।
ಅರ್ಧಂ ಜಗ್ಧಂ ತತಸ್ತೈಸ್ತು ತೇಷಾಂ ಮಧ್ಯೇಸ್ಥಿತಂ ಚ ತೈಃ ॥ ೧೦೪ ॥

---

೯೭. ಕುಶನು ರಾಜ್ಯವನ್ನಾಳುತ್ತಿರಲು ಅವನಿಗೆ ಪ್ರಜೆಗಳು ತಮಗೆ ಉಂಟಾದ ರಾಕ್ಷಸರ ಭಯವನ್ನು ತಿಳಿಸಿದರು.

೯೮. ಆ ಕುಶನು ದೂತನನ್ನು ಲಂಕೆಯಲ್ಲಿರುವ ವಿಭೀಷಣನೆಡೆಗೆ ಕಳುಹಿಸಿ ತನ್ನ ಪ್ರಜೆಗಳಿಗುಂಟಾದ ಭಯವನ್ನು ತಿಳಿಸಿದನು.

೯೯. ವಿಭೀಷಣನು ಕುಶನ ಆದೇಶವನ್ನು ಕೈಕೊಂಡು ವಂದಿಸಿ ರಾಮನ ಚರಿತ್ರೆಯನ್ನು ಸ್ಮರಿಸುತ್ತ ಲಂಕಾಪುರಿಯಲ್ಲೆಲ್ಲ ಸುತ್ತಿನೋಡಿದನು.

೧೦೦–೧೦೧. ತೊಂದರೆಯನ್ನುಂಟುಮಾಡಿದ ರಾಕ್ಷಸರು ವಿಭೀಷಣನ ಭಯದಿಂದ ಅಲ್ಲಿ ನಿಲ್ಲಲಾರದೆ ದಶದಿಕ್ಕುಗಳಿಗೂ ಹೋದರು. ಕೆಲವರು ಗಂಧರ್ವಲೋಕವನ್ನೂ, ಕೆಲವರು ಭೂಮಿಯಲ್ಲಿರುವ ಅನೇಕ ಸ್ಥಳಗಳನ್ನೂ ಸೇರಿದರು.

೧೦೨–೧೦೩. ಅವರು ಕುಶನ ಆಜ್ಞೆಯ ಭಯದಿಂದ ಬ್ರಾಹ್ಮಣರ ರೂಪವನ್ನು ತಾಳಿ ಅಲ್ಲಿಗೆ ಬಂದು ಬ್ರಾಹ್ಮಣರ ಮಹಿಮೆಯಿಂದ ಅವರ ನಡುವೆ ವಾಸಿಸಲಾರದೆ ಪತಿತರ ವಾಸಸ್ಥಳವಾದ ಚಮತ್ಕಾರಪುರಕ್ಕೆ ಹೋದರು.

೧೦೪. ಮಾಯಾನಿಪುಣರಾದ ಅವರು ಧನ, ವಿದ್ಯೆಗಳಿಂದ ಆ ಸ್ಥಳದ ಅರ್ಧಭಾಗವನ್ನು ವ್ಯಾಪಿಸಿ ಅಲ್ಲಿರುವ ಬ್ರಾಹ್ಮಣರೊಡನೆ ನೆಲೆಸಿದರು.

ತತಃ ಪ್ರಭೃತಿ ತೇ ಸರ್ವೇ ರಾಕ್ಷಸತ್ವಂ ಪ್ರಪೇದಿರೇ ।
ಕ್ರೂರಾಣ್ಯಪಿ ಚ ಕರ್ಮಾಣಿ ಕುರ್ವಂತಿ ಚ ಪದೇ ಪದೇ ॥ ೧೦೫ ॥
ತತಸ್ತೇ ಸರ್ವಥಾ ರಾಜನ್ ವರ್ಜನೀಯಾಃ ಪ್ರಯತ್ನತಃ ।
ಶ್ರಾದ್ಧೇ ಯಜ್ಞೇ ನರವ್ಯಾಘ್ರ ನರಕೇ ಪಾತಯಂತಿ ಚ ॥ ೧೦೬ ॥
ಅನ್ಯಚ್ಚ ದೂಷಣಂ ತೇಷಾಂ ಕೀರ್ತಯಿಷ್ಯೇ ತವಾನಘ ।
ತ್ರಿಜಾತಾಃ ಸ್ಥಾಪಿತಾ ರಾಜನ್ ಸರ್ಪಾಣಾಂ ಗರನಾಶನಾತ್ ॥ ೧೦೭ ॥
ನಗರತ್ವಂ ತತೋ ಜಾತಂ ಚಮತ್ಕಾರಪುರಸ್ಯ ತು ।
ತ್ರಿಜಾತತ್ವಂ ತು ಸರ್ವೇಷಾಂ ಜಾತಂ ತತ್ರ ವಿಶೇಷತಃ ॥ ೧೦೮ ॥
ಏತೇಭ್ಯಃ ಕಾರಣೇಭ್ಯಶ್ಚ ಭರ್ತೃಯಜ್ಞೇನ ವರ್ಜಿತಾಃ ।
ಪುನಶ್ಚ ಕಾರಣಂ ತೇಷಾಂ ಸ್ಪರ್ಶಾದಪಿ ನ ಶುದ್ಧಿಭಾಕ್ ॥ ೧೦೯ ॥
ಕುಂಭಕೋತ್ಥಂ ಚ ಸಂಪ್ರಾಪ್ತಂ ಮಹಚ್ಚಂಡಾಲಸಂಭವಂ ॥ ೧೧೦ ॥

ರಾಜೋವಾಚ :—

ಏತಚ್ಚ ಕಾರಣಂ ವಿಪ್ರ ಕಥಯಸ್ವ ಪ್ರಸಾದತಃ ।
ಸ್ಥಾವರಸ್ಯ ಚರಸ್ಯೈವ ಜಗತೋ ಜ್ಞಾನಮಸ್ತಿತೇ ॥ ೧೧೧ ॥

---

೧೦೫. ಅದು ಮೊದಲ್ಗೊಂಡು ಅವರೆಲ್ಲ ರಾಕ್ಷಸತ್ವವನ್ನು ಹೊಂದಿ ಆಗಾಗ ಕ್ರೂರ ಕರ್ಮಗಳನ್ನಾಚರಿಸುತ್ತಿದ್ದಾರೆ.

೧೦೬. ದೊರೆಯೆ! ಆದುದರಿಂದ ಅವರನ್ನು ಶ್ರಾದ್ಧ, ಯಜ್ಞಗಳಲ್ಲಿ ತ್ಯಜಿಸಬೇಕು. ಅವರಿಂದ ಶ್ರಾದ್ಧ, ಯಜ್ಞಗಳನ್ನು ಮಾಡಿದರೆ ಅವರು ಪಿತೃಗಳನ್ನು ನರಕಭಾಗಿಗಳನ್ನಾಗಿ ಮಾಡುವರು.

೧೦೭. ಅವರ ಮತ್ತೊಂದು ದೋಷವನ್ನು ನಿನಗೆ ಹೇಳುವೆನು. ಸರ್ಪಗಳ ವಿಷವನ್ನು ನಾಶಗೊಳಿಸಿದ್ದರಿಂದ ಆ ತ್ರಿಜಾತರು ಅಲ್ಲಿ ಸ್ಥಾಪಿತರಾದರು.

೧೦೮. ಅದರಿಂದ ಚಮತ್ಕಾರಪುರವು ನಗರವೆಂದು ಹೆಸರನ್ನು ಪಡೆಯಿತು. ಅಲ್ಲಿರುವ ಜನರಿಗೆಲ್ಲ ತ್ರಿಜಾತರೆಂದು ಹೆಸರಾಯಿತು.

೧೦೯–೧೧೦. ಈ ಕಾರಣದಿಂದಲೇ ಭರ್ತೃಯಜ್ಞನು ಅವರನ್ನು ನಿಷೇಧಿಸಿರುವನು. - ಅವರು ಕುಂಭಕನ ಮಗನಾದ ಚಂಡಾಲನ ಸಂಬಂಧದಿಂದ ಅಸ್ಪೃಶ್ಯರಾಗಿರುವರು. ಅವರ ಸ್ಪರ್ಶದಿಂದಲೇ ಅಶುದ್ಧಿಯುಂಟಾಗುವುದು.

೧೧೧. ರಾಜನು ಹೇಳುತ್ತಾನೆ :—ಮುನಿಯೆ! ನೀನು ಚರಾಚರಾತ್ಮಕವಾದ ಪ್ರಪಂಚವನ್ನರಿತವನಾದ್ದರಿಂದ ಅನುಗ್ರಹಿಸಿ ಅವರ ಅಸ್ಪೃಶ್ಯತೆಗೆ ಕಾರಣವನ್ನು ಹೇಳು.

ವಿಶ್ವಾಮಿತ್ರ ಉವಾಚ:—
ಅತ್ರ ತೇ ಕೀರ್ತಯಿಷ್ಯಾಮಿ ಪೂರ್ವವೃತ್ತಕಥಾಂತರಂ ।
ಭರ್ತೃಯಜ್ಞೇನ ಯೇ ತ್ಯಕ್ತಾಃ ಸರ್ವೇಽನ್ಯೇ ಬ್ರಾಹ್ಮಣೋತ್ತಮಾಃ॥೧೧೨॥
ವರ್ಧಮಾನೇ ಪುರೇ ಪೂರ್ವಮಾಸೀದಂತ್ಯಜಜಾತಿಜಃ ।
ಚಂಡಾಲಃ ಕುಂಭಕೋ ನಾಮ ನಿರ್ದಯಃ ಪಾಪಕರ್ಮಕೃತ್ ॥ ೧೧೩ ॥
ಕಸ್ಯಚಿತ್ತ್ವಥ ಕಾಲಸ್ಯ ತಸ್ಯ ಪುತ್ರೋ ಬಭೂವ ಹ ।
ವಿರೂಪಸ್ಯಾಪಿ ರೂಪಾಢ್ಯಃ ಪೂರ್ವಕರ್ಮಪ್ರಭಾವತಃ ॥ ೧೧೪ ॥
ಪಿಂಗಾಕ್ಷಸ್ಯ ಸುಕೃಷ್ಣಸ್ಯ ವಯೋ ಮಧ್ಯಸ್ಯ ಪಾರ್ಥಿವ ।
ದಕ್ಷಃ ಸರ್ವೇಷು ಕೃತ್ಯೇಷು ಸರ್ವಲಕ್ಷಣಲಕ್ಷಿತಃ ॥ ೧೧೫ ॥
ಸ ವೃದ್ಧಿಂ ದ್ರುತಮಭ್ಯೇತಿ ಶುಕ್ಲಪಕ್ಷೇ ಯಥೋಡುರಾಟ್ ।
ತಥಾಽಸೌ ಶಂಸ್ಯಮಾನಸ್ತು ಸರ್ವಲೋಕೈಃ ಸುರೂಪಭಾಕ್ ।
ದೃಷ್ಟ್ವಾ ಕುಟುಂಬಕಂ ನಿತ್ಯಂ ವೈರಾಗ್ಯಂ ಪರಮಂ ಗತಃ ॥ ೧೧೬ ॥
ತತೋ ದೇಶಾಂತರಂ ದುಃಖಾದ್ಭ್ರಮಮಾಣ ಇತಸ್ತತಃ ।
ಚಮತ್ಕಾರಪುರಂ ಪ್ರಾಪ್ತೋ ದ್ವಿಜರೂಪಂ ಸಮಾಶ್ರಿತಃ ।
ಸ ಸ್ನಾತಿ ಸರ್ವಕೃತ್ಯೇಷು ಭಿಕ್ಷಾನ್ನಕೃತಭೋಜನಃ ॥ ೧೧೭ ॥

---

೧೧೨. ವಿಶ್ವಾಮಿತ್ರನು ಹೇಳುತ್ತಾನೆ:—ಭರ್ತೃಯಜ್ಞನು ತ್ಯಜಿಸಿದ ಸಕಲ ಬ್ರಾಹ್ಮಣರ ಹಿಂದಿನ ವೃತ್ತಾಂತವನ್ನು ನಿನಗೆ ಹೇಳುವೆನು.

೧೧೩. ಹಿಂದೆ ವರ್ಧಮಾನಪುರದಲ್ಲಿ ನಿರ್ದಯನೂ, ಪಾಪಕರ್ಮವನ್ನಾಚರಿಸುವವನೂ ಆದ ಕುಂಭಕನೆಂಬ ಒಬ್ಬ ಚಂಡಾಲನಿದ್ದನು.

೧೧೪–೧೧೫. ಕೆಲವು ಕಾಲದಮೇಲೆ ವಿರೂಪಿಯೂ, ಹಳದಿ ಕಣ್ಣುಗಳುಳ್ಳವನೂ, ಕೃಷ್ಣವರ್ಣನೂ, ಮಧ್ಯವಯಸ್ಕನೂ ಆದ ಅವನಿಗೆ ಪೂರ್ವಕರ್ಮಪ್ರಭಾವದಿಂದ ಸುಂದರನೂ, ಸಮಸ್ತ ಕಾರ್ಯಗಳಲ್ಲಿ ಕುಶಲನೂ, ಸಕಲ ಲಕ್ಷಣಗಳಿಂದ ಕೂಡಿದವನೂ ಆದ ಓರ್ವ ಪುತ್ರನು ಜನಿಸಿದನು.

೧೧೬. ಅವನು ಶುಕ್ಲಪಕ್ಷದ ಚಂದ್ರನಂತೆ ಶೀಘ್ರವಾಗಿ ವೃದ್ಧಿಯನ್ನೈದಲು ಸುಂದರನಾದ ಅವನನ್ನು ಸಮಸ್ತ ಜನರೂ ಹೊಗಳುತ್ತಿದ್ದರು. ಆ ಚಂಡಾಲನು ತನ್ನ ಕುಟುಂಬವರ್ಗದವರನ್ನು ನೋಡಿ ಅತ್ಯಂತ ವೈರಾಗ್ಯಗೊಂಡನು.

೧೧೭. ಅನಂತರ ಅವನು ದೇಶಾಂತರಕ್ಕೆ ಹೊರಟು ದುಃಖದಿಂದ ಇಲ್ಲಿ ಅಲ್ಲಿ ಸಂಚರಿಸುತ್ತ ಬ್ರಾಹ್ಮಣರೂಪವನ್ನು ಧರಿಸಿ ಚಮತ್ಕಾರಪುರವನ್ನು ಸೇರಿ ಎಲ್ಲ ತೀರ್ಥಗಳಲ್ಲಿಯೂ ಸ್ನಾನ ಮಾಡುತ್ತ ಭಿಕ್ಷಾನ್ನದಿಂದ ಜೀವಿಸುತ್ತಿದ್ದನು.

ಏತಸ್ಮಿನ್ನೇವ ಕಾಲೇ ತು ಬ್ರಾಹ್ಮಣಃ ಶಂಸಿತವ್ರತಃ ।
ಛಾಂದೋಗ್ಯಗೋತ್ರ ವಿಖ್ಯಾತಃ ಸುಭದ್ರೋ ನಾಮ ಪಾರ್ಥಿವಃ ॥ ೧೧೮ ॥
ನಾಗರೋ ವರ್ಷಯಾಜೀ ಚ ವೇದವೇದಾಂಗಪಾರಗಃ ।
ತತ್ರಾಽಽಸೀತ್ತಸ್ಯ ಸಂಜಾತಾ ಕನ್ಯಕಾ ದ್ವಿಗುಣೈರದ್ಯೈಃ ॥ ೧೧೯ ॥
ತಥಾ ತ್ರಿಭಿಃಸ್ತನೈರೌದ್ರಾ ಪೃಷ್ಠ್ಯಾವರ್ತಕ ಸಂಯುತಾ ।
ದರಿದ್ರೋಽಪಿ ಸುದುಃಸ್ಥೋಽಪಿ ಕುಲಹೀನೋಽಪಿ ಪಾರ್ಥಿವ ॥ ೧೨೦ ॥
ದೀಯಮಾನಾಮಪಿ ನ ತಾಂ ಪ್ರತಿಗೃಹ್ಣಾತಿ ಕಶ್ಚನ ।
ಯದ್ಭಕ್ಷಯತಿ ಭರ್ತಾರಂ ಷಣ್ಮಾಸಾಭ್ಯಂತರೇ ಹಿ ಸಾ ॥ ೧೨೧ ॥
ಯಸ್ಯಾಃ ಸ್ಯುರ್ದ್ವಿಗುಣಾ ದಂತಾ ಏವಂ ಸಾಮುದ್ರಿಕಾ ಜಗುಃ ।
ತ್ರಿಸ್ತನೀ ಕನ್ಯಕಾ ಯಾತು ಶ್ವಶುರಸ್ಯ ಕುಲಕ್ಷಯಂ ।
ಸಂಧತ್ತೇ ನಾಽತ್ರ ಸಂದೇಹಸ್ತಸ್ಮಾತ್ತಾಂ ದೂರತಸ್ತ್ಯಜೇತ್ ॥ ೧೨೨ ॥
ಪೃಷ್ಠ್ಯಾವರ್ತೋ ಭವೇದ್ಯಸ್ಯಾ ಅಸತೀ ಸಾ ಭವೇದ್ಧ್ರುವಂ ।
ಬಹುಪಾಪಸಮಾಚಾರಾ ತಸ್ಮಾತ್ತಾಂ ಪರಿವರ್ಜಯೇತ್ ॥ ೧೨೩ ॥
ಅಥ ತಾಂ ವೃದ್ಧಿಮಾಪನ್ನಾಂ ದೃಷ್ಟ್ವಾ ವಿಪ್ರಃ ಸುಭದ್ರಕಃ ।
ಚಿಂತಾಚಕ್ರಂ ಸಮಾರೂಢೋ ನ ಶಾಂತಿಮಧಿಗಚ್ಛತಿ ॥ ೧೨೪ ॥
ಕಿಂ ಕರೋಮಿ ಕ್ವ ಗಚ್ಛಾಮಿ ಕಥಮಸ್ಯಾಃ ಪತಿರ್ಭವೇತ್ ।
ನ ಕಶ್ಚಿತ್ಪ್ರತಿಗೃಹ್ಣಾತಿ ಪಾರ್ಥಿತೋಽಪಿ ಮುಹುರ್ಮುಹುಃ ॥ ೧೨೫ ॥

---

೧೧೮–೧೨೨. ಈ ಸಮಯದಲ್ಲಿ ಅಲ್ಲಿ ಛಾಂದೋಗ್ಯ ಗೋತ್ರದವನೂ, ಒಂದು ವರ್ಷಕಾಲ ಯಾಗ ಮಾಡುವವನೂ, ವೇದವೇದಾಂಗಪಾರಂಗತನೂ ಆದ ಸುಭದ್ರಕನೆಂಬ ನಾಗರ ಬ್ರಾಹ್ಮಣನಾದ ರಾಜನಿದ್ದನು. ಅವನಿಗೆ ಇಮ್ಮಡಿ ಹಲ್ಲುಗಳುಳ್ಳವಳೂ, ಮೂರು ಸ್ತನಗಳುಳ್ಳವಳೂ, ಪೃಷ್ಠದಲ್ಲಿ ಸುಳಿಗಳುಳ್ಳವಳೂ, ಆದ ಕನ್ಯೆಯು ಜನಿಸಿದಳು. ಇಮ್ಮಡಿ ಹಲ್ಲುಗಳುಳ್ಳ ಅವಳು ಆರು ತಿಂಗಳಲ್ಲಿ ಪತಿಯನ್ನು ಕೊಲ್ಲುವಳೆಂದು ಸಾಮುದ್ರಿಕರು ಹೇಳಿದ್ದರಿಂದ ಬಡವನೂ, ದುಃಖಿತನೂ, ಹೀನಕುಲದವನೂ ಆದ ಯಾವ ವರನೂ ಅವಳನ್ನು ವರಿಸಲಿಲ್ಲ. ಮೂರು ಸ್ತನಗಳುಳ್ಳ ಕನ್ಯೆಯು ಮಾವನ ವಂಶವನ್ನು ನಾಶಗೊಳಿಸುವುದರಿಂದ ಸಂದೇಹವಿಲ್ಲದೆ ಅವಳನ್ನು ದೂರದಿಂದಲೇ ಬಿಡಬೇಕು.

೧೨೩. ಪೃಷ್ಠದಲ್ಲಿ ಸುಳಿಗಳುಳ್ಳವಳು ವ್ಯಭಿಚಾರಿಣಿಯೂ, ಅತ್ಯಂತ ಪಾಪದ ನಡತೆಯುಳ್ಳವಳೂ ಆಗುವುದರಿಂದ ಅವಳನ್ನು ತ್ಯಜಿಸಬೇಕು.

೧೨೪. ಸುಭದ್ರಕನು ವೃದ್ಧಿಯನ್ನೈದಿದ ಅವಳನ್ನು ನೋಡಿ ಚಿಂತಾಕ್ರಾಂತನಾಗಿ ಶಾಂತಿಯನ್ನು ಹೊಂದಲಿಲ್ಲ.

೧೨೫. ಎಲ್ಲಿಗೆ ಹೋಗಲಿ? ಏನನ್ನು ಮಾಡಲಿ? ಇವಳಿಗೆ ಪತಿಯು ಹೇಗೆ ಲಭಿಸಿಯಾನು.

ದರಿದ್ರೋ ವ್ಯಾಧಿತೋ ವಾಽಪಿ ವೃದ್ಧೋಽಪಿ ಬ್ರಾಹ್ಮಣೋ ಹಿ ಸಃ ।
ಸ್ಮೃತೌ ಯಸ್ಮಾದಿದಂ ಪ್ರೋಕ್ತಂ ಕನ್ಯಾರ್ಥೇ ಪ್ರಾಜ್ಞಹರ್ಷಿಭಿಃ ॥ ೧೨೬ ॥
ಅಷ್ಟವರ್ಷಾ ಭವೇದ್ಗೌರೀ ನವವರ್ಷಾ ಚ ರೋಹಿಣೀ ।
ದಶವರ್ಷಾ ಭವೇತ್ಕನ್ಯಾ ಅತ ಊರ್ಧ್ವಂ ರಜಸ್ವಲಾ ॥ ೧೨೭ ॥
ಮಾತಾ ಚೈವ ಪಿತಾ ಚೈವ ಜ್ಯೇಷ್ಠೋ ಭ್ರಾತಾ ತಥೈವ ಚ ।
ತ್ರಯಸ್ತೇ ನರಕಂ ಯಾಂತಿ ದೃಷ್ಟ್ವಾ ಕನ್ಯಾಂ ರಜಸ್ವಲಾಂ ॥ ೧೨೮ ॥
ಏವಂ ಚಿಂತಯತಸ್ತಸ್ಯ ಸೋಽಂತ್ಯಜೋ ದ್ವಿಜರೂಪಧೃಕ್ ।
ಭಿಕ್ಷಾರ್ಥಂ ತದ್ಗೃಹಂ ಪ್ರಾಪ್ತೋ ದೃಷ್ಟಸ್ತೇನ ಮಹಾತ್ಮನಾ ॥ ೧೨೯ ॥
ಪೃಷ್ಟಶ್ಚ ವಿಸ್ಮಯಾತ್ತೇನ ದೃಷ್ಟ್ವಾ ರೂಪಂ ತಥಾವಿಧಂ ।
ಕುತಸ್ತ್ವಮಿಹ ಸಂಪ್ರಾಪ್ತಃ ಕ್ವಯಾಸ್ಯಸಿ ಚ ಭಿಕ್ಷುಕ ॥ ೧೩೦ ॥
ಈದೃಗ್ಭವ್ಯತರೋ ಭೂತ್ವಾ ಕಸ್ಮಾನ್ಮಧುಗರೀಂ ಗತಃ ।
ಕಿಂ ಗೋತ್ರಂ ತವ ಮೇ ಬ್ರೂಹಿ ಕತಮಃ ಪ್ರವರಶ್ಚ ತೇ ॥ ೧೩೧ ॥
ಸೋಽಬ್ರವೀದ್ಗೌಡದೇಶೀಯಂ ಸ್ಥಾನಂ ಮೇ ಸುಮಹತ್ತರಂ ।
ನಾಮ್ನಾ ಭೋಜಕಟಂ ಖ್ಯಾತಂ ನಾನಾದ್ವಿಜಸಮಾಶ್ರಿತಂ ॥ ೧೩೨ ॥

---

೧೨೬. ದರಿದ್ರನಾಗಲಿ, ರೋಗಿಯಾಗಲಿ, ಮುದುಕನಾಗಲಿ ಯಾವನೊಬ್ಬ ಬ್ರಾಹ್ಮಣನೂ ಇವಳನ್ನು ವರಿಸುವುದಿಲ್ಲ. ಹಿಂದೆ ಮಹರ್ಷಿಗಳು ಕನ್ಯೆಯ ವಿಷಯದಲ್ಲಿ ಸ್ಮೃತಿಯಲ್ಲಿ ಹೀಗೆ ಹೇಳಿರುತ್ತಾರೆ.

೧೨೭–೧೨೮. ಎಂಟು ವರ್ಷದ ಕನ್ಯೆಯು ಗೌರಿಯೂ, ಒಂಬತ್ತು ವರ್ಷದವಳು ರೋಹಿಣಿಯೂ, ಹತ್ತು ವರ್ಷದವಳು ಕನ್ಯೆಯೂ, ಇದಕ್ಕಿಂತ ಮುಂದಿನ ವಯಸ್ಸಿನವಳು ರಜಸ್ವಲೆಯೂ ಆಗುವಳು. ರಜಸ್ವಲೆಯಾದ ಕನ್ಯೆಯನ್ನು ನೋಡಿ ತಾಯಿ, ತಂದೆ, ಅಣ್ಣ ಈ ಮೂವರೂ ನರಕಕ್ಕೆ ಹೋಗುವರು.

೧೨೯. ಆ ಬ್ರಾಹ್ಮಣನು ಹೀಗೆ ಚಿಂತಿಸುತ್ತಿರಲು, ಬ್ರಾಹ್ಮಣ ರೂಪವನ್ನು ತಾಳಿದ ಆ ಚಂಡಾಲನು ಭಿಕ್ಷೆಗಾಗಿ ಅವನ ಮನೆಗೆ ಬಂದನು. ಸುಭದ್ರನು ಅವನನ್ನು ಕಂಡನು.

೧೩೦. ಅವನು ಅಂತಹ ಸುಂದರವಾದ ರೂಪವನ್ನು ಕಂಡು ಆಶ್ಚರ್ಯಗೊಂಡು ಹೀಗೆ ಪ್ರಶ್ನಿಸಿದನು. "ಭಿಕ್ಷುಕ! ನೀನು ಎಲ್ಲಿಂದ ಬಂದೆ? ಎಲ್ಲಿಗೆ ಹೋಗುವೆ?

೧೩೧. ಇಂತಹ ಸುಂದರನಾದ ನೀನು ಏಕೆ ಭಿಕ್ಷುಕನಾದೆ? ನಿನ್ನ ಗೋತ್ರ ಪ್ರವರಗಳಾವುವು?"

೧೩೨. ಅವನು ಇಂತೆಂದನು. "ಗೌಡ ದೇಶದಲ್ಲಿ ಅನೇಕ ಬ್ರಾಹ್ಮಣರು ವಾಸಿಸುವ ಭೋಜಕಟವೆಂಬ ದೊಡ್ಡ ಸ್ಥಾನವಿದೆ.

ತತ್ರಾಽಽಸೀನ್ಮಾಧವೋ ನಾಮ ಬ್ರಾಹ್ಮಣೋ ವೇದಪಾರಗಃ ।
ವಸಿಷ್ಠಗೋತ್ರವಿಖ್ಯಾತ ಏಕಪ್ರವರ ಸೂಚಿತಃ ॥ ೧೩೩ ॥
ತಸ್ಯಾಽಹಂ ತನಯೋ ನಾಮ್ನಾ ಚಂದ್ರಪ್ರಭ ಇತಿ ಸ್ಮೃತಃ ॥ ೧೩೪ ॥
ತತೋಽಹಮಷ್ಟಮೇ ವರ್ಷೇ ಯದಾ ವ್ರತಧರಃ ಸ್ಥಿತಃ ।
ತದಾ ಪಂಚತ್ವಮಾಪನ್ನಃ ಪಿತಾ ಮೇ ವೇದಪಾರಗಃ ॥ ೧೩೫ ॥
ಮಾತಾ ಮೇ ಸಹ ತೇನೈವ ಪ್ರವಿಷ್ಟಾ ಹವ್ಯವಾಹನಂ ।
ತತೋ ವೈರಾಗ್ಯಮಾಪನ್ನೋ ನಿಷ್ಕ್ರಾಂತೋಽಹಂ ನಿಜಾಲಯಾತ್ ॥ ೧೩೬ ॥
ತೀರ್ಥಾನಿ ಭ್ರಮಮಾಣೋಽತ್ರ ಸಂಪ್ರಾಪ್ತಸ್ತು ಪುರಂ ತವ ।
ಅಧುನಾ ಸಂಪ್ರಯಾಸ್ಯಾಮಿ ಪ್ರಭಾಸಂ ಕ್ಷೇತ್ರಮುತ್ತಮಂ ॥ ೧೩೭ ॥
ಯತ್ರ ಸೋಮೇಶ್ವರೋ ದೇವಸ್ತ್ಯಕ್ತ್ವಾ ಕೈಲಾಸಮಾಗತಃ ।
ನ ಮಯಾ ಪಠಿತಾ ವೇದಾ ನ ಚ ಶಾಸ್ತ್ರಂ ನೃಪೋತ್ತಮ ।
ತೀರ್ಥಯಾತ್ರಾಪ್ರಸಂಗೇನ ತೇನ ಭಿಕ್ಷಾಂ ಚರಾಮ್ಯಹಂ ॥ ೧೩೮ ॥

ವಿಶ್ವಾಮಿತ್ರ ಉವಾಚ :—

ತಸ್ಯ ತದ್ವಚನಂ ಶ್ರುತ್ವಾ ಚಿಂತಯಾಮಾಸ ಚೇತಸಿ ।
ಬ್ರಾಹ್ಮಣೋಽಯಂ ಸುದೇಶೀಯಸ್ತಥಾ ಭವ್ಯತಮಾಕೃತಿಃ ।
ಯದಿ ಗೃಹ್ಣಾತಿ ಮೇ ಕನ್ಯಾಂ ತದಸ್ಮೈ ಪ್ರದದಾಮ್ಯಹಂ ॥ ೧೩೯ ॥

---

೧೩೩. ಅಲ್ಲಿ ವೇದಪಾರಂಗತನೂ, ವಸಿಷ್ಠ ಗೋತ್ರದವನೂ, ಒಂದೇ ಪ್ರವರದವನೂ ಆದ ಮಾಧವನೆಂಬ ಒಬ್ಬ ಬ್ರಾಹ್ಮಣನಿದ್ದನು.

೧೩೪. ನಾನು ಚಂದ್ರಪ್ರಭನೆಂಬ ಅವನ ಮಗನಾಗಿರುವೆನು.

೧೩೫. ನಾನು ಎಂಟನೆಯ ವರ್ಷದಲ್ಲಿ ಉಪನೀತನಾಗಲು ವೇದಪಾರಂಗತನಾದ ನನ್ನ ತಂದೆಯು ಮೃತ್ಯುವಶನಾದನು.

೧೩೬. ನನ್ನ ತಾಯಿಯೂ ತಂದೆಯೊಡನೆ ಅಗ್ನಿಪ್ರವೇಶ ಮಾಡಿದಳು. ಅದರಿಂದ ವಿರಕ್ತನಾದ ನಾನು ಮನೆಯಿಂದ ಹೊರಟೆನು.

೧೩೭. ಅನೇಕ ತೀರ್ಥಗಳಲ್ಲಿ ಸಂಚರಿಸುತ್ತ ನಿಮ್ಮ ಪಟ್ಟಣಕ್ಕೆ ಬಂದಿದ್ದೇನೆ. ಈಗ ಪ್ರಭಾಸಕ್ಷೇತ್ರಕ್ಕೆ ಹೋಗುವೆನು.

೧೩೮. ಅಲ್ಲಿ ಸೋಮೇಶ್ವರನು ಕೈಲಾಸವನ್ನು ತ್ಯಜಿಸಿ ಬಂದು ನೆಲೆಸಿರುವನು. ನಾನು ವೇದಶಾಸ್ತ್ರಗಳನ್ನು ಓದಲಿಲ್ಲ. ಆದುದರಿಂದ ತೀರ್ಥಯಾತ್ರಾನಿಮಿತ್ತವಾಗಿ ಭಿಕ್ಷಾಟನೆ ಮಾಡುತ್ತಿದ್ದೇನೆ."

೧೩೯–೧೪೦. ವಿಶ್ವಾಮಿತ್ರನು ಹೇಳುತ್ತಾನೆ:— ಸುಭದ್ರನು ಅವನ ಆ ಮಾತನ್ನು ಕೇಳಿ ಮನಸ್ಸಿನಲ್ಲಿ ಹೀಗೆ ಚಿಂತಿಸಿದನು. ಒಳ್ಳೆಯ ದೇಶದಲ್ಲಿ ಹುಟ್ಟಿದವನೂ, ಸುಂದರನೂ ಆದ ಈ ಬ್ರಾಹ್ಮಣನು ನನ್ನೀ ಕನ್ಯೆಯನ್ನು

ಯಾವದ್ರಜಸ್ವಲಾ ನೈವ ಜಾಯತೇ ಸಾ ನಿರೂಪಿತಾ ।
ಕೃತ್ಸ್ನಂ ದೂಷಯತಿ ಕ್ಷಿಪ್ರಂ ನೈವ ವಂಶಂ ಮಮಾಽಧಮಾ ॥ ೧೪೦ ॥
ತತಃ ಪ್ರೋವಾಚ ತಂ ಮ್ಲೇಚ್ಛಂ ಸಂಮಂತ್ರ್ಯ ಸಹ ಭಾರ್ಯಯಾ ।
ಯದಿ ಗೃಹ್ಣಾಸಿ ಮೇ ಕನ್ಯಾಂ ತವ ಯಚ್ಛಾಮ್ಯಹಂ ದ್ವಿಜ ॥ ೧೪೧ ॥
ಭರಣಂ ಪೋಷಣಂ ದ್ವಾಭ್ಯಾಂ ಕರಿಷ್ಯಾಮಿ ಸದೈವ ಹಿ ॥ ೧೪೨ ॥
ತಚ್ಛ್ರುತ್ವಾ ಹರ್ಷಿತಃ ಪ್ರಾಹ ಸೋಽಂತ್ಯಜೋ ದ್ವಿಜಸತ್ತಮಂ ।
ತವಾದೇಶಂ ಕರಿಷ್ಯಾಮಿ ಯಚ್ಛ ಮೇ ಕನ್ಯಕಾಂ ನೃಪ ॥ ೧೪೩ ॥
ತಥೇತ್ಯುಕ್ತ್ವಾ ಗತಸ್ತೇನ ತಸ್ಮೈ ದತ್ತಾ ನಿಜಾ ಸುತಾ ।
ಗೃಹ್ಯೋಕ್ತೇನ ವಿಧಾನೇನ ವಿವಾಹೋ ವಿಹಿತಸ್ತತಃ ॥ ೧೪೪ ॥
ತತೋ ದದೌ ಧನಂ ಧಾನ್ಯಂ ಗೃಹಂ ಕ್ಷೇತ್ರಂ ಚ ಗೋಧನಂ ।
ತಸ್ಮೈ ತುಷ್ಟಿಸಮಾಯುಕ್ತೋ ಮನ್ಯಮಾನಃ ಕೃತಾರ್ಥತಾಂ ॥ ೧೪೫ ॥
ಅಥ ಸೋಽಪಿ ಚ ತಂ ಪ್ರಾಪ್ಯ ವಿಲಾಸಾನಕರೋದ್ಬಹೂನ್ ।
ಖಾದ್ಯೈಃ ಪಾನೈಃ ಸುವಸ್ತ್ರೈಶ್ಚ ಗಂಧಮಾಲ್ಯೈರ್ವಿಭೂಷಣೈಃ ॥ ೧೪೬ ॥
ಪರಂ ಸ ವ್ರಜತಿ ಪ್ರಾಯೋ ಯೇನ ಮಾರ್ಗೇಣ ಕೇನಚಿತ್ ।
ಸಾರಮೇಯಾಃ ಸ ಶಬ್ದಾಶ್ಚ ಪೃಷ್ಠತೋಽನುವ್ರಜಂತಿ ವೈ ॥ ೧೪೭ ॥

---

ವರಿಸುವುದಾದರೆ ರಜಸ್ವಲೆಯಾಗಿ ವಂಶವನ್ನೆಲ್ಲ ಕೆಡಿಸುವುದರೊಳಗಾಗಿ ಇವಳನ್ನು ಇವನಿಗೆ ಕೊಡುತ್ತೇನೆ.

೧೪೧–೧೪೨. ಅನಂತರ ಸುಭದ್ರನು ಪತ್ನಿಯೊಡನೆ ಆಲೋಚಿಸಿ ಆ ಚಂಡಾಲನನ್ನು ಕುರಿತು, "ನೀನು ನನ್ನ ಕನ್ಯೆಯನ್ನು ವರಿಸುವುದಾದರೆ ನಿನಗಿವಳನ್ನು ಕೊಟ್ಟು ಪೋಷಣೆ ಮತ್ತು ರಕ್ಷಣೆಗಳನ್ನು ನಾನೇ ಮಾಡುತ್ತೇನೆ" ಎಂದನು.

೧೪೩. ಆ ಅಂತ್ಯಜನು ಅವನ ಆ ಮಾತನ್ನು ಕೇಳಿ ಸಂತೋಷಗೊಂಡು, "ನಿನ್ನ ಆದೇಶವನ್ನು ನಡೆಸುತ್ತೇನೆ. ಕನ್ಯೆಯನ್ನು ನನಗೆ ಕೊಡು" ಎಂದನು.

೧೪೪. ಸುಭದ್ರನು ಅದರಂತೆ ತನ್ನ ಕನ್ಯೆಯನ್ನು ಅವನಿಗೆ ಗೃಹ್ಯೋಕ್ತ ವಿಧಿಯಂತೆ ವಿವಾಹ ಮಾಡಿಕೊಟ್ಟನು.

೧೪೫. ಮತ್ತು ಅಳಿಯನಿಗೆ ಧನ, ಧಾನ್ಯ, ಮನೆ, ಹೊಲ, ಗೋವುಗಳನ್ನಿತ್ತು ಸಂತೋಷಗೊಂಡು ತಾನು ಧನ್ಯನಾದೆನೆಂದರಿತನು.

೧೪೬. ಬಳಿಕ ಆ ಅಂತ್ಯಜನು ಆ ಕನ್ಯೆಯನ್ನು ಹೊಂದಿ ಅವಳೊಡನೆ ಭಕ್ಷ್ಯ, ಪಾನ, ವಸ್ತ್ರ, ಗಂಧ, ಮಾಲ್ಯ, ಒಡವೆಗಳಿಂದ ಅನೇಕ ವಿಲಾಸಗಳನ್ನು ನಡಸುತ್ತಿದ್ದನು.

೧೪೭–೧೪೮. ಆದರೆ ಅವನು ದಾರಿಯಲ್ಲಿ ಹೋಗುತ್ತಿರುವಾಗ ನಾಯಿಗಳು ಇತರ ಚಂಡಾಲರನ್ನು ಹಿಂಬಾಲಿಸುವಂತೆ ಬಗಳುತ್ತ ಅವನನ್ನು ಅನುಸರಿಸು

ಅನ್ಯೇಷಾಮಂತ್ಯಜಾತ್ಯಾನಾಂ ಯದ್ವತ್ತಸ್ಯ ವಿಶೇಷತಃ ।
ವೇದಾಭ್ಯಾಸಪರಶ್ಚೈವ ಯದಿ ಸಂಜಾಯತೇ ಕ್ವಚಿತ್ ।
ರಕ್ತಂ ಪತತಿ ವಕ್ತ್ರೇಣ ತತ್ಕ್ಷಣಾತ್ತಸ್ಯ ದುರ್ಮತೇಃ ॥ ೧೪೮ ॥
ಏತಸ್ಮಿನ್ನಂತರೇ ಲೋಕಃ ಸರ್ವ ಏವ ಪ್ರಶಂಕಿತಃ ।
ಅಬ್ರವೀಚ್ಚ ಮಿಥೋಽಭ್ಯೇತ್ಯ ಚಂಡಾಲೋಽಯಮಸಂಶಯಂ ॥ ೧೪೯ ॥
ಯದೇತೇ ಪೃಷ್ಠತೋ ಯಾಂತಿ ಭಷಮಾಣಾಃ ಶುನೀಸುತಾಃ ।
ಸುಭದ್ರೋಽಪಿ ಚ ತತ್ತೇಷಾಂ ಶ್ರುತ್ವಾ ಚಿಂತಾಪರೋಽಭವತ್ ॥ ೧೫೦ ॥
ಮನ್ಯಮಾನಶ್ಚ ತತ್ಸತ್ಯಂ ದುಃಖೇನ ಮಹತಾನ್ವಿತಃ ।
ನೂನಮಂತ್ಯಜಜಾತೀಯೋ ಭವಿಷ್ಯತಿ ಸುತಾಪತಿಃ ॥ ೧೫೧ ॥
ಜ್ಞಾಯತೇ ಚೇಷ್ಟಿತೈಃ ಸರ್ವೈರ್ಯಥಾಽಯಂ ಜಲ್ಪತೇ ಜನಃ ॥ ೧೫೨ ॥
ಏವಂ ರಾತ್ರಿಂ ದಿವಂ ತಸ್ಯ ಚಿಂತಯಾನಸ್ಯ ಭೂಪತೇಃ ।
ಲೋಕಾಽಪವಾದ ಯುಕ್ತಸ್ಯ ಕಿಯಾನ್ಕಾಲೋಽಭ್ಯವರ್ತತ ॥ ೧೫೩ ॥
ಅನ್ಯಸ್ಮಿನ್ನಹನಿ ಪ್ರಾಪ್ತೇ ಆದ್ಯಾದ್ಯಾದ್ವಿಜಸತ್ತಮಾಃ ।
ಮಧ್ಯಗೇನ ಸಮಾಯುಕ್ತಾ ಬ್ರಹ್ಮಸ್ಥಾನಂ ಸಮಾಗತಾಃ ।
ತಸ್ಯ ಶುದ್ಧಿಕೃತೇ ಪ್ರೋಚುರ್ಯೇನ ಶಂಕಾ ಪ್ರಣಶ್ಯತಿ ॥ ೧೫೪ ॥
ಅಥೋಚುಸ್ತಂ ದ್ವಿಜಶ್ರೇಷ್ಠಾ ಬ್ರಹ್ಮಸ್ಥಾನಸ್ಯ ಮಧ್ಯಗಂ ।
ಮಧ್ಯಗಸ್ಯ ತು ವಕ್ತ್ರೇಣ ವಿವರ್ಣವದನಂ ಸ್ಥಿತಂ ॥ ೧೫೫ ॥

---

ತ್ತಿದ್ದವು. ಯಾವುದಾದರೂ ಒಂದು ವೇಳೆ ಅವನು ವೇದಾಭ್ಯಾಸನಿರತನಾದರೆ ಆ ದುಷ್ಟನ ಬಾಯಿಯಿಂದ ಕೂಡಲೆ ರಕ್ತವು ಸುರಿಯುತ್ತಿದ್ದಿತು.

೧೪೯—೧೫೦. ಇಷ್ಟರಲ್ಲಿ ಸಮಸ್ತ ಜನರೂ ಸಂದೇಹಗೊಂಡು ನಾಯಿಗಳು ಬಗಳುತ್ತ ಇವನನ್ನು ಹಿಂಬಾಲಿಸುವುದರಿಂದ ಇವನು ನಿಜವಾಗಿಯೂ ಚಂಡಾಲನೇ ಎಂದು ಪರಸ್ಪರ ಮಾತನಾಡಿಕೊಂಡರು. ಸುಭದ್ರನೂ ಅವರ ಆ ಮಾತನ್ನು ಕೇಳಿ ಚಿಂತಾಕ್ರಾಂತನಾದನು.

೧೫೧—೧೫೨. ಮತ್ತು ಕಾರ್ಯಗಳಿಂದ ನನ್ನೀ ಅಳಿಯನು ಈ ಜನರು ಹೇಳುವಂತೆ ನಿಜವಾಗಿಯೂ ಚಂಡಾಲನೆಂದು ತಿಳಿದು ಅತ್ಯಂತ ದುಃಖಗೊಂಡನು.

೧೫೩. ಹೀಗೆ ಲೋಕಾಪವಾದವನ್ನು ಹೊಂದಿ ಹಗಲು ರಾತ್ರಿ ಆ ರಾಜನು ಆಲೋಚಿಸುತ್ತಿರಲು ಬಹುಕಾಲ ಕಳೆಯಿತು.

೧೫೪—೧೫೫. ಒಂದಾನೊಂದು ದಿನ ಆದ್ಯರೇ ಮೊದಲಾದ ಬ್ರಾಹ್ಮಣರು ಮಧ್ಯಗನೊಡನೆ ಬ್ರಹ್ಮಸ್ಥಾನಕ್ಕೆ ಬಂದು ಶಂಕಾನಿವಾರಣೆಗಾಗಿ ಆ ಚಂಡಾಲನ ಶುದ್ಧಿಯನ್ನುದ್ದೇಶಿಸಿ ನಡುವೆ ಇರುವ ಕಳೆಗುಂದಿದ ಮುಖವುಳ್ಳ ಅವನನ್ನು ಕುರಿತು ಮಧ್ಯಗನ ಮುಖದಿಂದ ಇಂತೆಂದರು.

**ಕುಲಂ ಗೋತ್ರಂ ನಿಜಂ ಬ್ರೂಹಿ ಪ್ರವರಾಂಶ್ಚ ವಿಶೇಷತಃ ।**
**ಸ್ಥಾನಂ ದೇಶಂ ಚ ವಿಪ್ರಾಣಾಂ ಯೇನ ಶುದ್ಧಿಃ ಪ್ರದೀಯತೇ ॥ ೧೫೬ ॥**
**ಅಥಾಽಸೌ ವೇಪಮಾನಸ್ತು ಪ್ರಸ್ವಿನ್ನವದನಸ್ತಥಾ ।**
**ಅಧೋದೃಷ್ಟಿರುವಾಚೇದಂ ಗದ್ಗದಂ ವಿಹಿತಾಂಜಲಿಃ ॥ ೧೫೭ ॥**
**ಗರ್ಭಾಷ್ಟಮೇ ಪಿತಾ ಮಹ್ಯಂ ವರ್ಷೇ ಮೃತ್ಯುಂಗತಸ್ತತಃ ।**
**ತತಃ ಸಾ ತಂ ಸಮಾದಾಯ ಜನನೀ ಮೇ ಪತಿವ್ರತಾ ।**
**ಮಾಂ ತ್ಯಕ್ತ್ವಾ ದುಃಖಿತಂ ದೀನಂ ಪ್ರವಿಷ್ಟಾ ಹವ್ಯವಾಹನಂ ॥ ೧೫೮ ॥**
**ಅಹಂ ವೈರಾಗ್ಯಮಾಪನ್ನಸ್ತೀರ್ಥಯಾತ್ರಾಂ ಸಮಾಶ್ರಿತಃ ।**
**ಬಾಲಭಾವೇ ಪಿತುರ್ದುಃಖಾತ್ತಾಪಸೈರಪರೈಃ ಸಹ ॥ ೧೫೯ ॥**
**ನ ಮಯಾ ಪಠಿತೋ ವೇದೋ ನ ಚ ಶಾಸ್ತ್ರಂ ನಿರೂಪಿತಂ ।**
**ತೀರ್ಥಯಾತ್ರಾಪರೋಽಹಂ ಚ ಸಮಾಯಾತೋ ಭವತ್ಪುರಂ ॥ ೧೬೦ ॥**
**ಅಭದ್ರೇಣ ಸುಭದ್ರೇಣ ಶ್ವಶುರೇಣ ದುರಾತ್ಮನಾ ।**
**ಏತಜ್ಜಾನಾಮ್ಯಹಂ ವಿಪ್ರಾ ಗೋತ್ರಂ ವಾಸಿಷ್ಠಮೇವ ವಾ ॥ ೧೬೧ ॥**
**ಅಥೈಕಪ್ರವರೋ ದೇಶೋ ಗೌಡೋ ಮಧುಪುರಂ ಪುರಂ ।**
**ತತಸ್ತೇ ಬ್ರಾಹ್ಮಣಾಃ ಪ್ರೋಚುರ್ಯಸ್ಯ ನೋ ಜ್ಞಾಯತೇ ಕುಲಂ ।**
**ತಸ್ಯ ಶುದ್ಧಿಃ ಪ್ರದಾತವ್ಯಾ ಧಟದ್ವಾರೇಣ ಕೇವಲಾ ॥ ೧೬೨ ॥**

---

೧೫೬. ನೀನು ಈ ಬ್ರಾಹ್ಮಣರಿಗೆ ನಿನ್ನ ಕುಲ, ಗೋತ್ರ, ಪ್ರವರ, ಸ್ಥಾನ, ದೇಶ ಇವುಗಳನ್ನು ಹೇಳು. ಅದರಿಂದ ನಿನಗೆ ಪ್ರಾಯಶ್ಚಿತ್ತವನ್ನು ಸೂಚಿಸುವೆವು.

೧೫೭. ತರುವಾಯ ಆ ಚಂಡಾಲನು ನಡುಗುವವನೂ, ಬೆವರಿದ ಮುಖವುಳ್ಳವನೂ, ಕೆಳಮುಖವಾಗಿ ನೋಡುವವನೂ ಆಗಿ ಕೈಮುಗಿದುಕೊಂಡು ಹೀಗೆಂದನು.

೧೫೮. "ನನ್ನ ತಂದೆಯು ನನ್ನ ಎಂಟನೆಯ ವಯಸ್ಸಿನಲ್ಲಿ ಮಡಿದನು. ಅನಂತರ ಪತಿವ್ರತೆಯಾದ ನನ್ನ ತಾಯಿಯು ದುಃಖಿತನೂ, ದೀನನೂ ಆದ ನನ್ನನ್ನು ತ್ಯಜಿಸಿ ಪತಿಯೊಡನೆ ಸಹಗಮನ ಮಾಡಿದಳು.

೧೫೯. ನಾನು ಬಾಲ್ಯದಲ್ಲಿಯೇ ಅತ್ಯಂತ ದುಃಖಗೊಂಡು ಇತರ ತಾಪಸರೊಡನೆ ವೈರಾಗ್ಯದಿಂದ ತೀರ್ಥಯಾತ್ರೆಗೆ ಹೊರಟೆನು.

೧೬೦. ನಾನು ವೇದಾಧ್ಯಯನ ಮಾಡಲಿಲ್ಲ. ಶಾಸ್ತ್ರವನ್ನು ಅವಲೋಕಿಸಲಿಲ್ಲ. ತೀರ್ಥಯಾತ್ರೆಯ ನಿಮಿತ್ತವಾಗಿ ನಿಮ್ಮ ಪಟ್ಟಣಕ್ಕೆ ಬಂದೆನು.

೧೬೧–೧೬೨. ಇಲ್ಲಿ ನನಗೆ ದುರಾತ್ಮನಾದ ಸುಭದ್ರನು ಮಾವನಾದನು. ಬ್ರಾಹ್ಮಣರೆ! ನಾನು ವಸಿಷ್ಠ ಗೋತ್ರದವನು. ಒಂದೇ ಪ್ರವರದವನು. ನನ್ನ ದೇಶವು ಗೌಡವೆಂಬುದು. ಪಟ್ಟಣವು ಮಧುಪುರವು. ಇಷ್ಟನ್ನು ಮಾತ್ರ ಅರಿತಿರುವೆನು" ಎಂದು ಹೇಳಿದನು. ಅನಂತರ ಆ ಬ್ರಾಹ್ಮಣರು, "ಯಾವನ ವಂಶವು ತಿಳಿಯುವುದಿಲ್ಲವೊ, ಅವನಿಗೆ ತಕ್ಕಡಿಯ ಮೂಲಕ ಪ್ರಾಯಶ್ಚಿತ್ತವನ್ನು ಮಾಡಬೇಕು.

ಸ ತ್ವಂ ಘಟಂ ಸಮಾರುಹ್ಯ ಬ್ರಾಹ್ಮಣ್ಯಾರ್ಥಂ ಚ ಕೇವಲಂ ।
ಶುದ್ಧಿಂ ಪ್ರಾಪ್ಯ ತತೋ ಭೋಗಾನ್ ಭುಂಕ್ಷ್ವಾತ್ರಸ್ಥೋಽಪಿ ಕೇವಲಂ ॥
ಸೋಽಬ್ರವೀತ್ಸಾಹಸಂ ಕೃತ್ವಾ ಸರ್ವಾನೇವ ದ್ವಿಜೋತ್ತಮಾನ್ ।
ಪ್ರತಿಗೃಹ್ಣಾಮ್ಯಹಂ ಕಾಮಂ ತಪ್ತಮಾಷಕಮೇವ ಚ ॥ ೧೬೪ ॥
ಪ್ರವಿಶಾಮಿ ಹುತಾಶಂ ವಾ ಭಕ್ಷಯಿಷ್ಯಾಮ್ಯಹಂ ವಿಷಂ ॥ ೧೬೫ ॥
ಕಿಂ ಪುನರ್ಘಟಿ ದಿವ್ಯಂ ಚ ಕ್ರಿಯಮಾಣಂ ಸುಖಾವಹಂ ।
ಬ್ರಾಹ್ಮಣಸ್ಯ ಕೃತೇ ವಿಪ್ರಾಶ್ಚಿತ್ತೇ ನೋ ಮಾಮಕೇ ಘೃಣಾ ॥ ೧೬೬ ॥
ಅಥ ತೇ ಬ್ರಾಹ್ಮಣಾಸ್ತಸ್ಯ ಘಟಾರೋಹಣಸಂಭವಂ ।
ಶುದ್ಧಿಂ ನಿರ್ದಿಶ್ಯ ವಾರಂ ಚ ಸೂರ್ಯಸ್ಯ ಚ ತತಃ ಪರಂ ।
ಜಗ್ಮುಃ ಸ್ವಂ ಸ್ವಂ ಗೃಹಂ ಸರ್ವೇ ಸೋಽಪಿ ವಿಪ್ರೋಽಂತ್ಯಜೋ ದ್ವಿಜಾಃ ॥
ತತಃ ಪ್ರಾಹ ನಿಜಾಂ ಭಾರ್ಯಾಂ ರಹಸ್ಯೇ ನೃಪಸತ್ತಮ ।
ಜ್ಞಾತೋಽಹಂ ಬ್ರಾಹ್ಮಣೈಃ ಸರ್ವೈರಂತ್ಯಜಾತಿಸಮುದ್ಭವಃ ।
ದೇಶಾಂತರಂ ಗಮಿಷ್ಯಾಮಿ ತ್ವಮಾಗಚ್ಛ ಮಯಾ ಸಹ ॥ ೧೬೮ ॥

ಭಾರ್ಯೋವಾಚ :—

ಅಹಮಗ್ನಿಂ ಪ್ರವೇಕ್ಷ್ಯಾಮಿ ನ ಯಾಸ್ಯಾಮಿ ತ್ವಯಾ ಸಹ ।
ಪಾಪಬುದ್ಧೇ ಪತಿಷ್ಯಾಮಿ ನ ಚಾಽಹಂ ನರಕಾಗ್ನಿಷು ॥ ೧೬೯ ॥

---

೧೬೩. ಆದುದರಿಂದ ನೀನು ಬ್ರಾಹ್ಮಣ್ಯಕ್ಕಾಗಿ ತಕ್ಕಡಿಯನ್ನೇರಿ ಶುದ್ಧನಾಗಿ ಇಲ್ಲಿಯೇ ಸುಖಭೋಗಿಯಾಗು'' ಎಂದರು.

೧೬೪–೧೬೫. ಅವನು ಸಾಹಸವನ್ನಾಶ್ರಯಿಸಿ ಸಮಸ್ತ ಬ್ರಾಹ್ಮಣರನ್ನು ಕುರಿತು, ''ನಾನು ತಪ್ತಮಾಷವನ್ನಾದರೂ ಹಿಡಿದುಕೊಳ್ಳುವೆನು. ಅಗ್ನಿಯನ್ನಾದರೂ ಪ್ರವೇಶಿಸುವೆನು. ವಿಷವನ್ನಾದರೂ ಕುಡಿಯುವೆನು.

೧೬೬. ಸುಖಕರವಾದ ಘಟಾರೋಹಣದ ವಿಷಯವೇನು? ನನಗೆ ಬ್ರಾಹ್ಮಣ್ಯಕ್ಕಾಗಿ ವಿಧಿಸಿರುವ ಪ್ರಾಯಶ್ಚಿತ್ತದಲ್ಲಿ ದಯೆಯಿಲ್ಲ'' ಎಂದನು.

೧೬೭. ತರುವಾಯ ಆ ಬ್ರಾಹ್ಮಣರು ಭಾನುವಾರದ ದಿನ ಆ ಅಂತ್ಯಜನಿಗೆ ಘಟಾರೋಹಣ ಶುದ್ಧಿಯನ್ನು ವಿಧಿಸಿ ತಮ್ಮ ತಮ್ಮ ಮನೆಗೆ ತೆರಳಿದರು. ಆ ಅಂತ್ಯಜನು ತನ್ನ ಮನೆಗೆ ಹೋದನು.

೧೬೮. ಬಳಿಕ ಅವನು ತನ್ನ ಪತ್ನಿಯನ್ನು ಕುರಿತು ಗುಟ್ಟಿನಲ್ಲಿ, ''ಇಲ್ಲಿಯ ಬ್ರಾಹ್ಮಣರು ನಾನು ಅಂತ್ಯಜನೆಂಬುದನ್ನು ತಿಳಿದಿರುವರು. ಆದುದರಿಂದ ನಾನು ದೇಶಾಂತರಕ್ಕೆ ಹೋಗುವೆನು. ನೀನು ನನ್ನೊಡನೆ ಬಾ'' ಎಂದನು.

೧೬೯. ಪತ್ನಿಯು ಹೇಳುತ್ತಾಳೆ :—ಪಾಪಿಯೆ! ನಾನು ಬೆಂಕಿಯನ್ನಾದರೂ ಪ್ರವೇಶಿಸುವೆನು. ನಿನ್ನೊಡನೆ ಬರುವುದಿಲ್ಲ. ನರಕಾಗ್ನಿಯಲ್ಲಿ ಬೀಳಲಾರೆನು.

ಬುಧ್ಯಮಾನಾ ನ ಸೇವಿಷ್ಯೇ ತ್ವಾಮಂತ್ಯಜಸಮುದ್ಭವಂ ।
ಪಾಪಸಂದೂಷಿತಂ ಸರ್ವಂ ತ್ವಂಯೈತತ್ಸ್ಥಾನಮುತ್ತಮಂ ॥ ೧೭೦ ॥
ತಥಾ ಮಮ ಪಿತುರ್ಹರ್ಮ್ಯಂ ಸಂವತ್ಸರಪ್ರಯಾಜಿನಃ ।
ತಸ್ಮಾದ್ದ್ರುತತರಂ ಗಚ್ಛ ಯಾವನ್ನೋ ವೇತ್ತಿ ಕಶ್ಚನ ॥ ೧೭೧ ॥
ನೋ ಚೇತ್ಪಾಪ ಸಮಾಚಾರ ಸಂಪ್ರಾಪ್ಸ್ಯಸಿ ಮಹಾಽಽಪದಂ ॥ ೧೭೨ ॥
ತತೋ ನಿಶಾಮುಖೇ ಪ್ರಾಪ್ತೇ ಕೌಪೀನಾವರಣಾನ್ವಿತಃ ।
ನಷ್ಟೋಽಭೀಷ್ಟಾಂ ದಿಶಂ ಪ್ರಾಪ್ಯ ತದಾ ಜೀವಿತಜಾದ್ಭಯಾತ್ ॥ ೧೭೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗರಾಷ್ಟಕುಲತ್ರೈಷ್ಯ್ಯವರ್ಣನಂ"
ನಾಮೈಕೋನದ್ವಿಶತತಮೋಽಧ್ಯಾಯಃ

---

೧೭೦–೧೭೧. ನೀನು ಅಂತ್ಯಜನೆಂದು ತಿಳಿದಿರುವುದರಿಂದ ನಿನ್ನನ್ನು ಸೇವಿಸೆನು. ಅಯ್ಯೋ ಪಾಪೀ! ನೀನು ಈ ಉತ್ತಮ ಸ್ಥಾನವನ್ನೂ, ಸಂವತ್ಸರ ಯಾಜಿಯಾದ ನನ್ನ ತಂದೆಯ ಮನೆಯನ್ನೂ ಕೆಡಿಸಿರುವೆ. ಆದುದರಿಂದ ನೀನು ಅಂತ್ಯಜನೆಂಬುದನ್ನು ಇಲ್ಲಿ ಯಾರಾದರೂ ತಿಳಿಯುವಷ್ಟರಲ್ಲಿ ಇಲ್ಲಿಂದ ಶೀಘ್ರವಾಗಿ ಹೊರಟುಹೋಗು.

೧೭೨. ಪಾಪಶೀಲನೆ! ನೀನು ಹಾಗೆ ಮಾಡದಿದ್ದರೆ ಮಹತ್ತಾದ ಆಪತ್ತನ್ನು ಹೊಂದುವೆ."

೧೭೩. ರಾತ್ರಿಯಾಗಲು ಅನಂತರ ಆ ಅಂತ್ಯಜನು ಪ್ರಾಣಭಯದಿಂದ ಕೌಪೀನವನ್ನು ಧರಿಸಿ ತನಗೆ ಇಷ್ಟವಾದ ದಿಕ್ಕಿಗೆ ತೆರಳಿ ಕಣ್ಮರೆಯಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗರಾಷ್ಟಕುಲಶ್ರೈಷ್ಠ್ಯವರ್ಣನ" ವೆಂಬ
ನೂರತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿಶತತಮೋಽಧ್ಯಾಯಃ

### ನಾಗರಜ್ಞಾತಿಮುಯ್ರ್ಯಾದಾವರ್ಣನಂ

**ವಿಶ್ವಾಮಿತ್ರ ಉವಾಚ:—**

**ತತಃ ಪ್ರಭಾತೇ ಸಂಜಾತೇ ಪ್ರೋದ್ಗತೇ ರವಿಮಂಡಲೇ ।**
**ಸಾ ಚಾಽಪಿ ದುಹಿತಾ ತಸ್ಯ ದೀಕ್ಷಿತಸ್ಯ ಮಹಾತ್ಮನಃ ॥ ೧ ॥**
**ರೋರೂಯಮಾಣಾಽಭ್ಯಗಮತ್ಪಿತರಂ ಮಾತರಂ ಪ್ರತಿ ।**
**ಪ್ರೋವಾಚ ಗದ್ಗದಂ ವಾಕ್ಯಂ ಬಾಷ್ಪವ್ಯಾಕುಲಲೋಚನಾ ॥ ೨ ॥**
**ತಾತಾಂಬ ಕಿಮಿದಂ ಪಾಪಂ ಯುವಾಭ್ಯಾಂ ಸಮನುಷ್ಠಿತಂ ।**
**ಅಂತ್ಯಜಸ್ಯ ಪ್ರದತ್ತಾಽಹಂ ಯತ್ಪಾಪಸ್ಯ ದುರಾತ್ಮನಃ ॥ ೩ ॥**
**ಸ ನಷ್ಟೋ ರಜನೀವಕ್ತ್ರೇ ಮಮಾವೇದ್ಯ ನಿಜಂ ಕುಲಂ ।**
**ತಸ್ಮಾದಹಂ ಪ್ರವೇಕ್ಷ್ಯಾಮಿ ಪ್ರದೀಪ್ತೇ ಹವ್ಯವಾಹನೇ ॥ ೪ ॥**
**ತಸ್ಯಾಸ್ತದ್ವಚನಂ ಶ್ರುತ್ವಾ ದೀಕ್ಷಿತಃ ಸ ಸುಭದ್ರಃ ।**
**ನಿಶ್ಚೇಷ್ಟಃ ಪತಿತೋ ಭೂಮೌ ವಾತಭಗ್ನ ಇವದ್ರುಮಃ ॥ ೫ ॥**
**ತತಃ ಸ ಶೀತತೋಯೇನ ಸಂಸಿಕ್ತಶ್ಚ ಪುನಃ ಪುನಃ ।**
**ಲಬ್ಧ್ವಾಽಶು ಚೇತನಾಂ ಕೃಚ್ಛ್ರಾತ್ಸ್ವಜನೈಃ ಪರಿವಾರಿತಃ ।**
**ಪ್ರಲಾಪಾನ್ವಿವಿಧಾಂಶ್ಚಕ್ರೇ ತಾಡಯನ್ ಸ್ವಶಿರೋಮುಹುಃ ॥ ೬ ॥**

---

## ಕನ್ನಡದ ಅನುವಾದ

### ನಾಗರಜ್ಞಾತಿಮುಯ್ರ್ಯಾದಾವರ್ಣನ

೧—೨. ವಿಶ್ವಾಮಿತ್ರನು ಹೇಳುತ್ತಾನೆ:—ತರುವಾಯ ಬೆಳಗ್ಗೆ ಸೂರ್ಯನು ಉದಯಿಸಲು ಆ ಸುಭದ್ರನ ಮಗಳು ಗೋಳಾಡುತ್ತ ತಾಯಿತಂದೆಗಳ ಹತ್ತಿರ ಬಂದು ಕಣ್ಣೀರನ್ನು ಸುರಿಸುತ್ತ ಗದ್ಗದ ಧ್ವನಿಯಿಂದ ಇಂತೆಂದಳು.

೩. "ಅಪ್ಪ! ಅಮ್ಮ! ನೀವು ನನ್ನನ್ನು ಪಾಪಿಯೂ, ದುರಾತ್ಮನೂ ಆದ ಅಂತ್ಯಜನಿಗೆ ದಾನಮಾಡಿ ಎಂತಹ ಪಾಪಕಾರ್ಯವನ್ನೆಸಗಿದಿರಿ.

೪. ಅವನು ನಿನ್ನೆ ಸಂಜೆ ನನಗೆ ತನ್ನ ಕುಲವನ್ನು ತಿಳಿಸಿ ಕಣ್ಮರೆಯಾದನು. ಆದುದರಿಂದ ನಾನು ಉರಿಯುತ್ತಿರುವ ಬೆಂಕಿಯನ್ನು ಪ್ರವೇಶಿಸುವೆನು."

೫—೬. ದೀಕ್ಷಿತನಾದ ಸುಭದ್ರನು ಮಗಳ ಆ ಮಾತನ್ನು ಕೇಳಿ ಗಾಳಿಯಿಂದ ಮುರಿದ ಮರದಂತೆ ನಿಶ್ಚಲನಾಗಿ ನೆಲದಲ್ಲಿ ಬಿದ್ದನು. ಬಳಿಕ ಅವನು ತಣ್ಣೀರಿನ ಸೇಚನದಿಂದ ಬೇಗನೆ ಜ್ಞಾನವನ್ನು ಪಡೆದು ಬಂಧುಗಳೊಡನೆ ತನ್ನ ತಲೆಯನ್ನು ಬಡಿದುಕೊಳ್ಳುತ್ತ ಬಗೆಬಗೆಯಾಗಿ ಗೋಳಾಡಿದನು.

ಅಥ ತೇ ಬ್ರಾಹ್ಮಣಾಃ ಸರ್ವೇ ತಸ್ಯ ಸಂಪರ್ಕದೂಷಿತಾಃ ।
ಭರ್ತೃಯಜ್ಞಂ ಸಮಾಸಾದ್ಯ ತೇನೈವ ಸಹಿತಾಸ್ತತಃ ॥ ೭ ॥
ಪ್ರೋಚುರ್ವಿನಯಸಂಯುಕ್ತಾಃ ಪ್ರೋಚ್ಚೈಸ್ತತ್ಸುತಯಾ ಸಹ ।
ಸುಭದ್ರೇಣ ನಿಜೇ ಹರ್ಮ್ಯೇ ಸುತಾಂ ದತ್ವಾ ನಿವೇಶಿತಃ ॥ ೮ ॥
ಚಂಡಾಲೋ ದ್ವಿಜರೂಪೋಽತ್ರ ಚಂದ್ರಪ್ರಭ ಇತಿ ಸ್ಮೃತಃ ॥ ೯ ॥
ಯಾವತ್ಸಂವತ್ಸರಂ ಸಾರ್ಧಂ ದೈವೇ ಪಿತ್ರ್ಯೇ ಚ ಯೋಜಿತಃ ।
ಪಾಪಕರ್ಮಾ ನ ವಿಜ್ಞಾತಃ ಸೋಽಧುನಾ ಪ್ರಕಟೋಽಭವತ್ ॥ ೧೦ ॥
ಸುಭದ್ರಸ್ಯಾನುಷಂಗೇಣ ಸ್ಥಾನಂ ಸರ್ವಂ ಪ್ರದೂಷಿತಂ ।
ಅಂತ್ಯಜೇನ ಮಹಾಭಾಗ ತತ್ಕುರುಷ್ವ ವಿನಿಗ್ರಹಂ ॥ ೧೧ ॥
ಕೈಶ್ಚಿತ್ತಸ್ಯ ಗೃಹೇ ಭುಕ್ತಂ ಜಲಂ ಪೀತಂ ತಥಾಽಪರೈಃ ।
ಅನ್ಯೈಶ್ಚ ಗೃಹಮಾನೀಯ ಪ್ರದತ್ತಂ ಭೋಜನಂ ತಥಾ ॥ ೧೨ ॥
ಕಿಂ ವಾ ತೇ ಬಹುನೋಕ್ತೇನ ನ ಸ ಕೋಽಸ್ತಿ ದ್ವಿಜೋತ್ತಮ ।
ಸಂಕರೋ ಯಸ್ಯ ನೋ ಜಾತಸ್ತಸ್ಯ ಪಾಪಸ್ಯ ಸಂಭವಃ ॥ ೧೩ ॥
ತ್ವಯಾ ಸ್ಥಾನಮಿದಂ ಪುಣ್ಯಂ ಕೃತಂ ಪೂರ್ವಂ ಮಹಾಮತೇ ।
ಸರ್ವೇಷಾಂ ಚ ಗುರುಸ್ತ್ವಂ ಹಿ ತಸ್ಮಾಚ್ಛುದ್ಧಿಂ ವದಸ್ವ ನಃ ॥ ೧೪ ॥

---

೭–೧೦. ಅನಂತರ ಆ ಸುಭದ್ರನ ಸಂಪರ್ಕದಿಂದ ದೂಷಿತರಾದ ಬ್ರಾಹ್ಮಣರೆಲ್ಲ ಅವನೊಡನೆ ಅವನ ಮಗಳಿಂದ ಸಹಿತರಾಗಿ ಭರ್ತೃಯಜ್ಞನೆಡೆಗೆ ಹೋಗಿ ವಿನಯದಿಂದ ಇಂತೆಂದರು. "ಸುಭದ್ರನು ತನ್ನ ಅರಮನೆಯಲ್ಲಿ ಚಂದ್ರಪ್ರಭನೆಂಬ ದ್ವಿಜರೂಪಿಯಾದ ಚಂಡಾಲನಿಗೆ ಕನ್ಯೆಯನ್ನಿತ್ತು ಅವನನ್ನು ಇರಿಸಿಕೊಂಡು ಒಂದು ವರ್ಷಕಾಲ ಅವನನ್ನು ದೇವ, ಪಿತೃಕಾರ್ಯಗಳಲ್ಲಿ ನಿಯೋಜಿಸಿದ್ದಾನೆ. ಮೊದಲು ಚಂಡಾಲನೆಂದು ತಿಳಿಯಲ್ಪಡದ ಅವನು ಈಗ ಪ್ರಕಟವಾದನು.

೧೧. ಮಹಾತ್ಮನೆ! ಸುಭದ್ರನು ಅಂತ್ಯಜನಿಗೆ ಕನ್ಯೆಯನ್ನು ಕೊಟ್ಟದ್ದರಿಂದ ನಮ್ಮಾಸ್ಥಾನವು ದೂಷಿತವಾಗಿದೆ. ಆದುದರಿಂದ ನೀನು ಆ ದೋಷವನ್ನು ಪರಿಹರಿಸು.

೧೨–೧೩. ಕೆಲವರು ಅವನ ಮನೆಯಲ್ಲಿ ಭೋಜನ ಮಾಡಿದ್ದಾರೆ. ಇನ್ನು ಕೆಲವರು ನೀರನ್ನು ಕುಡಿದಿದ್ದಾರೆ. ಮತ್ತೆ ಕೆಲವರು ಅವನನ್ನು ತಮ್ಮ ಮನೆಗೆ ಕರೆದು ಭೋಜನ ಮಾಡಿಸಿದ್ದಾರೆ. ಬಹುವಾಗಿ ಹೇಳಿ ಏನು ಪ್ರಯೋಜನ? ಅವನ ಪಾಪದ ಸಂಬಂಧವಿಲ್ಲದವನು ಇಲ್ಲಿ ಯಾರೂ ಇಲ್ಲ.

೧೪. ಜ್ಞಾನಿಯೆ! ನೀನು ಹಿಂದೆ ಈ ಸ್ಥಳವನ್ನು ಪವಿತ್ರಗೊಳಿಸಿರುವೆ. ನೀನು ಎಲ್ಲರಿಗೂ ಗುರುವಾಗಿದ್ದೀಯೆ. ಆದುದರಿಂದ ನಮಗೆ ಪ್ರಾಯಶ್ಚಿತ್ತವನ್ನು ಹೇಳು."

ತತಃ ಸಂಚಿಂತ್ಯ ಸುಚಿರಂ ಸ್ಮೃತಿಶಾಸ್ತ್ರಾಣ್ಯನೇಕಶಃ ।
ಪ್ರಾಯಶ್ಚಿತ್ತಂ ದದೌ ತೇಷಾಂ ಸರ್ವೇಷಾಂ ಸ ದ್ವಿಜನ್ಮನಾಂ ॥ ೧೫ ॥
ಚಾಂದ್ರಾಯಣಶತಂ ಪ್ರಾದಾತ್ಸುಭದ್ರಾಯಾಹಿತಾಗ್ನಯೇ ।
ಸರ್ವಭದ್ರಪರಿತ್ಯಾಗಂ ಪುನರಾಧಾನಮೇವ ಚ ॥ ೧೬ ॥
ಲಕ್ಷಹೋಮವಿಧಾನಂ ಚ ಗೃಹಮಧ್ಯವಿಶುದ್ಧಯೇ ।
ವಹ್ನಿಪ್ರವೇಶನಂ ತಸ್ಯಾಸ್ತತ್ಸುತಾಯಾಃ ಪ್ರಕೀರ್ತಿತಂ ॥ ೧೭ ॥
ಯೇನ ಯಾವಂತಿ ಭೋಜ್ಯಾನಿ ತಸ್ಯ ಭುಕ್ತಾನಿ ಮಂದಿರೇ ।
ತಸ್ಯ ತಾವಂತಿ ಕೃಚ್ಛ್ರಾಣಿ ತೇನೋಕ್ತಾನಿ ಮಹಾತ್ಮನಾ ॥ ೧೮ ॥
ಯೈರ್ಜಲಾನಿ ಪ್ರಪೀತಾನಿ ಯಾವನ್ಮಾತ್ರಾಣಿ ತದ್ಗೃಹೇ ।
ಪ್ರಾಜಾಪತ್ಯಾನಿ ದತ್ತಾನಿ ತೇಭ್ಯಸ್ತಾವಂತಿ ಪಾರ್ಥಿವ ॥ ೧೯ ॥
ಬ್ರಾಹ್ಮಣಾನಾಂ ತಥಾಽನ್ಯೇಷಾಂ ತತ್ರ ಸ್ಥಾನೇ ನಿವಾಸಿನಾಂ ।
ತತ್ಸ್ಪರ್ಶದೂಷಿತಾನಾಂ ಚ ಪ್ರಾಜಾಪತ್ಯಂ ಪೃಥಕ್ ಪೃಥಕ್ ॥ ೨೦ ॥
ಸ್ತ್ರೀಶೂದ್ರಾಣಾಂ ತದರ್ಧಂ ಚ ತದರ್ಧಂ ಬಾಲವೃದ್ಧಯೋಃ ।
ಮೃಣ್ಮಯಾನಾಂ ಚ ಭಾಂಡಾನಾಂ ಪರಿತ್ಯಾಗೋ ನಿವೇದಿತಃ ॥ ೨೧ ॥

---

೧೫. ಆ ಭರ್ತೃಯಜ್ಞನು ಬಹಳ ಹೊತ್ತು ಅನೇಕ ಸ್ಮೃತಿಶಾಸ್ತ್ರಗಳನ್ನು ವಿಮರ್ಶಿಸಿ ಆ ಬ್ರಾಹ್ಮಣರಿಗೆ ಪ್ರಾಯಶ್ಚಿತ್ತವನ್ನು ವಿಧಿಸಿದನು.

೧೬. ಆಹಿತಾಗ್ನಿಯಾದ ಸುಭದ್ರನಿಗೆ ನೂರು ಚಾಂದ್ರಾಯಣ ವ್ರತವನ್ನೂ, ಸಕಲ ಪಾತ್ರೆಗಳ ತ್ಯಾಗವನ್ನೂ, ಮರಳಿ ಅಗ್ನ್ಯಾಧಾನವನ್ನೂ ವಿಧಿಸಿದನು.

೧೭. ಮನೆಯು ಶುದ್ಧವಾಗುವುದಕ್ಕೆ ಲಕ್ಷ ಹೋಮವನ್ನೂ, ಅವನ ಮಗಳಿಗೆ ಅಗ್ನಿಪ್ರವೇಶವನ್ನೂ ವಿಧಿಸಿದನು.

೧೮. ಆ ಬ್ರಾಹ್ಮಣನ ಮನೆಯಲ್ಲಿ ಯಾರು ಎಷ್ಟು ಭೋಜನ ಮಾಡಿದ್ದಾರೊ, ಅವರಿಗೆ ಅಷ್ಟು ಕೃಚ್ಛ್ರಗಳನ್ನು ಹೇಳಿದನು.

೧೯. ಅವನ ಮನೆಯಲ್ಲಿ ಯಾರು ಎಷ್ಟು ನೀರನ್ನು ಕುಡಿದಿರುವರೊ, ಅವರಿಗೆ ಅಷ್ಟು ಪ್ರಾಜಾಪತ್ಯ ಪ್ರಾಯಶ್ಚಿತ್ತವನ್ನು ವಿಧಿಸಿದನು.

೨೦. ಹಾಗೆಯೇ ಅವನ ಸ್ಪರ್ಶದಿಂದ ದೂಷಿತರಾಗಿ ಅಲ್ಲಿ ವಾಸಮಾಡುತ್ತಿರುವ ಬ್ರಾಹ್ಮಣರಿಗೂ ಇತರರಿಗೂ ಪ್ರತ್ಯೇಕವಾಗಿ ಪ್ರಾಜಾಪತ್ಯ ಪ್ರಾಯಶ್ಚಿತ್ತವನ್ನು ವಿಧಿಸಿದನು.

೨೧—೨೨. ಸ್ತ್ರೀಯರು, ಶೂದ್ರರು ಇವರಿಗೆ ಅದರ ಅರ್ಧಭಾಗ ಪ್ರಾಯಶ್ಚಿತ್ತವನ್ನೂ, ಬಾಲಕರು ಮತ್ತು ಮುದುಕರಿಗೆ ಅದರ ಅರ್ಧಭಾಗ ಪ್ರಾಯಶ್ಚಿತ್ತವನ್ನೂ ಹೇಳಿ ಸಮಸ್ತ ಜನರೂ ಮಣ್ಣಿನ ಪಾತ್ರೆ, ರಸವಸ್ತುಗಳನ್ನು ತ್ಯಜಿಸಬೇಕೆಂದೂ,

ಸರ್ವೇಷಾಮೇವ ಲೋಕಾನಾಂ ರಸತ್ಯಾಗಸ್ತಥೈವ ಚ ।
ಕೋಟಿಹೋಮಸ್ತು ನಿರ್ದಿಷ್ಟೋ ಬ್ರಹ್ಮಸ್ಥಾನೇ ಯಥೋದಿತಃ ।
ಸರ್ವಸ್ಥಾನವಿಶುದ್ಧ್ಯರ್ಥಂ ಸ್ಥಾನವಿತ್ತೇನ ಕೇವಲಂ ॥ ೨೨ ॥
ಅಥೋವಾಚ ಪುನರ್ವಿಪ್ರಾನ್ ಸ ಕೃತ್ವಾ ಚೋಚ್ಛ್ರಿತಂ ಭುಜಂ ।
ತಾರನಾದೇನ ಮಹತಾ ಸರ್ವಾಂಸ್ತಾನ್ನಗರೋದ್ಭವಾನ್ ॥ ೨೩ ॥
ಸುಭದ್ರೇಣ ಚ ಸರ್ವಸ್ವಂ ದೇಯಂ ವಿಪ್ರೇಭ್ಯ ಏವ ಚ ।
ಚತುರ್ಥಾಂಶಶ್ಚ ಯೈರ್ಭುಕ್ತಂ ತದ್ಗೃಹೇ ಸ್ವಧನಸ್ಯ ಚ ॥ ೨೪ ॥
ಅಷ್ಟಾಂಶಂ ಯೈರ್ಜಲಂ ಪೀತಂ ಗೋದಾನಂ ಸ್ಪರ್ಶಸಂಭವಂ ।
ಶೇಷಾಣಾಮಪಿ ಲೋಕಾನಾಂ ಯಥಾ ಶಕ್ತ್ಯಾ ತು ದಕ್ಷಿಣಾ ॥ ೨೫ ॥
ದೀಕ್ಷಿತೇನ ಜಪಃ ಕಾರ್ಯೋ ಲಕ್ಷಗಾಯತ್ರಿಸಂಭವಃ ।
ಶೇಷೈರ್ವಿಪ್ರೈರ್ಯಥಾ ವಿತ್ತಂ ತಥಾ ಕಾರ್ಯೋ ಜಪೋಽಖಿಲಃ ॥ ೨೬ ॥
ಅಹಂ ಚೈವ ಕರಿಷ್ಯಾಮಿ ಪ್ರಾಣಾಯಾಮಶತತ್ರಯಂ ।
ನಿತ್ಯಮೇವ ದ್ವಿಜಶ್ರೇಷ್ಠಾಃ ಷಷ್ಠಕಾಲಕೃತಾಶನಃ ॥ ೨೭ ॥
ಯಾವತ್ಸಂವತ್ಸರಸ್ಯಾಂತಂ ತತಃ ಶುದ್ಧಿರ್ಭವಿಷ್ಯತಿ ।
ಜನಸಂಪರ್ಕಸಂಜಾತಾ ಸ್ತೈವಂ ತಸ್ಯ ದುರಾತ್ಮನಃ ॥ ೨೮ ॥

---

ಆ ಬ್ರಹ್ಮಸ್ಥಾನದಲ್ಲಿ ಸ್ಥಳಶುದ್ಧಿಗಾಗಿ ಅಲ್ಲಿಯ ದ್ರವ್ಯದಿಂದಲೇ ಕೋಟಿ ಹೋಮಗಳನ್ನು ಮಾಡಬೇಕೆಂದೂ ವಿಧಿಸಿದನು.

೨೩. ಬಳಿಕ ಆ ಭರ್ತೃಯಜ್ಞನು ಸಕಲ ನಗರ ಬ್ರಾಹ್ಮಣರನ್ನುದ್ದೇಶಿಸಿ ತೋಳನ್ನೆತ್ತಿಕೊಂಡು ಗಟ್ಟಿಯಾಗಿ ಹೀಗೆಂದನು.

೨೪–೨೫. ಸುಭದ್ರನು ಬ್ರಾಹ್ಮಣರಿಗೆ ತನ್ನ ಸಕಲ ಸ್ವತ್ತನ್ನೂ, ಅವನ ಮನೆಯಲ್ಲಿ ಭೋಜನ ಮಾಡಿದವರು ತಮ್ಮ ದ್ರವ್ಯದಲ್ಲಿ ನಾಲ್ಕನೆಯ ಒಂದು ಭಾಗವನ್ನೂ, ಜಲಪಾನ ಮಾಡಿದವರು ಎಂಟನೆಯ ಒಂದು ಭಾಗವನ್ನೂ, ಸ್ಪರ್ಶಮಾಡಿದವರು ಗೋದಾನವನ್ನೂ, ಇತರ ಜನರು ತಮ್ಮ ಶಕ್ತ್ಯನುಸಾರ ದಕ್ಷಿಣೆಯನ್ನೂ ಕೊಡಬೇಕು.

೨೬. ದೀಕ್ಷಿತನು ಲಕ್ಷ ಗಾಯತ್ರಿ ಜಪ ಮಾಡಬೇಕು. ಇತರ ಬ್ರಾಹ್ಮಣರು ತಮ್ಮ ದ್ರವ್ಯಕ್ಕನುಸಾರವಾಗಿ ಜಪ ಮಾಡಬೇಕು.

೨೭–೨೮. ನಾನೂ ನಿತ್ಯವೂ ಒಂದು ವರ್ಷದವರೆಗೆ ಮುನ್ನೂರು ಪ್ರಾಣಾಯಾಮಗಳನ್ನು ಮಾಡಿ, ಸಾಯಂಕಾಲ ಆಹಾರವನ್ನು ಸ್ವೀಕರಿಸುವೆನು. ಇದರಿಂದ ಆ ದುರಾತ್ಮನ ಸಂಪರ್ಕದಿಂದುಂಟಾದ ಜನರ ದೋಷವು ಪರಿಹಾರವಾಗಿ ಶುದ್ಧಿಯುಂಟಾಗುವುದು.

ಏವಮುಕ್ತ್ವಾ ತತೋ ಭೂಯಃ ಸ ಪ್ರೋವಾಚ ದ್ವಿಜೋತ್ತಮಾನ್ ।
ಅಥಾಽಽದ್ಯಾಸ್ಮಧ್ಯಗಾಸ್ಯೇನ ಬ್ರಹ್ಮಸ್ಥಾನ ಸಮಾಶ್ರಯಾನ್ ॥ ೨೯ ॥
ಅದ್ಯಪ್ರಭೃತಿ ಯಃ ಕನ್ಯಾಮವಿದಿತ್ವಾ ತು ನಾಗರಂ ।
ನಾಗರೋ ದಾಸ್ಯತಿ ಕ್ವಾಪಿ ಪತಿತಃ ಸ ಭವಿಷ್ಯತಿ ॥ ೩೦ ॥
ಅಶ್ರಾದ್ಧೇಯೋ ಹ್ಯಪಾಂಕ್ತೇಯೋ ನಾಗರಾಣಾಂ ವಿಶೇಷತಃ ॥ ೩೧ ॥
ಯಃ ಶ್ರಾದ್ಧಂ ನಾಗರಂ ಮುಕ್ತ್ವಾ ಹ್ಯನ್ಯಸ್ಮೈ ಸಂಪ್ರದಾಸ್ಯತಿ ।
ವಿಮುಖಾಸ್ತಸ್ಯ ಯಾಸ್ಯಂತಿ ಪಿತರೋ ವಿಬುಧೈಃ ಸಹ ॥ ೩೨ ॥
ನಾಗರೇಣ ವಿನಾ ಯಸ್ತು ಸೋಮಪಾನಂ ಕರಿಷ್ಯತಿ ।
ಸ ಕರಿಷ್ಯತ್ಯಸಂದಿಗ್ಧಂ ಮದ್ಯಪಾನಂ ತು ನಾಗರಃ ।
ತನ್ಮತೇನ ವಿನಾ ಯಸ್ತು ಶ್ರಾದ್ಧಕರ್ಮ ಕರಿಷ್ಯತಿ ॥ ೩೩ ॥
ತತಃ ಸರ್ವಂ ವೃಥಾ ತಸ್ಯ ಭವಿಷ್ಯತಿ ನ ಸಂಶಯಃ ।
ವಿಶುದ್ಧಿರಹಿತಂ ಯಸ್ತು ನಾಗರಂ ಭೋಜಯಿಷ್ಯತಿ ॥ ೩೪ ॥
ಶ್ರಾದ್ಧೇ ತಸ್ಯಾಽಪಿ ತತ್ಸರ್ವಂ ವ್ಯರ್ಥತಾಂ ಸಂಪ್ರಯಾಸ್ಯತಿ ।
ಸರ್ವೇಷಾಂ ನಾಗರಾಣಾಂ ಚ ಮರ್ಯಾದೇಯಂ ಕೃತಾ ಮಯಾ ॥ ೩೫ ॥
ತಸ್ಮಾತ್ಸರ್ವಪ್ರಯತ್ನೇನ ಶುದ್ಧಿಃ ಕಾರ್ಯಾ ದ್ವಿಜೋತ್ತಮೈಃ ।
ವರ್ಷೇ ವರ್ಷೇ ತು ಸಂಪ್ರಾಪ್ತೇ ಸ್ವಸ್ಥಾನಸ್ಯ ವಿಶುದ್ಧಯೇ ॥ ೩೬ ॥

---

೨೯. ಆ ಭರ್ತೃಯಜ್ಞನು ಹೀಗೆ ನುಡಿದು ಬ್ರಹ್ಮಸ್ಥಾನದ ಆದ್ಯ ಬ್ರಾಹ್ಮಣರನ್ನು ಕುರಿತು ಮಧ್ಯಗನ ಮುಖದಿಂದ ಹೀಗೆಂದನು.

೩೦. ಇದು ಮೊದಲ್ಗೊಂಡು ಯಾವನಾದರೂ ನಾಗರನು ನಾಗರನೆಂಬುದನ್ನರಿಯದೆ ಯಾರಿಗಾದರೂ ಕನ್ಯಾದಾನ ಮಾಡಿದರೆ ಅವನು ಪತಿತನಾಗುವನು.

೩೧. ಮತ್ತು ನಾಗರರಿಗೆ ಶ್ರಾದ್ಧಾನರ್ಹನೂ, ಪಂಕ್ತಿಬಾಹ್ಯನೂ ಆಗುವನು.

೩೨. ನಾಗರನನ್ನು ತ್ಯಜಿಸಿ ಇತರ ಬ್ರಾಹ್ಮಣನಿಂದ ಶ್ರಾದ್ಧಗೈಯ್ಯುವವನ ಪಿತೃಗಳು ದೇವತೆಗಳೊಡನೆ ವಿಮುಖರಾಗುವರು.

೩೩–೩೫. ನಾಗರನನ್ನು ಬಿಟ್ಟು ಸೋಮಪಾನ ಮಾಡಿದವನು ನಿಶ್ಚಯವಾಗಿಯೂ ಮದ್ಯಪಾನ ಮಾಡಿದವನಂತಾಗುವನು. ಆ ನಾಗರನ ಅನುಮತಿಯಿಲ್ಲದೆ ಶ್ರಾದ್ಧಮಾಡಿದರೆ ಅದು ನಿಜವಾಗಿಯೂ ವ್ಯರ್ಥವಾಗುವುದು. ಶ್ರಾದ್ಧದಲ್ಲಿ ಶುದ್ಧನಲ್ಲದ ನಾಗರನನ್ನು ಭೋಜನ ಮಾಡಿಸಿದವನ ಶ್ರಾದ್ಧವು ನಿಷ್ಫಲವಾಗುವುದು. ಎಲ್ಲ ನಾಗರರಿಗೂ ಈ ನಿಯಮವನ್ನು ಮಾಡಿದ್ದೇನೆ.

೩೬. ಆದುದರಿಂದ ಪ್ರತಿವರ್ಷವೂ ತಮ್ಮ ಸ್ಥಾನದ ಶುದ್ಧಿಗಾಗಿ ಬ್ರಾಹ್ಮಣರಿಂದ ಶುದ್ಧಿ ಕರ್ಮವನ್ನು ಮಾಡಿಸಬೇಕು.

**ವಿಶ್ವಾಮಿತ್ರ ಉವಾಚ :—**

**ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನೃಪೋತ್ತಮ ।**
**ಶ್ರಾದ್ಧಾರ್ಹಾ ನಾಗರಾ ಯೇನ ನಾಗರಾಣಾಂ ವ್ಯವಸ್ಥಿತಾಃ ।**
**ಭರ್ತೃಯಜ್ಞೇನ ಮರ್ಯಾದಾ ಕೃತಾ ತೇಷಾಂ ಯಥಾ ಪುರಾ ॥ ३೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ**
**ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ**
**"ನಾಗರಜ್ಞಾತಿಮರ್ಯಾದಾವರ್ಣನಂ" ನಾಮ**
**ದ್ವಿಶತತಮೋಽಧ್ಯಾಯಃ**

---

೩೭. ವಿಶ್ವಾಮಿತ್ರನು ಹೇಳುತ್ತಾನೆ :—ದೊರೆಯೆ! ನೀನು ಕೇಳಿದ ನಾಗರರಿಗೆ ನಾಗರರೇ ಶ್ರಾದ್ಧಾರ್ಹರೆಂಬುದನ್ನೂ, ಭರ್ತೃಯಜ್ಞನು ಹಿಂದೆ ಮಾಡಿದ ನಿಯಮವನ್ನೂ ನಿನಗೆ ಹೇಳಿರುತ್ತೇನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗರಜ್ಞಾತಿಮರ್ಯಾದಾವರ್ಣನ"ವೆಂಬ
ಇನ್ನೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟೈಕೋತ್ತರದ್ವಿಶತತಮೋಽಧ್ಯಾಯಃ

## ನಾಗರಪ್ರಶ್ನನಿರ್ಣಯವರ್ಣನಂ

ವಿಶ್ವಾಮಿತ್ರ ಉವಾಚ :—

ಅಥ ತೇ ಬ್ರಾಹ್ಮಣಾಃ ಸರ್ವೇ ಭರ್ತೃಯಜ್ಞಂ ಮಹಾಮತಿಂ ।
ಕೃತಾಂಜಲಿಪುಟಾ ಭೂತ್ವಾ ಸ್ತುತಿಂ ಕೃತ್ವಾ ವಚೋಽಬ್ರುವನ್ ॥ ೧ ॥
ಯದೇತದ್ಭವತಾ ಪ್ರೋಕ್ತಂ ಶೋಧಿತೋ ಯೋ ಭವೇದ್ದ್ವಿಜಃ ।
ಶ್ರಾದ್ಧಸ್ಯ ಕನ್ಯಕಾಯಾಶ್ಚ ಸೋಮಪಾನಸ್ಯ ಸೋಽರ್ಹತಿ ॥ ೨ ॥
ಕಥಂ ಶುದ್ಧಿಃ ಪ್ರಕರ್ತವ್ಯಾ ತಸ್ಯ ಸರ್ವಂ ಬ್ರವೀಹಿ ನಃ ।
ನಾಗರಸ್ಯ ಸಮಸ್ತಸ್ಯ ದೇಶಾಂತರಗತಸ್ಯ ಚ ॥ ೩ ॥
ದೇಶಾಂತರಪ್ರಜಾತಸ್ಯ ತತ್ರ ಜಾತಸ್ಯ ವಾ ಪುನಃ ।
ಅಜ್ಞಾತಪಿತೃವರ್ಗಸ್ಯ ಸಾಮಾನ್ಯಂ ಪದಮಿಚ್ಛತಃ ॥ ೪ ॥
ಏತನ್ನಃ ಸರ್ವಮಾಚಕ್ಷ್ವ ವಿಸ್ತರೇಣ ಮಹಾಮತೇ ॥ ೫ ॥

ವಿಶ್ವಾಮಿತ್ರ ಉವಾಚ :—

ತೇಷಾಂ ತದ್ವಚನಂ ಶ್ರುತ್ವಾ ಬ್ರಾಹ್ಮಣಾನಾಂ ನೃಪೋತ್ತಮ ।
ಅಬ್ರವೀದ್ಭರ್ತೃಯಜ್ಞಸ್ತು ಸ್ವಾಭಿಪ್ರಾಯಂ ಸುಸಮ್ಮತಂ ॥ ೬ ॥

---

## ಕನ್ನಡದ ಅನುವಾದ

### ನಾಗರಪ್ರಶ್ನನಿರ್ಣಯವರ್ಣನ

೧. ವಿಶ್ವಾಮಿತ್ರನು ಹೇಳುತ್ತಾನೆ:—ಬಳಿಕ ಆ ಬ್ರಾಹ್ಮಣರೆಲ್ಲ ಆ ಭರ್ತೃಯಜ್ಞನನ್ನು ಕೈಮುಗಿದು ಆತನನ್ನು ಕುರಿತು ಸ್ತುತಿಸಿ ಹೀಗೆಂದರು.

೨. ಮುನಿಯೆ! ನೀನು ಶುದ್ಧಿಗೊಂಡ ಬ್ರಾಹ್ಮಣನು ಶ್ರಾದ್ಧ, ಕನ್ಯಾದಾನ, ಸೋಮಪಾನಗಳಿಗೆ ಅರ್ಹನಾಗುವನೆಂದು ಹೇಳಿರುವೆ.

೩–೫. ಪ್ರಾಜ್ಞನೆ! ದೇಶಾಂತರಕ್ಕೆ ಹೋದ, ದೇಶಾಂತರದಲ್ಲಿ ಹುಟ್ಟಿದ, ತಿಳಿಯದ ತಂದೆ ತಾಯಿಗಳುಳ್ಳ, ಸಾಮಾನ್ಯವಾಗಿ ನಾಗರನೆಂದು ಹೆಸರನ್ನು ಪಡೆದಿರುವ ಸಮಸ್ತ ನಾಗರರನ್ನು ಶುದ್ಧಿಮಾಡುವುದು ಹೇಗೆ? ಇದನ್ನು ನಮಗೆ ವಿಸ್ತಾರವಾಗಿ ಹೇಳು.

೬. ವಿಶ್ವಾಮಿತ್ರನು ಹೇಳುತ್ತಾನೆ:—ನೃಪವರ್ಯನೆ! ಆ ಭರ್ತೃಯಜ್ಞನು ಬ್ರಾಹ್ಮಣರ ಮಾತನ್ನು ಕೇಳಿ ಶಾಸ್ತ್ರಸಮ್ಮತವಾದ ತನ್ನ ಅಭಿಪ್ರಾಯವನ್ನು ಹೇಳಿದನು.

ಭರ್ತೃಯಜ್ಞ ಉವಾಚ:—
ಪ್ರಶ್ನಭಾರೋ ಮಹಾನೇಷ ಭವದ್ಭಿಃ ಸಮುದಾಹೃತಃ ।
ತಥಾಽಪಿ ಕಥಯಿಷ್ಯಾಮಿ ನಮಸ್ಕೃತ್ಯ ಸ್ವಯಂಭುವಮ್ ॥ ೭ ॥
ಅಜ್ಞಾತ ಪಿತೃವಂಶೋ ಯೋ ದೂರಾದಪಿ ಸಮಾಗತಃ ।
ಸಾಮಾನ್ಯಂ ವಾಂಛತೇ ಪದ್ಯಂ ನಾಗರೋಽಸ್ಮೀತಿ ಕೀರ್ತಯನ್ ॥ ೮ ॥
ತಸ್ಯ ಶುದ್ಧಿಃ ಪ್ರದಾತವ್ಯಾ ಮುಖ್ಯೈಃ ಶಾಂತೈಃ ಶುಭೈರ್ದ್ವಿಜೈಃ ।
ಗರ್ತಾ ತೀರ್ಥೋದ್ಭವಂ ವಿಪ್ರಂ ಕೃತ್ವಾ ಚೈವ ಪುರಸ್ಸರಮ್ ॥ ೯ ॥
ವಿಶುದ್ಧಿಂ ಯಾಚಮಾನಸ್ಯ ಯದಿ ಯಚ್ಛಂತಿ ನೋ ದ್ವಿಜಾಃ ।
ಕಾಮಾದ್ವಾ ಯದಿ ವಾ ಕ್ರೋಧಾತ್ಪ್ರದ್ವೇಷಾದ್ವಾ ಚ್ಯುತೇರ್ಭಯಾತ್ ॥
ಬ್ರಹ್ಮಹತ್ಯೋದ್ಭವಂ ಪಾಪಂ ಸರ್ವೇಷಾಂ ತತ್ರ ಜಾಯತೇ ।
ತಸ್ಮಾದಭ್ಯಾಗತೋ ಯಸ್ತು ದೂರಾದಪಿ ವಿಶೇಷತಃ ॥ ೧೧ ॥
ತಸ್ಯ ಶುದ್ಧಿಃ ಪ್ರದಾತವ್ಯಾ ಪ್ರಯತ್ನೇನ ದ್ವಿಜೋತ್ತಮೈಃ ।
ಶುದ್ಧಿಂ ತು ತ್ರಿವಿಧಾಂ ಪ್ರಾಪ್ತೋ ಮಮ ವಾಕ್ಯಸಮುದ್ಭವಾಮ್ ॥ ೧೨ ॥
ಸ ಶುದ್ಧೋ ನಾಗರೋ ಜ್ಞೇಯೋ ಜಾತೋ ದೇಶಾಂತರೇಷ್ವಪಿ ।
ಪೂರ್ವಂ ವಿಶೋಧಯೇದ್ವಂಶಂ ತತೋ ಮಾತೃಕುಲಂ ಸ್ಮೃತಮ್ ॥ ೧೩ ॥
ತತಃ ಶೀಲಂ ತ್ರಿಭಿಃ ಶುದ್ಧಃ ಸಾಮಾನ್ಯಂ ಪದಮರ್ಹತಿ ॥ ೧೪ ॥

---

೭. ಭರ್ತೃಯಜ್ಞನು ಹೇಳುತ್ತಾನೆ:—ನೀವು ಕೇಳಿದ ಪ್ರಶ್ನೆಯ ಭಾರವು ದೊಡ್ಡದಾದುದು. ಆದರೂ ಬ್ರಹ್ಮನನ್ನು ನಮಸ್ಕರಿಸಿ ಹೇಳುವೆನು.

೮. ತಂದೆಯ ವಂಶವನ್ನರಿಯದ ದೂರದೇಶಕ್ಕೆ ಬಂದ ನಾಗರನೂ ತಾನು ನಾಗರನೆಂದು ಸಾಮಾನ್ಯವಾದ ಹೆಸರನ್ನು ಹೇಳಿಕೊಳ್ಳುವನು.

೯. ಅವನನ್ನು ಮುಖ್ಯರಾದ ಶಾಂತ ಬ್ರಾಹ್ಮಣರು ಗರ್ತಾತೀರ್ಥದ ಬ್ರಾಹ್ಮಣನನ್ನು ಮುಂದಿರಿಸಿಕೊಂಡು ಶುದ್ಧಿಮಾಡಬೇಕು.

೧೦–೧೪. ಶುದ್ಧಿಯನ್ನು ಬೇಡುವವನನ್ನು ಬ್ರಾಹ್ಮಣರು ಕಾಮದಿಂದಾಗಲಿ, ಕ್ರೋಧದಿಂದಾಗಲಿ, ದ್ವೇಷದಿಂದಾಗಲಿ, ಬ್ರಾಹ್ಮಣ್ಯ ಚ್ಯುತಿಯ ಭಯದಿಂದಾಗಲಿ ಶುದ್ಧಿಯನ್ನು ಮಾಡದಿದ್ದರೆ ಎಲ್ಲರಿಗೂ ಬ್ರಹ್ಮಹತ್ಯದಿಂದುಂಟಾದ ಪಾಪವುಂಟಾಗುವುದು. ಆದುದರಿಂದ ದೂರದಿಂದ ಬಂದ ನಾಗರನನ್ನೂ ಶುದ್ಧಿ ಮಾಡಬೇಕು. ದೇಶಾಂತರದಲ್ಲಿ ಹುಟ್ಟಿದನಾಗರನೂ ನಾನು ಹೇಳಿದ ಮೂರು ವಿಧ ಶುದ್ಧಿಯನ್ನು ಪಡೆದರೆ ಶುದ್ಧನಾಗಿದ್ದಾನೆಂದು ತಿಳಿಯಬೇಕು. ಮೊದಲು ತನ್ನ ವಂಶವನ್ನೂ, ಅನಂತರ ತಾಯಿಯ ವಂಶವನ್ನೂ, ಬಳಿಕ ನಡತೆಯನ್ನೂ ಶುದ್ಧಿಮಾಡಿಕೊಳ್ಳಬೇಕು. ಹೀಗೆ ಮೂರು ವಿಧಗಳಿಂದ ಶುದ್ಧನಾದವನು ಸಾಮಾನ್ಯವಾಗಿ ನಾಗರನೆಂದು ಹೆಸರನ್ನು ಹೊಂದಲರ್ಹನಾಗುವನು.

**ಸರ್ವೇಷಾಮೇವ ವಿಪ್ರಾಣಾಂ ವರ್ಷಾಂತೇ ಸಮುಪಸ್ಥಿತೇ ।**
**ಶುದ್ಧಿಃ ಕಾರ್ಯಾ ಪ್ರಯತ್ನೇನ ಸ್ವಸ್ಥಾನಸ್ಯ ವಿಶುದ್ಧಯೇ ॥ ೧೫ ॥**
**ತದರ್ಥಂ ಶರದಶ್ಚಾಂತೇ ಶುಭರ್ತೌ ಬ್ರಾಹ್ಮಣೋತ್ತಮಾಃ ।**
**ಚಾತುಶ್ಚರಣಸಂಪನ್ನಾಃ ಸಂಸ್ಥಾಪ್ಯಾಃ ಷೋಡಶೈವ ತು ॥ ೧೬ ॥**
**ಬ್ರಾಹ್ಮಣಾಃ ಪುರತಃ ಸರ್ವೇ ಶಾಂತಾ ದಾಂತಾ ಜಿತೇಂದ್ರಿಯಾಃ ।**
**ಗರ್ತಾತೀರ್ಥೋದ್ಭವಂ ವಿಪ್ರಂ ತೇಷಾಂ ಮಧ್ಯೇ ನಿವೇಶಯೇತ್ ॥ ೧೭ ॥**
**ತದಗ್ರೇ ಪೀಠಿಕಾ ದೇಯಾಶ್ಚತಸ್ರೋ ಲಕ್ಷಣಾನ್ವಿತಾಃ ।**
**ಯಾವತ್ಕಾರ್ತಿಕಪರ್ಯಂತಂ ಚಾತುಶ್ಚರಣಕಲ್ಪಿತಾಃ ॥ ೧೮ ॥**
**ಪ್ರಥಮಾ ಬಹ್ವೃಚಸ್ಯಾರ್ಥೇ ಯಾಜುಷಸ್ಯ ತಥಾಽಪರಾ ।**
**ಸಾಮಗಸ್ಯ ತಥೈವಾಽನ್ಯಾ ತಥಾಽಽದ್ಯಸ್ಯ ಚತುರ್ಥಿಕಾ ॥ ೧೯ ॥**
**ಮುದ್ರಿಕಾರ್ಥಂ ತಥೈವಾನ್ಯಾ ಪಂಚಮೀ ಪರಿಕೀರ್ತಿತಾ ।**
**ಶ್ರೀಸೂಕ್ತಂ ಪಾವಮಾನಂ ಚ ಶಾಕುನಂ ವಿಷ್ಣುದೈವತಂ ॥ ೨೦ ॥**
**ಪಾರಾವತಂ ತಥಾ ಸೂಕ್ತಂ ಜೀವಸೂಕ್ತೇನ ಸಂಯುತಂ ।**
**ಬಹ್ವೃಚಃ ಕೀರ್ತಯೇತ್ತತ್ರ ಶಾಂತಿಕಂ ಚ ತಥಾಪರಂ ॥ ೨೧ ॥**
**ಶಾಂತಿಕಂ ಶಿವಸಂಕಲ್ಪಮೃಷಿಕಲ್ಪಂ ಚತುರ್ವಿಧಂ ।**
**ಮಂಡಲಂ ಬ್ರಾಹ್ಮಣಂ ಚೈವ ಗಾಯತ್ರೀ ಬ್ರಾಹ್ಮಣಂ ತಥಾ ॥ ೨೨ ॥**
**ತಥಾ ಪುರುಷಸೂಕ್ತಂ ಚ ಮಧುಬ್ರಾಹ್ಮಣಮೇವ ಚ ।**
**ಅಧ್ವರ್ಯುಃ ಕೀರ್ತಯೇತ್ತತ್ರ ರುದ್ರಾನ್ ಪಂಚಾಂಗಸಂಯುತಾನ್ ॥ ೨೩ ॥**

---

೧೫–೧೭. ಆ ಶುದ್ಧಿಗಾಗಿ ಶುಭ ಶರದೃತುವಿನ ಕೊನೆಯಲ್ಲಿ ಮುಂಭಾಗದಲ್ಲಿ ಹದಿನಾರು ಮಂದಿ ಶಾಂತರೂ, ಜಿತೇಂದ್ರಿಯರೂ ಆದ ಚಾತುಶ್ಚರಣ ಬ್ರಾಹ್ಮಣರನ್ನು ಕುಳ್ಳಿರಿಸಿ ಅವರ ಮಧ್ಯದಲ್ಲಿ ಗರ್ತಾತೀರ್ಥದ ಬ್ರಾಹ್ಮಣನನ್ನು ಕುಳ್ಳಿರಿಸಬೇಕು.

೧೮–೧೯. ಅವರ ಮುಂದೆ ಕಾರ್ತಿಕ ಮಾಸದವರೆಗೆ ಚಾತುಶ್ಚರಣರಿಗಾಗಿ ಲಕ್ಷಣಗಳಿಂದ ಕೂಡಿದ ನಾಲ್ಕು ಆಸನಗಳನ್ನು ಕಲ್ಪಿಸಬೇಕು. ಅವುಗಳಲ್ಲಿ ಮೊದಲನೆಯದು ಋಗ್ವೇದಿಗೂ, ಎರಡನೆಯದು ಯಜುರ್ವೇದಿಗೂ, ಮೂರನೆಯದು ಸಾಮವೇದಿಗೂ, ನಾಲ್ಕನೆಯದು ಆದ್ಯನಿಗೂ ಆಗಿರುವುದು.

೨೦–೨೭. ಮುದ್ರಿಕೆಗಾಗಿ ಐದನೆಯ ಪೀಠವೊಂದನ್ನೂ ಕಲ್ಪಿಸಬೇಕು. ಋಗ್ವೇದಿಯು ಶ್ರೀಸೂಕ್ತ, ಪವಮಾನಸೂಕ್ತ, ಶಕುನಸೂಕ್ತ, ವಿಷ್ಣುಸೂಕ್ತ, ಪಾರಾವತಸೂಕ್ತ, ಜೀವಸೂಕ್ತಗಳನ್ನೂ, ಯಜುರ್ವೇದಿಯು ಶಾಂತಿಕಮಂತ್ರ, ಶಿವಸಂಕಲ್ಪ, ನಾಲ್ಕುವಿಧ ಋಷಿಕಲ್ಪ, ಮಂಡಲಬ್ರಾಹ್ಮಣ, ಗಾಯತ್ರೀ ಬ್ರಾಹ್ಮಣ, ಪುರುಷಸೂಕ್ತ, ಮಧುಬ್ರಾಹ್ಮಣಗಳನ್ನೂ, ಸಾಮವೇದಿಯು

ದೇವವ್ರತಂ ಚ ಗಾಯತ್ರಂ ಸೋಮಸೂರ್ಯವ್ರತೇ ತಥಾ ।
ಏಕವಿಂಶತಿಪರ್ಯಂತಂ ತಥಾಽನ್ಯಚ್ಚ ರಥಂತರಂ ॥ ೨೪ ॥
ಸೌವ್ರತಂ ಸಂಹಿತಾ ವಿಷ್ಣೋರ್ಜ್ಯೇಷ್ಠ ಸಾಮ ತಥೈವ ಚ ।
ಸಾಮವೇದೋಕ್ತರುದ್ರಾಂಶ್ಚ ಭಾರುಂಡೈಃ ಸಾಮಭಿರ್ಯುತಾನ್ ॥ ೨೫ ॥
ಛಂದೋಗಃ ಕೀರ್ತಯೇತ್ತತ್ರ ಯಚ್ಚಾಽನ್ಯಚ್ಛಾಂತಿಕಂ ಭವೇತ್ ।
ಗರ್ಭೋಪನಿಷದಂ ಚೈವ ಸ್ಕಂದಸೂಕ್ತಂ ತಥಾಪರಂ ॥ ೨೬ ॥
ನೀಲರುದ್ರೈಃ ಸಮೋಪೇತಾನ್ ಪ್ರಾಣರುದ್ರಾಂಸ್ತಥಾಽಪರಾನ್ ।
ನವರುದ್ರಾಂಶ್ಚ ಕ್ಷುರಿಕಾನಾದ್ಯಸ್ತತ್ರ ಪ್ರಕೀರ್ತಯೇತ್, ॥ ೨೭ ॥
ತತಃ ಪುಣ್ಯಾಹಘೋಷೇಣ ಗೀತವಾದಿತ್ರ ನಿಃಸ್ವನೈಃ ।
ಶುಕ್ಲಮಾಲ್ಯಾಂಬರಧರಃ ಶುಕ್ಲಚಂದನಚರ್ಚಿತಃ ॥ ೨೮ ॥
ಶುದ್ಧಿಕಾಮೋ ವ್ರಜೇತ್ತತ್ರ ಯತ್ರ ತೇ ಬ್ರಾಹ್ಮಣಾಃ ಸ್ಥಿತಾಃ ।
ಪ್ರಣಮ್ಯ ಶಿರಸಾ ತೇಷಾಂ ತತೋ ವಾಚ್ಯಸ್ತು ಮಧ್ಯಗಃ ॥ ೨೯ ॥
ಮದರ್ಥಂ ಪ್ರಾರ್ಥಯತ್ವಂ ಹಿ ಸರ್ವಾನೇತಾನ್ ದ್ವಿಜೋತ್ತಮಾನ್ ।
ಯತಃ ಶುದ್ಧಿಂ ಪ್ರಯಚ್ಛಂತಿ ಪ್ರಸಾದಂ ಕರ್ತುಮರ್ಹಸಿ ॥ ೩೦ ॥
ತತಸ್ತು ಪ್ರಾರ್ಥಯೇದ್ವಿಪ್ರಾಂಸ್ತದರ್ಥಂ ಚ ವಿಶುದ್ಧಯೇ ।
ಗರ್ತಾತೀರ್ಥೋದ್ಭವೋ ವಿಪ್ರೋ ವಿನಯಾಽವನತಃ ಸ್ಥಿತಃ ॥ ೩೧ ॥
ಗೋಚರ್ಮಣಿ ಸಮಾಲಗ್ನಃ ಶುದ್ಧಿಕಾಮಸ್ಯ ತಸ್ಯ ಚ ।
ಪ್ರಷ್ಟವ್ಯಾಸ್ತು ತತಸ್ತೇನ ಸವ ಏವ ದ್ವಿಜೋತ್ತಮಾಃ ॥ ೩೨ ॥

---

ಪಂಚಾಂಗರುದ್ರ, ದೇವವ್ರತ, ಗಾಯತ್ರ, ಸೋಮಸೂರ್ಯವ್ರತ, ಇಪ್ಪತ್ತೊಂದು ರಥಂತರಸಾಮ, ಸೌವ್ರತ, ವಿಷ್ಣುಸಂಹಿತಾ, ಜ್ಯೇಷ್ಠಸಾಮ, ಸಾಮವೇದೋಕ್ತರುದ್ರ, ಭಾರುಂಡಸಾಮ ಇವುಗಳನ್ನು ಹೇಳಬೇಕು. ಇತರ ಶಾಂತಿಮಂತ್ರ, ಗರ್ಭೋಪನಿಷತ್, ಸ್ಕಂದಸೂಕ್ತ, ನೀಲರುದ್ರ, ಪ್ರಾಣರುದ್ರ, ನವರುದ್ರ, ಕ್ಷುರಿತ ಇವುಗಳನ್ನು ಆದ್ಯನು ಪಠಿಸಬೇಕು.

೨೮–೨೯. ಅನಂತರ ಶುದ್ಧಿಯನ್ನು ಬಯಸುವವನು ಬಿಳಿ ಬಟ್ಟೆ, ಮಾಲೆಗಳನ್ನು ಧರಿಸಿ, ಬಿಳಿ ಗಂಧದಿಂದ ಲಿಪ್ತನಾಗಿ ಪುಣ್ಯಾಹ, ಸಂಗೀತ, ವಾದ್ಯಗಳ ಧ್ವನಿಗಳೊಡನೆ ಬ್ರಾಹ್ಮಣರ ಹತ್ತಿರ ಹೋಗಿ ಅವರನ್ನು ತಲೆಬಾಗಿ ವಂದಿಸಿ ಮಧ್ಯಗನನ್ನು ಕುರಿತು ಹೀಗೆ ಹೇಳಬೇಕು.

೩೦. "ನೀನು ಈ ಎಲ್ಲ ಬ್ರಾಹ್ಮಣರನ್ನೂ ನನಗಾಗಿ ಪ್ರಾರ್ಥಿಸು. ಅದರಿಂದ ಅವರು ನನ್ನನ್ನು ಶುದ್ಧಿಮಾಡುವರು. ಅನುಗ್ರಹಿಸು."

೩೧–೩೨. ಬಳಿಕ ಗರ್ತಾತೀರ್ಥದ ಬ್ರಾಹ್ಮಣನು ವಿನಯದಿಂದ ನಮ್ರನಾಗಿ ಗೋಚರ್ಮವನ್ನು ಹಿಡಿದುಕೊಂಡು ಶುದ್ಧಿಯನ್ನು ಬಯಸುವ ಬ್ರಾಹ್ಮಣನಿಗಾಗಿ ಹೀಗೆ ಪ್ರಾರ್ಥಿಸಿಕೇಳಿಕೊಳ್ಳಬೇಕು.

ಏಷ ಶುದ್ಧಿಕೃತೇ ಪ್ರಾಪ್ತಃ ಸುದೂರಾನ್ನಾಗರೋ ದ್ವಿಜಃ ।
ಅಸ್ಯ ಶುದ್ಧಿಃ ಪ್ರದಾತವ್ಯಾ ಯುಷ್ಮಾಕಂ ರೋಚತೇ ಯದಿ ॥ ೩೩ ॥
ಅಥ ತ್ರೈರ್ವೇದಸೂಕ್ತೇನ ನಿಷೇಧೋ ವಾ ಪ್ರವರ್ತನಂ ।
ವಕ್ತವ್ಯಂ ವಚಸಾ ನೈವ ಮಮ ವಾಕ್ಯಮಿದಂ ಸ್ಥಿತಂ ॥ ೩೪ ॥
ತತಶ್ಚ ಬಹುಲಾನ್ ದೃಷ್ಟ್ವಾ ಋಗ್ಯರ್ಧ್ವರ್ಯೂಂಸ್ತತಃ ಪರಂ ।
ಛಾಂದೋಗ್ಯಾಂಶ್ಚ ತಥಾದ್ಯಾಂಶ್ಚ ಕ್ರಮೇಣ ತು ದ್ವಿಜೋತ್ತಮಾಃ ॥ ೩೫ ॥
ಯದಿ ತೇಷಾಂ ಮನಸ್ತುಷ್ಟಿರ್ಜಾಯತೇ ದ್ವಿಜಸತ್ತಮಾಃ ।
ತತಃ ಸೂಕ್ತಾನಿ ವಾಕ್ಯಾನಿ ಸೌಮ್ಯಾನಿ ಸುಶುಭಾನಿ ಚ ।
ವಾರುಣಾನಿ ತಥೈಂದ್ರಾಣಿ ಮಾಂಗಲ್ಯ ಪ್ರಭವಾಣಿ ಚ ॥ ೩೬ ॥
ಶ್ರೇಷ್ಠಾನಿ ಮಂತ್ರಲಿಂಗಾನಿ ವೃದ್ಧಿತುಷ್ಟಿಕರಾಣಿ ಚ ।
ಯದಿ ನೋ ಮಾನಸೀ ತುಷ್ಟಿಸ್ತೇಷಾಂ ಚೈವ ಪ್ರಜಾಯತೇ ॥ ೩೭ ॥
ತದಾ ರೌದ್ರಾಣಿ ಯಾಮ್ಯಾನಿ ನೈಋರ್ತ್ಯಾನಿ ವಿಶೇಷತಃ ।
ಆಗ್ನೇಯಾನಿ ತ್ವನಿಷ್ಟಾನಿ ತಥಾ ನಾಶಕರಾಣಿ ಚ ॥ ೩೮ ॥
ಅಥ ಯೇ ತತ್ರ ಮೂರ್ಖಾಃ ಸ್ಯುರ್ನ ವೇದ ಪಠನೇ ರತಾಃ ।
ಪುಷ್ಪದಾನಂ ತು ವಕ್ತವ್ಯಂ ಯೈಃ ಸಂತುಷ್ಟೈರ್ದ್ವಿಜೋತ್ತಮೈಃ ॥ ೩೯ ॥

---

೩೩. ಈ ನಾಗರ ಬ್ರಾಹ್ಮಣನು ಶುದ್ಧಿಗಾಗಿ ಬಹಳ ದೂರದಿಂದ ಬಂದಿರುವನು. ನಿಮಗಿದು ಇಷ್ಟವಾದರೆ ಇವನನ್ನು ಶುದ್ಧಿ ಮಾಡಿರಿ.

೩೪. ತರುವಾಯ ಅವರು ವೇದಸೂಕ್ತದಿಂದ ನಿಷೇಧವನ್ನಾಗಲಿ, ಪ್ರವೃತ್ತಿಯನ್ನಾಗಲಿ ಹೇಳಬೇಕು. ಕೇವಲ ಮಾತಿನಿಂದ ಹೇಳಬಾರದು. ಇದು ನನ್ನ ವಚನವಾಗಿರುವುದು.

೩೫. ಅನಂತರ ಋಗ್ಯಜುಸ್ಸಾಮ ಶಾಖಿಗಳನ್ನೂ, ಆದ್ಯರನ್ನೂ ನೋಡಬೇಕು.

೩೬–೩೮. ದ್ವಿಜವರ್ಯರೆ! ಅವರ ಮನಸ್ಸು ಸಂತುಷ್ಟವಾದರೆ ಸೂಕ್ತಗಳನ್ನೂ, ಸೌಮ್ಯ ಶುಭಕರಗಳಾದ ಮಾತುಗಳನ್ನೂ, ವಾರುಣ, ಇಂದ್ರ, ಮಾಂಗಲ್ಯ, ವೃದ್ಧಿ ತುಷ್ಟಿಕರಗಳಾದ ಮಂತ್ರಲಿಂಗ ಇವುಗಳನ್ನೂ ಹೇಳುವರು. ಅವರ ಮನಸ್ಸು ಸಂತುಷ್ಟವಾಗದಿದ್ದರೆ ಅನಿಷ್ಟ ಮತ್ತು ನಾಶಕರಗಳಾದ ರೌದ್ರ, ಯಾಮ್ಯ, ನೈಋತ್ಯ, ಆಗ್ನೇಯ ಸೂಕ್ತಗಳನ್ನು ಉಚ್ಚರಿಸುವರು.

೩೯. ಅಲ್ಲಿ ವೇದಾಧ್ಯಯನಮಾಡದ ಮೂರ್ಖ ಬ್ರಾಹ್ಮಣರಿದ್ದರೆ ಸಂತುಷ್ಟರಾದ ಅವರು ಪುಷ್ಪದಾನವನ್ನು ಹೇಳಬೇಕು.

ಸೀತ್ಕಾರಃ ಕುಪಿತೈಃ ಕಾರ್ಯಃ ಸಂತೋಷೇಣ ವಿವರ್ಜಿತೈಃ ।
ಏವಂ ಸರ್ವೇಷು ಕೃತ್ಯೇಷು ನ ಚ ಕಾರ್ಯೋ ವಿನಿರ್ಣಯಃ ॥ ೪೦ ॥
ಪ್ರಾಕೃತೈರ್ವಚನೈಶ್ಚೈವ ಯಥಾ ಕುರ್ವಂತಿ ಮಾನವಾಃ ।
ತಥೈವ ನಿರ್ಣಯಸ್ಯಾಂತೇ ಮಧ್ಯಗೇನ ವಿಪಶ್ಚಿತಾ ॥ ೪೧ ॥
ದೇಯಂ ತಾಲತ್ರಯಂ ಸಮ್ಯಕ್ಸರ್ವೇಷಾಂ ನಿರ್ಣಯೋದ್ಭವೇ ॥ ೪೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗರಪ್ರಶ್ನನಿರ್ಣಯವರ್ಣನಂ"
ನಾಮೈಕೋತ್ತರದ್ವಿಶತತಮೋಽಧ್ಯಾಯಃ

---

೪೦–೪೨. ಸಂತೋಷವಿಲ್ಲದೆ ಕುಪಿತರಾದ ಬ್ರಾಹ್ಮಣರು ಸೀತ್ಕಾರ ಮಾಡಬೇಕು. ಹೀಗೆ ಸಕಲ ಕಾರ್ಯಗಳಲ್ಲಿ ನಿರ್ಣಯ ಮಾಡಬಾರದು. ಸಾಮಾನ್ಯ ಜನರು ಪ್ರಾಕೃತವಾದ ಮಾತುಗಳಿಂದ ಮಾಡುವಂತೆಯೇ ನಿರ್ಣಯದ ಅವಸಾನದಲ್ಲಿ ವಿದ್ವಾಂಸನಾದ ಮಧ್ಯಗನು ನಿರ್ಣಯವನ್ನು ಕೇಳಿದ ಕೂಡಲೆ ಮೂರು ಸಾರಿ ಚಪ್ಪಾಳೆ ಹೊಡೆಯಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗರಪ್ರಶ್ನನಿರ್ಣಯವರ್ಣನ" ವೆಂಬ
ಇನ್ನೂರೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವ್ಯುತ್ತರದ್ವಿಶತತಮೋಽಧ್ಯಾಯಃ

## ಭರ್ತೃಯಜ್ಞವಾಕ್ಯನಿರ್ಣಯವರ್ಣನಂ

**ವಿಶ್ವಾಮಿತ್ರ ಉವಾಚ :—**

**ತಚ್ಛ್ರುತ್ವಾ ಬ್ರಾಹ್ಮಣಾಃ ಸರ್ವೇ ವಿನಯಾಽವನತಾಃ ಸ್ಥಿತಾಃ ।**
**ತಂ ಪಪ್ರಚ್ಛುರ್ನರಶ್ರೇಷ್ಠ ಕೌತುಕಾವಿಷ್ಟ ಚೇತಸಃ ॥ ೧ ॥**
**ಕಸ್ಯಚಿನ್ನಿರ್ಣಯೋ ದೇಯೋ ಮಧ್ಯಸ್ಥಸ್ಯ ದ್ವಿಜೋತ್ತಮೈಃ ।**
**ವೇದವಾಕ್ಯೇನ ಸಂತ್ಯಜ್ಯ ವಾಕ್ಯಂ ಮನುಜಸಂಭವಂ ॥ ೨ ॥**
**ಕಸ್ಮಾತ್ತಾಲತ್ರಯಂ ದೇಯಂ ಮಧ್ಯಗೇನ ಮಹಾತ್ಮನಾ ।**
**ಏತನ್ನಃ ಸರ್ವಮಾಚಕ್ಷ್ವ ಪರಂ ಕೌತೂಹಲಂ ಹಿ ನಃ ॥ ೩ ॥**
**ತಚ್ಛ್ರುತ್ವಾ ಭರ್ತೃಯಜ್ಞಸ್ತು ತಾನುವಾಚ ದ್ವಿಜೋತ್ತಮಾನ್ ।**
**ಶ್ರೂಯತಾಮಭಿಧಾಸ್ಯಾಮಿ ಯದೇತತ್ಕಾರಣಂ ಸ್ಥಿತಂ ॥ ೪ ॥**
**ನಾಽಸತ್ಯಂ ಜಾಯತೇ ವಾಕ್ಯಂ ನಾಗರಾಣಾಂ ಕಥಂಚನ ।**
**ಬ್ರಹ್ಮಶಾಲಾಸ್ಥಿತಾನಾಂ ಚ ಶುಭಂ ವಾ ಯದಿ ವಾಽಶುಭಂ ॥ ೫ ॥**

---

### ಕನ್ನಡದ ಅನುವಾದ

#### ಭರ್ತೃಯಜ್ಞವಾಕ್ಯನಿರ್ಣಯವರ್ಣನ

೧. ವಿಶ್ವಾಮಿತ್ರನು ಹೇಳುತ್ತಾನೆ:—ಸಮಸ್ತ ಬ್ರಾಹ್ಮಣರೂ ಆ ಮಾತನ್ನು ಕೇಳಿ ವಿನಯದಿಂದ ಬಗ್ಗಿದವರಾಗಿ ಕುತೂಹಲದಿಂದ ಆ ಭರ್ತೃಯಜ್ಞನನ್ನು ಹೀಗೆ ಪ್ರಶ್ನೆ ಮಾಡಿದರು.

೨. "ಬ್ರಾಹ್ಮಣೋತ್ತಮರು ಮಧ್ಯಸ್ಥನಿಗೆ ಮನುಷ್ಯ ಸಂಬಂಧವಾದ ಮಾತನ್ನು ಬಿಟ್ಟು ವೇದವಾಕ್ಯದಿಂದ ಏತಕ್ಕೆ ನಿರ್ಣಯವನ್ನು ಹೇಳಬೇಕು ?

೩. ಮಹಾತ್ಮನಾದ ಆ ಮಧ್ಯಸ್ಥನು ಮೂರು ಚಪ್ಪಾಳೆಗಳನ್ನು ಏಕೆ ಹೊಡೆಯಬೇಕು ? ನಮಗೆ ಇದನ್ನೆಲ್ಲ ಹೇಳು. ಅತ್ಯಂತ ಕುತೂಹಲವುಂಟಾಗಿದೆ."

೪. ಭರ್ತೃಯಜ್ಞನು ಆ ಮಾತನ್ನು ಕೇಳಿ ಆ ಬ್ರಾಹ್ಮಣೋತ್ತಮರನ್ನು ಕುರಿತು ಇದಕ್ಕೆ ಕಾರಣವನ್ನು ಹೇಳುತ್ತೇನೆ ಕೇಳಿರಿ ಎಂದನು.

೫. ಬ್ರಹ್ಮಶಾಲೆಯಲ್ಲಿರುವ ನಾಗರರ ಮಾತು ಶುಭವಾಗಲಿ, ಅಶುಭವಾಗಲಿ ಅದು ಸುಳ್ಳಾಗುವುದಿಲ್ಲ.

ವೇದೋಕ್ತೈಃ ಸವನೈಸ್ತಸ್ಮಾದ್ದರ್ಶಯಂತಿ ದ್ವಿಜೋತ್ತಮಾಃ
ಇಷ್ಟಂ ವಾ ಯದಿ ವಾಽನಿಷ್ಟಂ ಪೃಚ್ಛಮಾನಸ್ಯ ಚಾರ್ಥಿನಃ ॥ ೬ ॥
ಭೂಯೋ ಭೂಯಸ್ತತಃ ಕುರ್ಯಾನ್ಮಧ್ಯಸ್ಥಃ ಸ ದ್ವಿಜನ್ಮನಾಂ ।
ಪ್ರಶ್ನಂ ತಸ್ಯ ನಿಮಿತ್ತಂ ಚ ಯಾವತ್ತಸ್ಯ ವಿನಿರ್ಣಯಃ ॥ ೭ ॥
ಬ್ರಹ್ಮಶಾಲೋಪವಿಷ್ಟಾನಾಂ ಯದಿ ವಾಕ್ಯಂ ವೃಥಾ ಭವೇತ್ ।
ಮಾಹಾತ್ಮ್ಯಂ ನಶ್ಯತೇ ತೇಷಾಂ ತತಃ ಕ್ರೋಧಃ ಪ್ರಜಾಯತೇ ॥ ೮ ॥
ಕ್ರೋಧಾತ್ಸಂಜಾಯತೇ ದ್ರೋಹೋ ದ್ರೋಹಾತ್ಪಾಪಸ್ಯ ಸಂಗಮಃ ।
ಏತಸ್ಮಾತ್ಕಾರಣಾದ್ವಿಪ್ರಾ ಮಧ್ಯಸ್ಥಃ ಪೃಚ್ಛ್ಯತೇ ಮುಹುಃ ॥ ೯ ॥
ಸಮುದಾಯಃ ಸಮಸ್ತಾನಾಂ ಯಥಾ ಚೈವ ಪ್ರಜಾಯತೇ ।
ತದಾ ತಾಲತ್ರಯಂ ಯಚ್ಚ ಮಧ್ಯಸ್ಥಃ ಸಂಪ್ರಯಚ್ಛತಿ ॥ ೧೦ ॥
ತಾಸಾಂ ತು ಪೂರ್ವಯಾ ಕಾಮಂ ಹಂತಿ ಪೃಚ್ಛಾಪ್ರದಾಯಿನಾಂ ।
ದ್ವಿತೀಯಯಾ ತಥಾ ಕ್ರೋಧಂ ಹಂತಿ ಲೋಭಂ ತೃತೀಯಯಾ ॥ ೧೧ ॥
ಏತಸ್ಮಾತ್ಕಾರಣಾದ್ದೇಯಂ ತೇನ ತಾಲತ್ರಯಂ ದ್ವಿಜಾಃ ॥ ೧೨ ॥

---

೬. ಆದುದರಿಂದ ಅವರು ಕೇಳುವ ಅರ್ಥಿಗೆ ಇಷ್ಟವಾದುದಾಗಲಿ, ಅನಿಷ್ಟವಾದುದಾಗಲಿ ಅದನ್ನು ವೇದೋಕ್ತಸವನಗಳಿಂದ ತೋರಿಸುತ್ತಾರೆ.

೭. ಆದುದರಿಂದ ಮಧ್ಯಸ್ಥನು ನಿರ್ಣಯವಾಗುವವರೆಗೆ ಆ ನಾಗರರನ್ನು ಪುನಃ ಪುನಃ ಪ್ರಶ್ನೆಯನ್ನೂ, ಕಾರಣವನ್ನೂ ಕೇಳಬೇಕು.

೮. ಬ್ರಹ್ಮಶಾಲೆಯಲ್ಲಿ ಕುಳಿತಿರುವ ನಾಗರರ ವಾಕ್ಯವು ನಿಷ್ಫಲವಾದರೆ ಅವರ ಮಾಹಾತ್ಮ್ಯವು ಹಾಳಾಗುವುದು. ಆದರಿಂದ ಕೋಪವು ಉಂಟಾಗುವುದು.

೯. ಕ್ರೋಧದಿಂದ ದ್ರೋಹವೂ, ದ್ರೋಹದಿಂದ ಪಾಪವೂ ಉಂಟಾಗುವುದರಿಂದ ಮಧ್ಯಸ್ಥನು ಬಾರಿಬಾರಿಗೂ ಪ್ರಶ್ನೆಮಾಡಬೇಕು.

೧೦. ಸಮಸ್ತ ಜನರ ಸ್ತೋಮವು ಉಂಟಾಗುವಂತೆ ಮಧ್ಯಸ್ಥನು ಮೂರು ಚಪ್ಪಾಳೆಗಳನ್ನು ಹೊಡೆಯಬೇಕು.

೧೧. ಆ ಮೂರು ಚಪ್ಪಾಳೆಗಳಲ್ಲಿ ಮೊದಲನೆಯದು ಪ್ರಶ್ನೆ ಮಾಡುವವರ ಕಾಮವನ್ನೂ, ಎರಡನೆಯದು ಕ್ರೋಧವನ್ನೂ, ಮೂರನೆಯದು ಲೋಭವನ್ನೂ ನಿವಾರಿಸುವುದು.

೧೨. ಆದುದರಿಂದ ಮಧ್ಯಗನು ಮೂರು ಚಪ್ಪಾಳೆಗಳನ್ನು ಹೊಡೆಯಬೇಕು.

ಬ್ರಾಹ್ಮಣಾ ಊಚುಃ:—
ಆಥರ್ವಣಶ್ಚತುರ್ಥಸ್ತು ಬ್ರಾಹ್ಮಣಃ ಪರಿಕೀರ್ತಿತಃ ।
ಸ ಕಸ್ಮಾತ್ಪ್ರಥಮಃ ಪ್ರಶ್ನೋ ನಾಗರಾಣಾಂ ಪ್ರಕೀರ್ತಿತಃ ॥ ೧೩ ॥
ಭರ್ತೃಯಜ್ಞ ಉವಾಚ:—
ಆಥರ್ವಣಃ ಪ್ರಥಮಃ ಪ್ರಶ್ನೋ ಯಸ್ಮಾತ್ಪ್ರೋಕ್ತೋ ಮಯಾ ದ್ವಿಜಾಃ ।
ತದಹಂ ಸಂಪ್ರವಕ್ಷ್ಯಾಮಿ ಶೃಣುಧ್ವಂ ಸುಸಮಾಹಿತಾಃ ॥ ೧೪ ॥
ನೇರ್ಷ್ಯಾ ಚೈವಾತ್ರ ಕರ್ತವ್ಯಾ ಸ್ವಸ್ಥಾನಸ್ಯ ವಿನಾಶನೀ ।
ನಿರೂಪಿತಂ ಮಯಾ ಸಮ್ಯಕ್ಸ್ಥಾನಸ್ಥಸ್ಯ ವಿಶುದ್ಧಯೇ ॥ ೧೫ ॥
ಋಗ್ಯಜುಃ ಸಾಮ ಸಂಜ್ಞಾಖ್ಯಾ ಅಗ್ನಿಷ್ಟೋಮಾದಿಕಾ ಮಖಾಃ ।
ಪಾರತ್ರಿಕಾಃ ಪ್ರವರ್ತಂತೇ ನೈಹಿಕಾಶ್ಚಾಭಿಚಾರಿಕಾಃ ॥ ೧೬ ॥
ಅಥರ್ವಣವೇದೇ ತಚ್ಚೋಕ್ತಂ ಸರ್ವಂ ಚೈವಾಭಿಚಾರಿಕಂ ।
ಹಿತಾಯ ಸರ್ವಲೋಕಾನಾಂ ಬ್ರಹ್ಮಣಾ ಲೋಕಕಾರಿಣಾ ॥ ೧೭ ॥
ಅಥರ್ವಣವೇದಃ ಪ್ರಥಮಂ ದ್ರಷ್ಟವ್ಯಃ ಕಾರ್ಯಸಿದ್ಧಯೇ ।
ಏತಸ್ಮಾತ್ಕಾರಣಾದಾದ್ಯಃ ಸ ಚತುರ್ಥೋಽಪಿ ಸಂಸ್ಥಿತಃ ॥ ೧೮ ॥

---

೧೩. ಬ್ರಾಹ್ಮಣರು ಹೇಳುತ್ತಾರೆ:—ಆಥರ್ವಣ ಬ್ರಾಹ್ಮಣನು ನಾಲ್ಕನೆಯವನಷ್ಟೆ. ಅವನನ್ನು ನಾಗರರಲ್ಲಿ ಮೊದಲು ಏಕೆ ಪ್ರಶ್ನೆ ಮಾಡಬೇಕು ?

೧೪. ಭರ್ತೃಯಜ್ಞನು ಹೇಳುತ್ತಾನೆ:—ದ್ವಿಜರೆ! ಆಥರ್ವಣನನ್ನು ಮೊದಲು ಏಕೆ ಪ್ರಶ್ನೆ ಮಾಡಬೇಕೆಂಬುದನ್ನು ಹೇಳುತ್ತೇನೆ. ಸಾವಧಾನ ಮನಸ್ಸಿನಿಂದ ಕೇಳಿರಿ.

೧೫. ಸ್ವಸ್ಥಾನವನ್ನು ನಾಶಗೊಳಿಸುವ ಈರ್ಷ್ಯೆಯನ್ನು ಇಲ್ಲಿ ಮಾಡಬಾರದು. ನಾನು ಈ ಸ್ಥಾನವು ಶುದ್ಧಿಯಾಗುವ ಕ್ರಮವನ್ನು ಹೇಳಿದ್ದೇನೆ.

೧೬. ಋಗ್ಯಜುಸ್ಸಾಮವೇದಗಳು ಪರಲೋಕದ ಪ್ರಯೋಜನವನ್ನುಂಟು ಮಾಡುವ ಅಗ್ನಿಷ್ಟೋಮ ಮೊದಲಾದ ಯಜ್ಞಗಳಿಗಾಗಿ ಪ್ರವರ್ತಿಸಿವೆ. ಆಭಿಚಾರಿಕ ಕ್ರಿಯೆಗಳಿಗಾಗಿಯಲ್ಲ.

೧೭. ಲೋಕವನ್ನು ಸೃಷ್ಟಿಸಿದ ಬ್ರಹ್ಮನು ಸಮಸ್ತ ಲೋಕಗಳ ಹಿತಕ್ಕಾಗಿ ಈ ಲೋಕದ ಸಂಬಂಧವಾದ ಆಭಿಚಾರಿಕ ಕ್ರಿಯೆಗಳನ್ನೆಲ್ಲ ಅಥರ್ವಣವೇದದಲ್ಲಿ ಹೇಳಿರುತ್ತಾನೆ.

೧೮. ಆದುದರಿಂದ ಕಾರ್ಯಸಿದ್ಧಿಗಾಗಿ ಅಥರ್ವಣವೇದವನ್ನು ಮೊದಲು ನೋಡಬೇಕು. ಇದರಿಂದಲೇ ಅಥರ್ವಣವೇದಿಯು ನಾಲ್ಕನೆಯವನಾದರೂ ಆದ್ಯನಾದನು.

ಏತದ್ವಃ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ದ್ವಿಜೋತ್ತಮಾಃ ।
ಪೃಚ್ಛಾಸಂಬಂಧಜಂ ಸರ್ವಮೇಕಂ ಕಾರ್ಯಂ ಸದೈವ ಹಿ ॥ ೧೯ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಭರ್ತೃಯಜ್ಞವಾಕ್ಯನಿರ್ಣಯವರ್ಣನಂ" ನಾಮ
ದ್ವ್ಯುತ್ತರದ್ವಿಶತತಮೋಽಧ್ಯಾಯಃ

---

೧೯. ದ್ವಿಜವರ್ಯರೆ! ನೀವು ಕೇಳಿದುದನ್ನೆಲ್ಲ ಹೇಳಿರುವೆನು. ಪ್ರಶ್ನೆಗೆ ಸಂಬಂಧಪಟ್ಟ ಕಾರ್ಯವನ್ನೆಲ್ಲ ಯಾವಾಗಲೂ ಹೀಗೆಯೇ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಭರ್ತೃಯಜ್ಞವಾಕ್ಯನಿರ್ಣಯವರ್ಣನ"ವೆಂಬ
ಇನ್ನೂರೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರ್ಯುತ್ತರದ್ವಿಶತತಮೋಽಧ್ಯಾಯಃ

### ನಾಗರವಿಶುದ್ಧಿಪ್ರಕಾರವರ್ಣನಂ

ಆನರ್ತ ಉವಾಚ :—

**ಏವಂ ಶುದ್ಧ್ಯರ್ಥಮಾಯಾತೋ ನಾಗರಾಣಾಂ ಪುರಃ ಸ್ಥಿತಃ ।**
**ನಾಗರಃ ಶುದ್ಧಿಮಾಪ್ನೋತಿ ಯಥಾ ತನ್ಮೇ ವದ ದ್ವಿಜ ॥ ೧ ॥**

ವಿಶ್ವಾಮಿತ್ರ ಉವಾಚ :—

**ಏವಂ ಮಧ್ಯಸ್ಥವಚನಾತ್ಸಮುದಾಯೇ ಸ್ಥಿರೇ ಸತಿ ।**
**ಸ ಪ್ರಷ್ಟವ್ಯಃ ಪಿತುರ್ಮಾತಾ ಕತಮಾ ತೇ ವದಸ್ವ ನಃ ॥ ೨ ॥**
**ಕಿಂ ಗೋತ್ರಃ ಕತಮಸ್ತಸ್ಯಾಃ ಪಿತಾ ಕಿಂ ಪ್ರವರಃ ಸ್ಮೃತಃ ।**
**ಏವಂ ತಸ್ಯಾಽನ್ವಯಂ ಜ್ಞಾತ್ವಾ ಗೋತ್ರ ಪ್ರವರ ಸಂಯುತಂ ॥ ೩ ॥**
**ಪ್ರಷ್ಟವ್ಯಾ ಚ ತತೋ ಮಾತಾ ತಸ್ಯಾಶ್ಚಾಽಪಿ ಚ ಯಾ ಭವೇತ್ ।**
**ಜನನೀ ಚಾಽಪಿ ಪ್ರಷ್ಟವ್ಯಾ ತಸ್ಯಾಶ್ಚಾಽಪಿ ಚ ಯಾ ಭವೇತ್ ॥ ೪ ॥**
**ಜ್ಞಾತವ್ಯಾ ಸಾಽಪಿ ಯತ್ನೇನ ಬ್ರಾಹ್ಮಣೈಃ ಶುದ್ಧಿಕರ್ಮಣಿ ॥ ೫ ॥**
**ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ।**
**ಶೋಧನೀಯಾಃ ಪ್ರಯತ್ನೇನ ತ್ರಯಶ್ಚೈತೇಽಪಿ ತಸ್ಯ ಚ ॥ ೬ ॥**

---

### ಕನ್ನಡದ ಅನುವಾದ

#### ನಾಗರವಿಶುದ್ಧಿಪ್ರಕಾರವರ್ಣನ

೧. ಆನರ್ತನು ಹೇಳುತ್ತಾನೆ:—ಹೀಗೆ ಶುದ್ಧಿಗಾಗಿ ಬಂದು ನಾಗರರ ಮುಂದೆ ನಿಂತ ನಾಗರನು ಹೇಗೆ ಶುದ್ಧನಾಗುವನೆಂಬುದನ್ನು ನನಗೆ ಹೇಳು.

೨. ವಿಶ್ವಾಮಿತ್ರನು ಹೇಳುತ್ತಾನೆ:—ಹೀಗೆ ಮಧ್ಯಗನ ಮಾತಿನಿಂದ ನಾಗರರ ಸಮೂಹವು ಸ್ಥಿರಮನಸ್ಸುಳ್ಳದ್ದಾಗಿರಲು ಆ ಶುದ್ಧಿಗೆ ಅರ್ಹನಾದವನನ್ನು ಕುರಿತು ನಿನ್ನ ತಂದೆಯ ತಾಯಿ ಯಾರು?

೩–೫. ನಿನ್ನ ಗೋತ್ರವಾವುದು? ನಿನ್ನ ತಾಯಿಯ ತಂದೆಯ ಪ್ರವರ ವಾವುದು? ಅದನ್ನು ನಮಗೆ ಹೇಳು ಎಂದು ಪ್ರಶ್ನಿಸಬೇಕು. ಹೀಗೆ ಗೋತ್ರ ಪ್ರವರದೊಡನೆ ಅವನ ವಂಶವನ್ನರಿತು ತಾಯಿ ಯಾರು? ಅವಳ ತಾಯಿ ಯಾರು? ಅವಳ ತಾಯಿ ಯಾರು? ಎಂದು ಕೇಳಿ ಶುದ್ಧಿಕಾರ್ಯದಲ್ಲಿ ತಿಳಿದುಕೊಳ್ಳಬೇಕು.

೬–೮. ಹಾಗೆಯೇ ಪಿತೃ, ಪಿತಾಮಹ, ಪ್ರಪಿತಾಮಹ ಈ ಮೂವರನ್ನೂ ಶೋಧಿಸಬೇಕು. ಅಂತೆಯೇ ಮಾತೃ, ಪಿತಾಮಹಿ, ಪ್ರಪಿತಾಮಹಿ ಈ ಮೂವ

ತಥಾ ಪಿತಾಮಹೀಪಕ್ಷೇ ತ್ರಯ ಏತೇ ದ್ವಿಜೋತ್ತಮಾಃ ।
ಮಾತಾಮಹಸ್ತತಸ್ತಸ್ಯ ಪಿತಾ ತಸ್ಯಾಽಪಿ ಯಃ ಪಿತಾ ॥ ೭ ॥
ಮಾತಾ ಮಾತಾಮಹೀ ಚೈವ ತಥೈವಾನ್ಯಾ ಪ್ರಪೂರ್ವಿಕಾ ।
ಪಿತಾಮಹ್ಯಾಶ್ಚ ಯಾ ಮಾತಾ ಸಾಽಪಿ ಶೋಧ್ಯಾ ಸಭರ್ತೃಕಾ ॥ ೮ ॥
ಏವಂ ಶಾಖಾಗಮಂ ಜ್ಞಾತ್ವಾ ತಸ್ಯ ಸರ್ವಂ ಯಥಾ ಕ್ರಮಂ ।
ಮೂಲವಂಶಾದಧಿಷ್ಠಾನಂ ನ್ಯಗ್ರೋಧಸ್ಯೇವ ಸರ್ವತಃ ॥ ೯ ॥
ತತಃ ಶುದ್ಧಿಃ ಪ್ರದಾತವ್ಯಾ ಸಿಂದೂರತಿಲಕೇನ ತು ।
ಚಾತುಶ್ಚರಣ ಮಂತ್ರೈಶ್ಚ ದತ್ವಾಽಽಶೀರ್ವಚನಂ ಕ್ರಮಾತ್ ॥ ೧೦ ॥
ತತೋ ವಾಚ್ಯಂ ನೃಪಶ್ರೇಷ್ಠ ಮಧ್ಯಸ್ಥೇನ ತದಗ್ರತಃ ।
ದತ್ವಾ ತಾಲತ್ರಯಂ ರಾಜಂಛುದ್ಧೋಽಯಂ ನಾಗರೋದ್ವಿಜಃ ।
ಸಾಮಾನ್ಯಪದಯೋಗ್ಯಶ್ಚ ಸಂಜಾತಃ ಸಾಂಪ್ರತಂ ದ್ವಿಜಃ ॥ ೧೧ ॥
ತತೋಽಗ್ನಿಶರಣಂ ಗತ್ವಾ ಸಂತರ್ಪ್ಯ ಚ ಹುತಾಶನಂ ।
ಪಂಚವಕ್ತ್ರೇಣ ಮಂತ್ರೇಣ ದತ್ವಾ ಪೂರ್ಣಾಹುತಿಂ ತತಃ ।
ವಿಪ್ರೇಭ್ಯೋ ದಕ್ಷಿಣಾಂ ದದ್ಯಾತ್ಸ್ವಶಕ್ತ್ಯಾ ಭೋಜನಾನ್ವಿತಾಂ ॥ ೧೨ ॥
ಸಿಂದೂರತಿಲಕೇ ಜಾತೇ ಬ್ರಹ್ಮಾಗ್ರೇ ದ್ವಿಜವಾಕ್ಯತಃ ।
ಪಿತೄಣಾಂ ಜಾಯತೇ ತುಷ್ಟಿರ್ವಂಶೋ ಸೋಽದ್ಯ ಪ್ರತಿಷ್ಠಿತಃ ॥ ೧೩ ॥

---

ರನ್ನೂ, ಮಾತಾಮಹ, ಮಾತೃಪಿತಾಮಹ, ಮಾತೃಪ್ರಪಿತಾಮಹ ಇವರನ್ನೂ, ಮಾತಾಮಹಿ, ಮಾತೃಪಿತಾಮಹೀ, ಮಾತೃಪ್ರಪಿತಾಮಹೀ ಇವರನ್ನೂ, ಪಿತಾಮಹಿಯ ತಾಯಿಯನ್ನು ಪತಿಸಹಿತವಾಗಿ ಕೇಳಿ ತಿಳಿದುಕೊಂಡು ಶೋಧಿಸಬೇಕು.

೯–೧೦. ಹೀಗೆ ಶುದ್ಧಿಗರ್ಹನಾದ ನಾಗರನ ವಟವೃಕ್ಷದಂತಿರುವ ವಂಶವೃಕ್ಷವನ್ನು ಬುಡದಿಂದ ತಿಳಿದುಕೊಂಡು ಅವನಿಗೆ ಸಿಂದೂರದ ತಿಲಕವನ್ನಿತ್ತು ಚಾತುಶ್ಚರಣ ಮಂತ್ರಗಳಿಂದ ಆಶೀರ್ವದಿಸಿ ಶುದ್ಧಿಗೊಳಿಸಬೇಕು.

೧೧. ತರುವಾಯ ಮಧ್ಯಸ್ಥನು ಆ ನಾಗರನ ಮುಂದೆ ಮೂರು ಚಪ್ಪಾಳೆಗಳನ್ನು ಹೊಡೆದು, "ಈ ನಾಗರನು ಶುದ್ಧನಾಗಿರುವನು, ಸಾಮಾನ್ಯವಾದ ನಾಗರ ಶಬ್ದದಿಂದ ವ್ಯವಹರಿಸಲು ಯೋಗ್ಯನಾಗಿದ್ದಾನೆ" ಎಂದು ಹೇಳಬೇಕು.

೧೨. ಬಳಿಕ ಅಗ್ನಿಶಾಲೆಗೆ ಹೋಗಿ ಅಗ್ನಿಯನ್ನು ತೃಪ್ತಿಗೊಳಿಸಿ ಪಂಚವಕ್ತ್ರ ಮಂತ್ರದಿಂದ ಪೂರ್ಣಾಹುತಿಯನ್ನಿತ್ತು ಬ್ರಾಹ್ಮಣರಿಗೆ ಶಕ್ತ್ಯನುಸಾರ ಭೋಜನ ದಕ್ಷಿಣೆಗಳನ್ನು ಕೊಡಬೇಕು.

೧೩. ಸಿಂದೂರ ತಿಲಕವನ್ನಿಟ್ಟಕೂಡಲೆ ಬ್ರಹ್ಮನ ಮುಂದೆ, "ಬ್ರಾಹ್ಮಣರ ಮಾತಿನಿಂದ ಶುದ್ಧನಾದೆನು. ಪಿತೃಗಳಿಗೆ ಸಂತೋಷವಾಯಿತು. ನಮ್ಮ ವಂಶವು ಸುಪ್ರತಿಷ್ಠಿತವಾಯಿತು" ಎನ್ನಬೇಕು.

ಯಸ್ಯ ನೋ ಜಾಯತೇ ಶುದ್ಧಿಃ ಶಾಖಾಭಿರ್ಮೂಲವಂಶಗಾ ।
ನಿಗ್ರಹಸ್ತಸ್ಯ ಕರ್ತವ್ಯೋ ದ್ವಿಜಾರ್ಹೋ ದ್ವಿಜಸತ್ತಮೈಃ ॥ ೧೪ ॥
ಯಥಾ ನಾಽನ್ಯೋ ಹಿ ಜಾಯೇತ ಶುದ್ಧಿಸ್ತಸ್ಯ ಪ್ರಕಲ್ಪಿತಾ ।
ಏವಂ ಸಂಶೋಧಿತೋ ವಿಪ್ರಃ ಶ್ರಾದ್ಧಾರ್ಹೋ ಜಾಯತೇ ತತಃ ॥ ೧೫ ॥
ಅಪಿ ಚಾಷ್ಟಕುಲೋತ್ಪನ್ನಃ ಸಾಮಾನ್ಯಃ ಕಿಂ ಪುನರ್ಹಿ ಯಃ ।
ಅಶುದ್ಧೇನ ತು ವಿಪ್ರೇಣ ಯಃ ಶ್ರಾದ್ಧಾದ್ಯಂ ಕರೋತಿಹಿ ।
ತಸ್ಯ ಭಸ್ಮಹುತಂ ಯದ್ವತ್ಸರ್ವಂ ತಜ್ಜಾಯತೇ ವೃಥಾ ॥ ೧೬ ॥
ತಸ್ಮಾತ್ಸರ್ವಪ್ರಯತ್ನೇನ ಶೋಧ್ಯೋಽಯಂ ನಾಗರೋ ದ್ವಿಜಃ ।
ಸ್ವಸ್ಥಾನಸ್ಯ ವಿಶುದ್ಧ್ಯರ್ಥಂ ತಥೈವ ಸ್ವಕುಲಸ್ಯ ಚ ॥ ೧೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ನಾಗರವಿಶುದ್ಧಿಪ್ರಕಾರವರ್ಣನಂ" ನಾಮ
ತ್ರ್ಯುತ್ತರದ್ವಿಶತತಮೋಽಧ್ಯಾಯಃ

---

೧೪–೧೬. ಹೀಗೆ ವಂಶದವರೊಡನೆ ಶುದ್ಧನಾಗದ ನಾಗರನನ್ನು ಇತರ ವಿಧವಾದ ಶುದ್ಧಿಯು ಆಗದಂತೆ ಬ್ರಾಹ್ಮಣರು ನಿಗ್ರಹಿಸಬೇಕು. ಈ ರೀತಿಯಿಂದ ಶೋಧಿತನಾದ ಬ್ರಾಹ್ಮಣನು ಅಷ್ಟಕುಲೋತ್ಪನ್ನನಾಗಿದ್ದರೂ ಶ್ರಾದ್ಧಾರ್ಹನಾಗುವನು. ಸಾಮಾನ್ಯ ಬ್ರಾಹ್ಮಣನ ವಿಷಯವಿನ್ನೇನು. ಅಶುದ್ಧನಾದ ಬ್ರಾಹ್ಮಣನಿಂದ ಶ್ರಾದ್ಧ ಮೊದಲಾದುವುಗಳನ್ನು ಮಾಡಿದರೆ ಆ ಶ್ರಾದ್ಧವು ಬೂದಿಯಲ್ಲಿ ಹೋಮಿಸಿದಂತೆ ವ್ಯರ್ಥವಾಗುವುದು.

೧೭. ಆದುದರಿಂದ ಸ್ಥಾನ, ಕುಲಗಳ ಶುದ್ಧಿಗಾಗಿ ನಾಗರ ಬ್ರಾಹ್ಮಣನನ್ನು ಶುದ್ಧಿ ಮಾಡಬೇಕು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ನಾಗರವಿಶುದ್ಧಿಪ್ರಕಾರವರ್ಣನ" ವೆಂಬ
ಇನ್ನೂರಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಚತುರಧಿಕದ್ವಿಶತತಮೋಽಧ್ಯಾಯಃ

## ಪ್ರೇತಶ್ರಾದ್ಧಕಥನವರ್ಣನಂ

ಆನರ್ತ ಉವಾಚ :—

ಪ್ರೋಕ್ತಾಽಸ್ಮಾಕಂ ತ್ವಯಾ ವಿಪ್ರ ಶುದ್ಧಿರ್ನಾಗರಸಂಭವಾ ।
ವಂಶಜಾ ವಿಸ್ತರೇಣೈವ ಯಥಾ ಪೃಷ್ಟೋಽಸಿ ಸುವ್ರತ ॥ ೧ ॥
ಸಾಂಪ್ರತಂ ಶೀಲಜಾಂ ಬ್ರೂಹಿ ನಷ್ಟವಂಶಶ್ಚ ಯೋ ಭವೇತ್ ।
ಪಿತಾಮಹಂ ನ ಜಾನಾತಿ ನ ಚ ಮಾತಾಮಹೀಂ ನಿಜಾಂ ।
ತಸ್ಯ ಶುದ್ಧಿಃ ಕಥಂ ಕಾರ್ಯಾ ನಾಗರೋಽಸ್ಮೀತಿ ಯೋ ವದೇತ್ ॥ ೨ ॥

ವಿಶ್ವಾಮಿತ್ರ ಉವಾಚ :—

ಏತದರ್ಥಂ ಪುರಾ ಪೃಷ್ಟೋ ಭರ್ತೃಯಜ್ಞಶ್ಚ ನಾಗರೈಃ ।
ನಷ್ಟವಂಶಕೃತೇ ರಾಜನ್ ಯಥಾ ಪೃಷ್ಟೋಽಸ್ಮಿ ವೈ ತ್ವಯಾ ॥ ೩ ॥

ಭರ್ತೃಯಜ್ಞ ಉವಾಚ :—

ನಷ್ಟವಂಶಸ್ತು ಯೋ ಬ್ರೂಯಾನ್ನಾಗರೋಽಸ್ಮೀತಿ ಸಂಸದಿ ।
ತಸ್ಯ ಶೀಲಂ ಪ್ರವಿಜ್ಞೇಯಂ ತತಃ ಶುದ್ಧಿಂ ಸಮಾದಿಶೇತ್ ॥ ೪ ॥

---

## ಕನ್ನಡದ ಅನುವಾದ

### ಪ್ರೇತಶ್ರಾದ್ಧಕಥನವರ್ಣನ

೧. ಆನರ್ತನು ಹೇಳುತ್ತಾನೆ:—ಮುನಿಯೆ! ಈಗ ನೀನು ನಾನು ಕೇಳಿದಂತೆ ನಾಗರ ಬ್ರಾಹ್ಮಣನ ವಂಶ ಶುದ್ಧಿಯ ಕ್ರಮವನ್ನು ವಿಸ್ತಾರವಾಗಿ ಹೇಳಿರುವೆ.

೨. ಈಗ ನಷ್ಟವಂಶವುಳ್ಳವನೂ, ತನ್ನ ಪಿತಾಮಹ, ಮಾತಾಮಹಿಯರನ್ನು ತಿಳಿಯದವನೂ ಆದ ನಾಗರ ಬ್ರಾಹ್ಮಣನ ಶೀಲವನ್ನು ಹೇಗೆ ಶುದ್ಧಿಗೊಳಿಸಬೇಕೆಂಬುದನ್ನು ಹೇಳು.

೩. ವಿಶ್ವಾಮಿತ್ರನು ಹೇಳುತ್ತಾನೆ:—ದೊರೆಯೆ! ನೀನು ನಷ್ಟವಂಶನಾದ ನಾಗರನ ವಿಷಯದಲ್ಲಿ ಕೇಳಿದ ಪ್ರಶ್ನೆಯನ್ನೇ ನಾಗರರು ಹಿಂದೆ ಭರ್ತೃಯಜ್ಞನನ್ನು ಕೇಳಿರುತ್ತಾರೆ.

೪. ಭರ್ತೃಯಜ್ಞನು ಹೇಳುತ್ತಾನೆ:—ಸಭೆಯಲ್ಲಿ ನಾಗರನಾಗಿರುವೆನೆಂದು ಹೇಳುವ ನಷ್ಟವಂಶನ ಶೀಲವನ್ನರಿತು ಶುದ್ಧಿಯನ್ನು ವಿಧಿಸಬೇಕು.

ನಾಗರಾಣಾಂ ತು ಯೇ ಧರ್ಮಾ ವ್ಯವಹಾರಾಶ್ಚ ಕೇವಲಾಃ ।
ತೇಷು ಚೇದ್ವರ್ತತೇ ನಿತ್ಯಂ ಸಂಭಾವ್ಯೋ ನಾಗರೋ ಹಿ ನಃ ॥ ೫ ॥
ತಸ್ಯ ಶುದ್ಧಿಕೃತೇ ದೇಯಂ ಘಟಂ ಬ್ರಾಹ್ಮಣಸತ್ತಮಾಃ ।
ಘಟೇ ತು ಶುದ್ಧಿಮಾಪನ್ನೇ ತತೋಽಸೌ ಶುದ್ಧತಾಂ ವ್ರಜೇತ್ ॥ ೬ ॥
ಶ್ರಾದ್ಧಾರ್ಹಃ ಕನ್ಯಕಾರ್ಹಶ್ಚ ಸೋಮಾರ್ಹಶ್ಚ ವಿಶೇಷತಃ ।
ಸಾಮಾನ್ಯ ಪದಯೋಗ್ಯಶ್ಚ ಸಮಸ್ತೇ ಸ್ಥಾನಕರ್ಮಣಿ ॥ ೭ ॥
ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರೋತ್ತಮ ।
ದ್ವಿತೀಯಾ ಜಾಯತೇ ಶುದ್ಧಿರ್ಯಥಾ ನಷ್ಟಾನ್ವಯೇ ದ್ವಿಜೇ ।
ತಸ್ಮಾದ್ವದ ಮಹಾರಾಜ ಯದ್ಭೂಯಃ ಶ್ರೋತುಮರ್ಹಸಿ ॥ ೮ ॥

ಆನರ್ತ ಉವಾಚ :—

ತಸ್ಮಾತ್ತೇ ನಾಗರಾ ಭೂತ್ವಾ ವಿಪ್ರಾಶ್ಚಾಷ್ಟಕುಲೋದ್ಭವಾಃ ।
ಸರ್ವೇಷಾಮುತ್ತಮಾ ಜಾತಾಃ ಪ್ರಾಧಾನ್ಯೇನ ವ್ಯವಸ್ಥಿತಾಃ ॥ ೯ ॥
ತಪಸಃ ಕಿಂ ಪ್ರಭಾವಃ ಸ ತೇಷಾಂ ವಾ ಯಜನೋದ್ಭವಃ ।
ವಿದ್ಯೋದ್ಭವೋಽಥವಾ ವಿಪ್ರ ಕಿಂ ವಾ ದಾನ ಸಮುದ್ಭವಃ ॥ ೧೦ ॥

---

೫. ಅವನಲ್ಲಿ ನಾಗರರ ಧರ್ಮಗಳೂ, ವ್ಯವಹಾರಗಳೂ ಇದ್ದರೆ ಅವನನ್ನು ನಾಗರನೆಂದು ತಿಳಿಯಬೇಕು.

೬. ಬ್ರಾಹ್ಮಣವರ್ಯರೆ! ಅವನ ಶುದ್ಧಿಗಾಗಿ ತಕ್ಕಡಿಯನ್ನು ಕೊಡಬೇಕು. ತಕ್ಕಡಿಯು ಶುದ್ಧವಾಗಲು ಅವನೂ ಶುದ್ಧನಾಗುವನು.

೭. ಅವನು ಶ್ರಾದ್ಧಾರ್ಹನೂ, ಕನ್ಯಾದಾನಕ್ಕೆ ಯೋಗ್ಯನೂ, ಸೋಮಪಾನಕ್ಕೆ ಉಚಿತನೂ, ಸಕಲ ಬ್ರಹ್ಮಸ್ಥಾನ ಕಾರ್ಯದಲ್ಲಿ ಸಾಮಾನ್ಯನೂ ಆಗುವನು.

೮. ಅರಸ! ನೀನು ಕೇಳಿದಂತೆ ನಷ್ಟವಂಶನಾದ ನಾಗರನ ಶೀಲ ಶುದ್ಧಿಯ ಕ್ರಮವನ್ನು ಹೇಳಿರುವೆನು. ಮರಳಿ ಬೇರೆ ಏನನ್ನು ಕೇಳಬಯಸುವೆ? ಹೇಳು.

೯. ಆನರ್ತನು ಹೇಳುತ್ತಾನೆ:— ಅಷ್ಟಕುಲಸಂಭೂತರಾದ ನಾಗರ ಬ್ರಾಹ್ಮಣರು ಸಕಲ ಬ್ರಾಹ್ಮಣರಲ್ಲಿ ಉತ್ತಮರೂ, ಪ್ರಧಾನರೂ ಆಗಿರುವರಷ್ಟೆ.

೧೦. ಅದು ಅವರ ತಪಸ್ಸಿನ ಪ್ರಭಾವವೊ? ಅಥವಾ ಯಾಗದ ಪ್ರಭಾವವೊ? ಅಥವಾ ವಿದ್ಯೆಯಿಂದುಂಟಾದುದೊ? ಅಥವಾ ದಾನದ ಪ್ರಭಾವವೊ?

ವಿಶ್ವಾಮಿತ್ರ ಉವಾಚ :—
ತೇ ಸರ್ವೇ ಗುಣಸಂಪನ್ನಾ ಯಥಾಽನ್ಯೇ ನಾಗರಾಸ್ತಥಾ ।
ವಿಶೇಷಶ್ಚಾಽಪರಸ್ತೇಷಾಂ ತೇ ಶಕ್ರೇಣ ಪ್ರತಿಷ್ಠಿತಾಃ ॥ ೧೧ ॥
ತೇನ ತೇ ಗೌರವಂ ಪ್ರಾಪ್ತಾಃ ಸರ್ವೇಷಾಂ ತು ದ್ವಿಜನ್ಮನಾಂ ॥ ೧೨ ॥
ಆನರ್ತ ಉವಾಚ :—
ಕಸ್ಮಿನ್ ಕಾಲೇ ತು ತೇ ವಿಪ್ರಾಃ ಶಕ್ರೇಣಾಽತ್ರ ಪ್ರತಿಷ್ಠಿತಾಃ ।
ಕಿಮರ್ಥಂ ಚ ವದಾಽಸ್ಮಾಕಂ ವಿಸ್ತರೇಣ ಮಹಾಮತೇ ॥ ೧೩ ॥
ವಿಶ್ವಾಮಿತ್ರ ಉವಾಚ :—
ಹಿರಣ್ಯಾಕ್ಷ ಇತಿ ಖ್ಯಾತಃ ಪುರಾಽಽಸೀದ್ದಾನವೋತ್ತಮಃ ।
ಅಭವತ್ತಸ್ಯ ಸಂಗ್ರಾಮಃ ಶಕ್ರೇಣ ಸಹ ದಾರುಣಃ ॥ ೧೪ ॥
ತತ್ರ ದೇವಾಸುರೇ ಯುದ್ಧೇ ಮೃತಾ ಭೂರಿ ದಿವೌಕಸಃ ।
ದಾನವಾಶ್ಚ ಮಹಾರಾಜ ಪರಸ್ಪರಜಿಗೀಷವಃ ॥ ೧೫ ॥
ಅಥ ತೇ ದಾನವಾಃ ಸಂಖ್ಯೇ ಶಕ್ರೇಣ ವಿನಿಪಾತಿತಾಃ ।
ವಿದ್ಯಾಬಲೇನ ತಾಂಛುಕ್ರಃ ಸಜೀವಾನ್ ಕುರುತೇ ಪುನಃ ॥ ೧೬ ॥
ದೇವಾಶ್ಚ ನಿಧನಂ ಪ್ರಾಪ್ತಾ ನ ಜೀವಂತಿ ಕಥಂಚನ ।
ಕಸ್ಯಚಿತ್ತ್ವಥ ಕಾಲಸ್ಯ ವಿಷ್ಣುಂ ಪ್ರೋವಾಚ ವೃತ್ರಹಾ ॥ ೧೭ ॥

---

೧೧. ವಿಶ್ವಾಮಿತ್ರನು ಹೇಳುತ್ತಾನೆ:—ಅವರು ಇತರ ನಾಗರರಂತೆ ಸಮಸ್ತ ಗುಣಗಳಿಂದ ಕೂಡಿರುವರು. ಇಂದ್ರನು ಅವರನ್ನು ಸ್ಥಾಪಿಸಿರುವುದರಿಂದ ಅವರಲ್ಲಿ ಮತ್ತೊಂದು ವಿಶೇಷವಿರುವುದು.

೧೨. ಅದರಿಂದವರು ಸಮಸ್ತ ಬ್ರಾಹ್ಮಣರಲ್ಲಿ ಗೌರವವನ್ನು ಪಡೆದಿರುವರು.

೧೩. ಆನರ್ತನು ಹೇಳುತ್ತಾನೆ:— ಇಂದ್ರನು ಆ ಬ್ರಾಹ್ಮಣರನ್ನು ಯಾವಾಗ ಇಲ್ಲಿ ಏತಕ್ಕೆ ಸ್ಥಾಪಿಸಿದನು? ಅದನ್ನು ನನಗೆ ವಿಸ್ತಾರವಾಗಿ ಹೇಳು.

೧೪. ವಿಶ್ವಾಮಿತ್ರನು ಹೇಳುತ್ತಾನೆ:—ಹಿಂದೆ ಹಿರಣ್ಯಾಕ್ಷನೆಂಬ ದಾನವೋತ್ತಮನಿದ್ದನು. ಅವನಿಗೆ ಇಂದ್ರನೊಡನೆ ಕಾಳಗವಾಯಿತು.

೧೫. ಆ ಯುದ್ಧದಲ್ಲಿ ಪರಸ್ಪರ ಜಯವನ್ನು ಬಯಸುವ ಅನೇಕ ಮಂದಿ ದೇವ ದಾನವರು ಮಡಿದರು.

೧೬. ತರುವಾಯ ಯುದ್ಧದಲ್ಲಿ ಇಂದ್ರನಿಂದ ಹತರಾದ ದಾನವರನ್ನು ಶುಕ್ರಾಚಾರ್ಯನು ತನ್ನ ವಿದ್ಯಾಬಲದಿಂದ ಬದುಕಿಸುತ್ತಿದ್ದನು.

೧೭. ಮೃತರಾದ ದೇವತೆಗಳು ಬದುಕಲೇ ಇಲ್ಲ. ಒಂದಾನೊಂದು ಕಾಲದಲ್ಲಿ ಇಂದ್ರನು ವಿಷ್ಣುವನ್ನು ಕುರಿತು ಇಂತೆಂದನು.

ಧಾರಾತೀರ್ಥಮೃತಾನಾಂ ಚ ಪ್ರಹಾರೈಃ ಸನ್ಮುಖೈಃ ಪ್ರಭೋ ।
ಯಾ ಗತಿಶ್ಚ ಸಮಾದಿಷ್ಟಾ ತಾಂ ಮೇ ವದ ಜನಾರ್ದನ ॥ ೧೮ ॥
ಪರಾಙ್ಮುಖಾ ಮೃತಾ ಯೇ ಚ ಪಲಾಯನ ಪರಾಯಣಾಃ ।
ತೇಷಾಮಪಿ ಗತಿಂ ಬ್ರೂಹಿ ಯಾದೃಗ್ಜಾಯೇತ ವಾಽಚ್ಯುತ ॥ ೧೯ ॥

ವಿಷ್ಣುರುವಾಚ :—

ಧಾರಾತೀರ್ಥಮೃತಾನಾಂ ಚ ಸನ್ಮುಖಾನಾಂ ಮಹಾಹವೇ ।
ಯಥಾ ಚೋಚ್ಛಿನ್ನಬೀಜಾನಾಂ ಪುನರ್ಜನ್ಮ ನ ವಿದ್ಯತೇ ॥ ೨೦ ॥
ಯೇ ಪುನಃ ಪೃಷ್ಠದೇಶೇ ತು ಹನ್ಯಂತೇ ಭಯವಿಕ್ಲವಾಃ ।
ಭುಜ್ಯಮಾನಾಃ ಪರೈಸ್ತೇ ಚ ಪ್ರೇತಾಃ ಸ್ಯುಸ್ತ್ರಿದಶಾಧಿಪ ॥ ೨೧ ॥

ಇಂದ್ರ ಉವಾಚ :—

ಕೇಚಿದ್ದೇವಾ ಮೃತಾ ಯುದ್ಧೇ ಯುಧ್ಯಮಾನಾಶ್ಚ ಸನ್ಮುಖಾಃ ।
ತಥೈವಾಽನ್ಯೇ ಮಯಾ ದೃಷ್ಟಾ ಹನ್ಯಮಾನಾಃ ಪರಾಙ್ಮುಖಾಃ ।
ಪ್ರೇತತ್ವಂ ದಾನವಾನಾಂ ಚ ಸರ್ವೇಷಾಂ ಸ್ಯಾನ್ನ ವಾ ಪ್ರಭೋ ॥ ೨೨ ॥

ವಿಷ್ಣುರುವಾಚ :—

ಅಸಂಶಯಂ ಸಹಸ್ರಾಕ್ಷ ಹತಾ ಯುದ್ಧೇ ಪರಾಙ್ಮುಖಾಃ ।
ಪ್ರೇತತ್ವೇ ಯಾಂತಿ ತೇ ಸರ್ವೇ ದೇವಾ ವಾ ಮಾನಷಾ ಯದಿ ॥ ೨೩ ॥

---

೧೮. ಜನಾರ್ದನ! ಯುದ್ಧಾಭಿಮುಖರಾಗಿ ಪ್ರಹಾರಗಳಿಂದ ಧಾರಾತೀರ್ಥದಲ್ಲಿ ಮಡಿದವರಿಗೆ ಸಂಭವಿಸುವ ಗತಿಯನ್ನು ಹೇಳು.

೧೯. ಅನಭಿಮುಖರಾಗಿ ಓಡಿ ಮೃತರಾದವರಿಗೆ ಉಂಟಾಗುವ ಗತಿಯನ್ನೂ ವಿವರಿಸು.

೨೦. ವಿಷ್ಣುವು ಹೇಳುತ್ತಾನೆ:—ಯುದ್ಧದಲ್ಲಿ ಅಭಿಮುಖರಾಗಿ ಧಾರಾತೀರ್ಥದಲ್ಲಿ ಮಡಿದವರಿಗೆ ಕೆಟ್ಟುಹೋದ ಬೀಜಗಳಂತೆ ಮರಳಿ ಹುಟ್ಟಿಲ್ಲ.

೨೧. ಯಜಮಾನನ ಸೇವೆಯನ್ನು ಮಾಡುತ್ತ ಭಯದಿಂದ ವಿಮುಖರಾಗಿ ಬೆನ್ನಿನಲ್ಲಿ ಹೊಡೆಯಲ್ಪಟ್ಟು ಮೃತರಾದವರು ಪ್ರೇತರಾಗುವರು.

೨೨. ಇಂದ್ರನು ಹೇಳುತ್ತಾನೆ:—ನಾನು ಕೆಲವು ದೇವತೆಗಳು ಯುದ್ಧದಲ್ಲಿ ಎದುರಾಗಿ ಕಾದಾಡಿ ಮಡಿದಿರುವುದನ್ನೂ, ಇತರರು ವಿಮುಖರಾಗಿ ಹತರಾದುದನ್ನೂ ನೋಡಿದ್ದೇನೆ. ಹಾಗೆ ಮೃತರಾದ ದಾನವರಿಗೆಲ್ಲ ಪ್ರೇತತ್ವವು ಸಂಭವಿಸುವುದೊ? ಇಲ್ಲವೊ? ಹೇಳು.

೨೩. ವಿಷ್ಣುವು ಹೇಳುತ್ತಾನೆ:—ಇಂದ್ರ! ಯುದ್ಧದಲ್ಲಿ ಪರಾಙ್ಮುಖರಾಗಿ ಮಡಿದ ದೇವತೆಗಳಾಗಲಿ, ಮನುಷ್ಯರಾಗಲಿ ಎಲ್ಲರೂ ನಿಶ್ಚಯವಾಗಿಯೂ ಪ್ರೇತರಾಗುವರು.

ವಿಷಾದಗ್ನೇಃ ಕುಲಘ್ನಾನಾಂ ತಥಾ ಚೈವಾತ್ಮಘಾತಿನಾಂ ।
ದಂಷ್ಟ್ರಿಭಿರ್ಹತದೇಹಾನಾಂ ಶೃಂಗಿಭಿಶ್ಚ ಸುರೇಶ್ವರ ।
ಪ್ರೇತತ್ವಂ ಜಾಯತೇ ನೂನಂ ಸತ್ಯಮೇತದಸಂಶಯಂ ॥ ೨೪ ॥

ಇಂದ್ರ ಉವಾಚ :—

ಕಥಂ ತೇಷಾಂ ಭವೇನ್ಮುಕ್ತಿಃ ಪ್ರೇತತ್ವಾದ್ದಾರುಣಾದ್ವಿಭೋ ।
ಏತನ್ಮೇ ಸರ್ವಮಾಚಕ್ಷ್ವ ಯೇನ ಯತ್ನಂ ಕರೋಮ್ಯಹಂ ॥ ೨೫ ॥

ಶ್ರೀ ಭಗವಾನುವಾಚ :—

ತೇಷಾಂ ಸಂಯುಜ್ಯತೇ ಶ್ರಾದ್ಧಂ ಕನ್ಯಾ ಸಂಸ್ಥೇ ದಿವಾಕರೇ ।
ಕೃಷ್ಣಪಕ್ಷೇ ಚತುರ್ದಶ್ಯಾಂ ನಭಸ್ಯಸ್ಯ ಸುರೇಶ್ವರ ॥ ೨೬ ॥
ಗಯಾಯಾಂ ಭಕ್ತಿಪೂರ್ವಂ ತು ಪಿತಾಮಹವಚೋ ಯಥಾ ।
ತತಃ ಪ್ರಯಾಂತಿ ತೇ ಮೋಕ್ಷಂ ಸತ್ಯಮೇತದಸಂಶಯಂ ॥ ೨೭ ॥

ಇಂದ್ರ ಉವಾಚ :—

ಕಸ್ಮಾತ್ತತ್ರದಿನೇ ಶ್ರಾದ್ಧಂ ಕ್ರಿಯತೇ ಮಧುಸೂದನ ।
ಶಸ್ತ್ರೈರ್ವಿನಿಹತಾನಾಂ ಚ ಸರ್ವಂ ಮೇ ವಿಸ್ತರಾದ್ವದ ॥ ೨೮ ॥

---

೨೪. ವಿಷಾಗ್ನಿಗಳಿಂದ ಹತರಾದವರು, ಕುಲನಾಶಕರು, ಆತ್ಮಹತ್ಯೆ ಮಾಡಿಕೊಂಡವರು, ಹಲ್ಲುಗಳುಳ್ಳ ಹಂದಿ ಮೊದಲಾದುವುಗಳಿಂದಲೂ, ಕೊಂಬುಗಳುಳ್ಳ ಕೋಣ ಮೊದಲಾದುವುಗಳಿಂದಲೂ ಮೃತರಾದವರು ಇವರಿಗೆ ಪ್ರೇತತ್ವವು ಸಂಭವಿಸುವುದು. ಇದು ನಿಜ.

೨೫. ಇಂದ್ರನು ಹೇಳುತ್ತಾನೆ:—ಸ್ವಾಮಿ! ಅವರಿಗೆ ಆ ದಾರುಣವಾದ ಪ್ರೇತತ್ವದಿಂದ ಮೋಕ್ಷವು ಹೇಗೆ ಆಗುವುದು? ಇದನ್ನು ನನಗೆ ಹೇಳು. ಅದರಿಂದ ನಾನು ಅವರ ಪ್ರೇತತ್ವ ನಿವಾರಣೆಗಾಗಿ ಯತ್ನಿಸುವೆನು.

೨೬–೨೭. ಶ್ರೀ ಭಗವಂತನು ಹೇಳುತ್ತಾನೆ:—ಇಂದ್ರ! ಭಾದ್ರಪದ ಬಹುಳ ಚತುರ್ದಶೀ ದಿನ ಸೂರ್ಯನು ಕನ್ಯಾರಾಶಿಯಲ್ಲಿರಲು ಗಯೆಯಲ್ಲಿ ಭಕ್ತಿಯಿಂದ ಮಾಡಿದ ಶ್ರಾದ್ಧವು ಬ್ರಹ್ಮನ ಮಾತಿನಂತೆ ಆ ಪ್ರೇತರಾದವರಿಗೆ ಸೇರುವುದು. ಅದರಿಂದವರು ಮುಕ್ತರಾಗುವರು. ಇದು ನಿಜ.

೨೮. ಇಂದ್ರನು ಹೇಳುತ್ತಾನೆ:—ಮಧುಸೂದನ! ಆ ದಿನ ಶಸ್ತ್ರಹತರಾದವರಿಗೆ ಏಕೆ ಶ್ರಾದ್ಧವನ್ನು ಮಾಡುವರು. ಸಮಸ್ತವನ್ನೂ ನನಗೆ ವಿಸ್ತಾರವಾಗಿ ಹೇಳು.

ಶ್ರೀ ಭಗವಾನುವಾಚ :—
ಭೂತಪ್ರೇತಪಿಶಾಚೈಶ್ಚ ಕೂಷ್ಮಾಂಡೈ ರಾಕ್ಷಸೈರಪಿ ।
ಪುರಾ ಸಂಪ್ರಾರ್ಥಿತಃ ಶಂಭುರ್ದಿನೇ ತತ್ರ ಸಮಾಗತೇ ।
ಅದ್ಯೈಕಂ ದಿವಸಂ ದೇವ ಕನ್ಯಾಸಂಸ್ಥೇ ದಿವಾಕರೇ ॥ ೨೯ ॥
ಅಸ್ಮಾಕಂ ದೇಹಿ ಯೇನ ಸ್ಯಾತ್ತೃಪ್ತಿರ್ವರ್ಷಸಮುದ್ಭವಾ ।
ಪ್ರದತ್ತೇ ವಂಶಜೈಃ ಶ್ರಾದ್ಧೇ ದೀನಾನಾಂ ತ್ವಂ ದಯಾಂ ಕುರು ॥ ೩೦ ॥
ಶ್ರೀ ಭಗವಾನುವಾಚ :—
ಯಃ ಕರಿಷ್ಯತಿ ವೈ ಶ್ರಾದ್ಧಮಸ್ಮಿನ್ನಹನಿ ಸಂಸ್ಥಿತೇ ।
ಕೃಷ್ಣಪಕ್ಷೇ ಚತುರ್ದಶ್ಯಾಂ ನಭಸ್ಯಸ್ಯ ಚ ವಂಶಜಃ ।
ಭವಿಷ್ಯತಿ ಪರಾ ಪ್ರೀತಿರ್ಯಾವತ್ಸಂವತ್ಸರಃ ಸ್ಥಿತಃ ॥ ೩೧ ॥
ಯಃ ಪುನಸ್ತು ಗಯಾಂ ಗತ್ವಾ ಯುಷ್ಮದ್ವಂಶ ಸಮುದ್ಭವಃ ।
ಕರಿಷ್ಯತಿ ತಥಾ ಶ್ರಾದ್ಧಂ ತೇನ ಮುಕ್ತಿಮವಾಪ್ಸ್ಯಥ ॥ ೩೨ ॥
ಶಸ್ತ್ರೇಣ ನಿಹತಾನಾಂ ಚ ಸ್ವರ್ಗಸ್ಥಾನಾಮಪಿ ಧ್ರುವಂ ।
ನ ಕರಿಷ್ಯತಿ ಯಃ ಶ್ರಾದ್ಧಂ ತಸ್ಮಿನ್ನಹನಿ ಸಂಸ್ಥಿತೇ ॥ ೩೩ ॥
ಕ್ಷುತ್ಪಿಪಾಸಾರ್ತದೇಹಾಶ್ಚ ಪಿತರಸ್ತಸ್ಯ ದುಃಖಿತಾಃ ।
ಸ್ಥಾಸ್ಯಂತಿ ವತ್ಸರಂ ಯಾವದೇತದಾಹ ಪಿತಾಮಹಃ ॥ ೩೪ ॥
ತಸ್ಮಾತ್ಸರ್ವಪ್ರಯತ್ನೇನ ತಸ್ಮಿನ್ನಹನಿ ಕಾರಯೇತ್ ।
ಅನ್ಯಮುದ್ದಿಶ್ಯ ತತ್ಸರ್ವಂ ಪ್ರೇತಾನಾಮಿಹ ಜಾಯತೇ ॥ ೩೫ ॥

---

೨೯–೩೦. ಶ್ರೀ ಭಗವಂತನು ಹೇಳುತ್ತಾನೆ:—ಹಿಂದೆ ಭಾದ್ರಪದ ಕೃಷ್ಣ ಚತುರ್ದಶೀ ದಿನ ಭೂತ, ಪ್ರೇತ, ಪಿಶಾಚಗಳು, ಕೂಷ್ಮಾಂಡಗಳು, ರಾಕ್ಷಸರು ಇವರು ಮಹೇಶ್ವರನನ್ನು ಕುರಿತು, "ಈ ದಿನ ನಮ್ಮ ವಂಶದವರು ಮಾಡಿದ ಶ್ರಾದ್ಧದಿಂದ ನಮಗೆ ಒಂದು ವರ್ಷದ ತೃಪ್ತಿಯಾಗುವಂತೆ ದೀನರಾದ ನಮ್ಮಲ್ಲಿ ದಯೆಮಾಡು" ಎಂದು ಕೇಳಿಕೊಂಡರು.

೩೧–೩೨. ಶ್ರೀ ಭಗವಂತನು ಹೇಳುತ್ತಾನೆ:— ಭಾದ್ರಪದ ಕೃಷ್ಣ ಚತುರ್ದಶೀ ದಿನ ನಿಮ್ಮ ವಂಶಿಕನು ಶ್ರಾದ್ಧ ಮಾಡಿದರೆ ನಿಮಗೆ ಒಂದು ವರ್ಷಕಾಲ ತೃಪ್ತಿಯುಂಟಾಗಲಿ. ನಿಮ್ಮ ವಂಶದವನು ಗಯೆಗೆ ಹೋಗಿ ಶ್ರಾದ್ಧಗೈದರೆ ನೀವು ಮೋಕ್ಷವನ್ನು ಪಡೆಯಿರಿ.

೩೩–೩೪. ಆ ದಿನ ಶಸ್ತ್ರದಿಂದ ಹತರಾದವರಿಗೂ, ಸ್ವರ್ಗಸ್ಥರಾದವರಿಗೂ ಶ್ರಾದ್ಧ ಮಾಡದವನ ಪಿತೃಗಳು ಒಂದು ವರ್ಷಕಾಲ ಹಸಿವು ಬಾಯಾರಿಕೆಯಿಂದ ವ್ಯಥೆಗೊಂಡು ದುಃಖಗೊಳ್ಳುವರು.

೩೫. ಆದುದರಿಂದ ಆ ದಿನ ಇತರರನ್ನುದ್ದೇಶಿಸಿ ಶ್ರಾದ್ಧ ಮಾಡಿದರೆ ಅವು ಗಳೆಲ್ಲ ಪ್ರೇತಗಳಿಗೆ ಸಲ್ಲುವುವು.

ತತೋ ಭಗವತಾ ದತ್ತಾ ತೇಷಾಂ ಚೈವ ತು ಸಾ ತಿಥಿಃ ।
ಶ್ರಾದ್ಧಕರ್ಮಣಿ ಸಂಜಾತೇ ವಿನಾ ಶಸ್ತ್ರಹತಂ ಜನಂ ॥ ೩೬ ॥
ಸಂಮುಖಸ್ಯಾಽಪಿ ಸಂಗ್ರಾಮೇ ಯುಧ್ಯಮಾನಸ್ಯ ದೇಹಿನಃ ।
ಕದಾಚಿಚ್ಚಲತೇ ಚಿತ್ತಂ ತೀಕ್ಷ್ಣಶಸ್ತ್ರಹತಸ್ಯ ಚ ॥ ೩೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಪ್ರೇತಶ್ರಾದ್ಧಕಥನವರ್ಣನಂ"
ನಾಮ ಚತುರಧಿಕದ್ವಿಶತತಮೋಽಧ್ಯಾಯಃ

---

೩೬–೩೭. ಆದುದರಿಂದ ಭಗವಂತನು ಶಸ್ತ್ರಹತರಾದ ಜನರನ್ನು ಬಿಟ್ಟು ಯುದ್ಧದಲ್ಲಿ ಅಭಿಮುಖನಾಗಿ ಮೃತನಾದವನಿಗೂ, ದೃಢಮನಸ್ಕನಾಗಿ ತೀಕ್ಷ್ಣನಾದ ಆಯುಧಗಳಿಂದ ಮಡಿದವನಿಗೂ ಶ್ರಾದ್ಧಮಾಡಲು ಆ ತಿಥಿಯನ್ನು ನೇಮಿಸಿರುವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದಲ್ಲಿ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಪ್ರೇತಶ್ರಾದ್ಧಕಥನವರ್ಣನ" ವೆಂಬ
ಇನ್ನೂರನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚೋತ್ತರದ್ವಿಶತತಮೋಽಧ್ಯಾಯಃ

### ಗಯಾಶ್ರಾದ್ಧಫಲಮಾಹಾತ್ಮ್ಯವರ್ಣನಂ

**ವಿಷ್ಣುರುವಾಚ :–**

**ಏವಂ ಜ್ಞಾತ್ವಾ ಸಹಸ್ರಾಕ್ಷ ಮಮ ವಾಕ್ಯಂ ಸಮಾಚರ ।**
**ಯದಿ ತೇ ವಲ್ಲಭಾಸ್ತೇ ಚ ಯೇ ಹತಾ ರಣಮೂರ್ಧನಿ ॥ ೧ ॥**
**ಯುಧ್ಯಮಾನಾಸ್ತವಾಗ್ರೇ ಚ ಗಯಾಶ್ರಾದ್ಧೇನ ತರ್ಪಯ ।**
**ತಾನ್ ಸರ್ವಾನ್ ಪ್ರೇತಭಾವಾಚ್ಚ ಯೇನ ಮುಕ್ತಿಂ ಭಜಂತಿ ತೇ ॥ ೨ ॥**
**ಪಲಾಯನಪರಾ ಯೇ ಚ ಪೃಷ್ಠದೇಶೇ ಹತಾ ಮೃತಾಃ ॥ ೩ ॥**

**ಇಂದ್ರ ಉವಾಚ :–**

**ವರ್ಷೇ ವರ್ಷೇ ತದಾ ಶ್ರಾದ್ಧಂ ಪ್ರಕರೋತಿ ಪಿತಾಮಹಃ ।**
**ಗಯಾಂ ಗತ್ವಾ ದಿನೇ ತಸ್ಮಿನ್ ಪಿತೃಣಾಂ ದಿವ್ಯರೂಪಿಣಾಂ ॥ ೪ ॥**
**ತತ್ಕಥಂ ದೇವ ಗಚ್ಛಾಮಿ ತತ್ರಾಽಹಂ ಶ್ರಾದ್ಧಸಿದ್ಧಯೇ ।**
**ತಸ್ಮಾತ್ಕಥಯ ಮೇ ತೇಷಾಂ ಕಿಂಚಿಚ್ಛ್ರಾದ್ಧಾಯ ಭೂತಲೇ ।**
**ಮುಕ್ತಿದಂ ಯೇನ ಗಚ್ಛಾಮಿ ತವ ವಾಕ್ಯಾಜ್ಜನಾರ್ದನ ॥ ೫ ॥**

---

## ಕನ್ನಡದ ಅನುವಾದ

### ಗಯಾಶ್ರಾದ್ಧಫಲಮಾಹಾತ್ಮ್ಯವರ್ಣನ

೧–೩. ವಿಷ್ಣುವು ಹೇಳುತ್ತಾನೆ:—ಇಂದ್ರ! ನಾನು ಹೇಳಿದ್ದನ್ನು ತಿಳಿದುಕೊಂಡು ಹಾಗೆಯೇ ಆಚರಿಸು. ಯುದ್ಧಾಂಗಣದಲ್ಲಿ ನಿನ್ನ ಮುಂದೆ ಯುದ್ಧಮಾಡಿ ಮಡಿದವರೂ, ಓಡಿಹೋಗಿ ಬೆನ್ನಿನಮೇಲೆ ಹೊಡೆಯಲ್ಪಟ್ಟು ಮೃತರಾದವರೂ ನಿನಗೆ ಪ್ರಿಯರಾಗಿದ್ದರೆ ಗಯಾ ಶ್ರಾದ್ಧಗೈದು ಅವರನ್ನು ತೃಪ್ತಿಗೊಳಿಸು. ಆದರಿಂದವರು ಪ್ರೇತತ್ವದಿಂದ ಮುಕ್ತರಾಗುವರು.

೪. ಇಂದ್ರನು ಹೇಳುತ್ತಾನೆ:—ಆ ದಿನ ಪ್ರತಿ ವರ್ಷವೂ ಪಿತಾಮಹನು ಗಯೆಗೆ ಹೋಗಿ ದಿವ್ಯರೂಪಿಗಳಾದ ಪಿತೃಗಳಿಗೆ ಶ್ರಾದ್ಧಗೈಯುವನು.

೫. ಜನಾರ್ದನ! ಆದುದರಿಂದ ನಾನು ಹೇಗೆ ಶ್ರಾದ್ಧಮಾಡಲು ಅಲ್ಲಿಗೆ ಹೋಗಲಿ? ನನಗೆ ಭೂಮಿಯಲ್ಲಿ ಶ್ರಾದ್ಧಾರ್ಹವೂ, ಮೋಕ್ಷಪ್ರದವೂ ಆದ ಸ್ಥಳವನ್ನು ಹೇಳು. ನಿನ್ನ ಮಾತಿನಂತೆ ಅಲ್ಲಿಗೆ ಹೋಗುವೆನು.

ವಿಶ್ವಾಮಿತ್ರ ಉವಾಚ :—

ತತಃ ಸ ಸುಚಿರಂ ಧ್ಯಾತ್ವಾ ತಮುವಾಚ ಜನಾರ್ದನಃ ।
ಅಸ್ತಿ ತೀರ್ಥಂ ಮಹತ್ಪುಣ್ಯಂ ತಸ್ಮಾದಪ್ಯಧಿಕಂ ಚ ಯತ್ ॥ ೬ ॥
ಹಾಟಕೇಶ್ವರಜೇ ಕ್ಷೇತ್ರೇ ಕೂಪಿಕಾಮಧ್ಯಸಂಸ್ಥಿತಂ ।
ಅಮಾವಾಸ್ಯಾ ದಿನೇ ತತ್ರ ಚತುರ್ದಶ್ಯಾಶ್ಚ ದೇವಪ ।
ಗಯಾ ಸಂಕ್ರಮತೇ ಸಮ್ಯಕ್ಸರ್ವತೀರ್ಥಸಮನ್ವಿತಾ ॥ ೭ ॥
ಕನ್ಯಾಸಂಸ್ಥೇ ರವೌ ತತ್ರ ಯಃ ಶ್ರಾದ್ಧಂ ಕುರುತೇ ನರಃ ।
ಅಷ್ಟವಂಶೋದ್ಭವೈರ್ವಿಪ್ರೈಃ ಸ ಪಿತೄಂಸ್ತಾರಯೇನ್ನಿಜಾನ್ ॥ ೮ ॥
ಅಪಿ ಪ್ರೇತತ್ವಮಾಪನ್ನಾನ್ಕಿಂಪುನಃ ಸ್ವರ್ಗಸಂಸ್ಥಿತಾನ್ ।
ತತ್ಕ್ಷೇತ್ರಪ್ರಭವಾ ವಿಪ್ರಾ ಅಷ್ಟವಂಶಸಮುದ್ಭವಾಃ ॥ ೯ ॥
ತಪ ಉಗ್ರಂ ಸಮಾಸ್ಥಾಯ ವರ್ತಂತೇ ಹಿಮಪರ್ವತೇ ।
ಆನರ್ತಾಧಿಪತೇರ್ದಾನಾದ್ಭೀತಾಸ್ತತ್ರ ಸಮಾಗತಾಃ ॥ ೧೦ ॥
ತಾನ್ ಗೃಹೀತ್ವಾ ದ್ರುತಂ ಗಚ್ಛ ತತ್ರ ಸಂಬೋಧ್ಯ ಗೌರವಾತ್ ।
ಸಾಮಪೂರ್ವೈರುಪಾಯೈಸ್ತೈಸ್ತೇಷಾಮಗ್ರೇ ಸಮಾಚರ ॥ ೧೧ ॥
ಶ್ರಾದ್ಧಂ ಚೈವ ಯಥಾ ನ್ಯಾಯಂ ತತಃ ಪ್ರಾಪ್ಸ್ಯಸಿ ವಾಂಛಿತಂ ।
ತೇ ಚಾಽಪಿ ಸುಖಿನಃ ಸರ್ವೇ ಭವಿಷ್ಯಂತಿ ಸಮಾಗತಾಃ ॥ ೧೨ ॥
ತ್ವಯಾ ಸಹ ಪ್ರಪೂಜ್ಯಾಶ್ಚ ಹ್ಯಸ್ಮಾಭಿಃ ಶ್ರಾದ್ಧಕಾರಣಾತ್ ।
ತಚ್ಛ್ರುತ್ವಾ ಸಹಸಾ ಶಕ್ರಃ ಸಂತೋಷಂ ಪರಮಂ ಗತಃ ॥ ೧೩ ॥

---

೬–೧೦. ವಿಶ್ವಾಮಿತ್ರನು ಹೇಳುತ್ತಾನೆ:—ವಿಷ್ಣುವು ಬಹಳ ಹೊತ್ತು ಆಲೋಚಿಸಿ ಹೀಗೆಂದನು. ಹಾಟಕೇಶ್ವರಜ ಕ್ಷೇತ್ರದಲ್ಲಿ ಕೂಪಿಕೆಯ ಮಧ್ಯದಲ್ಲಿ ಆ ಗಯಾ ಕ್ಷೇತ್ರಕ್ಕಿಂತ ಅಧಿಕವಾದ ಪುಣ್ಯಕರವಾದ ಮಹಾ ಕ್ಷೇತ್ರವೊಂದಿದೆ. ಅಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿರಲು ಚತುರ್ದಶೀ ಅಮಾವಾಸ್ಯೆ ದಿನಗಳಲ್ಲಿ ಗಯೆಯು ಸಕಲ ತೀರ್ಥಗಳೊಡನೆ ಬಂದು ಸೇರುವುದು. ಆ ದಿನ ಅಲ್ಲಿ ಅಷ್ಟ ಕುಲದ ಬ್ರಾಹ್ಮಣರಿಂದ ಶ್ರಾದ್ಧ ಮಾಡಿದ ಬ್ರಾಹ್ಮಣನು ತನ್ನ ಪ್ರೇತರಾದ ಪಿತೃಗಳನ್ನೂ ಉದ್ಧರಿಸುವನು. ಸ್ವರ್ಗವಾಸಿಗಳ ವಿಷಯವಿನ್ನೇನು. ಆ ಕ್ಷೇತ್ರದ ಅಷ್ಟಕುಲದ ಬ್ರಾಹ್ಮಣರು ಆನರ್ತರಾಜನ ದಾನದ ಭಯದಿಂದ ಹಿಮಾಲಯವನ್ನು ಸೇರಿ ಕಠಿನ ತಪಸ್ಸನ್ನಾಚರಿಸುತ್ತಿರುವರು.

೧೧–೧೩. ಆ ಬ್ರಾಹ್ಮಣರನ್ನು ಬೇಗನೆ ಸಾಮ ಮೊದಲಾದ ಉಪಾಯಗಳಿಂದ ಕರೆದುಕೊಂಡು ಬಂದು ಗೌರವಿಸಿ ಅವರ ಮುಂದೆ ವಿಧಿಯಂತೆ ಶ್ರಾದ್ಧವನ್ನು ಮಾಡು. ಅದರಿಂದ ಇಷ್ಟಾರ್ಥವನ್ನು ಪಡೆಯುವೆ. ಆ ಬ್ರಾಹ್ಮಣರೂ ಶ್ರಾದ್ಧದಲ್ಲಿ ನಮ್ಮಿಂದ ಪೂಜ್ಯರಾಗಿ ಸುಖಿಗಳಾಗುವರು. ಇಂದ್ರನು ಅದನ್ನು ಕೇಳಿ ಕೂಡಲೆ ಅಧಿಕವಾಗಿ ಸಂತೋಷಗೊಂಡನು.

ಹಿಮವಂತಂ ಸಮುದ್ದಿಶ್ಯ ಪ್ರಸ್ಥಿತಸ್ತ್ವರಯಾನ್ವಿತಃ ।
ವಾಸುದೇವೋಽಪಿ ರಾಜೇಂದ್ರ ಕ್ಷೀರಾಬ್ಧಿಮಗಮತ್ತದಾ ॥ ೧೪ ॥
ಹಿಮವಂತಂ ಸಮಾಶ್ರಿತ್ಯ ಶಕ್ರೋಽಪಿ ದದೃಶೇ ದ್ವಿಜಾನ್ ।
ಅಷ್ಟವಂಶಸಮುದ್ಭೂತಾನ್ ವಿಷ್ಣುನಾ ಸಮುದಾಹೃತಾನ್ ॥ ೧೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಗಯಾಶ್ರಾದ್ಧಫಲಮಾಹಾತ್ಮ್ಯವರ್ಣನಂ"
ನಾಮ ಪಂಚೋತ್ತರದ್ವಿಶತತಮೋಽಧ್ಯಾಯಃ

---

೧೪. ಅವನು ಬೇಗನೆ ಹಿಮಾಲಯಕ್ಕೆ ಪ್ರಯಾಣ ಮಾಡಿದನು. ವಿಷ್ಣುವೂ ಕ್ಷೀರಸಮುದ್ರಕ್ಕೆ ಹೋದನು.

೧೫. ಇಂದ್ರನು ಹಿಮಾಲಯವನ್ನು ಸೇರಿ ವಿಷ್ಣುವು ಹೇಳಿದ ಅಷ್ಟಕುಲದ ಬ್ರಾಹ್ಮಣರನ್ನು ಕಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಗಯಾಶ್ರಾದ್ಧಫಲಮಾಹಾತ್ಮ್ಯವರ್ಣನ" ವೆಂಬ
ಇನ್ನೂರಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಷಡುತ್ತರದ್ವಿಶತತಮೋಽಧ್ಯಾಯಃ

### ಬಾಲಮಂಡನತೀರ್ಥಮಾಹಾತ್ಮ್ಯವರ್ಣನಂ

**ವಿಶ್ವಾಮಿತ್ರ ಉವಾಚ :—**

**ಇಂದ್ರೋಽಪಿ ವಿಷ್ಣುವಾಕ್ಯೇನ ಹಿಮವಂತಂ ಸಮಾಗತಃ ।**
**ಐರಾವತಂ ಸಮಾರುಹ್ಯ ನಾಗೇಂದ್ರಂ ಪರ್ವತೋಪಮಂ ॥ ೧ ॥**
**ತತ್ರಾಽಪಶ್ಯದೃಷೀಂಸ್ತಾನ್ ಸ ಚಮತ್ಕಾರಸಮುದ್ಭವಾನ್ ।**
**ನಿಯಮೈಃ ಸಂಯಮೈರ್ಯುಕ್ತಾನ್ ಸದಾಚಾರಪರಾಯಣಾನ್ ।**
**ವಾನಪ್ರಸ್ಥಾಶ್ರಮೋಪೇತಾನ್ ಕಾಮಕ್ರೋಧವಿವರ್ಜಿತಾನ್ ॥ ೨ ॥**
**ಏಕೇ ವಿಪ್ರಾಃ ಸ್ಥಿತಾಸ್ತೇಷಾಮೇಕಾಂತರಿತಭೋಜನಾಃ ।**
**ಷಷ್ಠಕಾಲಾಶಿನಶ್ಚಾಽನ್ಯೇ ಚಾಂದ್ರಾಯಣಪರಾಯಣಾಃ ॥ ೩ ॥**
**ಅಶ್ಮಕುಟ್ಟಾಃ ಸ್ಥಿತಾಃ ಕೇಚಿದ್ದಂತೋಲೂಖಲಿನಃ ಪರೇ ।**
**ಶೀರ್ಣಪರ್ಣಾಽಶನಾಃ ಕೇಚಿಜ್ಜಲಾಹಾರಾಸ್ತಥಾ ಪರೇ ।**
**ವಾಯುಭಕ್ಷಾಸ್ತಥೈವಾಽನ್ಯೇ ತಪಸ್ತೇಪುಃ ಸುದಾರುಣಂ ॥ ೪ ॥**

---

### ಕನ್ನಡದ ಅನುವಾದ

#### ಬಾಲಮಂಡನತೀರ್ಥಮಾಹಾತ್ಮ್ಯವರ್ಣನ

೧–೨. ವಿಶ್ವಾಮಿತ್ರನು ಹೇಳುತ್ತಾನೆ :—ದೇವೇಂದ್ರನು ವಿಷ್ಣುವಿನ ಮಾತಿನಿಂದ ಪರ್ವತದಂತಿರುವ ಐರಾವತವನ್ನೇರಿ ಹಿಮಾಲಯಕ್ಕೆ ಬಂದು ನಿಯಮಸಂಯಮಗಳಿಂದ ಕೂಡಿದವರೂ, ಸದಾಚಾರನಿರತರೂ, ವಾನಪ್ರಸ್ಥಾಶ್ರಮಿಗಳೂ, ಕಾಮಕ್ರೋಧರಹಿತರೂ ಆದ ಚಮತ್ಕಾರಪುರದ ಬ್ರಾಹ್ಮಣರನ್ನು ಕಂಡನು.

೩–೪. ಅವರಲ್ಲಿ ಕೆಲವರು ಎರಡು ದಿವಸಕ್ಕೊಮ್ಮೆ ಭೋಜನಮಾಡುವವರೂ, ಇನ್ನು ಕೆಲವರು ಷಷ್ಠಕಾಲಭೋಜಿಗಳೂ, ಮತ್ತೆ ಕೆಲವರು ಚಾಂದ್ರಾಯಣನಿರತರೂ, ಕೆಲವರು ಕಲ್ಲಿನಿಂದ ಕುಟ್ಟಿ ಆಹಾರಗಳನ್ನು ತಿನ್ನುವವರೂ, ಕೆಲವರು ಹಲ್ಲುಗಳೇ ಒರಳಾಗುಳ್ಳವರೂ (ಹಲ್ಲುಗಳಿಂದ ಕಡಿದು ತಿನ್ನುವವರೂ), ಕೆಲವರು ಒಣಗಿದ ತರಗುಗಳನ್ನು ಭಕ್ಷಿಸುವವರೂ, ಕೆಲವರು ನೀರನ್ನು ಕುಡಿದು ಜೀವಿಸುವವರೂ, ಕೆಲವರು ವಾಯುಭಕ್ಷಕರೂ ಆಗಿ ಘೋರ ತಪವನ್ನಾಚರಿಸುತ್ತಿದ್ದರು.

ಅಥ ಶಕ್ರಂ ಸಮಾಲೋಕ್ಯ ತತ್ರಾಯಾಂತಂ ದ್ವಿಜೋತ್ತಮಾಃ ।
ಪೂಜಿತಂ ಚಾರಣೈಃ ಸಿದ್ಧೈಸ್ತೈರದೃಷ್ಟಂ ಕದಾಚನ ॥ ೫ ॥
ತೇ ಸರ್ವೇ ಬ್ರಾಹ್ಮಣಾಃ ಪ್ರೋಕ್ತಾಸ್ತದಾಶ್ರಮಸಮೀಪಗೈಃ ॥ ೬ ॥
ಅಯಂ ಶಕ್ರಃ ಸಮಾಯಾತೋ ಭವತಾಮಾಶ್ರಮೇ ದ್ವಿಜಾಃ ।
ಕ್ರಿಯತಾಮರ್ಹಣಂ ಚಾಽಸ್ಮೈ ಯಚ್ಚೋಕ್ತಂ ಶಾಸ್ತ್ರಚಿಂತಕೈಃ ॥ ೭ ॥
ತತಸ್ತೇ ಬ್ರಾಹ್ಮಣಾಃ ಸರ್ವೇ ವಿಸ್ಮಯೋತ್ಫುಲ್ಲಲೋಚನಾಃ ।
ಸಂಮುಖಾಃ ಪ್ರಯಯುಸ್ತೂರ್ಣಂ ಕೃತಾಂಜಲಿಪುಟಾಃ ಸ್ಥಿತಾಃ ॥ ೮ ॥
ಗೃಹ್ಯೋಕ್ತವಿಧಿನಾ ತಸ್ಮೈ ಸಂಪ್ರಹೃಷ್ಟತನೂರುಹಾಃ ।
ಪ್ರೋಚುಶ್ಚ ವಿನಯಾತ್ಸರ್ವೇ ಕಿಮಾಗಮನಕಾರಣಂ ॥ ೯ ॥
ನಿರೀಹಸ್ಯಾಽಪಿ ದೇವೇಂದ್ರ ಕೌತುಕಂ ನೋ ವ್ಯವಸ್ಥಿತಂ ॥ ೧೦ ॥

ಇಂದ್ರ ಉವಾಚ :—

ಕುಶಲಂ ವೋ ದ್ವಿಜಶ್ರೇಷ್ಠಾ ಅಗ್ನಿಹೋತ್ರೇಷು ಕೃತ್ಸ್ನಶಃ ।
ತಪಶ್ಚರ್ಯಾಸು ಸರ್ವಾಸು ವೇದಾಽಭ್ಯಾಸೇ ತಥಾ ಶ್ರುತೇ ॥ ೧೧ ॥
ಹಾಟಕೇಶ್ವರಜಂ ಕ್ಷೇತ್ರಂ ತ್ಯಕ್ತ್ವಾ ತೀರ್ಥಮಯಂ ಶುಭಂ ।
ಕಸ್ಮಾದತ್ರ ಸಮಾಯಾತಾ ಹಿಮಾರ್ತಿಜನಕೇ ಗಿರೌ ॥ ೧೨ ॥

---

೫. ಅಲ್ಲಿಗೆ ಬರುತ್ತಿರುವ ಇಂದ್ರನನ್ನು ನೋಡಿ ಚಾರಣರೂ, ಸಿದ್ಧರೂ ಅವನನ್ನು ಪೂಜಿಸಿದರು. ಆ ಬ್ರಾಹ್ಮಣರು ಅವನನ್ನು ನೋಡಲಿಲ್ಲ.

೬–೭. ಆಗ ಆ ಬ್ರಾಹ್ಮಣರ ಆಶ್ರಮದ ಹತ್ತಿರವಿರುವವರು ಅವರನ್ನು ಕುರಿತು, ಬ್ರಾಹ್ಮಣರೆ! ನಿಮ್ಮ ಆಶ್ರಮಕ್ಕೆ ಈ ಇಂದ್ರನು ಬಂದಿರುವನು. ಇವನಿಗೆ ಶಾಸ್ತ್ರಜ್ಞರು ಹೇಳಿರುವಂತೆ ಪೂಜೆಯನ್ನು ಮಾಡಿರಿ, ಎಂದರು.

೮–೧೦. ಬಳಿಕ ಆ ಬ್ರಾಹ್ಮಣರೆಲ್ಲ ಆಶ್ಚರ್ಯದಿಂದ ಅರಳಿದ ಕಣ್ಣು ಗಳುಳ್ಳವರಾಗಿ ಎದುರುಗೊಂಡು ಗೃಹ್ಯೋಕ್ತ ವಿಧಿಯಿಂದ ಪೂಜಿಸಿ ಕೈಮುಗಿದು ಕೊಂಡು ಸಂತೋಷ ವಿನಯಗಳಿಂದ ದೇವೇಂದ್ರ! ನಿಸ್ಪೃಹನಾದ ನೀನು ಇಲ್ಲಿಗೆ ಆಗಮಿಸಲು ಕಾರಣವೇನು? ನಮಗೆ ಬಹಳ ಕುತೂಹಲವುಂಟಾಗಿದೆ. ಹೇಳು ಎಂದು ಪ್ರಶ್ನಿಸಿದರು.

೧೧. ಇಂದ್ರನು ಹೇಳುತ್ತಾನೆ:—ದ್ವಿಜವರ್ಯರೆ! ನಿಮಗೆ ಅಗ್ನಿಹೋತ್ರ, ತಪಶ್ಚರ್ಯೆ, ವೇದಾಭ್ಯಾಸ, ಶಾಸ್ತ್ರಶ್ರವಣ ಇವುಗಳಲ್ಲಿ ಕ್ಷೇಮವೆ?

೧೨. ನೀವು ಶುಭ ತೀರ್ಥವಾದ ಹಾಟಕೇಶ್ವರಜ ಕ್ಷೇತ್ರವನ್ನು ತ್ಯಜಿಸಿ ಹಿಮದಿಂದ ದುಃಖಗೊಳಿಸುವ ಈ ಹಿಮಾಲಯಕ್ಕೆ ಏಕೆ ಬಂದಿರುವಿರಿ?

ತಸ್ಮಾತ್ಸರ್ವೇ ಮಯಾ ಸಾರ್ಧಂ ಸಮಾಗಚ್ಛಂತು ಸದ್ವಿಜಾಃ ।
ಚಮತ್ಕಾರಪುರೇ ಪುಣ್ಯೇ ಬಹುವಿಪ್ರಸಮಾಕುಲೇ ॥ ೧೩ ॥
ವಾಸುದೇವಸಮಾದೇಶಾತ್ತತ್ರ ಗತ್ವಾಽಥ ಸಾಂಪ್ರತಂ ।
ಗಯಾಕೂಪೇ ಕರಿಷ್ಯಾಮಿ ಶ್ರಾದ್ಧಂ ಭಕ್ತ್ಯಾ ದ್ವಿಜೋತ್ತಮಾಃ ॥ ೧೪ ॥
ಯುಷ್ಮದಗ್ರೇ ಚತುರ್ದಶ್ಯಾಂ ಪ್ರೇತಪಕ್ಷ ಉಪಸ್ಥಿತೇ ।
ಖೇಚರತ್ವಂ ಸಮಾಯಾತಂ ಸರ್ವೇಷಾಂ ಭವತಾಂ ಸ್ಫುಟಂ ॥ ೧೫ ॥
ಸಬಾಲವೃದ್ಧಪತ್ನೀಕಾಃ ಸಾಗ್ನಿಹೋತ್ರಾ ಮಯಾ ಸಹ ।
ತಸ್ಮಾದ್ಗಚ್ಛತ ಭದ್ರಂ ವಸ್ತತ್ರ ಸ್ಥಾನಂ ಭವಿಷ್ಯತಿ ॥ ೧೬ ॥

ಬ್ರಾಹ್ಮಣಾ ಊಚುಃ :—

ನ ವಯಂ ತತ್ರ ಯಾಸ್ಯಾಮಶ್ಚಮತ್ಕಾರಪುರಂ ಪುನಃ ।
ಅನ್ಯೇಽಪಿ ಬ್ರಾಹ್ಮಣಾಸ್ತತ್ರ ವೇದವೇದಾಂಗಪಾರಗಾಃ ॥ ೧೭ ॥
ನಾಗರಾ ಯಾಜ್ಞಿಕಾಃ ಸಂತಿ ಸ್ಮಾರ್ತಾಃ ಶ್ರುತಿಪರಾಯಣಾಃ ।
ತೇಷಾಮಗ್ರೇ ಕುರು ಶ್ರಾದ್ಧಂ ಶ್ರದ್ಧಾ ಚೇಚ್ಛ್ರಾದ್ಧಜಾ ತವ ॥ ೧೮ ॥

ಇಂದ್ರ ಉವಾಚ :—

ತತ್ರ ಯೇ ಬ್ರಾಹ್ಮಣಾಃ ಕೇಚಿದ್ಭವದ್ಭಿಃ ಸಂಪ್ರಕೀರ್ತಿತಾಃ ।
ತಥಾ ವಿಧಾಶ್ಚ ತೇ ಸರ್ವೇ ವೇದವೇದಾಂಗಪಾರಗಾಃ ॥ ೧೯ ॥

---

೧೩. ಸಾಧು ಬ್ರಾಹ್ಮಣರೆ! ನೀವೆಲ್ಲ ನನ್ನೊಡನೆ ಪವಿತ್ರವೂ, ಅನೇಕ ಬ್ರಾಹ್ಮಣರಿಂದ ತುಂಬಿರುವುದೂ ಆದ ಚಮತ್ಕಾರಪುರಕ್ಕೆ ಬನ್ನಿರಿ.

೧೪–೧೫. ನಾನೀಗ ವಾಸುದೇವನ ಆಜ್ಞೆಯಿಂದ ಅಲ್ಲಿರುವ ಗಯಾ ಕೂಪವನ್ನು ಸೇರಿ ಪ್ರೇತಪಕ್ಷವು ಬರಲು ಚತುರ್ದಶೀ ದಿನ ನಿಮ್ಮ ಮುಂದೆ ಭಕ್ತಿಯಿಂದ ಶ್ರಾದ್ಧವನ್ನು ಮಾಡುವೆನು. ನಿಮಗೀಗ ಸ್ಪಷ್ಟವಾಗಿ ಆಕಾಶಗಮನ ಶಕ್ತಿಯು ಬಂದಿದೆ.

೧೬. ಆದುದರಿಂದ ನೀವು ಬಾಲ, ವೃದ್ಧ, ಪತ್ನಿ, ಅಗ್ನಿಗಳೊಡನೆ ನನ್ನೊಡನೆ ಆ ಕ್ಷೇತ್ರಕ್ಕೆ ಬನ್ನಿರಿ. ನಿಮಗೆ ಆ ಸ್ಥಾನವು ಮಂಗಳಕರವಾಗುವುದು.

೧೭–೧೮. ಬ್ರಾಹ್ಮಣರು ಹೇಳುತ್ತಾರೆ:—ನಾವು ಮರಳಿ ಚಮತ್ಕಾರ ಪುರಕ್ಕೆ ಹೋಗುವುದಿಲ್ಲ. ಅಲ್ಲಿ ಇತರ ವೇದವೇದಾಂಗಪಾರಂಗತರೂ, ಯಾಜ್ಞಿಕರೂ, ಸ್ಮೃತಿ ಶ್ರುತಿ ಪರಾಯಣರೂ ಆದ ಬ್ರಾಹ್ಮಣರಿರುವರು. ನಿನಗೆ ಶ್ರಾದ್ಧ ಮಾಡಲು ಶ್ರದ್ಧೆಯಿದ್ದರೆ ಅವರ ಮುಂದೆ ಮಾಡು.

೧೯–೨೧. ಇಂದ್ರನು ಹೇಳುತ್ತಾನೆ:—ದ್ವಿಜರೆ! ನೀವು ಹೇಳಿದಂತೆ ಅಲ್ಲಿ ಕೆಲವು ಮಂದಿ ಅಂತಹ ವೇದವೇದಾಂಗಪಾರಂಗತರೂ, ಶಾಸ್ತ್ರಾಧ್ಯಯನ

ಶ್ರುತಾಧ್ಯಯನಸಂಪನ್ನಾ ಯಾಜ್ಞಿಕಾಶ್ಚ ವಿಶೇಷತಃ ।
ಪರಂ ದ್ವೇಷಪರಾಃ ಸರ್ವೇ ತಥಾ ಪರುಷವಾದಿನಃ ॥ ೨೦ ॥
ಅಹಂಕಾರೇಣ ಸಂಯುಕ್ತಾಃ ಪರಸ್ಪರಜಿಗೀಷವಃ ।
ತಪಸಾ ವಿಪ್ರಯುಕ್ತಾಶ್ಚ ಭೋಗಸಕ್ತಾ ದಿವಾನಿಶಂ ॥ ೨೧ ॥
ಯೂಯಂ ಸರ್ವಗುಣೋಪೇತಾ ವಿಷ್ಣುನಾಮೇ ಪ್ರಕೀರ್ತಿತಾಃ ।
ತಸ್ಮಾದಾಗಮನಂ ಕಾರ್ಯಂ ಮಯಾ ಸಾರ್ಧಂ ಸಮಸ್ತಕೈಃ ॥ ೨೨ ॥

ಬ್ರಾಹ್ಮಣಾ ಊಚುಃ:—

ಅಸ್ಮಾಭಿಸ್ತೇನ ದೋಷೇಣ ತ್ಯಕ್ತಂ ಸ್ಥಾನಂ ನಿಜಂ ಹಿ ತತ್ ।
ಬಹುತೀರ್ಥಸಮೋಪೇತಂ ಸ್ವರ್ಗಮಾರ್ಗಪ್ರದರ್ಶಕಂ ॥ ೨೩ ॥
ಯದಿ ಯಾಸ್ಯಾಮಹೇ ತತ್ರ ತ್ವಯಾ ಸಾರ್ಧಂ ಪುರಂದರ ।
ಅಸ್ಮಾಕಂ ಸ್ವಜನಾಃ ಸರ್ವೇ ರಾಗದ್ವೇಷಪರಾಯಣಾಃ ॥ ೨೪ ॥
ಅಪರಾಧಾನ್ ಕರಿಷ್ಯಂತಿ ನಿತ್ಯಮೇವ ಪದೇ ಪದೇ ।
ಈರ್ಷ್ಯಾಧರ್ಮಸಮೋಪೇತಾಃ ಪರುಷಾಕ್ಷರಜಲ್ಪಕಾಃ ॥ ೨೫ ॥
ತತಃ ಸಂಪತ್ಸ್ಯತೇ ಕ್ರೋಧಃ ಕ್ರೋಧಾಚ್ಚ ತಪಸಃ ಕ್ಷಯಃ ।
ತತೋ ನ ಪ್ರಾಪ್ಯತೇ ಮುಕ್ತಿಸ್ತದ್ಗಚ್ಛಾಮಃ ಕಥಂ ವಿಭೋ ॥ ೨೬ ॥

---

ಸಂಪನ್ನರೂ, ಯಾಜ್ಞಿಕರೂ ಆದ ಬ್ರಾಹ್ಮಣರಿರುವರು. ಆದರೆ ಅವರೆಲ್ಲ ದ್ವೇಷ ನಿರತರೂ, ಕಠಿನವಾಗಿ ಮಾತಾಡುವವರೂ, ಅಹಂಕಾರಿಗಳೂ, ಅನ್ಯೋನ್ಯ ಜಯೇಚ್ಛುಗಳೂ, ತಪೋಹೀನರೂ, ಹಗಲು ರಾತ್ರಿ ಭೋಗಸಕ್ತರೂ ಆಗಿರುವರು.

೨೨. ನೀವು ಸಕಲ ಗುಣಗಳಿಂದ ಕೂಡಿದವರೆಂದು ವಿಷ್ಣುವು ನನಗೆ ಹೇಳಿದ್ದಾನೆ. ಆದುದರಿಂದ ನೀವೆಲ್ಲ ನನ್ನೊಡನೆ ಬನ್ನಿರಿ.

೨೩. ಬ್ರಾಹ್ಮಣರು ಹೇಳುತ್ತಾರೆ:—ದೇವೇಂದ್ರ! ನಾವು ನೀನು ಹೇಳಿದ ದೋಷದಿಂದಲೇ ಅನೇಕ ತೀರ್ಥಗಳಿಂದ ಕೂಡಿರುವುದೂ, ಸ್ವರ್ಗಮಾರ್ಗವನ್ನು ತೋರಿಸುವುದೂ ಆದ ಆ ನಮ್ಮ ಸ್ಥಾನವನ್ನು ತ್ಯಜಿಸಿದ್ದೇವೆ.

೨೪–೨೫. ಇಂದ್ರ! ನಾವು ನಿನ್ನೊಡನೆ ಅಲ್ಲಿಗೆ ಹೋದರೆ ರಾಗದ್ವೇಷ ನಿರತರಾದ ನಮ್ಮ ಬಂಧುಗಳೆಲ್ಲ ಅಸೂಯೆಯಿಂದ ಕಠಿನವಾಗಿ ಮಾತಾಡುತ್ತ ಪ್ರತಿದಿನವೂ ಆಗಾಗ ಕೆಡಕುಗಳನ್ನು ಮಾಡುವರು.

೨೬. ಅದರಿಂದ ಕೋಪವೂ, ಆ ಕೋಪದಿಂದ ತಪೋನಾಶವೂ ಆಗುವುದು. ಅದರಿಂದ ಮುಕ್ತಿಯುಂಟಾಗುವುದಿಲ್ಲ. ಆದುದರಿಂದ ನಾವು ಹೇಗೆ ಅಲ್ಲಿಗೆ ಹೋಗುವೆವು?

ಅಪರಂ ತತ್ರ ಭೂಪೋಽಸ್ತಿ ದೇಶೇ ದಾನಪರಃ ಸದಾ ।
ಆನರ್ತಾಧಿಪತಿಃ ಖ್ಯಾತಃ ಸರ್ವಭೂಮೌ ಸದೈವ ಸಃ ॥ ೨೭ ॥
ದದಾತಿ ವಿವಿಧಂ ದಾನಂ ಹಸ್ತ್ಯಶ್ವಕನಕಾದಿಕಂ ।
ಯದಿ ತತ್ರ ನ ಗೃಹ್ಣೀಮಸ್ತದಾಕೋಪಂ ಸ ಗಚ್ಛತಿ ॥ ೨೮ ॥
ಭೂಪಾಲೇ ಕೋಪಸಂಪನ್ನೇ ಸ್ವಜನೇಷು ವಿರೋಧಿಷು ।
ಸಿದ್ಧಿರ್ನೋ ತಪಸೋಽಸ್ಮಾಕಂ ತೇನ ತ್ಯಕ್ತಂ ನಿಜಂ ಪುರಂ ॥ ೨೯ ॥
ಯದಿ ಗೃಹ್ಣೀಮಹೇ ದಾನಂ ತಸ್ಯ ಭೂಪಸ್ಯ ದೇವಪ ।
ತಪಸಃ ಸಂಪ್ರಣಾಶಃ ಸ್ಯಾದ್ಯದ್ಧಿ ಪ್ರೋಕ್ತಂ ಸ್ವಯಂಭುವಾ ॥ ೩೦ ॥
ದಶಸೂನಾಸಮಶ್ಚಕ್ರೀ ದಶಚಕ್ರಿಸಮೋ ಧ್ವಜೀ ।
ದಶಧ್ವಜಿಸಮಾ ವೇಶ್ಯಾ ದಶವೇಶ್ಯಾಸಮೋ ನೃಪಃ ॥ ೩೧ ॥
ತತ್ಕಥಂ ತಸ್ಯ ಗೃಹ್ಣೀಮೋ ದಾನಂ ಪಾಪರತಸ್ಯ ಚ ।
ಯಥಾಽನ್ಯೇ ನಾಗರಾಃ ಸರ್ವೇ ಲೋಭೇನ ಮಹತಾನ್ವಿತಾಃ ॥ ೩೨ ॥

ಇಂದ್ರ ಉವಾಚ :—

ಪ್ರಭಾವೋಽಯಂ ದ್ವಿಜಶ್ರೇಷ್ಠಾಸ್ತಸ್ಯ ಕ್ಷೇತ್ರಸ್ಯ ಸಂಸ್ಥಿತಃ ।
ಹಾಟಕೇಶ್ವರ ಸಂಜ್ಞಸ್ಯ ಸರ್ವದೈವ ವ್ಯವಸ್ಥಿತಃ ॥ ೩೩ ॥

---

೨೭–೨೮. ಮತ್ತು ಅಲ್ಲಿ ಯಾವಾಗಲೂ ದಾನಪರನೆಂದು ಭೂಮಂಡಲದಲ್ಲಿ ವಿಖ್ಯಾತನಾದ ಆನರ್ತರಾಜನಿರುವನು. ಅವನು ಆನೆ, ಕುದುರೆ, ಸುವರ್ಣ ಮೊದಲಾದ ಬಗೆಬಗೆಯ ದಾನಗಳನ್ನು ಕೊಡುವನು. ಅದನ್ನು ನಾವು ತೆಗೆದು ಕೊಳ್ಳದಿದ್ದರೆ ಅವನು ಕೋಪಗೊಳ್ಳುವನು.

೨೯. ರಾಜನು ಕೋಪಗೊಳ್ಳಲು, ಬಂಧುಗಳು ವಿರೋಧಿಗಳಾಗಲು ನಮ್ಮ ತಪಸ್ಸು ಸಿದ್ಧಿಸುವುದಿಲ್ಲ. ಆದುದರಿಂದ ನಾವು ನಮ್ಮ ಪಟ್ಟಣವನ್ನು ಬಿಟ್ಟಿದ್ದೇವೆ.

೩೦. ದೇವೇಂದ್ರ! ನಾವು ಆ ರಾಜನ ದಾನವನ್ನು ತೆಗೆದುಕೊಂಡರೆ ನಮ್ಮ ತಪಸ್ಸು ನಾಶವಾಗುವುದೆಂದು ಬ್ರಹ್ಮನು ಹೇಳಿದ್ದಾನೆ.

೩೧. ಗಾಣಿಗನು ಹತ್ತು ಮಂದಿ ಮನುಷ್ಯರನ್ನು ಕೊಂದವನಿಗೆ ಸಮಾನನೂ, ಮದ್ಯನಿರ್ಮಾಪಕನು ಹತ್ತು ಮಂದಿ ಗಾಣಿಗರಿಗೆ ಸಮಾನನೂ, ಸೂಳೆಯು ಹತ್ತು ಮಂದಿ ಮದ್ಯನಿರ್ಮಾಪಕನಿಗೆ ಸಮಾನಳೂ, ರಾಜನು ಹತ್ತು ಮಂದಿ ಸೂಳೆಯರಿಗೆ ಸಮಾನನೂ ಆಗಿರುವನು.

೩೨. ಆದುದರಿಂದ ನಾವು ಅತ್ಯಂತ ಲೋಭಿಗಳಾದ ಇತರ ನಾಗರ ದ್ವಿಜ ರಂತೆ ಹೇಗೆ ಪಾಪಿಯಾದ ಆ ರಾಜನ ದಾನವನ್ನು ತೆಗೆದುಕೊಳ್ಳುವೆವು?

೩೩. ಇಂದ್ರನು ಹೇಳುತ್ತಾನೆ:—ದ್ವಿಜವರ್ಯರೆ! ಆ ಹಾಟಕೇಶ್ವರಜ ಕ್ಷೇತ್ರದ ಈ ಮಾಹಾತ್ಮ್ಯೆಯು ಯಾವಾಗಲೂ ಇರುವುದು.

ಪಿತೃಣಾಂ ಚ ಸುತಾನಾಂ ಚ ಬಂಧೂನಾಂ ಚ ವಿಶೇಷತಃ ।
ಶ್ವಶ್ರೂಣಾಂ ಚ ಸ್ನುಷಾಣಾಂ ಚ ಭಗಿನೀಭ್ರಾತೃಭಾರ್ಯಯೋಃ ॥ ೩೪ ॥
ತಸ್ಯಾಽಧಸ್ತಾತ್ಸ್ವಯಂ ದೇವೋ ಹಾಟಕೇಶ್ವರಸಂಜ್ಞಿತಃ ।
ಪುರಸ್ಯ ವಿದ್ಯತೇ ತಸ್ಯ ಪ್ರತಾಪೇನಾಽಖಿಲಾ ಜನಾಃ ॥ ೩೫ ॥
ಸಂತಪ್ಯಂತೇ ತತೋ ದ್ವೇಷಂ ಪ್ರಕುರ್ವಂತಿ ಪರಸ್ಪರಂ ।
ಕಿಂ ನ ಶ್ರುತಂ ಭವದ್ಭಿಸ್ತು ಯಥಾ ರಾಮಃ ಸಲಕ್ಷ್ಮಣಃ ।
ಸೀತಯಾ ಸಹ ಸಂಪ್ರಾಪ್ತೋ ವಿರೋಧಂ ಪರಮಂ ಗತಃ ॥ ೩೬ ॥
ಸೀತಯಾ ಲಕ್ಷ್ಮಣೇನೈವ ಸಾರ್ಧಂ ಕೋಪೇನ ಸಂಯುತಃ ।
ಅವಾಚ್ಯಂ ಪ್ರೋಕ್ತವಾನ್ ವಿಪ್ರಾಸ್ತೌ ಚ ತೇನ ಸಮಂ ತದಾ ॥ ೩೭ ॥
ಅಪಿ ಮಾಸಂ ವಸೇತ್ತತ್ರ ಯದಿ ಕೋಪವಿವರ್ಜಿತಃ ।
ತದಾ ಮುಕ್ತಿಮವಾಪ್ನೋತಿ ಸ್ವರ್ಗಭಾಕ್ಪಂಚರಾತ್ರತಃ ॥ ೩೮ ॥
ತಸ್ಮಾತ್ತತ್ರ ಪ್ರಗಂತವ್ಯಂ ಯುಷ್ಮಾಭಿಸ್ತು ಮಯಾ ಸಹ ।
ಈರ್ಷ್ಯಾಧರ್ಮಂ ನ ಯುಷ್ಮಾಭಿಸ್ತೇ ಕರಿಷ್ಯಂತಿ ನಾಗರಾಃ ॥ ೩೯ ॥
ನ ಚೈವ ಭವತಾಂ ಕೋಪಸ್ತತ್ರಸ್ಥಾನಾಂ ಭವಿಷ್ಯತಿ ।
ಪ್ರಸಾದಾನ್ಮಮ ವಿಪ್ರೇಂದ್ರಾಃ ಸತ್ಯಮೇತನ್ಮಯೋದಿತಂ ॥ ೪೦ ॥

---

೩೪–೩೬. ಆ ಪಟ್ಟಣದ ಕೆಳಭಾಗದಲ್ಲಿ ಹಾಟಕೇಶ್ವರನೆಂಬ ಮಹೇಶ್ವರನು ಇರುವನು. ಅವನ ಪ್ರತಾಪದಿಂದ ಸಮಸ್ತ ಜನರು ವ್ಯಥೆಗೊಳ್ಳುವರು. ತಂದೆ ತಾಯಿಗಳು, ಮಕ್ಕಳು, ಬಂಧುಗಳು, ಅತ್ತೆ ಮಾವಂದಿರು, ಸೊಸೆಯರು, ಸಹೋದರಿ ಸಹೋದರರ ಪತ್ನಿಯರು ಪರಸ್ಪರ ದ್ವೇಷವನ್ನು ಮಾಡುವರು. ಲಕ್ಷ್ಮಣನಿಂದ ಸಹಿತನಾದ ರಾಮನು ಸೀತೆಯೊಡನೆ ವಿರೋಧವನ್ನು ಹೊಂದಿರು ವುದನ್ನು ನೀವು ಕೇಳಲಿಲ್ಲವೊ ?

೩೭. ರಾಮನು ಸೀತಾಲಕ್ಷ್ಮಣರಲ್ಲಿ ಕೋಪಿಸಿಕೊಂಡು ಅವಾಚ್ಯವಾದ ಮಾತನ್ನಾಡಿರುವನು. ಅವರೂ ಅವನಲ್ಲಿ ಕೋಪದಿಂದ ಅವಾಚ್ಯವಾಗಿ ನುಡಿ ದಿರುವರು.

೩೮. ಮನುಷ್ಯನು ಅಲ್ಲಿ ಒಂದು ತಿಂಗಳುಕಾಲ ಕೋಪವಿಲ್ಲದೆ ವಾಸ ಮಾಡಿದರೆ ಮುಕ್ತಿಯನ್ನು ಪಡೆಯುವನು. ಐದು ದಿನ ಕೋಪವಿಲ್ಲದವನಾದರೆ ಸ್ವರ್ಗವನ್ನು ಸೇರುವನು.

೩೯. ಆದುದರಿಂದ ನೀವು ನನ್ನೊಡನೆ ಅಲ್ಲಿಗೆ ಬರಬೇಕು. ನಾಗರರು ನಿಮ್ಮಲ್ಲಿ ಅಸೂಯೆಗೊಳ್ಳುವುದಿಲ್ಲ.

೪೦. ವಿಪ್ರವರ್ಯರೆ! ಅಲ್ಲಿ ವಾಸಮಾಡುವ ನಿಮಗೆ ನನ್ನ ಅನುಗ್ರಹ ದಿಂದ ಕೋಪವುಂಟಾಗುವುದಿಲ್ಲ. ನಾನು ಹೇಳಿರುವ ಈ ಮಾತು ನಿಜ.

ಆನರ್ತಃ ಪಾರ್ಥಿವೋ ದಾನೇ ಯೋಜಯಿಷ್ಯತಿ ನ ಕ್ವಚಿತ್ ।
ಯುಷ್ಮಾಕಂ ಪುತ್ರಪೌತ್ರೇಭ್ಯೋ ಯೇ ದಾಸ್ಯಂತಿ ಚ ಕನ್ಯಕಾಃ ॥ ೪೧ ॥
ಸಹಸ್ರಗುಣಿತಂ ತೇಷಾಂ ತತ್ಫಲಂ ಸಂಭವಿಷ್ಯತಿ ।
ಅಮಾವಾಸ್ಯಾ ದಿನೇ ಶ್ರಾದ್ಧಂ ಕನ್ಯಾಸಂಸ್ಥೇ ದಿವಾಕರೇ ॥ ೪೨ ॥
ಯುಷ್ಮದಗ್ರೇ ದ್ವಿಜಶ್ರೇಷ್ಠಾ ಗಯಾಕೂಪ್ಯಾಂ ಕರಿಷ್ಯತಿ ।
ಯಸ್ತಸ್ಯ ತತ್ಫಲಂ ಭಾವಿ ಸಹಸ್ರಶತಸಮ್ಮಿತಂ ॥ ೪೩ ॥
ಗಯಾಶ್ರಾದ್ಧಾನ್ನ ಸಂದೇಹಃ ಸತ್ಯಮೇತನ್ಮಯೋದಿತಂ ।
ಯದಿ ಶ್ರಾದ್ಧಕೃತೇ ತತ್ರ ನಾಯಾಸ್ಯಥ ದ್ವಿಜೋತ್ತಮಾಃ ॥ ೪೪ ॥
ತತಃ ಶಾಪಂ ಪ್ರದಾಸ್ಯಾಮಿ ತಪೋವಿಘ್ನಕರಂ ಹಿ ವಃ ।
ಏವಂ ಜ್ಞಾತ್ವಾ ಮಯಾ ಸಾರ್ಧಂ ತತ್ರಾಗಚ್ಛತ ಸತ್ವರಂ ॥ ೪೫ ॥
ಇತ್ಯುಕ್ತಾಸ್ತೇನ ತೇ ಸರ್ವೇ ಶಕ್ರೇಣ ಸಹ ತತ್ಕ್ಷಣಾತ್ ।
ಕಾಶ್ಯಪಶ್ಚೈವ ಕೌಂಡಿನ್ಯ ಉಕ್ಷಾಣಃ ಶಾರ್ಕವೋ ದ್ವಿಜಃ ॥ ೪೬ ॥
ಬೈಜವಾಪಶ್ಚೈವ ಷಷ್ಠಃ ಕಾಪಿಷ್ಠಲೋ ದ್ವಿಕಸ್ತಥಾ ।
ಏತತ್ಕುಲಾಷ್ಟಕಂ ಪ್ರಾಪ್ತಮಿಂದ್ರೇಣ ಸಹ ಪಾರ್ಥಿವ ॥ ೪೭ ॥
ಅಗ್ನಿಷ್ವಾತ್ತಾದಿಕಾನ್ ಸರ್ವಾನ್ಪಿತ್ರೂನಾಹೂಯ ಕೃತ್ಸ್ನಶಃ ।
ವಿಶ್ವೇದೇವಾಂಸ್ತಥಾ ಚೈವ ಪ್ರಸ್ಥಿತಃ ಪಾಕಶಾಸನಃ ॥ ೪೮ ॥
ಸಮ್ಯಕ್ಛ್ರದ್ಧಾ ಸಮಾವಿಷ್ಟಶ್ಚಮತ್ಕಾರಪುರಂ ಪ್ರತಿ ।
ಏತಸ್ಮಿನ್ನೇವ ಕಾಲೇ ತು ಬ್ರಹ್ಮಾ ಲೋಕಪಿತಾಮಹಃ ॥ ೪೯ ॥

---

೪೧–೪೫. ಆನರ್ತನು ನಿಮಗೆ ದಾನ ಕೊಡುವುದಿಲ್ಲ. ನಿಮ್ಮ ಪುತ್ರ ಪೌತ್ರರಿಗೆ ಕನ್ಯೆಯನ್ನು ದಾನ ಮಾಡಿದವರಿಗೆ ಸಾವಿರದಷ್ಟು ಹೆಚ್ಚು ಫಲವುಂಟಾಗುವುದು. ಸೂರ್ಯನು ಕನ್ಯಾರಾಶಿಗತನಾಗಿರಲು ಅಮಾವಾಸ್ಯೆಯ ದಿನ ನಿಮ್ಮ ಮುಂದೆ ಗಯಾಕೂಪದಲ್ಲಿ ಶ್ರಾದ್ಧ ಮಾಡಿದವನಿಗೆ ಗಯಾ ಶ್ರಾದ್ಧಕ್ಕಿಂತ ಸಾವಿರ ಮಡಿ ಫಲವು ದೊರೆಯುವುದು. ನಾನು ಹೇಳಿರುವುದು ನಿಜ. ದ್ವಿಜವರ್ಯರೆ! ನೀವು ಶ್ರಾದ್ಧಕ್ಕಾಗಿ ಅಲ್ಲಿಗೆ ಬರದಿದ್ದರೆ ನಿಮ್ಮ ತಪಸ್ಸಿಗೆ ಅಡ್ಡಿಯನ್ನುಂಟು ಮಾಡುವ ಶಾಪವನ್ನು ಕೊಡುವೆನು. ಇದನ್ನರಿತು ನೀವು ನನ್ನೊಡನೆ ಅಲ್ಲಿಗೆ ಬೇಗನೆ ಬನ್ನಿರಿ.

೪೬–೪೭. ಇಂದ್ರನು ಹೀಗೆ ಹೇಳಲು ಕೂಡಲೆ ಕಶ್ಯಪ, ಕೌಂಡಿನ್ಯ, ಉಕ್ಷಾಣಶ, ಶಾರ್ಕವ, ದ್ವಿಷ, ಬೈಜವಾಪ, ಕಾಪಿಷ್ಠಲ, ದ್ವಿಕ ಎಂಬ ಎಂಟು ಕುಲದ ಬ್ರಾಹ್ಮಣರು ಇಂದ್ರನೊಡನೆ ಹೊರಟರು.

೪೮–೫೨. ದೇವರಾಜನು ಅಗ್ನಿಷ್ವಾತ್ತಾದಿ ಸಕಲ ಪಿತೃಗಳನ್ನೂ, ವಿಶ್ವೇದೇವರನ್ನೂ ನಿಮಂತ್ರಿಸಿ ಶ್ರಾದ್ಧದಲ್ಲಿ ಶ್ರದ್ಧೆಯುಳ್ಳವನಾಗಿ ಚಮತ್ಕಾರಪುರಕ್ಕೆ

ಗಯಾಯಾಂ ಪ್ರಸ್ಥಿತಃ ಸೋಽಪಿ ಶ್ರಾದ್ಧಾರ್ಥಂ ತತ್ರ ವಾಸರೇ ।
ವಿಶ್ವೇದೇವಾಃ ಪ್ರತಿಜ್ಞಾಯ ಗಯಾಯಾಂ ಪ್ರಸ್ಥಿತಾ ವಿಧಿಂ ॥ ೫೦ ॥
ಶಕ್ರ ಶ್ರಾದ್ಧಂ ಪರಿತ್ಯಜ್ಯ ಗತಾ ಯತ್ರ ಪಿತಾಮಹಃ ।
ಶಕ್ರೋಽಪಿ ತತ್ಪುರಂ ಪ್ರಾಪ್ಯ ಗಯಾಕೂಪ್ಯಾಮುಪಾಗತಃ ॥ ೫೧ ॥
ತತಃ ಸ್ನಾತ್ವಾಽಹ್ವಯಾಮಾಸ ಶ್ರಾದ್ಧಾರ್ಥಂ ಶ್ರದ್ಧಯಾನ್ವಿತಃ ।
ವಿಶ್ವೇ ದೇವಾನ್ ಪಿತ್ರೂಂಶ್ಚೈವ ಕಾಲೇ ಕುತಪಸಂಜ್ಞಿತೇ ॥ ೫೨ ॥
ಏತಸ್ಮಿನ್ನಂತರೇ ಪ್ರಾಪ್ತಾಃ ಸಮಾಹೂತಾಶ್ಚ ತೇನ ಯೇ ।
ಪಿತರೋ ದೇವರೂಪಾ ಯೇ ಪ್ರೇತರೂಪಾಸ್ತಥೈವ ಚ ॥ ೫೩ ॥
ಪ್ರತ್ಯಕ್ಷರೂಪಿಣಃ ಸರ್ವೇ ದ್ವಿಜೋಪಾಂತೇ ಸಮಾಶ್ರಿತಾಃ ।
ವಿಶ್ವೇದೇವಾ ನ ಸಂಪ್ರಾಪ್ತಾ ಯೇ ಗಯಾಯಾಂ ಗತಾಸ್ತದಾ ॥ ೫೪ ॥
ತತೋ ವಿಲಂಬಮಕರೋತ್ತದರ್ಥಂ ಪಾಕಶಾಸನಃ ।
ವಿಶ್ವೇದೇವಾ ಯತಃ ಶ್ರಾದ್ಧೇ ಪೂಜ್ಯಾಃ ಪ್ರಥಮಮೇವ ಚ ॥ ೫೫ ॥
ಏತಸ್ಮಿನ್ನಂತರೇ ಪ್ರಾಪ್ತೋ ನಾರದೋ ಮುನಿಸತ್ತಮಃ ।
ಶಕ್ರಂ ಪ್ರಾಹ ಸಮಾಗತ್ಯ ವಿಶ್ವೇ ದೇವಾಽಭಿಕಾಂಕ್ಷಿಣಂ ॥ ೫೬ ॥

ನಾರದ ಉವಾಚ :—

ವಿಶ್ವೇದೇವಾ ಗತಾಃ ಶಕ್ರ ಶ್ರಾದ್ಧೇ ಪೈತಾಮಹೇಽಧುನಾ ।
ಗಯಾಯಾಂ ತೇ ಮಯಾ ದೃಷ್ಟಾ ಗಚ್ಛಮಾನಾಃ ಪ್ರಹರ್ಷಿತಾಃ ॥ ೫೭ ॥

---

ಹೊರಟನು. ಈ ಸಮಯದಲ್ಲಿ ಬ್ರಹ್ಮನು ಆ ದಿನದ ಶ್ರಾದ್ಧಕ್ಕಾಗಿ ಗಯೆಗೆ ಹೊರಟನು. ವಿಶ್ವೇದೇವತೆಗಳು ಇಂದ್ರನಿಗೆ ಮಾತು ಕೊಟ್ಟು ಅವನ ಶ್ರಾದ್ಧವನ್ನು ತ್ಯಜಿಸಿ ಬ್ರಹ್ಮನೆಡೆಗೆ ಹೋದರು. ಇಂದ್ರನೂ ಚಮತ್ಕಾರಪುರವನ್ನು ಸೇರಿ ಗಯಾಕೂಪದಲ್ಲಿ ಮಿಂದು ಕುತಪಕಾಲದಲ್ಲಿ ಶ್ರಾದ್ಧಕ್ಕಾಗಿ ವಿಶ್ವೇದೇವತೆಗಳನ್ನೂ, ಪಿತೃಗಳನ್ನೂ ಆಹ್ವಾನ ಮಾಡಿದನು.

೫೩–೫೪. ಇಷ್ಟರಲ್ಲಿ ಆ ಇಂದ್ರನಿಂದ ಆಹೂತರಾದ ದೇವಪ್ರೇತರೂಪರಾಗಿರುವ ಪಿತೃಗಳು ಪ್ರತ್ಯಕ್ಷವಾಗಿ ಬಂದು ಬ್ರಾಹ್ಮಣರ ಹತ್ತಿರ ಕುಳಿತರು. ಗಯೆಗೆ ಹೋದ ವಿಶ್ವೇದೇವತೆಗಳು ಮಾತ್ರ ಅಲ್ಲಿಗೆ ಬರಲಿಲ್ಲ.

೫೫. ಶ್ರಾದ್ಧದಲ್ಲಿ ವಿಶ್ವೇದೇವತೆಗಳನ್ನು ಮೊದಲು ಪೂಜಿಸಬೇಕಾಗಿರುವುದರಿಂದ ಇಂದ್ರನು ಅವರಿಗಾಗಿ ಸಾವಕಾಶ ಮಾಡಿದನು.

೫೬. ಇಷ್ಟರಲ್ಲಿ ನಾರದ ಮುನಿವರ್ಯನು ಅಲ್ಲಿಗೆ ಬಂದು ವಿಶ್ವೇದೇವತೆಗಳನ್ನು ನಿರೀಕ್ಷಿಸುತ್ತಿರುವ ಇಂದ್ರನನ್ನು ಕುರಿತು ಇಂತೆಂದನು.

೫೭. ನಾರದನು ಹೇಳುತ್ತಾನೆ:—ಇಂದ್ರ ! ನಾನೀಗ ಬ್ರಹ್ಮನ ಶ್ರಾದ್ಧಕ್ಕಾಗಿ ಗಯೆಗೆ ಸಂತೋಷದಿಂದ ಹೋಗುತ್ತಿರುವ ವಿಶ್ವೇದೇವತೆಗಳನ್ನು ಕಂಡೆನು.

ತಚ್ಛ್ರುತ್ವಾ ತತ್ರ ಕುಪಿತಸ್ತೇಷಾಮುಪರಿ ತತ್ಕ್ಷಣಾತ್ ।
ಅಬ್ರವೀತ್ಪರುಷಂ ವಾಕ್ಯಂ ವಿಪ್ರಾಣಾಂ ಪುರತಃ ಸ್ಥಿತಃ ॥ ೫೮ ॥
ವಿಶ್ವೇದೇವಾನ್ವಿತಾ ಶ್ರಾದ್ಧಂ ಕರಿಷ್ಯಾಮ್ಯಹಮದ್ಯ ಭೋಃ ।
ತಥಾಽನ್ಯೇ ಮಾನವಾಃ ಸರ್ವೇ ಕರಿಷ್ಯಂತಿ ಧರಾತಲೇ ॥ ೫೯ ॥
ವಿಶ್ವೇದೇವಾನ್ ಪುರಃ ಸ್ಥಾಪ್ಯ ಯೋಽತ್ರ ಶ್ರಾದ್ಧಂ ಕರಿಷ್ಯತಿ ।
ವ್ಯರ್ಥತಾಂ ಯಾಸ್ಯತೇ ತಸ್ಯ ಊಷರೇ ವರ್ಷಿತಂ ಯಥಾ ॥ ೬೦ ॥
ಏವಮುಕ್ತ್ವಾ ಸಹಸ್ರಾಕ್ಷ ಏಕೋದ್ದಿಷ್ಟಾನಿ ಕೃತ್ಸ್ನಶಃ ।
ಚಕಾರ ಸರ್ವದೇವಾನಾಂ ಯೇ ಹತಾ ರಣಮೂರ್ಧನಿ ॥ ೬೧ ॥
ಏತಸ್ಮಿನ್ನೇವ ಕಾಲೇ ತು ವಾಗುವಾಚಾಽಶರೀರಿಣೀ ।
ಯೇಷಾಮುದ್ದಿಶ್ಯ ತಚ್ಛ್ರಾದ್ಧಂ ಕೃತಂ ತೇಷಾಂ ನೃಪೋತ್ತಮ ॥ ೬೨ ॥
ಶಕ್ರ ಶಕ್ರ ಮಹಾಬಾಹೋ ಯೇಷಾಂ ಶ್ರಾದ್ಧಂ ಕೃತಂ ತ್ವಯಾ ।
ಪ್ರೇತತ್ವೇ ಸಂಸ್ಥಿತಾನಾಂ ಚ ಪ್ರೇತತ್ವೇನ ವಿವರ್ಜಿತಾಃ ॥ ೬೩ ॥
ಗತಾಃ ಸ್ವರ್ಗಂ ಪ್ರಸಾದಾತ್ತೇ ದಿವ್ಯರೂಪವಪುರ್ಧರಾಃ ।
ಯೇ ಪುನಃ ಸ್ವರ್ಗತಾಃ ಪೂರ್ವಂ ಯುಧ್ಯಮಾನಾ ಮಹಾಹವೇ ॥ ೬೪ ॥
ತೇ ಚ ಮೋಕ್ಷಂ ಗತಾಃ ಸರ್ವೇ ಪ್ರಸಾದಾತ್ತವ ವಾಸವ ।
ತಚ್ಛ್ರುತ್ವಾ ವಾಸವೋ ವಾಕ್ಯಂ ತೋಷೇಣ ಮಹತಾನ್ವಿತಃ ॥ ೬೫ ॥

---

೫೮. ಇಂದ್ರನು ಆ ಮಾತನ್ನು ಕೇಳಿ ಅವರ ವಿಷಯದಲ್ಲಿ ಕುಪಿತನಾಗಿ ಕೂಡಲೆ ಬ್ರಾಹ್ಮಣರ ಮುಂದೆ ನಿಂತು ಕಠಿನವಾದ ಈ ಮಾತನ್ನಾಡಿದನು.

೫೯. "ನಾನು ಈಗ ವಿಶ್ವೇದೇವತೆಗಳನ್ನು ಬಿಟ್ಟು ಶ್ರಾದ್ಧವನ್ನು ಮಾಡುವೆನು. ಇತರ ಮಾನವರೂ ಭೂಲೋಕದಲ್ಲಿ ಹೀಗೆಯೇ ಮಾಡುವರು.

೬೦. ಇಲ್ಲಿ ವಿಶ್ವೇದೇವತೆಗಳನ್ನು ಮುಂದಿರಿಸಿಕೊಂಡು ಶ್ರಾದ್ಧ ಮಾಡಿದವರ ಶ್ರಾದ್ಧವು ಮರುಭೂಮಿಯಲ್ಲಿ ಮಳೆ ಸುರಿಸಿದಂತೆ ವ್ಯರ್ಥವಾಗುವುದು."

೬೧. ಇಂದ್ರನು ಹೀಗೆ ಹೇಳಿ ಯುದ್ಧದಲ್ಲಿ ಮಡಿದ ಸಕಲ ದಿವಿಜರಿಗೆ ಸಮಗ್ರವಾಗಿ ಏಕೋದ್ದಿಷ್ಟಗಳನ್ನು ಮಾಡಿದನು.

೬೨. ಈ ಸಮಯದಲ್ಲಿ ಇಂದ್ರನು ಯಾರನ್ನುದ್ದೇಶಿಸಿ ಶ್ರಾದ್ಧ ಮಾಡಿದನೊ ಅವರ ಅಶರೀರವಾಣಿಯುಂಟಾಯಿತು.

೬೩–೬೮. "ಮಹಾಬಾಹುವಾದ ದೇವರಾಜನೆ! ಪ್ರೇತರಾಗಿರುವವರನ್ನು ಉದ್ದೇಶಿಸಿ ನೀನು ಮಾಡಿದ ಶ್ರಾದ್ಧದಿಂದ ಅವರು ನಿನ್ನ ಅನುಗ್ರಹವನ್ನು ಪಡೆದು ಪ್ರೇತತ್ವವಿಲ್ಲದೆ ದಿವ್ಯದೇಹಧಾರಿಗಳಾಗಿ ಸ್ವರ್ಗಕ್ಕೆ ತೆರಳಿದರು. ಹಿಂದೆ ಯುದ್ಧದಲ್ಲಿ ಮಡಿದು ಸ್ವರ್ಗವನ್ನೇರಿದವರು ಮೋಕ್ಷವನ್ನು ಪಡೆದರು. ಇಂದ್ರನು ಅದನ್ನು ಕೇಳಿ ಅತ್ಯಂತ ಆನಂದವನ್ನು ಹೊಂದಿ ಈ ತೀರ್ಥವು ಆಶ್ಚರ್ಯಕರ

ಅಹೋ ತೀರ್ಥಮಹೋ ತೀರ್ಥಂ ಶಂಸಮಾನಃ ಪುನಃ ಪುನಃ ।
ಏತಸ್ಮಿನ್ನಂತರೇ ಪ್ರಾಪ್ತಾ ವಿಶ್ವೇದೇವಾಃ ಸಮುತ್ಸುಕಾಃ ॥ ೬೬ ॥
ನಿರ್ವರ್ತ್ಯ ಬ್ರಹ್ಮಣಃ ಶ್ರಾದ್ಧಂ ಗಯಾಯಾಂ ತತ್ರ ಪಾರ್ಥಿವ ।
ಪ್ರೋಚುಶ್ಚ ವೃತ್ರಹಂತಾರಂ ಕುರು ಶ್ರಾದ್ಧಂ ಶತಕ್ರತೋ ॥ ೬೭ ॥
ಭೂಯೋಽಪಿ ನ ವಿನಾಽಸ್ಮಾಭಿರ್ಲಭ್ಯತೇ ಶ್ರಾದ್ಧಜಂ ಫಲಂ ।
ವಯಂ ದೂರಾತ್ಸಮಾಯಾತಾಸ್ತವ ಶ್ರಾದ್ಧಸ್ಯ ಕಾರಣಾತ್ ।
ನಿರ್ವರ್ತ್ಯ ಬ್ರಹ್ಮಣಃ ಶ್ರಾದ್ಧಂ ಯೇನ ಪೂರ್ವಂ ನಿಮಂತ್ರಿತಾಃ ॥ ೬೮ ॥
ತಚ್ಛ್ರುತ್ವಾ ವಚನಂ ತೇಷಾಂ ಕುಪಿತಃ ಪಾಕಶಾಸನಃ ।
ಅಬ್ರವೀತ್ಪರುಷಂ ವಾಕ್ಯಂ ಮೇಘಗಂಭೀರಯಾ ಗಿರಾ ॥ ೬೯ ॥
ಅದ್ಯ ಪ್ರಭೃತಿ ಯಃ ಶ್ರಾದ್ಧಂ ಮರ್ತ್ಯಲೋಕೇ ಕರಿಷ್ಯತಿ ।
ಅನ್ಯೋಽಪಿ ಯೋ ಭವತ್ಪೂರ್ವಂ ವೃಥಾ ತಸ್ಯ ಭವಿಷ್ಯತಿ ॥ ೭೦ ॥
ಏಕೋದ್ದಿಷ್ಟಾನಿ ಶ್ರಾದ್ಧಾನಿ ಕರಿಷ್ಯಂತ್ಯಖಿಲಾ ಜನಾಃ ।
ಸಾಂಪ್ರತಂ ಮರ್ತ್ಯಲೋಕೇಽತ್ರ ಮರ್ಯಾದೇಯಂ ಕೃತಾ ಮಯಾ ॥೭೧॥
ಭೂತಾಃ ಪ್ರೇತಾಃ ಪಿಶಾಚಾಶ್ಚ ಯೇ ಚಾಽನ್ಯೇ ಶ್ರಾದ್ಧಹಾರಕಾಃ ।
ವಿಶ್ವೇದೇವೈಃ ಪ್ರರಕ್ಷ್ಯಂತೇ ರಕ್ಷಯಿಷ್ಯಾಮಿ ತಾನಹಂ ॥ ೭೨ ॥
ಯಜಮಾನಸ್ಯ ಕಾಯೇ ಚ ಶ್ರಾದ್ಧಂ ಸಂಯೋಜ್ಯ ಯತ್ನತಃ ।
ಮಯಾ ಹತಾಃ ಪ್ರಯಾಸ್ಯಂತಿ ಸರ್ವೇ ತೇ ದೂರತೋದ್ರುತಂ ॥ ೭೩ ॥

---

ವಾದುದೆಂದು ಹೊಗಳಿದನು. ಇಷ್ಟರಲ್ಲಿ ಉತ್ಸುಕರಾದ ವಿಶ್ವೇದೇವತೆಗಳು ಗಯೆಯಲ್ಲಿ ಬ್ರಹ್ಮನ ಶ್ರಾದ್ಧವನ್ನು ಪೂರಯಿಸಿ ಹಿಂದಿರುಗಿ ಬಂದು ಇಂದ್ರನನ್ನು ಕುರಿತು ಮರಳಿ ಶ್ರಾದ್ಧವನ್ನು ಮಾಡು. ನಾವಿಲ್ಲದೆ ಮಾಡಿದ ಶ್ರಾದ್ಧದಿಂದ ಫಲವು ದೊರೆಯುವುದಿಲ್ಲ. ಹಿಂದೆ ನಿನ್ನಿಂದ ನಿಮಂತ್ರಿತರಾದ ನಾವು ಬ್ರಹ್ಮನ ಶ್ರಾದ್ಧವನ್ನು ಪೂರಯಿಸಿ ನಿನ್ನ ಶ್ರಾದ್ಧಕ್ಕಾಗಿ ದೂರದಿಂದ ಬಂದಿರುವೆವು.

೬೯. ಇಂದ್ರನು ಆ ವಿಶ್ವೇದೇವರ ಮಾತನ್ನು ಕೇಳಿ ಕ್ರುದ್ಧನಾಗಿ ಮೇಘದಂತೆ ಗಂಭೀರವಾದ ವಾಣಿಯಿಂದ ಕಠಿನವಾಗಿ ನುಡಿದನು.

೭೦. ಇದು ಮೊದಲ್ಗೊಂಡು ಭೂಲೋಕದಲ್ಲಿ ನರನು ನಿಮ್ಮನ್ನು ಮೊದಲಿನಲ್ಲಿಟ್ಟುಕೊಂಡು ಶ್ರಾದ್ಧಮಾಡಿದರೆ ಆ ಶ್ರಾದ್ಧವು ನಿಷ್ಫಲವಾಗುವುದು.

೭೧–೭೨. ಭೂಲೋಕದಲ್ಲಿ ಮಾನವರೆಲ್ಲ ಮಾಡುವ ಏಕೋದ್ದಿಷ್ಟ ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳು ತಡೆಯುವ ಶ್ರಾದ್ಧ ವಿಘಾತುಕರಾದ ಭೂತ, ಪ್ರೇತ, ಪಿಶಾಚಗಳನ್ನು ನಾನೇ ತಡೆಯುವೆನು ಎಂದು ನಿಯಮವನ್ನು ಮಾಡಿರುವೆನು.

೭೩. ನಾನು ಯಜಮಾನನ ಶರೀರದಲ್ಲಿ ಶ್ರಾದ್ಧವನ್ನು ಸಂಯೋಜಿಸಿ ಇವರನ್ನು ವಧಿಸುವುದರಿಂದ ಇವರು ದೂರ ಓಡುವರು.

ಏವಮುಕ್ತ್ವಾ ಸಹಸ್ರಾಕ್ಷೋ ವಿಶ್ವೇದೇವಾಂಸ್ತತಃ ಪರಂ ।
ಪ್ರೋವಾಚ ಬ್ರಾಹ್ಮಣಾನ್ ಸರ್ವಾನ್ ವಿಶ್ವೇದೇವೈರ್ವಿನಾಕೃತಂ ।
ಶ್ರಾದ್ಧಕರ್ಮ ಭವದ್ಭಿಸ್ತು ಕಾರ್ಯಮನ್ಯೈಶ್ಚ ಮಾನವೈಃ ॥ ೭೪ ॥
ತಥೇತ್ಯುಕ್ತೇ ದ್ವಿಜೇಂದ್ರೈಶ್ಚ ವಿಶ್ವೇದೇವಾಃ ಸುದುಃಖಿತಾಃ ।
ರುರುದುರ್ಬಾಷ್ಪಪೂರೇಣ ಪ್ಲಾವಯಂತೋ ವಸುಂಧರಾಂ ॥ ೭೫ ॥
ತೇಷಾಮುಷ್ಣಾಶ್ರುಣಾ ತೇನ ಯತ್ಪೃಥ್ವೀ ಪ್ಲಾವಿತಾ ನೃಪ ।
ಭೂತಾನ್ಯಂಡಾನ್ಯನೇಕಾನಿ ಸಂಖ್ಯಯಾ ರಹಿತಾನಿ ಚ ॥ ೭೬ ॥
ತತೋಽಂಡೇಭ್ಯೋ ವಿನಿಷ್ಕ್ರಾಂತಾಃ ಪ್ರಾಣಿನೋ ರೌದ್ರರೂಪಿಣಃ ।
ಕೃಷ್ಣದಂತಾಃ ಶಂಕುಕರ್ಣಾ ಊರ್ಧ್ವಕೇಶಾ ಭಯಾವಹಾಃ ।
ರಕ್ತಾಕ್ಷಾಶ್ಚ ತತಃ ಪ್ರೋಚುರ್ವಿಶ್ವೇದೇವಾಂಶ್ಚ ತೇ ನೃಪ ॥ ೭೭ ॥
ವಯಂ ಬುಭುಕ್ಷಿತಾಃ ಸರ್ವೇ ಭೋಜನಂ ದೀಯತಾಂ ಧ್ರುವಂ ।
ಭವದ್ಭಿರ್ವಿಹಿತಾ ಯಸ್ಮಾದ್ಯಾಚಯಾಮೋ ನ ಚಾಽಪರಂ ॥ ೭೮ ॥

ವಿಶ್ವೇದೇವಾ ಊಚುಃ:—

ಅಸ್ಮಾಭಿಃ ರಹಿತಂ ಶ್ರಾದ್ಧಂ ಕಿಂಚಿತ್ಸಂಜಾಯತೇ ಕ್ಷಿತೌ ।
ಶ್ರದ್ಧಯಾ ಪರಯಾ ಯಚ್ಚ ಯುಷ್ಮಾಕಂ ಭಾವಿ ಭೋಜನಂ ॥ ೭೯ ॥

---

೭೪. ಇಂದ್ರನು ವಿಶ್ವೇದೇವರನ್ನು ಕುರಿತು ಹೀಗೆ ಹೇಳಿ ಅನಂತರ ಬ್ರಾಹ್ಮಣರನ್ನು ಕುರಿತು ನೀವೂ ಇತರರೂ ವಿಶ್ವೇದೇವರನ್ನು ಬಿಟ್ಟು ಶ್ರಾದ್ಧ ಮಾಡಬೇಕೆಂದನು.

೭೫. ಬ್ರಾಹ್ಮಣರು ಹಾಗೆಯೇ ಆಗಲೆನ್ನಲು ವಿಶ್ವೇದೇವರು ದುಃಖಿತರಾಗಿ ಕಂಬನಿಗಳಿಂದ ಭೂಮಿಯನ್ನು ನೆನೆಸುತ್ತ ಅತ್ತರು.

೭೬. ಅವರ ಬಿಸಿಯಾದ ಕಣ್ಣೀರಿನಿಂದ ಭೂಮಿಯೂ ಅನೇಕ ಬ್ರಹ್ಮಾಂಡಗಳೂ ಒದ್ದೆಯಾದುವು.

೭೭. ಅನಂತರ ಆ ಬ್ರಹ್ಮಾಂಡಗಳಿಂದ ಭಯಂಕರ ರೂಪವುಳ್ಳುವೂ, ಕೃಷ್ಣದಂತವುಳ್ಳುವೂ, ಶಂಕುವಿನಂತೆ ಕಿವಿಯುಳ್ಳುವೂ, ಮೇಲ್ಮುಖವಾದ ಕೂದಲುಳ್ಳುವೂ, ಭಯವನ್ನುಂಟುಮಾಡುವುವೂ, ಕೆಂಪು ಕಣ್ಣುಗಳುಳ್ಳುವೂ ಆದ ಪ್ರಾಣಿಗಳು ಹೊರಟುಬಂದು ವಿಶ್ವೇದೇವರನ್ನು ಕುರಿತು ಹೀಗೆಂದುವು.

೭೮. "ನಿಮ್ಮಿಂದ ನಿರ್ಮಿತರಾದ ನಾವು ಹಸಿವುಗೊಂಡಿದ್ದೇವೆ. ನಮಗೆ ಭೋಜನವನ್ನು ಕೊಡಿರಿ. ಬೇರೆ ಏನನ್ನೂ ನಾವು ಬೇಡುವುದಿಲ್ಲ."

೭೯. ವಿಶ್ವೇದೇವತೆಗಳು ಹೇಳುತ್ತಾರೆ:—ಭೂಮಿಯಲ್ಲಿ ನರರು ನಮ್ಮನ್ನು ಬಿಟ್ಟು ಭಕ್ತಿಯಿಂದ ಮಾಡಿದ ಶ್ರಾದ್ಧಭೋಜನವು ನಿಮಗೆ ಸೇರಲಿ.

ಏವಮುಕ್ತ್ವಾ ತು ತೇ ಶ್ರಾದ್ಧಂ ವಿಶ್ವೇದೇವಾ ನೃಪೋತ್ತಮ ।
ಬ್ರಹ್ಮಲೋಕಂ ಗತಾಃ ಸರ್ವೇ ದುಃಖೇನ ಮಹತಾನ್ವಿತಾಃ ।
ಪ್ರೋಚುಶ್ಚ ದೀನಯಾ ವಾಚಾ ಪ್ರಣಿಪತ್ಯ ಪಿತಾಮಹಂ ॥ ೮೦ ॥
ವಯಂ ಬಾಹ್ಯಾಃ ಕೃತಾ ದೇವ ಶ್ರಾದ್ಧಾನಾಂ ಬಲವಿದ್ವಿಷಾ ।
ತವ ಶ್ರಾದ್ಧೇ ಗತಾ ಯಸ್ಮಾದ್ಗಯಾಯಾಂ ಪ್ರಾಙ್ನಿಮಂತ್ರಿತಾಃ ॥ ೮೧ ॥
ತೇನ ರುಷ್ಟಃ ಸಹಸ್ರಾಕ್ಷಸ್ತವ ಚಾಂತೇ ಸಮಾಗತಾಃ ।
ತಸ್ಮಾತ್ಕುರು ಪ್ರಸಾದಂ ನಃ ಶ್ರಾದ್ಧಾರ್ಹಾಃ ಸ್ಯಾಮ ವೈ ಯಥಾ ॥ ೮೨ ॥
ತಚ್ಛ್ರುತ್ವಾ ಸತ್ವರಂ ಬ್ರಹ್ಮಾ ಕೃಪಯಾ ಪರಯಾನ್ವಿತಃ ।
ವಿಶ್ವೇದೇವಾನ್ ಸಮಾದಾಯ ಕೂಷ್ಮಾಂಡೈಸ್ತೈಃ ಸಮನ್ವಿತಾನ್ ॥ ೮೩ ॥
ಶಕ್ರೋಽಪಿ ಶ್ರಾದ್ಧಕರ್ಮಾಣಿ ಕೃತ್ವಾ ತೇಷಾಂ ದಿವೌಕಸಾಂ ।
ತೀರ್ಥಯಾತ್ರಾಪರೋ ಭೂತ್ವಾ ತತ್ರೈವ ಚ ವ್ಯವಸ್ಥಿತಃ ॥ ೮೪ ॥
ಏತಸ್ಮಿನ್ನೇವ ಕಾಲೇ ತು ಬ್ರಹ್ಮಾ ತತ್ರ ಸಮಾಗತಃ ।
ವಿಶ್ವೇದೇವಸಮಾಯುಕ್ತೋ ಹಂಸಯಾನಸಮಾಶ್ರಿತಃ ॥ ೮೫ ॥
ಶಕ್ರೋಽಪಿ ಸಹಸಾ ದೃಷ್ಟ್ವಾ ಸಂಪ್ರಾಪ್ತಂ ಕಮಲಾಸನಂ ।
ಅರ್ಘ್ಯಮಾದಾಯ ಪಾದ್ಯಂ ಚ ಸತ್ವರಂ ಸಮ್ಮುಖೋ ಯಯೌ ॥ ೮೬ ॥
ತತಃ ಪ್ರಣಮ್ಯ ಶಿರಸಾ ಸಾಷ್ಟಾಂಗಂ ವಿನಯಾನ್ವಿತಃ ।
ಪ್ರೋವಾಚ ಪ್ರಾಂಜಲಿರ್ಭೂತ್ವಾ ಸ್ವಾಗತಂ ತೇ ಪಿತಾಮಹ ॥ ೮೭ ॥

---

೮೦. ಆ ವಿಶ್ವೇದೇವರು ಹೀಗೆ ಶ್ರಾದ್ಧವನ್ನುದ್ದೇಶಿಸಿ ಹೇಳಿ ಅತ್ಯಂತ ದುಃಖದಿಂದ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ನಮಸ್ಕರಿಸಿ ದೈನ್ಯದಿಂದ ಹೀಗೆಂದರು.

೮೧–೮೨. "ಸ್ವಾಮಿ! ಮೊದಲು ನಿಮಂತ್ರಿತರಾದ ನಾವು ಗಯೆಯಲ್ಲಿ ನಡೆದ ನಿನ್ನ ಶ್ರಾದ್ಧಕ್ಕೆ ಬಂದುದರಿಂದ ಕುಪಿತನಾದ ಇಂದ್ರನು ನಮ್ಮನ್ನು ಶ್ರಾದ್ಧ ಬಾಹ್ಯರನ್ನಾಗಿಸಿರುವನು. ಆದುದರಿಂದ ನಾವೀಗ ನಿನ್ನೆಡೆಗೆ ಬಂದಿರುವೆವು. ನಮ್ಮ ಮೇಲೆ ಅನುಗ್ರಹ ಮಾಡಿ ನಾವು ಶ್ರಾದ್ಧಾರ್ಹರಾಗುವಂತೆ ಮಾಡು."

೮೩–೮೫. ಬ್ರಹ್ಮನು ಅವರ ಆ ಮಾತನ್ನು ಕೇಳಿ ಕರುಣೆಗೊಂಡು ಕೂಷ್ಮಾಂಡಗಳೊಡನೆ ಬಂದಿರುವ ಆ ವಿಶ್ವೇದೇವರನ್ನು ಕರೆದುಕೊಂಡು ಹಂಸವನ್ನೇರಿ ಶೀಘ್ರವಾಗಿ ದೇವತೆಗಳಿಗೆ ಶ್ರಾದ್ಧಗಳನ್ನು ಮಾಡಿ ತೀರ್ಥಯಾತ್ರಾ ನಿರತನಾಗಿರುವ ಶಕ್ರನೆಡೆಗೆ ಬಂದನು.

೮೬. ಇಂದ್ರನು ಕೂಡಲೆ ಬಂದಿರುವ ಪಿತಾಮಹನನ್ನು ನೋಡಿ ಅರ್ಘ್ಯ ಪಾದ್ಯಗಳನ್ನು ತೆಗೆದುಕೊಂಡು ಎದುರುಗೊಂಡನು.

೮೭. ಅವನು ಬ್ರಹ್ಮನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ವಿನಯದಿಂದ ಕೈಮುಗಿದುಕೊಂಡು ಇಂತೆಂದನು. "ಪಿತಾಮಹ! ನಿನಗೆ ಸುಖಾಗಮನವಾಗಲಿ.

ತವ ಸಂದರ್ಶನಾದೇವ ಜ್ಞಾತಂ ಜನ್ಮತ್ರಯಂ ಮಯಾ ।
ದ್ಧುತಂ ಪೂರ್ವಂ ಶುಭಂ ಕರ್ಮ ಕರೋಮಿ ಚ ಯಥಾಽಧುನಾ ॥ ೮೮ ॥
ಕರಿಷ್ಯಾಮಿ ಪರೇ ಲೋಕೇ ವ್ಯಕ್ತಮೇತದಸಂಶಯಂ ॥ ೮೯ ॥
ನಿಃಸ್ಪೃಹಸ್ಯಾಽಪಿ ತೇ ದೇವ ಯದಾಗಮನಕಾರಣಂ ।
ತನ್ಮೇ ದ್ರುತತರಂ ಬ್ರೂಹಿ ಯೇನ ಸರ್ವಂ ಕರೋಮ್ಯಹಂ ॥ ೯೦ ॥

ಬ್ರಹ್ಮೋವಾಚ:—

ಯೈರ್ವಿನಾ ನ ಭವೇಚ್ಛ್ರಾದ್ಧಂ ಮಮಾಽಪಿ ಸುರಸತ್ತಮ ।
ವಿಶ್ವೇದೇವಾಸ್ತ್ವಯಾ ತೇಽದ್ಯ ಶ್ರಾದ್ಧಬಾಹ್ಯಾ ವಿನಿರ್ಮಿತಾಃ ॥ ೯೧ ॥
ತತ್ತ್ವಯಾ ನ ಕೃತಂ ಭದ್ರಂ ತೇನ ಕರ್ಮ ವಿತನ್ವತಾ ।
ಅಪ್ರಮಾಣಂ ಕೃತಾ ವೇದಾ ಯತಶ್ಚ ಸ್ಮೃತಯಸ್ತಥಾ ॥ ೯೨ ॥
ಏತೇ ಪೂರ್ವಂ ಮಯಾ ಶಕ್ರ ಶ್ರಾದ್ಧಾರ್ಥಂ ವಿನಿಮಂತ್ರಿತಾಃ ।
ಪಶ್ಚಾತ್ತ್ವಯಾ ನ ದೋಷೋಽಸ್ತಿ ತಸ್ಮಾಚ್ಚೈಷಾಂ ಮಹಾತ್ಮನಾಂ ॥ ೯೩ ॥
ತಸ್ಮಾಚ್ಛಾಪಪ್ರಮೋಕ್ಷಾರ್ಥಂ ತ್ವಂ ಯತಸ್ವ ಸುರೇಶ್ವರ ।
ಯೇನ ಸ್ಯುಃ ಶ್ರಾದ್ಧಯೋಗ್ಯಾಶ್ಚ ಸರ್ವೇಽಮೀ ದುಃಖಿತಾ ಭೃಶಂ ॥ ೯೪ ॥
ಪುರಾ ಹ್ಯೇತನ್ಮಯಾ ಪ್ರೋಕ್ತಂ ಸರ್ವೇಷಾಂ ಚ ದ್ವಿಜನ್ಮನಾಂ ।
ಏತತ್ಪೂರ್ವಂ ಚ ಯಚ್ಛ್ರಾದ್ಧಂ ಸಫಲಂ ತದ್ಭವಿಷ್ಯತಿ ॥ ೯೫ ॥

---

೮೮–೮೯. ನಿನ್ನ ದರ್ಶನದಿಂದಲೇ ನಾನೀಗ ಒಳ್ಳೆಯ ಕರ್ಮಗಳನ್ನು ಮಾಡುತ್ತಿರುವೆನು. ಹಿಂದೆ ಮಾಡಿದ್ದೇನೆ. ಇನ್ನೊಂದು ಲೋಕದಲ್ಲಿ ಮಾಡುವೆನು. ಎಂದು ಮೂರು ಜನ್ಮವನ್ನೂ ಅರಿತೆನು.

೯೦. ಸ್ವಾಮಿ! ನೀನು ನಿಸ್ಪೃಹನಾಗಿದ್ದರೂ ಏಕೆ ಇಲ್ಲಿಗೆ ಬಂದಿರುವೆ? ಅದನ್ನು ನನಗೆ ಬೇಗನೆ ಹೇಳು. ಕೂಡಲೆ ನೆರವೇರಿಸುವೆನು.”

೯೧–೯೨. ಬ್ರಹ್ಮನು ಹೇಳುತ್ತಾನೆ:—ಇಂದ್ರ! ಯಾರಿಲ್ಲದಿದ್ದರೆ ಶ್ರಾದ್ಧವು ನಡೆಯುವುದಿಲ್ಲವೊ, ಅಂತಹ ವಿಶ್ವೇದೇವರನ್ನು ನೀನು ಶ್ರಾದ್ಧಬಾಹ್ಯರನ್ನಾಗಿ ಮಾಡಿರುವೆ. ನೀನು ಇಂತಹ ಅಯೋಗ್ಯ ಕಾರ್ಯವನ್ನು ಮಾಡಿ ಶ್ರುತಿಸ್ಮೃತಿಗಳನ್ನು ಅಪ್ರಮಾಣಗಳನ್ನಾಗಿ ಮಾಡಿರುವೆ.

೯೩. ಇಂದ್ರ! ನಾನು ಈ ವಿಶ್ವೇದೇವರನ್ನು ಮೊದಲು ಶ್ರಾದ್ಧಕ್ಕಾಗಿ ನಿಮಂತ್ರಣ ಮಾಡಿರುವೆನು. ಅನಂತರ ನೀನು ನಿಮಂತ್ರಣ ಮಾಡಿರುವುದರಿಂದ ಇದರಲ್ಲಿ ಮಹಾತ್ಮರಾದ ಇವರ ದೋಷವಿಲ್ಲ.

೯೪. ಆದುದರಿಂದ ನೀನು ಇವರ ಶಾಪದ ಪರಿಹಾರಕ್ಕಾಗಿ ಪ್ರಯತ್ನಿಸು. ಅದರಿಂದ ಅತ್ಯಂತ ದುಃಖಗೊಂಡ ಇವರು ಶ್ರಾದ್ಧಯೋಗ್ಯರಾಗುವರು.

೯೫. ಹಿಂದೆ ನಾನು ಎಲ್ಲ ಬ್ರಾಹ್ಮಣರನ್ನು ಕುರಿತು ಈ ವಿಶ್ವೇದೇವರನ್ನು ಮುಂದಿರಿಸಿಕೊಂಡು ಮಾಡಿದ ಶ್ರಾದ್ಧವು ಸಫಲವಾಗುವುದೆಂದು ಹೇಳಿರುವೆನು.

**ತತ್ಕಥಂ ಮಮ ವಾಕ್ಯಂ ತ್ವಮಸತ್ಯಂ ಪ್ರಕರೋಷಿ ಚ ॥ ೯೬ ॥**

**ಇಂದ್ರ ಉವಾಚ :—**

**ಮಯಾಽಪಿ ಕೋಪಯುಕ್ತೇನ ಶಪ್ತಾ ಏತೇ ಪಿತಾಮಹ ।**

**ತದ್ಯಥಾ ಸತ್ಯವಾಕ್ಯೋಽಹಂ ಪ್ರಭವಾಮಿ ತಥಾ ಕುರು ॥ ೯೭ ॥**

**ಬ್ರಹ್ಮೋವಾಚ :—**

**ತವ ವಾಕ್ಯಂ ಯಥಾ ಸತ್ಯಂ ಪ್ರಭವಿಷ್ಯತಿ ವಾಸವ ।**

**ತಥಾಽಹಂ ಸಂವಿಧಾಸ್ಯಾಮಿ ವಿಶ್ವೇ ದೇವಾರ್ಥಮೇವ ಹ ॥ ೯೮ ॥**

**ವಿಶ್ವೇದೇವೈರ್ವಿನಾ ಶ್ರಾದ್ಧಂ ಯತ್ತ್ವಯಾ ಸಮುದಾಹೃತಂ ।**

**ಏಕೋದ್ದಿಷ್ಟಂ ನರಾಃ ಸರ್ವೇ ಕರಿಷ್ಯಂತಿ ಧರಾತಲೇ ॥ ೯೯ ॥**

**ತಸ್ಮಿನ್ನಹನಿ ದೇವೇಂದ್ರ ತ್ವಯಾ ಯತ್ರ ವಿನಿರ್ಮಿತಂ ।**

**ಪ್ರೇತಪಕ್ಷೇ ಚತುರ್ದಶ್ಯಾಂ ಶಸ್ತ್ರೇಣ ನಿಹತಸ್ಯ ಚ ॥ ೧೦೦ ॥**

**ಕ್ಷಯಾಽಹೇ ಚಾಽಪಿ ಸಂಜಾತೇ ವಿಶ್ವೇದೇವೈರ್ವಿನಾಕೃತಂ ।**

**ನಾಗರಸ್ಯ ಶುಭಂ ಶ್ರಾದ್ಧಂ ವಚನಾನ್ಮೇ ಭವಿಷ್ಯತಿ ॥ ೧೦೧ ॥**

**ಶೇಷಕಾಲೇ ತು ಯಃ ಶ್ರಾದ್ಧಂ ಪ್ರಕರಿಷ್ಯತಿ ತೈರ್ವಿನಾ ।**

**ವ್ಯರ್ಥಂ ಸಂಪತ್ಸ್ಯತೇ ತಸ್ಯ ಮಮ ವಾಕ್ಯಾದಸಂಶಯಂ ॥ ೧೦೨ ॥**

**ಮುಕ್ತ್ವಾ ಶಸ್ತ್ರಹತಂ ಚೈಕಂ ತಸ್ಮಿನ್ನಹನಿ ಯೋ ನರಃ ।**

**ಕರಿಷ್ಯತಿ ತಥಾ ಶ್ರಾದ್ಧಂ ಭೂತಭೋಜ್ಯಂ ಭವಿಷ್ಯತಿ ॥ ೧೦೩ ॥**

---

೯೬. ಆದುದರಿಂದ ನೀನು ನನ್ನ ಮಾತನ್ನು ಹೇಗೆ ಅಸತ್ಯಗೊಳಿಸುವೆ?

೯೭. ಇಂದ್ರನು ಹೇಳುತ್ತಾನೆ:—ಪಿತಾಮಹ! ನಾನು ಕೋಪದಿಂದ ಇವರನ್ನು ಶಪಿಸಿದ್ದೇನೆ. ಆದುದರಿಂದ ನಾನು ಸತ್ಯವಾಕ್ಯನಾಗುವಂತೆ ಮಾಡು.

೯೮. ಬ್ರಹ್ಮನು ಹೇಳುತ್ತಾನೆ:—ಇಂದ್ರ! ಈ ವಿಶ್ವೇದೇವರಿಗಾಗಿ ಹೇಳಿದ ನಿನ್ನ ಮಾತು ಸತ್ಯವಾಗುವಂತೆ ನಾನು ಮಾಡುವೆನು.

೯೯. ನೀನು ಹೇಳಿದಂತೆ ಭೂಮಿಯಲ್ಲಿ ನರರು ಏಕೋದ್ದಿಷ್ಟ ಶ್ರಾದ್ಧವನ್ನು ವಿಶ್ವೇದೇವರಿಲ್ಲದೆ ಮಾಡಲಿ.

೧೦೦–೧೦೧. ಪ್ರೇತಪಕ್ಷದಲ್ಲಿ ಚತುರ್ದಶೀದಿನ ಶಸ್ತ್ರಹತರಿಗೆ ನೀನು ವಿಶ್ವೇದೇವರಿಲ್ಲದೆ ಮಾಡಿದ ಶ್ರಾದ್ಧವೂ, ಮೃತದಿನದ ಶ್ರಾದ್ಧವೂ ನನ್ನ ಮಾತಿನಂತೆ ನಾಗರರಿಗೆ ಶುಭವನ್ನುಂಟುಮಾಡಲಿ.

೧೦೨. ಉಳಿದ ಸಮಯದಲ್ಲಿ ವಿಶ್ವೇದೇವರಿಲ್ಲದೆ ಮಾಡಿದ ಶ್ರಾದ್ಧವು ನನ್ನ ಮಾತಿನಿಂದ ನಿಷ್ಫಲವಾಗುವುದು.

೧೦೩. ಆ ದಿನ ಶಸ್ತ್ರಹತರನ್ನುಳಿದು ಇತರರಿಗೆ ಮಾಡಿದ ಶ್ರಾದ್ಧವು ಭೂತಗಳ ಭೋಜನಕ್ಕರ್ಹವಾಗುವುದು.

**ವಿಶ್ವಾಮಿತ್ರ ಉವಾಚ:—**

**ತಥೇತ್ಯುಕ್ತೇ ತು ಶಕ್ರೇಣ ಬ್ರಹ್ಮಾ ಲೋಕಪಿತಾಮಹಃ ।**
**ವಿಶ್ವೇದೇವೈಸ್ತತಃ ಪ್ರೋಕ್ತೋ ವಿನಯಾವನತೈಃ ಸ್ಥಿತೈಃ ॥ ೧೦೪ ॥**
**ಏತೇ ಪುತ್ರಾಃ ಸಮುತ್ಪನ್ನಾ ಅಸ್ಮದಶ್ರುಭ್ಯ ಏವ ಚ ।**
**ತೇಷಾಂ ತು ಭೋಜನಂ ದತ್ತಂ ಕ್ಷುಧಾರ್ತಾನಾಂ ಮಯಾ ವಿಭೋ ॥**
**ಅಸ್ಮದ್ವಿವರ್ಜಿತಂ ಶ್ರಾದ್ಧಂ ಕುಪಿತೈರ್ವಾಸವೋಪರಿ ।**
**ತದ್ಯಥಾ ಜಾಯತೇ ಸತ್ಯಂ ವಾಕ್ಯಮಸ್ಮದುದೀರಿತಂ ॥ ೧೦೬ ॥**
**ಅಸ್ಮಾಕಂ ವಾಸವಸ್ಯಾಽಪಿ ತಥಾ ಕುರು ಪಿತಾಮಹ ।**
**ನಿರೂಪಯ ಶುಭಾಹಾರಂ ಯೇನ ಸ್ಯಾತ್ತೃಪ್ತಿರುತ್ತಮಾ ॥ ೧೦೭ ॥**
**ಏತೇಷಾಮೇವ ಸರ್ವೇಷಾಂ ಪ್ರಸಾದಾತ್ತವ ಪದ್ಮಜ ॥ ೧೦೮ ॥**

**ಪದ್ಮಜ ಉವಾಚ:—**

**ಶ್ರಾದ್ಧಕಾಲೇ ತು ವಿಪ್ರಾಣಾಂ ಭೋಜ್ಯಪಾತ್ರೇಷು ಕೃತ್ಸ್ನಶಃ ।**
**ಭಸ್ಮರೇಖಾಂ ಪ್ರದಾಸ್ಯಂತಿ ಹ್ಯೇತೈಸ್ತತ್ತ್ಯಾಜ್ಯಮೇವ ಹಿ ॥ ೧೦೯ ॥**
**ಭಸ್ಮರಕ್ಷಾಂ ವಿನಾ ಯಚ್ಚ ಕಿಂಚಿಚ್ಛ್ರಾದ್ಧಂ ಭವಿಷ್ಯತಿ ।**
**ಏಕೋದ್ದಿಷ್ಟಂ ಪಾರ್ವಣಂ ಚ ವೃದ್ಧಿಶ್ರಾದ್ಧಮಥಾಽಪಿ ವಾ ॥ ೧೧೦ ॥**
**ಏತೇಭ್ಯಶ್ಚೈವ ತದ್ದತ್ತಂ ಮಯಾ ತುಷ್ಟೇನ ಸಾಂಪ್ರತಂ ।**
**ಏವಮುಕ್ತ್ವಾ ತತೋ ನಾಮ ತೇಷಾಂ ಚಕ್ರೇ ಪಿತಾಮಹಃ ॥ ೧೧೧ ॥**

---

೧೦೪. ವಿಶ್ವಾಮಿತ್ರನು ಹೇಳುತ್ತಾನೆ:—ಇಂದ್ರನು ಹಾಗೆಯೇ ಆಗಲೆನ್ನಲು ವಿಶ್ವೇದೇವರು ವಿನಯದಿಂದ ಬ್ರಹ್ಮನನ್ನು ಕುರಿತು ಹೀಗೆಂದರು.

೧೦೫–೧೦೮. "ಪಿತಾಮಹ! ಈ ಪುತ್ರರು ನಮ್ಮ ಕಣ್ಣೀರಿನಿಂದ ಹುಟ್ಟಿರುವರು. ನಾವು ಇಂದ್ರನ ಮೇಲಿನ ಸಿಟ್ಟಿನಿಂದ ಹಸಿವುಗೊಂಡ ಇವರಿಗೆ ನಮ್ಮನ್ನು ಬಿಟ್ಟು ಮಾಡಿದ ಶ್ರಾದ್ಧವನ್ನು ಭೋಜನವನ್ನಾಗಿತ್ತಿರುವೆವು. ಆದುದರಿಂದ ನಮ್ಮ ಮತ್ತು ಇಂದ್ರನ ಮಾತುಗಳು ಹೇಗೆ ಸತ್ಯವಾಗುವುವೊ, ಹಾಗೆ ಮಾಡು. ನೀನು ಅನುಗ್ರಹ ಮಾಡಿ ಇವರಿಗೆ ತೃಪ್ತಿಯನ್ನುಂಟುಮಾಡುವ ಒಳ್ಳೆಯ ಆಹಾರವನ್ನು ಏರ್ಪಡಿಸು."

೧೦೯. ಬ್ರಹ್ಮನು ಹೇಳುತ್ತಾನೆ:—ಬ್ರಾಹ್ಮಣರು ಶ್ರಾದ್ಧದ ಸಮಯದಲ್ಲಿ ಸಮಸ್ತ ಪಾತ್ರೆಗಳಿಗೂ ಬೂದಿಯ ರೇಖೆಯನ್ನಿಟ್ಟರೆ ಆ ಶ್ರಾದ್ಧವನ್ನು ನೀವು ತ್ಯಜಿಸಿರಿ.

೧೧೦–೧೧೧. ಭಸ್ಮರಕ್ಷೆಯಿಲ್ಲದೆ ಮಾಡಿದ ಏಕೋದ್ದಿಷ್ಟ, ಪಾರ್ವಣ, ವೃದ್ಧಿಶ್ರಾದ್ಧ ಇವುಗಳನ್ನು ಸಂತುಷ್ಟನಾದ ನಾನು ಇವರಿಗಿತ್ತಿರುವೆನು. ಬ್ರಹ್ಮನು ಹೀಗೆ ಹೇಳಿ ತರುವಾಯ ಅವುಗಳಿಗೆ ಹೆಸರನ್ನಿಟ್ಟನು.

ಕುಶಬ್ದೇನ ಸ್ಮೃತಾ ಭೂಮಿಃ ಸಂಸಿಕ್ತಾ ಚಾಶ್ರುಣಾ ಯತಃ ।
ತತೋಽಂಡಾನಿ ಚ ಜಾತಾನಿ ತೇಭ್ಯೋ ಜಾತಾ ಅಮೀ ಘನಾಃ ।
ಕುಷ್ಮಾಂಡಾ ಇತಿ ವಿಖ್ಯಾತಾ ಭವಿಷ್ಯಂತಿ ಜಗತ್ರಯೇ ॥ ೧೧೨ ॥
ತತಸ್ತಾಂಶ್ಚ ತ್ರಿಧಾ ಕೃತ್ವಾ ಕ್ರಮೇಣೈವಾಽರ್ಪಯತ್ತದಾ ।
ಅಗ್ನೇರ್ವಾಯೋಸ್ತಥಾಽರ್ಕಸ್ಯ ವಾಕ್ಯಮೇತದುವಾಚ ಹ ॥ ೧೧೩ ॥
ಯಜುರ್ವೇದೇ ಪ್ರವಿಖ್ಯಾತಂ ಯದ್ದೇವೇತಿ ಋಚಾಂ ತ್ರಯಂ ।
ತೇನ ಭಾಗಃ ಪ್ರದಾತವ್ಯ ಏತೇಷಾಂ ಭಕ್ತಿಹೋಮತಃ ॥ ೧೧೪ ॥
ಕೋಟಿ ಹೋಮೋದ್ಭವೇ ಚೈವ ನಿಜಭಾಗಸ್ಯ ಮಧ್ಯತಃ ।
ತೇನ ತೃಪ್ತಿಂ ಪ್ರಯಾಸ್ಯಂತಿ ಮಮ ವಾಕ್ಯಾದಸಂಶಯಂ ॥ ೧೧೫ ॥
ಏವಮುಕ್ತ್ವಾ ಚತುರ್ವಕ್ತ್ರಸ್ತತಶ್ಚಾದರ್ಶನಂ ಗತಃ ।
ವಿಶ್ವೇದೇವಾಸ್ತಥಾ ಹೃಷ್ಟಾಃ ಕೂಷ್ಮಾಂಡಾಶ್ಚ ವಿಶೇಷತಃ ॥ ೧೧೬ ॥
ಏತಸ್ಮಾತ್ಕಾರಣಾದ್ರಕ್ಷಾ ಕ್ರಿಯತೇ ಭಸ್ಮ ಸಂಭವಾ ।
ವಿಪ್ರಾಣಾಂ ಭೋಜ್ಯಪಾತ್ರೇಷು ಶ್ರಾದ್ಧೇ ಕೂಷ್ಮಾಂಡಜಾದ್ಭಯಾತ್ ।
ನಾಗರಾಣಾಂ ನ ವಾಂಛಂತಿ ಶ್ರಾದ್ಧೇ ಛಿದ್ರಂ ಯತಃ ಶೃಣು ॥ ೧೧೭ ॥
ತೇಷಾಂ ಸ್ಥಾನೇ ಯತೋ ಜಾತಾ ದಕ್ಷಿಣ್ಯೇನ ಸಮನ್ವಿತಾಃ ।
ನಿಷಿದ್ಧಾ ಭಸ್ಮಜಾ ರಕ್ಷಾ ಭರ್ತೃಯಜ್ಞೇನ ತೇಜಸಾ ॥ ೧೧೮ ॥

---

೧೧೨. ಕುಶಬ್ದವಾಚ್ಯವಾದ ಭೂಮಿಯಲ್ಲಿ ಅಶ್ರುಸೇಚನದಿಂದ ಅಂಡಗಳು ಉದ್ಭವಿಸಿ ಅವುಗಳಿಂದ ಇವು ಹುಟ್ಟಿರುವ ಕಾರಣ ಇವು ಕೂಷ್ಮಾಂಡವೆಂದು ಮೂರು ಲೋಕಗಳಲ್ಲಿ ಪ್ರಖ್ಯಾತವಾಗುವುವು.

೧೧೩. ಬಳಿಕ ಅವುಗಳನ್ನು ಮೂರು ಭಾಗ ಮಾಡಿ ಕ್ರಮವಾಗಿ ಅಗ್ನಿ, ವಾಯು, ಸೂರ್ಯರಿಗೆ ಕೊಟ್ಟು ಇಂತೆಂದನು.

೧೧೪. ಮಾನವರು ಇವರಿಗೆ ಯಜುರ್ವೇದದಲ್ಲಿ ವಿಖ್ಯಾತವಾದ ಯದ್ದೇವೇತ್ಯಾದಿ ಮೂರು ಋಕ್ಕುಗಳಿಂದ ಹೋಮಭಾಗಗಳನ್ನು ಕೊಡಬೇಕು.

೧೧೫. ಕೋಟಿ ಹೋಮದಲ್ಲಿ ತಮ್ಮ ಭಾಗದ ಮಧ್ಯದಿಂದ ಭಾಗವನ್ನು ಕೊಡಬೇಕು. ಅದರಿಂದವರು ನನ್ನ ಮಾತಿನಿಂದ ತೃಪ್ತರಾಗುವರು.

೧೧೬. ಬ್ರಹ್ಮನು ಹೀಗೆ ಹೇಳಿ ಅದೃಶ್ಯನಾದನು. ವಿಶ್ವೇದೇವರೂ, ಕೂಷ್ಮಾಂಡರೂ ವಿಶೇಷವಾಗಿ ಸಂತೋಷಗೊಂಡರು.

೧೧೭–೧೨೦. ಈ ಕೂಷ್ಮಾಂಡಗಳ ಭಯದಿಂದ ಬ್ರಾಹ್ಮಣರ ಭೋಜನ ಪಾತ್ರದಲ್ಲಿ ಭಸ್ಮರಕ್ಷೆಯನ್ನು ಮಾಡುವರು. ನಾಗರರ ಸ್ಥಾನದಲ್ಲಿ ಈ ಕೂಷ್ಮಾಂಡಗಳು ಹುಟ್ಟಿರುವುದರಿಂದ ಅವು ದಾಕ್ಷಿಣ್ಯದಿಂದ ಆ ನಾಗರರ ಶ್ರಾದ್ಧವನ್ನು ಕೆಡಿಸುವುದಿಲ್ಲ. ಭರ್ತೃಯಜ್ಞನು ಭಸ್ಮರಕ್ಷೆಯನ್ನು ನಿಷೇಧಿಸಿರುವುದರಿಂದ ನಾಗರರು

ತದರ್ಥಂ ನಾಗರಾಃ ಸರ್ವೇ ನ ಕುರ್ವಂತಿ ಹಿ ಕರ್ಹಿಚಿತ್ ।
ಇಂದ್ರೋಽಪಿ ಚ ಗತೇ ತಸ್ಮಿಂಶ್ಚತುರ್ವಕ್ತ್ರೇ ನಿಜಾಲಯಂ ॥ ೧೧೯ ॥
ಅಬ್ರವೀದ್ಬ್ರಾಹ್ಮಣಾನ್ ಸರ್ವಾಂಶ್ಚಮತ್ಕಾರಪುರೋದ್ಭವಾನ್ ।
ಕೃತಾಂಜಲಿಪುಟೋ ಭೂತ್ವಾ ವಿನಯಾಽವನತಃ ಸ್ಥಿತಃ ॥ ೧೨೦ ॥
ಶ್ರೂಯತಾಂ ಮದ್ವಚೋ ವಿಪ್ರಾಃ ಕರಿಷ್ಯೆಥ ತತಃ ಪರಂ ।
ಸ್ಥಾಪಯಿಷ್ಯಾಮ್ಯಹಂ ಲಿಂಗಂ ದೇವದೇವಸ್ಯ ಶೂಲಿನಃ ॥ ೧೨೧ ॥
ತತಸ್ತೈರ್ಬ್ರಾಹ್ಮಣೈಸ್ತಸ್ಯ ದರ್ಶಿತಂ ಸ್ಥಾನಮುತ್ತಮಂ ।
ಸೋಽಪಿ ಲಿಂಗಂ ಚ ಸಂಸ್ಥಾಪ್ಯ ಪ್ರಹೃಷ್ಟಸ್ತ್ರಿದಿವಂ ಯಯೌ ॥ ೧೨೨ ॥

ವಿಶ್ವಾಮಿತ್ರ ಉವಾಚ :—

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಸ್ಮಿ ನರಾಧಿಪ ।
ಗಯಾಕೂಪ್ಯಾಶ್ಚ ಮಾಹಾತ್ಮ್ಯಂ ಸರ್ವಕಾಮಪ್ರದಾಯಕಂ ॥ ೧೨೩ ॥

ಆನರ್ತ ಉವಾಚ :—

ಗಯಾಕೂಪ್ಯಾಶ್ಚ ಮಾಹಾತ್ಮ್ಯಂ ಭವತಾ ಮೇ ಪ್ರಕೀರ್ತಿತಂ ।
ಬಾಲಮಂಡನಜಂ ವಾಽಪಿ ಸಾಂಪ್ರತಂ ವಕ್ತುಮರ್ಹಸಿ ॥ ೧೨೪ ॥
ಕಸ್ಮಿನ್ ಸ್ಥಾನೇ ಚ ಶಕ್ರೇಣ ತಚ್ಚ ಲಿಂಗಂ ಪ್ರತಿಷ್ಠಿತಂ ।
ಪದಾಽಸ್ಮಾಕಂ ಮಹಾಭಾಗ ತಸ್ಮಿನ್ ದೃಷ್ಟೇ ತು ಕಿಂ ಫಲಂ ॥ ೧೨೫ ॥

---

ಎಲ್ಲಿಯೂ ಅದನ್ನು ಮಾಡುವುದಿಲ್ಲ. ಬ್ರಹ್ಮನು ತನ್ನ ಸ್ಥಾನಕ್ಕೆ ಹೊರಟು ಹೋಗಲು ಇಂದ್ರನು ಚಮತ್ಕಾರಪುರದ ಬ್ರಾಹ್ಮಣರೆಲ್ಲರನ್ನೂ ಕುರಿತು ಕೈ ಮುಗಿದುಕೊಂಡು ವಿನಯದಿಂದ ಹೀಗೆಂದನು.

೧೨೧. "ಎಲೈ ಬ್ರಾಹ್ಮಣರೆ! ನನ್ನ ಮಾತನ್ನು ಕೇಳಿರಿ. ನಾನು ಮಹೇಶ್ವರ ಲಿಂಗವನ್ನು ಇಲ್ಲಿ ಸ್ಥಾಪಿಸುವೆನು."

೧೨೨. ತರುವಾಯ ಆ ಬ್ರಾಹ್ಮಣರು ಅವನಿಗೆ ಉತ್ತಮ ಸ್ಥಾನವನ್ನು ತೋರಿಸಲು ಅವನು ಲಿಂಗವನ್ನು ಸ್ಥಾಪಿಸಿ ಸಂತೋಷದಿಂದ ಸ್ವರ್ಗಕ್ಕೆ ತೆರಳಿದನು.

೧೨೩. ವಿಶ್ವಾಮಿತ್ರನು ಹೇಳುತ್ತಾನೆ:—ಅರಸ! ನೀನು ಕೇಳಿದ ಸಕಲ ಇಷ್ಟಾರ್ಥಗಳನ್ನೀಯುವ ಗಯಾಕೂಪಿಕೆಯ ಮಾಹಾತ್ಮ್ಯವನ್ನು ಹೇಳಿರುತ್ತೇನೆ.

೧೨೪. ಆನರ್ತನು ಹೇಳುತ್ತಾನೆ :—ಮುನಿಯೆ! ನೀನು ಗಯಾಕೂಪಿಕೆಯ ಮಾಹಾತ್ಮ್ಯವನ್ನು ನನಗೆ ಹೇಳಿರುವೆ. ಈಗ ಬಾಲಮಂಡನದ ಮಾಹಾತ್ಮ್ಯವನ್ನು ಹೇಳು.

೧೨೫. ಮಹಾತ್ಮನೆ! ಇಂದ್ರನು ಆ ಲಿಂಗವನ್ನು ಯಾವ ಸ್ಥಳದಲ್ಲಿ ಸ್ಥಾಪಿಸಿದನು? ಅದನ್ನು ದರ್ಶನಮಾಡಿದರೆ ಏನು ಫಲವುಂಟಾಗುವುದು? ನಮಗೆ ಹೇಳು.

ವಿಶ್ವಾಮಿತ್ರ ಉವಾಚ:—

**ಸಹಸ್ರಾಕ್ಷೇಣ ತೇ ವಿಪ್ರಾ ಲಿಂಗಾರ್ಥಂ ಯಾಚಿತಾ ಯದಾ ।**
**ಸ್ಥಾನಂ ಶುಭಂ ಪ್ರವಿತ್ರಂ ಚ ಸರ್ವಕ್ಷೇತ್ರಸ್ಯ ಮಧ್ಯಗಂ ॥ ೧೨೬ ॥**
**ತತಸ್ತೈರ್ದರ್ಶಿತಂ ಲಿಂಗಂ ಸುಪುಣ್ಯಂ ಬಾಲಮಂಡನಂ ।**
**ಯತ್ರ ಬಾಲಾಃ ಪುರಾ ಜಾತಾ ಮರುದಾಖ್ಯಾ ದಿತೇಃ ಸುತಾಃ ॥ ೧೨೭ ॥**
**ತೇನೈವ ಚ ಪುರಾ ಧ್ವಸ್ತಾ ನ ಚ ಮೃತ್ಯುಮುಪಾಗತಾಃ ।**
**ತಚ್ಚ ಮೇಧ್ಯತಮಂ ಜ್ಞಾತ್ವಾ ಸ್ಥಾನಂ ದೃಷ್ಟಂ ಪುರಾ ಚ ಯತ್ ॥ ೧೨೮ ॥**
**ಯತ್ರ ದಿತ್ಯಾ ತಪಸ್ತಪ್ತಂ ಸುಸುತಂ ಕಾಂಕ್ಷಮಾಣಯಾ ।**
**ತದ್ದೃಷ್ಟ್ವಾ ಪರಮಂ ಸ್ಥಾನಂ ಜೀವಂ ಪ್ರೋವಾಚ ದೇವಪಃ ॥ ೧೨೯ ॥**
**ಗುರೋ ಬ್ರೂಹಿ ಮಮಾಶು ತ್ವಂ ಸುಮುಹೂರ್ತಂ ಚ ಸಾಂಪ್ರತಂ ।**
**ದಿವಸಂ ಯತ್ರ ಸಲ್ಲಿಂಗಂ ಸ್ಥಾಪಯಾಮಿ ಹರೋದ್ಭವಂ ।**
**ಪ್ರಲಯೇಽಪಿ ಸಮುತ್ಪನ್ನೇ ನ ನಾಶೋ ಯತ್ರ ಜಾಯತೇ ॥ ೧೩೦ ॥**
**ತತಃ ಸೋಽಪಿ ಚಿರಂ ಧ್ಯಾತ್ವಾ ತಂ ಪ್ರೋವಾಚ ಶಚೀಪತಿಂ ।**
**ಮಾಘಮಾಸೇ ಸಿತೇ ಪಕ್ಷೇ ಪುಷ್ಯರ್ಕ್ಷೇ ರವಿವಾಸರೇ ॥ ೧೩೧ ॥**
**ತ್ರಯೋದಶ್ಯಾಮಭೀಷ್ಟೇ ತು ಸಂಜಾತೇಽಭ್ಯುದಯೇ ಶುಭೇ ।**
**ಸಂಸ್ಥಾಪಯ ವಿಭೋ ಲಿಂಗಂ ಮಮ ವಾಕ್ಯೇನ ಸಾಂಪ್ರತಂ ॥ ೧೩೨ ॥**

---

೧೨೬–೧೨೯. ವಿಶ್ವಾಮಿತ್ರನು ಹೇಳುತ್ತಾನೆ:—ಇಂದ್ರನು ಬ್ರಾಹ್ಮಣರನ್ನು ಕ್ಷೇತ್ರದ ನಡುವೆ ಲಿಂಗಪ್ರತಿಷ್ಠೆಗೆ ಉತ್ತಮ ಸ್ಥಾನವನ್ನು ಕೊಡಬೇಕೆಂದು ಬೇಡಲು ಆ ಬ್ರಾಹ್ಮಣರು ಪುಣ್ಯಕರವಾದ ಬಾಲಮಂಡನಸ್ಥಾನವನ್ನು ತೋರಿಸಿದರು. ಅಲ್ಲಿ ಹಿಂದೆ ದಿತಿಗೆ ಮರುತ್ತೆಂಬ ಸುತರು ಜನಿಸಿದ್ದರು. ಅವರನ್ನು ಇಂದ್ರನು ಕೊಲ್ಲಲು ಪ್ರಯತ್ನಿಸಿದರೂ ಅವರು ಸಾಯಲಿಲ್ಲ. ಅದು ಪವಿತ್ರವಾದ ಸ್ಥಾನವೆಂದರಿತು ಹಿಂದೆ ಪುತ್ರರನ್ನು ಅಪೇಕ್ಷಿಸುವ ದಿತಿಯು ತಪವನ್ನಾಚರಿಸಿದ್ದಳು. ಇಂದ್ರನು ಆ ಉತ್ತಮ ಸ್ಥಾನವನ್ನು ನೋಡಿ ಬೃಹಸ್ಪತಿಯನ್ನು ಕುರಿತು ಇಂತೆಂದನು.

೧೩೦. "ಬೃಹಸ್ಪತಿಯೆ! ಈಗ ನೀನು ನನಗೆ ಶೀಘ್ರವಾಗಿ ಒಳ್ಳೆಯ ಮುಹೂರ್ತವುಳ್ಳ ದಿವಸವನ್ನು ಹೇಳು. ಆ ಮುಹೂರ್ತದಲ್ಲಿ ನಾನು ಪ್ರಳಯ ಕಾಲದಲ್ಲಿಯೂ ನಾಶವಾಗದ ಮಹೇಶ್ವರ ಲಿಂಗವನ್ನು ಸ್ಥಾಪಿಸುವೆನು."

೧೩೧–೧೩೨. ಬಳಿಕ ಬೃಹಸ್ಪತಿಯು ಬಹಳ ಹೊತ್ತು ಆಲೋಚಿಸಿ ಇಂದ್ರನನ್ನು ಕುರಿತು ಮಾಘಮಾಸದ ಶುಕ್ಲಪಕ್ಷ ತ್ರಯೋದಶೀ ಭಾನುವಾರದ ದಿನ ಅಭ್ಯುದಯದಾಯಕವಾದ ಶುಭ ಪುಷ್ಯ ನಕ್ಷತ್ರದಲ್ಲಿ ನನ್ನ ಮಾತಿನಿಂದ ಮಹೇಶ್ವರ ಲಿಂಗವನ್ನು ಸ್ಥಾಪಿಸು.

ಆಕಲ್ಪಾಂತಸಮಂ ದಿವ್ಯಂ ಸ್ಥಿರಂ ತೇ ತದ್ಭವಿಷ್ಯತಿ ।
ತಚ್ಛ್ರುತ್ವಾ ದೇವರಾಜಸ್ತು ಹರ್ಷೇಣ ಮಹತಾನ್ವಿತಃ ॥ ೧೩೩ ॥
ಬಾಲಮುಂಡನ ಸಾನ್ನಿಧ್ಯೇ ಸ್ಥಾಪಯಾಮಾಸ ತತ್ತದಾ ।
ವಿಪ್ರ ಪುಣ್ಯಾಹಘೋಷೇಣ ಗೀತವಾದಿತ್ರನಿಃಸ್ವನೈಃ ॥ ೧೩೪ ॥
ತತೋ ಹೋಮಾವಸಾನೇ ತು ತರ್ಪಯಿತ್ವಾ ದ್ವಿಜೋತ್ತಮಾನ್ ।
ದಕ್ಷಿಣಾಯಾಂ ದದೌ ತೇಷಾಮಾಘಾಟಂ ಸ್ಥಾನಮುತ್ತಮಂ ॥ ೧೩೫ ॥
ಮಾಂ ಕೂಲೇ ಸಂಸ್ಥಿತಂ ಯಚ್ಚ ದಿವ್ಯಪ್ರಾಕಾರಭೂಷಿತಂ ।
ಸರ್ವೇಷಾಮೇವ ವಿಪ್ರಾಣಾಂ ಸಾಮಾನ್ಯೇನ ನೃಪೋತ್ತಮ ॥ ೧೩೬ ॥
ತತೋಽಷ್ಟಕುಲಿಕಾನ್ ವಿಪ್ರಾನ್ ಸಮಾಹೂಯಾಽಬ್ರವೀದಿದಂ ।
ಯುಷ್ಮಾಭಿಸ್ತು ಸದಾ ಕಾರ್ಯಾ ಚಿಂತಾ ಲಿಂಗಸಮುದ್ಭವಾ ॥ ೧೩೭ ॥
ಅಸ್ಯ ಯುಸ್ಮಾನ್ಮಯಾ ದತ್ತಾ ವೃತ್ತಿಶ್ಚಂದ್ರಾರ್ಕಕಾಲಿಕಾ ।
ಸಾ ಚ ಗ್ರಾಹ್ಯಾ ತದರ್ಥೇ ಚ ದ್ವಾದಶ ಗ್ರಾಮ ಸಂಭವಾ ॥ ೧೩೮ ॥

ಬ್ರಾಹ್ಮಣಾ ಊಚುಃ:—

ನ ವಯಂ ವಿಬುಧಶ್ರೇಷ್ಠ ಕರಿಷ್ಯಾಮೋ ವಚಸ್ತವ ।
ಲಿಂಗಚಿಂತಾ ಸಮುದ್ಭೂತಂ ಶ್ರೂಯತಾಮತ್ರ ಕಾರಣಂ ॥ ೧೩೯ ॥

---

೧೩೩–೧೩೪. ಅದು ಕಲ್ಪಾವಸಾನದವರೆಗೂ ದಿವ್ಯವೂ, ಸ್ಥಿರವೂ ಆಗಿರುವುದು ಎಂದನು. ಇಂದ್ರನು ಅದನ್ನು ಕೇಳಿ ಅತ್ಯಂತ ಸಂತೋಷದಿಂದ ಆ ಲಿಂಗವನ್ನು ಬಾಲಮುಂಡನ ಕ್ಷೇತ್ರದ ಹತ್ತಿರ ಪುಣ್ಯಾಹ ಗೀತವಾದ್ಯಗಳ ಧ್ವನಿಗಳೊಡನೆ ಪ್ರತಿಷ್ಠೆ ಮಾಡಿದನು.

೧೩೫–೧೩೬. ಬಳಿಕ ಹೋಮದ ಅಂತ್ಯದಲ್ಲಿ ಬ್ರಾಹ್ಮಣರನ್ನು ದಕ್ಷಿಣೆಯಿಂದ ತೃಪ್ತಿಗೊಳಿಸಿ ಆ ಸಮಸ್ತ ಬ್ರಾಹ್ಮಣರಿಗೆ ಸಾಮಾನ್ಯವಾಗಿ ಮಾಂಕೂಲದಲ್ಲಿರುವ ದಿವ್ಯ ಪ್ರಾಕಾರದಿಂದ ಅಲಂಕಾರಗೊಂಡ ಆಘಾಟವೆಂಬ ಉತ್ತಮ ಸ್ಥಾನವನ್ನಿತ್ತನು.

೧೩೭–೧೩೮. ತರುವಾಯ ಅಷ್ಟಕುಲದ ಬ್ರಾಹ್ಮಣರನ್ನು ಕರೆದು ನೀವು ಯಾವಾಗಲೂ ಈ ಶಿವಲಿಂಗವನ್ನು ಕಾಪಾಡಿಕೊಂಡು ಬರಬೇಕು. ಇದಕ್ಕಾಗಿ ನಿಮಗೆ ನಾನು ಸೂರ್ಯಚಂದ್ರರಿರುವವರೆಗೆ ಶಾಶ್ವತವಾಗಿರುವ ವೃತ್ತಿಯನ್ನಿತ್ತಿರುವೆನು. ಈ ಹನ್ನೆರಡು ಗ್ರಾಮಗಳನ್ನು ಸ್ವೀಕರಿಸಿರಿ ಎಂದನು.

೧೩೯. ಬ್ರಾಹ್ಮಣರು ಹೇಳುತ್ತಾರೆ:—"ದೇವೇಂದ್ರ ! ನೀನು ಹೇಳಿದ ಲಿಂಗಚಿಂತಾ ವಿಷಯಕವಾದ ಮಾತನ್ನು ನಾವು ನಡೆಸಲಾರೆವು. ಇದಕ್ಕೆ ಕಾರಣವನ್ನು ಕೇಳು.

ಬೃಹ್ಮಸ್ವಂ ವಿಬುಧಸ್ವಂ ಚ ತಡಾಗೋತ್ಥಂ ವಿಶೇಷತಃ ।
ಭಕ್ಷಿತಂ ಸ್ವಲ್ಪಮಪ್ಯತ್ರ ನಾಶಯೇತ್ಸರ್ವ ಪೂರ್ವಜಾನ್ ॥ ೧೪೦ ॥
ಯದಿ ಕಶ್ಚಿತ್ಕುಲೇಽಸ್ಮಾಕಂ ಜಾತಸ್ತದ್ಭಕ್ಷಯಿಷ್ಯತಿ ।
ಪಾತಯಿಷ್ಯತಿ ನಃ ಸರ್ವಾಂಸ್ತದಸ್ಮಾಕಂ ಮಹದ್ಭಯಂ ॥ ೧೪೧ ॥
ಅಥ ತಂ ಮಧ್ಯಗಃ ಪ್ರಾಹ ಕೃತಾಂಜಲಿರ್ದ್ವಿಜೋತ್ತಮಃ ।
ದೃಷ್ಟ್ವಾಽನ್ಯಮನಸಂ ಶಕ್ರಂ ಕೃತಪೂರ್ವೋಽಪಕಾರಿಣಂ ॥ ೧೪೨ ॥
ದೇವಶರ್ಮಾಽಭಿಧಾನಸ್ತು ವಿಖ್ಯಾತಃ ಪ್ರವರೈಸ್ತ್ರಿಭಿಃ ।
ಅಹಂ ಚಿಂತಾಂ ಕರಿಷ್ಯಾಮಿ ತವಲಿಂಗಸಮುದ್ಭವಾಂ ॥ ೧೪೩ ॥
ಅಪುತ್ರಸ್ಯ ತು ಮೇ ಪುತ್ರಂ ಯದಿ ಯಚ್ಛಸಿ ವಾಸವ ।
ಯಸ್ಮಾತ್ಸಂಜಾಯತೇ ವಂಶೋ ಯಾವದಾಭೂತ ಸಂಪ್ಲವಂ ॥ ೧೪೪ ॥
ಧರ್ಮಜ್ಞಸ್ತು ಕೃತಜ್ಞಸ್ತು ದೇವಸ್ವಪರಿವರ್ಜಕಃ ।
ತಚ್ಛ್ರುತ್ವಾ ವಾಸವೋ ಹೃಷ್ಟಸ್ತಮುವಾಚ ದ್ವಿಜೋತ್ತಮಂ ॥ ೧೪೫ ॥
ಇಂದ್ರ ಉವಾಚ :—
ಭವಿಷ್ಯತಿ ಶುಭಸ್ತುಭ್ಯಂ ಪುತ್ರೋ ವಂಶಧರಃ ಪರಃ ।
ಧರ್ಮಾತ್ಮಾ ಸತ್ಯವಾದೀ ಚ ದೇವಸ್ವ ಪರಿವರ್ಜಕಃ ॥ ೧೪೬ ॥

---

೧೪೦. ಬ್ರಹ್ಮಸ್ವ, ವಿಬುಧಸ್ವ, ತಡಾಗಸ್ವತ ಇವುಗಳನ್ನು ಸ್ವಲ್ಪವಾಗಿ ಭಕ್ಷಿಸಿದರೂ ಇವು ಸಕಲ ಪೂರ್ವಿಕರನ್ನೂ ನಾಶಗೊಳಿಸುವುವು.

೧೪೧. ನಮ್ಮ ವಂಶದಲ್ಲಿ ಜನಿಸಿದ ಯಾವನಾದರೂ ಅವುಗಳನ್ನು ಅನುಭವಿಸಿದರೆ ನಮ್ಮೆಲ್ಲರನ್ನೂ ಪತಿತರನ್ನಾಗಿಸುವನು. ಅದರಿಂದ ನಮಗೆ ಬಹಳ ಭಯವುಂಟಾಗಿದೆ."

೧೪೨—೧೪೫. ಬಳಿಕ ದೇವಶರ್ಮನೆಂಬ ಮೂರು ಪ್ರವರಗಳಿಂದ ವಿಖ್ಯಾತನಾದ ಮಧ್ಯಸ್ಥ ದ್ವಿಜವರ್ಯನು ಹಿಂದೆ ಉಪಕಾರಮಾಡಿದ ಅನ್ಯಮನಸ್ಕನಾದ ಇಂದ್ರನನ್ನು ನೋಡಿ ಕೈಮುಗಿದುಕೊಂಡು ಇಂತೆಂದನು. "ಪ್ರಳಯಕಾಲದವರೆಗೆ ಶಾಶ್ವತವಾದ ವಂಶವನ್ನು ಕೊಡುವ ಧರ್ಮಜ್ಞನೂ, ಕೃತಜ್ಞನೂ, ದೇವಸ್ವವನ್ನು ಸ್ವೀಕರಿಸದವನೂ ಆದ ಪುತ್ರನನ್ನು ನೀನು ನನಗೆ ಕೊಡುವುದಾದರೆ ನಾನು ನಿನ್ನ ಶಿವಲಿಂಗದ ಚಿಂತೆಯನ್ನು ಮಾಡುವೆನು." ಇಂದ್ರನು ಅದನ್ನು ಕೇಳಿ ಸಂತೋಷಗೊಂಡು ಆ ಬ್ರಾಹ್ಮಣನನ್ನು ಕುರಿತು ಹೀಗೆಂದನು.

೧೪೬. ಇಂದ್ರನು ಹೇಳುತ್ತಾನೆ:—ನಿನಗೆ ಶುಭಕರನೂ, ವಂಶೋದ್ಧಾರಕನೂ, ಧರ್ಮಿಷ್ಠನೂ, ಸತ್ಯವಂತನೂ, ದೇವಸ್ವವನ್ನು ತ್ಯಜಿಸುವವನೂ ಆದ ಪುತ್ರನು ಜನಿಸುವನು.

ತಸ್ಯಾನ್ವಯೇ ತು ಯೇ ಪುತ್ರಾ ಭವಿಷ್ಯಂತಿ ಮಹಾತ್ಮನಃ ।
ತೇ ಸರ್ವೇಽತ್ರ ಭವಿಷ್ಯಂತಿ ತದ್ರೂಪಾ ವೇದಪಾರಗಾಃ ॥ ೧೪೭ ॥
ಅಪರಂ ಶೃಣು ಮೇ ವಾಕ್ಯಂ ಯತ್ತೇ ವಕ್ಷ್ಯಾಮಿ ಸದ್ವಿಜ ।
ತಥಾ ಶೃಣ್ವಂತು ವಿಪ್ರೇಂದ್ರಾಃ ಸರ್ವೇ ಯೇಽತ್ರ ಸಮಾಗತಾಃ ॥ ೧೪೮ ॥
ಬಾಲಮಂಡನಕೇ ತೀರ್ಥೇ ಮಯೈತಲ್ಲಿಂಗಮುತ್ತಮಂ ।
ಚತುರ್ವಕ್ತ್ರ ಸಮಾದೇಶಾಚ್ಚತುರ್ವಕ್ತ್ರಂ ಪ್ರತಿಷ್ಠಿತಂ ॥ ೧೪೯ ॥
ಯೋಽತ್ರ ಸ್ನಾನವಿಧಿಂ ಕೃತ್ವಾ ತೀರ್ಥೇಽತ್ರ ಪಿತೃತರ್ಪಣಂ ।
ಆಜನ್ಮ ಪಿತರಸ್ತೇನ ಪ್ರಭವಿಷ್ಯಂತಿ ತರ್ಪಿತಾಃ ॥ ೧೫೦ ॥
ಗ್ರಾಮಾ ದ್ವಾದಶ ಯೇ ದತ್ತಾ ಮಯಾ ದೇವಸ್ಯ ಚಾಽಸ್ಯ ಭೋಃ ।
ವಸಿಷ್ಯಂತಿ ಚ ಯೇ ವಿಪ್ರಾ ವೃದ್ಧಿಶ್ರಾದ್ಧ ಉಪಸ್ಥಿತೇ ।
ತೇ ಶ್ರಾದ್ಧಂ ಪ್ರಥಮಂ ಚಾಽಸ್ಯ ಕೃತ್ವಾ ಶ್ರಾದ್ಧಂ ತತಃ ಪರಂ ॥ ೧೫೧ ॥
ತತ್ಕೃತ್ಯಾನಿ ಕರಿಷ್ಯಂತಿ ತೇ ವಿಘ್ನೇನ ವಿವರ್ಜಿತಾಃ ।
ವೃದ್ಧಿಃ ಸಂಪತ್ಸ್ಯತೇ ತೇಷಾಂ ನೋಚೇದ್ವಿಘ್ನಂ ಭವಿಷ್ಯತಿ ॥ ೧೫೨ ॥
ಮಾಘಮಾಸೇ ಸಿತೇ ಪಕ್ಷೇ ತ್ರಯೋದಶ್ಯಾಂ ದಿನೇ ಸ್ಥಿತೇ ।
ತದ್ಗ್ರಾಮ ಸಂಸ್ಥಿತಾ ಲೋಕಾ ಯೇಽತ್ರಾಽಽಗತ್ಯ ಸಮಾಹಿತಾಃ ॥ ೧೫೩ ॥

---

೧೪೭. ಮಹಾತ್ಮನಾದ ಅವನ ವಂಶದಲ್ಲಿ ಹುಟ್ಟುವ ಪುತ್ರರೆಲ್ಲ ಅವನಂತೆಯೇ ವೇದಪಾರಂಗತರಾಗುವರು.

೧೪೮. ದ್ವಿಜವರ್ಯನೆ! ನಾನು ಹೇಳುವ ಮತ್ತೊಂದು ಮಾತನ್ನು ಕೇಳು. ಹಾಗೆಯೇ ಇಲ್ಲಿಗೆ ಬಂದಿರುವ ಬ್ರಾಹ್ಮಣರೆಲ್ಲ ಈ ಮಾತನ್ನು ಕೇಳಲಿ.

೧೪೯. ನಾನು ಈ ಬಾಲಮಂಡನ ತೀರ್ಥದಲ್ಲಿ ಬ್ರಹ್ಮನ ಅಪ್ಪಣೆಯಿಂದ ನಾಲ್ಕು ಮುಖವುಳ್ಳ ಉತ್ತಮ ಲಿಂಗವನ್ನು ಪ್ರತಿಷ್ಠೆ ಮಾಡಿದ್ದೇನೆ.

೧೫೦. ಇಲ್ಲಿ ಮಿಂದು ಪಿತೃಗಳಿಗೆ ತರ್ಪಣ ಮಾಡಿದವನ ಪಿತೃಗಳು ಆಜನ್ಮ ಮೊದಲ್ಗೊಂಡು ತೃಪ್ತಿಗೊಳ್ಳುವರು.

೧೫೧–೧೫೨. ನಾನು ಈ ಮಹೇಶ್ವರನಿಗೆ ಹನ್ನೆರಡು ಗ್ರಾಮಗಳನ್ನು ಕೊಟ್ಟಿರುವೆನು. ಇಲ್ಲಿ ವಾಸಮಾಡುವ ಬ್ರಾಹ್ಮಣರು ವೃದ್ಧಿಶ್ರಾದ್ಧವು ಒದಗಲು ಮೊದಲು ಇವನಿಗೆ ವೃದ್ಧಿಶ್ರಾದ್ಧವನ್ನು ಮಾಡಿ ಅನಂತರ ಆ ಶ್ರಾದ್ಧವನ್ನು ಪೂರಯಿಸಿ ಅದರ ಕಾರ್ಯಗಳನ್ನು ಮಾಡಿದರೆ ವಿಘ್ನವು ಸಂಭವಿಸುವುದಿಲ್ಲ. ವೃದ್ಧಿಯೂ ಉಂಟಾಗುವುದು. ಇಲ್ಲದಿದ್ದರೆ ವಿಘ್ನವು ಸಂಭವಿಸುವುದು.

೧೫೩–೧೫೪. ಮಾಘಮಾಸದ ಶುಕ್ಲಪಕ್ಷ ತ್ರಯೋದಶೀ ದಿನ ಆ ಗ್ರಾಮ

ಬಾಲಮುಂಡನಕೇ ಸ್ನಾತ್ವಾ ಲಿಂಗಮೇತತ್ಸಮಾಹಿತಾಃ ।
ಪೂಜಯಿಷ್ಯಂತಿ ಸದ್ಭಕ್ತ್ಯಾ ತೇ ಯಾಸ್ಯಂತಿ ಪರಾಂ ಗತಿಂ ॥ ೧೫೪ ॥
ಗ್ರಾಮಾಣಾಂ ಮಮ ಲಿಂಗಸ್ಯ ಯೇ ಕರಿಷ್ಯಂತಿ ಪೀಡನಂ ।
ಕಾಲಾಂತರೇಽಪಿ ಸಂಪ್ರಾಪ್ತಾಸ್ತೇ ಯಾಸ್ಯಂತಿ ಚ ಸಂಕ್ಷಯಂ ॥ ೧೫೫ ॥
ಪೃಥಿವ್ಯಾಂ ಯಾನಿ ತೀರ್ಥಾನಿ ಹ್ಯಾಸಮುದ್ರ ಸರಾಂಸಿ ಚ ।
ಬಾಲಮುಂಡನಕೇ ತೀರ್ಥೆ ಆಗಮಿಷ್ಯಂತಿ ತದ್ದಿನೇ ॥ ೧೫೬ ॥

ವಿಶ್ವಾಮಿತ್ರ ಉವಾಚ :—

ಏತದುಕ್ತ್ವಾ ಸಹಸ್ರಾಕ್ಷಸ್ತತಶ್ಚಾಷ್ಟಕುಲಾನ್ದ್ವಿಜಾನ್ ।
ಅಗ್ರತಃ ಕೋಪಸಂಯುಕ್ತಸ್ತತೋ ವಚನಮಬ್ರವೀತ್ ॥ ೧೫೭ ॥
ಏತೈಃ ಸಪ್ತಕುಲೈರ್ವಿಪ್ರೈರ್ಯತ್ಕೃತಂ ವಚನಂ ನ ಮೇ ।
ಕೃತಘ್ನೈಸ್ತಾಂಛಪಿಷ್ಯಾಮಿ ಕೃತಘ್ನತ್ವಾನ್ನಸಂಶಯಃ ॥ ೧೫೮ ॥
ಯಸ್ಮಾದಿದಂ ಪುರಾ ಪ್ರೋಕ್ತಂ ಮನುನಾ ಸತ್ಯವಾದಿನಾ ।
ಸ್ವಾಯಂಭುವೇನ ಪ್ರೋದ್ದಿಶ್ಯ ಕೃತಘ್ನಂ ಸಕಲಂ ಜನಂ ॥ ೧೫೯ ॥
ಬ್ರಹ್ಮಘ್ನೇ ಚ ಸುರಾಪೇ ಚ ಚೌರೇ ಭಗ್ನವ್ರತೇ ಶಠೇ ।
ನಿಷ್ಕೃತಿರ್ವಿಹಿತಾ ಸದ್ಭಿಃ ಕೃತಘ್ನೇ ನಾಽಸ್ತಿ ನಿಷ್ಕೃತಿಃ ॥ ೧೬೦ ॥

---

ವಾಸಿಗಳು ಇಲ್ಲಿಗೆ ಬಂದು ಬಾಲಮುಂಡನ ಕ್ಷೇತ್ರದಲ್ಲಿ ಮಿಂದು ಈ ಲಿಂಗವನ್ನು ಭಕ್ತಿಯಿಂದ ಪೂಜಿಸಿದರೆ ಉತ್ತಮ ಗತಿಯನ್ನು ಪಡೆಯುವರು.

೧೫೫. ಜನರು ಕಾಲಾಂತರದಲ್ಲಿ ಇಲ್ಲಿಗೆ ಬಂದು ನನ್ನ ಗ್ರಾಮವನ್ನು ಪೀಡಿಸಿದರೆ ನಾಶವಾಗುವರು.

೧೫೬. ಭೂಮಿಯಲ್ಲಿರುವ ಸಮುದ್ರ ಸರೋವರಾದಿಗಳು ಆ ದಿನ ಬಾಲಮುಂಡನ ತೀರ್ಥಕ್ಕೆ ಬರುವುವು.

೧೫೭. ವಿಶ್ವಾಮಿತ್ರನು ಹೇಳುತ್ತಾನೆ:—ಇಂದ್ರನು ಆ ಅಷ್ಟಕುಲದ ಬ್ರಾಹ್ಮಣರ ಮುಂದೆ ಇದನ್ನು ಹೇಳಿ ಬಳಿಕ ಕೋಪದಿಂದ ಹೀಗೆಂದನು.

೧೫೮. "ಈ ಏಳು ಕುಲದ ಕೃತಘ್ನ ಬ್ರಾಹ್ಮಣರು ನನ್ನ ಮಾತನ್ನು ನಡೆಸದಿರುವುದರಿಂದ ಅವರನ್ನು ಶಪಿಸುವೆನು.

೧೫೯. ಹಿಂದೆ ಸತ್ಯವಾದಿಯಾದ ಸ್ವಾಯಂಭುವ ಮನುವು ಕೃತಘ್ನರಾದ ಜನರನ್ನು ಉದ್ದೇಶಿಸಿ ಹೀಗೆ ಹೇಳಿದ್ದಾನೆ.

೧೬೦. ಬ್ರಹ್ಮಘ್ನ, ಸುರಾಪಾನ ಮಾಡಿದವನು, ಕಳ್ಳ, ವ್ರತಭ್ರಷ್ಟ, ಶಠ ಇವರಿಗೆ ಸಜ್ಜನರು ಪ್ರಾಯಶ್ಚಿತ್ತವನ್ನು ವಿಧಿಸಿರುವರು. ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ.

ಅವಧ್ಯಾ ಬ್ರಾಹ್ಮಣಾ ಗಾವಃ ಸ್ತ್ರಿಯೋ ಬಾಲಾಸ್ತಪಸ್ವಿನಃ ।
ತೇನಾಽಹಂ ನ ವಧಾಮ್ಯೇತಾಂಛಿದ್ರೇಽಪಿ ಮಹತಿ ಸ್ಥಿತೇ ॥ ೧೬೧ ॥
ತತಸ್ತೋಯಂ ಸಮಾದಾಯ ಸದರ್ಭಂ ನಿಜಪಾಣಿನಾ ।
ಶಶಾಪ ತಾನ್ ದ್ವಿಜಶ್ರೇಷ್ಠಾನ್ ಕೃತಘ್ನಾನ್ ಪಾಕಶಾಸನಃ ॥ ೧೬೨ ॥
ಮಮ ವಾಕ್ಯಾದಪಿ ಪ್ರಾಪ್ಯ ಏತೇ ಲಕ್ಷ್ಮೀಂ ದ್ವಿಜೋತ್ತಮಾಃ ।
ನಿರ್ಧನಾಃ ಸಂಭವಿಷ್ಯಂತಿ ನೀತ್ವಾ ಯದ್ಧ್ವರತೋಽಖಿಲಂ ॥ ೧೬೩ ॥
ಭಕ್ತಾನಾಂ ಚ ಪರಿತ್ಯಾಗಮೇತೇಷಾಂ ವಂಶಜಾ ದ್ವಿಜಾಃ ।
ಕರಿಷ್ಯಂತಿ ನ ಸಂದೇಹೋ ಯಥಾ ಮಮ ಸುನಿಷ್ಠುರಾಃ ।
ದಾಕ್ಷಿಣ್ಯರಹಿತಾಃ ಸರ್ವೇ ತಥಾ ಬಹ್ವಾಶಿನಃ ಸದಾ ॥ ೧೬೪ ॥
ಏವಮುಕ್ತ್ವಾಽಥ ತಾನ್ ವಿಪ್ರಾನ್ ಸಪ್ತವಂಶಸಮುದ್ಭವಾನ್ ।
ಪುನಃ ಪ್ರೋವಾಚ ತಾನ್ ವಿಪ್ರಾಂಛೇಷಾನ್ನಗರಸಂಭವಾನ್ ॥ ೧೬೫ ॥
ಮಮಾತ್ರ ದೀಯತಾಂ ಸ್ಥಾನಂ ಸ್ಥಾನೇಽತ್ರೈವ ದ್ವಿಜೋತ್ತಮಾಃ ।
ಯೇನ ಸಂವತ್ಸರಸ್ಯಾಂತೇ ಪಂಚರಾತ್ರಂ ವಸಾಮ್ಯಹಂ ॥ ೧೬೬ ॥
ದೇವಸ್ಯಾಽಸ್ಯ ಪ್ರಪೂಜಾರ್ಥಂ ಮರ್ತ್ಯಲೋಕಸುಖಾಯ ಚ ।
ಬ್ರಾಹ್ಮಣಾನಾಂ ಪ್ರಪೂಜಾರ್ಥಂ ಸರ್ವೇಷಾಂ ಭವತಾಮಿಹ ॥ ೧೬೭ ॥

---

೧೬೧. ಬ್ರಾಹ್ಮಣರು, ಗೋವುಗಳು, ಹೆಂಗಸರು, ಬಾಲಕರು, ತಪಸ್ವಿಗಳು ವಧೆಗೆ ಅನರ್ಹರು. ಆದುದರಿಂದ ನಾನು ಇವರನ್ನು ಬಹಳ ತಪ್ಪನ್ನು ಮಾಡಿದ್ದರೂ ವಧಿಸುವುದಿಲ್ಲ.''

೧೬೨. ಬಳಿಕ ಇಂದ್ರನು ದರ್ಭೆಯೊಡನೆ ಕೈಯಲ್ಲಿ ನೀರನ್ನು ತೆಗೆದು ಕೊಂಡು ಕೃತಘ್ನರಾದ ಆ ಬ್ರಾಹ್ಮಣರನ್ನು ಶಪಿಸಿದನು.

೧೬೩. ''ಈ ಉತ್ತಮ ಬ್ರಾಹ್ಮಣರು ನನ್ನ ಮಾತಿನಿಂದ ಸಂಪತ್ತನ್ನು ಪಡೆ ದಿದ್ದರೂ ಬಡವರಾಗಿ ಭಕ್ತರ ಮೂಲಕ ಅನ್ನ ವಸ್ತ್ರಾದಿಗಳನ್ನು ಪಡೆದು ಜೀವಿಸು ವರು.

೧೬೪. ನನ್ನಲ್ಲಿ ನಿಷ್ಠುರರಾದ ಇವರ ವಂಶಜರು ಭಕ್ತರನ್ನು ತ್ಯಜಿಸಿ ದಾಕ್ಷಿಣ್ಯವಿಲ್ಲದವರೂ, ಬಹು ಭೋಜನ ಮಾಡುವವರೂ ಆಗುವರು.''

೧೬೫. ಇಂದ್ರನು ಆ ಏಳು ವಂಶದ ಬ್ರಾಹ್ಮಣರನ್ನು ಕುರಿತು ಹೀಗೆಂದು ಉಳಿದ ನಾಗರ ಬ್ರಾಹ್ಮಣರಿಗೆ ಹೀಗೆ ಹೇಳಿದನು.

೧೬೬–೧೬೭. ''ದ್ವಿಜವರ್ಯರೆ! ನನಗೆ ಇಲ್ಲಿಯೇ ಸ್ಥಾನವನ್ನು ಕೊಡಿರಿ. ಅದರಿಂದ ನಾನು ವರ್ಷದ ಕೊನೆಯಲ್ಲಿ ಈ ಮಹೇಶ್ವರನ ಪೂಜೆ, ಭೂಲೋಕದ ಸುಖ, ಸಕಲ ಬ್ರಾಹ್ಮಣರ ಪೂಜೆ ಇವುಗಳಿಗಾಗಿ ಇಲ್ಲಿ ಐದು ದಿನಗಳು ವಾಸ ಮಾಡುವೆನು.''

ವಿಶ್ವಾಮಿತ್ರ ಉವಾಚ :—

ತತಸ್ತೇ ಬ್ರಾಹ್ಮಣಾಃ ಸರ್ವೇ ತದರ್ಥಂ ಸ್ಥಾನಮುತ್ತಮಂ ।
ದರ್ಶಯಾಮಾಸುಃ ಸಂಹೃಷ್ಟಾಃ ಪ್ರೋಚುಶ್ಚ ತದನಂತರಂ ॥ ೧೬೮ ॥
ಬ್ರಹ್ಮಸ್ಥಾನೇ ತ್ವಯಾ ಶಕ್ರ ಪಂಚರಾತ್ರಮುಪೇತ್ಯ ಚ ।
ಸ್ಥಾತವ್ಯಂ ಮರ್ತ್ಯಲೋಕಸ್ಯ ಸುಖಮಾಸೇವ್ಯತಾಂ ಪ್ರಭೋ ॥ ೧೬೯ ॥
ಅತ್ರ ಸ್ಥಾನೇ ತವಾಽಗ್ರೇ ತು ಕರಿಷ್ಯಾಮೋ ಮಹೋತ್ಸವಂ ।
ಗೀತವಾದಿತ್ರ ನಿರ್ಘೋಷೈರ್ಗಂಧಮಾಲ್ಯಾನುಲೇಪನೈಃ ।
ದ್ವಿಜಾನಾಂ ತರ್ಪಣೈಶ್ಚೈವ ಸರ್ವಕಾಮಸಮೃದ್ಧಿದಂ ॥ ೧೭೦ ॥

ವಿಶ್ವಾಮಿತ್ರ ಉವಾಚ :—

ತಚ್ಛ್ರುತ್ವಾ ವಚನಂ ತೇಷಾಂ ಪ್ರಹೃಷ್ಟಃ ಪಾಕಶಾಸನಃ ।
ಪೂಜಯಿತ್ವಾ ದ್ವಿಜಾನ್ ಸರ್ವಾನ್ ಗತೋಽಥ ತ್ರಿದಿವಾಲಯಂ ॥ ೧೭೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಷಷ್ಠೇ ನಾಗರಖಂಡೇ ಹಾಟಕೇಶ್ವರಕ್ಷೇತ್ರಮಾಹಾತ್ಮ್ಯೇ
"ಬಾಲಮಂಡನತೀರ್ಥಮಾಹಾತ್ಮ್ಯವರ್ಣನಂ" ನಾಮ
ಷಡುತ್ತರದ್ವಿಶತತಮೋಽಧ್ಯಾಯಃ

---

೧೬೮. ವಿಶ್ವಾಮಿತ್ರನು ಹೇಳುತ್ತಾನೆ:—ಬಳಿಕ ಆ ಬ್ರಾಹ್ಮಣರು ಇಂದ್ರನಿಗೆ ಉತ್ತಮ ಸ್ಥಾನವನ್ನು ತೋರಿಸಿ ಸಂತೋಷದಿಂದ ಇಂತೆಂದರು.

೧೬೯. "ಸ್ವಾಮಿ! ನೀನು ಈ ಬ್ರಹ್ಮಸ್ಥಾನಕ್ಕೆ ಬಂದು ಐದು ರಾತ್ರಿ ವಾಸ ಮಾಡಿ ಭೂಲೋಕದ ಸೌಖ್ಯವನ್ನನುಭವಿಸು.

೧೭೦. ನಾವು ಇಲ್ಲಿ ನಿನ್ನ ಮುಂದೆ ಸಂಗೀತ, ವಾದ್ಯಗಳಿಂದಲೂ, ಗಂಧ, ಮಾಲ್ಯ, ಅನುಲೇಪನಗಳಿಂದಲೂ, ಬ್ರಾಹ್ಮಣ ಸಂತರ್ಪಣೆಗಳಿಂದಲೂ ಸಕಲ ಇಷ್ಟಾರ್ಥಗಳನ್ನೀಯುವ ಮಹೋತ್ಸವವನ್ನು ಮಾಡುವೆವು."

೧೭೧. ವಿಶ್ವಾಮಿತ್ರನು ಹೇಳುತ್ತಾನೆ:—ದೇವೇಂದ್ರನು ಬ್ರಾಹ್ಮಣರ ಆ ಮಾತನ್ನು ಕೇಳಿ ಸಮಸ್ತ ಬ್ರಾಹ್ಮಣರನ್ನು ಪೂಜಿಸಿ ದೇವಲೋಕಕ್ಕೆ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಆರನೆಯ ನಾಗರಖಂಡದಲ್ಲಿ ಹಾಟಕೇಶ್ವರಕ್ಷೇತ್ರ
ಮಾಹಾತ್ಮ್ಯದಲ್ಲಿ "ಬಾಲಮಂಡನತೀರ್ಥಮಾಹಾತ್ಮ್ಯವರ್ಣನ"ವೆಂಬ
ಇನ್ನೂರಆರನೆಯ ಅಧ್ಯಾಯವು ಮುಗಿದುದು

---

64—53. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಸಿ. ವಾಸುದೇವರಾಯರವರು ಮುದ್ರಿಸಿರುವರು.